# ಮಹಾಭಾರತದ
# ಭೀಮ

ಪ್ರಧಾನ ಸಂಪಾದಕರು

ಹಂಪ. ನಾಗರಾಜಯ್ಯ

ಲೇಖಕರು

ಬಿ. ಎಸ್. ಗೋಪಾಲಕೃಷ್ಣ





ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ ಬೆಂಗಳೂರು ೧೮

ಬೆಳ್ಳಿ ಬಿಟ್ಟ ಬಳ್ಳಿ - ೧೫

# ಮಹಾಭಾರತದ

# ಭೀಮ

ಪ್ರಧಾನ ಸಂಪಾದಕರು :
ಹಂಪ. ನಾಗರಾಜಯ್ಯ

ಲೇಖಕರು :
ಬಿ. ಎಸ್. ಗೋಪಾಲ ಕೃಷ್ಣ

Mahabharatada Bhima : by B. S. Gopala Krishna, Published by the Kannada Sahitya Parishath, Bangalore.



ಪ್ರಕಾಶಕರು :
ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ, ಬೆಂಗಳೂರು–೫೬೦ ೦೧೮.

ಬೆಲೆ : ೧೦ ರೂಪಾಯಿ

ಮುದ್ರಣ :
ಸಂಯುಕ್ತ ಕರ್ನಾಟಕ (ಜಾಬ್)
[ಕನ[illegible] ಸರ್ಕಾರದ ಆಡಳಿತಕ್ಕೊಳಪಟ್ಟಿದೆ]
ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು–೫೬೦ ೦೨೫.

# ಮುನ್ನುಡಿ

ಕನ್ನಡ ನಾಡಿನ ಬೇರೆ ಬೇರೆ ಭಾಗಗಳು ಒಂದು ಆಡಳಿತಕ್ಕೆ ಒಳಪಟ್ಟು ಕರ್ನಾಟಕ ಏಕೀಕರಣವಾಗಿ 25 ವರ್ಷಗಳು ಈ ವರ್ಷದ ನವೆಂಬರ್ ತಿಂಗಳಿಗೆ ತುಂಬುತ್ತದೆ. ಕರ್ನಾಟಕ ರಾಜ್ಯೋತ್ಸವದ ರಜತೋತ್ಸವವನ್ನು ಈ ವರ್ಷ ವಿಜೃಂಭಣೆಯಿಂದ ಎಲ್ಲೆಡೆಗಳಲ್ಲೂ ಆಚರಿಸಲಾಗುತ್ತಿದೆ.

ಕರ್ನಾಟಕ ಏಕೀಕರಣದ ಬೆಳ್ಳಿಹಬ್ಬವನ್ನು ಕನ್ನಡ ಸಾಹಿತ್ಯ ಪರಿಷತ್ತು ವ್ಯಾಪಕವಾಗಿಯೂ ವ್ಯವಸ್ಥಿತವಾಗಿಯೂ ಈ ವರ್ಷ ಆಚರಿಸುತ್ತಿದೆ. ಅದರ ಸಂಬಂಧವಾಗಿ "ಬೆಳ್ಳಿ ಬಿಟ್ಟ ಬಳ್ಳಿ" ಎಂಬ ಹೆಸರಿನ ಒಂದು ಹೊಸ ಪ್ರಕಟನ ಮಾಲೆಯನ್ನು ಪರಿಷತ್ತು ಕೈಗೊಂಡಿದೆ. ಈ ಮಾಲೆಯಲ್ಲಿ ಒಂದು ನೂರಕ್ಕಿಂತ ಹೆಚ್ಚು ಪುಸ್ತಕಗಳನ್ನು ಈ ವರ್ಷ ಪ್ರಕಟಿಸಲಾಗುತ್ತದೆ. ಸಂಶೋಧನೆ, ಜಾನಪದ ಸಾಹಿತ್ಯ, ಗ್ರಂಥಸಂಪಾದನೆ, ವಿಮರ್ಶೆ, ಡಾಕ್ಟರೇಟ್ ಪ್ರಬಂಧ ಮೊದಲಾದವನ್ನು ಈ ಮಾಲೆಯಲ್ಲಿ ಪ್ರಕಟಿಸಲಾಗುತ್ತದೆ.

ಕರ್ನಾಟಕ ಸರ್ಕಾರದ ಉದಾರ ಸಹಾಯ ಈ ಮಾಲೆಗೆ ದೊರೆತಿರುವುದರಿಂದ ಈ ಮಾಲೆಯಲ್ಲಿ ಪ್ರಕಟಿಸುವ ಪುಸ್ತಕಗಳ ಬೆಲೆಯನ್ನು ಎಲ್ಲರಿಗೂ ಎಟಕುವಂತೆ ಇಡಲಾಗಿದೆ. ಕಡಮೆ ಬೆಲೆಯಲ್ಲಿ ಉತ್ತಮ ಗ್ರಂಥಗಳನ್ನು ಕನ್ನಡಿಗರಿಗೆ ಸಿಗುವಂತೆ ಸಹಾಯ ನೀಡಿದ ಕರ್ನಾಟಕ ಸರ್ಕಾರವನ್ನು ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ.

ಈ ಮಾಲೆಯಲ್ಲಿ ಪ್ರಕಟವಾಗುತ್ತಿರುವ "ಭೀಮನ ಪಾತ್ರ" ಎಂಬ ಪುಸ್ತಕವನ್ನು ಸಿದ್ಧಪಡಿಸಿಕೊಟ್ಟವರು 'ಸಂಯುಕ್ತ ಕರ್ನಾಟಕ' ಪತ್ರಿಕೆಯ ಸಂಪಾದಕರಾದ ಶ್ರೀ ಬಿ. ಎಸ್. ಗೋಪಾಲಕೃಷ್ಣ ಅವರು. ಮಹಾಭಾರತದಲ್ಲಿ ಬರುವ ಅನೇಕ ಪ್ರಮುಖ ಪಾತ್ರಗಳಲ್ಲಿ ಭೀಮನ ಪಾತ್ರವನ್ನು ಕೇಂದ್ರಬಿಂದುವಾಗಿ ಇರಿಸಿಕೊಂಡು ಇಡೀ ಮಹಾಭಾರತದ ಹಿರಿಮೆಯನ್ನೂ ಮಹಿಮೆಯನ್ನೂ ಈ ಪುಸ್ತಕದಲ್ಲಿ ವಿವರಿಸಲಾಗಿದೆ. ಜನಸಾಮಾನ್ಯರಿಗೆ ಭೀಮನ ಪಾತ್ರದಲ್ಲಿ ಕಾಣುವ ಉದಾತ್ತ ಗುಣಗಳ ಔನ್ನತ್ಯವನ್ನು ಪರಿಚಯಿಸುವ ಉದ್ದೇಶದಿಂದ ಲೇಖಕರು ಸರಳವಾದ ಭಾಷೆಯಲ್ಲಿ ಲಲಿತವಾದ ರೀತಿಯಲ್ಲಿ ನಿರೂಪಣೆ ಮಾಡಿದ್ದಾರೆ. ವಿಮರ್ಶಾತ್ಮಕದೃಷ್ಟಿ ಇಲ್ಲಿ ಗೌಣ. ಭಾರತೀಯ ಪರಂಪರೆಯ ಹಾಗೂ

ಮಹಾಭಾರತದ ಪ್ರಶಂಸಾತ್ಮಕದೃಷ್ಟಿಯೇ ಇಲ್ಲಿ ಪ್ರಧಾನ. ಕನ್ನಡದ ಜನಪ್ರಿಯ ಕವಿಯಾದ ಕುಮಾರವ್ಯಾಸನ ಕಾವ್ಯ ಉದ್ದಕ್ಕೂ ಈ ಕೃತಿ ರಚನೆಗೆ ಮೂಲ ಆಕರವಾಗಿ ಕೆಲಸ ಮಾಡಿದೆ ಎಂಬುದನ್ನು ಓದುಗರು ಗುರುತಿಸಬಹುದಾಗಿದೆ.

ಇದನ್ನು ಪರಿಷತ್ತಿನ ವತಿಯಿಂದ ಪ್ರಕಟಿಸಲು ಸಿದ್ಧಪಡಿಸಿಕೊಟ್ಟ ಶ್ರೀ ಬಿ. ಎಸ್. ಗೋಪಾಲ ಕೃಷ್ಣ ಅವರಿಗೆ ಕೃತಜ್ಞತೆಗಳು.

**ಹಂಪ. ನಾಗರಾಜಯ್ಯ**
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

# ಅರ್ಪಣೆ

---

ಇನ್ನೊಂದಿಲ್ಲದಂತೆ

ಈ ಎಲ್ಲವೂ ತಾನೇ ಆಗಿದ್ದು,

ತಾನು ಎಲ್ಲಿದ್ದೇನೆ ಎನ್ನುವದನ್ನು

ಹುಡುಕುವಂತೆ ಮಾಡಿರುವ

ಅದಕ್ಕೆ.

---

# ಈ ಪುಸ್ತಕದ ಕುರಿತು

ಈ ಗ್ರಂಥ ವಿಷಯಕ್ಕೆ ಮೂಲವಾದ ಮಹಾಭಾರತದಲ್ಲಿ ಆಸಕ್ತಿ ಇರುವ ಅನೇಕರು ಆಶ್ಚರ್ಯದಿಂದ ಹುಬ್ಬೇರಿಸುವಂತೆ ಮಾಡಬಹುದಾದ ಪುಸ್ತಕ ಇದು. ಮಹಾಭಾರತದಲ್ಲಿ ಭೀಮ ! ಎಲ್ಲ ಬಿಟ್ಟು ಇದೇನು ಇವನ ಕುರಿತು ಒಂದು ಪುಸ್ತಕ ! ಅವನ ಕುರಿತು ಬರೆಯಲಿಕ್ಕಾದರೂ ಏನಿದೆ ? ಹೇಳೀ ಕೇಳೀ ಒರಟ. ಮುಂದಾಲೋಚನೆ ಇಲ್ಲದ ಮೂಢ. ಅವನು ಹೇಳಿಕೊಳ್ಳುವಂತಹ ಮಹತ್ಕಾರ್ಯಗಳನ್ನಾದರೂ ಏನು ಮಾಡಿದ್ದಾನೆ? ಯುದ್ಧದಲ್ಲಿ ಒಂದಷ್ಟು ಜನರನ್ನು ಬಡಿದು ಕೊಂದಿರಬಹುದು. ಇನ್ನು ಅವನು ಹೆಸರಾಗಿರುವದು ಭೂತದಂತೆ ತಿನ್ನುವದಕ್ಕೆ ಮಾತ್ರ. ಹೆಚ್ಚು ಪಾಲು ಇಷ್ಟಕ್ಕೇ ಮುಗಿಯುತ್ತದೆ, ಭೀಮನ ಚಿತ್ರ. ಮತ್ತೆ ಅವನ ಕುರಿತು ಪುಟಗಟ್ಟಲೆ ಬರೆಯಲಿಕ್ಕೇನಿದೆ ?

ಮಹಾಭಾರತ ಒಂದು ಲೋಕೋತ್ತರವಾದ ಗ್ರಂಥ ನಿಜ. ಲೋಕೋತ್ತರವಾದ ವಿವಿಧ ಗುಣಗಳುಳ್ಳ ವಿವಿಧ ವ್ಯಕ್ತಿಗಳಿಂದ ಅದು ಕೂಡಿದೆ. ಅವರ ಪೈಕಿ ಯಾರೊಬ್ಬರ ಕುರಿತಾದರೂ ಬರೆಯುವದು ಒಂದು ಉತ್ತಮವಾದ ಕೆಲಸವಾಗುತ್ತದೆ. ಮಹಾಭಾರತದ ಜೀವಾಳವೇ ಆಗಿರುವ ಕೃಷ್ಣನ ಕುರಿತು ಬರೆಯುವದು ಒಂದು ದೊಡ್ಡ ಕೆಲಸವಾಗುತ್ತದೆ. ಶಿಶುಪಾಲನೊಬ್ಬನನ್ನು ಚಕ್ರದಿಂದ ಅವನು ಕೊಂದ. ಜರಾಸಂಧ, ಭೀಷ್ಮ, ದ್ರೋಣ, ಕರ್ಣ, ಶಲ್ಯ ಮೊದಲಾದವರನ್ನು ಆಯುಧ ಹಿಡಿಯದೆಯೇ ಕೊಂದ. ಜೀವನ ಕಲೆಯಲ್ಲಿ ಅವನ ಜಾಣ್ಮೆ ಪರಿಪೂರ್ಣವಾದುದು. ಅವನ ಮಾತಿಗೆ ಅರ್ಥವಿದೆ, ಮುಗುಳ್ನಗೆಗೆ ಅರ್ಥವಿದೆ, ಅವನು ಒಬ್ಬನ ಮೈ ಮುಟ್ಟಿದರೆ ಅದಕ್ಕೆ ಅರ್ಥವಿದೆ. ಅವನು ಯಾರಲ್ಲಿ ಎಲ್ಲ ಹೇಗೆ ಹೇಗೆ ನಡೆದುಕೊಂಡ ಎಂಬದರ ಅರ್ಥ ಗ್ರಹಿಸಿಟ್ಟರೆ ಅದೇ ಒಂದು ದೊಡ್ಡ ಶಾಸ್ತ್ರವಾದೀತು. ತನ್ನ ಶತ್ರುಪಕ್ಷದಲ್ಲಿದ್ದ ಜರಾಸಂಧ, ಶಿಶುಪಾಲ, ದುರ್ಯೋಧನ, ಭೀಷ್ಮ, ಕರ್ಣ– ಇವರುಗಳಲ್ಲಿಯೇ ಒಬ್ಬೊಬ್ಬರೊಂದಿಗೆ ಒಂದೊಂದು ವಿಧದ ವರ್ತನೆ. ತನ್ನ ಮಿತ್ರವರ್ಗಕ್ಕೆ ಸೇರಿದ ಯುಧಿಷ್ಠಿರ, ಭೀಮ, ಅರ್ಜುನ, ದ್ರೌಪದಿ – ಇವರುಗಳಲ್ಲಿ ಪ್ರತಿಯೊಬ್ಬರೊಂದಿಗೂ ಒಂದೊಂದು ವಿಧದ ವರ್ತನೆ. ಭರತ ಖಂಡದ ಹದಿನೆಂಟು ಅಕ್ಷೋಹಿಣೀ ಜನಸಂಖ್ಯೆಯನ್ನು ಒಂದೆಡೆ ಸೇರಿಸಿ, ತಾನು ಗಾಡಿ ಹೊಡೆಯುತ್ತಲೇ ಅವರನ್ನೆಲ್ಲ ತೀರಿಸಿ, ದೇಶದ ಹೊರೆಯನ್ನು ಇಳಿಸಿ, ದೇಶದ ಭವಿಷ್ಯವನ್ನು

ಧರ್ಮಿಷ್ಠರ, ಸಮರ್ಥರ ಕೈಗೆ ಕೊಟ್ಟು ಈ ಲೋಕವನ್ನು ಬಿಟ್ಟ ಮಹಾನುಭಾವ ಅವನು.

ಅಥವಾ ಭೀಷ್ಮನ ಕುರಿತು ಬರೆಯಬಹುದು. ಇಡಿಯ ರಾಜ್ಯವನ್ನಾಳುವ ಅಧಿಕಾರವೇ ತನ್ನ ಮುಂದಿರುವಾಗ, ಲೋಕದ ಎಲ್ಲ ಸುಖ ಸೌಲಭ್ಯಗಳೂ ತನ್ನ ದಾಗುವ ಹಿನ್ನೆಲೆಯಲ್ಲಿ ತಾನು ಯೌವನದ ಅಮಲಿನಲ್ಲಿದ್ದಾಗ ಅದೆಲ್ಲವನ್ನೂ ತನ್ನ ತಂದೆಯ ಒಂದು ಸಣ್ಣ ಸಂತೃಪ್ತಿಗಾಗಿ ತ್ಯಜಿಸಿದ ಮಹಾನುಭಾವ ಇವನು. ನಮ್ಮ ಇತಿಹಾಸಗಳಲ್ಲಿ ಆಂಜನೇಯನನ್ನು ಬಿಟ್ಟರೆ ಲೌಕಿಕವಾಗಿ ನಿರತರಾದವರ ಪೈಕಿ ಹೆಸರಾಂತ ಬ್ರಹ್ಮಚಾರಿ ಭೀಷ್ಮನೇ. ಯುದ್ಧಕ್ಕೆ ಸಂಕಲ್ಪಿಸಿ ನಿಂತ ಇವನ ಎದುರಿನಲ್ಲಿ ನಿಲ್ಲಲು ಸಾಧ್ಯವಿದ್ದವರು ಯಾರೂ ಇರಲಿಲ್ಲ. ಜೊತೆಗೆ ಇಚ್ಛಾ ಮರಣಿ, ಮಹಾನ್ ಪಂಡಿತ, ಭಗವದ್ಭಕ್ತ.

ಯುಧಿಷ್ಠಿರನ ಕುರಿತು ಬರೆದರೂ ಅದೊಂದು ಉತ್ಕೃಷ್ಟವಾದ ಗ್ರಂಥವಾಗುತ್ತದೆ. ಅವನನ್ನು ಎಲ್ಲರೂ ಕರೆಯುತ್ತಿದ್ದುದೇ ಧರ್ಮರಾಜ ಎಂದು. ಅವನು ಪಾಂಡವರ ಹಿರಿಯ. ಪಾಂಡವರ ನಾಶಕ್ಕಾಗಿಯೇ ತಾನು ಹುಟ್ಟಿದ್ದೇನೋ ಎಂಬಂತೆ ವರ್ತಿಸಿದ ದುರ್ಯೋಧನನಿಗೇ ಆದರೂ ಯುಧಿಷ್ಠಿರನ ಮೇಲೆ ದ್ವೇಷ ವಿಲ್ಲ. ಯುಧಿಷ್ಠಿರನೇ ಬೇಕಿದ್ದರೆ ರಾಜ್ಯವನ್ನಾಳಿದರೂ ತಾನು ಅವನ ಆಶ್ರಯದಲ್ಲಿ ಬಾಳಲು ದುರ್ಯೋಧನ ಸಿದ್ಧ. ವಿವಿಧ ಅಭಿರುಚಿಯ ನಾಲ್ಕು ತಮ್ಮಂದಿರನ್ನು ಸರಿ ಹೊಂದಿಸಿಕೊಂಡು, ಐವರು ಸಹೋದರರೂ ಒಬ್ಬಳೇ ಪತ್ನಿಯನ್ನು ಅನುಭವಿಸ ಬೇಕಾದುದನ್ನೂ ಸರಿದೂಗಿಸಿಕೊಂಡು ಬದುಕಬೇಕಾಗಿ ಬಂದ ಜೀವನ ಅವನದು. ತಮ್ಮ ಪತ್ನಿಯನ್ನು ಕೌರವರು ಮಾನಭಂಗ ಮಾಡುತ್ತಿದ್ದಾಗ ಇವನು ತಲೆ ಬಗ್ಗಿಸಿ ಸುಮ್ಮನೆ ಕುಳಿತ. ಆದರೆ ಅಂತಹ ಕೌರವರನ್ನು ಗಂಧರ್ವನೊಬ್ಬ ಹಿಡಿದುಕೊಂಡು ಹೋದಾಗ ಚಡಪಡಿಸಿದ. ಅದರಿಂದಾಗಿ ಒಂದು ರಾಜ್ಯವೇ ಸಿಕ್ಕುತ್ತದೆಂದಾದರೂ ಅವನು ಸುಳ್ಳು ಹೇಳಲು ಒಪ್ಪುವದಿಲ್ಲ. ಕೃಷ್ಣನನ್ನು ಸಾಕ್ಷಾತ್ ಭಗವಂತನೆಂದೇ ನಂಬಿದ್ದ ಭಕ್ತ. ಶರೀರ ಸಹಿತವಾಗಿ ಸ್ವರ್ಗಕ್ಕೆ ಹೋದವನು ಇವನೊಬ್ಬನೇ.

ರೋಮಾಂಚಕಾರಿಯಾದ ಪುಸ್ತಕ ಬರೆಯಬೇಕೆಂದರೆ ಅರ್ಜುನನ ಕುರಿತು ಬರೆಯಬಹುದು. ಪಾಂಡವರ ಪೈಕಿ ಅತ್ಯಂತ ಪ್ರಸಿದ್ಧನೂ, ಜನಪ್ರಿಯನೂ, ಮಹಾವೀರನೂ ಆಗಿದ್ದವನು ಇವನು. ಇವನು ನರಋಷಿಯ ಅವತಾರ. ಸಾಕ್ಷಾತ್ ಶಿವನೊಂದಿಗೇ ಹೋರಾಡಿ ಅಸ್ತ್ರಗಳನ್ನು ಪಡೆದುಕೊಂಡು ಬಂದವನು. ಇಂದ್ರನ ಪಕ್ಕದಲ್ಲಿ ಕುಳಿತು ಬಂದ ಪುಣ್ಯಶಾಲಿ. ಸಾಕ್ಷಾತ್ ಅಗ್ನಿಯಿಂದ ಅಕ್ಷಯ ವಾಗುವ ಬತ್ತಳಿಕೆಯನ್ನು ಪಡೆದವನು. ಇವನು ಮೂರು ಲೋಕದ ಗಂಡ. ದ್ರೋಣನ ಮೆಚ್ಚಿನ ಶಿಷ್ಯ. ಕೃಷ್ಣನ ಕೇವಲ ಆಪ್ತ. ಹಿರಿಯಣ್ಣನಿಗೆ ಪರಮ

ವಿಧೇಯನಾಗಿ ನಡೆದುಕೊಂಡವನು. ಕೌರವ ಪಕ್ಷದ ಪ್ರಚಂಡ ಪರಾಕ್ರಮಿಗಳಾದ ಭೀಷ್ಮ, ದ್ರೋಣ, ಕರ್ಣರನ್ನು ಎದುರಿಸಲು ಸಾಧ್ಯವಿದ್ದುದು ಬಿಲ್ಗಾರನಾದ ಇವನಿಗೇ. ಕೃಷ್ಣನ ಬಾಯಿಂದ ಪರಮ ಪವಿತ್ರವಾದ ಗೀತೆಯನ್ನು ಕೇಳಿದವನೂ, ಕೃಷ್ಣನ ದಿವ್ಯವಾದ ವಿಶ್ವರೂಪದ ದರ್ಶನ ಮಾಡಿದ ಭಾಗ್ಯಶಾಲಿಯೂ ಇವನೇ.

ದ್ರೌಪದಿಯದು ಅತ್ಯಂತ ರಂಜಕವಾದ ಕತೆಯಾಗುತ್ತದೆ. ಅವಳು ಹುಟ್ಟಿದುದೇ ಅವಳ ತಂದೆ ಸೃಷ್ಟಿಸಿದ ಪ್ರತೀಕಾರದ ಬೆಂಕಿಯಲ್ಲಿ. ಐವರು ಗಂಡಂದಿರನ್ನು ಪಡೆದ ಅಪೂರ್ವ ಸನ್ನಿವೇಶದ ಸುಖವೂ ಅವಳದು, ಅಸೌಕರ್ಯವೂ ಅವಳದು. ಅಂತಹ ಪ್ರಸಿದ್ಧ ಗಂಡಂದಿರನ್ನು ಅವಳು ಪಡೆದರೂ ಅವಳ ಭಾಗಕ್ಕೆ ಬಂದುದು ಕಾಡಿನಲ್ಲಿ ಅಲೆದಾಟ. ಅಷ್ಟು ಅಭಿಮಾನಶಾಲಿಯಾದ ಅವಳಿಗೆ ಆದ ಅವಮಾನವಂತೂ ಲೋಕದಲ್ಲಿ ಈ ವರೆಗೆ ಯಾವ ಸ್ತ್ರೀಗೂ ಆಗದಂತಹದು. ನೂರಾರು ಮಂದಿ ಆರ್ಯರು ತುಂಬಿದ್ದ ರಾಜಸಭೆಯ ನಡುವೆ ರಜಸ್ವಲೆಯಾಗಿದ್ದ ಅವಳನ್ನು ನಿರ್ವಾಣದಲ್ಲಿ ನಿಲ್ಲಿಸುವ ಪ್ರಯತ್ನದ ಕ್ರೂರ ಕಾರ್ಯ ಅವಳ ಗಂಡಂದಿರ ಕಣ್ಣೆದುರಿನಲ್ಲಿಯೇ ನಡೆದು ಹೋಯಿತು. ಸಾಮಾನ್ಯ ರಾಣಿಯೊಬ್ಬಳ ಸೇವೆ ಮಾಡಿ ಬದುಕಬೇಕಾಗಿ ಬಂದಿದ್ದ ದೌರ್ಭಾಗ್ಯದೊಂದಿಗೇ ಕೀಚಕನಂತಹ ಕಾಮುಕನ ಕೈಯಲ್ಲಿಯೂ ಸಿಕ್ಕಿಕೊಂಡ ಅವಳು ಅವನಿಂದ ಒದೆಸಿಕೊಂಡು ಬೀದಿಯಲ್ಲಿ ಬಿದ್ದು ಮೂಗು, ಬಾಯಿಗಳಲ್ಲಿ ರಕ್ತ ಸುರಿಸಬೇಕಾಗಿ ಬಂದುದು ಕೂಡ ಅವಳ ಗಂಡಂದಿರ ಕಣ್ಣೆದುರಿನಲ್ಲಿಯೇ. ಎಲ್ಲರೂ ಅವಳನ್ನು ಹೊತ್ತುಕೊಂಡು ಹೋಗುವವರೇ. ಕೀಚಕನ ತಮ್ಮಂದಿರು ಅವಳನ್ನು ಸ್ಮಶಾನಕ್ಕೆ ಹೊತ್ತುಕೊಂಡು ಒಯ್ದರು. ಕಾಡಿನಲ್ಲಿ ಜಯದ್ರಥ ಅವಳನ್ನು ಹೊತ್ತುಕೊಂಡು ಹೋಗಿದ್ದ ! ಜಟಾಸುರನೆಂಬ ರಾಕ್ಷಸ ಹೊತ್ತುಕೊಂಡು ಹೋಗಿದ್ದ. ರಾಜಸಭೆಯಲ್ಲಿ ತನಗಾದ ಘೋರ ಅವಮಾನದ ಕುರುಹಾಗಿ ಹದಿಮೂರು ವರ್ಷಗಳ ಕಾಲ ಬಿಚ್ಚಿದ್ದ ತನ್ನ ಮುಡಿಯನ್ನು ಕಟ್ಟದೆಯೇ ಮುಂದುವರಿದು, ಕೊನೆಗೂ ಪಾಂಡವರು ಕೌರವರೊಂದಿಗೆ ಸಂಧಿಮಾಡಲು ಪ್ರಯತ್ನಿಸಿದಾಗ ತನ್ನ ಅಂತಹ ಗಂಡಂದಿರ ಹಂಗೇ ಇಲ್ಲದಂತೆ ತಾನು ಸಣ್ಣ ಸೈನ್ಯವನ್ನಾದರೂ ಶೇಖರಿಸಿ ಕೌರವರನ್ನು ಕೊಲ್ಲಿಸುತ್ತೇನೆಂದು ಸಿಟಿದು ನಿಂತ ಈ ಬೆಂಕಿಯ ಮಗಳು ರಜೋಗುಣದ ಪ್ರತಿಮೂರ್ತಿಯಾಗಿದ್ದರೂ ಕೃಷ್ಣನ ಅಪಾರ ಒಲವನ್ನು ಗಳಿಸಿದ್ದ ಸತ್ವ ಸಂಪನ್ನಳು. ಅಂತರಾಳದ ಆರ್ದ್ರತೆಯಿಂದ ಕೃಷ್ಣಾ ಎಂದು ಕರೆದಾಗ ಕೃಷ್ಣನನ್ನು ತನ್ನ ಬಳಿಗೆ ಬರಿಸುವಷ್ಟು ಕೃಷ್ಣನಲ್ಲಿ ಭಕ್ತಿಯೂ, ಒಲವೂ, ಸಲಿಗೆಯೂ ಇದ್ದುದು ಇವಳಿಗೆ ಮಾತ್ರ.

ಕರ್ಣನ ಕತೆಯಂತೂ ವಿಶೇಷ ಜನಪ್ರಿಯವಾದುದು. ಅವನ ಮೂಲ ಸಾಕ್ಷಾತ್ ಸೂರ್ಯದೇವನದು. ಪಾಂಡವರ ತಾಯಿಯೇ ಇವನ ತಾಯಿಯೂ.

ಆದರೆ ಅವನು ಅಮ್ಮಾ, ಅಪ್ಪಾ ಎಂದು ಕರೆಯಬೇಕಾಗಿ ಬಂದುದು ಯಾವದೋ ಬೆಸ್ತ ದಂಪತಿಗಳನ್ನು. ಹುಟ್ಟಿನೊಡಗೂಡಿ ಬಂದ ತೇಜಸ್ಸು ಅವನನ್ನು ಅದ್ವಿತೀಯ ಬಿಲ್ಗಾರನನ್ನಾಗಿ ಮಾಡಿದರೂ ಅವನ ಹುಟ್ಟಿಗೆ ಅಂಟಿಬಂದ ಕುಲಹೀನನೆಂಬ ಕಳಂಕ ಅವನ ಜೀವನದಾದ್ಯಂತ ಅವನ ಮೂಳಿಗೆ ಆಗಾಗ ತಿವಿಯುತ್ತಿತ್ತು. ಅನಾಮಧೇಯನಾಗಿ ಎಲ್ಲಿಯೋ ಮರೆಯಲ್ಲಿದ್ದು ಸಾಯಬೇಕಾದ ಅವನನ್ನು ಆಚಂದ್ರಾರ್ಕವಾಗಿ ಉಳಿಯುವ ಮಹಾಭಾರತದ ಘಟನೆಗಳ ರಂಗಕ್ಕೆ ತಂದು ಸೇರಿಸಿದವನು, ಅವನಿಗೆ ಅಂಗರಾಜ್ಯಾಧಿಪತ್ಯವನ್ನು ಕೊಟ್ಟ ದುರ್ಯೋಧನ. ಹಾಗಾಗಿ ಕರ್ಣನ ಜೀವನ ಪೂರ್ಣವಾಗಿ ದುರ್ಯೋಧನನಿಗೆ ಮುಡಿಪು. ತನ್ನ ಶಕ್ತಿಗೆ ಭಂಗ ಬಂದಾಗ, ತನ್ನ ಸಾಧನೆಗೆ ಸೋಲು ಉಂಟಾದಾಗ ಕರ್ಣ ದುಃಖಿಸುತ್ತಿದ್ದುದು ತನಗಾಗಿ ಅಲ್ಲ; ದುರ್ಯೋಧನನಿಗೆ ತನ್ನ ನೆರವು ಇಲ್ಲದಾಯಿತಲ್ಲಾ ಎಂಬದಕ್ಕಾಗಿ. ಸಾಕ್ಷಾತ್ ಸೂರ್ಯನ ಮಗನೂ, ಔದಾರ್ಯಕ್ಕೆ ಹೆಸರಾದವನೂ ಆದ ಅವನಿಗೆ ಸಾವು ಇತರರಿಂದ ಸಂಭವಿಸಲು ಸಾಧ್ಯವೇ ಇರಲಿಲ್ಲ. ಹಾಗಾಗಿ ಅವನ ರಕ್ಷಕರೆಲ್ಲ ಒಟ್ಟಾಗಿ ಸೇರಿ ಅವನನ್ನು ಮೋಸದಿಂದ ಕೊಲ್ಲಬೇಕಾಯಿತು. ರಕ್ಷಿಸಬೇಕಾದ ತಾಯಿ, ತೊಟ್ಟ ಬಾಣವನ್ನು ಪುನಃ ತೊಡಬೇಡವೆಂದು ಭಾಷೆ ಕೇಳಿಕೊಂಡು; ರಕ್ಷಿಸಬೇಕಾದ ಪರಮಾತ್ಮ, ತಾನು ತನ್ನ ಶತ್ರುಗಳನ್ನು ಕೊಂದು ತನ್ನ ಗೆಳೆಯನಿಗೆ ತೃಪ್ತಿ ಒದಗಿಸುತ್ತೇನೆಂಬ ಉತ್ಸಾಹದಲ್ಲಿದ್ದಾಗ ತನ್ನ ಎದುರು ನಿಂತಿದ್ದ ಆ ತನ್ನ ಶತ್ರುಗಳನ್ನು ತನ್ನ ಕೇವಲ ಒಡಹುಟ್ಟಿದ ಸೋದರರನ್ನಾಗಿ ಪರಿವರ್ತಿಸಿ; ರಕ್ಷಿಸಬೇಕಾದ ತನ್ನ ಸಾರಥಿ ಕೊನೆಯ ನಿಮಿಷದಲ್ಲಿ ತನ್ನನ್ನು ಸಾವಿನ ಸನಿಹದಲ್ಲಿ ಬಿಟ್ಟು ಹೊರಟು ಹೋಗಿ; ರಕ್ಷಿಸಿ ನಡೆಸಬೇಕಾದ ಭೂಮಿ ತನ್ನ ರಥದ ಚಲನೆಯನ್ನೇ ನಿಲ್ಲಿಸಿ; ರಕ್ಷಿಸಬೇಕಾದ ತನ್ನ ತಮ್ಮ ನಿರಾಯುಧನಾದ ತನ್ನನ್ನು ಮರಣಾಂತಿಕವಾಗಿ ಹೊಡೆದು – ಹೀಗೆ ಕರ್ಣನನ್ನು ಕೊಲ್ಲಬೇಕಾಯಿತು.

ಈ ಮೇಲಿನವರೆಲ್ಲರೂ ಹೇಗೂ ಮಹಾಭಾರತದಲ್ಲಿ ಪ್ರಸಿದ್ಧರಾದ ವ್ಯಕ್ತಿಗಳು. ಇವರುಗಳ ಕುರಿತೇ ಬರೆಯಬೇಕೆಂದಿಲ್ಲ. ಬರೆಯಲಿಕ್ಕೇನೂ ಇಲ್ಲದ ಭೀಮನ ಕುರಿತು ಬರೆಯುವದಕ್ಕಿಂತ, ಇನ್ನೂ ಬೇಕಿದ್ದರೆ, ದ್ರೋಣನ ಕುರಿತೋ, ಅಶ್ವತ್ಥಾಮನ ಕುರಿತೋ, ಅಭಿಮನ್ಯುವಿನ ಕುರಿತೋ, ದುರ್ಯೋಧನನ ಕುರಿತೋ, ಕುಂತಿಯ ಕುರಿತೋ, ವಿದುರನ ಕುರಿತೋ – ಹೀಗೆ ಯಾರನ್ನು ಕುರಿತು ಬರೆದರೂ ಅದು ಹೆಚ್ಚು ರಸಭರಿತವಾದ ಕೆಲಸವಾದೀತು.

ಇದು ಭೀಮನ ಕುರಿತು ಬರೆದಿರುವ ಪುಸ್ತಕ ಎಂಬದನ್ನು ಗಮನಿಸಿದಾಗ ಮಹಾಭಾರತವನ್ನು ಓದಿರುವ ಸಂಪ್ರದಾಯವಾದಿಗಳೇ ಆಗಲಿ, ವಿದ್ವಾಂಸರೇ ಆಗಲಿ, ಸಾಮಾನ್ಯವಾಗಿ ಅಂದುಕೊಳ್ಳಬಹುದಾದ ರೀತಿ ಇದು. ಸಂಪ್ರದಾಯವಾದಿಗಳ ಅಭಿಪ್ರಾಯ ಒಂದು ವಿಧ. ವಿಮರ್ಶೆಗಿಂತಲೂ ಭಾವುಕತೆಗೆ ಅದರಲ್ಲಿ

ಪ್ರಾಧಾನ್ಯ. ಆದರೆ ಅವರು ತಮ್ಮ ಇಂತಹ ಅಭಿಪ್ರಾಯವನ್ನು ಇತರರ ಮೇಲೆ ಹೇರಲು ಅಸಮರ್ಥರು. ಆದುದರಿಂದ ಅವರ ಅಭಿಪ್ರಾಯವು ಉಂಟುಮಾಡಬಹುದಾದ ಗುಣ, ದೋಷ–ಎರಡರ ವ್ಯಾಪ್ತಿಯೂ ಮಿತವಾದುದು. ವಿದ್ವಾಂಸರ ಅಭಿಪ್ರಾಯ ಹಾಗಲ್ಲ. ಸರ್ವಮಾನ್ಯವೆನಿಸಿಕೊಳ್ಳಲು ಶಕ್ತಿಯಿರುವ ಅಭಿಪ್ರಾಯ ಇವರದೇ. ಹಾಗಾಗಿ ಇದರ ವ್ಯಾಪ್ತಿಯೂ ಬಹಳ ದೊಡ್ಡದು. ನಾನು ತಿಳಿದಿರುವ ಮಟ್ಟಿಗೆ ಮಹಾಭಾರತದ ಕುರಿತು ಅಭಿಪ್ರಾಯ ನೀಡಿರುವ ಎಲ್ಲ ವಿದ್ವಾಂಸರೂ ಭೀಮನನ್ನು ಅವನ ಪಾಡಿಗೇ ಬಿಟ್ಟುಬಿಟ್ಟಿದ್ದಾರೆ. ಅವನಲ್ಲಿ ಅವರು ಏನನ್ನಾದರೂ ಕಂಡುಕೊಂಡಿದ್ದರೆ ಅವನು ಒರಟ, ಮುಂದಾಲೋಚನೆಯಿಲ್ಲದ ಮೂಢ, ಹೊಟ್ಟೆಬಾಕತನವುಳ್ಳವನು–ಎಂಬದನ್ನು ಮಾತ್ರ. ಅದು ಹೇಗೋ, ಏಕೋ, ಏನೋ ನಾನು ಅವನಲ್ಲಿ ಆದರ್ಶ ಗುಣಗಳನ್ನು ಕಂಡಾಗ ಅದು ಬಹಳ ಮಂದಿ ನೋಡಿಲ್ಲದ ದೃಶ್ಯವೆಂದು ನನಗನಿಸಿದುದರಿಂದ ಅದರ ಪರಿಚಯವನ್ನು ಇತರರಿಗೂ ಮಾಡಿಕೊಡುವ ಕುತೂಹಲ ಉಂಟಾಯಿತು. ಹಾಗಾಗಿ ಈ ಪುಸ್ತಕ.

ನಾನು ಕುಮಾರವ್ಯಾಸ ಭಾರತದ ಒಬ್ಬ ಶ್ರದ್ಧಾವಂತ ಓದುಗ. ಬಹಳ ಚಿಕ್ಕವನಾಗಿದ್ದಾಗ ಒಮ್ಮೆ ವ್ಯಾಸ ಭಾರತದ ಅಳಸಿಂಗರಾಚಾರ್ಯರ ಕನ್ನಡ ಅನುವಾದವನ್ನು ಓದಿದ್ದೇನೆ. ಅನಂತರ ಅವರ ಅನುವಾದದ ಎಲ್ಲ ಪುಸ್ತಕಗಳೂ ಸಿಕ್ಕದೆ, ಸಿಕ್ಕಿದಷ್ಟನ್ನು ಓದಿದ್ದೇನೆ. ಓದಿದಷ್ಟು ಭಾಗಗಳನ್ನು ಕುಮಾರವ್ಯಾಸ ಭಾರತಕ್ಕೆ ಹೋಲಿಸಿದಾಗ ಕುಮಾರವ್ಯಾಸನು ಮೂಲ ಭಾರತವನ್ನು ಸಾಕಷ್ಟು ಮಟ್ಟಿಗೆ ಅನುಸರಿಸಿ ಬರೆದಿದ್ದಾನೆಂದು ನನಗೆ ಅನಿಸಿತು. ಪಾತ್ರ ಸೃಷ್ಟಿಯಲ್ಲಂತೂ ಕುಮಾರವ್ಯಾಸನು ವ್ಯಾಸರನ್ನು ಸಾಕಷ್ಟು ವಿಶ್ವಾಸಾರ್ಹವಾಗಿ ಅನುಸರಿಸಿದ್ದಾನೆ ಎನಿಸಿತು. ಹಾಗಾಗಿ ಕುಮಾರವ್ಯಾಸ ಭಾರತವನ್ನು ಓದುವಾಗ ಯಾವ ಯಾವ ಪಾತ್ರಗಳ ಬಗೆಗೆ ನನ್ನಲ್ಲಿ ಏನೇನು ಅಭಿಪ್ರಾಯಗಳು ಮೂಡಿದವೋ ಆ ಅಭಿಪ್ರಾಯಗಳು ವ್ಯಾಸ ಭಾರತದ ಪಾಠಕ್ಕೆ ವಿರೋಧವಾಗುವದಿಲ್ಲ ಎನಿಸಿತು. ಹೀಗೆ, ನಾನು ಈ ಪುಸ್ತಕದಲ್ಲಿ ಚರ್ಚಿಸಿರುವ ಭೀಮನ ಪಾತ್ರಕ್ಕೆ ಪ್ರಮುಖ ಆಧಾರ ಕುಮಾರವ್ಯಾಸನ ಭಾರತ. ಆದರೆ ಅನೇಕ ಅಂಶಗಳಲ್ಲಿ ಇದಕ್ಕೆ ವ್ಯಾಸರ ಭಾರತದ ಸಮ್ಮತಿಯನ್ನೂ ಪಡೆಯುವಂತೆ ಅದಕ್ಕೆ ಹೋಲಿಸಿ ನೋಡಿದ್ದೇನೆ. ಕೆಲವು ಕಡೆ ಕುಮಾರವ್ಯಾಸನನ್ನು ಅನುಸರಿಸದೆ ವ್ಯಾಸ ಭಾರತವನ್ನೇ ಅನುಸರಿಸಿರುವದೂ ಉಂಟು.

ಮಹಾಭಾರತದ ಭೀಮನ ಕುರಿತು ನನಗೆ ಯಾವಾಗ, ಏಕೆ ಮತ್ತು ಹೇಗೆ ಒಲವು ಪ್ರಾರಂಭವಾಯಿತೆಂದು ನಾನೇ ಸ್ಪಷ್ಟವಾಗಿ ಹೇಳಲಾರೆ. ಆದರೆ ಈ ಪಾತ್ರದ ಕುರಿತು ನನ್ನ ಆಸಕ್ತಿ ಕುದುರುವದಕ್ಕೆ ಮುಂಚೆಯೇ "ಕುಮಾರ ವ್ಯಾಸನ ಪ್ರಶಸ್ತಿ" ಯಂತಹ ಉತ್ತಮ ಗ್ರಂಥದಲ್ಲಿ ಭೀಮನ ಕುರಿತು ವಿದ್ವಾಂಸರು "........ ಭೀಮನು ವಿವೇಕಿ ಎಂದು ಹೆಸರು ಪಡೆದವನಲ್ಲ; ಇಂದ್ರಿಯ ನಿಗ್ರಹ ಶಕ್ತಿಯು

ಸ್ವಲ್ಪ ಕಡಿಮೆ ಆತನಲ್ಲಿ........" ಎಂದು ಮುಂತಾಗಿ ವ್ಯಕ್ತಪಡಿಸಿದ್ದ ಅಭಿಪ್ರಾಯಗಳನ್ನು ಓದಿದ್ದೆ. ವಿದ್ವಾಂಸರ ಇಂತಹ ಅಭಿಪ್ರಾಯದ ಮಾರ್ಗದರ್ಶನದಲ್ಲಿ ಸಾಮಾನ್ಯ ಓದುಗನಾದ ನಾನು ಭೀಮನೆಂದರೆ ತಿರಸ್ಕಾರವನ್ನು ಒಳಗೊಳ್ಳಬೇಕಾಗಿದ್ದುದೇ ಸಹಜವಾಗಿದ್ದು, ಅದು ಹೇಗೆ ಅವನ ಗುಣಗಳನ್ನು ಮೆಚ್ಚಿಕೊಳ್ಳಲು ಅವಕಾಶವಾಯಿತೋ ಎಂಬದು ಈಗ ಗೊತ್ತಾಗುವದಿಲ್ಲ.

ಏಕೆಂದರೆ ಇದು ಆಗಿ ಈಗ ಕೊನೆಯ ಪಕ್ಷ ಇಪ್ಪತ್ತೈದು ವರ್ಷಗಳಾದರೂ ದಾಟಿವೆ. ಆಗ ನಾನು ಇನ್ನೂ ಬಹಳ ಅಪ್ರಬುದ್ಧನಾಗಿದ್ದವನು. ಆಗಲೇ ಭೀಮನ ಕುರಿತು ಬರೆಯಲು ಪ್ರಾರಂಭಿಸಿದೆ. ಇದನ್ನು ಪುಸ್ತಕವನ್ನಾಗಿ ಬರೆದು ಪ್ರಕಟಿಸಬೇಕೆಂಬದಕ್ಕಾಗಿ ಇರಲಿಕ್ಕಿಲ್ಲ. ಯಾವದೇ ಒಂದು ಅಭಿಪ್ರಾಯವು ನಮ್ಮಲ್ಲಿ ಒಡಮೂಡಿ ನಿಂತಾಗ, ಹಾಗೂ ಆ ಅಭಿಪ್ರಾಯವು ಆಗ ಪ್ರಚಲಿತವಾಗಿರುವ ಸಾಮಾನ್ಯ ಅಭಿಪ್ರಾಯಕ್ಕಿಂತ ಭಿನ್ನವಾದುದಾದಾಗ, ಜೊತೆಗೆ ಬರವಣಿಗೆಯಲ್ಲಿ ಅಲ್ಪ ಸ್ವಲ್ಪ ಪರಿಶ್ರಮವೂ ಇದ್ದರೆ ಅಂತಹ ಅಭಿಪ್ರಾಯವು ಬರೆಯಲ್ಪಡುವದು ಬರೆಯಲು ಬಲ್ಲವರಿಗೆ ಕೇವಲ ಸಹಜವಾದಂತೆ ನಾನೂ ಬರೆಯಲು ಪ್ರಾರಂಭಿಸಿದೆ. ಎಷ್ಟು ಸಮಯದಲ್ಲಿ ಬರೆದು ಮುಗಿಸಿದೆ ಎಂಬದು ನೆನಪಿಲ್ಲ. ಅನಂತರ ಒಂದು ಏಳೆಂಟು ವರ್ಷಗಳ ಕಾಲ ಆ ಹಸ್ತಪ್ರತಿಯು ಎಲ್ಲಿಯೋ ಬಿದ್ದುಕೊಂಡಿತ್ತು. ಅದು ಮುದ್ರಣದಲ್ಲಿ ಕಾಣಿಸಿಕೊಳ್ಳಬೇಕೆಂಬ ಇಚ್ಛೆಗಿಂತ ಹೆಚ್ಚಾಗಿ, ನಾನು ಸಂಪಾದಿಸಿ ಕೊಡಗಿನಲ್ಲಿ ಪ್ರಕಟಿಸುತ್ತಿರುವ "ಶಕ್ತಿ" ದಿನ ಪತ್ರಿಕೆಯ ಪ್ರತಿ ಭಾನುವಾರದ ಸಂಚಿಕೆಯಲ್ಲಿ ಇದನ್ನು ಧಾರಾವಾಹಿಯಾಗಿ ಪ್ರಕಟಿಸಿದರೆ ಪತ್ರಿಕೆಯ ಆಕರ್ಷಣೆ ಏನಾದರೂ ಹೆಚ್ಚೀತೋ ಏನೋ ಎಂದು ಆಶಿಸಿ ಈಗ ಸುಮಾರು ಹದಿನೈದು ವರ್ಷಗಳ ಹಿಂದೆ, ಸುಮಾರು ಎರಡು ವರ್ಷಗಳ ಕಾಲ ಇದನ್ನು "ಶಕ್ತಿ" ಯಲ್ಲಿ ಪ್ರಕಟಿಸಿದುದೂ ಆಯಿತು. ಓದುಗರು ಯಾರೂ ಇದರ ಕುರಿತು ಏನೂ ಹೇಳಲಿಲ್ಲ. ಅನಂತರವೂ ಇದನ್ನು ಮರೆತುಬಿಟ್ಟಿದ್ದೆ.

ಈಚೆಗೆ ಕೆಲವು ವರ್ಷಗಳಿಂದ ಶ್ರೀ ಕೃಷ್ಣನ ಜೀವನದ ಕುರಿತು ನನ್ನಲ್ಲಿ ವಿಶೇಷ ಆಸಕ್ತಿ ಉಂಟಾಗಿ ಆ ಸಂಬಂಧ ಸ್ವಲ್ಪ ತೀವ್ರವಾದ ಅಧ್ಯಯನ ಪ್ರಾರಂಭಿಸಿದೆ. ಪ್ರಕಟಣೆಗಾಗಿಯೋ ಅಲ್ಲವೋ – ಅಂತೂ – ಶ್ರೀಕೃಷ್ಣನ ಜೀವನದ ಕುರಿತು ಒಂದು ಗ್ರಂಥವನ್ನು ಬರೆಯಬೇಕೆಂಬ ಆಸೆ ಹುಟ್ಟಿಕೊಂಡಿತು. ಶ್ರೀಕೃಷ್ಣನ ಜೀವನದ ಕುರಿತು ಬರೆಯಲು ಅವಶ್ಯವಾದ ವಿಷಯಗಳ ಅರಿವು ನನಗೆ ಸಾಕಷ್ಟು ಇಲ್ಲವಾದರೂ, ಅದರ ಅಗಾಧತೆಯ ಅರಿವು ಧಾರಾಳವಾಗಿದ್ದು ನನಗೆ ಇನ್ನು ಎಷ್ಟು ಆಯುಷ್ಯವಿದೆಯೋ ಅಷ್ಟರಲ್ಲಿ ಸಾಧ್ಯವಾದಷ್ಟನ್ನು ಬರೆದಿಡುವದಾದರೂ ಅದೊಂದು ಸಾರ್ಥಕವಾದ ಕೆಲಸವಾದೀತೆಂದು ನಾನು ಭಾವಿಸಿದುದರಿಂದ ನನ್ನ ಆ ಬಯಕೆಯನ್ನು ಕೈ ಬಿಡದೆ ಮುಂದುವರಿದೆ. ಆದರೆ ಆ ವೇಳೆ

ಗಾಗಲೇ ನಾನು ಬರೆದಿಟ್ಟಿದ್ದ ಭೀಮನ ಕುರಿತು "ಅನುಕಂಪ" ಉಂಟಾಯಿತು. ನಾನು ಶ್ರೀಕೃಷ್ಣನ ಕುರಿತು ಏನನ್ನೆಲ್ಲ, ಹೇಗೆಲ್ಲ ಬರೆಯಬೇಕೆಂಬದನ್ನು ಸ್ಥೂಲವಾಗಿಯಾದರೂ ಕಲ್ಪಿಸಿಕೊಂಡಿದ್ದೆನೋ, ಅದಕ್ಕೆ ಹೋಲಿಸಿದಾಗ ಈ ಪುಸ್ತಕವು ಸಾಕಷ್ಟು ಕೊರತೆಯಿಂದ ಕೂಡಿದೆ ಎಂದೇ ನನಗನಿಸಿದರೂ, ಇದನ್ನು ಕೇವಲ ಮೂಲೆಗೆ ತಳ್ಳಿಬಿಡುವಷ್ಟು ಇದು ಲಘುವಾದುದಲ್ಲ ಎಂದೂ ಅನಿಸಿತು. ಹಾಗಾಗಿ ಇದರತ್ತ ಪುನಃ ಒಮ್ಮೆ ನನ್ನ ದೃಷ್ಟಿಯನ್ನು ಹರಿಸಬೇಕಾಯಿತು. "ಶಕ್ತಿ"ಯಲ್ಲಿ ಪ್ರಕಟವಾಗಿದ್ದ ಇದನ್ನು ಪುನಃ ಓದಿ, ಕಥಾಭಾಗದಲ್ಲಿ ಏನೂ ಬದಲಾವಣೆ ಮಾಡಲಿಕ್ಕಿಲ್ಲವೆಂದು ನಾನು ನಂಬಿದುದರಿಂದ ಅದನ್ನು ಹಾಗೆಯೇ ಬಿಟ್ಟು, ಈ ಪುಸ್ತಕದಲ್ಲಿ ನಾನು ಮುಂದೊಡ್ಡಿರುವ ನನ್ನ ವೈಯಕ್ತಿಕ ಅಭಿಪ್ರಾಯಗಳನ್ನು ಅಲ್ಲಲ್ಲಿ ತಿದ್ದಿ, "ಹೊಸತು" ಎಂದು ನನಗೇ ಕಾಣಿಸಿ ಹರ್ಷವನ್ನು ತರುವಂತೆ ಈ ಪುಸ್ತಕದ ಹಸ್ತಪ್ರತಿಯನ್ನು ಸಿದ್ಧಗೊಳಿಸಿದೆ.

ಈ ಪುಸ್ತಕವನ್ನು ಗಂಡ–ಹೆಂಡಿರ ಸಂವಾದ ರೂಪದಲ್ಲಿ ಬರೆದಿದ್ದೇನೆ. ಮುದ್ದಣನ ರಾಮಾಶ್ವಮೇಧವನ್ನು ಅನುಸರಿಸಿ ಹೀಗೆ ಮಾಡಿದೆನೋ ಎಂದು ಕೂಡ ಈಗ ಹೇಳಲಾರೆ. ಇಲ್ಲಿ ಬರುವ ರಮೆಗೂ, ಮುದ್ದಣನ ಮನೋರಮೆಗೂ ಹೆಸರಿನಲ್ಲಿ ಸಾಮ್ಯವಿರುವದರಿಂದ ಅವನನ್ನು ನಾನು ಅನುಸರಿಸಿದ್ದೇನೆಂದೂ ಹೇಳಬಹುದು. ಆ ಕಾರಣದಿಂದಾಗಿಯೇ ಇದು ನನ್ನ ಸ್ವಂತ ಕ್ರಮ ಎಂದೂ ಹೇಳಬಹುದು. ಈ ಕ್ರಮದಲ್ಲಿ ಕತೆ ಹೇಳಿದರೆ ವಾದಾಂಶಗಳನ್ನು ವಿವರಿಸುವಲ್ಲಿ ಬಹಳ ಅನುಕೂಲವಾಗುತ್ತದೆಂಬದಕ್ಕಾಗಿ ಇದನ್ನು ಬಳಸಿದ್ದೇನೆ ಎಂಬದಂತೂ ನಿಶ್ಚಯ. ಭೀಮನ ಕುರಿತು ಬರೆಯಲು ಪ್ರಾರಂಭಿಸುವಾಗ ನಾನಿನ್ನೂ ಹರೆಯದ ಹೊಸದರಲ್ಲಿದ್ದುದರಿಂದ ಹರೆಯದ ಸಹಜ ಸರಸವನ್ನು ಈ ಗ್ರಂಥದಲ್ಲಿ ಸೇರಿಸಲು ನಾನು ಬಯಸಿದ್ದಿರಲೂ ಸಾಕು. ಹರೆಯದ ಈ ಪತಿ–ಪತ್ನಿಯರ ಸಂವಾದದಲ್ಲಿ, ಭೀಮನ ಕತೆಗೇ ಆಗಲಿ, ಈ ಪುಸ್ತಕದಲ್ಲಿ ಬರುವ ಇತರ ಬಿಗಿಯಾದ ವಿಷಯಗಳ ಕುರಿತೇ ಆಗಲಿ, ಸಂಬಂಧವಿಲ್ಲದ ಕೆಲವು ಲಘುವಾದ ಸಂಭಾಷಣೆಗಳೂ ಬರುತ್ತವೆ. ಅಂತಹ ಸಂಭಾಷಣೆಗಳು, ಪುಸ್ತಕದಲ್ಲಿ ಬರುವ ಬಿಗಿಯಾದ ವಿಷಯಗಳ ನಡುವೆ ಸೇರಿಕೊಂಡು ಆ ವಿಷಯಗಳ ತೂಕವನ್ನು ಕಡಿಮೆ ಮಾಡಿವೆ ಎಂದೂ ಹೇಳಬಹುದು; ಅಥವಾ ಬಿಗಿಯಾದ ವಿಷಯಗಳ ನಡುವೆ ಈ ಹಗುರವಾದ ಸಂಭಾಷಣೆಗಳು ಬಂದು ಓದುವಿಕೆಯನ್ನು ಲಲಿತಗೊಳಿಸುತ್ತವೆ ಎಂದೂ ಹೇಳಬಹುದು. ನಾನು ಈ ಲಘು ಸಂಭಾಷಣೆಗಳನ್ನು ಸೇರಿಸಿದುದಂತೂ ಯಾವದೇ ಉದ್ದೇಶವನ್ನಿಟ್ಟುಕೊಳ್ಳದೆ; ಅದು ಸಂಭಾಷಣೆಯ ಭರದಲ್ಲಿ ಕೇವಲ ಸಹಜವಾಗಿ, ಅಯಾಚಿತವಾಗಿ ಬಂದುಬಿಟ್ಟುದರಿಂದ.

ಈ ಪುಸ್ತಕದಲ್ಲಿ ಬರುವ ಪ್ರತಿಯೊಂದು ಸಂಜೆಯ ಪ್ರಾರಂಭದಲ್ಲಿಯೂ ಪುಸ್ತಕದ ಪ್ರಧಾನ ವಿಷಯವಾದ ಭೀಮನ ಕತೆಗೆ ಸಂಬಂಧವಿಲ್ಲದ ಕೆಲವು ವಿಷಯಗಳ ಕುರಿತು ಚರ್ಚೆ ನಡೆದಿದೆ. ಇದಾದರೂ ಅಷ್ಟೆ. ಈ ವಿಷಯಗಳ ಪೈಕಿ ಹೆಚ್ಚಿನವು ಹಿಂದೂ ಮತದ ದರ್ಶನಗಳ ಕುರಿತಾದವುಗಳು. ನಮ್ಮ ದರ್ಶನ ಶಾಸ್ತ್ರಗಳ ಕುರಿತು ಅಧಿಕೃತವಾದ ವ್ಯಾಖ್ಯೆ ಬರೆಯುತ್ತಿದ್ದೇನೆಂದು ನಾನು ಇವನ್ನೆಲ್ಲ ಬರೆದಿಲ್ಲ. ನನ್ನ ಜೀವನದಲ್ಲಿ ಬಂದೊದಗಿದ ಕೇವಲ ಅವಶ್ಯಕತೆಯಿಂದಾಗಿ ಸಾಕಷ್ಟು ಸಮಯ ನಮ್ಮ ದರ್ಶನ ಶಾಸ್ತ್ರಗಳನ್ನು ನಾನು ಅಭ್ಯಸಿಸಿ ಜೀವನವು ಪ್ರಾಯೋಗಿಕವಾಗಿ ಹಗುರವಾಗುವಲ್ಲಿ ಅವುಗಳ ಯಾವ ಎಲ್ಲ ಅಂಶಗಳು ನನಗೆ ಸಹಕಾರಿಗಳಾಗಿವೆಯೋ ಅವುಗಳನ್ನೂ ಇತರರೊಂದಿಗೆ ಹಂಚಿಕೊಳ್ಳುವದು ಒಂದು ಒಳ್ಳೆಯ ಕೆಲಸ ಎಂದು ನಾನು ನಂಬಿದುದರಿಂದಾಗಿ ಅವು ಇಲ್ಲಿ ಸೇರಿಕೊಂಡಿವೆ. ಈ ತತ್ವಗಳು ಬಹಳ ದೊಡ್ಡವು. ದೊಡ್ಡವರಿಂದ ನೀಡಲ್ಪಟ್ಟಂತಹವು. ಇಲ್ಲಿ ಅವುಗಳನ್ನು ಕಂಡ ದೃಷ್ಟಿ ನನ್ನದು, ಅದನ್ನು ಹೇಳಿದ ಭಾಷೆ ನನ್ನದು. ಆದುದ ರಿಂದಲೇ ಇಲ್ಲಿ ಬರೆಯಲ್ಪಟ್ಟಿರುವದು ಹಾಗೆ ಬರೆಯಲ್ಪಟ್ಟಂತೆಯೇ ಅಧಿಕೃತವಾದ ತತ್ವ ಎಂದು ಹೇಳುವ ಸಾಹಸಕ್ಕೆ ನಾನು ಹೋಗದಿರುವದು. ಆದರೆ ಈ ಸಂಬಂಧವಾಗಿ ಇಲ್ಲಿ ಬಂದಿರುವ ಅಭಿಪ್ರಾಯಗಳು ಇತರರ ಒಪ್ಪಿಗೆಯನ್ನು ಪಡೆಯದಿದ್ದರೂ ಅವರನ್ನು ಈ ದಿಸೆಯಲ್ಲಿ ಚಿಂತಿಸಲು ಪ್ರೇರೇಪಿಸಿದರೆ ಅಷ್ಟೇ ಆದರೂ ಅದು ಒಳ್ಳೆಯದು ಎಂಬದಕ್ಕಾಗಿ ಅವುಗಳನ್ನು ಇಲ್ಲಿ ಸೇರಿಸಿದ್ದೇನೆ.

ಬಹಳ ಕ್ಲಿಷ್ಟವಾದ, ವಿವಾದಕ್ಕೆ ಎಡೆಕೊಡುವ ಹಾಗೂ ಸಾಮಾನ್ಯ ಓದುಗರ ಓದುವಿಕೆಯನ್ನು ಸರಳಗೊಳಿಸದ ಇಂತಹ ವಿಷಯಗಳನ್ನು ಈ ಪುಸ್ತಕದಲ್ಲಿ ಸೇರಿ ಸಿದುದು, ಆ ಕುರಿತು ಮೊದಲೇ ಉದ್ದೇಶಿಸಿದ್ದುದರಿಂದ ಅಲ್ಲ. ಪತಿ–ಪತ್ನಿಯರ ಸಂಭಾಷಣೆಯು ಕಟ್ಟು ನಿಟ್ಟಾಗಿ ಕತೆಯೊಳಗೇ ಮಿತಿಗೊಳ್ಳುವದು ಅಸಹಜವಾದೀ ತೆಂಬದಕ್ಕಾಗಿ ಲೋಕಾಭಿರಾಮವಾದ ಮಾತು ಕತೆಗಳ ಮೂಲಕ ಸಂಜೆಗಳು ಪ್ರಾರಂಭವಾಗಲಿ ಎಂದು ನಾನು ಬಯಸಿದುದು ಈ ವಿಷಯಗಳ ಸೇರ್ಪಡೆಗೆ ಅವಕಾಶ ಮಾಡಿಕೊಟ್ಟಿತು.

ಹಾಗಾದರೆ ಈ ಪುಸ್ತಕದಲ್ಲಿ ಭೀಮನ ಹೆಸರಿನಲ್ಲಿ ಏನೇನು ಸೇರಿದೆ? ಮೊದಲನೆಯದಾಗಿ, ಸ್ಥೂಲವಾಗಿಯಾದರೂ ಇದರಲ್ಲಿ ಮಹಾಭಾರತದ ಇಡಿಯ ಕತೆ ಅನುಕ್ರಮವಾಗಿ ನಿರೂಪಣೆಗೊಂಡು ಸೇರಿಕೊಂಡಿದೆ. ಎರಡನೆಯದಾಗಿ, ಮಹಾ ಭಾರತದಲ್ಲಿ ಅಗಣ್ಯನೆಂದು ಗಣಿಸಲ್ಪಟ್ಟಿದ್ದ ಒಂದು ವ್ಯಕ್ತಿಯ ವ್ಯಕ್ತಿತ್ವದ ವಿವರವಾದ ವಿಮರ್ಶೆ ಸೇರಿಕೊಂಡಿದೆ. ಮೂರನೆಯದಾಗಿ, ಹಿಂದೂ ಧರ್ಮದ ದರ್ಶನ ಶಾಸ್ತ್ರಗಳ ಅಭ್ಯಾಸದಿಂದ ಪ್ರತಿಯೊಬ್ಬರೂ ಇಂದಿಗೂ ತಮ್ಮ ಜೀವನಕ್ಕೆ ಪ್ರಯೋಜನಕಾರಿ ಯಾಗುವ ಹಾಗೂ ಬೇರೆ ಯಾವದರ ಮೂಲಕವೂ ಲಭ್ಯವಾಗಲಾರದ ಚೈತನ್ಯ

ವನ್ನು ಪಡೆಯಬಹುದೆಂಬ ಪ್ರಬಲವಾದ ಸೂಚನೆ ಸೇರಿಕೊಂಡಿದೆ. ನಾಲ್ಕನೆಯದಾಗಿ, ನಮ್ಮ ಪುರಾಣೇತಿಹಾಸಗಳು ನಮ್ಮ ಇಂದಿನ ವೈಜ್ಞಾನಿಕ ಕಾಲದಲ್ಲಿ ತಮ್ಮ ಮೌಲ್ಯವನ್ನು, ಉಪಯುಕ್ತತೆಯನ್ನು ಕಳೆದುಕೊಂಡಿವೆ ಎಂದು ಬಹಳ ಮಂದಿ ನಂಬಿರುವ ಭಾವನೆಯನ್ನು ಪ್ರಶ್ನಿಸುವಂತಾಗಿ, ಆ ಮೂಲಕ ನಮ್ಮ ಜೀವನದ ಮೌಲ್ಯಗಳನ್ನು ಕಂಡುಕೊಳ್ಳಲಿರುವ ನಮ್ಮ ಕ್ಷೇತ್ರ ವಿಸ್ತಾರಗೊಳ್ಳುವ ಸಾಧ್ಯತೆಯ ಚಿತ್ರ ಸೇರಿದೆ. ಕೊನೆಯದಾಗಿ ಪತಿ–ಪತ್ನಿಯರು ಪ್ರಿಯ–ಪ್ರೇಯಸಿಯರಂತೆ ವ್ಯವಹರಿಸುವ ಸರಸ ಸುಖದ ಸಣ್ಣ ಪರಿಚಯವೂ ಇಲ್ಲಿ ಸೇರಿಕೊಂಡಿದೆ. ಪುಸ್ತಕದ ಈ ವೈವಿಧ್ಯ–ಪುಸ್ತಕಕ್ಕೆ ಏನೋ ಹೆಸರು ಕೊಟ್ಟು ಏನೇನನ್ನೋ ಬರೆದಿರುವದು–ಇದರ ಗುಣ ಎನಿಸಲೂಬಹುದು, ದೋಷ ಎನಿಸಲೂಬಹುದು. ಹಾಗನ್ನುವದು ಹೇಗೂ ಕೇವಲ ಅಭಿಪ್ರಾಯ ಎನಿಸೀತು.

ಮಹಾಭಾರತದಲ್ಲಿ ಅರ್ಜುನನ ಪಾತ್ರದ ಕುರಿತು ಈ ಪುಸ್ತಕದಲ್ಲಿ ಅಲ್ಲಲ್ಲಿ ಟೀಕಿಸಲಾಗಿದೆ. ಅವನನ್ನು ಟೀಕಿಸಬೇಕೆಂಬ ಉದ್ದೇಶದಿಂದ ಮಾಡಿದ ಟೀಕೆ ಅದಲ್ಲ. ಈ ವರೆಗೆ ಮಹಾಭಾರತದ ವಿಮರ್ಶಕರು ಅರ್ಜುನನನ್ನು ಒಂದು ಅಸಾಧಾರಣ ವ್ಯಕ್ತಿ ಎಂದು ರೂಪಿಸಿರುವದಕ್ಕೆ ಹೋಲಿಸಿದಾಗ ಇಲ್ಲಿ ಮಾಡಿರುವ ಅವನ ವ್ಯಕ್ತಿತ್ವದ ವಿಮರ್ಶೆ ಟೀಕೆ ಎಂದು ಕಾಣಿಸುತ್ತದೆ, ಅಷ್ಟೆ. ಅವನ ವ್ಯಕ್ತಿತ್ವ ಹಾಗೂ ಮಹಾಭಾರತದಲ್ಲಿ ಅವನ ಪಾತ್ರ ಏನು ಎಂಬದನ್ನು ಯಥಾವತ್ತಾಗಿ ಚಿತ್ರಿಸಿದ್ದೇನೆ ಎಂದೇ ನಾನು ನಂಬಿದ್ದೇನೆ. ಈ ಪುಸ್ತಕದಲ್ಲಿ ಅವನ ವ್ಯಕ್ತಿತ್ವದ ಪ್ರಸ್ತಾಪ ಬೇಕಿರಲಿಲ್ಲ. ಆದರೆ, ಮಹಾಭಾರತದ ಕಥಾ ನಾಯಕರಾದ ಪಾಂಡವರ ಪೈಕಿ ಲೋಕೋತ್ತರವಾದ ವ್ಯಕ್ತಿತ್ವವನ್ನು ಪಡೆದವನು ಅರ್ಜುನನೆಂದೂ, ಭೀಮನು ಕೇವಲ ಯಃಕಶ್ಚಿತ್ ಸ್ವಭಾವದವನೆಂದೂ, ಸಂಪ್ರದಾಯದಲ್ಲಿ ಹಾಗೂ ವಿದ್ವಾಂಸರ ಅಭಿಪ್ರಾಯದಲ್ಲಿ ಸಾರ್ವತ್ರಿಕವೆಂಬಂತೆ ಪರಿಗಣಿಸಲ್ಪಟ್ಟಿರುವದರಿಂದ ಆ ಎರಡು ವ್ಯಕ್ತಿತ್ವಗಳ ಹೋಲಿಕೆಯ ಯಥಾರ್ಥತೆಯನ್ನು ವಿಮರ್ಶಿಸಿ ತಿಳಿಯಬೇಕಾದ ಅವಶ್ಯಕತೆ ಉಂಟಾಗಿ ಭೀಮನೊಂದಿಗೆ ಅರ್ಜುನನ ಪಾತ್ರದ ಕುರಿತೂ ಅವಶ್ಯವೆನಿಸುವಲ್ಲಿ ವಿವೇಚನೆ ಮಾಡುವದು ಅನಿವಾರ್ಯವಾಯಿತು.

ಕೆಲವರು ಮೆಚ್ಚಿಕೊಳ್ಳಬಹುದಾದ, ಹಾಗೂ ಇತರರು ಗೊಡ್ಡು ವಾದ ಎನ್ನಬಹುದಾದ ಈ ಪುಸ್ತಕದ ಇನ್ನೊಂದು ಅಂಶ ಎಂದರೆ ಮಹಾಭಾರತದಲ್ಲಿ ಬಂದಿರುವ ಅನೇಕ ಅತಿಪ್ರಕೃತಿ ಘಟನೆಗಳನ್ನು, ಅವುಗಳು ಹಾಗೆಯೇ ನಡೆದಿರಲು ಸಾಧ್ಯ ಎಂದು ಸಮರ್ಥಿಸಲು ಪ್ರಯತ್ನಿಸಿರುವದು. ಅವೆಲ್ಲವುಗಳೂ ನಿಶ್ಚಯವಾಗಿ ನಡೆದಿವೆ ಎಂದು ಇಲ್ಲಿ ವಾದಿಸಲಾಗಿದೆ ಎಂದು ತೋರಬಹುದು. ಆದರೆ ಇಂತಹ ಸಿದ್ಧಾಂತಕ್ಕೆ ಬರುವದು ಇಲ್ಲಿನ ವಾದದ ಉದ್ದೇಶವಲ್ಲ. ನಾವು ನಮ್ಮ ನಮ್ಮ ಅನುಭವ, ದೃಷ್ಟಿಕೋನಗಳನ್ನು ಆಧರಿಸಿ ಒಂದು ವಿಷಯವನ್ನು ಅದು ಅಸಾಧ್ಯ ಎಂದು

ವಾದಿಸಿದ ಮಾತ್ರಕ್ಕೆ ಅದು ಅಸಾಧ್ಯವಾಗಲೇಬೇಕಿಲ್ಲ ಎಂದು ವಾದಿಸುವ ಹಟ ಇಲ್ಲಿದೆ. ಇತಿಹಾಸವೆಂದು ಸಹಸ್ರಾರು ವರ್ಷಗಳಿಂದ ಕರೆಯಲ್ಪಡುತ್ತ ಬಂದಿರುವ ಮಹಾಭಾರತವು ಗೊಡ್ಡು ಪುರಾಣ ಎಂದು ಹಗುರವಾಗಿ ಹೇಳಿಬಿಡುವ ಪರಿಪಾಠವನ್ನು ಖಂಡಿಸುವ ಆಸಕ್ತಿ ಇಲ್ಲಿದೆ. ಮಹಾಭಾರತವು ಇತಿಹಾಸವೇ ಆಗಲಿ, ಪುರಾಣವೇ ಆಗಲಿ, ಕಾವ್ಯವೇ ಆಗಲಿ–ಏನೇ ಆಗಿರಲಿ–ಅದು ಸಾವಿರಾರು ವರ್ಷಗಳ ಕಾಲ ಕೋಟ್ಯಂತರ ಪ್ರಜೆಗಳ ಅಭಿಮಾನವನ್ನು ಗಳಿಸಿಕೊಂಡು ಅವರ ಜೀವನಕ್ಕೆ ಅಷ್ಟಿಷ್ಟಾದರೂ ಪ್ರಯೋಜನಕಾರಿಯಾದ ಮಾರ್ಗದರ್ಶನ ಮಾಡಿ, ಅವರನ್ನು ಅಲ್ಪಸ್ವಲ್ಪವಾದರೂ ಹೆಚ್ಚು ಸುಸಂಸ್ಕೃತರನ್ನಾಗಿ, ಹೆಚ್ಚು ಪಾಪಭೀರುಗಳನ್ನಾಗಿ–ಅರ್ಥಾತ್ ಹೆಚ್ಚು ಉತ್ತಮ ಪ್ರಜೆಗಳನ್ನಾಗಿ–ಮಾಡಿರುವದು ನಿಜವಾಗಿರುವಾಗ ಅದು ಕೇವಲ ಅಸಂಭಾವ್ಯ ಘಟನೆಗಳ ಅಜ್ಜಿಕತೆ ಎಂಬ ಜವಾಬ್ದಾರಿಕೆ ಇಲ್ಲದ ಆರೋಪಣೆ ಮಾಡಿ ಆ ಮೂಲಕ ಪ್ರಜೆಗಳಿಗೆ ಅದರಲ್ಲಿರುವ ಶ್ರದ್ಧೆ ಕಡಿಮೆಯಾಗಲು ಅವಕಾಶ ಮಾಡಿಕೊಟ್ಟು ಸಮಾಜಕ್ಕೆ ಅಪಚಾರವೆಸಗುತ್ತಿರುವದನ್ನು ತೀವ್ರವಾಗಿ ಪ್ರತಿಭಟಿಸಬೇಕೆಂಬ ಇಚ್ಛೆ ಇಲ್ಲಿದೆ.

ಇಲ್ಲಿಗೂ ಈ ಪುಸ್ತಕದ ವಿವಾದಾತ್ಮಕ ಅಂಶ ಮುಗಿಯುವದಿಲ್ಲ. ಮಹಾಭಾರತವು ಒಂದು ಇತಿಹಾಸವೇ ಹೌದು; ವೇದವ್ಯಾಸರೇ ಅದನ್ನು ಬರೆದವರೂ ಹೌದು; ಅದರಲ್ಲಿ ಬಂದಿರುವ ಘಟನೆಗಳೆಲ್ಲ ಹಾಗೆಯೇ ನಡೆದಿರುವದು ಹೌದು ಎಂದೆಲ್ಲ ವಾದಿಸುವ ಈ ಪುಸ್ತಕದ ಧೋರಣೆಯು ಮಹಾಭಾರತವನ್ನು ಈ ವರೆಗೆ ವಿಮರ್ಶೆ ಮಾಡಿರುವ ಅನೇಕ ಮಂದಿ ವಿದ್ವಾಂಸರ ಅಭಿಪ್ರಾಯಕ್ಕಿಂತ ಭಿನ್ನವಾದುದಾಗಿದ್ದು ಅನೇಕ ಓದುಗರಲ್ಲಿ ವಿವಿಧವಾದ, ಆದರೆ ತೀವ್ರವಾದ ಪ್ರತಿಕ್ರಿಯೆಗಳನ್ನು ಉಂಟುಮಾಡುವಂತಹುದಾಗಿದೆ. ಈ ವಿಮರ್ಶಕ ವಿದ್ವಾಂಸರ ಅಭಿಪ್ರಾಯಗಳನ್ನು ಖಂಡಿಸುವ ಉದ್ದೇಶ ಈ ಪುಸ್ತಕಕ್ಕೂ ಇಲ್ಲ, ಈ ಪರಿಚಯ ಲೇಖನಕ್ಕೂ ಇಲ್ಲ. ಮಹಾಭಾರತದ ಕಾಲದ ಕುರಿತೇ ಆಗಲಿ, ಅದರ ಕರ್ತೃವಿನ ಕುರಿತೇ ಆಗಲಿ, ಅದರ ಚಾರಿತ್ರಿಕತೆಯ ಕುರಿತೇ ಆಗಲಿ ಸಂಪ್ರದಾಯವಾದಿಗಳ ಅಭಿಪ್ರಾಯ ಎಷ್ಟರಮಟ್ಟಿಗೆ ಸ್ವೀಕಾರಾರ್ಹವಾದುದಲ್ಲ ಎಂದು ವಿದ್ವಾಂಸರು ಹೇಳುತ್ತಾರೋ, ಈ ವಿದ್ವಾಂಸರುಗಳ ವಿಮರ್ಶೆಯಿಂದ ಒಡಮೂಡಿದ ಅಭಿಪ್ರಾಯಗಳಾದರೂ ಸ್ವೀಕಾರಕ್ಕೆ ಅಷ್ಟೇ ಅನರ್ಹವಾಗಿವೆ. ಈ ವಿಮರ್ಶಕರು ತಾವು ಕಂಡುಕೊಂಡ ಯಾವದೋ ಲಕ್ಷಣವನ್ನು ಆಧಾರವನ್ನಾಗಿ ಇಟ್ಟುಕೊಂಡು ಅನಂತರದ ತಮ್ಮ ಅಭಿಪ್ರಾಯವನ್ನೆಲ್ಲ ತಮ್ಮ ಕಲ್ಪನೆಯಿಂದಷ್ಟೇ ರೂಪಿಸಿಕೊಂಡು ಹೋಗಿದ್ದಾರೆ. ಇಷ್ಟಾಗಿ ಈ ವಿದ್ವಾಂಸರಲ್ಲಿಯಾದರೂ ಅಭಿಪ್ರಾಯಗಳ ಕುರಿತು ಐಕಮತ್ಯವಿರುವದಿಲ್ಲ. ಕೆಲವು ವಿಮರ್ಶಕರ ಅಭಿಪ್ರಾಯಗಳಂತೂ ಪೂರ್ವಗ್ರಹ ಪೀಡನೆಯಿಂದ ಕಳಂಕಗೊಂಡಿರುವದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಮಹಾಭಾರತವು ಸ್ವಲ್ಪ

ಇತಿಹಾಸ, ಉಳಿದುದು ಕವಿಕಲ್ಪನೆ; ಅದು ಕೇವಲ ಒಂದು ಕಾವ್ಯ; ಅದು ಮೊದಲಿಗೆ ಬಹಳ ಸಣ್ಣದಾಗಿದ್ದು ಸಾವಿರಾರು ವರ್ಷಗಳಲ್ಲಿ ಹೊಸ ಹೊಸ ಬರಹಗಾರರಿಂದ ಬರೆಯಲ್ಪಟ್ಟ ಹೊಸ ಹೊಸ ಭಾಗಗಳನ್ನು ಒಳಗೊಂಡು ಈಚೆಗೆ ಈಗಿನ ರೂಪವನ್ನು ತಾಳಿದೆ ಎಂದು ಮುಂತಾಗಿ ಅನೇಕ ಅಭಿಪ್ರಾಯಗಳು ವಿದ್ವಾಂಸರುಗಳಿಂದ ಬಂದಿವೆ. ಸತ್ಯಾನ್ವೇಷಣೆ ವಿದ್ವತ್ತಿನ ಗುರಿ. ಸತ್ಯವು ಅನಿರ್ಬಾಧಿತವಾಗಿರಬೇಕಾದುದು ಅವಶ್ಯ. ಮಹಾಭಾರತದ ಕುರಿತು ಈ ವಿದ್ವಾಂಸರುಗಳು ಮುಂದಿಡುವ ಅಭಿಪ್ರಾಯಗಳು ಈ ದೃಷ್ಟಿಯಿಂದ ಸತ್ಯವಾದವುಗಳಾಗುವದಿಲ್ಲ. ಪರಮ ಸತ್ಯವನ್ನು ಸ್ಥಾಪಿಸಲು ಸಾಧ್ಯವಾಗದಿದ್ದಾಗ ವ್ಯಾವಹಾರಿಕ ಸತ್ಯಕ್ಕೆ ಮನ್ನಣೆ ಕೊಡಬೇಕಾದುದು ಅವಶ್ಯ, ಅದು ಶ್ರೇಯಸ್ಕರ. ಮಹಾಭಾರತದ ಕುರಿತು ಯಾವ ಸಂಪ್ರದಾಯವಾದಿಯೂ, ಯಾವ ವಿದ್ವಾಂಸನೂ ಪರಮ ಸತ್ಯವನ್ನು ಹೇಳಲಾರ. ಈ ವರೆಗಂತೂ ಹೇಳಿಲ್ಲ. ಹಾಗಿರುವಾಗ ವಿದ್ವಾಂಸನು ವ್ಯಕ್ತಪಡಿಸುವ ಅಭಿಪ್ರಾಯವು ಸತ್ಯವನ್ನು ಕಂಡು ಹಿಡಿಯಲು ಅಸಮರ್ಥವಾಗಿ, ಅದರಿಂದ ಉಂಟಾಗುವ ಪರಿಣಾಮವೆಂದರೆ ವ್ಯಾವಹಾರಿಕ ಸತ್ಯವು ಕಲಕಲ್ಪಟ್ಟು ಶ್ರದ್ಧೆಯ ತಾಯಿ ಬೇರಿಗೆ ನೋವಾಗುವದು ಮಾತ್ರ.

ಹೀಗೆ ವಿದ್ವಾಂಸರ ವಿಮರ್ಶೆಗಳ ಕುರಿತು ಸಾರ್ವತ್ರಿಕವೆಂಬಂತೆ ಆಡುವ ಮಾತು ಓದುಗರ ಪೂರ್ಣ ಒಪ್ಪಿಗೆಯನ್ನು ಗಳಿಸಲು ಅಸಮರ್ಥವಾಗಬಹುದು. ಈ ಕುರಿತು ವಿದ್ವಾಂಸರ ಪ್ರತಿಯೊಂದೂ ನಿಶ್ಚಿತ ಅಭಿಪ್ರಾಯವನ್ನು ಸಾಕ್ಷಾತ್ತಾಗಿ ತೆಗೆದುಕೊಂಡು, ಅವರು ಅಂತಹ ಅಭಿಪ್ರಾಯವನ್ನು ವ್ಯಕ್ತಪಡಿಸಲು ಮುಂದೂಡಿರುವ ಕಾರಣಗಳನ್ನು ವಿಶ್ಲೇಷಿಸಿ ವಿಮರ್ಶೆ ಮಾಡುತ್ತ ಹೋದರೆ ಮಾತ್ರ ಮಹಾಭಾರತದ ಕುರಿತು ಓದುಗರೂ ಸತ್ಯದ ಅನ್ವೇಷಣೆ ಮಾಡಲು ಸಹಾಯ ಮಾಡಿದಂತಾದೀತು. ಆದರೆ ಹಿಂದೆಯೇ ಹೇಳಿದಂತೆ ಹಾಗೆ ಮಾಡುವದು ಈ ಪುಸ್ತಕದ ಉದ್ದೇಶ ಅಲ್ಲವೇ ಅಲ್ಲ. ಸಾವಿರಾರು ವರ್ಷಗಳಿಂದ ನಡೆದು ಬಂದು, ಜನರ ಜೀವನಕ್ಕೆ ಬಹಳ ಉಪಕಾರಿಯಾದ ಒಂದು ವಿಷಯದಲ್ಲಿ ಜನರಿಗಿರುವ ಶ್ರದ್ಧೆಯನ್ನು ಕಲಕಿಬಿಟ್ಟು, ಅವರು ಅಷ್ಟೇ ಉಪಯುಕ್ತವಾಗಿ ಶ್ರದ್ಧೆಯನ್ನಿಡಲು ಸಾಧ್ಯವಾಗುವಂತಹ ಯಾವದೇ ಹೊಸ ವಿಷಯವನ್ನು ನೀಡಲು ಅಸಮರ್ಥವಾದ ವಿದ್ವಾಂಸರ ಅಭಿಪ್ರಾಯಗಳನ್ನು ಸ್ವೀಕರಿಸುವದಕ್ಕಿಂತ ಅವನ್ನು ಗಮನಿಸದೆ ಸಂಪ್ರದಾಯದಲ್ಲಿಯೇ ಶ್ರದ್ಧೆಯನ್ನು ಮುಂದುವರಿಸಿಕೊಂಡು ಹೋಗುವದು ವಿಹಿತ ಎಂದು ತೋರಿಸುವಷ್ಟರ ಮಟ್ಟಿಗೆ ಮಾತ್ರ ಈ ಪುಸ್ತಕದಲ್ಲಿ ಆ ವಿಷಯದ ಕುರಿತು ಆಡಬೇಕಾಯಿತು.

ಮಹಾಭಾರತದ ನಿರ್ದಿಷ್ಟವಾದ ಕೆಲವು ಭಾಗಗಳು ಪ್ರಕ್ಷಿಪ್ತ ಎಂದು ಕೆಲವು ವಿದ್ವಾಂಸರು ; ಬೇರೆ ಕೆಲವು ಭಾಗಗಳು ಪ್ರಕ್ಷಿಪ್ತ ಎಂದು ಇನ್ನು ಕೆಲವರು ;

ಇನ್ಯಾವದೋ ಭಾಗಗಳು ಪ್ರಕ್ಷಿಪ್ತ ಎಂದು ಇನ್ನೂ ಇತರರು–ಹೀಗೆ ತಮ್ಮ ತಮ್ಮ ಸಿದ್ಧಾಂತಗಳನ್ನು ಇವರುಗಳು ಮುಂದೊಡ್ಡಿ ಈಗ ಮಹಾಭಾರತವನ್ನು ಓದುವವನಿಗೆ ಯಾವದು ಪ್ರಕ್ಷಿಪ್ತ, ಯಾವದು ಮೂಲ ಎಂಬ ಬಲವಾದ ಸಂಶಯ ಉಂಟಾಗುವಂತಾಗಿ ಕೊನೆಗೆ ಅವನು ತನಗೇ ಯಾವ ಯಾವ ಭಾಗಗಳು ಸರಿ ಕಾಣುವದಿಲ್ಲವೋ ಅವೆಲ್ಲವೂ ಪ್ರಕ್ಷಿಪ್ತವಾಗಿರಬಹುದೆಂದು ನಂಬಿಕೊಳ್ಳುವ ಸ್ಥಿತಿಗೆ ತಲಪುವಂತಾಗಿದೆ. ಇಲ್ಲಿಯಾದರೂ, ಪರಮ ಸತ್ಯದ ಅಭಾವ ಕಾಲದಲ್ಲಿ ವ್ಯಾವಹಾರಿಕ ಸತ್ಯವನ್ನೇ ಆಶ್ರಯಿಸಬೇಕಾದ ಅವಶ್ಯಕತೆಯನ್ನು ಹೇಳಬೇಕಾಗುತ್ತದೆ. ತತ್ತ್ವೋಪದೇಶಗಳು, ನೀತಿಬೋಧೆಗಳು, ಪೋಷಕ ಕತೆಗಳು ಹೊಸದಾಗಿ ಸೇರಿಸಲ್ಪಟ್ಟಿರಬಹುದೆಂಬ ಸರ್ವಗ್ರಾಹ್ಯವೆನಿಸಬಹುದಾದ ಸಾಧ್ಯತೆಯನ್ನು ಸ್ವೀಕರಿಸಿ, ಮೂಲ ಕತೆಯ ನಿರೂಪಣೆಯಲ್ಲಿ ಹೊಸ ಲೇಖಕರ ಕೈವಾಡವಿಲ್ಲವೆಂದು ನಂಬಿಕೊಳ್ಳುವದೇ ವಿಹಿತವಾಗುತ್ತದೆ. ಈ ಕುರಿತು ಈ ಪುಸ್ತಕದಲ್ಲಿ ಅಲ್ಲಲ್ಲಿ ಚರ್ಚಿಸಲಾಗಿದೆ. ಮೂಲ ಕತೆಯ ಕುರಿತೇ ಆದರೂ ಬೇರೆ ಬೇರೆ ಹಸ್ತಪ್ರತಿಗಳಲ್ಲಿರಬಹುದಾದ ಪಾಠಾಂತರಗಳ ಕುರಿತು ವಿವಾದಕ್ಕೆಡೆಯಿಲ್ಲದಂತೆ ಏಕಾಭಿಪ್ರಾಯಕ್ಕೆ ಬರುವದು ದೊಡ್ಡ ಸಮಸ್ಯೆ ಎನಿಸುವದಿಲ್ಲ. ಹೀಗೆ ಬರುವ ಏಕಾಭಿಪ್ರಾಯವು ದೋಷಯುಕ್ತವಾಗಿದ್ದರೂ ಅದರ ಪರಿಣಾಮವು ಅಷ್ಟು ಕೆಡುಕನ್ನುಂಟುಮಾಡುವಂತಹುದಾಗಿರುವದಿಲ್ಲ.

ಈ ಪುಸ್ತಕ ಸಾಕಷ್ಟು ದೊಡ್ಡದಾಗಿಬಿಟ್ಟಿದೆ. ಭೀಮನ ಪಾತ್ರ ವಿಮರ್ಶೆ ಮಾಡುವದಕ್ಕಾಗಿ ಅವನು ಹುಟ್ಟಿ ಬೆಳೆದ ಮಹಾಭಾರತ ಕತೆಯನ್ನು ಆದ್ಯಂತವಾಗಿ ಪ್ರಸ್ತಾಪಿಸಬೇಕಾದುದರಿಂದಲೇ ಪುಸ್ತಕವು ದೊಡ್ಡದಾಗಲು ಕಾರಣ ಸಾಕಾಗಿತ್ತು. ಇದರ ಜೊತೆಯಲ್ಲಿ ಅವನ ಗುಣಗಳ ವಿಮರ್ಶೆಮಾಡಬೇಕಾಗಿ ಬಂದು ಇದರ ಗಾತ್ರ ಮತ್ತೂ ಬೆಳೆಯಿತು. ಸಾಲದುದಕ್ಕೆ ಈ ಹಿಂದೆ ಹೇಳಿದಂತೆ ಕತೆಗೆ ಸಂಬಂಧಿಸದ ಕೆಲವು ವಿಷಯುಗಳ ಅಪ್ರಾಸಂಗಿಕವಾದ ಪ್ರಸ್ತಾಪವೂ ಇಲ್ಲಿ ಸೇರಿಕೊಂಡು ಇದು ಈ ರೂಪದಷ್ಟು ದೊಡ್ಡದಾಗಿದೆ.

ಸುಮಾರು ಇಪ್ಪತ್ತೈದು ವರ್ಷಗಳ ಹಿಂದಿನ ಮಾತು. ಈ ಪುಸ್ತಕವನ್ನು ನಾನು ಪ್ರಥಮ ಬಾರಿಗೆ ಬರೆಯುತ್ತಿದ್ದ ದಿನಗಳು. ಬರೆದುದನ್ನೆಲ್ಲ ಓದಿಸಿ ಕೇಳಲು ನನಗೆ ಆಗ ಸಿಕ್ಕಿದ್ದ ವ್ಯಕ್ತಿ ನನ್ನ ಗೆಳೆಯ ರಾಮಾನುಜಂ (ರಾಮಾನುಜ ಅಯ್ಯಂಗಾರ್). ಇದನ್ನು ಓದುವಾಗ ಅವರಿಗೆ ಆಗುತ್ತಿದ್ದ ಆನಂದ ಎಷ್ಟೆಂದರೆ, ನನ್ನ ಕೃತಿ ಪ್ರಕಟವಾಗದಿದ್ದರೂ ಇಷ್ಟಕ್ಕೇ ಸಾರ್ಥಕವಾಯಿತು ಎಂದು ನನಗೆ ನೆಮ್ಮದಿಯಾಗುವಷ್ಟು.

ನಾನು ಬರೆದುದನ್ನು ಓದಿ ಹೇಳುವ ನನ್ನ ಉತ್ಸಾಹದಿಂದ ತಪ್ಪಿಸಿಕೊಳ್ಳಲಾರದಾಗಿದ್ದ ಇನ್ನೊಬ್ಬರು ನನ್ನ ಮಾತೃಶ್ರೀಯವರು. ತಾಯಿ–ಮಗನನ್ನು ಪುರಾಣ

ಕಾಲದ ವಿವಿಧ ವಿಹಾರಕ್ಕೆ ಒಯ್ಯಲು ಈ ಓದುವಿಕೆ ಬಹಳ ಸಮಯ ಸಹಾಯಕ ವಾಗಿತ್ತು.

ಇದು ನಾನು ಬರೆದ ಮೊದಲ ಕೃತಿ. ನಾನು ಸಾಕಷ್ಟು ಪ್ರೌಢ ವಯಸ್ಸಿನವನಲ್ಲ. ಬರೆದ ಹಲವು ವಿಷಯಗಳು ಹೊಸ ಧಾಟಿಯವು. ಹೇಗೋ ಏನೋ ಎನ್ನುವ ಸಣ್ಣ ಅಂಜಿಕೆ. ಅಸ್ವಸ್ಥರಾಗಿದ್ದ ಡಿ. ವಿ. ಜಿ. ಯವರನ್ನು ಪರಿಚಯ ಮಾಡಿಸಿಕೊಂಡು ಹೋಗಿ ಕಂಡೆ. ನಾಲ್ಕಾರು ದಿನ ಅಲ್ಲಿ–ಇಲ್ಲಿ ಅಷ್ಟಿಷ್ಟನ್ನು ಓದಿದೆ. ಕೆಲವೆಡೆ ಅವರ ಕಣ್ಣಿನಲ್ಲಿ ಹನಿಗಳುದುರಿದವು. ಅದು ಅವರ ಸಹೃದಯತೆಗೆ ಸಾಕ್ಷಿ. ಅವರು ಈ ಕೃತಿಯ ಕುರಿತು ಅನೇಕ ಉದಾರವಾದ ಮಾತನಾಡಿದರು. "ಸಂತೋಷದಿಂದ ನಾಲ್ಕು ಮಾತು ಮುನ್ನುಡಿ ಬರೆದು ಕೊಡುತ್ತೇನೆ" ಎಂದರು. ಅವರ ಹರಕೆ ಸಿಕ್ಕಿತು. ಬರವಣಿಗೆ ಸಿಕ್ಕಲಿಲ್ಲ.

ಗೆಳೆಯ ಪ್ರೊ|| ಎಲ್. ಎಸ್. ಶೇಷಗಿರಿರಾಯರು ಇಂಗ್ಲಿಷ್ ಪ್ರಾಧ್ಯಾಪಕರು. ಈ ಭೀಮ, ಘಟೋತ್ಕಚ ಅಂದರೆ ಅವರಿಗೆ ಏನೆನಿಸುತ್ತದೋ ಎಂದುಕೊಂಡಿದ್ದೆ. ಪೂರ್ತಿ ಓದಿದರು. ಕೆಲವು ಸಲಹೆ ನೀಡಿದರು. ಕೆಲವು ಮೆಚ್ಚುಗೆ ವ್ಯಕ್ತ ಪಡಿಸಿದರು.

ಕರಡಿನ ಶುದ್ಧ ಪ್ರತಿ ಆಗಬೇಕು. ಮಗಳು ಆಶಾ ಒಪ್ಪಿದಳು. ಮುಗಿದ ಮೇಲೆ ಕಾಗದ ಬರೆದಳು–"ಬಹಳ ದಿನಗಳಿಂದ ನನ್ನ ಮನಸ್ಸನ್ನು ಸೆರೆ ಹಿಡಿದಿದ್ದ ಈ ಕೆಲಸ ಮುಗಿಯುವಾಗ ಅವ್ಯಕ್ತವಾದ, ಆದರೆ ತಡೆಯಲಾರದ, ದುಃಖ ಉಕ್ಕಿ ಬಂದು ಕಣ್ಣೀರಿಟ್ಟೆ" — ಎಂದು.

ಪುಸ್ತಕವನ್ನು ಪ್ರಕಟಿಸುವವರು ಯಾರು? ನ್ಯಾಯವಾದ ಒಂದು ವ್ಯವಹಾರ ವನ್ನು ಬೇಡುವ ಧಾಟಿಯಲ್ಲಿ ಮಾಡುವದು ನನ್ನನ್ನು ಕೆಣಕುತ್ತದೆ. ವಿಧಿಯಿಲ್ಲದೆ ಮಾಡಿದೆ. "ದೊಡ್ಡ ದೊಡ್ಡ" ಪ್ರಕಾಶಕರನ್ನು ಕೇಳಿದೆ. ಹಸ್ತ ಪ್ರತಿ ನೋಡುವ ದಕ್ಕೂ ಇಚ್ಛಿಸದೆ "ಆಗುವದಿಲ್ಲ" ಎಂದರು. ರಾಜ್ಯದ ಎಲ್ಲ ಪ್ರಕಾಶಕರೂ ಈ ಪುಸ್ತಕದ ಮುಖಕ್ಕೆ ಬಾಗಿಲು ಮುಚ್ಚಿದವರೇ.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಹಂ. ಪ. ನಾಗರಾಜಯ್ಯನವರಿಗೆ ಶರಣು ಹೋದೆ. ಹಸ್ತ ಪ್ರತಿ ಅವರಲ್ಲಿ ಸೇರಿ ಒಂದೆರಡು ವರ್ಷ ಕಾಯುವದರ ಮೂಲಕ ಪ್ರೌಢವಾಗುತ್ತದೆಂದೋ ಏನೋ–ಕೊನೆಗೆ ಮುದ್ರಣ ಕಂಡಿತು. ಈ ಪುಸ್ತಕ ನಾಲ್ಕು ಜನರಿಗೆ ಮೆಚ್ಚಿಗೆಯಾದರೆ ಅದಕ್ಕೆ ಕಾರಣ ಹಂ. ಪ. ನಾ. ಅವರು. ಅವರ ನೆರವು ಇಲ್ಲದಿದ್ದರೆ ಇದು ನನ್ನ ಆಯುಷ್ಯದ ಅವಧಿಯಲ್ಲಿ ಮುದ್ರಣ ಕಾಣು ತ್ತದೆಂದು ನಾನು ನಂಬಲು ಸಾಧ್ಯವಿರಲಿಲ್ಲ.

ಸಂಯುಕ್ತ ಕರ್ನಾಟಕದ ವೃತ್ತಿ ಮುದ್ರಣ ವಿಭಾಗದ ಸುಬ್ಬರಾಯರು ಸೌಜನ್ಯದ ವ್ಯಕ್ತಿ. ಈ ಪುಸ್ತಕದ ಮುದ್ರಣ ಚೆನ್ನಾಗಿದ್ದರೆ ಅವರೇ ಅದಕ್ಕೆ ಕಾರಣರು.

ಪುಸ್ತಕವನ್ನು ಕನ್ನಡಿಗರಿಗೆ ಒಪ್ಪಿಸುತ್ತಿದ್ದೇನೆ. ಇದರ ಕುರಿತಾದ ಪ್ರಶಂಸೆ, ಟೀಕೆ, ಬೈಗಳು – ಏನಿದ್ದರೂ ನನಗೆ ತಿಳಿಸಬಹುದು.

ಬೆಂಗಳೂರು. **ಬಿ. ಎಸ್. ಗೋಪಾಲ ಕೃಷ್ಣ.**

೧೨–೮–೧೯೮೧

# ಅನುಕ್ರಮಣಿಕೆ

# ಮೊದಲನೆಯ ಸಂಜೆ

**ಮು**ರಳಿ: ಶ್ರೀ ವನಿತೆಯ ಗೋಚರ ಸ್ವರೂಪವಾದ ಪ್ರಕೃತಿ ಮನೋಹರವಾಗಿ ಕಾಣಿಸುತ್ತಿದೆ. ವಾತಾವರಣ ಪ್ರಶಾಂತವಾಗಿದೆ. ಆಗಸ ಶುಭ್ರವಾಗಿದೆ. ಸೂರ್ಯ ಬೆಳಕು, ಶಾಖಗಳನ್ನು ಮಾತ್ರ ನೀಡುತ್ತಿಲ್ಲ; ಏನೋ ಒಂದು ವಿಧದ ಲವಲವಿಕೆಯನ್ನೂ ಲೋಕಕ್ಕೆ ನೀಡುತ್ತಿದ್ದಾನೆ. ವಿಹಾರಕ್ಕೆ ಹೊರಟವನಂತೆ ವಾಯು ತೇಲಿ ನಡೆಯುತ್ತಿದ್ದಾನೆ. ಅವನು ಆಡುವ ಪಿಸು ಮಾತಿಗೆ ಗಿಡಗಳು ತಲೆದೂಗುತ್ತಿವೆ: ಒಮ್ಮೊಮ್ಮೆ ಕಿಲಕಿಲನೆ ನಗುತ್ತವೆ. ಮಣ್ಣಿನಡಿಯಲ್ಲಿ ಹುಗಿದು ಹೋದ ಬಳ್ಳಿಯ ಬೇರಿಗೆ ಆಸೆಯಾಯಿತು, ಲೋಕದ ಈ ಸೊಗಸಿನ ವಾತಾವರಣವನ್ನು ನೋಡಬೇಕು ಎಂದು. ಅದರ ಆಸೆ ಹಣ್ಣಾಗಿ, ಬಳ್ಳಿಯ ಕಣ್ಣಾಗಿ ಲೋಕದ ಚೆಲುವನ್ನು ನೋಡಲು ಅರಳಿತು ಹೂವು. ನೀರವತೆಯ ವಿಶಾಲ ಮೌನದಲ್ಲಿ ಮನಸ್ಸು ದಾರಿ ತಪ್ಪಿ ಬಳಲಬಾರದೆಂಬದಕ್ಕಾಗಿ, ಒಂದು ವೇಳೆ ಹಾಗೆ ಬಳಲಿದರೆ ಅಂತಹ ಮನಸ್ಸಿನ ಮೇಲೆ ಬಲಪ್ರಯೋಗದ ಆಘಾತ ಆಗಬಾರದೆಂಬದಕ್ಕಾಗಿ ಹದವಾದ, ಮಧುರವಾದ ಹಕ್ಕಿಗಳ ಇಂಚರ........ಏನನ್ನುವೆ ರಮಾ? ಮಾನವ ಇಂತಹ ದಿವ್ಯ ಪರಿಸರದಲ್ಲಿ ಬದುಕುತ್ತಾನೆ. ಆದರೆ ಆ ದಿವ್ಯತೆಯನ್ನು ಕಂಡುಕೊಳ್ಳುವ ಭಾಗ್ಯವಿಲ್ಲದೆ ತಾನು ನೂರು ಸಮಸ್ಯೆಗಳನ್ನು ಸೃಷ್ಟಿಸಿಕೊಂಡು ಅವುಗಳ ನೋವಿನಿಂದ ನರಳುತ್ತಾ ದಿನ ಕಳೆಯುತ್ತಾನೆ. ಚಂದ್ರಲೋಕ ಇರಲಿ, ಭೂಲೋಕದ ವಿಷಯವೇ ನಮಗೆ ತಿಳಿದಿಲ್ಲವಲ್ಲ! ನಾವು ದಿನನಿತ್ಯ ಕಾಲ ಕಳೆಯುವ ನಮ್ಮ ಪರಿಸರವನ್ನೇ ನಾವು ಅರ್ಥ ಮಾಡಿಕೊಂಡಿಲ್ಲವಲ್ಲ! ಯುಗಾಂತರಗಳಿಂದ ಬೆಳೆದು ಬಂದ ಮಾನವ ತನ್ನ ಹುಟ್ಟು ಏಕೆ, ತನ್ನ ಸುತ್ತಮುತ್ತಲಿನ ಇದೆಲ್ಲ ಏಕೆ? ಎಂಬದನ್ನೇ ಇನ್ನೂ ಅರ್ಥ ಮಾಡಿಕೊಂಡಿಲ್ಲವಲ್ಲ! ಅದು ಹೋಗಲಿ ರಮಾ. ಇದನ್ನು ಅರ್ಥ ಮಾಡಿಕೊಳ್ಳಬೇಕೆಂಬ ಹಂಬಲ ಕೂಡ ಅವನಲ್ಲಿ ಸಾಕಷ್ಟು ಬಲವಾಗಿ ಕಾಣಿಸಿಕೊಳ್ಳುತ್ತಿಲ್ಲವಲ್ಲ! ಏಕೋ ಹುಟ್ಟಿದ್ದಾನೆ. ಇವೆಲ್ಲ ಏಕೋ ಇವೆ. ಏಕೋ ಬದುಕುತ್ತಿದ್ದಾನೆ. ಅಬ್ಬ! ಈ ಪ್ರಕೃತಿಯ ವಿವರಗಳು ಇಷ್ಟೊಂದು ಬಹಿರಂಗವಾಗಿ ಕಾಣಿಸುತ್ತಿವೆ. ಆದರೆ ಅವುಗಳ ಅರ್ಥ ಅಷ್ಟೇ ರಹಸ್ಯವಾಗಿ ಅಡಗಿಕೊಂಡಿದೆ. ಇದೆಲ್ಲ ಏನು? ನಿಜವಾಗಿಯೂ ಏನು? ಅಲ್ಲವೆ ರಮಾ? ನಿನಗೂ ಹೀಗೆ ಅನಿಸುವುದಿಲ್ಲವೇ ರಮಾ? ಈ ಎಲ್ಲದರ ಕುರಿತಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸುವ ಸಮರ್ಥ

ಕ್ರಮವೆಂದರೆ ಮೌನವಾಗಿರುವದು ಮಾತ್ರವೇ ಎನ್ನಬಹುದೇನೊ !........ ಏನನ್ನುವೆ ರಮಾ ?

ರಮೆ:– ಅಲ್ಲ, ಇದೆಲ್ಲ ಏನೂ ಅಂತ ? ನಮ್ಮ ಬದುಕಿನ ಉಪಯೋಗಕ್ಕೆ ಬರುವ ಏನಾದರೊಂದು ವಿಷಯವನ್ನೋ ಅಥವಾ ಮನಸ್ಸಿಗೆ ರಂಜಕವಾಗುವ ಏನಾದರನ್ನೋ ಆಡಿ ಸಮಯವನ್ನು ಉಪಯುಕ್ತವಾಗಿ ಕಳೆಯುವುದರ ಬದಲಃ ಈ ಲೋಕಕ್ಕೆ ಸಂಬಂಧವಿಲ್ಲದ, ಬೇರೆ ಲೋಕವನ್ನು ಸ್ಪಷ್ಟವಾಗಿ ತೋರಿಸಲಾರದ ಈ ಮಾತುಗಳಿಂದ ಏನು ಪ್ರಯೋಜನ ? ಏನೋ ಅಪರೂಪವಾಗಿ ವಿರಾಮದಲ್ಲಿ ಕುಳಿತಿದ್ದೇವೆ. ನೀವು ತುಂಬ ಓದಿಕೊಂಡಿದ್ದೀರಿ. ಏನಾದರೊಂದು ಸ್ವಾರಸ್ಯ ವಾದ ಕತೆಯನ್ನಾದರೂ ಹೇಳಿ ಮತ್ತೆ.

ಮುರಳಿ :–ಹುಚ್ಚು ಹುಡುಗಿ. ಪ್ರಕೃತಿಯ ಸ್ವಾರಸ್ಯವನ್ನು ನೋಡಿ ದೆಯಾ ? ನೀನೂ ನನ್ನಂತೆಯೇ ಮನುಷ್ಯಳು. ನನಗಿಂತಲೂ ಹೆಚ್ಚು ವಿದ್ಯಾ ಭ್ಯಾಸ ಮಾಡಿದ್ದೀ. ನಮ್ಮಿಬ್ಬರ ಬಾಳಿನ ಮಾರ್ಗ, ಗುರಿಗಳೂ ಒಂದೇ. ಆದರೂ ನೋಡು, ನಮ್ಮಿಬ್ಬರಲ್ಲಿ ಎಷ್ಟು ವ್ಯತ್ಯಾಸ ! ನಾವಿಬ್ಬರೂ ನೋಡುವದು ಒಂದೇ ವಸ್ತುವನ್ನು. ಆದರೆ ಕಾಣುವುದು ಬೇರೆ ಬೇರೆ ಅರ್ಥಗಳನ್ನು. ಪ್ರಕೃತಿ ಹೀಗೇ —ಅದರ ಬಾಹ್ಯ ಸ್ವರೂಪ ನಮಗೆ ಚೆನ್ನಾಗಿ ಅರ್ಥವಾಗುವಂತಹದು ಎಂಬಂತಿದೆ. ಆದರೆ ಅದರ ಆಂತರ್ಯ ಅಷ್ಟೇ ರಹಸ್ಯವಾಗಿದೆ. ಇದೆಲ್ಲಾ ಏಕೆ ಹೀಗೆ ಎಂಬದನ್ನು ನಾವು ಸ್ಪಷ್ಟವಾಗಿ ಕಂಡುಕೊಳ್ಳಲು ಸಾಧ್ಯವಾಗುವದೋ ಇಲ್ಲವೋ ; ಆದರೆ ಇಂತಹ ಒಂದು ವಿಚಿತ್ರ ಸ್ಥಿತಿ ಇದೆ ಎಂಬುದನ್ನು ಅರಿತುಕೊಳ್ಳುವದಾದರೂ ಒಂದು ಸ್ವಾರಸ್ಯವಾದ ವಿಷಯವಲ್ಲವೇ ರಮಾ ?

ರಮೆ :–ಹೌದೇ ಹೌದು. ಒಬ್ಬೊಬ್ಬರ ಮನಸ್ಸು ಒಂದೊಂದು ರೀತಿ ಇರುತ್ತದೆ. ಅದನ್ನೂ ಹೊಸದಾಗಿ ತಿಳಿಯುವದಕ್ಕೇನಿದೆ ? ಎಲ್ಲರಿಗೂ ಗೊತ್ತು.

ಮುರಳಿ:– ಇರಲಿ. ಮನಸ್ಸೇ ಆಗಲಿ. ಒಬ್ಬೊಬ್ಬರಲ್ಲಿ ಒಂದೊಂದು ವಿಧ ಏಕೆ ? ಒಂದೇ ಪರಿಸರದಲ್ಲಿ ಹುಟ್ಟಿರಬಹುದು, ಬೆಳೆದಿರಬಹುದು, ಮುಂದೆ ಜೀವನ ಸಾಗಿಸಬಹುದು. ಆದರೂ ಇಬ್ಬರ ಅಭಿರುಚಿ ಬೇರೆ ಬೇರೆಯಾಗಿರಲು ಸಾಧ್ಯ. ಅದೇಕೆ ? ಇದನ್ನೇ ನೀನು ಆಳವಾಗಿ ಆಲೋಚಿಸುತ್ತ ಹೋದೆಯಾದರೆ ಮೈ ಮರೆವು ಬರುವಂತಹ ಒಂದು ಸುಖವನ್ನು ಪಡೆಯಬಲ್ಲೆ.

ರಮೆ :–ನಮ್ಮ ಮಾತಿನ ಧಾಟಿ ನನಗೇಕೋ ಬಹಳ ಕಗ್ಗಂಟಾಗಿ ಕಾಣಿಸು ತ್ತಿದೆಯಪ್ಪ. ಸಂಜೆಯನ್ನು ಸರಳವಾಗಿ ಕಳೆಯೋಣ, ದಯವಿಟ್ಟು ಒಂದು ಕತೆ ಹೇಳುವಿರಾ ?

ಮುರಳಿ :–ಏನು ಕತೆ ಹೇಳಲಮ್ಮಾ ? ಅಡಗೂಲಜ್ಜಿಯ ಕತೆಯನ್ನೇ ?

ರಮೆ:– ನಾನೇನು ಇನ್ನೂ ಮಗು ಅಂತ ತಿಳಿದಿರಾ ?

ಮುರಳಿ:– ಬೇಡ. ಭಾಗವತ ಪುರಾಣ ಹೇಳಲೆ ?

ರಮೆ:– ನಾನೇನೂ ಮುದುಕಿಯಾಗಿಲ್ಲ.

ಮುರಳಿ:– ಹೋಗಲಿ, ರಾಮಾಯಣ ಕತೆ ಹೇಳುತ್ತೇನೆ.

ರಮೆ:– ಸುಮ್ಮನೆ ಸೀತೆಯನ್ನು ತೋರಿಸಿ ನನ್ನನ್ನು ಅಂಜಿಸಬೇಡಿ. ನೀವೂ ಏನು ಶ್ರೀರಾಮನಂತಿಲ್ಲ.

ಮುರಳಿ:– ಅಯ್ಯೋ ದೇವರೇ. ಇರಲಿ. ಶಿವಪುರಾಣದಿಂದ ?

ರಮೆ:– ಏನೋ ಬಿಗಿ. ಏನೋ ಕಟ್ಟುನಿಟ್ಟು. ನಿರಾಳ ಎನಿಸುವದಿಲ್ಲ.

ಮುರಳಿ :– ಹಾಗಾದರೆ ಹರಿಕಥೆ ಹೇಳಿಬಿಡುತ್ತೇನೆ.

ರಮೆ :– ಹರಿಕಥೆ ಎಂದರೆ ಕಟ್ಟುಕತೆ ಎಂದೇ ಮಾಡಿಬಿಟ್ಟಿದ್ದಾರೆ ಈ ದಾಸರುಗಳು.

ಮುರಳಿ :– ಹಾಗಾದರೆ ಇನ್ನೇನು ಹೇಳಲಿ ? ಹೋಗಲಿ. ಮಹಾಭಾರತ ಕತೆ ಹೇಳುತ್ತೇನೆ.

ರಮೆ :– ಅದೆಲ್ಲ ಮುಗಿಯುವ ಕತೆಯಲ್ಲ. ಲೋಕದ ಎಲ್ಲ ಕತೆಗಳೂ ಅದರಲ್ಲಿ ಸೇರಿವೆ.

ಮುರಳಿ :– ಎಲಾ ! ನಿನಗೆ ಇವೆಲ್ಲ ಗೊತ್ತಿವೆ ಎಂದಾಯಿತಲ್ಲ ! ಮತ್ತೆ ನಾನು ಹೇಳಲಿಕ್ಕೇನಿದೆ ?

ರಮೆ :– ಗೊತ್ತಿದೆ ಎಂದರೆ, ಚಿಕ್ಕಂದಿನಲ್ಲಿ ನಮ್ಮ ತಾಯಿ ಅಲ್ಪ ಸ್ವಲ್ಪ ಹೇಳುತ್ತಿದ್ದರು. ಅಲ್ಲಿ ಇಲ್ಲಿ ಕೆಲವು ಪುಸ್ತಕಗಳನ್ನೂ ಓದಿದ್ದೇನೆ. ಎಳನೀರು ನೋಡಿದ್ದೇನೆ. ಆದರೆ ಅದರ ನಿಜವಾದ ರುಚಿಯನ್ನು ನೋಡಿಲ್ಲ. ನೀವೇನೋ ಬುದ್ಧಿವಂತರು; ಏನು ಹೇಳಿದರೂ ಚೆನ್ನಾಗಿ ಹೇಳುತ್ತೀರಿ; ನಿಮ್ಮ ಬಾಯಿಂದ ಏನಾದರೂ ಕೇಳೋಣ ಅಂತ ಅಷ್ಟೆ.

ಮುರಳಿ :– ಹಾಗಿದ್ದರೆ ಮಹಾಭಾರತದ ಯಾವದಾದರೊಂದು ಭಾಗವನ್ನು ಹೇಳಲೇನು ?

ರಮೆ :– ಯಾವ ಭಾಗ ?

ಮುರಳಿ :– ಯಾವ ಭಾಗ ? ಭೀಷ್ಮರ ಕತೆ ?

ರಮೆ :– ಏನೋ ಆದರ್ಶ, ಏನೋ ನೀತಿ, ಏನೋ....

ಮುರಳಿ :– ಕರ್ಣನದು ?

ರಮೆ :– ಕಣ್ಣೀರ ಕತೆ. ಬೇಡವಪ್ಪ.

ಮುರಳಿ :– ದ್ರೋಣಾಚಾರ್ಯರ ವಿಚಾರ?

ರಮೆ :– ಅವರ ಕತೆ ಏನಿದೆ? ಪರಿಸ್ಥಿತಿಯ ಆಘಾತಕ್ಕೆ ಸಿಕ್ಕಿದ ಪ್ರಚಂಡ ಬ್ರಾಹ್ಮಣ, ಅಷ್ಟೆ.

ಮುರಳಿ :–ಹಾಗೇನು? ಹಾಗಾದರೆ ಧರ್ಮರಾಯನ ಕತೆಯೇ ನಿನಗೆ ಸರಿ.

ರಮೆ :–ನಿಮಗೆ ಗೊತ್ತೇ ಇದೆ. ದ್ರೌಪದಿಗೇ ಸರಿಬೀಳದಿದ್ದ ಈ ವ್ಯಕ್ತಿತ್ವ ದ್ರೌಪದಿಗಿಂತಲೂ ಹೆಚ್ಚು ಖಂಡತುಂಡ ಸ್ವಭಾವದ ನನಗೆ ಒಗ್ಗೀತೇ ಹೇಳಿ!

ಮುರಳಿ :– ಒಳ್ಳೇ ಕತೆಯಾಯಿತಲ್ಲ ನಿನ್ನದೇ! ಕೇಳುವದಾದರೆ ಅರ್ಜುನನ ಕತೆ ಕೇಳು.

ರಮೆ :–ಅಂದರೆ ಕೃಷ್ಣನ ವರಪ್ರಸಾದದ ಕತೆ ಅನ್ನಿ.

ಮುರಳಿ :– ಅಂತೂ ನೀನು ಜಿಂತೆಯಿಲ್ಲ! ಕೌರವರ ಕತೆಯೇ ಸರಿ. ಏನನ್ನುತ್ತೀಯ?

ರಮೆ :– ನೀಚ ಶತಕವೆ?

ಮುರಳಿ : – ಗೊತ್ತಾಯಿತು. ಶ್ರೀಕೃಷ್ಣ ಗೋಪಿಕಾಸ್ತ್ರೀಯರೊಂದಿಗೆ ಕುಣಿದ ಕತೆ ಕೇಳುವುದಕ್ಕೇ ನೀನು ಇದನ್ನೆಲ್ಲ ನಿರಾಕರಿಸುತ್ತಿರುವುದು. ಅಲ್ಲ?

ರಮೆ :–ಏನಲ್ಲ. ಕೃಷ್ಣನ ಬಗ್ಗೆ ನಿಮ್ಮಲ್ಲಿ ಚರ್ಚಿಸುವದು ಬಹಳ ಇದೆ. ಅದನ್ನು ಇನ್ನೊಮ್ಮೆ ಮಾಡೋಣ.

ಮುರಳಿ :–ಹೋಗಲಿ. ನವರಸಗಳಲ್ಲಿ ನಿನಗೆ ಯಾವದು ಮೆಚ್ಚು?

ರಮೆ :–ಎಲ್ಲದರ ಸಮ್ಮಿಳನ.

ಮುರಳಿ :–ಹಾಗಾದರೆ ಭೀಮನ ಕತೆ ಕೇಳು.

ರಮೆ :–ಭೀಮನೆ? ಅಬ್ಬಬ್ಬ! ರಾತ್ರಿ ನಾನು ನಿದ್ದೆ ಮಾಡಬೇಕು ಅನ್ನುತ್ತೀರೋ, ಬೇಡವೆನ್ನುತ್ತೀರೋ?

ಮುರಳಿ :–ಹಾಗಿದ್ದ ಮೇಲೆ ನಿನಗೆ ಎಲ್ಲರ ಕತೆಗಳೂ ಗೊತ್ತೇ ಇವೆ ಎಂದಾಯಿತಲ್ಲಾ! ಮತ್ತೆ ನಿನಗೆ ನಾನು ಕತೆ ಹೇಳುವದೇನು? ನೀನೇ ಹೇಳಿಬಿಡು. ನಾನು ಕೇಳುತ್ತೇನೆ.

ರಮೆ :–ಅಯ್ಯೋ ನನಗೆ ಅಷ್ಟೆಲ್ಲ ಬರುವ ಹಾಗಿದ್ದರೆ ನಾನ್ಯಾಕೆ ನಿಮ್ಮ ಹೆಂಡತಿಯಾಗಿ ಬರುತ್ತಿದ್ದೆ ಹೇಳಿ!

ಮುರಳಿ:– ಮತ್ತೆ ಪ್ರತಿಯೊಂದರದೂ ಸಾರವನ್ನು ಒಂದೊಂದೇ ವಾಕ್ಯದಲ್ಲಿ ಹೇಳಿ ಮುಗಿಸುತ್ತಿದ್ದೀಯಲ್ಲ ರಮಾ ?

ರಮೆ:– ಅಲ್ಲ. ಅದಕ್ಕೆ ಬಹಳ ಬುದ್ಧಿವಂತಿಕೆ ಬೇಕೇನು ?

ಮುರಳಿ:– ಯಾವದಕ್ಕೆ ?

ರಮೆ :– ಅದೇ, ಈಗ, ಭೀಮ ಎಂದರೆ ಅದೊಂದು ಒರಟು ವ್ಯಕ್ತಿ; "ತೆಗೆದ, ಬಿಗಿದ" ಎನ್ನುವ ಮನೋಭಾವದವನು ಎಂದು ಹೇಳುವದಕ್ಕೆ ಯಾವ ಹಿಂದುವಿಗೆ ತಿಳಿಯದು ?

ಮುರಳಿ:– ನಿಜ, ನಿಜ, "ತೆಗೆದ, ಬಿಗಿದ" ಎಂದು ಹೇಳುವದಕ್ಕೆ ಯಾವ ಹಿಂದುವಿಗೆ ತಿಳಿಯದು !

ರಮೆ:– ನಾನು ಹಿಂದುಗಳನ್ನಲ್ಲ ಹೇಳಿದ್ದು ; ಭೀಮನನ್ನು.

ಮುರಳಿ:– ನಾನು ಹಿಂದುಗಳನ್ನು ಹೇಳಿದ್ದು.

ರಮೆ:– ಏಕೆ ?

ಮುರಳಿ;– ನೀನೇಕೆ ಭೀಮನನ್ನು ಹೇಳಿದೆ ?

ರಮೆ:– ಯಾಕೆ ಎಂದರೆ ಅವನು ಇದ್ದುದೇ ಹಾಗೆ, ಅದಕ್ಕೆ.

ಮುರಳಿ;– ನಾನು ಯಾಕೆ ಹಾಗೆ ಹೇಳಿದೆ ಎಂದರೆ ಅವರು ಇರುವದೇ ಹಾಗೆ, ಅದಕ್ಕೆ.

ರಮೆ:– ಸುಮ್ಮನೆ ಹೀಗೆ ಒಡ್ಡು ವಾದ ಮಾಡಿದರೆ ಏನು ಪ್ರಯೋಜನ ? ಆಧಾರದ ಮೇಲೆ ಮಾತನಾಡಬೇಕು.

ಮುರಳಿ;– ಭೀಮ 'ತೆಗೆದ, ಬಿಗಿದ" ಎನ್ನುವ ಮನೋಭಾವದವನು ಎನ್ನುವದಕ್ಕೆ ನಿನಗೆ ಏನು ಆಧಾರ ?

ರಮೆ :– ನನಗೆ ಆಧಾರವೆ ? ಚೆನ್ನಾಯಿತು. ವೇದವ್ಯಾಸರಿಂದ ಹಿಡಿದು ಅನಂತರದ ಹಲವಾರು ಮಂದಿ ಮಹಾ ಮಹಾ ಮೇಧಾವಿಗಳು ಬರೆದ ಮಹಾಭಾರತ ಕತೆಯೇ ಆಧಾರ. ಮಹಾಭಾರತದ ಮೇಲೆ ಹತ್ತಾರು ಮಂದಿ ಮಹಾ ಮಹಾ ಮೇಧಾವಿಗಳು ಬರೆದ ವ್ಯಾಖ್ಯೆಗಳೇ ಆಧಾರ. ನಿಮಗೆ ಏನು ಆಧಾರ ಇದೆ ?

ಮುರಳಿ :– ನೀನೇ ಆಧಾರ.

ರಮೆ :– ನಾನೆಂತಹ ಆಧಾರ ?

ಮುರಳಿ :– ಯಾರೋ ಏನೋ ಹೇಳಿದ್ದಾರೆ ಎಂಬದನ್ನು ನಂಬಿಕೊಂಡು

ನೀನು ಆ ಕುರಿತು ವಿಮರ್ಶೆ ಮಾಡದೆ ಭೀಮನ ಬಗೆಗೆ "ತೆಗೆದ, ಬಿಗಿದ" ಎಂಬಂತೆ ಮಾತನಾಡುತ್ತಿರುವ ನೀನೇ ನನಗೆ ಜೀವಂತ ಆಧಾರ.

ರಮೆ :– ಹಾಗಾದರೆ ಭೀಮ ಅಂಥ ವ್ಯಕ್ತಿತ್ವದವನಲ್ಲವೇನು ?

ಮುರಳಿ :– ಅಲ್ಲ.

ರಮೆ :– "ತೆಗೆದ, ಬಿಗಿದ" ಇಲ್ಲದಿರಬಹುದು. "ತೆಗೆದ, ಬಿಗಿಯಲು ಹೊರಟ" ಎಂಬಂತಿದ್ದಿರಬೇಕು.

ಮುರಳಿ :– ಮಹಾಭಾರತದಲ್ಲಿ ಶ್ರೀಕೃಷ್ಣನನ್ನು ಬಿಟ್ಟರೆ ಭೀಮನಂತಹ ಉತ್ಕೃಷ್ಟ ವ್ಯಕ್ತಿತ್ವ ಇರುವ ವ್ಯಕ್ತಿ ಬೇರೊಂದಿಲ್ಲ.

ರಮೆ :– ನಾನು ಹೇಗೂ ಪೆದ್ದಿ ಅನ್ನೋದು ನಿಮಗೆ ಗೊತ್ತೇ ಇದೆ. ನಾನು ನಿಮ್ಮಷ್ಟು ಓದಿಕೊಂಡಿಲ್ಲ. ನೀವು ಹೇಳಿದ್ದೇ ವೇದ ಅಂತ ಹೇಳುತ್ತಿದ್ದೀರಿ.

ಮುರಳಿ :– ವೇದವನ್ನು ಹೇಳಿದರೆ ಹೇಳಿದುದೇ ವೇದ ಏಕಾಗಬಾರದು ?

ರಮೆ :– ನಿಮಗೆ ದೇವರು ಸ್ವಲ್ಪ ಬುದ್ಧಿಯನ್ನೂ ಕೊಟ್ಟುಬಿಟ್ಟಿದ್ದಾನೆ. ನೀವು ಹೇಳುವದೇ ಸರಿ ಎಂದು ವಾದಿಸುತ್ತೀರಿ.

ಮುರಳಿ :– ಬುದ್ಧಿವಂತಿಕೆಯಿಂದ ವಿಮರ್ಶೆ ಮಾಡಿ ಹೇಳುವದು ಹೆಡ್ಡರು ಹೇಳುವುದಕ್ಕಿಂತ ಹೆಚ್ಚು ಸರಿಯಾಗಿರುತ್ತದೆ ಎನ್ನುವದರಲ್ಲಿ ತಪ್ಪೇನು ?

ರಮೆ :– ತಪ್ಪೇನೂ ಇಲ್ಲವಪ್ಪ. ನಿಮ್ಮ ಜೊತೆ ಯಾರು ಚರ್ಚೆ ಮಾಡುತ್ತಾರೆ! ಸರಿಯೋ ತಪ್ಪೋ: ಭೀಮನು ಒರಟನೋ ಕೋಮಲನೋ ಅವನು ಹೇಗಿದ್ದರೆ ನನಗೇನು ? ಹಾಳಾಗಲಿ, ಕತೆ ಹೇಳಿ.

ಮುರಳಿ :– ಹೆಣ್ಣು ಎಂದರೆ ಹೆಣ್ಣು. ಹೋಗಲಿ. ಬೇರೆ ಯಾವ ಕತೆ ಹೇಳಲಿ, ಹೇಳು.

ರಮೆ :– ಏನು ಹೆಣ್ಣು ಎಂದರೆ ಹೆಣ್ಣು ?

ಮುರಳಿ :– ಏನು ಎಂದೇಕೆ ಸೇರಿಸುತ್ತಿ ? ಹೆಣ್ಣು ಎಂದರೆ ಹೆಣ್ಣು ಅಂದೆ. ತಪ್ಪೇನು ?.

ರಮೆ :– ಅದೇನು ಹೆಣ್ಣು ಎಂದರೆ ಹೆಣ್ಣು ಅಂತ ?

ಮುರಳಿ :– ಅದೂ ಏನೂ ಇಲ್ಲ, ಇದೂ ಏನೂ ಇಲ್ಲ. ಹೆಣ್ಣು ಎಂದರೆ ಹೆಣ್ಣು. ಹೌದೋ ಅಲ್ಲವೋ ?

ರಮೆ :– ಹೌದು.

ಮುರಳಿ :– ಯಾವ ಕತೆ ಹೇಳಲಿ ?

ರಮೆ:– ಕತೆ ಇರಲಿ. ಅದೇನು ಹೆಣ್ಣು ಎಂದರೆ ಹೆಣ್ಣು ಎಂದಿರಿ, ಎಂದೆ.

ಮುರಳಿ :– ಹೆಣ್ಣು ಎಂದರೆ ಹೆಣ್ಣು. ಹೆಣ್ಣು ಎಂದರೆ ಗಂಡಲ್ಲ....ಯಾವ ಕತೆ ಎಂದೆ ?

ರಮೆ :– ನೀವು, ಅಬ್ಬ ! ಯಾವನದಾದರೂ ಕತೆ ಹೇಳಿ.

ಮುರಳಿ :– ರಾಸಕ್ರೀಡೆಯ ಕತೆ ಆಗಬಹುದೇನು ?

ರಮೆ :– ಈಗ ಯಾವದೂ ಆಗುವದು ಬೇಡ. ನಿಮ್ಮ ಮಾತು ಅಷ್ಟೊ ನನಗೆ ಅರ್ಥವಾಗುವದಿಲ್ಲ ಎಂದೇನೂ ತಿಳಿದುಕೊಳ್ಳಬೇಡಿ. ಹೇಳಿ, ಹೇಳಿ. ಆ ಭೀಮನ ಕತೆಯನ್ನೇ ಹೇಳಿ. ಅದೇನೋ ಭಾರೀ ಉತ್ಕೃಷ್ಟ ಗಿತ್ಕೃಷ್ಟ ಅಂದಿರಲ್ಲಾ!

ಮುರಳಿ :– ಆಗಲಿ, ಕೇಳು ಹಸ್ತಿನಾವತಿ ಎನ್ನುವ........ಮತ್ತೊಂದು ವಿಷಯ, ಭೀಮನ ಕತೆ ಎಂದರೆ ಅವನ ಚರಿತ್ರೆಯನ್ನು ಆದ್ಯಂತವಾಗಿ, ಕ್ರಮವಾಗಿ ಹೇಳಲೊ, ಅಥವಾ ಅವನ ಜೀವನದ ಕೆಲವು ಪ್ರಮುಖ ಘಟನೆಗಳನ್ನು ಆಯ್ದು ಕೊಂಡು ವಿವರಿಸಲೋ ?

ರಮೆ :–ಇಲ್ಲೊಂದಿಷ್ಟು ಅಲ್ಲೊಂದಿಷ್ಟು ಅಂತ ಕ್ಷೌರ ಮಾಡಿಕೊಳ್ಳುವ ಅಭ್ಯಾಸವಿದೆಯೇನು, ನಿಮಗೆ ?

ಮುರಳಿ :– ಓಹೋ ಸನ್ಯಾಸಿಗಳ ಕ್ಷೌರವೇ ಆಗಬೇಕೆನ್ನುತ್ತೀಯಾ ?

ರಮೆ :– ಅಲ್ಲ ? ವ್ಯಕ್ತಿ ಚಿತ್ರ ಎಂದ ಮೇಲೆ ನಿರೂಪಣೆ ಕ್ರಮಾಗತವಾಗಿರ ಬೇಕು. ನಾಯಕನ ಜೀವನದ ಪ್ರತಿಯೊಂದು ಘಟನೆಯನ್ನೂ ಅದರ ಹಿನ್ನೆಲೆಯ ಬೆಳಕಿನಲ್ಲಿ ವಿಮರ್ಶಿಸಿ ನೋಡಬೇಕು. ಅದು ಪ್ರೌಢ ವ್ಯಾಸಂಗ ಕ್ರಮ. ಅದ್ಭುತವೆನಿಸಬಹುದಾದ ಕೆಲವು ಘಟನೆಗಳನ್ನು ಹೇಳುವುದು ಮಕ್ಕಳಿಗೆ ಕತೆ ಹೇಳುವ ಕ್ರಮ.

ಮುರಳಿ :– ಹೌದು. ನೀನು ಮಗುವಲ್ಲ. ಮುದುಕರಿಗೆ ಹೇಳುವ ಕ್ರಮ ದಲ್ಲೇ ಹೇಳುತ್ತೇನೆ. ಕೇಳು. ಪೂರ್ವದಲ್ಲಿ–ಅಂದರೆ ದಿಕ್ಕಲ್ಲ, ಕಾಲ–ಅಂದರೆ ಸುಮಾರು ನಾಲ್ಕೈದು ಸಾವಿರ ವರ್ಷಗಳ ಹಿಂದೆ ಚಂದ್ರವಂಶದ ರಾಜರು ಭರತ ಖಂಡದ ಉತ್ತರ ಭಾಗದಲ್ಲಿ ಆಳುತ್ತಿದ್ದರು. ಅವರ ಪೈಕಿ ಕುರುಕುಲ ಎಂಬ ಭಾಗ ದಲ್ಲಿ ಶಂತನು ಎಂಬ ಅರಸು ರಾಜನಾಗಿದ್ದನು. ಅವನಿಗೆ ಗಂಗೆಯಲ್ಲಿ ಭೀಷ್ಮ ಎಂಬ ಮಗನು ಹುಟ್ಟಿದನು.

ರಮೆ:– ಅಂದರೆ ? ಗಂಗಾನದಿಯೊಳಗೆ ಅವನ ಹೆಂಡತಿ ಮಗುವನ್ನು ಹೆತ್ತಳೆಂದೊ ?

ಮುರಳಿ:- ಅಲ್ಲ. ಗಂಗೆ ಸ್ತ್ರೀರೂಪ ಹೊತ್ತು ಶಂತನುವಿಗೆ ಮಡದಿಯಾಗಿ ಅವನಿಂದ ಭೀಷ್ಮನನ್ನು ಪಡೆದಳು ಎಂದು.

ರಮೆ:- ಅಂದರೆ ಅವಳು ಸ್ತ್ರೀರೂಪದಲ್ಲಿರುವಾಗ ನದಿ ಹರಿಯುತ್ತಿರ ಲಿಲ್ಲವೊ ?

ಮುರಳಿ:- ಹರಿಯುತ್ತಿತ್ತು. ನಿನ್ನ ಕುಚೋದ್ಯ ನನಗೆ ಅರ್ಥವಾಗು ತ್ತದೆ. ಒಂದು ವಿಷಯವನ್ನು ತಿಳಿದುಕೊ ರಮಾ. ಮಹಾಭಾರತ ಗ್ರಂಥ ವನ್ನು ವಿಮರ್ಶಿಸುವಾಗ ಈಗಿನ ನಮಗೆ ಅದು ಇದ್ದುದಿದ್ದಂತೆಯೇ ಅದನ್ನು ಸ್ವೀಕರಿಸಲು ಕಷ್ಟವಾಗುತ್ತದೆ. ನಮ್ಮ ಅನುಭವ, ನಮಗೆ ಈಗ ಲಭ್ಯವಾಗುವ ಸಾದೃಶ್ಯ ನಮ್ಮ ಕಲಿಕೆಯ ಆಧಾರದ ಕಲ್ಪನೆ – ಇವುಗಳಿಂದಷ್ಟೇ ಮಹಾ ಭಾರತದ ಘಟನೆಗಳನ್ನು ಅಳೆಯಲು ನಾವು ಪ್ರಯತ್ನಿಸುತ್ತೇವೆ. ಕಾಲುಗಳಿಂದ ನಡೆಯಲಾರದ ಮಗು ಎರಡು ಚಕ್ರಗಳ ವಾಹನದ ಮೇಲೆ ದೊಡ್ಡವರು ಹೋಗುತ್ತಾರೆ, ನೀರಿನ ಮೇಲೆ ಹೋಗುತ್ತಾರೆ ಎಂಬದನ್ನೆಲ್ಲ ಕಲ್ಪಿಸಿಕೊಂಡಂತಾ ಗುತ್ತದೆ, ಇದು. ವೈಜ್ಞಾನಿಕ ಪ್ರಗತಿಯಲ್ಲಿ ಈಗ ಹೇಗೆಯೋ, ಅತಿಪ್ರಕೃತಿಯ ಸಾಧನೆಗಳಲ್ಲಿ ಕೂಡ ನಮ್ಮ ಪೂರ್ವಜರು ನಮಗಿಂತ ಬಹಳ ಮುಂದುವರೆ ದಿದ್ದರು ಎಂಬದನ್ನು ಒಪ್ಪಿಕೊಳ್ಳಲು ನಮಗೆ ಸಾಧ್ಯವಾದರೆ ಮಾತ್ರವೇ ನಾವು ಈ ಇತಿಹಾಸ ಗ್ರಂಥಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬಲ್ಲೆವು. ಸ್ವಾಮಿ ವಿವೇಕಾನಂದರು ಅಷ್ಟವಸುಗಳ ಪೈಕಿ ಒಬ್ಬರ ಅವತಾರವೆಂದು ಶ್ರೀ ರಾಮಕೃಷ್ಣ ಪರಮಹಂಸರು ಹೇಳಿದಾಗ ನಾವು ಅದನ್ನು ಅಲ್ಲಗಳೆಯಲು ಹೋಗಲಿಲ್ಲ. ಏಕೆಂದರೆ ಶ್ರೀ ರಾಮಕೃಷ್ಣರ ಆಧ್ಯಾತ್ಮಿಕ ಮಟ್ಟ, ಸತ್ಯ ಸಂಧತೆಗಳನ್ನು ನಾವು ಪ್ರಶ್ನಿಸುವಂತಿರಲಿಲ್ಲ. ಗಂಗೆಯು ಸ್ತ್ರೀರೂಪದಲ್ಲಿ ಶಂತನುವಿನ ಪತ್ನಿಯಾದಳು ಎಂದು ಹೇಳಿದ ವೇದವ್ಯಾಸರನ್ನಾದರೂ ಪ್ರಶ್ನಿಸುವ ಸಾಮರ್ಥ್ಯ ನಮ್ಮಲ್ಲಿಲ್ಲ....

ರಮೆ:- ಇದೇನು ಉಪನ್ಯಾಸ ಪ್ರಾರಂಭಿಸಿದ್ದೀರಿ ? ಆಗಲಿ, ಹೇಳಿ. ಗಂಗೆ ಶಂತನುವಿನಿಂದ ಭೀಷ್ಮನನ್ನು ಪಡೆದಳು. ಮುಂದೆ ?

ಮುರಳಿ:- ಭೀಷ್ಮನು ಕಾರಣಾಂತರದಿಂದ ಬ್ರಹ್ಮಚಾರಿಯಾಗಿಯೇ ಉಳಿ ದನು.

ರಮೆ:- ಅವಿವಾಹಿತನಾಗಿ ಅನ್ನಿ.

ಮುರಳಿ:- ಅದೇ ನಾನಂದದ್ದು. ನೀನು ಕಾಲೇಜಿನಲ್ಲಿ ಓದುತ್ತಿರುವಾಗ ನೀವು ಪರಸ್ಪರವಾಗಿ ಆಡಿಕೊಳ್ಳುತ್ತಿದ್ದ ಅಗ್ಗದ ಹಾಸ್ಯವನ್ನು ಇಲ್ಲಿ ಪ್ರಯೋಗಿ ಸಲು ಪ್ರಯತ್ನಿಸುತ್ತಿದ್ದೀ. ಭೀಷ್ಮನು ಶುದ್ಧ ಬ್ರಹ್ಮಚಾರಿಯಾಗಿಯೇ ಉಳಿ ದುದು; ಅವಿವಾಹಿತನಾಗಿ ಅಲ್ಲ. ಭೀಷ್ಮ ಮತ್ತು ಆಂಜನೇಯರ ಬ್ರಹ್ಮಚರ್ಯ ಪ್ರಸಿದ್ಧವಾದುದು.

ರಮೆ :– ಆಗಲಪ್ಪಾ, ಹೇಳಿ. ಶುದ್ಧ ಬ್ರಹ್ಮಚಾರಿಯಾಗಿಯೇ ಉಳಿದನು. ಆಮೇಲೆ ?

ಮುರಳಿ :– ಇವನ ಅತ್ತಿಗೆಯರಾದ ಅಂಬಿಕೆ, ಅಂಬಾಲಿಕೆ ಎಂಬ ಇಬ್ಬರಲ್ಲಿ ವೇದವ್ಯಾಸರಿಂದ ಅನುಕ್ರಮವಾಗಿ ಧೃತರಾಷ್ಟ್ರ ಪಾಂಡು ಎಂಬ ಮಕ್ಕಳು ಹುಟ್ಟಿದರು.

ರಮೆ :– ಅಂದರೆ, ವ್ಯಾಸರಿಗೆ ಇವರಿಬ್ಬರೂ ಹೆಂಡತಿಯರೊ ?

ಮುರಳಿ :– ಅಲ್ಲ. ಅವರಿಬ್ಬರೂ ವಿಧವೆಯರಾಗಿದ್ದವರು. ಭೀಷ್ಮನ ಬಲ ತಮ್ಮಂದಿರಾದ ಚಿತ್ರವೀರ್ಯ, ವಿಚಿತ್ರವೀರ್ಯ ಎಂಬವರ ಪತ್ನಿಯರು. ತಮಗೆ ಮಕ್ಕಳಾಗುವ ಮುಂಚೆಯೇ ಅವರು ವಿಧವೆಯರಾದುದರಿಂದ ಹಾಗೂ ಭೀಷ್ಮನು ವಿವಾಹವಾಗಲೊಲ್ಲದೆ ಆ ರಾಜವಂಶವೇ ಅಲ್ಲಿಗೆ ಕೊನೆಗೊಳ್ಳುವ ದುಸ್ಥಿತಿ ಒದಗಿದುದರಿಂದ ತಮ್ಮ ಅತ್ತೆಯ ಮಗನೇ ಆದ ವೇದವ್ಯಾಸರಿಂದ ಅಂಬಿಕೆ ಅಂಬಾಲಿಕೆಯರು ಹಿರಿಯರ ಆಣತಿಯಂತೆ ಮಕ್ಕಳನ್ನು ಪಡೆದರು.

ರಮೆ :– ಛೀ. ಏನು ಹೊಲಸಪ್ಪ !

ಮುರಳಿ :– ಹೌದು. ತುಟಿಯಲ್ಲಿರುವದು ಎಂಜಲು. ಆದರೆ ಪ್ರೇಮಿಗಳಿಗೆ ಅದು ಅಧರಾಮೃತ. ದೇವಾಲಯದ ವಿಗ್ರಹ ಕಲ್ಲು. ಭಕ್ತನಿಗೆ ಭಗವಂತ. ಸೈನಿಕ ಮಾಡುವದು ಕಗ್ಗೊಲೆ. ಆದರೆ ಅದು ಅವನ ದೇಶಭಕ್ತಿಯ ಪ್ರತೀಕ. ಹೀಗೆ ಯಾವ ಕೆಲಸವೇ ಆದರೂ ಅದರ ಗುರಿಯನ್ನವಲಂಬಿಸಿ ಕೀಳು, ಮೇಲು ಎನಿಸಬಹುದು.

ರಮೆ:– ವಿಧವೆಯರ ಮೂಲಕ ಮಕ್ಕಳನ್ನು ಪಡೆಯುವ ಕೆಲಸ ಮೇಲಿನ ಮಟ್ಟದ್ದು ಎನ್ನುತ್ತಿದ್ದೀರಿ !

ಮುರಳಿ:– ವಿಧವೆಯರಾದ ಅಂಬಿಕೆ, ಅಂಬಾಲಿಕೆಯರಲ್ಲಿ ವೇದವ್ಯಾಸರು ಮಕ್ಕಳನ್ನು ಪಡೆದುದು ಮೇಲ್ಮಟ್ಟದ್ದು ಎಂದೆ.

ರಮೆ:– ದೊಡ್ಡವರು ಮಾಡುವ ಕೆಲಸವೆಲ್ಲ ದೊಡ್ಡದೇ.

ಮುರಳಿ: ಅಂದಿನ ಸಾಮಾಜಿಕ, ರಾಜಕೀಯ, ನೈತಿಕ ಪರಿಸ್ಥಿತಿಗಳ ಹಿನ್ನೆಲೆಯಲ್ಲಿ ಇದನ್ನೆಲ್ಲ ವಿಮರ್ಶಿಸಬೇಕು ರಮಾ. ರಾಜತ್ವ ಎಂಬದು ದೈವತ್ವವನ್ನು ಬಿಟ್ಟರೆ ಎರಡನೆಯ ಮಹತ್ವದ್ದಾಗಿದ್ದ ಕಾಲ ಅದು. ಅರಾಜಕತೆ ಎಂದರೆ ಸಾಮಾಜಿಕ, ನೈತಿಕ ಮೌಲ್ಯಗಳೆಲ್ಲವೂ ನಾಶವಾಗುತ್ತಿದ್ದಂತಹ ಪರಿಸ್ಥಿತಿ. ಒಂದು ರಾಜ ಮನೆತನದಲ್ಲಿ ಉತ್ತರಾಧಿಕಾರಿ ಇಲ್ಲದಂತಾದರೆ ಅದು ಆ ಒಂದು ಕುಟುಂಬದ ದೌರ್ಭಾಗ್ಯ ಎನ್ನುವದಕ್ಕಿಂತಲೂ ಇಡಿಯ ರಾಜ್ಯಕ್ಕೇ ಒದಗಿದ ಕುತ್ತು ಎಂಬ ಪರಿಸ್ಥಿತಿ ಇದ್ದಂತಹ ಕಾಲ. ರಾಜ್ಯವನ್ನು ಅಂತಹ

ದುರವಸ್ಥೆಯಿಂದ ತಪ್ಪಿಸುವದು ಒಂದು ದೊಡ್ಡ ಉಪಕಾರ ಕಾರ್ಯವಾಗುತ್ತಿತ್ತು. ವೇದವ್ಯಾಸರು ರಾಜ್ಯಕ್ಕೆ ಇಂತಹ ಉಪಕಾರವೆಸಗುವದಕ್ಕಾಗಿಯಷ್ಟೇ ಆ ಇಬ್ಬರು ವಿಧವೆಯರಲ್ಲಿ ಮಕ್ಕಳನ್ನು ಪಡೆದರು. ಆ ಇಬ್ಬರು ವಿಧವೆಯರ ಬಯಕೆಯಾದರೂ ಇದೇ ಆಗಿತ್ತು ಹೊರತು ಅದರಲ್ಲಿ ಕಾಮದ ಲೇಪವಿರಲಿಲ್ಲ. ಆತ್ಮಜ್ಞಾನಿಯಾದವನು ಮೂರು ಲೋಕಗಳನ್ನು ಕೊಂದರೂ ಅವನಿಗೆ ಪಾಪದ ಲೇಪ ಬರುವದಿಲ್ಲ ಎಂಬ ಭಗವದ್ಗೀತೆಯ ಸಂದೇಶವನ್ನು ಅರ್ಥ ಮಾಡಿಕೊಳ್ಳಲಿಕ್ಕೆ ಕೂಡ ವಿಶೇಷ ಅರ್ಹತೆ ಬೇಕಾಗುತ್ತದೆ. ಕೇವಲ ಒಂದು ಕರ್ಮ ಮಾಡಿದ ಮಾತ್ರಕ್ಕೇ ಅದರಿಂದ ಪಾಪ ಅಥವಾ ಪುಣ್ಯ ಬರುತ್ತದೆ ಎಂದು ಹೇಳಲಾಗುವದಿಲ್ಲ. ಆ ಕರ್ಮ ಮಾಡುವವರ ಉದ್ದೇಶವನ್ನು ಅವಲಂಬಿಸಿ ಅದರ ಸಂಸ್ಕಾರ ಉಂಟಾಗುತ್ತದೆ. ನಾವು ಒಂದು ಪ್ರಾಣಿಗೆ ಮೆಲ್ಲನೆ ಚುಚ್ಚಿ ಅದು ಸಂಕಟಪಟ್ಟರೂ ನಮ್ಮ ಆ ಕಾರ್ಯ ಪಾಪಕರವಾದುದೆನಿಸುತ್ತದೆ. ಒಬ್ಬ ನ್ಯಾಯಾಧೀಶನು ಒಬ್ಬಾತ ತಪ್ಪಿತಸ್ಥನೆಂಬದಕ್ಕಾಗಿ ಆತನಿಗೆ ಮರಣ ದಂಡನೆ ವಿಧಿಸಿ ಅವನ ಸಾವಿಗೆ ಕಾರಣನಾದರೂ ಅವನ ಈ ಕಾರ್ಯ ಪುಣ್ಯಪ್ರದ ಎನಿಸುತ್ತದೆ.

ರಮೆ:– ಸಾಕಪ್ಪಾ, ಉಪನ್ಯಾಸ. ವೇದವ್ಯಾಸರ ಪುಣ್ಯ ಕಾರ್ಯದಿಂದಾಗಿ ವಿಧವೆಯರಿಗೆ ಮಕ್ಕಳಾಯಿತು. ಆಮೇಲೆ ಹೇಳಿ.

ಮುರಳಿ:– ಆ ಮಕ್ಕಳೇ ಧೃತರಾಷ್ಟ್ರ ಮತ್ತು ಪಾಂಡು ಎಂದು ಕರೆಯಲ್ಪಟ್ಟರು. ಮೊದಲನೆಯವ ಹುಟ್ಟು ಕುರುಡನಾದನು. ಎರಡನೆಯವನು ಪಾಂಡುರೋಗಿಯಾದನು. ಹೀಗಾಗಿ ಪಾಂಡುವೇ ರಾಜನಾದನು.

ರಮೆ:– ಅಂದರೆ ಪಾಂಡುರೋಗಿಗಳು ಮಾತ್ರ ರಾಜರಾಗಲು ಅರ್ಹರೊ ?

ಮುರಳಿ:– ಅಲ್ಲ ; ಕುರುಡರಲ್ಲದವರು. ಕುಚೇಷ್ಟೆ ಬಿಟ್ಟು ಕೇಳು. ಧೃತರಾಷ್ಟ್ರನಿಗೆ ಗಾಂಧಾರಿ ಎಂಬವಳನ್ನೂ, ಪಾಂಡುವಿಗೆ ಕುಂತಿ ಮತ್ತು ಮಾದ್ರಿ ಎಂಬವರನ್ನೂ ತಂದು ಭೀಷ್ಮನು ಮದುವೆ ಮಾಡಿದನು. ರಾಜನಾದ ಪಾಂಡುವು ಒಮ್ಮೆ ಬೇಟೆಗೆ ಹೋಗಿದ್ಧಾಗ ಕಾರಣಾಂತರದಿಂದ ಋಷಿ ಶಾಪಕ್ಕೆ ಒಳಗಾಗಿ ಅವನು ಅನಂತರ ಭಾರ್ಯಾ ಸಂಗವನ್ನೇ ಬಿಡಬೇಕಾಗಿ ಬಂತು.

ರಮೆ:– ಈ ಶಾಪ, ವರ ಅನ್ನೋದನ್ನೆಲ್ಲ ನೀವು ನಂಬುತ್ತೀರಾ ?

ಮುರಳಿ:– ಪ್ರಪಂಚದ ವ್ಯಾಪಾರಗಳು ನಾನು ನಂಬುವದರ ಮೇಲೆ ಅಥವಾ ನಂಬದಿರುವದರ ಮೇಲೆ ಆಧರಿಸಿ ನಡೆಯುತ್ತಿರುವದಲ್ಲವಲ್ಲ !

ರಮೆ:– ಅದೆಲ್ಲ ನಡೆಯುತ್ತದೋ ಎಂದೆ.

ಮುರಳಿ:– ಯಾಕೆ ನಡೆಯುವದಿಲ್ಲ ? ಏಕಾಗ್ರತೆಯನ್ನು ಪಡೆದು ಬಲಿಷ್ಠವಾದ ಮನಸ್ಸು ಸಾಧಿಸಲಾರದುದು ಏನೂ ಇಲ್ಲ. ಅಂತಹ ಮನಸ್ಸೇ ಮಾನವ

ನನ್ನು ಚಂದ್ರಲೋಕಕ್ಕೆ ಒಯ್ದಿದ್ದರುವದು. ಕಿರಿಯರು, ಹಿರಿಯರ ಆಶೀರ್ವಾದ ವನ್ನು ಪಡೆಯಬೇಕೆಂಬ ಪದ್ಧತಿ ಇಂದಿಗೂ ಉಳಿದಿದೆಯಷ್ಟೆ? ಅದರ ಉದ್ದೇಶವೂ ಇದೇ. ಅನುಭವ, ಜ್ಞಾನ, ವಿದ್ವತ್ತು, ಸಾಧನೆ ಮೊದಲಾದವುಗಳಲ್ಲಿ ಒಬ್ಬಾತ ಪ್ರೌಢನಾಗಿದ್ದರೆ ಅವನು, ಅವುಗಳಲ್ಲಿ ಕಡಿಮೆ ಪ್ರೌಢಿಮೆ ಪಡೆದವನ ಮೇಲೆ ವಿಶೇಷ ಪರಿಣಾಮ ಬೀರಲು ಸಾಧ್ಯವಾಗುವದನ್ನು ಬಾಹ್ಯ ಸ್ವರೂಪದಲ್ಲಿ ನಾವು ಇಂದಿಗೂ ಕಾಣುತ್ತೇವೆ. ಆದರೆ ಇದಕ್ಕಿಂತಲೂ ಹೆಚ್ಚು ಪರಿಣಾಮಕಾರಿಯಾ ದುದು ಮಾನಸಿಕ ಪ್ರಭಾವ. ಅದು ಪ್ರತ್ಯಕ್ಷವಾಗಿ ಕಾಣಿಸಲಾರದು. ಅದಕ್ಕಾಗಿ ಶೋಧನೆ ಮಾಡಬೇಕು.

ರಮೆ :–ಪಾಂಡು ಆಮೇಲೆ ತನ್ನ ಪತ್ನೀ ಸಂಗವನ್ನು ಬಿಡಬೇಕಾಗಿ ಬಂತು.

ಮುರಳಿ :–ಇದರಿಂದ ಅವನಿಗೆ ಒಂದು ಬಗೆಯ ವಿರಕ್ತಿ ಉಂಟಾಗಿ ರಾಜ್ಯದ ಆಡಳಿತವನ್ನು ಭೀಷ್ಮನಿಗೊಪ್ಪಿಸಿ ಅವನು ತನ್ನ ಮಡದಿಯರೊಡನೆ ಅರಣ್ಯಕ್ಕೆ ಹೊರಟುಹೋದನು. ಹೀಗೆಯೇ ಇರುವಾಗ ತಮ್ಮ ವಂಶವೇ ನಿರ್ಮೂಲವಾಗಿ ಬಿಡುವ ಭಯ ಹೆಚ್ಚಾದುದರಿಂದ ಕುಂತಿಯು ತನ್ನ ಗಂಡನ ಅನುಮತಿಯನ್ನು ಪಡೆದು ತನಗೆ ಹಿಂದೆ ದೂರ್ವಾಸರಿಂದ ಉಪದಿಷ್ಟವಾಗಿದ್ದ ಐದು ಮಂತ್ರಗಳಲ್ಲಿ ಒಂದನ್ನು ಉಚ್ಚರಿಸಿ ಯಮನನ್ನು ಆಮಂತ್ರಣ ಮಾಡಿ ಸತ್ಯ, ಧರ್ಮ, ಭಕ್ತಿ, ಅಹಿಂಸೆ ಮೊದಲಾದ ಗುಣಗಳನ್ನೇ ರಕ್ತ ಕಣಗಳಾಗಿ ಪಡೆದಂತಿದ್ದ ಯುಧಿಷ್ಠಿರ ನೆಂಬ ಮಗನನ್ನು ಪಡೆದಳು. ಈ ವರ್ತಮಾನವನ್ನು ಕೇಳಿ ಅಸೂಯೆಗೊಂಡ ಗಾಂಧಾರಿಯು........

ರಮೆ:–ಯಾರು ? ಧೃತರಾಷ್ಟ್ರನ ಹೆಂಡತಿ.

ಮುರಳಿ :–ಹೌದು. ಅವಳು ತನಗೆ ಮುನಿಯ ಅನುಗ್ರಹದಿಂದ ಲಭ್ಯ ವಾಗಿದ್ದ ಗರ್ಭವನ್ನು ಕಿವುಚಿಕೊಂಡಳು.

ರಮೆ :– ಮಹಾಭಾರತದಲ್ಲಿ ಗಂಡನಿಂದ ಮಕ್ಕಳನ್ನು ಪಡೆದ ಹೆಂಗಸರು ಇಲ್ಲವೇ ಇಲ್ಲವೋ ?

ಮುರಳಿ :–ಗರ್ಭ ಧರಿಸುವಲ್ಲಿ ಗಂಡ ಒಂದು ಸಾಧನ ಮಾತ್ರ. ಗರ್ಭದ ಹಿಂದೆ ಹಲವು ಜೀವಿಗಳ ಹಲವು ಜನ್ಮಗಳ ಆರ್ಜಿತ ಫಲ, ಹಲವು ಜೀವಿಗಳ ಭವಿಷ್ಯದ ಹಿನ್ನೆಲೆ, ಮೊದಲಾದ ರಹಸ್ಯ ವಿಷಯಗಳು ಅಡಗಿರುತ್ತವೆ. ಅದರಲ್ಲಿಯೂ ಆ ಗರ್ಭ ಅಥವಾ ಅದರ ತಂದೆ ತಾಯಿಗಳು ಸಮಾಜದಲ್ಲಿ ವಿಶೇಷ ಮಾನ್ಯತೆ ಅಥವಾ ನಾಯಕತ್ವವನ್ನು ಪಡೆದಿದ್ದರೆ ಆ ಗರ್ಭವೂ ಅಷ್ಟೇ ಅಸಾಮಾನ್ಯವಾದು ದಾಗಿರುತ್ತದೆ. ಗಂಡ ಹೆಂಡತಿಯರಿಗೆ ಮಗುವಾಯಿತು ಎಂಬ ಸ್ಥೂಲ ವಿಷಯ ವಷ್ಟೇ ನಮ್ಮಂತಹ ಸಾಮಾನ್ಯರಿಗೆ ತಿಳಿಯುವದು. ಆ ಗರ್ಭದ ಹಿಂದೆ ಪ್ರಕೃತಿಯ

ಯಾವ ಯೋಜನೆ ಸೇರಿಕೊಂಡಿದೆ, ಅದನ್ನು ಕಾರ್ಯಗತಗೊಳಿಸಲು ಏನೆಲ್ಲಾ ರಹಸ್ಯ ವಾದ ಅಂಶಗಳು ಸೇರಿವೆ, ಎಂಬದು ನಮಗೆ ತಿಳಿಯುವದಿಲ್ಲ. ಅದನ್ನು ತಿಳಿ ಯಲು ಶಕ್ತರಾಗಿದ್ದ ವೇದವ್ಯಾಸರಂಥವರು ಅದರ ವಿವರವನ್ನು ಹೇಳುವಾಗ ನಮಗೆ ಅದೇನೋ ವಿಚಿತ್ರ ಅನಿಸುತ್ತದೆ. ದೇವತೆಗಳ.......

ರಮೆ:— ಗಾಂಧಾರಿ ಗರ್ಭವನ್ನು ಕಿವುಚಿಕೊಂಡುದರಿಂದ ಅವಳಿಗೆ ಏನಾ ಯಿತು ?

ಮುರಳಿ:— ಒಂದು ಪಿಂಡವು ನೂರು ಚೂರುಗಳಾಗಿ ಒಡೆದುಬಿತ್ತು.

ರಮೆ:— ಗರ್ಭಪಾತ ಎನ್ನುವ ಶಬ್ದವನ್ನು ನೀವು ಕೇಳಿಯೇ ಇಲ್ಲವೊ ?

ಮುರಳಿ:— ಗರ್ಭಪಾತವಾಯಿತು. ಆ ನೂರು ಚೂರುಗಳನ್ನು ವೇದ ವ್ಯಾಸರ ಅಪ್ಪಣೆಯಂತೆ ಎಣ್ಣೆಯ ಕೊಪ್ಪರಿಗೆಗಳಲ್ಲಿಟ್ಟು ಕಾಯುತ್ತಿದ್ದರು.

ರಮೆ:— ಹೊಳಲಿಲ್ಲ ಏಕೆ ?

ಮುರಳಿ:— ಈ ಪ್ರಶ್ನೆ ಕೇಳುತ್ತಿರುವ ನೀನು ಇರುವ ಕಾಲಕ್ಕೂ ನಿನ್ನ ಪ್ರಶ್ನೆಯ ವಿಷಯದ ಕಾಲಕ್ಕೂ ಬಹಳ ಅಂತರವಿರುವದರಿಂದ. ಆಗ ಕುಟುಂಬ ಯೋಜನೆ ಜಾರಿಯಲ್ಲಿರಲಿಲ್ಲ. ಮಗು ಹುಟ್ಟುವದು ಶಾಪವೆನಿಸದೆ ಉತ್ಸವ ಎನಿಸುತ್ತಿತ್ತು. ಮೇಲಾಗಿ ಅವಧಿಗೆ ಮುಂಚೆಯೇ ಪಾತವಾಗುವ ಪಿಂಡವನ್ನು ಬೆಳೆಸುವಷ್ಟು ವೈದ್ಯಕೀಯ ಜ್ಞಾನ ಆಗ ಮುಂದುವರೆದಿತ್ತು.

ರಮೆ:— ನೀವು ಭೀಮನ ಕತೆ ಹೇಳುತ್ತೇನೆ ಎಂದಲ್ಲವೇ ಪ್ರಾರಂಭಿಸಿದ್ದು ?

ಮುರಳಿ:— ಅದನ್ನೇ ಹೇಳುತ್ತಿರುವದು ಕೇಳು. ಕಾಡಿನಲ್ಲಿ ವಾಸಿಸು ತ್ತಿದ್ದ ಪಾಂಡುವು ಒಮ್ಮೆ ಕುಂತಿಯನ್ನು ಕುರಿತು "ಪ್ರಿಯೆ, ನಮ್ಮ ಈ ಮಗನು ಕೇವಲ ಧರ್ಮ ಪರಾಯಣನಾಗಿಯೇ ಬೆಳೆಯುವ ಸಂಭವವಿರುವದರಿಂದ ಕ್ಷತ್ರಿ ಯರಾದ ನಮಗೆ ಉಚಿತವಾಗುವಂತೆ ಒಬ್ಬ ಬಲಾಧಿಕನಾದ ಇನ್ನೊಬ್ಬ ಪುತ್ರ ನನ್ನು ಪಡೆ. ಯಾಗಗಳಲ್ಲಿ ಅಶ್ವಮೇಧವೂ, ತೇಜಸ್ವಿಗಳಲ್ಲಿ ಸೂರ್ಯನೂ ಶ್ರೇಷ್ಠರಾಗಿರುವಂತೆ ದೇವತೆಗಳಲ್ಲಿ ಮಹಾಬಲನೆಂದು ಹೆಸರುಳ್ಳ ವಾಯುದೇವನ ವರಪ್ರಸಾದದಿಂದ ಒಬ್ಬ ಮಗನನ್ನು ಪಡೆ" ಎನ್ನಲು ಅವಳು ಶುಚಿರ್ಭೂತಳಾಗಿ ಪುನಃ ಒಂದು ಮಂತ್ರದಿಂದ ವಾಯುದೇವನನ್ನು ಆಮಂತ್ರಿಸಿ ಗರ್ಭವನ್ನು ಪಡೆದು ಒಂದಾನೊಂದು ಮಂಗಳವಾರ ತ್ರಯೋದಶೀ ತಿಥಿ, ಮಾಘಾ ನಕ್ಷತ್ರ ದಲ್ಲಿ ಪಿತೃದೇವತಾತ್ಮಕವಾದ ಮುಹೂರ್ತದಲ್ಲಿ ಸಿಂಹದಲ್ಲಿ ಗುರುವೂ ತುಲೆಯಲ್ಲಿ ಸೂರ್ಯನೂ ಸೇರಿದ್ದಾಗ ಪರಬಲ ಕಾಲಭೈರವನಾಗುವ ಭೀಮನನ್ನು ಹಡೆದಳು. ಅದೇ ದಿನ ರಾತ್ರಿ ಅತ್ತ ಹಸ್ತಿನಾವತಿಯಲ್ಲಿ ಕೌರವರೂ ಹುಟ್ಟಿದರು. ಕೆಲವು ಸಮಯ ಕಳೆದ ಮೇಲೆ ಕುಂತಿಯು ಇನ್ನೊಬ್ಬ ವೀರ್ಯವಂತ ಪುತ್ರನನ್ನಪೇಕ್ಷಿಸಿ

ಇಂದ್ರನಿಂದ ಅರ್ಜುನನನ್ನು ಪಡೆದಳು. ತಾನು ತಿಳಿದಿದ್ದ ಐದು ಮಂತ್ರಗಳಲ್ಲಿ ಇನ್ನುಳಿದ ಒಂದು ಮಂತ್ರವನ್ನು....

ರಮೆ:– ಐದರಲ್ಲಿ ಮೂರು ಹೋದರೆ ಎರಡು ಎಂದು ನಮ್ಮ ಉಪಾಧ್ಯಾಯರು ಹೇಳಿಕೊಟ್ಟ ನೆನಪು ನನಗೆ.

ಮುರಳಿ:– ನೋಡಿದೆಯಾ, ಮರೆತೇ ಹೋಗಿತ್ತು! ಕುಂತಿಯು ಇನ್ನೂ ಕನ್ಯೆಯಾಗಿರುವಾಗಲೇ ಸೂರ್ಯ ಮಂತ್ರವನ್ನು ಉಚ್ಚರಿಸಿ ಆದಿತ್ಯನಿಂದ ಒಂದು ಶಿಶುವನ್ನು ಪಡೆದಿದ್ದಳು. ಆದರೆ ಲಜ್ಜೆ ಮತ್ತು ಭಯಗಳಿಂದ ಅವಳು ಅದನ್ನು ಗಂಗಾನದಿಯಲ್ಲಿ ತೇಲಿಬಿಟ್ಟಳು.

ರಮೆ:– ಶಿವಶಿವಾ.......

ಮುರಳಿ:– ಶಿವಶಿವಾ ಏನು? ಅಭಿಮಾನ ಧನರಿಗೆ ಮಾನಕ್ಕಿಂತ ದೊಡ್ಡದು ಯಾವದೂ ಇಲ್ಲ.

ರಮೆ:– ಮಾನವನ್ನು ಕಳೆದುಕೊಳ್ಳುವ ಕೆಲಸ ಮಾಡಿ ಆಮೇಲೆ ಅದನ್ನು ಉಳಿಸಿಕೊಳ್ಳಲು ಪ್ರಯತ್ನಿಸುವದೂ ಗೌರವಾನ್ವಿತ ಕೆಲಸವೊ?

ಮುರಳಿ:– ಮಾನ ಕಳೆದುಕೊಳ್ಳುವ ಕೆಲಸವಲ್ಲ ರಮಾ. ಕೇವಲ ಹುಡುಗಾಟ. ಮಗುವಿಗೆ ಮಗುವಾಗುವದು, ಆಗುವ ತನಕ ಕುತೂಹಲದ ವಿಷಯವಾಯಿತು. ಆದ ಮೇಲೆ ಭೀತಿಯ ವಿಷಯವಾಯಿತು.

ರಮೆ:– ಹುಡುಗಾಟ! ಧರ್ಮರಾಯ, ಭೀಮ, ಮೊದಲಾದವರನ್ನು ಪರಪುರುಷರಿಂದ ಪಡೆದುದೂ ಹುಡುಗಾಟವೇನೋ?........ಅಸಹ್ಯ.

ಮುರಳಿ:– ಸಹ್ಯವಾಗುವದಿಲ್ಲ ಎಂಬದು ಆ ವಿಷಯದ ಗುಣವಲ್ಲ, ನೋಡುವವರ ದೃಷ್ಟಿಯ ಗುಣ. ಕಟುಕನಿಗೆ ರಕ್ತಮಾಂಸಗಳ ದೃಶ್ಯ ಕೇವಲ ಸಹಜ. ನಿನಗದು ಅಸಹನೀಯ. ಕಾಮದ ಪ್ರೇರಣೆಯಿಂದ ಮಾತ್ರವೇ ಸ್ತ್ರೀ ಪುರುಷ ಸಂಪರ್ಕವಾಗುವ ನಮಗೆ ರೂಢಿಯಿಂದ ಹೊರತಾದ ಸಂಪರ್ಕ ಅಸಹ್ಯ ಎನಿಸುತ್ತದೆ. ಜೀವನದಲ್ಲಿ ನಾವು ಮೀರಲಾರದ ಒಂದು ಗುರಿಯಾದ ಪುತ್ರೋತ್ಪತ್ತಿಗೆ ಸ್ತ್ರೀ ಪುರುಷ ಸಂಪರ್ಕ ಒಂದು ಅನಿವಾರ್ಯ ಸಾಧನ ಎಂದು ಭಾವಿಸುವವರಿಗೆ ಆ ಸಂಪರ್ಕ ಕೇವಲ ಗೌಣವಾದ ವಿಷಯವಾಗುತ್ತದೆ. ಪತಿಯಿಂದ ಸಂತಾನ ಪ್ರಾಪ್ತಿ ಸಾಧ್ಯವಿಲ್ಲದಾದಾಗ ಆತನ ಅಪ್ಪಣೆ ಪಡೆದು ಆಯ್ದ ಪರಪುರುಷನಿಂದ ಸಂತತಿ ಪಡೆಯುವದು ಶಾಸ್ತ್ರ ಸಮ್ಮತವಾದುದೆಂಬದು ನಿನಗೆ ಗೊತ್ತಿರಲಿಕ್ಕಿಲ್ಲ.

ರಮೆ:– ಆಯಿತು! ಕುಂತಿ ಹುಡುಗಾಟದಿಂದ ಕರ್ಣನನ್ನು ಹೆತ್ತಳು, ಹಿರಿಯಾಟದಿಂದ ಯುಧಿಷ್ಠಿರಾದಿಗಳನ್ನೂ ಹೆತ್ತಳು. ಆಮೇಲೆ?

ಮುರಳಿ:- ಗಂಗಾನದಿಯಲ್ಲಿ ತೇಲಿಬಿಟ್ಟ ಮಗುವನ್ನು ಒಂದು ಬೆಸ್ತರ ಕುಟುಂಬ ಪಡೆದು ಸಾಕಿತು. ಆ ಮಗು ಕರ್ಣ ಎಂಬ ಹೆಸರಿನಿಂದ ಬೆಳೆಯುತ್ತಿತ್ತು. ಈ ಕಡೆ ಕುಂತಿಯು ತನಗೆ ತಿಳಿದಿದ್ದ ಇನ್ನೊಂದು ಮಂತ್ರವನ್ನು ತನ್ನ ಸವತಿಯಾದ ಮಾದ್ರಿಗೆ ಉಪದೇಶಿಸಲು ಅವಳು ಅಶ್ವಿನೀ ದೇವತೆಗಳಿಂದ ನಕುಲ, ಸಹದೇವರೆಂಬ ಅವಳಿ ಮಕ್ಕಳನ್ನು ಪಡೆದಳು.

ಈ ಮಧ್ಯೆ, ಅಂದರೆ ಅರ್ಜುನನು ಹುಟ್ಟುವದಕ್ಕೆ ಮೂರು ತಿಂಗಳ ಮುಂಚೆ, ಮಥುರೆಯಲ್ಲಿ ಕೃಷ್ಣನು ಹುಟ್ಟಿ ಬೆಳೆಯುತ್ತಿದ್ದನು.

ಒಮ್ಮೆ ಪಾಂಡುವು ವನದಲ್ಲಿದ್ದ ಹೆಬ್ಬುಲಿಯೊಂದನ್ನು ಕೊಂದನು. ಅ ರಭಸಕ್ಕೆ ಭೀಮನನ್ನೆತ್ತಿಕೊಂಡಿದ್ದ ಕುಂತಿಯು ತುಂಬ ಬೆಚ್ಚಿದಳು. ಅವಳ ತೊಡೆಯ ಮೇಲಿದ್ದ ಶಿಶು ಭೀಮನು ಕೆಳಗಿದ್ದ ಒಂದು ಕಲ್ಲಿನ ಮೇಲೆ ಬೀಳಲು ಆ ಕಲ್ಲು ಒಡೆದು ಚೂರಾಯಿತು.

ರಮೆ:- ಆಹಾ ಹಾ ಹಾ, ಭೀಮಸೇನ ದೇವರೇ....!

ಮುರಳಿ:- ನಿನ್ನ ಈ ಉದ್ಗಾರದ ಅರ್ಥವೇನು ?

ರಮೆ:- ಏನಿಲ್ಲ. ಸಾಕ್ಷಾತ್ ವಾಯುದೇವರ ಪುತ್ರನಾದ ಭೀಮಸೇನ ದೇವರ ಬಾಲಲೀಲೆಯನ್ನು ಕೇಳಿ ಭಕ್ತಿ ಉಕ್ಕಿ ಬಂತು....ಇದನ್ನೆಲ್ಲ ಸೇರಿಸಿ ಯಾಕೆ ಅಷ್ಟು ಒಳ್ಳೆ ಪುರಾಣ ಕತೆಗಳನ್ನು ಅಡುಗೂಲಜ್ಜಿ ಕತೆಗಳನ್ನಾಗಿ ಮಾಡಿದರೋ ಕಾಣೆ....ಕಲ್ಲಿಗೂ ಮಣ್ಣಿನ ಹೆಂಟೆಗೂ ವ್ಯತ್ಯಾಸ ತಿಳಿಯದಿದ್ದವರು ಅದು ಹೇಗೆ ಇಷ್ಟೆಲ್ಲ ದೊಡ್ಡ ಕತೆಗಳನ್ನು ಬರೆದರು ಅಂತ ?

ಮುರಳಿ:- ಏಳಮ್ಮ. ಕತ್ತಲಾಗುತ್ತ ಬಂತು. ಅನ್ನಕ್ಕಿಡುವದಿಲ್ಲವೇನು? ಏಳು.

ರಮೆ:- ಅದೇ, ಅದೇ. ಪುರಾಣ ಕಲಿತವರ ಪುರಾಣವೇ ಹೀಗೆ. ಭೀಮಸೇನನನ್ನು ದೇವರು ಎಂದರೆ ಇವರು ಸ್ವರ್ಗಕ್ಕೇರುತ್ತಾರೆ. ವೇದವ್ಯಾಸರು ಅಡುಗೂಲಜ್ಜಿ ಕತೆ ಬರೆದವರು ಎಂದರೆ ಇವರು ಪಾತಾಳಕ್ಕಿಳಿಯುತ್ತಾರೆ.

ಮುರಳಿ:- ಛೀ ಛೆ. ಅದಕ್ಕಲ್ಲ. ಜ್ಞಾನಿಗಳ ಮುಂದೆ ಎಷ್ಟು ಬೇಕೋ ಅಷ್ಟು ಮಾತ್ರ ಮಾತನಾಡಬೇಕೆಂಬ ನಿಯಮವನ್ನೂ ಪುರಾಣ ಓದಿ ತಿಳಿದುಕೊಂಡಿದ್ದೇನೆ.

ರಮೆ:- ಅದಕ್ಕೆ ?

ಮುರಳಿ:- ಅದಕ್ಕೇ ಮಾತು ಕಡಿಮೆ ಮಾಡೋಣ ಎಂದು ತೀರ್ಮಾನಿಸಿದೆ.

ರಮೆ:– ಸಾಕು, ಸಾಕು. ವ್ಯಂಗ್ಯವಾಗಿ ಏನೂ ಹಳಿಯಬೇಡಿ. ನಾನೇನೂ ನನ್ನನ್ನು ಜ್ಞಾನಿ ಎಂಹು ಹೇಳಿಕೊಂಡಿಲ್ಲ.

ಮುರಳಿ:– ಛೆ, ಜ್ಞಾನಿಗಳು ಯಾರೂ ತಮ್ಮನ್ನು ತಾವು ಜ್ಞಾನಿಗಳು ಎಂದು ಹೇಳಿಕೊಳ್ಳವದೇ ಇಲ್ಲ.

ರಮೆ:– ಅದೇ, ನೀವು ಹೇಳಿದುದನ್ನೆಲ್ಲ ಗೊಂಬೆಯಂತೆ ಕೇಳಿದರೆ ನಾನು ಒಳ್ಳೆಯವಳು. ಇಲ್ಲದಿದ್ದರೆ ಕೆಟ್ಟವಳು. ಆಗಲಿ ಹೇಳಿ. ಇನ್ನು ಮುಂದೆ ಏನಾದರೂ ಒಂದು ಮಾತನಾಡಿದರೆ ಕೇಳಿ.

ಮುರಳಿ:– ಆಗಲಿ, ಆಗಲಿ. ಇನ್ನು ಮುಂದೆ ಎಂದಿಗೇ ಆದರೂ ನಾನು ಕತೆ ಹೇಳಿದರೆ ಕೇಳು.

ರಮೆ:– ಅಯ್ಯೋ, ಒಪ್ಪಿಕೊಂಡೆನಲ್ಲ. ಮಹಾಭಾರತ ಕತೆಯನ್ನು ಕೇಳು ವಾಗ ಒಂದು ಕಿವಿಯಲ್ಲಿ ಹೊಕ್ಕ ವಿಷಯ ಇನ್ನೊಂದು ಕಿವಿಗಾಗಿ ದಾಟಬೇಕೇ ಹೊರತು, ಅಪ್ಪಿತಪ್ಪಿಯಾದರೂ ಅದು ಮೆದುಳಿಗೆ ತಗಲಬಾರದು ಎಂಬದನ್ನು ತಿಳಿದುಕೊಂಡೆ. ಹೇಳಿ.

ಮುರಳಿ:– ಹಾಗಾದರೆ ಕೇಳು. ಮಗುವಾಗಿದ್ದ ಭೀಮನು ಬಿದ್ದಾಗ ಕಲ್ಲು ಬಂಡೆ ಯೆಂದು ವ್ಯಾಸರು ತಲೆ ಕೆಟ್ಟು ತಿಳಿದುಕೊಂಡಿದ್ದ ಒಂದು ಮಣ್ಣಿನ ಗುಡ್ಡೆ ಒಡೆದುಹೋಯಿತು.

ರಮೆ:– ಅದೇನೂ ಬೇಡ. ಕಗ್ಗಲ್ಲಿನ ದೊಡ್ಡ ಬೆಟ್ಟವೇ ಒಡೆಯಿತು ಎಂದು ಹೇಳಿ. ನನ್ನ ಗಂಟು ಹೋಗುತ್ತದೇನು ?

ಮುರಳಿ:– ಬೇಡ. ಹಸಿ ಮಣ್ಣಿನ ಒಂದು ಮುದ್ದೆಯೇ ಒಡೆಯಿತೆಂದು ತಿಳಿದುಕೊ. ನನ್ನ ಮೂಟೆ ಒಡೆಯುತ್ತದೇನು ?

ರಮೆ:– ಇದೆಂತಹ ಹಾಳು ವಾದ ! ಅಲ್ಲ, ನೀವೇ ಹೇಳಿ. ಮಗುವೊಂದು ಬಿದ್ದುದರಿಂದ ಕಲ್ಲು ಒಡೆಯುವದು ಎಲ್ಲಾದರೂ ಸಾಧ್ಯವೇ, ಹೇಳಿ.

ಮುರಳಿ:– ಎಲ್ಲ ಕಡೆ ಸಾಧ್ಯವಿಲ್ಲ. ಎಲ್ಲಾದರೂ ಸಾಧ್ಯವಾಗುವದು ಅಸಂಭವವಲ್ಲ.

ರಮೆ:– ಅಯ್ಯೋ ಆಗಲಪ್ಪ. ಹಾಳಾಗಿ ಹೋಗಲಿ. ಮುಂದಕ್ಕೆ ಹೇಳಬಾರದೆ ?

ಮುರಳಿ:– ರಮಾ, ನಿನ್ನ ವಯಸ್ಸು, ಬುದ್ಧಿ–ಎರಡೂ ಇನ್ನೂ ಕಸುಗಾಯಿ ಯಂತೆ. ಮುಂದಕ್ಕೆ ಪಕ್ವವಾಗಿ ಉತ್ತಮ ಫಲವಾಗುವ ಲಕ್ಷಣವಿದೆಯೇ ಹೊರತು ಸದ್ಯಕ್ಕೆ ಇದನ್ನು ಹಣ್ಣು ಎಂದು ತಿನ್ನಲು ಬರುವದಿಲ್ಲ.

ರಮೆ:– ಓಹೋಹೊ. ನೀವು ದೊಡ್ಡ ಅಜ್ಜನಾಗಿಬಿಟ್ಟಿದ್ದೀರಿ. ಅದೇ. ಇದ್ದುದನ್ನು ಇದ್ದಂತೆ ಪೆದ್ದು ಪೆದ್ದಾಗಿ ಕೇಳುತ್ತಾ ಕುಳಿತರೆ ಅದು ಪಕ್ವ ಬುದ್ಧಿ. ಅದನ್ನು ತಾರ್ಕಿಕವಾಗಿ ವಿಮರ್ಶಿಸಿಬಿಟ್ಟರೆ ಕಸುಗಾಯಿ ಬುದ್ಧಿ.

ಮುರಳಿ:– ನೀನು ತಾರ್ಕಿಕವಾಗಿ ವಿಮರ್ಶಿಸಲಿಲ್ಲವೆಂಬದೇ ನನ್ನ ಆಪಾದನೆ.

ರಮೆ:– ನಾನೇಕೆ ? ನೀವೇ ವಿಮರ್ಶಿಸಲಿಲ್ಲ ಎನ್ನಿ. ವ್ಯಾಸರು ಹೇಳಿದರು, ನೀವು ನಂಬಿದಿರಿ.

ಮುರಳಿ:– ತರ್ಕಕ್ಕಾಗಿ ತರ್ಕ ಮಾಡುವವರು ವಾದದ ಒಂದೇ ಮುಖವನ್ನು ಪಟ್ಟು ಹಿಡಿದು ಅವಲಂಬಿಸುತ್ತಾರೆ ರಮಾ. ಆದರೆ ಸತ್ಯಾನ್ವೇಷಣೆಗಾಗಿ ತರ್ಕ ಮಾಡುವವರು ಇತ್ತಂಡವನ್ನೂ ತೂಗಿ ನೋಡಿ ತೀರ್ಮಾನಕ್ಕೆ ಬರುತ್ತಾರೆ. ನಿನ್ನ ತರ್ಕಕ್ಕೂ ನನ್ನ ತರ್ಕಕ್ಕೂ ಇದೇ ವ್ಯತ್ಯಾಸ.

ರಮೆ:–ನಾನೇನು ಒಂದೇ ಕಡೆ ಪಟ್ಟು ಹಿಡಿದಿರುವದು, ನೀವೇನು ಇತ್ತಂಡವನ್ನು ಪರಿಶೀಲಿಸಿರುವುದು ?

ಮುರಳಿ:– ನಿನ್ನ ತರ್ಕ ಹೀಗೆ. ಮಗುವು ಮೃದುವಾದ ಶರೀರವುಳ್ಳದ್ದು. ಅದು ಕಠಿಣವಾದ ಕಲ್ಲಿನ ಮೇಲೆ ಬಿದ್ದರೆ ಅದರ ಮೈ ಕೈ ಮುರಿಯುತ್ತದೆ. ಇದು ಸಾಮಾನ್ಯವಾಗಿ ಸರ್ವಕಾಲಿಕವಾದ ಅನುಭವ. ಹಾಗಿರುವಾಗ ಭೀಮನು ಬಿದ್ದು ಬಂಡೆಯೇ ಒಡೆಯಿತೆಂಬದು ಹಾಸ್ಯಾಸ್ಪದ. ಇಷ್ಟು ತಾನೇ ನಿನ್ನ ತರ್ಕ ?

ರಮೆ :– ಹೌದು. ನಿಮ್ಮ ವಿಮರ್ಶೆ ಹೇಗೋ !

ಮುರಳಿ:– ನಿನ್ನ ಅಭಿಪ್ರಾಯ, ವಾದದ ಒಂದು ಮುಖ. ಮಗುವಾಗಿದ್ದ ಭೀಮನು ಬಿದ್ದು ಬಂಡೆ ಒಡೆಯಿತು ಎಂಬದು ಇನ್ನೊಂದು ಮುಖ. ಒಂದಕ್ಕೊಂದು ವಿರೋಧವಾದ ಅಂಶಗಳು. ಕೇಳಿದ ತಕ್ಷಣ ತಿರಸ್ಕರಿಸಬೇಕಾದ ಅಂಶ ಮಹಾ ಭಾರತದ ನಿರೂಪಣೆ. ಆದರೆ ಅದರ ಕರ್ತೃ ಮಹಾಜ್ಞಾನಿಯಾದ ವೇದ ವ್ಯಾಸರಾಗಿರುವದರಿಂದ ಅದನ್ನು ಅಷ್ಟು ಲಘುವಾಗಿ ತಿರಸ್ಕರಿಸುವದು ಸಾಧುವೇ ಎಂಬದು ಗಮನಿಸಬೇಕಾದ ಅಂಶ. ಪುರಸ್ಕರಿಸಬಹುದಾದರೆ ಹೇಗೆ ಎಂಬದು ಸತ್ಯಾನ್ವೇಷಣೆಯ ತರ್ಕಕ್ಕೆ ತಳಹದಿ. ಪ್ರಪಂಚದ ಯಾವದೇ ಘಟನೆಯನ್ನಾದರೂ ನಮ್ಮ ಪ್ರತ್ಯಕ್ಷಾನುಭವದ ಅಳತೆಗೋಲಿನಿಂದ ಮಾತ್ರ ಅಳೆಯುವದು ಸಾಧುವಾದುದೇ ಎಂಬದು ವಾದದ ಬೆಳವಣಿಗೆ. ಅದು ಸಾಧುವಲ್ಲ ಎಂಬದಕ್ಕೆ ಪುನಃ ನಮ್ಮ ಅನುಭವಗಳೇ ಸಾಕ್ಷಿ.

ರಮೆ:– ಯಾಕೆ ಸಾಧುವಲ್ಲ ?

ಮುರಳಿ:– ಅಕ್ಕಿ ನನ್ನ ನಿನ್ನ ಆಹಾರ. ಆದರೆ ಕೆಲವರಿಗೆ ಅದು ರೋಗದಾಯಕ. ನೀನು 8–10 ಅಡಿ ಎತ್ತರದ ಮಹಡಿಯಿಂದ ಬಿದ್ದು ಏನೂ ಆಗ

ದಿರಬಹುದು. ಇನ್ನೊಬ್ಬನು ಸಣ್ಣ ಕಲ್ಲೊಂದನ್ನು ಎಡವಿ ಬಿದ್ದು ಸಾಯಬಹುದು. ನಿನ್ನ ಮಗುವಿಗೆ ಸ್ವಲ್ಪ ಶೀತ ಗಾಳಿ ಸೋಂಕಿದರೂ ಜ್ವರ ಬರಬಹುದು. ಇನ್ನೊಂದು ಮಗು ತಲೆಯ ಮೇಲೆ ಛಾವಣಿ, ಮೈಮೇಲೆ ಹೊದಿಕೆ ಇಲ್ಲದೆಯೇ ಬೆಳೆದರೂ ಆರೋಗ್ಯವಾಗಿರಬಹುದು. ನೀನು ಇಲಿಯನ್ನು ಕಂಡರೆ ಕೋಣೆ ಬಿಟ್ಟು ಓಡುತ್ತೀ. ಕೆಲವರು ಹುಲಿಯೊಂದಿಗೆ ಸೆಣಸಾಡಿರಬಹುದು. ಹೀಗೆ.

ರಮೆ:– ಸರಿ, ಮತ್ತೆ ?

ಮುರಳಿ:– ಹೀಗೆ ನಮ್ಮ ಅನುಭವದ ಆಧಾರದ ಮೇಲೆಯೇ ಎಲ್ಲವನ್ನೂ ವಿಮರ್ಶಿಸುವದು ಸರಿಯಲ್ಲ ಎಂದ ಮೇಲೆ ನಮ್ಮ ಅನುಭವಕ್ಕೆ ನಿಲುಕದ ಘಟನೆ ಹೇಗೆ ನಡೆದಿರಲು ಸಾಧ್ಯ ಎಂಬದನ್ನು ನಮ್ಮ ಇತರ ಅನುಭವಗಳ ಆಧಾರದ ಬಲದಿಂದ ಊಹಿಸುವದು ಅನಂತರದ ಕ್ರಮ.

ರಮೆ:– ನನಗೆ ಇದೆಲ್ಲ ಕಗ್ಗಂಟಾಗಿ ಕಾಣಿಸುತ್ತದಪ್ಪ. ಭೀಮ ಬಿದ್ದು ಕಲ್ಲು ಹೇಗೆ ಒಡೆದಿರಬಹುದೆಂಬದನ್ನು ನೀವು ಕಂಡುಕೊಂಡಂತೆ ಹೇಳಿ, ಸಾಕು.

ಮುರಳಿ:– ಹಾಗೇನು ? ಇರಲಿ. ನೀನು ನಿನ್ನ ಸೀನು ಮಾವನ ವಿಷಯ ಬಹಳ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದೆ. ಅಲ್ಲವೆ ?

ರಮೆ:– ಹೌದು.

ಮುರಳಿ:– ಏಕಾಗಿ ?

ರಮೆ:– ಏಕಾಗಿ ಎಂದರೆ ಅವರು ಇತರರಿಗೆ ಸಾಧ್ಯವಾಗದ ಶೌರ್ಯವನ್ನು ತೋರಿಸುತ್ತಿದ್ದರು ಎಂದು.

ಮುರಳಿ:– ಏನು ಶೌರ್ಯ ?

ರಮೆ:– ಅದೇ, ಹೇಳುತ್ತಿದ್ದೆನಲ್ಲ; ಅವರು ತೆಂಗಿನಕಾಯಿಯನ್ನು ಗಟ್ಟಿ ನೆಲದ ಮೇಲಿಟ್ಟು ಮುಷ್ಟಿಯಿಂದ ಹೊಡೆದು ಒಡೆಯುತ್ತಿದ್ದರು. ತಲೆಗೆ ಹೊಡೆದುಕೊಂಡು ಒಮ್ಮೆಗೇ ನೂರಾರು ತೆಂಗಿನಕಾಯಿಗಳನ್ನು ಒಡೆಯುತ್ತಿದ್ದರು.

ಮುರಳಿ:– ನನಗೆ, ನಿನಗೆ ಇದು ಸಾಧ್ಯವೆ ?

ರಮೆ:– ನೀವು ಮೊನ್ನೆ ಒಡೆದಿರಲ್ಲ ! ಕತ್ತಿಯಿಂದ ಅದೆಷ್ಟು ಪೆಟ್ಟು ಕೊಟ್ಟಿರಿ ಹೇಳಿ !

ಮುರಳಿ:– ಅದೇನು ಸೀನು ಮಾವನಿಗೆ ಮಾತ್ರ ಇದು ಸಾಧ್ಯವಾಗುತ್ತಿದ್ದುದು ?

ರವೆ:– ಏನೋ ಅವರದೊಂದು ಹೆಚ್ಚುಗಾರಿಕೆ.

ಮುರಳಿ:– ಇರಲಿ. ಈಚೆಗೆ ನಾವು ಒಂದು ಸರ್ಕಸ್ಸಿಗೆ ಹೋಗಿದ್ದುದು ನಿನಗೆ ನೆನಪಿದೆಯಾ ?

ರವೆ:– ಇದೆ.

ಮುರಳಿ:– ಅಲ್ಲಿ ಏನೇನು ನೋಡಿದೆ ?

ರವೆ:– ತುಂಬ ವಿಷಯ ನೋಡಿದೆ.

ಮುರಳಿ:– ಒಬ್ಬ ಗಂಡಸು ತನ್ನ ಎದೆಯ ಮೇಲೆ ಒಂದು ಆನೆಯನ್ನು ನಿಲ್ಲಿಸಿಕೊಂಡುದನ್ನು ನೋಡಿದ ನೆನಪಿದೆಯೋ ಇಲ್ಲವೊ ?

ರವೆ:– ಇದೆ.

ಮುರಳಿ:– ಆನೆಯ ತೂಕ, ಮನುಷ್ಯನ ಶಕ್ತಿ ಇವುಗಳನ್ನು ಕಲ್ಪಿಸಿ ಕೊಳ್ಳಬಲ್ಲೆಯಷ್ಟೆ ?

ರವೆ:– ಹ್ಞೂಂ.

ಮುರಳಿ:– ನಾನು, ನೀನು ಅದನ್ನು ಮಾಡಲು ಸಾಧ್ಯವೆ ?

ರವೆ:– ಸಾಧ್ಯವಾಗಿದ್ದಿದ್ದರೆ ದುಡ್ಡು ಕೊಟ್ಟು ಅದನ್ನು ನೋಡಲು ಏಕೆ ಹೋಗುತ್ತಿದ್ದೆವು ?

ಮುರಳಿ:– ಹಾಗಿದ್ದರೆ ಸರ್ಕಸ್ಸಿನವನಿಗೆ ಅದು ಹೇಗೆ ಸಾಧ್ಯವಾಯಿತು ?

ರವೆ:– ಅಭ್ಯಾಸ.

ಮುರಳಿ:– ಅಭ್ಯಾಸ ಒಂದೇ ಅಲ್ಲ. ಗರಡಿ ವಿದ್ಯೆ ಕಲಿಯುವವರೆಲ್ಲರೂ ಜಗಜಟ್ಟಿಗಳಾಗುವದಿಲ್ಲ. ಯಾವ ಅಭ್ಯಾಸವಾದರೂ ಇಷ್ಟೇ.

ರವೆ:– ಭೀಮ ತಾನು ಬಿದ್ದು ಬಂಡೆಯನ್ನೊಡೆಯುವದಕ್ಕೆ ಆ ವೇಳೆಗೇ ಅಭ್ಯಾಸ ಮಾಡಿಕೊಂಡಿದ್ದನೊ ?

ಮುರಳಿ:– ಅದೇ ನಾನಂದದ್ದು. ಕೇವಲ ಅಭ್ಯಾಸ ಒಂದೇ ಒಬ್ಬಾತನನ್ನು ಒಂದು ವಿಷಯದಲ್ಲಿ ಇತರರಿಗಿಂತ ಹೆಚ್ಚು ವಿಶಿಷ್ಟನನ್ನಾಗಿ ಮಾಡುವದಿಲ್ಲ ಎಂದು. ಅಭ್ಯಾಸವು ಗಾಳಿ ಬೀಸುವಂತೆ. ಬೆಂಕಿ ಮೊದಲೇ ಅಲ್ಲಿದ್ದರೆ ಮಾತ್ರ ಗಾಳಿ ಬೀಸು ವದರಿಂದ ಅದು ಹೆಚ್ಚು ಜೋರಾಗಿ ಹೊತ್ತಿಕೊಳ್ಳುತ್ತದೆಯೇ ಹೊರತು, ಗಾಳಿಯು ಬೆಂಕಿಯನ್ನು ಸ್ವತಃ ನಿರ್ಮಿಸಲಾರದು. ಅಭ್ಯಾಸದ ಬಲವಿಲ್ಲದೆ ಕೂಡ ಕೆಲವರು ಕೆಲವು ವಿಷಯಗಳಲ್ಲಿ ವಿಶೇಷವಾದ ಹೆಚ್ಚುಗಾರಿಕೆ ಪಡೆದಿರುವದನ್ನು ನಾವು ಕಾಣುತ್ತೇವೆ.

ರಮೆ:– ಸರಿ, ಸರಿ. ದ್ವಾಪರ ಯುಗದಲ್ಲಿ ಮಕ್ಕಳು ಬಿದ್ದು ಕಲ್ಲು ಒಡೆಯುತ್ತಿತ್ತು. ಮುಂದೆ ಹೇಳಿ.

ಮುರಳಿ:– ಇಲ್ಲ, ಇಲ್ಲ. ಭೀಮ ಬಿದ್ದಾಗ ಕಲ್ಲು ಒಡೆಯಿತು.

ರಮೆ:– ಏನು ವ್ಯತ್ಯಾಸ?

ಮುರಳಿ:– ನೀನು ಆ ಚಿತ್ರವನ್ನು ಏಕೆ ಅಲ್ಲಿ ತೂಗಿದ್ದೀ?

ರಮೆ:– ಏಕೆ ಅಂದರೆ? ಮಹಾತ್ಮಾ ಗಾಂಧಿಯವರ ಚಿತ್ರವನ್ನು ಇಟ್ಟುಕೊಳ್ಳುವದು ತಪ್ಪೇನು?

ಮುರಳಿ:– ತಪ್ಪಲ್ಲ. ಯಾಕೆ ತೂಗಿದ್ದೀ ಹೇಳು.

ರಮೆ:– ಅವರು ದೇಶಕ್ಕೋಸ್ಕರ ಬಹಳ ದುಡಿದು ಸ್ವಾತಂತ್ರ್ಯ ತಂದವರು ಎಂಬದಕ್ಕಾಗಿ.

ಮುರಳಿ:– ಪಕ್ಕದ ಮನೆ ನರಸಯ್ಯನ ಚಿತ್ರ ಏಕೆ ಇಟ್ಟುಕೊಂಡಿಲ್ಲ?

ರಮೆ:– ಇದೇನು ಮಾತು ನಿಮ್ಮದು? ನನಗೇನು ಹುಚ್ಚು, ಯಾವ್ಯಾವನ ಚಿತ್ರವನ್ನೋ ಇಟ್ಟುಕೊಳ್ಳಲಿಕ್ಕೆ?

ಮುರಳಿ:– ಅಂದರೆ, ಭಾರತದ ಈ ಐವತ್ತು ಕೋಟಿಗೂ ಮೀರಿದ ವ್ಯಕ್ತಿಗಳ ಪೈಕಿ ಉಲ್ಲೇಖನೀಯವಾದ ವ್ಯಕ್ತಿತ್ವ ಗಾಂಧಿಯವರದು. ಅವರು ಇತರ ಎಲ್ಲರಿಗಿಂತ ಏನೋ ಒಂದು ವಿಧದ ಹೆಚ್ಚುಗಾರಿಕೆ ಪಡೆದಿದ್ದರು. ಹಾಗಾಗಿ ಅವರ ಚಿತ್ರಗಳನ್ನು ಇಡುತ್ತೇವೆ, ಅವರ ಚರಿತ್ರೆಯನ್ನು ಬರೆಯುತ್ತೇವೆ. ಅಲ್ಲವೆ?

ರಮೆ:– ಹೌದು.

ಮುರಳಿ:– ಹಾಗೆಯೇ ದ್ವಾಪರ ಯುಗದಲ್ಲಿ ಆಗಿಹೋದ ಕೋಟ್ಯಂತರ ವ್ಯಕ್ತಿಗಳ ಪೈಕಿ, ಲಕ್ಷಾಂತರ ರಾಜರುಗಳ ಪೈಕಿ ಪಾಂಡವರು ಅದೇನೋ ಒಂದು ಹೆಚ್ಚುಗಾರಿಕೆ ಪಡೆದಿದ್ದರು. ಆ ಪೈಕಿಯೂ ಭೀಮನು ಇನ್ನೂ ಹೆಚ್ಚುಗಾರಿಕೆ ಪಡೆದಿದ್ದ. ಆದುದರಿಂದಲೇ ಅವರ ಚರಿತ್ರೆಯನ್ನು ಬರೆದಿಟ್ಟರು. ಸಾಮಾನ್ಯವಾಗಿ ಸಾಧ್ಯವಲ್ಲದ ವಿಷಯಗಳು ನಡೆದುದರಿಂದಲೇ ಅವುಗಳು ಉಲ್ಲೇಖನೀಯವಾದವು.

ರಮೆ:– ಸರಿಯಪ್ಪ ಹೇಳಿ. ಭೀಮನು ಬಿದ್ದು ಕಲ್ಲು ಒಡೆದರೆ ನನಗೇನೂ ನಷ್ಟವಿಲ್ಲ. ಒಡೆಯದಿದ್ದರೆ ಲಾಭವಿಲ್ಲ. ಮತ್ತೇಕೆ ಈ ಚರ್ಚೆ?

ಮುರಳಿ:– ನನಗೆ ಲಾಭ ನಷ್ಟಗಳಿವೆ. ಆದುದರಿಂದ ಚರ್ಚೆ ಮಾಡುತ್ತಿದ್ದೇನೆ.

ರಮೆ:– ನಿಮಗೇನು ಲಾಭ. ನಷ್ಟ?

ಮುರಳಿ:– ನಿಮ್ಮಪ್ಪ ಕೀರ್ತಿವಂತನಾಗಿ ಬಾಳಿದ್ದರೆ ನಿನಗೇನು ಲಾಭ? ಅವರು ಕುಡುಕರೆಂಡು ಹೆಸರು ಪಡೆದು ದೈನ್ಯ ಜೀವನ ನಡೆಸಿದ್ದರೆ ನಿನಗೇನು ನಷ್ಟ? ಅಲ್ಲವೆ?

ರಮೆ:– ಚಿಂತೆಯಿಲ್ಲ ನೀವೂ?

ಮುರಳಿ:– ಹಾಗೆಯೇ ನಮ್ಮ ಪೂರ್ವಜರ ಕುರಿತೂ. ಮಹಾಭಾರತವು ಕೇವಲ ಸುಳ್ಳಿನ ಕಂತೆಗಳನ್ನು ಒಳಗೊಂಡಿದೆ ಎಂದು ಹೇಳಿಬಿಡುವದು ಸುಲಭ. ಅದು ಪಾಂಡವರ ಜೀವನದ ಯಥಾವತ್ ಚಿತ್ರಣ ಎಂದು ಸಾಧಿಸುವದು ಕಷ್ಟ.

ರಮೆ:– ನಿಜ. ತುಂಬ ಕಷ್ಟ ಪಟ್ಟಿದ್ದೀರಿ. ನನಗೇ ಮರುಕವಾಗುತ್ತದೆ. ಹೋಗಲಿ ಬಿಡಿ. ಭೀಮ ಬಿದ್ದು ಕಲ್ಲು ಒಡೆಯಿತು. ಒಪ್ಪಿಕೊಂಡೆ. ಮುಂದಕ್ಕೆ ಹೇಳಿ.

ಮುರಳಿ:– ಹೀಗಾದರೆ ಭೀಮನ ಕತೆ ಮುಗಿಯುವದಿಲ್ಲ ನೋಡು.

ರಮೆ:– ನಾನೂ ಅದೇ ಹೇಳುವದು. ಈ ಚರ್ಚೆಯನ್ನೆಲ್ಲ ನಿಲ್ಲಿಸಿ ಸುಮ್ಮನೆ ಕತೆ ಹೇಳಬೇಕಪ್ಪಾ.

ಮುರಳಿ:– ಚರ್ಚೆ ಮಾಡುವವರು ಯಾರು?

ರಮೆ:– ನೀವೇ. ನಾನೇನು?

ಮುರಳಿ: ನಾನೇಕೆ? ನೀನು!

ರಮೆ:– ಹೌದು, ಹೌದು. ಒಂದನ್ನು ಹಿಡಿದುಬಿಟ್ಟರೆ ಅದನ್ನು ಎಳೆ ಎಳೆಯಾಗಿ ಕಿತ್ತು ಹರಡಿ ಚೆಲ್ಲಾಡಿ ರಗಳೆ ಮಾಡಿಕೊಂಡು ಕೂರುವವಳು ನಾನೇ!

ಮುರಳಿ:– ಬುದ್ಧಿವಂತರನ್ನು ಸುಲಭವಾಗಿ ಒಪ್ಪಿಸಬಹುದಂತೆ. ಶುದ್ಧ ಮೂರ್ಖರನ್ನೂ ಒಪ್ಪಿಸಬಹುದಂತೆ. ಈ ಅರ್ಧಮರ್ಧ ತಿಳಿದವರನ್ನು ಒಪ್ಪಿಸುವದು ಸಾಧ್ಯವೇ ಇಲ್ಲವಂತೆ.

ರಮೆ:– ಬುದ್ಧಿವಂತರ ಕೈ ಹಿಡಿದವಳು ಮೂರ್ಖಳೊ? ಅರ್ಧಮರ್ಧ ತಿಳಿದವಳ ಕೈ ಹಿಡಿದವರು ಬುದ್ಧಿವಂತರೊ?

ಮುರಳಿ:– ನೋಡು, ನೋಡು. ಬುದ್ಧಿವಂತರ ಸಂಪರ್ಕ ಪಡೆದರೆ ಕೊರಡೂ ಹೇಗೆ ಕೊನರುವದು ನೋಡಮ್ಮ!

ರಮೆ:– ನೀವು ಹುಡುಗಾಟ ಬಿಟ್ಟು ಕತೆ ಹೇಳುತ್ತೀರೋ ಇಲ್ಲವೋ ಹೇಳಿ.

ಮುರಳಿ:– ಒಂದು ಶರತ್ತು.

ರಮೆ:– ಏನು?

ಮುರಳಿ :– ವೈಶಂಪಾಯನ ಮಹರ್ಷಿಗಳು ಜನಮೇಜಯ ರಾಜನಿಗೆ ಮಹಾಭಾರತದ ಕತೆ ಹೇಳಿದಾಗ ಆ ರಾಜನು ಭಕ್ತಿ, ವಿನಯ, ಗೌರವಗಳಿಂದ ಕೇಳುತ್ತಿದ್ದನಂತೆ. ತಲೆಹರಟೆ ತೋರಿಸುತ್ತಿರಲಿಲ್ಲವಂತೆ.

ರಮೆ:– ಕತೆ ಹೇಳುತ್ತಿದ್ದ ವೈಶಂಪಾಯನ ಇಷ್ಟುದ್ದ ಗಡ್ಡ ಬಿಟ್ಟಿದ್ದನಂತೆ. ಜಡೆಗೆ ಮರದ ಅಂಟು ಹಾಕಿ ಸುತ್ತಿದ್ದನಂತೆ.

ಮುರಳಿ:– ಕತೆ ಕೇಳುತ್ತಿದ್ದ ಜನಮೇಜಯ ಸೀರೆ ಉಟ್ಟಿರಲಿಲ್ಲವಂತೆ.

ರಮೆ:– ನೀವು ಕತೆ ಮುಂದುವರಿಸುತ್ತೀರೋ ಇಲ್ಲವೋ ಹೇಳಿ.

ಮುರಳಿ:– ನೀನು ಕುಚೇಷ್ಟೆ ಬಿಟ್ಟು ಕೇಳುವದಾದರೆ ಮುಂದುವರಿಸುತ್ತೇನೆ.

ರಮೆ:– ಕುಚೇಷ್ಟೆ ಏನು ? ಮಗು ಬಿದ್ದು ಕಲ್ಲು ಒಡೆಯಿತು ಎನ್ನುವಾಗ ಅಂತಹ ಅದ್ಭುತವನ್ನು ಹೇಳಿದ ನಿಮಗೇ ಒಂದು ಉದ್ದದ ನಮಸ್ಕಾರ ಮಾಡಬೇಕೇನು ?

ಮುರಳಿ:– ನಮಸ್ಕಾರ ಬೇಡ. ನಿನ್ನ ಕಲ್ಪನೆ ದ್ವಾಪರಕ್ಕೆ ಹರಿಯಬೇಕು. ಕತೆ ಹೇಳುವವನು ನಾನಾದರೂ, ಅದನ್ನು ಬರೆದವರು ಸುಳ್ಳು ಕಂತೆ ಕಟ್ಟಿ ಏನನ್ನೋ ಬರೆದು ಏನನ್ನೋ ಗಳಿಸಬೇಕೆಂದು ಬಯಸಿದ ಸಾಮಾನ್ಯ ಲೇಖಕನಾಗಿರದೆ ಸತ್ಯಾನ್ವೇಷಕನಾದ, ಏಕೆ, ಸತ್ಯ ದರ್ಶನ ಮಾಡಿದ್ದ ತಪಸ್ವಿಯಾದ ವೇದವ್ಯಾಸರು ಎಂಬದನ್ನು ನೆನಸಿನಲ್ಲಿಟ್ಟುಕೊಳ್ಳಬೇಕು. ಕತೆಯಲ್ಲಿನ ಯಾವದೇ ವಿಷಯವನ್ನು ನಮ್ಮ ಸೀಮಿತ ಅನುಭವದ ಆಧಾರದಿಂದ ತುಲನೆ ಮಾಡದೆ ಆಳವಾಗಿ ವಿಮರ್ಶಿಸಿ ಆ ಗ್ರಂಥದ ಹಿರಿತನಕ್ಕೆ, ಅದನ್ನು ಬರೆದವರ ಶ್ರೇಷ್ಠತೆಗೆ, ಅದರಲ್ಲಿ ಬರುವ ವ್ಯಕ್ತಿಗಳ ದೊಡ್ಡತನಕ್ಕೆ ಅನುಗುಣವಾದ ತೀರ್ಮಾನಕ್ಕೆ ಬರುವ ವಿಶಾಲ ದೃಷ್ಟಿ ಬೇಕು. ನಿನ್ನ ಮನಸ್ಸನ್ನು ಈ ಹಿನ್ನೆಲೆಯಲ್ಲಿ ಅಣಿ ಮಾಡಿಕೊಂಡರೆ, ಕತೆ ಕೇಳಿದ ಲಾಭ ನಿನಗೆ ಪೂರ್ಣವಾಗಿ ದೊರಕುತ್ತದೆ; ಹೇಳುವವರ ಸೊಗಸು ನನಗೆ ಹೆಚ್ಚುತ್ತದೆ. ಇಲ್ಲವಾದರೆ, ರುಚಿಕರವಾದ ಊಟದ ಮಧ್ಯೆ ಆಗಾಗ ಕಲ್ಲು ಸಿಕ್ಕಿದಂತಾಗುತ್ತದೆ.

ರಮೆ:– ಆಗಲಪ್ಪ ಹೇಳಿ.

ಮುರಳಿ:– ಇದು ಶರತ್ತು.

ರಮೆ:– ಆಗಲಿ, ಶರತ್ತೇ.

ಮುರಳಿ:– ಇದಕ್ಕೆ ನೀನು ತಪ್ಪಿದರೆ ?

ರಮೆ:– ತಪ್ಪುವದಿಲ್ಲ.

ಮುರಳಿ:– ತಪ್ಪಿದರೆ ?

ರಮೆ:– ನೀವು ಕೇಳಿದುದನ್ನು ಕೊಡುತ್ತೇನೆ

ಮುರಳಿ:– ನೆನಪಿರಲಿ !........ನಗುವದೇನು ? ಶರತ್ತು, ಶರತ್ತೇ.

ರಮೆ:– ಆಗಲಿ ಹೇಳಿ.

ಮುರಳಿ:– ಕೇಳು. ಒಮ್ಮೆ ಪಾಂಡುರಾಜನು ವಿಧಿವಶನಾಗಿ ಬಲಾತ್ಕಾರದಿಂದ ಮಾದ್ರಿಯನ್ನು ಸೇರಿ ಋಷಿ ಶಾಪದಿಂದ ಸತ್ತುಬಿದ್ದನು.

ರಮೆ:– ಅಹಹಾ........

ಮುರಳಿ:– ನೀನು ಪ್ರಾರಂಭದಲ್ಲಿಯೇ ಅಹಹಾ, ಉಹುಹೂ ಎಂದರೆ ಪೂರ್ತಿ ಕತೆಯನ್ನು ಹೇಗೆ ಕೇಳುವೆ ? ಇಂತಹ ಪ್ರಸಂಗಗಳು ಅದೆಷ್ಟೋ ಬರುತ್ತವೆ. ಕೇಳು. ಗಂಡನ ಶವದೊಂದಿಗೆ ಮಾದ್ರಿಯು ಸಹಗಮನ ಮಾಡಿದಳು. ಕೆಲವು ಸಮಯಾನಂತರ ಅಲ್ಲಿದ್ದ ಋಷಿಗಳೆಲ್ಲರೂ ಸೇರಿ ಕುಂತಿಯನ್ನೂ ಐವರು ಮಕ್ಕಳನ್ನೂ ಕರೆತಂದು ಭೀಷ್ಮಾದಿಗಳಿಗೆ ಒಪ್ಪಿಸಿದರು. ಕೌರವರು ನೂರು ಮಂದಿ, ಪಾಂಡವರು ಐದು ಜನ ಮತ್ತು ಧೃತರಾಷ್ಟ್ರನಿಗೆ ವೈಶ್ಯ ಸ್ತ್ರೀಯಲ್ಲಿ ಹುಟ್ಟಿದ ಯುಯುತ್ಸು ಎಂಬವನು–ಹೀಗೆ ನೂರ ಆರು ಮಕ್ಕಳು ಜೊತೆಯಲ್ಲಿ ಬೆಳೆದರು ಬೆಳೆಯುವ ಪೈರು ಮೊಳಕೆಯಲ್ಲಿಯೇ ಕಾಣುತ್ತದೆ ಎಂಬಂತೆ ಈ ಪೈಕಿ ಭೀಮನು ಬಲಭೀಮನಾಗಿ ಬೆಳೆಯುತ್ತಿದ್ದನು. ತಾನೊಬ್ಬನೇ ನೂರ್ವರು ಕೌರವರನ್ನೂ, ಅದರಲ್ಲಿಯೂ ದುರ್ಯೋಧನನನ್ನು, ಬಡಿದುಬಿಡುತ್ತಿದ್ದನು. ಅವರು ಕೂಡ ಮನ್ನಣೆಯ ಮಾತುಗಳನ್ನಾಡಿ ಭೀಮನ ಮೈಮರೆಸಿ ಸಮಯ ನೋಡಿ ಅವನನ್ನು ಹಣಿಯುತ್ತಿದ್ದರು. ಭೀಮನು ಮುರಿದ ತಮ್ಮ ಹಲ್ಲುಗಳನ್ನೂ ಒಡೆದ ಮಂಡಿಯನ್ನೂ ಕೌರವರು ಭೀಷ್ಮ ಧೃತರಾಷ್ಟ್ರಾದಿಗಳಿಗೆ ತೋರಿಸುವದಕ್ಕೆ ಮುಂಚೆಯೇ ಅವನು ತನ್ನ ಮೈಯನ್ನು ಮುಳ್ಳುಗಳಿಂದ ತಾನೇ ಪರಚಿಕೊಂಡು ರಕ್ತ ಬರಿಸಿಕೊಂಡು ಮೈಗೆಲ್ಲ ಧೂಳನ್ನು ಸುರಿದುಕೊಂಡು ಹೋಗಿ ಹಿರಿಯರಿಗೆ ತೋರಿಸಿ ಕೌರವರು ತನಗೆ ಹೀಗೆಲ್ಲ ಮಾಡಿದರೆಂದು ದೂರುತ್ತಿದ್ದನು. ಒಮ್ಮೆ ಹುಡುಗರೆಲ್ಲರೂ ಚಿಣ್ಣಿ ಕೋಲಾಟವಾಡುತ್ತಿದ್ದಾಗ ಚಿಣ್ಣಿಯು ಒಂದು ಮರದ ಮೇಲೆ ಸಿಕ್ಕಿಕೊಂಡಿತು. ಅದನ್ನು ತೆಗೆಯಲು ನಾನು ಮುಂದೆ ತಾನು ಮುಂದೆ ಎಂದು ಉಳಿದ ಹುಡುಗರೆಲ್ಲರೂ ಮರವನ್ನು ಹತ್ತಿದರು. ಹಿಂದಿನಿಂದ ಬರುತ್ತಿದ್ದ ಭೀಮನು ತಾನೂ ಮರ ಹತ್ತುವವನಂತೆ ನಟಿಸಿ ಮರವನ್ನು ಹಿಡಿದು ಗಟ್ಟಿಯಾಗಿ ಅಲುಗಾಡಿಸಿಬಿಟ್ಟನು. ಮರದ ಮೇಲಿದ್ದ ಹುಡುಗರೆಲ್ಲರೂ ಕಳಿತ ಹಣ್ಣುಗಳು ಉದುರುವಂತೆ ದೊಪದೊಪನೆ ಬಿದ್ದರು. ದುರ್ಯೋಧನನಿಗೆ ವಿಪರೀತವಾದ ಸಿಟ್ಟುಬಂದಿತು. ಆದರೆ ಏನು ಮಾಡುವದು ! ತನ್ನ ಶಕ್ತಿಗೆ ಮೀರಿದ ವಿಷಯ. ಕೌರವರು ಇದನ್ನು

ಹಿರಿಯರಲ್ಲಿ ದೂರಿಕೊಂಡರು. ಅವರು "ಹೋಗಲಿ, ಬಿಡಿ. ನೀವು ಆ ಭೀಮನ ಜೊತೆ ಆಡಲೇ ಬೇಡಿ" ಎಂದು ಬುದ್ಧಿ ಹೇಳಿದರು.

ರಮೆ:– "ಹುಡುಗ ಮರವನ್ನು ಅಲುಗಾಡಿಸಿ ಅದರ ಮೇಲಿದ್ದ ಮಕ್ಕಳನ್ನು ಕೆಡಹುವದು ಎಲ್ಲಾದರೂ ಸಾಧ್ಯವೆ ? ಯಾಕಪ್ಪಾ ಹೀಗೆ ಸುಳ್ಳು ಹೇಳುತ್ತೀರಿ ?" ಎಂದು ಆ ಹಿರಿಯರು ಕೇಳಲಿಲ್ಲ !

ಮುರಳಿ :– "ಸಥ್ಯ ! ಭೀಮನು ಮರವನ್ನು ಬೇರು ಸಹಿತ ಕಿತ್ತು ನೀವೆಲ್ಲರೂ ಅದರಲ್ಲಿ ಕುಳಿತಿರುವಂತೆಯೇ ಅದನ್ನು ಹೊತ್ತುಕೊಂಡು ಹೋಗಿ ಹೊಳೆಗೆ ಹಾಕಲಿಲ್ಲವಲ್ಲ !" ಎಂದು ಕೂಡ ಅವರು ಹೇಳಲಿಲ್ಲ.

ರಮೆ :– ಓಹೋ ! ಸರಿ. ಮತ್ತೆ ?

ಮುರಳಿ :– ಹೀಗೆ, ಬಹುಶಃ ಜನ್ಮಾಂತರದ ಕರ್ಮ ಸಂಬಂಧದಿಂದಲೋ ಏನೋ ಕೌರವರಿಗೂ ಪಾಂಡವರಿಗೂ – ಅದರಲ್ಲಿಯೂ ಕೌರವ ಜ್ಯೇಷ್ಠನಾದ ದುರ್ಯೋಧನನಿಗೂ ಪಾಂಡವ ದ್ವಿತೀಯನಾದ ಭೀಮನಿಗೂ ಪರಸ್ಪರ ದ್ವೇಷವು ಬಲವಾಗಿ ಬೇರೂರಿ ಬೆಳೆಯುತ್ತಾ ಹೋಯಿತು. ದುರ್ಯೋಧನನಿಗಂತೂ ಭೀಮನನ್ನು ನೆನಸಿಕೊಂಡರೇ ಮೈ ಉರಿಯುತ್ತಿತ್ತು. ತಮ್ಮ ನಡುವೆ ಭೀಮನು ಇರುವದು ತನ್ನ ಪಾದದೊಳಗೆ ಹೊಕ್ಕು ತೆಗೆಯಲಾರದಂತಿರುವ ಮುಳ್ಳಿನ ಹಾಗೆಂದೂ, ಭೀಮನು ಸತ್ತರೆ ಮಾತ್ರ ತನ್ನ ಜೀವನವು ನೆಮ್ಮದಿಯಾಗಿರಲು ಸಾಧ್ಯವೆಂದೂ ಆತನು ಮನಸಾ ಬಯಸುವಷ್ಟರ ವರೆಗೂ ಅವನು ಭೀಮನನ್ನು ದ್ವೇಷಿಸುತ್ತಿದ್ದನು. ಸ್ವಭಾವತಃ ದುಷ್ಟ, ಪ್ರಾಣಕ್ಕಿಂತಲೂ ಅಭಿಮಾನ ಮೇಲೆಂಬ ಗಣಿಕೆಯುಳ್ಳವನು. ಪಾಂಡವರು ಐವರೇ: ತಾವು ನೂರ್ವರು. ಆದರೂ ಅವರ ಭೀಮನೊಬ್ಬನೇ ತಮ್ಮನ್ನೆಲ್ಲ ಹಣಿಯುತ್ತಾನೆ – ಎಂಬ ಕಿಚ್ಚು. ತಾನು ನೂರ್ವರ ಹಿರಿಯನಾಗಿರುವದೇ ಅಲ್ಲದೆ ತಾನು ಯುವರಾಜ ಕೂಡ ಎಂಬ ದುರಭಿಮಾನ. ಸಾಲದುದಕ್ಕೆ ಹುಡುಗಾಟ. ಇವೆಲ್ಲ ಜೊತೆ ಸೇರಿ ಭೀಮನನ್ನು ಕೊಲ್ಲುವದು ಅವಶ್ಯ ಎಂಬ ನಿರ್ಧಾರಕ್ಕೆ ಅವನು ಬಂದನು.

ರಮೆ :– ಛೆ, ಛೆ. ಇದೆಂತಹ ಹುಡುಗಾಟ !

ಮುರಳಿ:– ಇಷ್ಟರಲ್ಲಿಯೇ ತೀರ್ಮಾನಕ್ಕೆ ಬರಬೇಡ ತಾನೊಂದು ಬಗೆದರೆ ದೈವವೊಂದು ಬಗೆಯುತ್ತದೆ ಎಂಬದೂ, ಸತ್ಯಮೇವ ಜಯತೇ, ನಾನೃತಂ ಎಂಬದೂ ಕೇಳಿ ಮರೆಯಬಹುದಾದಂತಹ ವಿಷಯಗಳಲ್ಲ. ಮನುಷ್ಯರು ಸವಾರರು ಮಾತ್ರ. ಕುದುರೆಯ ಕಡಿವಾಣವನ್ನು ಅಗೋಚರವಾದ ಕೈ ಹಿಡಿದಿರುತ್ತದೆ. ಕುದುರೆಯ ಮೇಲೆ ಕುಳಿತ ಮಾತ್ರದಿಂದಲೇ ನಾವು ಬೇಕಾದಲ್ಲಿಗೆ ಹೋಗಬಹುದೆಂದು ಕಲ್ಪಿಸಿಕೊಂಡಿರುತ್ತೇವೆ. ಆದರೆ ಕಡಿವಾಣ ತಿರುಗಿಸಿದತ್ತ

ಮಾತ್ರವೇ ಕುದುರೆ ಹರಿಯಲು ಸಾಧ್ಯ. ಮುಂದಕ್ಕೆ ಕೇಳು. ಕೌರವರೆಲ್ಲರೂ ಸೇರಿ ಭೀಮನ ಮೈ ಮರೆಸಿ ಅವನ ಕೈಕಾಲುಗಳನ್ನು ಕಟ್ಟಿ ಒಂದು ಮಡುವಿನಲ್ಲಿ ಎತ್ತಿ ಹಾಕಿದರು. ಆದರೆ ಪ್ರಜ್ಞೆ ಬಂದ ಮೇಲೆ ಅವನು ಸುರಕ್ಷಿತವಾಗಿಯೇ ಮೇಲೆ ಬಂದನು. ಘೋರವಾದ ವಿಷ ಸರ್ಪಗಳಿಂದ ಕಚ್ಚಿಸಿದರೂ, ವಿಷಪಾನ ಮಾಡಿಸಿದರೂ ಅವನು ಸಾಯದೆ ಉಳಿದು ಅದಕ್ಕಾಗಿ ಎಲ್ಲ ಅವರನ್ನು ಚೆನ್ನಾಗಿ ಬಡಿದನು.

ರಮೆ :– ನೀವು ಕೂಗಾಡಬೇಡಿ. ಒಂದು ಹೇಳುತ್ತೇನೆ. ವೇದವ್ಯಾಸರಂತಹ ಋಷಿಯೊಬ್ಬರು ಬರೆಯುವ ಗ್ರಂಥದಲ್ಲಿ ಇಂತಹ ಸುಳ್ಳು ಘಟನೆಗಳನ್ನು ಸೇರಿಸದೆ ಇರುತ್ತಿದ್ದರೆ ಪಾಶ್ಚಾತ್ಯ ನಾಗರಿಕರಲ್ಲಿ ಕೂಡ ಇವು ವಿಶೇಷ ಮಾನ್ಯತೆ ಪಡೆದು ನಮ್ಮ ಸಂಸ್ಕೃತಿಗೆ ಇನ್ನೂ ಎಷ್ಟೋ ಗೌರವ ಸಿಕ್ಕುತ್ತಿತ್ತು. ಅಲ್ಲಲ್ಲಿ ಇಂತಹ ಅಸಾಧ್ಯವಾದ, ಅಸತ್ಯವಾದ ಘಟನೆಗಳನ್ನು ಸೇರಿಸಿರುವದರಿಂದ ಮಹಾಭಾರತವು ಚರಿತ್ರೆಯೇ ಅಲ್ಲವೆಂದೂ ಅದು ಕೇವಲ ಕಾಲ್ಪನಿಕ ಕತೆಯೆಂದೂ ವಿದ್ಯಾವಂತರಿಂದ ಪರಿಗಣಿಸಲ್ಪಟ್ಟು ಅದು ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿದೆ. ಒಬ್ಬ ಹುಡುಗ ಮರವನ್ನು ಅಲುಗಾಡಿಸುವದು, ವಿಷ ಕುಡಿದು ಬದುಕುವದು, ನೀರಿನೊಳಗೆ ಮುಳುಗಿಸಲ್ಪಟ್ಟರೂ ಬದುಕಿ ಬರುವದು ಮೊದಲಾದ ಘಟನೆಗಳ ಬದಲು ಸಾಮಾನ್ಯವಾಗಿ ಎಲ್ಲ ಒಪ್ಪಬಹುದಾದಂತಹ ವಿಧಗಳಲ್ಲಿ ಕೌರವರು ಭೀಮನನ್ನು ಕೊಲ್ಲಲು ಪ್ರಯತ್ನಪಟ್ಟರೂ ಅವರು ಸಫಲರಾಗಲಿಲ್ಲ ಎಂದು ಹೇಳಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ನಾನು ನಮ್ಮ ಗ್ರಂಥಗಳನ್ನು ದೂರುತ್ತಿದ್ದೇನೆ ಎಂದು ಭಾವಿಸಬೇಡಿ. ಅವುಗಳ ಮೇಲಿನ ಗೌರವದಿಂದಲೇ ಹೀಗೆ ಹೇಳುತ್ತಿದ್ದೇನೆ. ಇನ್ನು ಸುಮ್ಮನೆ ಗಂಟೆಗಟ್ಟಲೆ ವಾದ ಮಾಡಿ ಕತೆಯ ಸ್ವಾರಸ್ಯವನ್ನು ಕೆಡಿಸಬೇಡಿ. ಮುಂದಕ್ಕೆ ಹೇಳಿ.

ಮುರಳಿ:– ಭೀಮ ದುರ್ಯೋಧನರು ಈ ರೀತಿ ಪರಸ್ಪರ ದ್ವೇಷಿಸುತ್ತಿರುವದ……..

ರಮೆ:– ನಾನು ಹೇಳಿದುದರಿಂದ ನಿಮಗೆ ಬೇಸರವಾಗಿಲ್ಲ ತಾನೆ?

ಮುರಳಿ:– ಬೇಸರವೇಕೆ?

ರಮೆ:– ನಾನು ಹೇಳಿದುದು ಸರಿ ಹೌದೋ ಅಲ್ಲವೋ?

ಮುರಳಿ:– ವಾದ ಬೇಡವೆಂದೆಯಲ್ಲ!

ರಮೆ:– ವಾದಕ್ಕಲ್ಲ. ನಿಮ್ಮ ಅಭಿಪ್ರಾಯ ಕೇಳಿದೆ.

ಮುರಳಿ:– ಏನು ಅಭಿಪ್ರಾಯ?

ರಮೆ:– ನಾನು ಹೇಳಿದುದು ಸರಿಯಲ್ಲವೇ ಎಂದು?

ಮುರಳಿ:– ಸರಿ ಎಂದು ನನಗೆ ಕಾಣಿಸುವದಿಲ್ಲ.

ರಮೆ:– ಯಾಕೆ?

ಮುರಳಿ:– ನನ್ನ ಪ್ರಾರಬ್ಧ!

ರಮೆ :– ಅಯ್ಯೋ, ನಿಮ್ಮದೇಕಪ್ಪಾ, ನನ್ನದೇ ಪ್ರಾರಬ್ಧ. ನನಗೇಕೆ ಬೇಕು! ನೀವು ಮಹಾ ಬುದ್ಧಿವಂತರು, ನಾನು ಹೆಡ್ಡಿ. ಯಾವ ಕತೆಯಲ್ಲಿ ಏನಿದ್ದರೆ ನನಗೇನು! ಇನ್ನು ಮುಂದೆ ತುಟಿ ಪಿಟಕ್ಕೆಂದರೆ ಕೇಳಿ. ಏನೋ ಹೇಳಿಬಿಟ್ಟೆ. ತಪ್ಪಾಯಿತು. ದಯನಿಟ್ಟು ಕತೆ ಮುಂದುವರಿಸಿ.

ಮುರಳಿ :– ಅಯ್ಯೋ ಹುಚ್ಚೀ. ಇರಲಿ. ಈಗ ನಾನೂ ನೀನೂ ಜೊತೆಯಾಗಿಯೇ ವಿಮರ್ಶೆ ಮಾಡೋಣ. ಇಂತಹ ವಿಚಾರಗಳಲ್ಲಿ ಅಪನಂಬಿಕೆಯಾಗಲಿ, ಅದರ ಪರಿಣಾಮವಾಗಿ ಅಗೌರವವಾಗಲಿ ಇರಬಾರದು. ನಮ್ಮ ಪುರಾತನ ಸಂಸ್ಕೃತಿಯ ಕುರಿತು ಆಳವಾದ ವಿಚಾರ ಮಾಡಿ ಅವುಗಳ ಹಿನ್ನೆಲೆಯನ್ನೂ, ಉದ್ದೇಶವನ್ನೂ, ಪ್ರಯೋಗ ಸಾಧ್ಯತೆಯನ್ನೂ ಇತರ ವಿವರಗಳನ್ನೂ ಆದಷ್ಟು ಸ್ಪಷ್ಟವಾಗಿ ತಿಳಿದುಕೊಳ್ಳಬೇಕಾದ ತೀವ್ರ ಅವಶ್ಯಕತೆ ಈ ದಿನ ಇದೆ. ಇದಕ್ಕೆ ತೀಕ್ಷ್ಣವಾದ ವಿಮರ್ಶೆ, ಪರಸ್ಪರ ಚರ್ಚೆ ಅವಶ್ಯವಾಗುತ್ತದೆ. ಅದನ್ನೇ ನಾನೂ ನೀನೂ ಈಗ ಮಾಡುತ್ತಿರುವದು. ಇದರಲ್ಲಿ ಬುದ್ಧಿವಂತಿಕೆ, ಹೆಡ್ಡತನ, ವೈಯಕ್ತಿಕವಾದ ಅಸಮಾಧಾನ ಯಾವದೂ ಇಲ್ಲ. ನೀನು ತಳೆದ ಸಂಶಯ ಅಪರೂಪವಾದುದೇನೂ ಅಲ್ಲ. ನೀನೇ ಹೇಳಿದಂತೆ ಇಂದಿನ ವಿದ್ಯಾವಂತರೆನಿಸಿಕೊಂಡವರಲ್ಲಿ ಹೆಚ್ಚಿನವರು ನಿನ್ನಂತೆಯೇ ಸಂಶಯ ವ್ಯಕ್ತಪಡಿಸುತ್ತಿದ್ದಾರೆ. ವಿಷಯದ ಏಕೆ – ಹೇಗೆಗಳನ್ನು ತಿಳಿದುಕೊಳ್ಳದೆ ಅದನ್ನು ಕಣ್ಣುಮುಚ್ಚಿ ಒಪ್ಪಿಕೊಳ್ಳುವದಕ್ಕಿಂತಲೂ ಅದರ ಬಗ್ಗೆ ಸಂದೇಹ ತಾಳಿ ಅದನ್ನು ವಿಚಾರದ ಒರೆಗೆ ಹಚ್ಚಿ ನೋಡಿ ಪರೀಕ್ಷಿಸುವದು ಬಹಳ ಒಳ್ಳೆಯದು. ಈಗ ನಿನ್ನ ಸಂದೇಹದ ಕುರಿತು ಸ್ವಲ್ಪ ವಿಚಾರ ಮಾಡೋಣ.

ರಮೆ :– ಹಾಗೇ. ಜಾಣರು.

ಮುರಳಿ :– ಹುಚ್ಚು ಹುಡುಗಿ. ಕೇಳು. ಕೆಲವು ವಿಷಯಗಳು ನಮ್ಮ ಅನುಭವಕ್ಕೆ ತೀರ ಅಪರೂಪವಾದವುಗಳಾಗಿರುವದರಿಂದ ಅವುಗಳು ನಮ್ಮ ಕಲ್ಪನೆಗೂ ಮೀರಿದಂತಿರುತ್ತವೆ. ಉದಾಹರಣೆಗೆ ಕೇಳು. ನೀನು ಪಾಶ್ಚಾತ್ಯರನ್ನು ಉದಾಹರಿಸಿದೆ. ಅವರುಗಳು ವಿಚಾರಶೀಲರೆಂದೂ, ಎಲ್ಲವನ್ನೂ ವೈಜ್ಞಾನಿಕವಾಗಿಯೇ ಪರಿಶೀಲಿಸುವವರೆಂದೂ ಅವರ ಮೇಲೆ ಒಂದು ಬಗೆಯ ವಿಶ್ವಾಸ ನಮ್ಮ ವಿದ್ಯಾವಂತರಲ್ಲಿದೆ. ಅಲ್ಲವೆ?

ರಮೆ:– ಹೌದು.

ಮುರಳಿ :– ಇರಲಿ. ಅದನ್ನು ತಪ್ಪು ಎಂದು ನಾನು ಖಂಡಿಸುವದಿಲ್ಲ. ಅವರ ಧರ್ಮ ಗ್ರಂಥದ ಉಲ್ಲೇಖವನ್ನೇ ತೆಗೆದುಕೊ. ಏಸುಕ್ರಿಸ್ತನು ತನ್ನ ಶರೀರದ ಸಂದುಸಂದಿಗೂ ಮೊಳೆಗಳಿಂದ ಹೊಡೆಸಿಕೊಂಡು, ಆದರೂ ತನಗೆ ಅಪಚಾರ ಮಾಡಿದವರನ್ನೇ ಕ್ಷಮಿಸುವಷ್ಟು ಸಹನೆಯಿಂದಿದ್ದ ಎಂಬದನ್ನು ಪಾಶ್ಚಾತ್ಯರಾಗಲಿ, ನಿನ್ನಂತಹ ಭಾರತೀಯರಾಗಲಿ ಸುಳ್ಳು ಎಂದು ಅಲ್ಲಗಳೆಯುತ್ತೀರೇನು ?

ರಮೆ:– ಇಲ್ಲ.

ಮುರಳಿ:– ಯಾಕೆ ?

ರಮೆ:– ಯಾಕೆ ಎಂದರೆ ಏನು ಹೇಳುವದು ?

ಮುರಳಿ:– ಒಬ್ಬ ಮನುಷ್ಯ ಅಷ್ಟೊಂದು ಶಾರೀರಕ ವೇದನೆ ಸಹಿಸಿಕೊಂಡೂ ಕೂಡ ತಾಳ್ಮೆಯಿಂದಿರುವದು ಸಾಧ್ಯ ಎಂಬದರಿಂದಾಗಿ ಅದನ್ನು ನಂಬುತ್ತೀರೇನು ?

ರಮೆ:– ಅಲ್ಲ.

ಮುರಳಿ:– ಹಾಗಿರುವದು ಕೇವಲ ಅಸಾಧ್ಯ ಎಂದು ಒಪ್ಪುತ್ತೀರೋ ಇಲ್ಲವೊ ?

ರಮೆ:– ಒಪ್ಪುತ್ತೇವೆ.

ಮುರಳಿ:– ಸಾಮಾನ್ಯ ಮಾನವರಿಗೆ ಅಸಾಧ್ಯವಾದುದು ಏಸುಕ್ರಿಸ್ತನಿಗೆ ಸಾಧ್ಯವಾಯಿತೆಂದು ನಂಬುವವರು ಭೀಮನು ಸಾಮಾನ್ಯ ಮಾನವರಿಗಿಂತ ವಿಶಿಷ್ಟ ಶಕ್ತಿ ಪಡೆದಿದ್ದ ಎಂದು ಏಕೆ ನಂಬಬಾರದು ?

ರಮೆ:– ಆಗಲಪ್ಪ, ನಂಬಿದೆ. ಮುಂದಕ್ಕೆ ಹೇಳಿ.

ಮುರಳಿ:– ಹೇಳೋಣ. ಇರಲಿ, ಹೇಳು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದಾಗ ನೀನು ಬಹುಶಃ ಮಗುವಾಗಿದ್ದಿರಬಹುದು. ಆದರೂ ಸ್ವಾತಂತ್ರ್ಯ ಹೋರಾಟದ ವಿಚಾರಗಳನ್ನು ನೀನು ಅನಂತರ ಕೇಳಿ ತಿಳಿದುಕೊಂಡಿರಬಹುದು. ಇಲ್ಲವೆ ?

ರಮೆ:– ಸ್ವಲ್ಪ ಸ್ವಲ್ಪ ತಿಳಿದಿದ್ದೇನೆ.

ಮುರಳಿ:– ಆಗಲಿ. ಭಾರತವು ಯಾರಿಂದ ಸ್ವಾತಂತ್ರ್ಯವನ್ನು ಪಡೆದುದು?

ರಮೆ:– ಬ್ರಿಟಿಷರಿಂದ.

ಮುರಳಿ:– ಇಡಿಯ ಪ್ರಪಂಚದಲ್ಲಿ ಬ್ರಿಟನ್ ಯಾವ ಸ್ಥಾನ ಪಡೆದಿತ್ತು ?

ರಮೆ:– ಅದೇನೋ ಹೇಳುತ್ತಾರಲ್ಲ – ಸೂರ್ಯ ಮುಳುಗದ ಸಾಮ್ರಾಜ್ಯ ಅಂತಲೋ ಏನೋ.

ಮುರಳಿ:– ಅಂದರೆ ?

ರಮೆ:– ಅಂದರೆ ಅವರು ಪ್ರಪಂಚದಲ್ಲಿ ಅತ್ಯಂತ ವಿಶಾಲವಾದ ಸಾಮ್ರಾಜ್ಯವನ್ನು ಪಡೆದಿದ್ದರು ಅಂತ.

ಮುರಳಿ:– ಸರಿ. ಅಂತಹವರನ್ನು ಗೆಲ್ಲಬೇಕಾದರೆ, ಅಥವಾ ಓಡಿಸಬೇಕಾದರೆ ಹಾಗೆ ಗೆಲ್ಲುವವರ ಸಾಮ್ರಾಜ್ಯ, ಸೈನ್ಯಬಲ ಅವರದಕ್ಕಿಂತ ಹೆಚ್ಚು ದೊಡ್ಡದಾಗಿರಬೇಕಾದುದು ಸಹಜ ತಾನೆ ?

ರಮೆ:– ಹೌದು.

ಮುರಳಿ:– ಭಾರತವು ಒಂದು ಸಾಮ್ರಾಜ್ಯವಾಗಿರುವದು ಹೋಗಿ ತನ್ನನ್ನೇ ತಾನು ಆಳಿಕೊಳ್ಳುವ ಸ್ವಾತಂತ್ರ್ಯವನ್ನು ಕೂಡ ಪಡೆದಿರಲಿಲ್ಲ ಎಂಬದೂ ನಿಜ ತಾನೆ ?

ರಮೆ :– ಹೌದು.

ಮುರಳಿ :– ಹಾಗಿರುವಾಗ, ಇಂತಹ ಒಂದು ದುರ್ಬಲವಾದ ಗುಲಾಮು ರಾಷ್ಟ್ರ, ಪ್ರಪಂಚದ ಅತ್ಯಂತ ಶಕ್ತಿಶಾಲೀ ರಾಷ್ಟ್ರದ ಒಡೆತನದಿಂದ ತನ್ನನ್ನು ಹೇಗೆ ಕಳಚಿಕೊಂಡಿತು ?

ರಮೆ:– ಮಹಾತ್ಮಾ ಗಾಂಧಿಯವರ ಹೋರಾಟದಿಂದ !

ಮುರಳಿ:– ಅವರು ಯಾವ ಆಯುಧ ಹಿಡಿದು ಹೋರಾಡಿದರು ?

ರಮೆ :– ಆಯುಧವಿಲ್ಲ. ಸತ್ಯ, ಅಹಿಂಸೆ, ಸತ್ಯಾಗ್ರಹ ಎಂದು ಮುಂತಾಗಿ ಹೋರಾಡಿದರು.

ಮುರಳಿ :– ಪ್ರಪಂಚದ ಈವರೆಗಿನ ಚರಿತ್ರೆಯಲ್ಲಿ ಆ ರೀತಿಯಲ್ಲಿ ಒಂದು ಪ್ರಬಲ ಸರಕಾರವನ್ನು ದೇಶದಿಂದ ಯಾರು ಓಡಿಸಿದ್ದಾರೆ ?

ರಮೆ:– ಗೊತ್ತಿಲ್ಲ.

ಮುರಳಿ:– ಯುದ್ಧ, ರಕ್ತಪಾತ, ಕೊಲೆ, ಸಾವುಗಳಿಲ್ಲದೆ ಪರಕೀಯರಿಂದ ಸ್ವತಂತ್ರವಾಗುವದು ಸಾಧ್ಯ ಎಂದು ನಮಗೆ ಸ್ವಾತಂತ್ರ್ಯ ಸಿಕ್ಕುವದಕ್ಕೆ 25 ವರ್ಷಗಳ ಮುಂಚೆ ಹೇಳಿದ್ದರೆ ಎಲ್ಲರೂ ನಗುತ್ತಿದ್ದರು. ಅಲ್ಲವೆ ?

ರಮೆ:– ಇರಬಹುದು. ನನಗೇನು ಗೊತ್ತು ? ನಾನು ಹುಟ್ಟಿದ್ದರೆ ತಾನೆ ?

ಮುರಳಿ:– ನಾನೂ ಹುಟ್ಟಿರಲಿಲ್ಲ, ಬಿಡು.

ರಮೆ:– ಅಲ್ಲ, ಇದೆಲ್ಲ ಯಾಕೆ ಈ ರಾಮಾಯಣ ?

ಮುರಳಿ:– ಯಾಕೂ ಇಲ್ಲ ರಮಾ, ಏಸುಕ್ರಿಸ್ತನನ್ನು ಶಿಲುಬೆಗೆ ಏರಿಸಿದುದು,

ಗಾಂಧಿಯವರು ದೇಶಕ್ಕೆ ಸ್ವಾತಂತ್ರ್ಯವನ್ನು ತರಲು ಹೋರಾಡಿದುದು–ಇವುಗಳು ಕೇವಲ ಅಸಾಮಾನ್ಯ ಘಟನೆಗಳು. ಅದ್ಭುತ ಎನ್ನಬಹುದಾದಂತಹವು. ನಂಬಲು ಸಾಧ್ಯವಾಗದ ವಿಚಾರಗಳು. ಆದರೂ ಅವುಗಳನ್ನು ನೀನು ಸುಳ್ಳು ಎನ್ನಲಾರೆ. ಅಲ್ಲವೆ ?

ರಮೆ:– ಹೌದು.

ಮುರಳಿ:– ಈ ರೀತಿ, ಪ್ರಪಂಚದಲ್ಲಿ ನಮ್ಮ ಕಲ್ಪನೆಗೂ ಮೀರಿದ ಘಟನೆಗಳು ಹೇರಳವಾಗಿ ನಡೆಯಬಲ್ಲವು ಎಂದು ನೀನು ನಂಬುವೆಯಾದರೆ ಮಹಾಭಾರತದ ಘಟನೆಗಳನ್ನು ಏಕೆ ನಂಬಬಾರದು ಎಂಬದಷ್ಟೇ ನನ್ನ ಪ್ರಶ್ನೆ. ಅವುಗಳು ನಡೆದಿರಲು ಸಾಕು ಎಂದು ನಂಬಲು ಈ ರೀತಿ ಸಾಕಷ್ಟು ಆಧಾರಗಳು ದೊರಕುತ್ತವೆ. ಅವು ನಡೆದೇ ಇಲ್ಲ ಎಂದು ಹೇಳಲು ಸರಿಯಾದ ಆಧಾರ ಸಿಕ್ಕುವದಿಲ್ಲ. ಇಂದಿಗೂ ಕೂಡಾ ಮಾನವ–ಮಾನವರಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಕೆಲವರು ಹುಲಿಯೊಂದಿಗೆ ಸೆಣಸಾಡಿ ಬದುಕುತ್ತಾರೆ. ಇನ್ನು ಕೆಲವರು ಹುಲಿಯ ಗರ್ಜನೆ ಕೇಳಿ ಎದೆಯೊಡೆದು ಸಾಯಬಹುದು. ಹತ್ತಿರದಿಂದ ಬಾಯಿ ಚಪ್ಪರಿಸಿ ಹಾವನ್ನು ಓಡಿಸುವವರಿದ್ದಾರೆ. ದೊಡ್ಡದಾದ ಎರೆಹುಳವನ್ನು ಕಂಡು ಓಡುವವರೂ ಇದ್ದಾರೆ. ನೀರಿನಲ್ಲಿ ಮುಳುಗಿ, ಎಷ್ಟೋ ಎತ್ತರದಿಂದ ಬಿದ್ದು ಬದುಕುವವರಿದ್ದಾರೆ. ಸಣ್ಣ ಪುಟ್ಟ ಆಘಾತಗಳಿಗೇ ಸಾಯುವವರಿದ್ದಾರೆ. ಭೀಮ ವಿಷವನ್ನು ಜೀರ್ಣಿಸಿಕೊಂಡ, ನೀರಿನಲ್ಲಿ ಮುಳುಗಿಯೂ ಬದುಕಿ ಬಂದ ಎಂಬದು ಅದ್ಭುತ, ನಿಜ. ಅಂತಹ ಅದ್ಭುತಗಳಿಗೆ ಕಾರಣನಾದುದರಿಂದಲೇ ಅವನು ಆ ಯುಗದಲ್ಲಿಯೇ ವಿಶಿಷ್ಟ ಬಲಾಢ್ಯ ಎನಿಸಿಕೊಂಡ.

ರಮೆ:– ಭೀಮನದು ನಿಜವಿರಬಹುದಪ್ಪ. ಆದರೂ ಈ ಪುರಾಣಗಳೆಲ್ಲ ನಿಜವಾಗಿ ನಡೆದ ಕತೆಗಳು ಎಂದು ಈ ಆಧುನಿಕ ಕಾಲದಲ್ಲಿ ಯಾರೂ ನಂಬುವದಿಲ್ಲ. ಪುರಾಣದ ಬದನೆಕಾಯಿ ಎಂಬ ಮಾತು ಎಷ್ಟು ರೂಢಿಯಾಗಿಬಿಟ್ಟಿದೆ, ನೋಡಿ.

ಮುರಳಿ:– ಕೆಲವು ದಶಕಗಳ ಹಿಂದೆ ಪುರಾಣದ ಬದನೇಕಾಯಿಯಾಗಿದ್ದ ವಿಮಾನವು ಇಂದು ಹಾರಾಡುತ್ತಿಲ್ಲವೆ ?

ರಮೆ:– ಪುರಾಣದಲ್ಲಿ ಬರುವ ಎಲ್ಲ ವಿಚಾರಗಳೂ ಸುಳ್ಳಿಲ್ಲದೆ ಇರಬಹುದು. ಆದರೆ ಸ್ವಲ್ಪ ಇರುವ ಸತ್ಯ ಚರಿತ್ರೆಗೆ ಅದನ್ನು ಬರೆದ ಕವಿ ಬೇಕಷ್ಟು ರಂಜನೆಯನ್ನು ಸೇರಿಸಿ ಬರೆದಿರಲು ಸಾಧ್ಯವಿಲ್ಲ ಎಂದು ನಾನು ನಂಬುವದಿಲ್ಲ.

ಮುರಳಿ:– ಈ ರೀತಿಯ ಅಸ್ಪಷ್ಟವಾದ ಅಭಿಪ್ರಾಯಗಳಿಂದ ನಾವು ಸತ್ಯಕ್ಕೆ ಪೋಷಣೆ ನೀಡಿದಂತಾಗುವದಿಲ್ಲ ರಮಾ. ಯಾವದೇ ಒಂದು ವಿಷಯದ ಬಗೆಗೆ

ನಾವು ಇತರರು ಒಪ್ಪುವಂತೆ, ನಮ್ಮ ಮನಸ್ಸಾಕ್ಷಿಯೇ ಒಪ್ಪುವಂತೆ ಸಾಧಿಸಿ ಸ್ಪಷ್ಟವಾದ ಒಂದು ಅಭಿಪ್ರಾಯವನ್ನು ವ್ಯಕ್ತಪಡಿಸಬಲ್ಲೆವಾದರೆ ಮಾತ್ರ ಆ ವಿಷಯದ ಬಗೆಗೆ ಏನಾದರೂ ಮಾತನಾಡಬೇಕೇ ಹೊರತು, ನಾವು ಇತರ ಯಾವದೋ ವಿಷಯದಲ್ಲಿ ಪರಿಣತರೆಂಬದಕ್ಕಾಗಿ ಈ ವಿಷಯದಲ್ಲಿಯೂ ಒಂದು ಅಭಿಪ್ರಾಯ ವ್ಯಕ್ತಪಡಿಸಲು ಅರ್ಹರು ಎಂದು ತಿಳಿದುಕೊಳ್ಳುವದು ತಪ್ಪು.

ವೇದಗಳಿಂದ ಹಿಡಿದು ನಮ್ಮ ಇತ್ತೀಚೆಗಿನ ಚರಿತ್ರೆಯ ವರೆಗೆ ಭಾರತೀಯ ಗ್ರಂಥಗಳ ಕುರಿತು ಅಭಿಪ್ರಾಯ ವ್ಯಕ್ತಪಡಿಸದ ವಿದ್ವಾಂಸನೇ ಇಲ್ಲವೆನ್ನುವಷ್ಟರ ಮಟ್ಟಿಗೆ, ಅವುಗಳ ಕುರಿತು ಜಿಜ್ಞಾಸೆ ನಡೆದಿದೆ.

ರಮೆ:– ನೀವೂ ಸೇರಿದಂತೆ.

ಮುರಳಿ:– ನಾನೂ ಸೇರಿದಂತೆ. ಹೌದು. ಆದರೆ ಒಂದು ವಿಷಯ. ಈ ಮಹಾನ್ ಗ್ರಂಥಗಳ ಕುರಿತು ನಾನು ನನ್ನ ಯಾವದೋ ವಿದ್ವತ್ತನ್ನು ಪ್ರದರ್ಶಿಸಿ, ಅವುಗಳ ಪ್ರಕಾಶವನ್ನು ಮಂಕುಗೊಳಿಸಿ ನನ್ನ ಹಿರಿಮೆಯನ್ನೇ ಬೆಳಗುವ ದುಸ್ಸಾಹಸ ಮಾಡುತ್ತಿಲ್ಲ ಎಂದುಕೊಂಡಿದ್ದೇನೆ. ಅವುಗಳ ಪ್ರಖರವಾದ ತೇಜಸ್ಸನ್ನು ದಿಟ್ಟಿಸಿ ನೋಡಲು ನನಗೆ ಶಕ್ತಿ ಸಾಲದೆಂಬ ಅರಿವಿನಿಂದೊಡಗೂಡಿ ಬಹಳ ವಿನೀತನಾಗಿ ಅವುಗಳನ್ನು ನೋಡಲು ಪ್ರಯತ್ನಿಸಿದ್ದೇನೆ. ನನ್ನ ವಿಮರ್ಶಾ ಶಕ್ತಿಯ ದೌರ್ಬಲ್ಯವನ್ನು ತಿಳಿದುಕೊಂಡು ಅವುಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ್ದೇನೆ. ನನ್ನ ಕಲ್ಪನೆಯ ಪರಿಣಾಮಗಳು ಸತ್ಯಕ್ಕೆ ಅಪಚಾರ ಮಾಡಬಹುದಾದಷ್ಟು ದುರ್ಬಲವಾದವುಗಳಾಗಿರಬಹುದಾದರೂ ಈ ಗ್ರಂಥಗಳ ಆಧಾರ, ಉದ್ದೇಶ, ಅರ್ಥಗಳು ಹಾಗೆ ಮಾಡುವಂಥವುಗಳಲ್ಲ ಎಂದು ನಿಶ್ಚಯವಾಗಿ ನಂಬಿದ್ದೇನೆ. ಈ ಹಿನ್ನೆಲೆಯಲ್ಲಿಯೇ ನಾನು ನಿನ್ನೊಂದಿಗೆ ಚರ್ಚೆ ಮಾಡುತ್ತಿರುವದು.

ರಮೆ:– ಚರ್ಚೆ ಎಲ್ಲಿ ಬಂತು? ನೀವು ಹೇಳುತ್ತಿದ್ದೀರಿ, ನಾನು ಕೇಳುತ್ತಿದ್ದೇನೆ.

ಮುರಳಿ:– ನಾನು ಹೇಳುವದನ್ನು ನೀನು ಕೇಳುತ್ತಿದ್ದೀಯೆ. ಆದರೆ ನೀನು ಕೇಳುವದಕ್ಕೆ ಪ್ರತಿಯಾಗಿ ಹೇಳುತ್ತಿದ್ದೇನೆ.

ರಮೆ:– ಅಬ್ಬ. ನೀವು ತಲೆ ಕೆಡಿಸಿಬಿಡುತ್ತೀರಿ. ಹೋಗಲಿ, ಹೇಳಿ.

ಮುರಳಿ:– ಅದೇ, ಈ ಪುರಾಣಗಳ ಬಗೆಗೆ. ಪುರಾಣಗಳು ಎಂದು ಹೇಳುವಾಗ ಮುಖ್ಯವಾಗಿ ಮಹಾಭಾರತವನ್ನೇ ಗಮನದಲ್ಲಿಟ್ಟುಕೊಂಡಿರುತ್ತೇನೆ ಎಂಬದನ್ನು ನೆನಪಿನಲ್ಲಿಟ್ಟುಕೊ. ಹಲವರು ಹಲವು ರೀತಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಕೆಲವರು ಪುರಾಣಗಳೆಲ್ಲವನ್ನೂ ಇವು ಕೇವಲ ಕಾಲ್ಪನಿಕ ಕಟ್ಟುಕತೆಗಳೆಂದೇ ಭಾವಿಸುತ್ತಾರೆ. ಅವರ ಅಭಿಪ್ರಾಯವನ್ನು ಚರ್ಚಿಸುವದು

ಬೇಕಿಲ್ಲ. "ಈತನೇ ನನ್ನ ತಂದೆ ಎಂದು ನಾನು ಹೇಗೆ ನಂಬಲಿ"? ಎಂದು ಒಬ್ಬ ಮಗನು ತನ್ನ ತಾಯಿಯಲ್ಲಿ ಕೇಳಿದರೆ ಅವನನ್ನು ಒಪ್ಪಿಸುವದು ಸಾಧ್ಯವೇ ಇಲ್ಲದ ಕೆಲಸ.

ಇನ್ನು ಕೆಲವರು ಮಹಾಭಾರತ ಕತೆಯು ನಿಜವಾಗಿ ನಡೆದ ಘಟನೆಗಳ ನಿರೂಪಣೆಯೇ ಆದರೂ ಅದು ಕವಿಯ ಕಲ್ಪನಾ ವಿಲಾಸವನ್ನೂ ಒಳಗೊಂಡು ಈಗಿನ ರೂಪಕ್ಕೆ ಬಂದಿದೆ ಎನ್ನುತ್ತಾರೆ. ಮಹಾಭಾರತ ಕತೆಯು ನಿಜವೂ ಹೌದು, ಸುಳ್ಳೂ ಹೌದು ಎಂಬಂತಹ ಅಸ್ಪಷ್ಟ ಅಭಿಪ್ರಾಯ ಇವರದು. ಇವರು ಪುರಾಣಗಳನ್ನು ಅಳೆಯುವದು ಮುಖ್ಯವಾಗಿ ಕಾವ್ಯ ದೃಷ್ಟಿಯಿಂದ. ತಾವು ಈಗ ಕಾಣುತ್ತಿರುವ ಕವಿಗಳ ಕಾವ್ಯರಚನಾ ಕ್ರಮ, ಪುರಾಣಗಳಲ್ಲಿ ಇವರಿಗೆ ಕಾಣಿಸುತ್ತಿದೆಯೆನ್ನಲಾದ ಭಾಷಾ ಪ್ರಭೇದ ಮೊದಲಾದವುಗಳ ಆಧಾರದಿಂದ ಇವರು ಹೀಗೆ ವಾದಿಸುತ್ತಾರೆ. ಆದರೆ ಸ್ಪಷ್ಟವಾಗಿ ಪುರಾಣ ಕತೆಯ ಯಾವ ಭಾಗ ನಿಜ, ಯಾವದು ಸುಳ್ಳು ಎಂದು ಹೇಳಲು ಇವರು ಅಸಮರ್ಥರಾಗಿರುತ್ತಾರೆ.

ಮತ್ತೆ ಪುರಾಣಗಳೆಂದರೆ ಅವುಗಳ ಪ್ರವಚನ ನಡೆಸಿ ಅದನ್ನು ಕೇಳಿದ ಮಾತ್ರದಿಂದಲೇ ಸ್ವರ್ಗವನ್ನು ಪಡೆಯಬಹುದೆಂದು ನಂಬಿರುವ ಮುಗ್ಧರೂ ಇದ್ದಾರೆ. ಪುರಾಣಗಳ ನಿಜವಾದ ಉಪಯೋಗವನ್ನು ಇವರೂ ಪಡೆಯುವದಿಲ್ಲ.

ಇನ್ನೂ ಕೆಲವರು ಪುರಾಣಗಳನ್ನು ಚಾರಿತ್ರಿಕ ದೃಷ್ಟಿಯಿಂದ ಅಳೆಯಲು ಪ್ರಯತ್ನಿಸಿ ಅವುಗಳ ಕಾಲ, ಸ್ಥಳ, ಸನ್ನಿವೇಶಗಳನ್ನು ಕಂಡು ಹಿಡಿಯಲು ಶ್ರಮಿಸುತ್ತಾರೆ: ಅವರ ಪ್ರಯತ್ನವು ವಿಫಲವಾಗುವ ಸಾಧ್ಯತೆ ಹೆಚ್ಚಿರುವಷ್ಟೇ ಅವರ ಪ್ರಯತ್ನದ ಪ್ರಯೋಜನವೂ ವಿಫಲವಾಗುತ್ತದೆ.

ಹೀಗೆ ಪುರಾಣಗಳ ಬಗೆಗೆ ಹಲವಾರು ದೃಷ್ಟಿಕೋನಗಳಿವೆ. ಈ ಕುರಿತು ನನ್ನ ಅಭಿಪ್ರಾಯ ಇದು. ಮುಖ್ಯವಾಗಿ ಮಹಾಭಾರತವು ಈ ದೇಶದಲ್ಲಿ ಸಾವಿರಾರು ವರ್ಷಗಳಿಂದ ಉತ್ತಮ ಸಾಹಿತ್ಯ ಕೃತಿಯಾಗಿ, ಚರಿತ್ರೆಯ ಗ್ರಂಥವಾಗಿ ಅಲೌಕಿಕವಾದ ಅನುಭವವನ್ನು ನೀಡುವಂತಹ ಅನುಪಮ ಕೃತಿಯಾಗಿ ನಡೆದು ಬಂದಿದೆ. ಅದರ ಮಹತ್ವವನ್ನು ಹೆಚ್ಚಿಸುವಂತಹ ಪ್ರಾಮಾಣಿಕ ಸಂಶೋಧನೆ ಅವಶ್ಯವಾಗುತ್ತದೆ. ಆದರೆ ಅಂತಹ ಸಂಶೋಧನೆಯ ಹೆಸರಿನಲ್ಲಿ, ಸಂಶೋಧನೆಯ ದೌರ್ಬಲ್ಯದಿಂದಾಗಿ, ಆ ಕೃತಿಯ ಪ್ರಯೋಜನಕ್ಕೆ ಕುಂದು ತರುವದು ಒಳ್ಳೆಯದಲ್ಲ. ಹಾಗೆ ಸಿದ್ಧಗೊಳಿಸಲು ಸಾಧ್ಯವಾಗುವದಾದರೆ ಪುರಾಣ ಕತೆಗಳು ಕೇವಲ ಕಟ್ಟುಕತೆಗಳೆಂದು ಸಿದ್ಧಗೊಳಿಸೋಣ. ಕಟ್ಟುಕತೆಗಳಲ್ಲಿ ಕೂಡ ಎಂತಹ ಆದರ್ಶವನ್ನು ಅದರ ಕರ್ತೃಗಳು ತುಂಬಿದ್ದರು; ಕತೆ ಕಟ್ಟುವ ಅವರ

ಜಾಣ್ಮೆ ಎಷ್ಟು ಸ್ತುತ್ಯಾರ್ಹವಾದುದು ಎಂದು ಮುಂತಾಗಿ ಎಲ್ಲ ಕಂಡುಕೊಂಡು ಸಂತೋಷ ಪಡೋಣ.

ಅದಿಲ್ಲವಾದರೆ, ಈ ಪುರಾಣಗಳ ಸತ್ಯಾಸತ್ಯತೆಯನ್ನು ಸ್ಪಷ್ಟವಾಗಿ ಕಂಡುಕೊಳ್ಳುವ ಸಾಧ್ಯತೆ ನಮಗೆ ಇಲ್ಲವೆಂದು ಒಪ್ಪಿಕೊಳ್ಳೋಣ. ಹೀಗೆ ಮಾಡುವಾಗ, ನಮಗಿಂತಲೂ ಶ್ರೇಷ್ಠರೆಂದು ನಾವು ಒಪ್ಪಿಕೊಳ್ಳಲೇಬೇಕಾಗುವ ಈ ಪುರಾಣಗಳ ಕರ್ತೃಗಳ ಮೇಲೆ ಗೌರವವಿಟ್ಟು, ಇಂತಹ ಅದ್ಭುತವಾದ ಕೃತಿಗಳನ್ನು ರಚಿಸಲು ಸಮರ್ಥರಾದ ಅವರು ಕತೆಗೆ ಆಭಾಸವನ್ನುಂಟುಮಾಡುತ್ತವೆಂದು ನಾವು ಹೇಳುವ ಅನೇಕ ಅತಿಪ್ರಕೃತಿಯ ಘಟನೆಗಳನ್ನು ಹೆಣೆಯದೆ ಕೈಬಿಡುವವರಿಂದ ಕತೆಯ ಪರಿಣಾಮ ಹೆಚ್ಚುತ್ತದೆಂದು ತಿಳಿಯಲೂ ಸಮರ್ಥರಾಗಿದ್ದರು ಎಂಬದನ್ನು ಒಪ್ಪಿಕೊಳ್ಳೋಣ. ಹೀಗಿದ್ದೂ ಅವರು ಈ ಘಟನೆಗಳನ್ನು ಸೇರಿಸಿರುವದು ಸತ್ಯಕ್ಕೆ ಅಪಚಾರ ಮಾಡಬೇಕೆಂಬದಕ್ಕಿಂತ ಹೆಚ್ಚಾಗಿ ಸತ್ಯಕ್ಕೆ ಅಪಚಾರ ಮಾಡಬಾರದೆಂಬದಕ್ಕೆ ಇರಬೇಕು ಎಂದು ಊಹಿಸಿಕೊಂಡು ಅವರನ್ನು ಗೌರವಿಸೋಣ.

ರಮಾ, ಅಂದಿಗೂ ಇಂದಿಗೂ ಇರುವ ವಿಶೇಷವಾದ ಬದಲಾವಣೆಯನ್ನು ನಾವು ಗಮನಿಸಬೇಕು. ಅಂದಿನ ವಿದ್ಯಾರ್ಜನೆಗೂ ಇಂದಿನದಕ್ಕೂ ವ್ಯತ್ಯಾಸವಿದೆ. ಇಂದು ವಿದ್ಯಾರ್ಜನೆಯ ಗುರಿ ಪ್ರಧಾನವಾಗಿ ಧನಾರ್ಜನೆಯಾಗಿಬಿಟ್ಟಿದೆ. ಅಂದಿನ ವಿದ್ಯಾರ್ಜನೆ, ಅದೇ ಒಂದು ತಪಸ್ಸಿನಂತಿತ್ತು, ವ್ರತದಂತಿತ್ತು. ಹಾಗೆಯೇ ಇಂದಿನ ಸಾಹಿತ್ಯ ರಚನೆಗೂ ಅಂದಿನದಕ್ಕೂ ವ್ಯತ್ಯಾಸವಿದೆ. ಇಂದು ಸಾಹಿತ್ಯ ರಚನೆಗೆ ಬೇರೆ ಕಾರಣಗಳಿದ್ದರೂ ಕೂಡ ಅದರ ಜೊತೆಗೆ ಪ್ರಸಿದ್ಧಿಯ ಬಯಕೆಯೂ ಆದಾಯದ ಬಯಕೆಯೂ ಅನಿವಾರ್ಯವಾಗಿ ಸೇರಿಕೊಳ್ಳುವಂತಾಗಿದೆ. ವೇದವ್ಯಾಸರು ಬರೆಯುವ ಕಾಲದಲ್ಲಿ ಹೀಗಿದ್ದಿರಲು ಸಾಧ್ಯವಿಲ್ಲ. ಋಷಿ ಸಮೂಹದಲ್ಲಿ, ವಿದ್ವಜ್ಜನರ ಸಮೂಹದಲ್ಲಿ ಸಾಹಿತ್ಯ ನಿರ್ಮಾಪಕನಿಗೆ ಕೀರ್ತಿ ಲಭಿಸುತ್ತಿತ್ತು ಎಂದು ನಾವು ಕಲ್ಪಿಸಿಕೊಳ್ಳಬಹುದಾದರೂ – ಅದೇ ಕಾರಣದಿಂದಾಗಿ ಅಂತಹ ಕೃತಿಗಳಲ್ಲಿ ಅಸಮಂಜಸತೆ ಸೇರಿದ್ದಿರಲು ಸಾಧ್ಯವಿರಲಿಲ್ಲ ಎಂಬದನ್ನೂ ನಾವು ಒಪ್ಪಬೇಕಾಗುತ್ತದೆ. ಕಾಡಿನಲ್ಲಿ ಕುಳಿತುಕೊಂಡು, ಸರ್ವಸ್ವವನ್ನೂ ತೊರೆದು, ವೇದಗಳನ್ನೇ ನಾಲ್ಕು ಭಾಗಗಳನ್ನಾಗಿ ವಿಂಗಡಿಸುವಷ್ಟು ಪ್ರಾಜ್ಞನಾಗಿದ್ದ ವ್ಯಾಸರು ಮಹಾಭಾರತದ ರಚನೆಯಿಂದ ಏನನ್ನು ಪಡೆಯಲು ಬಯಸಿದ್ದಿರಬಹುದು ? ಅವರು ಇದರ ರಚನೆಯಿಂದ ಕಾವ್ಯದ ರಸಾನಂದವನ್ನು ಪಡೆಯಲು ಹವಣಿಸಿರಲಿಕ್ಕಿಲ್ಲ. ಬ್ರಹ್ಮಾನಂದವನ್ನು ಪಡೆದಿರುವ ತಪಸ್ವಿ, ಯೋಗಿ, ಸಾಮಾನ್ಯ ಮನುಷ್ಯನ ಯೋಗವೆಂದು ಹೇಳಲ್ಪಡುವ ಕೇವಲ ಒಂದು ಕಾವ್ಯವನ್ನು ರಚಿಸಿ ಕಾವ್ಯಾನಂದವನ್ನು ಪಡೆಯಲು ಬಯಸಿರಬಹುದೆಂದು

ಸಂಭೋಣವೆ? ಕಾವ್ಯವೆಂದಲ್ಲವಾದರೆ ಮಹಾಭಾರತವನ್ನು ಒಂದು ನೀತಿ ಗ್ರಂಥವೆಂದು ಅವರು ಬರೆದಿರಬಹುದೆ? ಇಲ್ಲ, ಮಹಾಭಾರತ ಕತೆ ಗೊತ್ತಿರುವ ಯಾರಿಗೇ ಆದರೂ ತಿಳಿಯುತ್ತದೆ, ಅದನ್ನು ಇನ್ನೂ ಹೆಚ್ಚು ಉತ್ತಮವಾದ ನೀತಿ ಯುತ ಘಟನೆಗಳಿಂದ ಹೆಣೆಯಬಹುದಿತ್ತು ಎಂಬದು.

ಮಹಾಭಾರತ ಕತೆಯಲ್ಲಿ ಅದರ ಕರ್ತೃವು ಸತ್ಯಕ್ಕೆ ಅಪಚಾರ ಮಾಡಲು ಒಪ್ಪಲಿಲ್ಲ ಎಂಬದಕ್ಕೆ ಆದರಿಂದಲೇ ಕೆಲವು ಉದಾಹರಣೆಗಳನ್ನು ಕೊಡುತ್ತೇನೆ ನೋಡು.

ಶಿಶುಪಾಲ ದಂತವಕ್ರರು ರಾವಣ ಕುಂಭಕರ್ಣರ ಮರು ಅವತಾರವೆಂಬ ಉಲ್ಲೇಖವಿದೆ. ಶಿಶುಪಾಲನೇನೋ ತಾನು ರಾವಣನ ಅವತಾರವೆಂಬದಕ್ಕೆ ತಕ್ಕಂತೆ ಸಾಕಷ್ಟು ದುರಹಂಕಾರವನ್ನು ಪ್ರದರ್ಶಿಸುತ್ತಾನೆ. ಆದರೆ ದಂತವಕ್ರನೆಂಬವನ ಹೆಸರು ಮಾತ್ರ ಕೇಳಿ ಬರುತ್ತದೆಯೇ ಹೊರತು, ತಾನು ಕುಂಭಕರ್ಣನ ಅವತಾರ ವೆಂಬದಕ್ಕೆ ಅವನು ಅಪಚಾರ ಮಾಡುವಂತೆ ಅನುಲ್ಲೇಖನೀಯನಾಗಿಯೇ ಇದ್ದು ಕೊಳ್ಳಲ್ಪಡುತ್ತಾನೆ. ಕೃಷ್ಣ ವಿರೋಧಿಗಳಾದ ಇವರ ವರ್ಗಕ್ಕೇ ಸೇರಿದವನು ಜರಾಸಂಧ ಎಂಬವನು. ಇವನು ದುಷ್ಟನಾಗಿದ್ದಷ್ಟೇ ಬಲಶಾಲಿಯೂ ಆಗಿದ್ದನು. ಕತೆಯನ್ನು ಹೆಚ್ಚು ಸ್ವಾರಸ್ಯಕರವಾದುದನ್ನಾಗಿ ಮಾಡುವ ಉದ್ದೇಶವು ವ್ಯಾಸರಿಗಿ ದ್ದಿದ್ದರೆ ಅವರು ಶಿಶುಪಾಲ ದಂತವಕ್ರರು ರಾವಣ ಕುಂಭಕರ್ಣರ ಮರು ಅವ ತಾರದ ಅಣ್ಣ ತಮ್ಮಂದಿರು ಎಂದು ಬರೆಯುವದರ ಬದಲು ಜರಾಸಂಧ ಶಿಶು ಪಾಲರು ಆ ಅಣ್ಣ ತಮ್ಮಂದಿರು ಎಂದು ಬರೆಯಬಹುದಿತ್ತು. ಅವರು ಹಾಗೆ ಬರೆದಿದ್ದರೆ "ನೀವೇಕೆ ಹಾಗೆ ಬರೆದಿರಿ?" ಎಂದು ನಾವು ಅವರನ್ನು ಕೇಳು ವಂತೇನೂ ಇರಲಿಲ್ಲ. ಅಲ್ಲವೆ?

ಇನ್ನೊಂದು. ಕೌರವರ ಕಡೆ ಹನ್ನೊಂದು ಅಕ್ಷೌಹಿಣೀ ಸೈನ್ಯ, ಪಾಂಡವರ ಕಡೆ ಏಳು ಅಕ್ಷೌಹಿಣಿ. ಕೌರವರ ಕಡೆ ಭೀಷ್ಮ, ದ್ರೋಣ, ಕರ್ಣ, ಕೃಪ, ಅಶ್ವತ್ಥಾಮ, ಶಲ್ಯ ಮೊದಲಾದ ಪ್ರಚಂಡ ವೀರರು. ಪಾಂಡವರ ಕಡೆ ಭೀಮಾರ್ಜುನರಿಬ್ಬರೇ ಹೆಸರು ಹೊತ್ತ ವೀರರು. ಭೀಷ್ಮಾಚಾರ್ಯನು ಆದರ್ಶ ವ್ಯಕ್ತಿ. ದೈವಭಕ್ತ. ಶಾಸ್ತ್ರವೇತ್ತನಾದ ವೃದ್ಧ. ಕೃಷ್ಣನಿಂದಲೂ ಗೌರವಿ ಸಲ್ಪಡುತ್ತಿದ್ದಂತಹ ಚಾರಿತ್ರ್ಯ ಉಳ್ಳವನು. ಧರ್ಮ ಪಕ್ಷಪಾತಿ. ದ್ರೋಣನೂ ಹಾಗೆಯೆ. ರಾಜಮನೆತನಕ್ಕೇ ಧನುರ್ವಿದ್ಯಾ ಗುರು. ಬ್ರಾಹ್ಮಣ. ಧರ್ಮ ನಿಷ್ಠೆ ಯಲ್ಲಿ ಭೀಷ್ಮನ ಸಹಚರ. ಇಂತಹ ಈ ಭೀಷ್ಮ ದ್ರೋಣರಿಬ್ಬರೂ ಅಧರ್ಮಿ ಯಾದ ದುರ್ಯೋಧನನ ಪಕ್ಷ ವಹಿಸಿ ಯುದ್ಧ ಮಾಡಿದರು ಎನ್ನುವದಕ್ಕಿಂತ ಅವರು ಪಾಂಡವರ ಪಕ್ಷವನ್ನೇ ವಹಿಸಿದ್ದರು ಎಂದು ವ್ಯಾಸರು ಬರೆದಿದ್ದರೆ ಅವರು ಯಾವ ಈ ಇಬ್ಬರು ವ್ಯಕ್ತಿಗಳನ್ನು ಗೌರವಾರ್ಹರೆಂದು ಮೊದಲಿನಿಂದಲೂ ಚಿತ್ರಿ

ಸಿದ್ದರೋ ಅವರ ಗೌರವವನ್ನು ಇನ್ನೂ ಹೆಚ್ಚಿಸಿದಂತಾಗುತ್ತಿತ್ತು. ಅಧರ್ಮವು ಧರ್ಮಕ್ಕಿಂತಲೂ ಹೆಚ್ಚು ಬಲಿಷ್ಠವಾದುದಾಗಿ ಕಂಡರೂ ಕೊನೆಯಲ್ಲಿ ಅದು ಧರ್ಮದಿಂದ ನಾಶ ಮಾಡಲ್ಪಡುತ್ತದೆ ಎಂಬದನ್ನು ಚಿತ್ರಿಸಲು ಭೀಷ್ಮ, ದ್ರೋಣ ರನ್ನು ಕೌರವ ಪಕ್ಷದಲ್ಲಿ ವ್ಯಾಸರು ಸೇರಿಸಿದ್ದಾರೆ ಎನ್ನಬಹುದಾದರೂ, ಭೀಷ್ಮ ದ್ರೋಣರಿಗೆ ಈ ಒಂದು ವಿಧದ ಕಳಂಕ, ವಿನಾಶಗಳನ್ನು ತರುವವರ ಬದಲು ಅವರಿಬ್ಬರ ಗೌರವವನ್ನೂ ಹಾಗೆಯೇ ಉಳಿಸಿ ಕೌರವ ಪಕ್ಷಕ್ಕೆ ಇನ್ಯಾರಾದರೂ ಮಹಾ ಬಲಾಢ್ಯರೆನಿಸಿದ ರಾಜರುಗಳನ್ನು ಸೃಷ್ಟಿಸಿ ಸೇರಿಸಿದ್ದರೆ ನಾವು ಆಕ್ಷೇಪಣೆ ಮಾಡುವಂತಿತ್ತೆ !

ಮತ್ತೊಂದು ಘಟನೆ ಅಶ್ವತ್ಥಾಮನದು. ದ್ರೋಣನ ಮಗ. ಬ್ರಾಹ್ಮಣ. ಮಹಾ ಪರಾಕ್ರಮಿ. ದುರ್ಯೋಧನನ ನ್ಯಾಯ ಬಾಹಿರ ವರ್ತನೆಗಳಲ್ಲಿ ಪಾಲು ಗೊಳ್ಳದ ನಿಷ್ಕಳಂಕ ಚರಿತ್ರೆಯುಳ್ಳವ. ಕತೆಯ ಕೊನೆಯ ವರೆಗೂ ನಮ್ಮ ಗೌರವಾದರ ಪಡೆಯುವಂತಹ ನಡತೆಯುಳ್ಳವನು. ಆದರೆ ಅವನು ಕಟ್ಟ ಕೊನೆಯಲ್ಲಿ ಮಾಡುವ ಒಂದು ನೀಚ ಕೃತ್ಯದಿಂದಾಗಿ ತುಚ್ಛನೆನಿಸಿಕೊಳ್ಳುತ್ತಾನೆ. ಅವನ ಕೈಯಿಂದ ವ್ಯಾಸರು ಈ ಅಕಾರ್ಯವನ್ನು ಮಾಡಿಸದೆ ಉಳಿಸಿದ್ದಿದ್ದರೆ ಆ ವರೆಗೆ ಪುಷ್ಟವಾಗಿ ಬಂದ ಅಶ್ವತ್ಥಾಮನ ವ್ಯಕ್ತಿ ಚಿತ್ರಣ ಪ್ರಭಾವಯುತವಾಗಿ ಕೊನೆಗೊಳ್ಳಬಹುದಿತ್ತು. ಹೀಗೆ ಮಾಡಲು ಯಾರೂ ವ್ಯಾಸರ ಕೈ ತಡೆದಿರ ಲಿಕ್ಕಿಲ್ಲ, ಅಲ್ಲವೆ ?

ಇಂತಹ ಇನ್ನೂ ಅನೇಕ ಘಟನೆಗಳನ್ನು ಮಹಾಭಾರತದಲ್ಲಿ ಆಯ್ದು ಉದಾಹರಿಸಬಹುದು. ಇಂತಹ ಅದ್ಭುತವಾದ ಕತೆಯ ಆರಂಭದಲ್ಲಿಯೇ ಮತ್ಸ್ಯಗಂಧಿಯು ಇನ್ನೂ ಅವಿವಾಹಿತಳಾಗಿರುವಾಗ ಗರ್ಭವತಿಯಾಗಿ ಮಗು ವನ್ನು ಹಡೆದಳೆಂದೂ ಆ ಮಗು ತಾನೇ ಎಂದೂ ವ್ಯಾಸರು ತನ್ನ ಕುರಿತೇ ಬರೆದು ಕೊಳ್ಳಬೇಕಾದ ಅವಶ್ಯಕತೆ ಏನಿತ್ತು ? ಅಂಬಿಕೆ, ಅಂಬಾಲಿಕೆಯರಾಗಲಿ, ಕುಂತಿ, ಮಾದ್ರಿಯರಾಗಲಿ ಪರ ಪುರುಷರಿಂದ ಮಕ್ಕಳನ್ನು ಪಡೆದರೆಂದು ಬರೆಯುವದರ ಔಚಿತ್ಯವೇನಿತ್ತು ?

ಇದರಿಂದೆಲ್ಲ ಮಹಾಭಾರತವು ನೀತಿ ಕತೆಯೂ ಅಲ್ಲ, ಕಟ್ಟುಕತೆಯೂ ಅಲ್ಲ ಎಂದು ನಿನಗನಿಸುವದಿಲ್ಲವೆ? ಹಾಗಿಲ್ಲವಾದ ಮೇಲೆ ಅದು ಒಂದು ಇತಿಹಾಸದ ಪ್ರಾಮಾಣಿಕ ಉಲ್ಲೇಖವೆಂದು ಮಾತ್ರವೇ ನಾವು ತಿಳಿಯಬೇಕಾಗುತ್ತದೆಯಲ್ಲವೆ ?

ರಮೆ:– ಇರಲಿ. ಆದರೆ ಮಹಾಭಾರತದಲ್ಲಿ ಅನೇಕ ಪ್ರಕ್ಷಿಪ್ತ ಭಾಗಗಳಿವೆ

ಯೆಂದೂ, ಮೂಲ ಗ್ರಂಥಕ್ಕೆ ಅನಂತರ ಕೆಲವು ಭಾಗಗಳನ್ನು ಇತರರು ಸೇರಿಸಿದ್ದಾರೆಂದೂ ಹೇಳುತ್ತಾರಲ್ಲ ?

ಮುರಳಿ:– ಇದಾದರೂ ಅಷ್ಟೆ. ಪಾಶ್ಚಾತ್ಯರಿಂದ ಹಿಡಿದು ಅನೇಕ ಭಾರತೀಯ ವಿದ್ವಾಂಸರ ವರೆಗೆ ಬೇಕಷ್ಟು ಮಂದಿ ಮಹಾಭಾರತದ ಐತಿಹಾಸಿಕತೆಯನ್ನು ಕಂಡುಹಿಡಿಯುತ್ತೇವೆಂದು ಪ್ರಯತ್ನಿಸಿದ ವಿಮರ್ಶಾ ಗ್ರಂಥಗಳನ್ನು ಓದಿದ್ದೇನೆ. ಒಬ್ಬನ ವಿಮರ್ಶೆಯನ್ನು ಇನ್ನೊಬ್ಬನು ಖಂಡಿಸುವದೇ ಪ್ರತಿ ಗ್ರಂಥದಲ್ಲಿಯೂ ತುಂಬಿದೆ. ಮಹಾಭಾರತದಲ್ಲಿ ಯಾವ ಯಾವ ಭಾಗಗಳನ್ನು ತಾನು ಒಪ್ಪುತ್ತಿಲ್ಲವೋ ಆ ಭಾಗಗಳೆಲ್ಲ ಪ್ರಕ್ಷಿಪ್ತವಾದವುಗಳೆಂದು ಸಮರ್ಥಿಸಲು ಪ್ರತಿಯೊಬ್ಬ ವಿಮರ್ಶಕನೂ ಪ್ರಯತ್ನಿಸಿರುವದು ಮಾತ್ರವೇ ಕಂಡುಬರುತ್ತದೆ. ಇವರು ತೀರ್ಮಾನಗಳನ್ನು ಮೊದಲು ಸಿದ್ಧಗೊಳಿಸಿಕೊಂಡು ಅನಂತರ ಆ ತೀರ್ಮಾನಗಳಿಗೆ ಪೋಷಕವಾಗುವ ವಾದಕ್ಕೆ ಎಡೆಯನ್ನು ಮಹಾಭಾರತದ ಎಲ್ಲೆಡೆಯೂ ಹುಡುಕಿರುವದು ಹೆಚ್ಚಿನ ವಿಮರ್ಶಕರಲ್ಲಿ ಕಂಡುಬರುತ್ತದೆ. ಉದಾಹರಣೆಗೆ, ಕೆಲವು ಪಾಶ್ಚಾತ್ಯ ವಿಮರ್ಶಕರು ಮಹಾಭಾರತವು ಐತಿಹಾಸಿಕ ಗ್ರಂಥವೇ ಅಲ್ಲ ಎಂದು ಸಿದ್ಧಗೊಳಿಸಲು ಮೊದಲು ಬಯಸಿ ಅನಂತರ ತಮ್ಮ ವಾದದ ಸಮರ್ಥನೆಗೆ ಗ್ರಂಥದ ಕೆಲವು ಭಾಗಗಳನ್ನು ಎತ್ತಿಕೊಂಡು ಚರ್ಚೆ ಮಾಡಲು ಪ್ರಯತ್ನಿಸಿರುವದು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಇಲ್ಲಿ ಒಂದು ವಿಷಯವನ್ನು ನಾವು ಗಮನಿಸಬೇಕು. ಹಿಂದಿನವರು ನಮಗಿಂತಲೂ ನಮ್ಮ ಪರಂಪರೆಯ ಕುರಿತು ಹೆಚ್ಚು ನಿಷ್ಠಾವಂತರಾಗಿದ್ದವರು. ಅವರು ರಾಮಾಯಣ, ಮಹಾಭಾರತ, ಭಾಗವತ ಮೊದಲಾದವುಗಳನ್ನು ಗೌರವದಿಂದ ಮಾತ್ರವೇ ಅಲ್ಲ, ಭಕ್ತಿಯಿಂದ ಕೂಡ ಕಾಣುತ್ತಿದ್ದವರು. ಅವರು ಈ ಗ್ರಂಥಗಳಲ್ಲಿ ತಮ್ಮ ಬರವಣಿಗೆಗಳನ್ನು ಸೇರಿಸಿದರೆ ಮೂಲಕ್ಕೆ, ಮೂಲದ ಕರ್ತೃವಿಗೆ ತಾವು ಅಪಚಾರ ಮಾಡುತ್ತಿದ್ದೇವೆಂದು ನಂಬುವ ಪಾಪಭೀರುಗಳೂ ಆಗಿದ್ದರು. ಅಥವಾ ಈ ರೀತಿ ಬೇಕು ಬೇಕಾದವರು ಬೇಕುಬೇಕಾದುದನ್ನು ಸೇರಿಸುವ ಪರಿಪಾಠ ಆಗ ಇದ್ದಿದ್ದರೆ ರಾಮಾಯಣ ಮಹಾಭಾರತಗಳು ಇಂದು ಈ ಸ್ವರೂಪದಲ್ಲಿ ಇರಲೂ ಸಾಧ್ಯವಿರುತ್ತಿರಲಿಲ್ಲ. ಶತಮಾನಗಳ ಕಾಲದಿಂದ ಅವುಗಳ ಮೇಲೆ ಪಂಡಿತರೂ ಪಾಮರರೂ ಸೇರಿದಂತೆ ಈ ದೇಶದ ಎಲ್ಲ ಜನ ಅವ್ಯಾಹತವಾಗಿ ಗೌರವವನ್ನಿಟ್ಟುಕೊಂಡು ಬರಲೂ ಸಾಧ್ಯವಿರುತ್ತಿರಲಿಲ್ಲ. ಆಗಿನ ಕಾಲದಲ್ಲಿ ಮುದ್ರಣ, ಪ್ರಕಾಶನಗಳಿರಲಿಲ್ಲವೆಂದಾದರೂ ಕೂಡ ಈ ಗ್ರಂಥಗಳ ಪಠನ, ಶ್ರವಣಗಳು ಅರಮನೆಯಿಂದ ಹಿಡಿದು ಆಶ್ರಮಗಳ ವರೆಗೆ ಎಲ್ಲ ಕಡೆ ನಡೆಯುತ್ತಿತ್ತು ಎಂಬದನ್ನು ನಾವು ಮರೆಯಬಾರದು. ಹಾಗಿರುವಾಗ ಹೊಸದಾಗಿ ಸೇರಿಸಲ್ಪಡಬಹುದಾದ

ಭಾಗಗಳ ಕುರಿತು ಚರ್ಚೆಯೋ, ಆಕ್ಷೇಪವೋ, ಖಂಡನೆಯೋ ಅವಶ್ಯವಾಗಿ ನಡೆಯಲು ಸಾಧ್ಯವಿತ್ತು.

ಇಷ್ಟಾಗಿ ಕೂಡ ಪ್ರಕ್ಷಿಪ್ತವೆಂದು ನಾವು ಈ ಕೆಳಗಿನ ಕೆಲವು ಸನ್ನಿವೇಶಗಳಲ್ಲಿ ಮಾತ್ರ ಒಪ್ಪಬಹುದು. ಇಂತಹ ಸಂದರ್ಭಗಳಲ್ಲಿ ಕೂಡ ಆ ಭಾಗಗಳು ಪ್ರಕ್ಷಿಪ್ತವಾದವುಗಳೆಂದು ಕಲ್ಪಿಸಿಕೊಳ್ಳಬಹುದೇ ಹೊರತು, ಅದು ಸ್ವತಸ್ಸಿದ್ಧವಾದುದೆಂದು ಹೇಳಲು ಸಾಧ್ಯವಾಗುವದಿಲ್ಲ.

ಒಂದು. ಯಾವದೇ ಒಂದು ವಿವರಣೆಯು ಮಹಾಭಾರತ ಗ್ರಂಥದ ಇತರ ಹಲವೆಡೆಗಳಲ್ಲಿ ಬಂದಿರುವ ಅಂತಹದೇ ವಿವರಣೆಗೆ ಸರಿ ವಿರೋಧವಾಗಿದ್ದರೆ. ಉದಾಹರಣೆಗೆ ದುರ್ಯೋಧನನು ಭೀಮನೊಂದಿಗೆ ಸಹಬಾಳ್ವೆ ನಡೆಸಬೇಕೆಂದು ಆತ್ಮಪೂರ್ವಕವಾಗಿ ಬಯಸಿದನು ಎಂಬ ಉಲ್ಲೇಖ ಒಂದು ಕಡೆ ಬಂದರೆ, ಅವನು ಹಾಗೆ ಹೇಳಬೇಕಾದ ಸನ್ನಿವೇಶ ಏನಿತ್ತು ಎಂಬದನ್ನು ವಿವರಿಸಲು ಯಾವದೇ ಆಧಾರ ದೊರಕದೆ ಹೋದರೆ ಅದನ್ನು ಪ್ರಕ್ಷಿಪ್ತವೆಂದು ಹೇಳಿದರೂ ಅದನ್ನು ಒಪ್ಪಿಕೊಳ್ಳಲೇಬೇಕಿಲ್ಲವಾದರೂ ಸಹಿಸಿಕೊಳ್ಳಬಹುದು.

ಎರಡು. ಕೆಲವು ಉಪಾಖ್ಯಾನಗಳು ಮಹಾಭಾರತ ಮೂಲ ಕತೆಗೆ ಯಾವದೇ ವಿಧದ ಸಂಬಂಧವಿಲ್ಲದೆ ಯಾವದೋ ಒಂದು ವ್ಯಕ್ತಿ ಏನೋ ಒಂದು ಸನ್ನಿವೇಶದಲ್ಲಿ ಆ ಸನ್ನಿವೇಶಕ್ಕೆ ಉದಾಹರಣೆ ಕೊಡುವ ನೆವದಲ್ಲಿ ಬೇರೆ ಯಾವದೋ ಒಂದು ಕತೆಯನ್ನು ಹೇಳಿತು ಎಂಬದು ಬೇಕಿದ್ದರೆ ಪ್ರಕ್ಷಿಪ್ತ ಎನ್ನಬಹುದು. ಆದರೆ ಅಂತಹ ಉಪಾಖ್ಯಾನದ ಐತಿಹಾಸಿಕತೆಯನ್ನು ನಾವು ಚರ್ಚಿಸಬೇಕಾಗಿಲ್ಲವಾದುದರಿಂದ ಅದು ಪ್ರಕ್ಷಿಪ್ತವಾಗಿರಲಿ, ಇಲ್ಲದಿರಲಿ ಮೂಲ ಕತೆಯಲ್ಲಿ ವ್ಯತ್ಯಾಸವೇನೂ ಆಗುವದಿಲ್ಲ.

ಮೂರು. ನೀತಿ, ತತ್ವಗಳನ್ನು ಉಪದೇಶ ಮಾಡಿರುವ ಸಂದರ್ಭಗಳಲ್ಲಿ ಆ ಪೈಕಿ ಕೆಲವಂಶವನ್ನಾದರೂ ಅನಂತರ ಯಾರಾದರೂ ಸೇರಿಸಿರಬಹುದು ಎಂದು ಬೇಕಿದ್ದರೆ ಹೇಳಬಹುದು. ಅದು ಹೇಗಾದರೂ ಮೂಲ ಕತೆಗೆ ಮತ್ತು ಅದರ ಐತಿಹಾಸಿಕತೆಗೆ ಕುಂದು ತರುವದಿಲ್ಲವೆಂಬದರಿಂದಾಗಿ ಯಾರಾದರೂ ತಾವು ವ್ಯಾಸರಿಗೆ ಅಪಚಾರ ಮಾಡದೆ, ತಮಗೆ ತಿಳಿದಿರುವ ನೀತಿ ತತ್ವಗಳನ್ನು ತಾವು ಹೇಳಿದೆವೆಂದಾದರೆ ಲೋಕವು ಗೌರವಿಸಲಾರದೆಂದು ಭಾವಿಸಿ ವ್ಯಾಸರ ಗ್ರಂಥದಲ್ಲಿ ಅದನ್ನು ಸೇರಿಸಿ ಲೋಕ ಹಿತವನ್ನು ಬಯಸಿದ್ದರೂ ಇರಬಹುದು.

ಇಷ್ಟೇ ಹೊರತು ಇಂದು ನಮಗೆ ಲಭ್ಯವಾಗಿದ್ದು ಸಾರ್ವತ್ರಿಕವಾಗಿ ಒಪ್ಪಲ್ಪಟ್ಟಿರುವ ಮಹಾಭಾರತ ಕತೆಯು ಅದರ ಪ್ರತಿಯೊಂದು ಅಂಶದಲ್ಲಿ, ಪ್ರತಿಯೊಂದು

ವಿವರಣೆಯಲ್ಲಿ ನೂರಕ್ಕೆ ನೂರರಷ್ಟು ಐತಿಹಾಸಿಕವಾಗಿದೆಯೆಂದು ನಂಬಿಕೊಳ್ಳುವದೇ ವಿಹಿತ ಎಂದು ನನಗನಿಸುತ್ತದೆ.

ರಮೆ:– ಏನೋಪ್ಪ, ನನಗೊಂದೂ ಅರ್ಥವಾಗುವದಿಲ್ಲ. ನೀವು ವಾದಿಸುವ ರಭಸಕ್ಕೆ ಸಿಕ್ಕಿ ಸ್ವಾಸ್ಥ್ಯವನ್ನು ಕಳೆದುಕೊಂಡಾಗ ನೀವು ಹೇಳುವದೇ ಸರಿ ಎನಿಸುತ್ತದೆ. ಫಕ್ಕನೆ ನೋಡುವಾಗ ಸುಳ್ಳು ಎನಿಸುತ್ತದೆ. ಯಾವದು ಸರಿಯೊ !

ಮುರಳಿ:– ಅದು ಅಸಹಜವೇನೂ ಅಲ್ಲ. ಖಗೋಳ ಶಾಸ್ತ್ರಜ್ಞನು ವಿವರಣೆ ನೀಡುವಾಗ ಭೂಮಿಯೇ ಸೂರ್ಯನ ಸುತ್ತಲೂ ತಿರುಗುವದು ಹೌದೆಂದು ಅನಿಸುತ್ತದೆ. ಅನಂತರ "ಫಕ್ಕನೆ ನೋಡುವಾಗ" ಸೂರ್ಯನೇ ನಮ್ಮ ಸುತ್ತಲೂ ಸುತ್ತುತ್ತಿರುವಂತೆ ಕಾಣಿಸುತ್ತದೆ. ಕೊಟ್ಟ ಮಾತನ್ನು ಪಾಲಿಸಬೇಕೆನ್ನುವ ನಿಷ್ಠೆ ಇಲ್ಲದವರಿಗೆ ಸತ್ಯವು ಅಸತ್ಯವಾಗಿ ಕಾಣಿಸುವದರಲ್ಲಿ ಆಶ್ಚರ್ಯವೇನಿದೆ ?

ರಮೆ:– ಇದೇನು, ಇದೊಂದು ಹೊಸ ಪಟ್ಟು ?

ಮುರಳಿ:– ಅದೇ ಹೇಳಿದ್ದು. ಮರೆಯುವವರಿಗೆ ಹಳೆಯದೆಲ್ಲ ಹೊಸತೆ !

ರಮೆ:– ಏನಿದು ನಿಮ್ಮ ಒಗಟಿನ ಭಾಷೆ ?

ಮುರಳಿ:– ನನ್ನ ಭಾಷೆ ನಿನಗೆ ಒಗಟಾಗಿ ಕಾಣಿಸುತ್ತಿದೆಯೆಂದಾದರೆ, ನಿನ್ನ ವರ್ತನೆಯೇ ನಿನಗೆ ಒಗಟಾಗಿ ಪರಿಣಮಿಸಿದೆ ಎಂದು ಅರ್ಥ.

ರಮೆ:– ನೀವು ನೇರವಾಗಿ ಮಾತನಾಡುವದಿದ್ದರೆ ಆಡಿ. ನಾನು ಮರೆತಿದ್ದೇನಂತೆ, ನನ್ನ ವರ್ತನೆ ಒಗಟಂತೆ....ನಿಮಗೆ ನಾನು ಈಗ ಏನು ಮಾಡಿದೆ ಅಂತ ?

ಮುರಳಿ:– ಮಾಡಿದೆ ಅಂತ ಅಲ್ಲ. ಮಾಡಲಿಲ್ಲ ಅಂತ.

ರಮೆ:– ಏನು ಮಾಡದಿರುವದು ? ಮಾಡಬೇಕಾದುವನ್ನು ಬಿಟ್ಟಿರುವದೇನು? ನಿಮಗೆ ಪೂಜೆ ಮಾಡಬೇಕಾಗಿತ್ತೇನು ?

ಮುರಳಿ:– ನನಗಲ್ಲ. ನಿನ್ನ ಮಾತಿಗೇ ನೀನು ಪೂಜೆ ಮಾಡಬೇಕಾಗಿತ್ತು.

ರಮೆ:– ಅದೆಂಥಾ ನನ್ನ ಮಾತು ? ನಿಮ್ಮದಿದು ಅದೆಂಥಾ ಮಾತು? ಮಾತು, ಮಾತು. ತನ್ನ ಮಾತನ್ನೇ ಹುಚ್ಚು ಹುಚ್ಚಾಗಿ ಆಡಿಕೊಂಡು ನನ್ನ ಮಾತು, ಮಾತು ಅಂತ ಹೇಳುತ್ತಾರೆ. ಸುಮ್ಮನೆ ಜೀಡದ ಮಾತಾಡುವದನ್ನು ಬಿಟ್ಟು....

ಮುರಳಿ:– ನಾನು ಜೇಡದ ಮಾತಾಡುವದಿಲ್ಲ. ನೀನು ಆಡಿದ ಮಾತನ್ನು ಮಾತ್ರ....

ರಮೆ:– ಏನದು ನಾನಾಡಿದ ಮಾತು, ನೇರವಾಗಿ ಹೇಳಬಾರದೆ ?

ಮುರಳಿ:– ನೀನು ಸ್ವಲ್ಪ ಹಿಂದೆ ನನಗೇನು ಮಾತು ಕೊಟ್ಟಿದ್ದೆ ?

ರಮೆ:– ಮಾತು ? ನಿಮಗೆ ? ನನಗೇನೂ ನೆನಪಾಗುವದಿಲ್ಲವಲ್ಲ ?

ಮುರಳಿ:– ಇಲ್ಲ ? ನಾನು ಕತೆ ಹೇಳುವಾಗ ಮಧ್ಯೆ ಮಧ್ಯೆ ಅನ್ನದಲ್ಲಿ ಕಲ್ಲು ಸಿಕ್ಕುವಂತೆ "ಅದು ಸುಳ್ಳು; ಇದು ಅಸಂಭವ; ವ್ಯಾಸರು ನನ್ನಲ್ಲಿ ಕೇಳಿದ್ದರೆ ಸರಿಯಾಗಿ ಬರೆಯಲು ಹೇಳಿಕೊಡುತ್ತಿದ್ದೆ" ಅಂತ ಎಲ್ಲ ನೀನು ಕೊಕ್ಕೆಯ ಮಾತನ್ನು ಇನ್ನು ಮುಂದೆ ಆಡುವದಿಲ್ಲವೆಂದು ಹೇಳಿರಲಿಲ್ಲ ?

ರಮೆ:– ಅಯ್ಯೋ, ಇಷ್ಟೇ ತಾನೆ !

ಮುರಳಿ:– ಅಷ್ಟೇನಾ ? ಅದಕ್ಕೆ ತಪ್ಪಿದರೆ....?

ರಮೆ:– ತಪ್ಪಿದರೆ ಏನು ?

ಮುರಳಿ:– ತಪ್ಪಿದರೆ ನಾನು ಕೇಳಿದುದನ್ನು ಕೊಡುತ್ತೇನೆ ಎಂದು ಹೇಳಿರಲಿಲ್ಲ ?

ರಮೆ:– ಹೇಳಿರಬಹುದು.

ಮುರಳಿ:– ಬಹುದು ! ಹೇಳಿದ್ದು ನೆನಪಿಲ್ಲ ?

ರಮೆ:– ಹೇಳಿದ್ದೇನೆಂದೇ ಇಟ್ಟುಕೊಳ್ಳಿ.

ಮುರಳಿ:– ನಾನು ಇಟ್ಟುಕೊಳ್ಳಬೇಕು. ನೀನು ಮುಟ್ಟಿ ತೋರಿಸುವದಿಲ್ಲ!

ರಮೆ:– ಒಳ್ಳೇ ಗ್ರಹಚಾರವಪ್ಪ ಇದು. ಆಯಿತು ಹೇಳಿದ್ದೇನೆ, ಹೇಳಿದ್ದೇನೆ. ಅದಕ್ಕೆ ಏನೀಗ ?

ಮುರಳಿ:– ಏನು "ಹೇಳಿದ್ದೇನೆ" ಅಂತ ?

ರಮೆ:– ಏನೋ ಹೇಳಿದಿರಲ್ಲ ?

ಮುರಳಿ:– ಏನೋ ! ಅಲ್ಲ ?

ರಮೆ:– ಥೂ. ಸಾಕಪ್ಪ ಇದು.

ಮುರಳಿ:– ಬೇಡ, ಬಿಡು. ಏನೂ ಹೇಳಿಯೇ ಇಲ್ಲ ಅಂದು ಬಿಡು.

ರಮೆ :– ಅಯ್ಯೋ ದೇವರೇ. ಹೇಳಿದ್ದೇನೆ ಅಂದೆನಲ್ಲಪ್ಪ !

ಮುರಳಿ :– ಏನು "ಹೇಳಿದ್ದೇನೆ" ಅಂತ ಹೇಳಿಬಿಡಪ್ಪ.

ರಮೆ:– ಇನ್ನು ನಿಮಗೆ ಎದುರಾಡುವದಿಲ್ಲ. ನೀವು ಹೇಳಿದುದನ್ನು ಗೂಬೆ

ಯಂತೆ ಕೇಳುತ್ತಾ ಕುಳಿತಿರುತ್ತೇನೆ. ಇದಕ್ಕೆ ತಪ್ಪಿದರೆ ನೀವು ಮಾಡುವ ಪ್ರಾಯಶ್ಚಿತ್ತವನ್ನು ಹೊಂದಿಕೊಳ್ಳುತ್ತೇನೆ....ಅಂತ ಎಲ್ಲ. ಸಂತೋಷವಾಯಿತಾ ?

ಮುರಳಿ :– ಇಲ್ಲ.

ರಮೆ:– ಆಗದಿದ್ದರೆ ಅಷ್ಟೇ ಹೋಯಿತು.

ಮುರಳಿ:– ಕತೆ ಕೇಳುವಾಗ ನಡುನಡುವೆ........

ರಮೆ:– ವೇದವ್ಯಾಸರನ್ನು ತಿದ್ದುವದಕ್ಕೆ ಹೋಗುವದಿಲ್ಲ........

ಮುರಳಿ:– ಆಗಿನ ಕಾಲದ ಸಂದರ್ಭ ಸನ್ನಿವೇಶಗಳನ್ನು ಊಹಿಸಿಕೊಂಡು ಘಟನೆಗಳನ್ನೆಲ್ಲ ಅಳೆಯಲು ಪ್ರಯತ್ನಿಸುತ್ತೇನೆ. ಇದಕ್ಕೆ ತಪ್ಪಿದರೆ........

ರಮೆ:– ನೀವು ಕೊಡುವ ಶಿಕ್ಷೆಯನ್ನು........

ಮುರಳಿ:– ....ಅಲ್ಲ. ನೀವು ಕೇಳಿದುದನ್ನು ಕೊಡುತ್ತೇನೆ.

ರಮೆ:– ಆಗಲಿ. ನೀವು ಕೇಳಿದುದನ್ನು ಕೊಡುತ್ತೇನೆ........

ಮುರಳಿ:– ಎಂದು ನೀನು ಹೇಳಿದ್ದು ಉಂಟೊ ?

ರಮೆ:– ಇರಬಹುದು....ತಪ್ಪು, ತಪ್ಪು. ಇರಬಹುದು ಅಲ್ಲ. ಹೇಳಿದ್ದೇನೆ. ಸ್ಪಷ್ಟವಾಗಿ ಹೇಳಿದ್ದೇನೆ.

ಮುರಳಿ:– ಆ ಮಾತಿಗೆ ನೀನು ತಪ್ಪಿದ್ದುಂಟೊ ?

ರಮೆ:– ಇರಬಹುದು. ಅಲ್ಲ, ಅಲ್ಲ, ತಪ್ಪಿದ್ದೇನೆ.

ಮುರಳಿ :– ಆದುದರಿಂದ ನಾನು ಕೇಳುವದನ್ನು ಕೊಡಲು ನೀನು ಬಾಧ್ಯಸ್ಥಳಾಗಿರುವದು ನಿಜವೊ ?

ರಮೆ:– ನಿಜ, ನಿಜ. ಖಂಡಿತ ನಿಜ.

ಮುರಳಿ :– ಹಾಗಾದರೆ ನಾನು ಕೇಳಬಹುದೊ ?

ರಮೆ:– ಕೇಳಿ. ಏನು ?

ಮುರಳಿ:– ...........

ರಮೆ :– ಎಷ್ಟು ಸಾಕು ಮಾಡುತ್ತೀರೋ ಅಷ್ಟೇ ಬೇಕು ಅನ್ನಿಸುತ್ತೀರಿ ನೀವು........ಈಗಲಾದರೂ ಕತೆ ಮುಂದುವರಿಸಬಹುದು ತಾನೆ ?

ಮುರಳಿ:– ಖಂಡಿತ. ಕೇಳು. ಕೌರವ ಪಾಂಡವರಲ್ಲಿ ಈ ರೀತಿಯಾಗಿ ಬೆಳೆಯುತ್ತಿದ್ದ ಪರಸ್ಪರ ದ್ವೇಷವನ್ನು ಗಮನಿಸಿದ ಹಿರಿಯರು "ಇಂದಿನ ಮಕ್ಕ

ಳಾಟದ ಮಹಮೂಟ ಮುಂದಿದೆ. ಕೌರವ ಪಾಂಡವರು ವಿರುದ್ಧ ಧ್ರುವಗಳಿರುವಂತೆಯೇ" ಎಂಬ ನಿಶ್ಚಯಕ್ಕೆ ಬಂದರು.

ಹೀಗಿರುವಾಗ ಅಯೋನಿಜನಾದ ಕೃಪಾಚಾರ್ಯನೆಂಬವನು........

ರಮೆ:– ಎಂಥಾ ನಿಜ ?

ಮುರಳಿ:– ಎಂಥಾ ನಿಜ ಅಲ್ಲ, ಅಯೋನಿಜ. ಅಯೋನಿಜ ಎಂದರೆ ಸ್ತ್ರೀಯ ಗರ್ಭದಲ್ಲಿ ಜನಿಸಿದವನಲ್ಲ ಎಂದರ್ಥ.

ರಮೆ:– ಅಂದರೆ ಗಂಡಸೇ ಅವನನ್ನು ಹೆತ್ತುದು ಅಂತಲೊ ?

ಮುರಳಿ:– ಹೆತ್ತುದಲ್ಲ. ಪುರುಷ ವೀರ್ಯದಿಂದ ಸ್ತ್ರೀ ಗರ್ಭದ ಸಹಾಯವಿಲ್ಲದೆ ಹುಟ್ಟಿದವನು ಅಂತ.

ರಮೆ:– ಓಹೋ. ಟೆಸ್ಟ್ ಟ್ಯೂಬ್ ಬೇಬಿ–ಪ್ರಯೋಗ ನಳಿಗೆಯಲ್ಲಿ ಹುಟ್ಟಿದ ಮಗು !

ಮುರಳಿ:– ಕತೆ ಕೇಳುತ್ತೀಯೋ ಅಥವಾ ಕಾಡುಹರಟೆ ಹರಟುತ್ತೀಯೋ ?

ರಮೆ:– ನಾನೇನೂ ವೇದವ್ಯಾಸರನ್ನು ದೂರಲಿಲ್ಲಾಪ್ಪ ಸಧ್ಯ. ಏನು, ಹೇಗೆ ಅಂತ ತಿಳಿದುಕೊಂಡೆ, ಅಷ್ಟೆ. ಅದೂ ಮಾಡಬಾರದೇನು ?

ಮುರಳಿ:– ಮಾಡು, ಮಾಡು. ಕೃಪಾಚಾರ್ಯರು ವಿದ್ಯಾಗುರುವಾದರು. ಭಾರದ್ವಾಜನಿಂದ ಜನಿಸಿದ ಅಯೋನಿಜನಾದ ದ್ರೋಣ ಎಂಬವರು ಕೃಪಾಚಾರ್ಯನ ತಂಗಿಯಾದ ಕೃಪೆ ಎಂಬವಳಲ್ಲಿ ಅಶ್ವತ್ಥಾಮ ಎಂಬ ಮಗನನ್ನು ಪಡೆದಿದ್ದು ಈ ರಾಜಕುಮಾರರಿಗೆ ಧನುರ್ವಿದ್ಯೆಯನ್ನು ಕಲಿಸಲು ನೇಮಕಗೊಂಡರು. ಬಾಲಕರು ಎಲ್ಲ ಆಯುಧಗಳಲ್ಲಿಯೂ ಶಿಕ್ಷಣ ಪಡೆಯುತ್ತಿದ್ದರು. ಈ ಪೈಕಿ ಬಿಲ್ಲು ಯುದ್ಧದಲ್ಲಿ ಕರ್ಣಾರ್ಜುನರೂ, ಗದಾಯುದ್ಧದಲ್ಲಿ ಭೀಮ ದುರ್ಯೋಧನರೂ ನಿಷ್ಣಾತರಾದರು.

ರಮೆ:– ಯಾವ ಕರ್ಣ ? ಕುಂತಿಯ ಮಗ ತಾನೆ ?

ಮುರಳಿ:– ಹೌದು. ಆದರೆ ಅವನು ಬೆಸ್ತನ ಮಗನೆಂದೇ ಎಲ್ಲರೂ ತಿಳಿದಿದ್ದರು. ಬಿಲ್ಲು ವಿದ್ಯೆಯಲ್ಲಿ ಕರ್ಣ, ಅರ್ಜುನ–ಈ ಇಬ್ಬರೂ ಸಮಾನವಾದ ಉತ್ಕೃಷ್ಟತೆಯನ್ನು ಪಡೆದಿದ್ದರೂ ಕೂಡ ಅರ್ಜುನನು ದ್ರೋಣರಿಗೆ ಬಹಳ ಮೆಚ್ಚುಗೆಯ ಶಿಷ್ಯನೆನಿಸಿಕೊಂಡನು. ಅಂದಿನ ಸದಾಚಾರ ಪದ್ಧತಿಗೆ ಕಟ್ಟುಬಿದ್ದ ದ್ರೋಣರು ಕರ್ಣನು ಬೆಸ್ತರ ಮಗನೆಂದೂ ಕುಲವಿಹೀನನೆಂದೂ ಅವನನ್ನು ಪರಿಗಣಿಸಿ ತನ್ನ ಕೀರ್ತಿಯನ್ನು ಹರಡಲು ಅರ್ಜುನನೇ ಸಮರ್ಥನೆಂದು ಭಾವಿಸಿ ಅವನಿಗೆ ಅತ್ಯಂತ ಗೂಢವಾದ ಮಂತ್ರಾಸ್ತ್ರಗಳನ್ನು ಉಪದೇಶಿಸಿದರು.

ಎಲ್ಲರಿಗೂ ಅಸ್ತ್ರ ವಿದ್ಯಾಭ್ಯಾಸ ಮುಗಿದ ಮೇಲೆ ಭೀಷ್ಮನು ದ್ರೋಣನ ಇಚ್ಛೆಯಂತೆ ಒಂದು ಯುದ್ಧವಿದ್ಯಾ ಪ್ರಯೋಗದ ಪ್ರದರ್ಶನ ಭವನವನ್ನು ಕಟ್ಟಿಸಿದನು. ಒಳ್ಳೆಯ ದಿನವನ್ನು ಗೊತ್ತುಮಾಡಿ ಅಂದಿಗೆ ಅನೇಕ ರಾಜರುಗಳನ್ನು ಆಹ್ವಾನಿಸಲಾಗಿತ್ತು. ಪ್ರದರ್ಶನಾಲಯವು ತುಂಬಿದ್ದರೂ ನಿಶ್ಯಬ್ದವಾಗಿತ್ತು. ಆಗ, ತನ್ನ ಒಂದು ಭಾಗದಲ್ಲಿ ತನ್ನ ನೂರು ಮಂದಿ ತಮ್ಮಂದಿರೊಡಗೂಡಿದ ದುರ್ಯೋಧನನೂ, ಇನ್ನೊಂದು ಭಾಗದಲ್ಲಿ ನಾಲ್ವರು ಸೋದರರಿಂದೊಡಗೂಡಿದ ಯುಧಿಷ್ಠಿರನೂ, ಹಿಂಭಾಗದಲ್ಲಿ ಮಗನೂ, ಕೃಪಾಚಾರ್ಯನೂ ಬರುತ್ತಿರಲು ಹೆಮ್ಮೆಯ ಗುರು ದ್ರೋಣಾಚಾರ್ಯನು ಪ್ರವೇಶಿಸಿದನು. ಮೊದಲು ಯುಧಿಷ್ಠಿರನು ತನ್ನ ವಿದ್ಯಾ ಪ್ರದರ್ಶನವನ್ನು ಸಮರ್ಪಕವಾಗಿ ಮಾಡಿ ಮುಗಿಸಿದನು. ಅನಂತರ ಬೇರೆ ಬೇರೆಯವರದೂ ನಡೆಯಿತು. ಆಮೇಲೆ ದುರ್ಯೋಧನನೂ ಅತಿ ವಿಚಕ್ಷಣತೆಯಿಂದ ತನ್ನ ಕೌಶಲ್ಯವನ್ನು ತೋರಿಸಿದನು. ಇವನ ಅನಂತರ ಭೀಮನು ದುರ್ಯೋಧನನ ಕೌಶಲ್ಯವನ್ನು ಮೀರುವಂತೆ ಬೇರೆ ಬೇರೆ ಆಯುಧಗಳಲ್ಲಿ ತನ್ನ ಪರಿಣತೆಯನ್ನು ತೋರಿಸಿ ಸಭಿಕರನ್ನು ತಲೆದೂಗಿಸಿದನು. ಅವನ ಯೌವನದ ಕೆಚ್ಚು, ದುರ್ಯೋಧನನ ಮೇಲಿದ್ದ ಕಿಚ್ಚು, ದುರ್ಯೋಧನನನ್ನು ದ್ವಂದ್ವಕ್ಕೆ ಆಹ್ವಾನಿಸಿತು.

ರಮೆ:– ಅಧಿಕ ಪ್ರಸಂಗ !

ಮುರಳಿ:– ಪ್ರಸಂಗ, ಅಷ್ಟೆ. ಅಧಿಕ ಎನ್ನಬೇಕಾಗಿಲ್ಲ. ಪ್ರಾಯದ ಹುಮ್ಮಸ್ಸು. ಸ್ವಬಲದಲ್ಲಿ ನಂಬಿಕೆ. ಕೈಲಾಗದ ಬಡಪಾಯಿಯನ್ನು ಅವನು ಕರೆದುದಲ್ಲವಷ್ಟೆ? ಸ್ವಲ್ಪ ಹಿಂದೆ ತನಗೆ ಸಮಾನವಾಗಿ ಯುದ್ಧ ಪ್ರೌಢಿಮೆಯನ್ನು ಪ್ರದರ್ಶಿಸಿದ ವೀರನನ್ನಲ್ಲವೆ ಅವನು ಕೆಣಕಿದುದು? ಪುಕ್ಕಲು ಹೆಣ್ಣಿಗೆ ಅದು ಅಧಿಕ ಪ್ರಸಂಗವೆಂದು ಕಾಣಿಸಿದರೂ ಅದು ಕ್ಷತ್ರಿಯೋಚಿತವಾದ ಕೆಚ್ಚು.

ರಮೆ:– ಕೆಚ್ಚೋ, ಕಿಚ್ಚೋ. ಮುಂದೆ ಹೇಳಿ

ಮುರಳಿ–: ಧುರ್ಯೋಧನನೂ ಇವನ ಆಹ್ವಾನವನ್ನು ಸ್ವೀಕರಿಸಿ ಮುಂದೆ ಬಂದನು. ಇಬ್ಬರೂ ಗದಾಯುಧಗಳನ್ನು ಹಿಡಿದು ಸಮಾನವಾಗಿ, ಚಮತ್ಕಾರಯುತವಾಗಿ ಹೊಡೆದಾಡಿದರು. ಹಾಗೆಯೇ ಬಿಟ್ಟರೆ ಪರಿಸ್ಥಿತಿಯು ವಿಕೋಪಕ್ಕೆ ತಲಪುವದೆಂದು ಭಾವಿಸಿದ ಕೃಪಾಶ್ವತ್ಥಾಮರು ಇವರಿಬ್ಬರನ್ನೂ ಬೇರ್ಪಡಿಸಿದರು. ಪ್ರಸಂಗ ಅಲ್ಲಿಗೆ ಮುಗಿದರೂ ಅದರ ಪರಿಣಾಮ ಮುಗಿಯಲಿಲ್ಲ. ದುರ್ಯೋಧನನ ಮನಸ್ಸಿನಲ್ಲಿ ಒಂದು ಹುಣ್ಣು ತಲೆದೋರಿದಂತಾಯಿತು. ಅಣ್ಣ ತಮ್ಮಂದಿರಾಗಿ ಹುಟ್ಟಿದವರು ದಾಯಾದಿ ಮತ್ಸರದಲ್ಲಿ ಬೆಳೆಯುತ್ತಿದ್ದಾರೆಂದು ಮನಗಂಡ ಭೀಷ್ಮಾದಿಗಳು ಬಹಳ ವ್ಯಸನಪಟ್ಟರು,

ಅನಂತರ ಅರ್ಜುನನು ಅನೇಕ ವಿಧದ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿ ಸಭಿಕರನ್ನು ಮೆಚ್ಚಿಸಿದನು. ಆವನ ಅನಂತರ ಕರ್ಣನು ಮೇಲೆದ್ದು ಅರ್ಜುನನಿಗೆ ಏನೇನೂ ಕಡಿಮೆ ಇಲ್ಲವೆನ್ನುವಷ್ಟು ಚಮತ್ಕಾರವಾಗಿ ತನ್ನ ಕೌಶಲ್ಯವನ್ನು ಪ್ರದರ್ಶಿಸಿ ಅರ್ಜುನನನ್ನು ಯುದ್ಧಕ್ಕೆ ಕರೆದನು.

ರಮೆ:– **ಈ ಕಡೆ ಭೀಮ, ಆ ಕಡೆ ಕರ್ಣ !**

ಮುರಳಿ:– ಸಾಟಿ ಇಲ್ಲದ ಕ್ಷಾತ್ರ ತೇಜಸ್ಸಿನವರು. ಕರ್ಣಾರ್ಜುನರೂ ಸರಿ ಸಮವಾಗಿ ಯುದ್ಧ ಮಾಡುತ್ತಿದ್ದಾಗ ಭೀಮ, ಕೃಪ, ಅಶ್ವತ್ಥಾಮರು ಇವರನ್ನು ಬೇರ್ಪಡಿಸಿದರು. ಕರ್ಣನು ರಾಜನಲ್ಲವೆಂದೂ, ಆದುದರಿಂದ ಅವನು ಕ್ಷತ್ರಿಯ ಕುಮಾರನಾದ ಅರ್ಜುನನೊಂದಿಗೆ ಯುದ್ಧ ಮಾಡಲು ಯೋಗ್ಯತೆ ಪಡೆದಿಲ್ಲವೆಂದೂ ಕೃಪನು ಹಳಿಯಲು ಆ ಕ್ಷಣದಲ್ಲಿಯೇ ದುರ್ಯೋಧನನು ಕರ್ಣನಿಗೆ ಅಂಗರಾಜ್ಯದ ಪಟ್ಟ ಕಟ್ಟಿದನು.

ರಮೆ:– ಆಹಾ ! ಒಳ್ಳೆಯ ಕೆಲಸ.

ಮುರಳಿ:– ಹೌದು. ವಿಧಿಯ ಇಚ್ಛೆ. ನಮ್ಮಿಂದ ಒಳ್ಳೆಯದನ್ನೂ ಮಾಡಿಸುತ್ತದೆ, ಕೆಟ್ಟದನ್ನೂ, ಮಾಡಿಸುತ್ತದೆ.

ರಮೆ:– ಏನು ವಿಧಿ ?

ಮುರಳಿ:– ಹೌದು. ಎಲ್ಲರ ಗಮನವನ್ನು ಸೆಳೆದು ತೇಜೋವಂತನಾಗಿ ಬೆಳೆಯುತ್ತಿದ್ದ ಕರ್ಣನನ್ನು, ತುಂಬಿದ ಸಭೆಯಲ್ಲಿ ಕುಲವಿಹೀನನೆಂದು ಅವಮಾನ ಮಾಡಿದಾಗ ಅವನನ್ನು ಒಬ್ಬ ರಾಜನೆಂದು ಮಾಡಿ ಅವನಿಗೆ ಜೀವನದಲ್ಲಿ ಸ್ಥಾನ, ಮಾನಗಳನ್ನು ಕಲ್ಪಿಸಿಕೊಟ್ಟ ದುರ್ಯೋಧನನು ಕರ್ಣನನ್ನು ಆಜೀವಪರ್ಯಂತ ತನ್ನ ಅನುಯಾಯಿಯಾಗಿ ಪಡೆದ ಒಂದು ದೊಡ್ಡ ಘಟನೆ ಇದು. ಇಂತಹ ಒಂದು ಮಹಾನ್ ಘಟನೆಯನ್ನು ವಿಧಿಯು ಕೃಪನ ಒಂದು ಸಣ್ಣ ಮೂದಲಿಕೆಯ ಮಾತಿನ ಮೂಲಕ ಸಾಧಿಸಿಬಿಟ್ಟುದು ಆಶ್ಚರ್ಯವಲ್ಲವೆ ?

ರಮೆ:– ನಿಜ. ಮಾತಿಗೆ ಎಂತಹ ಶಕ್ತಿ ಎಂಬದಕ್ಕೆ ಇದೊಂದು ಉದಾಹರಣೆ.

ಮುರಳಿ:– ಹೌದು. ಕೇಳು ಪ್ರದರ್ಶನವು ಮುಗಿಯಿತು- ತನ್ನ ಪೂರ್ವ ವೈರಿಯಾಗಿದ್ದ ದ್ರುಪದ ಎಂಬ ರಾಜನನ್ನು ತನ್ನ ಶಿಷ್ಯರು ಸೆರೆ ಹಿಡಿದು ತರಬೇಕೆಂಬದು ದ್ರೋಣನ ಹಂಬಲವಾಗಿತ್ತು. ಕೌರವರು ಇದಕ್ಕಾಗಿ ಹೋಗಿ ದ್ರುಪದನಿಗೆ ಸೋತು ಹಿಂದೆ ಬಂದರು. ಭೀಮಾರ್ಜುನರು ಅದನ್ನು ಸಾಧಿಸಿ ದ್ರುಪದನನ್ನು ಸೆರೆ ಹಿಡಿದು ತಂದು ಗುರುವಿಗೆ ಒಪ್ಪಿಸಿದರು. ಇದರಿಂದ ಅವಮಾನಿತನಾದ ದ್ರುಪದನು ಯಾಗವನ್ನು ಮಾಡಿ ದ್ರೋಣನ ನಾಶಕ್ಕೆಂದು ಧೃಷ್ಟದ್ಯುಮ್ನನೆಂಬ

ಮಗನನ್ನೂ, ಅರ್ಜುನನ ಮಡದಿಯಾಗಲೆಂದು ದ್ರೌಪದಿಯೆಂಬ ಮಗಳನ್ನೂ ಪಡೆದು ದ್ರೋಣನಿಂದಲೇ ತನ್ನ ಮಗನಿಗೆ ಶಸ್ತ್ರ ವಿದ್ಯಾಭ್ಯಾಸ ಮಾಡಿಸಿದನು.

ರಮೆ:– ಚೆನ್ನಾಗಿದೆ.

ಮುರಳಿ:– ಕತ್ತಲೆ.

ರಮೆ:– ಕತ್ತಲೆಯಲ್ಲ, ನಾನಂದದ್ದು.

ಮುರಳಿ:– ನೀನಂದದ್ದಲ್ಲ, ನಾನಂದದ್ದು.

ರಮೆ:– ಹುಡುಗಾಟ ಸಾಕು. ಕತೆ ಹೇಳಿ.

ಮುರಳಿ:– ಅನಂತರ ಕತ್ತಲಾಯಿತು. ನಿತ್ಯ ಕರ್ಮಗಳಿಗಾಗಿ ಕತೆಯನ್ನು ನಿಲ್ಲಿಸಲಾಯಿತು.

ರಮೆ:– ಅನಂತರ ಮರುದಿನ ಸಂಜೆ ಕತೆಯನ್ನು ಮುಂದುವರಿಸಲಾಯಿತು ಎಂದೂ ಬರೆದಿಲ್ಲವೆ ?

ಮುರಳಿ:– ಬರೆದಿದೆ. ಈಗ ಏಳು.

ರಮೆ:– ಅಪ್ಪಣೆ !

††††††

# ಎರಡನೆಯ ಸಂಜೆ

**ರಮೆ** :– ಈ ದಿನ ಆಚೆ ಇಚೆ ಯಾವ ವಿಧದ ಚರ್ಚೆಯೂ ಇಲ್ಲದೆ ಕತೆ ಹೇಳಬೇಕು. ನಾನಂತೂ ಚರ್ಚೆಯನ್ನೇ ಮಾಡುವದಿಲ್ಲ. ಕತೆಯ ಸ್ವಾರಸ್ಯ ಹೊರಟುಹೋಗಿಬಿಡುತ್ತದೆ. ನೀವು ಕೂಡ ಅಡ್ಡ ಮಾತು ತೆಗೆಯಬಾರದು. ಒಪ್ಪುತ್ತೀರಾ ?

ಮುರಳಿ :– ನೀನು ಹೇಳಿದ ಯಾವದನ್ನು ನಾನು ಒಪ್ಪಿಲ್ಲ ಹೇಳು ! ಆದರೆ ಒಂದೇ ಒಂದು ಮಾತನ್ನು ಇಲ್ಲಿ ಹೇಳಿ ಕತೆಯನ್ನು ಮುಂದುವರಿಸುತ್ತೇನೆ. ಆಗ ಬಹುದು ತಾನೆ ?

ರಮೆ:– ಹೇಳಿ.

ಮುರಳಿ:– ಕತೆಯನ್ನು ಕೇಳುವಾಗ ನೀನು ಮಕ್ಕಳಂತೆ ಸ್ಥೂಲವಾದ ಘಟನೆಗಳನ್ನು ಮಾತ್ರವೇ ಗಮನಿಸಿ ಸುಮ್ಮನಿದ್ದು ಬಿಡಬಾರದು. ಆ ಘಟನೆಗಳ ಹಿನ್ನೆಲೆ, ಅವುಗಳು ನಡೆದ ರೀತಿ, ಅವುಗಳ ಪರಿಣಾಮ ಮೊದಲಾದವುಗಳನ್ನು ವಿಮರ್ಶಿಸುವದರ ಮೂಲಕ ಮಾನವನ ಮನಸ್ಸು ಎಂತೆಂತಹ ಸಂದರ್ಭದಲ್ಲಿ ಹೇಗೆ ಹೇಗೆ ಕೆಲಸ ಮಾಡುತ್ತದೆ, ಯಾವ ವಿಧದ ವರ್ತನೆಯಿಂದ ಒಳ್ಳೆಯದಿದೆ, ಯಾವದರಿಂದ ಕೆಡುಕಿದೆ, ಮಾನವನ ವರ್ತನೆಯು ಕೆಲವೊಮ್ಮೆ–ಅವನ ಒಂದೊಂದೇ ಮಾತು ಕೂಡ–ಅವನ ಮುಂದಿನ ಜೀವನವನ್ನೇ ರೂಪಿಸಲು ಹೇಗೆ ಸಮರ್ಥವಾಗುತ್ತದೆ, ಈ ರೀತಿ ತನ್ನ ಮುಂದಿರುವದನ್ನು ಕಾಣಲಾರದ ಮಾನವನು ಹೇಗೆ ಹೇಗೋ ವರ್ತಿಸುವದು ಅವನ ಪ್ರಯತ್ನದಿಂದಾಗಿಯೇ ಅಥವಾ ಯಾವದೋ ಒಂದು ಅವ್ಯಕ್ತ ಚೇತನಕ್ಕೆ ಅವನು ಪೂರ್ಣವಾಗಿ ಅಧೀನನಾಗಿರುವದರಿಂದಲೋ–ಎಂಬದನ್ನೆಲ್ಲ ಕಂಡುಕೊಳ್ಳಲು ಪ್ರಯತ್ನಿಸುವದು ಕತೆ ಕೇಳುವದರಿಂದ ನಾವು ಪಡೆಯುವ ಪೂರ್ಣಫಲವಾಗುತ್ತದೆ. ಹೀಗೆ ಮಾಡದೆ........

ರಮೆ:– ನಿಮ್ಮ ಮಾತು ಏನೋ ತೂಕವಾಗಿ ಕಾಣಿಸುತ್ತದೆ. ಆದರೆ ಆ ತೂಕವು ನನ್ನ ಸ್ವತ್ತು ಎನಿಸಿ ನನಗೆ ಸಂತೋಷ ಕೊಡದೆ, ನಾನು ಉಪಯೋಗಿಸಲು ಸಾಧ್ಯವಿಲ್ಲದ ಒಂದು ಹೊರೆ ಎಂದೂ ಅನಿಸುತ್ತದೆ.

ಮುರಳಿ:– ಚಿಂತೆ ಇಲ್ಲವಲ್ಲಾ ! ಸುಲಭವಾಗಿ ಅರ್ಥ ಮಾಡಿಕೊಳ್ಳಲಾಗದ

ಮಾತುಗಳನ್ನು ಆಡುವದರ ಮೂಲಕ ನೀನೂ ಒಬ್ಬಳು ಮೇಧಾವಿ ಎನಿಸಿಕೊಳ್ಳಲು ಪ್ರಾರಂಭಿಸಿಬಿಟ್ಟಿದ್ದೀಯಲ್ಲ!

ರಮೆ:– ನೀವು ನನ್ನನ್ನು ಹೊಗಳಿ ಕೆಡಿಸುವದೇನೂ ಬೇಡ. ಅದೇನೇನೋ ಹೇಳಿದಿರಲ್ಲ, ಅದನ್ನು ಸ್ವಲ್ಪ ಬಿಡಿಸಿ ಹೇಳಿ, ಹೋಗಲಿ.

ಮುರಳಿ:– ಅದೇ, ರಮಾ, ನಿನ್ನೆ ಹೇಳಿದೆ ನೋಡು. ಕೃಪಾಚಾರ್ಯನು ಕರ್ಣನನ್ನು ಕುಲವಿಹೀನನೆಂದು ಹಳಿದ ಒಂದು ಮಾತು ಆ ಕರ್ಣನನ್ನು ಒಬ್ಬ ರಾಜನನ್ನಾಗಿ ಮಾಡಿತು;ಅರ್ಜುನನಿಗೆ ಸಮನಾದ ಪರಾಕ್ರಮವುಳ್ಳ ಒಬ್ಬ ಬಿಲ್ಲಾಳು ವನ್ನು ದುರ್ಯೋಧನನಿಗೆ ಆಜೀವಪರ್ಯಂತದ ಗೆಳೆಯನನ್ನಾಗಿ ಒದಗಿಸಿತು. ಬಹುಶಃ ಮುಂದೆ ಕುರುಕ್ಷೇತ್ರ ಯುದ್ಧದಲ್ಲಿ ಪಾಂಡವರನ್ನು ಎದುರಿಸುವ ಸಾಹಸಕ್ಕೆ ಕೈ ಹಾಕಲು ದುರ್ಯೋಧನನಿಗೆ ಪ್ರಚೋದನೆಯನ್ನೂ ಒದಗಿಸಿಕೊಟ್ಟಿತು.

ಹಾಗೆಯೇ ಭೀಮ ದುರ್ಯೋಧನರ ಬಾಲ್ಯದ ಹಗೆತನ ಕೂಡ. ಅವರಿಬ್ಬರಲ್ಲಿ ದ್ವೇಷವು ಬೆಳೆಯಲು ಯಾವದೇ ಒಂದು ಪ್ರಬಲವಾದ ಘಟನೆ ಕಾರಣವಾಗಿರಲಿಲ್ಲ. ಕೇವಲ ಮಕ್ಕಳಾಟ, ದೇಹಪಾರ್ಶ್ವದಲ್ಲಿ ಬಾಲ್ಯ ಸಹಜವಾಗಿರುವ ಸ್ಪರ್ಧೆ ಮೊದಲಾದ ಸಾಮಾನ್ಯ ಘಟನೆಗಳೇ ಒಂದಕ್ಕೊಂದು ಸೇರಿ ಅವರಿಬ್ಬರ ಒಂದೊಂದು ವರ್ತನೆಯೂ, ಒಂದೊಂದು ಮಾತೂ ಅವರ ದ್ವೇಷವನ್ನೂ ಬಲಪಡಿಸಿತು.

ನಮ್ಮ ಜೀವನದಲ್ಲಿಯೂ ಹೀಗೆ ಆಗುತ್ತಲೇ ಇರುತ್ತದೆ ರಮಾ. ಅದನ್ನು ನೋಡುವ ಕಣ್ಣು ಬೇಕು ನಮಗೆ, ಅಷ್ಟೆ. ಭಗವಂತನ ಸಂಕಲ್ಪಕ್ಕೆ ಅನುಗುಣವಾಗಿ ಕುಣಿಯುವ ಗೊಂಬೆಗಳು ನಾವು. ಹೀಗೆಂದು ತಿಳಿದುಕೊಳ್ಳುವ ಪ್ರಯತ್ನದ ರೂಪದಲ್ಲಿ ಅವನ ಧ್ಯಾನ ಮಾಡಿದಷ್ಟೂ ಜೀವನದ ನಮ್ಮ ಹೊರೆ ಕಡಿಮೆಯಾಗಬಹುದೇ ಹೊರತು, ನಾವೇ ಏನನ್ನೋ ಸಾಧಿಸಿಬಿಡುತ್ತೇವೆ, ನಾವು ಇನ್ನೇನನ್ನೋ ಸಾಧಿಸಲಾರದೆ ಹೋದೆವು ಎಂದೆಲ್ಲ ತಿಳಿದುಕೊಳ್ಳುವದು ನಮ್ಮ ಹೊರೆಯನ್ನು ನಾವು ಹೆಚ್ಚಿಸಿಕೊಳ್ಳುವದಕ್ಕೆ, ಅಷ್ಟೆ.

ರಮೆ:– ಎಷ್ಟು ನಿಜ ! ದೀಪದಡಿಯಲ್ಲಿ ಕತ್ತಲು ಎಂಬದು ಎಷ್ಟು ನಿಜ ! ಅಲ್ಲ ?

ಮುರಳಿ:– ಆ ಮಾತನ್ನು ಇಲ್ಲಿ ಹೇಗೆ ಅನ್ವಯಿಸಿದೆ ?

ರಮೆ:– ಇಲ್ಲವೆ ? ಸಾಕಷ್ಟು ಬುದ್ಧಿವಂತಿಕೆಯ ಅಡಿಯಲ್ಲಿ ಎಂತಹ ಅಜ್ಞಾನ ! ಅದನ್ನು ಕಂಡೇ ಹಾಗಂದೆ.

ಮುರಳಿ:– ಹೌದು. ನಿನ್ನ ಹೊಂದಾಣಿಕೆ ಬಹಳ ಸರಿಯಾಗಿದೆ.

ರಮೆ:– ಹೇಗೆ ಹೇಳಿ ?

ಮುರಳಿ:— ಅದೇ. ನನ್ನ ಬುದ್ಧಿವಂತಿಕೆಯ ಅಡಿಯಲ್ಲಿಯೇ ನಿನ್ನ ಅಜ್ಞಾನ ?

ರಮೆ:— ಓಹೊಹೊ. ಚಿಂತೆಯಿಲ್ಲ, ನೀವು ! ಆಗಲಿ, ಆಗಲಿ. ನಾನು ಅಜ್ಞಾನಿಯೇ, ಹೆಡ್ಡಳೇ. ನೀವು ಮಹಾ ವಿಜ್ಞಾನಿಗಳು. ಆಗಲಿ, ಅದಕ್ಕೇನು ? ಇಂತಹ, ಏತಕ್ಕೂ ಬೇಡದ, ಹೆಡ್ಡಿಯನ್ನು ಮದುವೆಯಾಗಬೇಕಿತ್ತೇಕೆ ?

ಮುರಳಿ:— ಏತಕ್ಕೂ ಬೇಡದ ಎಂದು ಯಾವಾಗ ಹೇಳಿದೆ ನಾನು ?

ರಮೆ:— ಆಗಲಿ, ಆಗಲಿ. ನಾನೊಂದು ಬರೀ ಹೆಣ್ಣು. ಏನೂ ಬುದ್ಧಿ ಇಲ್ಲದ ಪಶು. ಯಾರಾದರೂ ನಿಮ್ಮ ಬುದ್ಧಿಗೆ ಸರಿಯಾದ ಬುದ್ಧಿವಂತಳನ್ನೇ ಮದುವೆ ಯಾಗಬೇಕಿತ್ತು ! ನನ್ನನೇಕೆ ಆದಿರಿ ?

ಮುರಳಿ:— ದೀನರನ್ನು, ದಲಿತರನ್ನು, ಅಜ್ಞಾನಿಗಳನ್ನು, ದುರದೃಷ್ಟಶಾಲಿ ಗಳನ್ನು ಆದಷ್ಟು ಉದ್ಧಾರ ಮಾಡೋಣವೆಂದು........

ರಮೆ:— ನೀವೇನೂ ನನ್ನನ್ನು ಉದ್ಧಾರ ಮಾಡುವದು ಬೇಡ. ನಿಮ್ಮನ್ನು ನೀವು ಮೊದಲು ಉದ್ಧಾರ ಮಾಡಿಕೊಳ್ಳಲು ಪ್ರಯತ್ನಿಸಿ. ನಮ್ಮ ಎಲ್ಲ ವರ್ತನೆಗೂ ದೇವರು ಕಾರಣ, ಅವನು ಏನನ್ನೋ ಸಂಕಲ್ಪಿಸುತ್ತಾನೆ, ನಾವು ಅವನನ್ನು ಧ್ಯಾನ ಮಾಡಬೇಕು ಎಂದು ಮುಂತಾದ ಕೈಲಾಗದವರ ಗೊಡ್ಡು ವಿಚಾರಗಳನ್ನು ನಂಬಿರುವವರು ಬುದ್ಧಿವಂತರಂತೆ ! ನಾನು ಹೆಡ್ಡಳಂತೆ ! ತನ್ನನ್ನು ಉದ್ಧಾರ ಮಾಡಿಕೊಳ್ಳುವ ಸ್ವಾತಂತ್ರ್ಯವೇ ತನಗಿಲ್ಲವೆಂದು ನಂಬಿರುವವರು ಇನ್ನೊಬ್ಬರನ್ನು ಉದ್ಧಾರ ಮಾಡುತ್ತಾರಂತೆ ! ಅದಕ್ಕೇ ನಾನಂದದ್ದು – ಸ್ವಲ್ಪಮಟ್ಟಿಗೆ ಚರ್ಚೆ, ವಿಮರ್ಶೆ ಎಲ್ಲ ಮಾಡುವಷ್ಟು ಅಲ್ಪಸ್ವಲ್ಪ ಬುದ್ಧಿ ಇರುವ ನಿಮ್ಮ ಅಂತರ್ಯದಲ್ಲಿ ಈ ದೇವರು, ವಿಧಿ, ಸಂಕಲ್ಪ ಎಂದು ಮುಂತಾದ ಎಂತಹ ಅಜ್ಞಾನ ಇದೆ ಅಂತ.

ಮುರಳಿ:— ನಾನೂ ಅದಕ್ಕೇ ಅಂದದ್ದು.

ರಮೆ:— ಏನೆಂದು ? ನಾನು ಅಜ್ಞಾನಿ ಎಂದು !

ಮುರಳಿ:— ಹಾಗೇ ಏನೋ ಹೇಳಿದೆ ಅಲ್ಲ ?

ರಮೆ:— ಸರಿ. ನಾನು ದೇವರು, ಅವನ ಧ್ಯಾನ ಎಂದೆಲ್ಲ ನಂಬದೆ ಹಾಳಾ ಗಿರುವದೇನು, ನೀವು ಅದನ್ನೆಲ್ಲ ನಂಬಿ ಉದ್ಧಾರವಾಗಿರುವದೇನು ?

ಮುರಳಿ:— ಉಂಡ ಊಟ ಅರ್ಧ ಜೀರ್ಣವಾಗಿರುವ ಹೊತ್ತಿನಲ್ಲಿ ಒಬ್ಬಾತ ಹೇಳಬಹುದು–"ನಾನು ಮುಂದಿನ ಊಟಕ್ಕೆ ಅಣಿ ಮಾಡಿಕೊಳ್ಳದೆ ಹಾಳಾಗಿರು ವದೇನು, ನೀನು ಅಡುಗೆ ಮಾಡಿಕೊಂಡಿರುವದರ ಮೂಲಕ ಉದ್ಧಾರವಾಗಿರು ವದೇನು ?" ಅಂತ.

ರಮೆ:– ಅಂದರೆ ನಾಳೆ ನನಗೆ ಏನೋ ವಿಪತ್ತು ಬಂದು – ಅಥವಾ ನಾನು ದೇವರನ್ನು ಧ್ಯಾನಿಸದಿರುವದರಿಂದ ಅವನಿಗೆ ನನ್ನ ಮೇಲೆ ಸಿಟ್ಟು ಬಂದು ಅವನು ನನಗೆ ವಿಪತ್ತು ಬರುವಂತೆ ಶಾಪಕೊಟ್ಟು - ನಾನು ನರಳಲಿಕ್ಕಿದೆ. ನಿಮಗೆ ಮುಂದಕ್ಕೆ ಏನೂ ಕಷ್ಟವೇ ಬಾರದೆ ನೀವು ಸದಾ ಸುಖದಲ್ಲಿ ಸಂತೋಷಪಡಲಿಕ್ಕಿದೆ. ಅಲ್ಲವೆ ? ಈ ಅಜ್ಜಿ ಕತೆಗಳನ್ನೆಲ್ಲ ಯಾಕೆ ಹೇಳುತ್ತೀರೋ ಕಾಣೆ.

ಮುರಳಿ:– ನಾನು ಹೇಳಿದೆನೇ ಆ ಕತೆಯನ್ನು ? ನೀನಲ್ಲವೇ ಹೇಳಿದ್ದು ?

ರಮೆ:– ನೀವು ಹಾಗೆ ಹೇಳುತ್ತೀರಿ ಅಂತ ನಾನು ಹೇಳಿದ್ದು.

ಮುರಳಿ:– ನಿನ್ನ ಕಲ್ಪನೆಗಳಿಗೆ ನೀನು ತಾನೇ ಬಾಧ್ಯಸ್ಥಳು ?

ರಮೆ:– ಹಾಗಾದರೆ ಹೇಳಿ. ನಿಮ್ಮ ಆ ದೇವರು ಅಂದರೆ ಯಾರು ? ನನ್ನನ್ನು ಧ್ಯಾನ ಮಾಡಿರಯ್ಯ ಎಂದು ಅವನು ನಿಮ್ಮಂತಹವರಿಗೆಲ್ಲ ಯಾವಾಗ ಹೇಳಿದ ? ನನ್ನಂತಹ ಪಾಪಿಗಳು ಅವನ ಧ್ಯಾನ ಮಾಡದಿದ್ದರೆ ಅವನಿಗೆ ಸಿಟ್ಟು ಬರುವದೇಕೆ ? ಎಲ್ಲ ಹೇಳಿ ನೋಡೋಣ.

ಮುರಳಿ:– ರಮಾ, ಬಹಳ ದೊಡ್ಡ ವಿಚಾರದ ಕುರಿತು ಬಹಳ ಲಘು ವಾಗಿ ಮಾತನಾಡುತ್ತಿದ್ದೇವೆ. ಅದೆಲ್ಲ ಯಾಕೆ ? ಕತೆ ಮುಂದುವರಿಸಲೇ, ಹೇಳು.

ರಮೆ:– ಇರಲಿ. ಲಘುವಾಗಿ ಮಾತನಾಡುತ್ತಿರುವದು ನಿಜವಿರಬಹು ದಾದರೂ, ಈ ವಿಚಾರ ಘನವಾದುದು ಎಂಬದನ್ನು ನಾನೂ ಒಪ್ಪಿಕೊಳ್ಳುತ್ತೇನೆ. ಆದರೆ ಈ ವಿಚಾರದಲ್ಲಿ ನನಗೂ ನಿಮಗೂ ದೊಡ್ಡ ಅಭಿಪ್ರಾಯ ಭೇದವಿರುವದ ರಿಂದ ಒಂದು ಸ್ವಲ್ಪದರಲ್ಲಿ ನಿಮ್ಮ ಅಭಿಪ್ರಾಯವನ್ನು ಹೇಳಿ ನೋಡೋಣ.

ಮುರಳಿ:– ಕತ್ತಲು ಹೇಗೆ ಬೆಳಕನ್ನು ಕೊಟ್ಟೀತು ?

ರಮೆ:– ಅಂದರೆ ?

ಮುರಳಿ:– ನನ್ನ ಅಲ್ಪಸ್ವಲ್ಪ ಬುದ್ಧಿವಂತಿಕೆಯ ಬೆಳಕಿನಡಿಯಲ್ಲಿ ಇರುವ ಕತ್ತಲಲ್ಲವೇ ಈ ವಿಚಾರ ?

ರಮೆ:– ಅದರ ಮೇಲೆ ನಾನು ಬೆಳಕು ಚೆಲ್ಲುತ್ತೇನೆ, ತೋರಿಸಿ ಎಂದೆ.

ಮುರಳಿ:– ಹಾಗೆ. ಅಪ್ಪಣೆ. ತೋರಿಸಿದ್ದೇನಲ್ಲ. ಬೆಳಕು ಬೀರು.

ರಮೆ:– ಅಷ್ಟೆಲ್ಲ ಗೊತ್ತಿದ್ದಿದ್ದರೆ ನಿಮ್ಮನ್ನು ಕೇಳಲು ಯಾಕೆ ಬರುತ್ತಿದ್ದೆ?

ಮುರಳಿ:– ಗೊತ್ತಿಲ್ಲ ಎಂದು ಒಪ್ಪಿಕೊಂಡಿದ್ದಿ ?

ರಮೆ:– ನಾನು ಒಪ್ಪಿಕೊಳ್ಳುವದೇನು ? ಲೋಕಕ್ಕೇ ಗೊತ್ತಿದೆ, ನಾನು ಒಬ್ಬಳು ಹೆಡ್ಡಿ ಎಂಬದು !

ಮುರಳಿ:– ಆದರೆ ನಾನು ಸಂಗ್ರಹಿಸಿದ ಲೋಕಾಭಿಪ್ರಾಯದ ಪ್ರಕಾರ ನೀನು ತಲೆಹರಟೆಯುವಳು ಎಂದು ತಿಳಿದುಕೊಂಡಿದ್ದೆ.

ರಮೆ:– ನೀವೇ ತಲೆಹರಟೆ. ನೋಡಿ. ಮರ್ಯಾದೆಗಾಗಿ, ಏನೋ ಒಂದು ವಿಚಾರದ ಬಗ್ಗೆ ಹೇಳಿ, ಕೇಳೋಣ ಎಂದರೆ ಹೇಗೆ ತಲೆಹರಟೆ ಮಾಡುತ್ತಿದ್ದೀರಿ, ನೋಡಿ. ನಾನಂತೆ ತಲೆಹರಟೆಯುವಳು. ನೀವೇ ತಲೆಹರಟೆ.

ಮುರಳಿ :– ಆಗಲಪ್ಪಾ, ಈಗೇನು, ನಾನೇ ತಲೆಹರಟೆಯುವನು, ನೀನೇ ಒಳ್ಳೆಯುವಳು. ಈಗೇನಾಯಿತು, ಆಗಲಿ.

ರಮೆ:– ನೋಡಿ, ಸುಮ್ಮನೆ ತಮಾಷೆ ಬಿಟ್ಟು ನಾನು ಕೇಳಿದುದನ್ನು ಹೇಳುವದಾದರೆ ಹೇಳಿ. ಇಲ್ಲವಾದರೆ ನಾನು ಎದ್ದು ಹೋಗುತ್ತೇನೆ.

ಮುರಳಿ :– ಛೆ, ಛೆ. ನನ್ನ ಅಧ್ಯಕ್ಷತೆಯಲ್ಲಿ ನಡೆಯುವ ಈ ಸಮಾರಂಭದಲ್ಲಿ ನೀನು ಸಭಾತ್ಯಾಗ ಮಾಡುವದೆಂದರೇನು ! ಹೇಳೋಣ. ಏನು ಹೇಳು ? ಚರ್ಚೆಯ ನಿನ್ನ ವಿಷಯವೇನು ?

ರಮೆ :– ಚರ್ಚೆ ಏನೂ ಇಲ್ಲ. ನಿಮ್ಮ ಅಭಿಪ್ರಾಯ ಕೇಳಿದೆ, ಅಷ್ಟೆ. ಈ ದೇವರು ಎಂಬುವನು ನಿಜವಾಗಿ ಇದ್ದಾನೆಯೆ ? ಅವನನ್ನು ಧ್ಯಾನ ಮಾಡುವದು ಎಂಬದಕ್ಕೆ ಏನಾದರೂ ಅರ್ಥವಿದೆಯೆ ಎಂಬದು ನನ್ನ ಪ್ರಶ್ನೆ.

ಮುರಳಿ:– ಹಾಗೆ. ವಿವರಣೆ ಸ್ವಲ್ಪ ದೀರ್ಘವಾಗಬಹುದು. ಆದರೂ ಕೇಳು. ದೇವರು ಎನ್ನುವ ಒಂದು ಶಕ್ತಿ ಇದೆ ಅಥವಾ ಇಲ್ಲ ಎಂದು ವಾದ ಮಾಡುವದು ಗಾಳಿಯೊಡನೆ ಗುದ್ದಾಡುವಂತೆ ವ್ಯರ್ಥ ಪ್ರಯತ್ನವಾಗುತ್ತದೆ. ದೇವರಿಲ್ಲ ಎಂದು ನಿಶ್ಚಯವಾಗಿ ನಂಬಿರುವವರಲ್ಲಿ ದೇವರಿದ್ದಾನೆ ಎಂದು ವಾದಿಸುವದೂ, ದೇವರಿದ್ದಾನೆ ಎಂದು ನಂಬಿರುವವರಲ್ಲಿ ಅವನಿಲ್ಲ ಎಂದು ವಾದಿಸುವದೂ ಸಮಯದ ನಷ್ಟವಾಗುತ್ತದೆ. ದೇವರು ತರ್ಕಕ್ಕೆ ಸಿಕ್ಕುವ ವಿಷಯವಾಗುವದಿಲ್ಲವಾದ್ದರಿಂದ ಅದು ವೈಯಕ್ತಿಕ ವಿಶ್ವಾಸಕ್ಕೆ ಸೇರಿದ ಅಂಶವಾಗಿದೆ. ಕಣ್ಣಿಗೆ ಕಾಣಿಸದಿರುವ ಒಂದು ವಸ್ತು ಇದೆ ಎಂದು ಹೇಗೆ ನಂಬುವದು ಎನ್ನುವವರು ದೇವರು ಕಣ್ಣಿಗೆ ಕಾಣಿಸುವದಿಲ್ಲ ಎನ್ನುವಷ್ಟರಿಂದಲೇ ದೇವರನ್ನು ಅಲ್ಲಗಳೆಯುವದಾದರೆ ಗಾಳಿ ಎಂಬ ವಸ್ತು ಇಲ್ಲವೇ ಇಲ್ಲವೆಂದು ವಾದ ಮಾಡಿದಂತಾಗುತ್ತದೆ. ಕಣ್ಣಿನ ಮೂಲಕ ಅಲ್ಲದಿದ್ದರೆ ಇತರ ವಿಧಾನದ ಮೂಲಕ ಗಾಳಿಯ ಇರವನ್ನು ಕಂಡುಕೊಳ್ಳಬೇಕು. ಈ ಲೋಕದ ವಿಷಯುಗಳನ್ನು ಅರಿಯುವ ನಮ್ಮ ಇಂದ್ರಿಯಗಳ ಮೂಲಕ ದೇವರ ಇರವನ್ನು

ಕಂಡುಕೊಳ್ಳಲು ಸಾಧ್ಯವಾಗದ ಮಾತ್ರಕ್ಕೆ ಆ ಒಂದೇ ಕಾರಣದಿಂದ, ದೇವರೇ ಇಲ್ಲ ಎಂದು ಭಾವಿಸುವದು ತಪ್ಪಾಗುತ್ತದೆ.

ಇನ್ನು ದೇವರನ್ನು ಧ್ಯಾನ ಮಾಡುವದರ ಕುರಿತು ನೀನು ಕೇಳಿದೆ. ಅದೊಂದು ಸೂಕ್ಷ್ಮವಾದ ವಿಚಾರ. ದೇವರು ಎಂಬವನು ಇದ್ದಾನೆ. ಅವನ ರೂಪ ಹೀಗಿದೆ. ಅವನನ್ನು ಪೂಜಿಸುವದರಿಂದ ಅವನು ಪ್ರಸನ್ನನಾಗುತ್ತಾನೆ. ಪೂಜಿಸದಿರುವದು ಪಾಪ-ಎಂದು ಮುಂತಾದ ನಂಬಿಕೆಗಳು ಆಯಾ ಅರ್ಥದಲ್ಲಿ ಪೂರ್ಣವಾಗಿ ಸರಿಯಲ್ಲ ಎನ್ನಬಹುದಾದರೂ ಅವುಗಳನ್ನು ಮೂಢ ನಂಬಿಕೆ ಎನ್ನುವದೂ ಸ್ವತಃ ಮೂಢತನವೇ ಆಗುತ್ತದೆ.

ರಮೆ:– ಹಾಗಾದರೆ ದೇವರು ವ್ಯಾಪಾರಕ್ಕೆ ಕುಳಿತಿದ್ದಾನೇನು ?

ಮುರಳಿ:– ವಿವರಣೆ ಕೊಡುವ ಮುಂಚೆಯೇ ಮಾತನಾಡುವದು ಅಧೀರ ಮನಸ್ಸಿನ ಲಕ್ಷಣ. ನನ್ನ ಪ್ರಶ್ನೆಗಳಿಗೆ ಉತ್ತರ ಕೊಡುತ್ತೀಯಾ ?

ರಮೆ:– ಏನು ಪ್ರಶ್ನೆ ?

ಮುರಳಿ:– ವಿಜ್ಞಾನ, ಭೂಗೋಳ ಯಾವದೂ ಅಲ್ಲ. ಕೆಲವು ಸಾಮಾನ್ಯ ಪ್ರಶ್ನೆಗಳು.

ರಮೆ:– ಆಗಲಿ.

ಮುರಳಿ:– ನೀನು ಸುಖವಾಗಿದ್ದೀಯಾ ?

ರಮೆ:– ಇದ್ದೇನೆ. ಏನಾಗಿದೆ ನನಗೆ ?

ಮುರಳಿ:– ನಿನ್ನೆ ಸುಖವಾಗಿದ್ದೆಯಾ ?

ರಮೆ:– ಇದ್ದೆ. ಏನಾಗಿತ್ತು ?

ಮುರಳಿ:– ನಾಳೆ ಸುಖವಾಗಿರುತ್ತೀಯಾ ?

ರಮೆ:– ನಾಳೆಯದು ನನಗೇನು ಗೊತ್ತು ?

ಮುರಳಿ:– ಗೊತ್ತು ಅಂತ ಅಲ್ಲ. ಈವೊತ್ತು ಅಂದಾಜು ಮಾಡಬಹುದಾದಂತೆ ನಾಳೆ ಸುಖವಾಗಿರುತ್ತೀಯಾ ಎಂದು ಕೇಳಿದೆ.

ರಮೆ:– ಇರುತ್ತೇನೆ. ಇಲ್ಲದೆ ಏನಾಗುತ್ತದೆ ?

ಮುರಳಿ:– ಸರಿ. ನಿನ್ನ ಜೀವನ ಸದಾ ಕಾಲ ಸುಖವಾಗಿರುತ್ತದೆ ಎಂದಂತಾಯಿತು.

ರಮೆ:– ಮೂರು ದಿನ ಮಾತ್ರ ನನ್ನ ಜೀವನವಲ್ಲವಲ್ಲ !

ಮುರಳಿ:– ಅಂದರೆ ದುಃಖದ ದಿನಗಳೂ ಇವೆ, ಹಾಗಾದರೆ ?

ರಮೆ:– ಇದ್ದೇ ಇರುತ್ತವೆ. ಯಾಕಿಲ್ಲ ?

ಮುರಳಿ:– ಅಂದರೆ ನಿನ್ನ ಜೀವನ ಸುಖ ದುಃಖಗಳ ಮಿಶ್ರಣದಿಂದ ಕೂಡಿದೆ.

ರಮೆ:– ಹೌದು.

ಮುರಳಿ:– ಇತರರ ಜೀವನ ?

ರಮೆ:– ಇತರರದು ನನಗೇನು ಗೊತ್ತು ?

ಮುರಳಿ:– ಗೊತ್ತು ಅಂತ ಅಲ್ಲ. ಸಾಮಾನ್ಯವಾಗಿ ನೀನು ತಿಳಿದಂತೆ.

ರಮೆ:– ಸಾಮಾನ್ಯವಾಗಿ ತಿಳಿದಂತೆ ಎಲ್ಲರ ಜೀವನವೂ ಸುಖ ದುಃಖಗಳ ಮಿಶ್ರಣವೇ.

ಮುರಳಿ:– ಒಪ್ಪಿಕೊಳ್ಳುತ್ತಿ ?

ರಮೆ:– ಒಪ್ಪಿಕೊಳ್ಳುವದೇನು, ಅದು ಇರುವದು ತಾನೆ ?

ಮುರಳಿ:– ಆದರೆ ಪ್ರತಿಯೊಬ್ಬ ಮಾನವನೂ ಬಯಸುವದೇನು ?

ರಮೆ:– ಏನು ಅಂದರೆ ಒಬ್ಬೊಬ್ಬರು ಒಂದೊಂದನ್ನು ಬಯಸುತ್ತಾರೆ.

ಮುರಳಿ:– ಅದು ಸರಿ. ಸುಖವನ್ನು ಬಯಸುತ್ತಾರೋ, ದುಃಖವನ್ನೋ ಎಂದೆ.

ರಮೆ:– ಒಳ್ಳೆ ಮಕ್ಕಳಂತೆ ಕೇಳುತ್ತೀರಲ್ಲ ! ದುಃಖವನ್ನು ಯಾರಾದರೂ ಬಯಸುತ್ತಾರೆಯೆ ?

ಮುರಳಿ:– ಇಲ್ಲ. ಸುಖವನ್ನು ಬಯಸುತ್ತಾರೆ. ಅದು ಹಾಗಿರಲಿ. ಪ್ರಪಂಚದಲ್ಲಿ ಕೋಟಿಗಟ್ಟಲೆ ಮನುಷ್ಯರಿದ್ದಾರೆ. ಕೋಟಿಗಟ್ಟಲೆ ಪ್ರಾಣಿಗಳಿವೆ. ಒಬ್ಬೊಬ್ಬರೂ ಒಂದೊಂದು ವಿಧದ ಚಟುವಟಿಕೆಯಲ್ಲಿ ತೊಡಗಿದ್ದಾರೆ. ಅಲ್ಲವೆ ?

ರಮೆ:– ಹೌದು.

ಮುರಳಿ:– ಈ ಕೋಟಿ ವಿಧದ ಚಟುವಟಿಕೆಗಳೆಲ್ಲದರ ಗುರಿ ಏನು ?

ರಮೆ:– ಗುರಿ ಏನೆಂದರೆ ? ಒಬ್ಬೊಬ್ಬರದು ಒಂದೊಂದು ಗುರಿ.

ಮುರಳಿ:– ಇರಬಹುದು. ಆದರೆ ಆ ಎಲ್ಲ ಚಟುವಟಿಕೆಗಳಿಂದಲೂ ಇವರೆಲ್ಲರೂ ಬಯಸುವದೇನನ್ನು ಎಂದು ಕೇಳಿದೆ.

ರಮೆ:– ಒಬ್ಬೊಬ್ಬರು ಒಂದೊಂದನ್ನು ಬಯಸುತ್ತಾರೆ ಅಂದೆ.

ಮುರಳಿ:– ನಿಜ. ಆ ಬಯಕೆಯ ಉದ್ದೇಶ ಏನು?

ರಮೆ:– ಬಯಕೆಯ ಉದ್ದೇಶ ಏನು? ಏನೇನೋ ಬೇರೆ ಬೇರೆ ವಿಧದ ಸಾಧನೆಗಳು. ಕೆಲವರು ಹಣಕ್ಕಾಗಿ, ಕೆಲವರು ಕೀರ್ತಿಗಾಗಿ, ಕೆಲವರು ಅಧಿಕಾರಕ್ಕಾಗಿ, ಕೆಲವರು ಹೊಟ್ಟೆಪಾಡಿಗಾಗಿ, ಕೆಲವರು ಆರೋಗ್ಯಕ್ಕಾಗಿ–ಹೀಗೆ ಸಾವಿರ ಗುರಿಗಳನ್ನಿಟ್ಟುಕೊಂಡು ಕೆಲಸ ಮಾಡುತ್ತಿರುತ್ತಾರೆ.

ಮುರಳಿ:– ಹೌದು, ಹಣದಿಂದ ಏನು ಸಿಕ್ಕುತ್ತದೆ ಅಂತ?

ರಮೆ:– ಹಣದಿಂದ ಬೇಕುಬೇಕಾದ್ದು ಸಿಕ್ಕುತ್ತದೆ.

ಮುರಳಿ:– ಬೇಕು ಬೇಕಾದುದು ಸಿಕ್ಕುವದರಿಂದ?

ರಮೆ:– ಬೇಕು ಬೇಕಾದುದು ಸಿಕ್ಕುವದರಿಂದ ಸುಖ ಸಿಕ್ಕುತ್ತದೆ.

ಮುರಳಿ:– ಅಂದರೆ ಹಣದಿಂದ ಸುಖ ಸಿಕ್ಕುತ್ತದೆ ಅಂತ. ಅಲ್ಲವೆ?

ರಮೆ:– ಹೌದು.

ಮುರಳಿ:– ಕೀರ್ತಿಯಿಂದ ಸಿಕ್ಕುವದೇನು?

ರಮೆ:– ಅದೂ ಸುಖವೇ.

ಮುರಳಿ:– ಆರೋಗ್ಯದಿಂದ?

ರಮೆ:– ಸುಖವೇ.

ಮುರಳಿ:– ಅಧಿಕಾರ, ಅನ್ನ–ಎಲ್ಲದರ ಗುರಿಯೂ ಸುಖ ಒಂದೇ. ಒಪ್ಪಿಕೊಳ್ಳುತ್ತೀಯಾ?

ರಮೆ:– ಹೌದು.

ಮುರಳಿ :– ಈಗ ನೋಡು. ಈ ಲೋಕದಲ್ಲಿರುವ ಕೋಟಿ ಕೋಟಿ ಮಾನವರು–ಹೆಣ್ಣೇ ಆಗಲಿ, ಗಂಡೇ ಆಗಲಿ; ಮಗುವೇ ಆಗಲಿ; ಮುದುಕರೇ ಆಗಲಿ–ಕೋಟಿ ಕೋಟಿ ಪ್ರಾಣಿಗಳು ಕೋಟಿ ಕೋಟಿ ವಿಧದ ಚಟುವಟಿಕೆಯಲ್ಲಿ ತೊಡಗಿರುವಂತೆ ಕಂಡುಬಂದರೂ ಆ ಎಲ್ಲ ಚಟುವಟಿಕೆಗಳ ಗುರಿ ಒಂದೇ–ಸುಖ ಪಡೆಯಬೇಕೆನ್ನುವದು. ಅಲ್ಲವೆ?

ರಮೆ:– ಹೌದು. ಪರವಾಗಿಲ್ಲ ನೀವು!

ಮುರಳಿ:– ಯಾಕೆ?

ರಮೆ :– ಅಲ್ಲಾ, ಎಷ್ಟು ನಿಜ ಅನ್ನಿಸಿತು; ಹಾಗಾಗಿ ಹೇಳಿದೆ.







ಮುರಳಿ:– ಇರಲಿ. ಹಣ ಬಯಸುವವರೆಲ್ಲರೂ ಹಣ ಪಡೆಯುವದಿಲ್ಲ. ಕೀರ್ತಿ ಬಯಸುವವರು ಕೀರ್ತಿಯನ್ನು, ಅಧಿಕಾರ ಬಯಸುವವರು ಅಧಿಕಾರವನ್ನು, ಹೀಗೆ ಯಾರು ಏನನ್ನು ಬಯಸುತ್ತಾರೋ ಅವರು ಅದನ್ನು ಪಡೆದೇ ಪಡೆಯುತ್ತಾರೆ ಎಂಬ ನಿಯಮವಿದೆಯೆ ?

ರಮೆ:– ಇಲ್ಲ.

ಮುರಳಿ:– ಅಂದರೆ, ಸುಖವನ್ನು ಬಯಸುವವರೆಲ್ಲ ಸುಖ ಪಡೆಯುತ್ತಾರೆಂದು ಹೇಳುವಂತಿಲ್ಲ ಎಂದಂತಾಯಿತು. ಅಲ್ಲವೆ ?

ರಮೆ:– ಹೌದು.

ಮುರಳಿ:– ಒಂದು ವೇಳೆ ಹಣ ಬಯಸಿದವನು ತಾನು ಬಯಸಿದಷ್ಟು ಹಣವನ್ನು ಪಡೆಯುತ್ತಾನೆ ಎಂದಿಟ್ಟುಕೊಳ್ಳೋಣ. ಅಲ್ಲಿಂದ ಅನಂತರ ಅವನಿಗೆ ಜೀವನದುದ್ದಕ್ಕೂ ಸುಖವೇ ಸಿಕ್ಕುತ್ತದೆ, ದುಃಖ ಬರುವದೇ ಇಲ್ಲ ಎಂದು ಹೇಳಬಹುದೆ ?

ರಮೆ:– ಅದು ಹೇಗೆ ಹೇಳುವದು ? ಒಂದು ಬಂದರೆ ಇನ್ನೊಂದು ಬೇಕೆನಿಸುತ್ತದೆ.

ಮುರಳಿ:– ಅಂದರೆ, ಬಯಕೆಗೆ ಮುಕ್ತಾಯವೆಂಬದೇ ಇಲ್ಲ ಎಂಬದು ಎಲ್ಲರ ಅನುಭವ. ಸುಖವನ್ನು ಹೊಸ ಹೊಸ ವಸ್ತುಗಳಲ್ಲಿ ಹುಡುಕುತ್ತಾ ಹೋಗುವದೇ ಜೀವಿಯ ಸ್ವಭಾವ ಎಂದಂತಾಯಿತು. ಅರ್ಥಾತ್, ಸುಖವನ್ನು ಹುಡುಕುವದೇ ಅವನ ಹಣೆಯ ಬರಹ ಹೊರತು, ಸುಖವನ್ನು ಪಡೆದು ಪೂರ್ಣ ತೃಪ್ತನಾಗಿ ಕೂರಲು ಅವನ ಹಣೆಯಲ್ಲಿ ಬರೆದಿಲ್ಲ ಎಂದು ಹೇಳಬಹುದಲ್ಲವೆ ?

ರಮೆ:– ಹೇಳಬಹುದು.

ಮುರಳಿ:– ಮನುಷ್ಯ ಸುಖವನ್ನು ಹುಡುಕುವದೇ ತನ್ನ ಜೀವನದ ಗುರಿಯನ್ನಾಗಿ ಪಡೆದಿರುವಾಗ ಪೂರ್ಣ ತೃಪ್ತಿ ಕೊಡುವ ಸುಖವನ್ನು ನಿಶ್ಚಯವಾಗಿ ಪಡೆಯುವ ಒಂದೇ ಒಂದು ಮಾರ್ಗ ಸಾಧ್ಯವಿರುವದು ದೇವರ ಮೂಲಕ ಎಂಬದನ್ನು ಸಾವಿರಾರು ವರ್ಷಗಳ ಅಧ್ಯಯನ, ಪ್ರಯೋಗಗಳ ಮೂಲಕ ನಮ್ಮ ಹಿಂದಿನವರು ಕಂಡುಕೊಂಡರು.

ರಮೆ:– ಅದು ಹೇಗೆ ?

ಮುರಳಿ:– ಹೇಳುತ್ತೇನೆ ತಾಳು. ನಾವು ಸುಖವನ್ನು ಈ ಲೋಕದ ಯಾವ ಯಾವ ವಸ್ತುಗಳಲ್ಲಿ ಹುಡುಕುತ್ತೇವೋ ಆ ಯಾವದರಿಂದಲೂ ಶಾಶ್ವತವಾದ, ಪೂರ್ಣ ತೃಪ್ತಿಯನ್ನು ಕೊಡುವಂತಹ ಸುಖ ದೊರಕುವದಿಲ್ಲ ಎಂಬದನ್ನು

ಕೋಟ್ಯಂತರ ಜೀವಿಗಳ ನೂರಾರು ವರ್ಷಗಳ ಕಾಲದ ಅನುಭವದಿಂದ ನಮ್ಮವರು ಕಂಡುಕೊಂಡರು. ನಿರಾತಂಕವಾಗಿ ಭೂಭಾಗಗಳನ್ನು ಆಳಿ ಸಕಲ ಭೋಗ ವಸ್ತುಗಳನ್ನೂ ಪಡೆದ ಚಕ್ರವರ್ತಿಗಳು, ಈಗ ಚಂದ್ರಲೋಕಕ್ಕೆ ಹೋಗಿ ಬರುತ್ತಿರುವಂತೆ ಸ್ವರ್ಗ ಮುಂತಾದ ಇತರ ಲೋಕಗಳಿಗೆ ಹೋಗಿ ಬರಲು ಸಾಮರ್ಥ್ಯವಿದ್ದ ಪ್ರತಿಭಾವಂತರು, ಲೋಕೈಕ ವೀರರೆನಿಸಿದವರು – ಹೀಗೆ ಯಾರ ಜೀವನವನ್ನೇ ನೋಡಿದರೂ ಕೂಡ ಅದು ಪೂರ್ಣ ತೃಪ್ತಿಯ ಜೀವನವಾಗಿರದಿದ್ದುದನ್ನು ನಮ್ಮವರು ಗಮನಿಸಿದರು. ಅಂದರೆ ಸುಖವು ಈ ಭೂಲೋಕದಲ್ಲಿ ಮಾತ್ರವೇ ಇಲ್ಲದಿರುವವಲ್ಲ, ನಮ್ಮವರು ನಂಬಿದ ಹದಿನಾಲ್ಕು ಲೋಕಗಳಲ್ಲಿ ಕೂಡ ಅದು ಪರಿಪೂರ್ಣ ಪ್ರಮಾಣದಲ್ಲಿ ಸಿಕ್ಕುವದಿಲ್ಲ ಎಂಬ ನಿಶ್ಚಿತ ಅಭಿಪ್ರಾಯ ಅವರದಾಯಿತು. ಸ್ವಲ್ಪ ಯೋಚಿಸಿದರೆ ನಾವು ಕೂಡ ಇದೇ ಅಭಿಪ್ರಾಯಕ್ಕೆ ಬರಬೇಕಲ್ಲವೇ ರಮಾ ?

ರಮೆ:– ಹೌದು, ಹೇಳಿ.

ಮುರಳಿ:– ಹಾಗೆ ಸುಖವು ಈ ಇಡಿಯ ವಿಶ್ವದಲ್ಲಿಯೇ ಎಲ್ಲಿಯೂ ಸಿಕ್ಕುವದಿಲ್ಲವೆಂಬ ಕಾರಣಕ್ಕಾಗಿ ಆ ಸುಖದ ಆಸೆಯನ್ನು ಬಿಟ್ಟಾದರೂ ಕೂರಲಿಕ್ಕೆ ಮಾನವನಿಗೆ ಸಾಧ್ಯವಿಲ್ಲ ಎಂಬ ವಿಚಾರವನ್ನೂ ಅವರು ಗಮನಿಸಿದರು. ಹೌದೋ ಅಲ್ಲವೋ ಹೇಳು.

ರಮೆ:– ಹೌದು ಅಣ್ಣೋಣ.

ಮುರಳಿ:– ಅಲ್ಲವೆ ? ಹೀಗೆ, ಪ್ರತಿಯೊಂದು ಜೀವಿಗೂ ಪ್ರತಿಯೊಂದು ಕಾಲದಲ್ಲಿಯೂ ಪ್ರತಿ ಕ್ಷಣದಲ್ಲಿಯೂ ದುಃಖರಹಿತವಾದ ಸುಖ ಬೇಕು. ಆದರೆ ಅಂತಹ ಸುಖವು ಈ ಭೂಲೋಕದಲ್ಲಿ ಮಾತ್ರವೇ ಏನು, ಬೇರೆಲ್ಲಿಯೂ ಕೂಡ ಸಿಕ್ಕುವದಿಲ್ಲ. ಇಂತಹ ಒಂದು ಸಾರ್ವತ್ರಿಕವಾದ, ಸರ್ವಕಾಲಿಕವಾದ ಮಾನವನ ಮೂಲ ಸಮಸ್ಯೆಗೆ ಶೋಧ ಬಹುಶಃ ಆದಿ ಮಾನವನ ಕಾಲದಿಂದಲೇ ಪ್ರಾರಂಭವಾಗಿರಬೇಕು. ದುಃಖ ನಿವಾರಣೆ, ಸುಖದ ಸ್ಥಾಪನೆ–ಈ ಪ್ರಯತ್ನ ಮಾನವನ ಜನ್ಮದೊಂದಿಗೇ ಪ್ರಾರಂಭವಾಗಿರಬೇಕು. ಈ ಭೂಲೋಕದ ಬೇರೆ ಬೇರೆ ಭಾಗಗಳಲ್ಲಿರುವ ಮಾನವರು ತಾವು ಹಾಗೆ ಮಾಡುತ್ತಿರುವದರ ಪರಸ್ಪರ ಅರಿವಿಲ್ಲದೆಯೇ ಸ್ವತಂತ್ರವಾಗಿ ಸಂಶೋಧನೆ ಮಾಡಿದರು. ಆದರೆ ಅವರೆಲ್ಲರೂ ಕೊನೆಯಲ್ಲಿ ಬಂದ ತೀರ್ಮಾನ ಒಂದೇ ಆಗಿತ್ತು. ಅದೆಂದರೆ, ಮಾನವನು ದುಃಖದ ಪರಿಹಾರಕ್ಕಾಗಿ ಹಾಗೂ ಸುಖದ ವೃದ್ಧಿಗಾಗಿ ಆಶ್ರಯಿಸಬೇಕಾದ ವಸ್ತು "ದೇವರು" ಎಂಬದು.

ರಮೆ:– ಅದು ಸರಿಯಪ್ಪಾ ! ದೇವರನ್ನು ಧ್ಯಾನ ಮಾಡಿದರೆ ದುಃಖ ಹೇಗೆ ಕಡಿಮೆಯಾಗುತ್ತದೆ, ಸುಖ ಹೇಗೆ ಹೆಚ್ಚುತ್ತದೆ ಅಂತ ನಾನು ಕೇಳಿದುದು !

ಮುರಳಿ:– ಅದು ಸರಿಯಮ್ಮಾ, ಅದನ್ನೇ ನಾನು ಹೇಳಲು ಹೊರಟಿರುವದು. ಕೇಳು. ಈ ಲೋಕದಲ್ಲಿ ನಾವು ಕಾಣುವಂತೆ ಒಬ್ಬನ ಜೀವನ ಇನ್ನೊಬ್ಬನದರಂತೆ ಇದೆಯೆ ?

ರಮೆ:– ಇಲ್ಲ.

ಮುರಳಿ:– ಇತರ ಬಾಹ್ಯ ಪರಿಸರಗಳೆಲ್ಲವೂ ಒಂದೇ ಬಗೆಯುವುಗಳಾಗಿರಬಹುದಾದರೂ ಕೂಡ ಎರಡು ವ್ಯಕ್ತಿಗಳು ತಮ್ಮ ಅಭಿರುಚಿಯಲ್ಲಿ, ಮನಸ್ಸಿನ ರಚನೆಯಲ್ಲಿ ಒಂದೇ ಬಗೆಯುವರಾಗಿರುವ ಸಾಧ್ಯತೆ ಇದೆಯೆ ?

ರಮೆ:– ಇಲ್ಲ.

ಮುರಳಿ:– ಇದರ ಕಾರಣವನ್ನು ನಮ್ಮವರು ವಿಶ್ಲೇಷಣೆ ಮಾಡಿದರು. ನಾವು ಈಗ ಪಡೆದಿರುವ ಈ ಜನ್ಮ, ನಮ್ಮ ಜೀವನದ ಪರಿಸರಗಳು, ನಮ್ಮ ದೇಹ, ನಮ್ಮ ಮನಸ್ಸಿನ ರಚನೆ–ಇವೆಲ್ಲವೂ ಹಿಂದಿನ ಯಾವದೋ ವಿಷಯದ ಪರಿಣಾಮ ಅಥವಾ ಫಲ ಎಂದೂ, ಇವುಗಳೇ ಮುಂದೆ ಬರುವ ಪರಿಣಾಮ ಅಥವಾ ಫಲಗಳಿಗೆ ಕಾರಣ ಎಂದೂ ಅವರು ತರ್ಕಿಸಿದರು.

ರಮೆ:– ಅಂದರೆ ?

ಮುರಳಿ:– ಅಂದರೆ ಏನಿಲ್ಲ. ನಾನು ಇಂದು ಯಾಕೆ ಹೀಗಿದ್ದೇನೆ ಎನ್ನುವದಕ್ಕೆ ನಾನೇ ಕಾರಣನಿದ್ದಿರಬೇಕು ಹೊರತು ಬೇರೆ ಯಾವದೂ ಕಾರಣವಾಗಿರಲಿಕ್ಕಿಲ್ಲ. ನಾನು ಈಗ ಉಣ್ಣುತ್ತಿರುವ ಊಟದಲ್ಲಿ ಉಪ್ಪಿಲ್ಲವಾದರೆ, ನಾನು ಈ ಹಿಂದೆ ಅಡುಗೆ ಮಾಡುವಾಗ ಉಪ್ಪು ಹಾಕದಿರುವದು ಕಾರಣ. ಅಥವಾ ನಾನು ಈಗ ಅಡುಗೆ ಮಾಡುವಾಗ ಉಪ್ಪು ಹಾಕದಿದ್ದರೆ ಅದರ ಪರಿಣಾಮವನ್ನು ಅನಂತರ ಊಟ ಮಾಡುವಾಗ ಪಡೆಯುತ್ತೇನೆ. ಅಲ್ಲವೆ ?

ರಮೆ :– ಹೌದು.

ಮುರಳಿ :–ಹಾಗಿರುವಾಗ ನಾನು ಇಂದು ಅನುಭವಿಸುತ್ತಿರುವದಕ್ಕೆ ಕಾರಣ ನಾನು ಈ ಹಿಂದೆ ಮಾಡಿದ ಕೆಲಸ. ಆದರೆ ಯಾವದೇ ಕೆಲಸವನ್ನು–ಅರ್ಥಾತ್ ಕರ್ಮವನ್ನು–ಮಾಡದಿರುವ ಶಿಶುಗಳ ಜೀವನದಲ್ಲಿ ಕೂಡ ಭಿನ್ನ ಅನುಭವಗಳು ಇರುವದರಿಂದ ನಮ್ಮ ಇಂದಿನ ಫಲಗಳಿಗೆ ನಾವು ಈ ಜನ್ಮದಲ್ಲಿ ಮಾಡಿದ ಕರ್ಮಗಳೇ ಕಾರಣವಾಗುವದಿಲ್ಲವೆಂದೂ, ನಮಗೆ ಈ ಹಿಂದೆಯೂ ಇಂತಹ ಜನ್ಮ ಇದ್ದಿರಲೇಬೇಕೆಂದೂ, ಆ ಜನ್ಮ ಅಥವಾ ಜನ್ಮಗಳಲ್ಲಿ ಮಾಡಿದ ಕರ್ಮಗಳ ಸಂಸ್ಕಾರವೇ ಈ ಜನ್ಮದಲ್ಲಿ ಫಲ ಕೊಡುತ್ತಿರಬೇಕೆಂದೂ, ಹಾಗಿದ್ದರೆ ಈ ಜನ್ಮದಲ್ಲಿ ಮಾಡಿದ ಕರ್ಮಗಳಿಗೆ ಇದೇ ಜನ್ಮದಲ್ಲಿ ಅಲ್ಲದೆ ಮುಂದಿನ ಜನ್ಮ ಅಥವಾ ಜನ್ಮಗಳಲ್ಲಿಯೂ

ನಾವು ಫಲವನ್ನು ಪಡೆಯಬೇಕಾದೀತು ಎಂದೂ ತರ್ಕಿಸಿದರು; ಅದನ್ನು ಪ್ರಯೋಗಗಳ ಮೂಲಕ, ಅನುಭವದ ಆಧಾರದ ಮೂಲಕ ಸಿದ್ಧಗೊಳಿಸಿಕೊಂಡರು.

ರಮೆ:– ಇಲ್ಲಿ ದೇವರೆಲ್ಲಿ ಬಂದರು ಎನ್ನುತ್ತೀನೆ ?

ಮುರಳಿ:– ದೇವರು ಬರುತ್ತಾರೆ. ಸ್ವಲ್ಪ ಶ್ರದ್ಧೆಯಿಂದ, ಭಕ್ತಿಯಿಂದ, ಗಂಭೀರವಾಗಿ ಕುಳಿತುಕೊ. ಆಯಿತೆ? ಹೀಗೆ, ನಮ್ಮ ಇಂದಿನ ಜೀವನವನ್ನು ನಾವೇ ಈ ಹಿಂದೆ ರೂಪಿಸಿಕೊಂಡಿದ್ದೇವೆ. ನಾಳಿನ ಜೀವನವನ್ನು ಇಂದು ರೂಪಿಸಿಕೊಳ್ಳುತ್ತಿದ್ದೇವೆ ಎಂಬದನ್ನು ನಿಶ್ಚಯಗೊಳಿಸಲಾಯಿತು. ಹಾಗಾದರೆ ಆ ಕಾರ್ಯ ಹೇಗೆ ನಡೆಯುತ್ತದೆ? ನಾವು ರೂಪಿಸಿಕೊಳ್ಳುತ್ತೇವೆ ಎಂದರೆ ಏನರ್ಥ? ನಮ್ಮ ಯಾವದು ನಮ್ಮ ಜೀವನವನ್ನು ಹೀಗೆ ರೂಪಿಸುತ್ತದೆ ? ಎಂಬದನ್ನು ತರ್ಕಿಸುವಾಗ ನಮ್ಮ ಚಟುವಟಿಕೆ ಅಥವಾ ನಾವು ಮಾಡುವ ಕರ್ಮಗಳು ಹೀಗೆ, ಮುಂದಿನ ನಮ್ಮ ಜೀವನವನ್ನು ರೂಪಿಸಲು ಶಕ್ತಿ ಪಡೆದಿವೆ ಎಂದು ಕಂಡುಕೊಂಡರು. ಹಾಗಿದ್ದರೆ ಈ ಕರ್ಮಗಳಿಗೆ ಆಧಾರವೇನು? ಪ್ರೇರಣೆ ಏನು? ನಾವು ಮಾಡುತ್ತಿರುವ ಒಂದು ಕರ್ಮವನ್ನು ನಾವು ಏಕಾಗಿ, ಯಾವದರಿಂದ ಪ್ರೇರಿತರಾಗಿ ಮಾಡುತ್ತಿದ್ದೇವೆ ಎಂಬದನ್ನು ತಿಳಿದುಕೊಂಡರೆ ಮಾತ್ರ ನಾವು ನಮ್ಮ ಕರ್ಮಗಳ ಮೇಲೆ ನಿಯಂತ್ರಣ ಹೇರಲು ಸಮರ್ಥರಾಗಿ ನಮಗೆ ಮುಂದೆ ಬೇಕಾದಂತಹ ಜೀವನವನ್ನು ಪಡೆಯಲು ಸಾಧ್ಯವಾಗುತ್ತದೆ ಎಂದು ಕಂಡುಕೊಂಡರು. ಅವರ ಈ ವಿಶ್ಲೇಷಣೆಯ ಫಲವಾಗಿ ಅವರಿಗೆ ದೊರೆತ ಉತ್ತರವೆಂದರೆ ನಾವು ಮಾಡುವ ಕರ್ಮಕ್ಕೆ ನಮ್ಮ ಮನಸ್ಸೇ ಆಧಾರ ಎಂಬದು. ಮನಸ್ಸಿನ ಪ್ರೇರಣೆಯಿಂದಾಗಿಯೇ ನಾವು ಈ ಎಲ್ಲ ಕರ್ಮಗಳನ್ನೂ ಮಾಡುವದು ಎಂಬ ಸಿದ್ಧಾಂತಕ್ಕೆ ಅವರು ಬಂದರು.

ರಮೆ:– ಅದೇನು ಮಹಾ ಸಿದ್ಧಾಂತ ? ನನಗೂ ಗೊತ್ತಾಗುತ್ತದೆ. ಮನಸ್ಸಿನಲ್ಲಿ ಒಂದು ಪ್ರೇರಣೆ ಹುಟ್ಟಿದುದರ ಫಲವಾಗಿಯೇ ನಾವು ಯಾವದೇ ಕೆಲಸ ಮಾಡುವದು ಎಂಬ ಇಷ್ಟೊಂದು ಸರಳ ವಿಚಾರ ನಿಮಗೆ ದೊಡ್ಡ ಸಿದ್ಧಾಂತ ಎನಿಸಿಬಿಟ್ಟು ಇಷ್ಟು ಹೊತ್ತು ನಷ್ಟ ಮಾಡಿಬಿಟ್ಟಿರಲ್ಲ !

ಮುರಳಿ:– ನೀನು ಹೀಗೆಲ್ಲ ಆಡುತ್ತಿದ್ದರೆ ದೇವರು ಖಂಡಿತ ಬರುವದಿಲ್ಲ, ಈಗಲೇ ಹೇಳಿಬಿಟ್ಟಿದ್ದೇನೆ.

ರಮೆ:– ಹೋಗಲೀ, ಹೇಳಿ. ಬಾಲಶಿಕ್ಷೆಯವರಿಗೆ ಹೇಳಿದಂತೆ ಹೇಳುತ್ತೀರಿ, ಹೇಳಿ.

ಮುರಳಿ:– ಮನಸ್ಸಿನ ಪ್ರೇರಣೆಯಿಂದಲೇ ನಾವು ಎಲ್ಲ ಕರ್ಮಗಳನ್ನೂ ಮಾಡುವದಾದರೆ........

ರಮೆ:– ಆದರೆ ಒಂದು. ಕೆಲವು ಕರ್ಮಗಳನ್ನು ನಾವು ಮನಸ್ಸಿನ ಪ್ರೇರಣೆ

ಯಿಲ್ಲದೆಯೇ ಮಾಡುವದಿಲ್ಲವೆ ? ಆಕಸ್ಮಿಕವಾಗಿ ಅಥವಾ ಅಜಾಗರೂಕತೆಯಿಂದ ಎಂದು ಕೆಲವು ಕೆಲಸಗಳು ಮನಸ್ಸಿಗೆ ತಿಳಿಯದೆಯೇ ನಡೆದುಹೋಗುವದಿಲ್ಲವೆ ?

ಮುರಳಿ:– ಈ ವಿಚಾರ ಎಲ್ಲ ನನಗೆ ಗೊತ್ತು ಎಂದು ಈ ಹಿಂದೆ ನೀನು ಹೇಳಿದ್ದಿಲ್ಲವೆ ?

ರಮೆ:– ಅಲ್ಲ. ಸಾಮಾನ್ಯವಾಗಿ ನಮ್ಮ ಎಲ್ಲ ಕೆಲಸಗಳನ್ನೂ ಮನಸ್ಸಿನ ಇಚ್ಛೆಯಂತೆ ನಾವು ಮಾಡುತ್ತೇವೆ ಅನ್ನಿಸಿತು. ಆದರೆ ಎಲ್ಲ ಕೆಲಸಗಳೂ ಹಾಗೆ ನಡೆಯುವದಿಲ್ಲವಲ್ಲ ಎಂಬ ಸಂಶಯು ಅನಂತರ ಬಂದಿತು.

ಮುರಳಿ:– ಹಾಗೆ. ಮನಸ್ಸಿನ ರಚನೆಯಲ್ಲಿಯೂ ಪ್ರಭೇದಗಳಿವೆ. ನಮ್ಮ ಗಮನಕ್ಕೆ ಬರುವ ಮನಸ್ಸಿನ ಚಟುವಟಿಕೆಗಳನ್ನು ನಾವು ಕಂಡುಕೊಳ್ಳಲು ಸಾಧ್ಯ ವಾಗುತ್ತದೆ. ಈ ಮನಸ್ಸಿನ ಪ್ರೇರಣೆಯಿಂದಲೇ ನಮ್ಮ ಜೀವನದ ಹೆಚ್ಚಿನ ಕರ್ಮ ಗಳು ನಡೆಯುವದು. ಆದರೆ ಸುಪ್ತವಾಗಿರುವ ಮನಸ್ಸಿನ ಲಕ್ಷಣ ನಮಗೆ ಸ್ಪಷ್ಟ ವಾಗಿ ತಿಳಿಯುವದಿಲ್ಲ. ಈ ಸುಪ್ತ ಮನಸ್ಸಿನ ಪ್ರೇರಣೆಯಿಂದಾಗಿಯೇ ಆಕಸ್ಮಿಕಗಳು, ಅಜಾಗರೂಕತೆಯಿಂದ ಎನಿಸಿಕೊಳ್ಳುವ ಕೆಲಸಗಳು ನಡೆಯುವದು.

ರಮೆ:– ಆಗಲಿ. ದೇವರ ವಿಚಾರ ಹೇಳಿ.

ಮುರಳಿ:– ಹೀಗೆ, ನಮ್ಮ ಎಲ್ಲ ಕರ್ಮಗಳಿಗೂ–ನಾವು ತಿಳಿದು ಮಾಡುವ ಅಥವಾ ತಿಳಿಯದೆ ಮಾಡುವ ಎಲ್ಲ ಕರ್ಮಗಳಿಗೂ ನಮ್ಮ ಮನಸ್ಸಿನ ಪ್ರೇರಣೆಯೇ ಕಾರಣ ಎಂಬದನ್ನು ನಮ್ಮ ಪೂರ್ವಜರು ಕಂಡುಕೊಂಡರು. ಹಾಗಿದ್ದರೆ ಮನಸ್ಸಿನ ಈ ಪ್ರೇರಣೆಗೆ ಕಾರಣವೇನು ಎಂಬದನ್ನು ಅವರು ಕಂಡುಹಿಡಿಯಬೇಕಾಯಿತು. ಹಾಗಾದರೆ ಈ ಮನಸ್ಸು ಎಂದರೆ ಏನು ? ಎಂಬದರ ಸಂಶೋಧನೆಗೆ ತೊಡಗಿ ದರು.

ರಮೆ:– ಭೀಮನ ಕತೆ ಹೇಳುತ್ತೇನೆ ಅಂತ ಹೊರಟು ದೇವರ ಕತೆ ಪ್ರಾರಂಭಿಸಿದಿರಿ. ಅದನ್ನು ಮುಗಿಸುವ ಮುಂಚೆಯೇ ಸುಖ–ದುಃಖ ಅಂತ ಶುರು ಮಾಡಿದಿರಿ. ಅವುಗಳ ಬಗೆಗೆ ಹೇಳುತ್ತಲೇ ಕರ್ಮ, ಪುನರ್ಜನ್ಮಗಳಿಗೆ ಹಾರಿದಿರಿ. ಅದಾದರೂ ಹೇಳುತ್ತೀರೋ ಅಂದರೆ ಈಗ ಮನಸ್ಸು, ಅದಕ್ಕೆ ಪ್ರೇರಣೆ ಅಂತ ಹೊರಟಿದ್ದೀರಿ. ಹಿಂದೆ ಏನಾದರೂ ಹರಿಕತೆ ಮಾಡುತ್ತಿದ್ದಿರೇನು ?

ಮುರಳಿ:– ನೀನು ಅಡ್ಡ ಮಾತನಾಡಿದಷ್ಟೂ ವಿಷಯದ ವಿಶ್ಲೇಷಣೆ ತೊಡ ಕಾಗುತ್ತದೆ. ನಾನು ಹೇಳುವದನ್ನೆಲ್ಲ ಕೇಳಿಯಾದ ಮೇಲೆ ಬೇಕಾದರೆ ಹತ್ತು ನಿಮಿಷ ನಿನ್ನ ಉಪನ್ಯಾಸ ನಡೆಯಲಿ. ಈಗ ಸುಮ್ಮನೆ ಕೇಳು.

ರಮೆ:– ಸಂಭಾಷಣೆಯ ಸಂಬಂಧವಾಗಿ ನಾನೊಂದು ರಬ್ಬರಿನ ಗೊಂಬೆ ಎಂದು ನೀವು ತಿಳಿದುಕೊಂಡಿರುವಂತೆ ಬೇರೆ ಸಂದರ್ಭದಲ್ಲಿ ತಿಳಿಯುವದಿಲ್ಲ

ತಾನೆ....... ! ತಪ್ಪಾಯಿತು, ತಪ್ಪಾಯಿತು. ಮುಂದುವರಿಸಿ. ಮನಸ್ಸು ಎಂದರೆ ಏನು ಎಂಬ ಸಂಶೋಧನೆಯಲ್ಲಿ ತೊಡಗಿದಿರಿ.

ಮುರಳಿ:– ನಾನಲ್ಲ ತೊಡಗಿದ್ದು. ನಮ್ಮ ಪೂರ್ವಜರು.

ರಮೆ:– ಅದೇ ಅದೆ. ನಿಮ್ಮ ಪೂರ್ವಜರು, ನೀವು ಎಲ್ಲ ಸೇರಿ ತೊಡಗಿದಿರಿ !

ಮುರಳಿ:– ವಿಷಯದ ಬಗೆಗೆ ನೀನು ಇಷ್ಟು ಲಘುವಾದ ಅಭಿಪ್ರಾಯ ವನ್ನಿಟ್ಟುಕೊಂಡರೆ ನಾನಂತೂ ಮುಂದೆ ಇಂತಹ ವಿಷಯಗಳನ್ನು ನಿನ್ನಲ್ಲಿ ಪ್ರಸ್ತಾಪಿಸುವದೇ ಇಲ್ಲ, ನೋಡು.

ರಮೆ:– ಛೆ, ನಡುವೆ ಏನೋ ತಮಾಷೆ ಮಾಡಿದೆ. ತಪ್ಪಾಯಿತು, ಹೇಳಿ.

ಮುರಳಿ:– ಈಗ, ಈ ವರೆಗೆ ನಾವು ಚರ್ಚಿಸಿದ ವಿಚಾರಗಳನ್ನೆಲ್ಲ ಸಂಗ್ರಹ ವಾಗಿ ಜ್ಞಾಪಿಸಿಕೊಂಡು ಮುಂದುವರಿಯೋಣ. ಮೊದಲನೆಯದಾಗಿ ಪ್ರತಿಯೊಂದು ಜೀವಿಯೂ ಸುಖವನ್ನು ಮಾತ್ರ ಬಯಸುತ್ತದೆ.

ಆ ಸುಖವನ್ನು ಪಡೆಯುವದಕ್ಕಾಗಿಯೇ ಜೀವಿಯು–ಮಾನವನು ಎನ್ನೋಣ– –ತನ್ನ ನೂರು ವಿಧದ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಾನೆ. ಅರ್ಥಾತ್, ಮಾನವನ ಎಲ್ಲ ಚಟುವಟಿಕೆಗಳ ಗುರಿಯೂ ಒಂದೇ–ಸುಖವನ್ನು ಪಡೆಯುವದು.

ಆದರೆ ಪೂರ್ಣ ತೃಪ್ತಿಯ ಸುಖವನ್ನು ಪಡೆಯುವದರಲ್ಲಿ ಮಾನವ ವಿಫಲ ನಾಗಿದ್ದಾನೆ–ಈ ಲೋಕದಲ್ಲಿಯೇ ಆಗಲಿ, ಬೇರೆಲ್ಲಿಯೇ–ಆಗಲಿ.

ನಾವು ಈ ಜನ್ಮದಲ್ಲಿಯೇ ಆಗಲಿ, ಹಿಂದಿನವರಲ್ಲಿಯೇ ಆಗಲಿ, ಮುಂದಿನದ ರಲ್ಲಿಯೇ ಆಗಲಿ ಪಡೆಯುವ ಸುಖ ಅಥವಾ ದುಃಖಗಳಿಗೆ ನಾವು ಮಾಡಿದ, ಮಾಡುತ್ತಿರುವ, ಮಾಡುವ ಕರ್ಮಗಳೇ ಕಾರಣ.

ಆ ಕರ್ಮಗಳಿಗೆ ಮನಸ್ಸೇ ಪ್ರೇರಕ. ಅಲ್ಲವೆ ?

ರಮೆ:– ಹೌದು.

ಮುರಳಿ:– ಅಂದರೆ, ಮಾನವನ ಪರಮ ಗುರಿಯಾದ ಸುಖವು ಕರ್ಮವನ್ನು ಅವಲಂಬಿಸಿದೆ. ಕರ್ಮವು ಮನಸ್ಸನ್ನು ಅವಲಂಬಿಸಿದೆ ಎಂದು ನೋಡಿದ್ದೇವೆ.

ಹಾಗಿರುವದರಿಂದ, ಮನಸ್ಸಿನ ಮೂಲಕ ಕರ್ಮವನ್ನೂ, ಆ ಮೂಲಕ ನಮ್ಮ ಸುಖವನ್ನೂ ನಿಯಂತ್ರಿಸಬಹುದು ಎಂದಂತಾಯಿತು. ಅರ್ಥಾತ್, ಮನಸ್ಸಿನ ಮೂಲಕ ಮಾನವನು ತನ್ನ ಪರಮಗುರಿಯಾದ ಸುಖವನ್ನು ಪಡೆಯ ಬಹುದು, ಅಥವಾ ಕಳೆದುಕೊಳ್ಳಬಹುದು ಎಂದಂತಾಯಿತು. ಅಲ್ಲವೆ ?

ರಮೆ:– ಹೌದು.

ಮುರಳಿ:– ಹಾಗಾದರೆ ಈ ಮನಸ್ಸನ್ನು ನಾವು ನಿಯಂತ್ರಿಸಬಹುದೆ ? ಅದು ಹೇಗೆ ನಡೆದುಕೊಂಡರೆ ನಮಗೆ ಸುಖ ಸಿಕ್ಕುತ್ತದೆ ? ಹಾಗೆ ನಡೆದುಕೊಳ್ಳುವಂತೆ ಮಾಡಲು ನಮಗೆ ಸಾಧ್ಯವೆ ? ಎಂಬ ಹಲವು ಪ್ರಶ್ನೆಗಳು ಹುಟ್ಟಿಕೊಂಡವು. ಅವುಗಳಿಗೆ ಉತ್ತರಗಳನ್ನು ಹುಡುಕುವದಕ್ಕೆ ಮುಂಚೆ ಈ ಮನಸ್ಸು ಎಂದರೇನು ? ಅದರ ರಚನೆಯ ಮೂಲ ವಸ್ತುವೇನು ? ಅದರ ಚಟುವಟಿಕೆಯ ಆಧಾರವೇನು ? ಎಂಬವನ್ನೆಲ್ಲ ಕಂಡುಹಿಡಿಯಬೇಕಾಯಿತು. ಈ ಘಟ್ಟದಲ್ಲಿ ನಾವು ಈ ಹಿಂದೆ ಮಾತನ್ನು ನಿಲ್ಲಿಸಿದ್ದೆವು. ಅಲ್ಲವೆ ?

ರಮೆ:– ಹೌದು.

ಮುರಳಿ:– ಮನಸ್ಸಿನ ವಿಚಾರ ಹೇಳುವಾಗ ಅದು ಏಕೆ, ಹೇಗೆ ಎಂಬ ವಿಶ್ಲೇಷಣೆ ಮಾಡುವದಿಲ್ಲ. ಅವನ್ನು ಮಾಡುತ್ತ ಹೋದರೆ ಭೀಮನ ಕತೆಗೆ ನಾವು ತಲಪುವದೇ ಇಲ್ಲ. ಅದರ ಬದಲಿಗೆ ನಮ್ಮ ಹಿಂದಿನವರು ಈ ಕುರಿತು ಬಂದ ತೀರ್ಮಾನಗಳನ್ನು ಮಾತ್ರ ಹೇಳಿಬಿಡುತ್ತೇನೆ. ಆಗದೆ ?

ರಮೆ:– ಆಗಲಿ, ಅಲ್ಲ: ಆಗಲೇಬೇಕು !

ಮುರಳಿ:– ಮನಸ್ಸು ಎಂಬದು ಒಂದು ಅಗೋಚರ ವಸ್ತು. ನಮ್ಮ ಗಾಢ ನಿದ್ರೆಯಲ್ಲಿ ಹೊರತು ಉಳಿದೆಲ್ಲ ಸಮಯಗಳಲ್ಲಿ ಸದಾ ಚಟುವಟಿಕೆಯಿಂದ ಕೂಡಿರುವ ವಸ್ತು. ನಮ್ಮ ಎಲ್ಲ ಚಟುವಟಿಕೆಗಳು, ನಮ್ಮ ಗುಣ ದೋಷಗಳು, ನಮ್ಮ ಅಭಿಪ್ರಾಯಗಳು, ನಮ್ಮ ಚಿಂತನೆ–ಒಟ್ಟಿನಲ್ಲಿ ನಮ್ಮ ವಿಶಿಷ್ಟ ವ್ಯಕ್ತಿತ್ವ ಮತ್ತು ನಮ್ಮ ಎಲ್ಲ ಕಾರ್ಯಗಳಿಗೆ ಆಧಾರವಾದ ವಸ್ತು ಈ ಮನಸ್ಸು. ಅದು, ನಾವು ನಮ್ಮ ಪಂಚೇಂದ್ರಿಯಗಳಿಂದ ಸಂಗ್ರಹಿಸಿದ ಅನುಭವಗಳನ್ನು ಆಧರಿಸಿ, ಅವುಗಳೆಲ್ಲವನ್ನೂ ಸಂವೇದನಾರೂಪದಲ್ಲಿ ಸಂಗ್ರಹಿಸಿಟ್ಟುಕೊಂಡಿರುತ್ತದೆ. ಇಂತಹ ಸಂಸ್ಕಾರಗಳನ್ನು ಹೊಂದಿದ ಈ ಮನಸ್ಸು ಯಾವದೋ ಒಂದು ಸ್ಪಷ್ಟವಾದ ಪ್ರಾಕೃತಿಕ ನಿಯಮಕ್ಕೆ ಒಳಪಟ್ಟು ನಮ್ಮ ಜೀವನದ ಆಯಾಯ ಕಾಲ, ಸನ್ನಿವೇಶಗಳಲ್ಲಿ ಸರಿಯಾಗಿ ನಮ್ಮ ಕರ್ಮಗಳಿಗೆ ಪ್ರೇರಣೆ ಕೊಡುವ ಗುಣವನ್ನೂ ಪಡೆದಿರುತ್ತದೆ.

ರಮೆ:– ಏಕೋ ಸ್ವಲ್ಪ ಕಷ್ಟವಾಗುತ್ತಿದೆ.

ಮುರಳಿ:– ಏನು ? ಸರಿಯಾಗಿ ಕುಳಿತುಕೊ !

ರಮೆ:– ಅಯ್ಯೋ, ಕುಳಿತಿರುವದಲ್ಲ. ನೀವು ಹೇಳಿದುವನ್ನು ಅರ್ಥ ಮಾಡಿಕೊಳ್ಳಲು ಸ್ವಲ್ಪ ಕಷ್ಟವಾಗುತ್ತಿದೆ ಎಂದೆ.

ಮುರಳಿ:– ಹಾಗೋ ! ಕಷ್ಟವೇನು ? ನೋಡು. ಒಂದು ಉದಾಹರಣೆ

ಕೊಡುತ್ತೇನೆ. ನೀನು ಒಬ್ಬಾತನಲ್ಲಿ ಜಗಳವಾಡಿರುತ್ತಿ ಎಂದಿಟ್ಟುಕೊ. ಆ ಜಗಳದ ಪರಿಣಾಮವು ನಿನ್ನ ಮನಸ್ಸಿನಲ್ಲಿ ಒಂದು ಬಲವಾದ ಸಂಸ್ಕಾರವನ್ನು ಉಂಟುಮಾಡಿರುತ್ತದೆ. ಸ್ವಲ್ಪ ಕಾಲ ಕಳೆದ ಮೇಲೆ ಆ ವಿಷಯವನ್ನೇ ನೀನು ಮರೆತುಬಿಡಬಹುದು. ಜೀವನದ ಇತರ ವಿಷಯಗಳಲ್ಲಿ ನೀನು ಮಗ್ನಳಾಗಿ ಬಿಟ್ಟಿರುತ್ತೀ. ಅನಂತರ ಎಂದೋ ಒಮ್ಮೆ ಆ ವ್ಯಕ್ತಿಯನ್ನು ಪುನಃ ಭೇಟಿ ಮಾಡುತ್ತೀ ಎಂದಿಟ್ಟುಕೊ. ನಿನ್ನ ಮನಸ್ಸಿನ ಮೇಲೆ ಬಹಳ ಹಿಂದೆ ಆಗಿದ್ದ ಈ ಸಂಬಂಧದ ಸಂಸ್ಕಾರ ಈ ವರೆಗೆ ಎಲ್ಲಿಯೋ ಸುಪ್ತವಾಗಿ ಅಡಗಿದ್ದುದು ಈಗ ತಟಕ್ಕನೆ ಚೇತರಿಸಿಕೊಳ್ಳುತ್ತದೆ. ಆ ಸಂಸ್ಕಾರವು ಶೀರಾ ಪ್ರಬಲವಾದುದಾಗಿದ್ದರೆ ಅದು ನಿನ್ನನ್ನು ಈಗ ಚಟುವಟಿಕೆಗೇ ಪ್ರೋತ್ಸಾಹಿಸುತ್ತದೆ. ನೀನು ಆತನಲ್ಲಿ ಈಗ ಪುನಃ ಜಗಳ ತೆಗೆಯಬಹುದು. ಅಥವಾ ಅವನನ್ನು ಕಂಡು ಮುಖ ಸೊಟ್ಟಗೆ ಮಾಡಿಕೊಳ್ಳಬಹುದು. ಅಥವಾ ಅವನ ಕುರಿತು ನಿನ್ನ ಗೆಳತಿಗೆ ಏನೋ ಹೇಳಬಹುದು. ಈಗ ಹಾಗೆ ಮಾಡುವದರಿಂದ ಆ ಕುರಿತಾದ ಸಂಸ್ಕಾರ ಪುನಃ ನಿನ್ನ ಮನಸ್ಸಿನ ಮೇಲೆ ಆಗುತ್ತದೆ. ಈ ಹಿಂದೆ ಈ ಸಂಬಂಧವಾಗಿ ಆದ ಸಂಸ್ಕಾರವನ್ನು ಇದು ಬಲಪಡಿಸುತ್ತದೆ. ಅಂದರೆ, ನಮ್ಮ ಮನಸ್ಸಿನ ಮೇಲೆ ಒಂದು ನಿಶ್ಚಿತ ವಿಷಯದ ಸಂಸ್ಕಾರವು ಪುನಃ ಪುನಃ ಆದರೆ ಅದು ಬಲಿಷ್ಠವಾದ ಪ್ರತಿಕ್ರಿಯೆಯನ್ನು ಸಾಧಿಸುವ ಶಕ್ತಿಯನ್ನು ಪಡೆಯುತ್ತದೆ.

ರಮೆ:– ಅರ್ಥವಾಯಿತು.

ಮುರಳಿ:– ಹಾಗಾದರೆ ಈಗ ಮನಸ್ಸಿನ ರಚನೆಯು, ನಾವು ನಮ್ಮ ಇಂದ್ರಿಯಗಳ ಮೂಲಕ ಪಡೆಯುವ ವಿವಿಧ ಅನುಭವಗಳ ಸಂಸ್ಕಾರಗಳಿಂದ ಆಗಿರುವದೆಂದೂ, ಮನಸ್ಸಿನ ಗುಣವು, ಆಯಾಯ ಕಾಲ ಸನ್ನಿವೇಶಗಳಿಗೆ ಅನುಗುಣವಾಗಿ ತನ್ನ ಮೇಲೆ ಈ ಹಿಂದೆ ಆಗಿರುವ ಸಂಸ್ಕಾರಗಳ ಆಧಾರದ ಮೇಲೆ ಶಾರೀರಿಕ ಕ್ರಿಯೆಗಳಿಗೆ ಪ್ರೇರಣೆ ಕೊಡುವಂತಹದೆಂದೂ ಹೇಳಿದಂತಾಯಿತು. ಅಲ್ಲವೆ ?

ರಮೆ:– ಹೌದು. ದೇವರು ?

ಮುರಳಿ:– ದೇವರು ಬರುತ್ತಾನೆ. ಈಗ ಮತ್ತೊಮ್ಮೆ ಪುನರಾವರ್ತನೆ ಮಾಡೋಣ. ಮಾನವನ ಪರಮ ಗುರಿಯಾದ ಸುಖವು ಅವನ ಕರ್ಮವನ್ನವಲಂಬಿಸಿದೆ. ಆ ಕರ್ಮವು ಅವನ ಮನಸ್ಸಿನ ಮೇಲೆ ಆಗಿರುವ ಸಂಸ್ಕಾರವನ್ನು ಅವಲಂಬಿಸಿದೆ.

ರಮೆ:– ನಿಜ.

ಮುರಳಿ:– ಅಂದರೆ, ಮಾನವನ ಪರಮ ಗುರಿಯಾದ ಸುಖವು ಅವನ

ಮನಸ್ಸಿನ ಮೇಲೆ ಆಗಿರುವ, ಆಗಲಿರುವ ಸಂಸ್ಕಾರವನ್ನು ಅವಲಂಬಿಸಿದೆ ಎಂದು ಹೇಳಿದಂತಾಯಿತು.

ರಮೆ:– ಇಷ್ಟು ಹೇಳುವದಕ್ಕೆ ಅದೆಷ್ಟು ವ್ಯಾಖ್ಯಾನ ?

ಮುರಳಿ:– ಅಷ್ಟು ಹೇಳದೆ ಇಷ್ಟನ್ನೇ ಹೇಳಿದ್ದರೆ ನೀನು........

ರಮೆ:– ಸರಿಯಪ್ಪಾ, ಸರಿ. ಹೇಳಿ.

ಮುರಳಿ:– ಹಾಗಿರುವದರಿಂದ, ನಮ್ಮ ಮನಸ್ಸಿನ ಮೇಲೆ ಆಗುವ ಸಂಸ್ಕಾರಗಳನ್ನು ನಿಯಂತ್ರಿಸುವದರಿಂದ ನಮ್ಮ ಸುಖ ದುಃಖಗಳನ್ನು ನಿಯಂತ್ರಿಸಬಹುದು ಎಂದಂತಾಯಿತು.

ರಮೆ:– ಹ್ಞೂಂ.

ಮುರಳಿ:– ಮನಸ್ಸಿನ ಮೇಲೆ ಯಾವ ವಿಧದ ಸಂಸ್ಕಾರಗಳನ್ನು ಉಂಟು ಮಾಡಿದರೆ ನಮ್ಮ ಸುಖ ಹೆಚ್ಚಬಹುದು ? ಎಂಬದು ಅನಂತರದ ಶೋಧವಾಗುತ್ತದೆ. ನಾವು ಈ ಹಿಂದೆಯೇ ನೋಡಿದ್ದೇವೆ–ಸುಖವು ಈ ಭೂಲೋಕದಲ್ಲಿ ಹೋಗಲಿ, ನಾವು ನಂಬುವ ಹದಿನಾಲ್ಕು ಲೋಕಗಳಲ್ಲಿ ಎಲ್ಲಿಯೂ ಸಿಕ್ಕುವದಿಲ್ಲ, ಅರ್ಥಾತ್ ಈ ವಿಶ್ವದ ಎಲ್ಲಿಯೂ ಕೂಡ ನಾವು ಸುಖವನ್ನು ಹುಡುಕುವದು ವಿಫಲ ಪ್ರಯತ್ನವಾಗುತ್ತದೆ ಎಂದು. ಅಲ್ಲವೆ ?

ರಮೆ:– ಹೌದು.

ಮುರಳಿ:– ಹಾಗಿರುವಾಗ ಈ ವಿಶ್ವದ ಯಾವದನ್ನೇ ಕುರಿತು ಚಿಂತಿಸಿದರೂ, ಅಂತಹ ಚಿಂತನೆಯಿಂದ ಮನಸ್ಸಿನ ಮೇಲಾಗುವ ಸಂಸ್ಕಾರದಿಂದ ನಮಗೆ ಸುಖ ಸಿಕ್ಕಲಾರದು ಎಂದಂತಾಯಿತು. ಹಾಗಾದರೆ, ಇನ್ನು ಏನನ್ನು ಚಿಂತಿಸಿದರೆ ಮನಸ್ಸು ಉತ್ತಮ ಸಂಸ್ಕಾರವನ್ನು ಹೊಂದುತ್ತದೆ ?

ರಮೆ:– ಯಾಕೆ ? ಇದ್ಯಾವದನ್ನೂ ಚಿಂತಿಸಬಾರದೆಂದರೆ ಏನೂ ಅಲ್ಲದ ಆಕಾಶವನ್ನು ಕುರಿತು ಚಿಂತಿಸಬಹುದಲ್ಲ ?

ಮುರಳಿ:– ಆಕಾಶ ಎಂದಾಗ ಸೀಮಿತವಾದ ಅರ್ಧಗೋಳ, ಅದಕ್ಕೆ ಕಾರಣ, ಅದು ಭೂಮಿಯನ್ನು ಮುಟ್ಟುವಂತೆ ಕಾಣುವಲ್ಲಿನ ದೃಶ್ಯ, ಆಕಾಶದೊಳಗಿನ ಗ್ರಹಗಳು–ಹೀಗೆ ಪುನಃ ಮನಸ್ಸಿನ ಮೇಲೆ ವಿವಿಧ ಚಿತ್ರಗಳನ್ನು ಮೂಡಿಸುವ ಸಂಸ್ಕಾರವೇ ಉಂಟಾಗುತ್ತದೆ. ಮನಸ್ಸಿನ ಮೇಲೆ ಯಾವ ನಿಷ್ಕೃಷ್ಟ ಚಿತ್ರವನ್ನೂ ಮೂಡಿಸದ, ಆದರೆ ಅದನ್ನು ಕುರಿತು ಪುನಃ ಪುನಃ ಚಿಂತಿಸಲು ಆಸಕ್ತಿ ಮೂಡಿಸುವಂತಹ ಏನನ್ನಾದರೂ ಕುರಿತು ಚಿಂತಿಸಿದರೆ ಮಾತ್ರ ಮನಸ್ಸು ದುಃಖವನ್ನು ಹೊತ್ತಿರದ ಸಂಸ್ಕಾರಗಳನ್ನು ಒಳಗೊಂಡಂತೆ ಆಗುತ್ತದೆ. ಹೀಗೆ ದುಃಖರಹಿತ

ವಾದ, ದುಃಖ ನಿವಾರಕವಾದ, ಅರ್ಥಾತ್ ಸುಖದಾಯಕವಾದ ಸಂಸ್ಕಾರಗಳನ್ನು ಉಂಟುಮಾಡಲು ದೇವರ ಚಿಂತನೆ ಮಾತ್ರ ಸಮರ್ಥವಾದುದು ಎಂಬ ತೀರ್ಮಾನಕ್ಕೆ ನಮ್ಮ ಹಿಂದಿನವರು ಬಂದಾಗಲೇ ದೇವನ ಆವಿರ್ಭಾವವಾದುದು.

ರಮೆ:– ದೇವರ ಚಿಂತನೆ ಅದು ಹೇಗೆ ಈ ಕೆಲಸ ಮಾಡುತ್ತದೆ?

ಮುರಳಿ:– ಹೇಳುತ್ತೇನೆ. ವಿಗ್ರಹ ಪೂಜೆಯು ದೇವಭಕ್ತಿಯ ಪ್ರಾರಂಭಿಕ ಹಂತ. ಅಲ್ಲಿ ಏನು ಮಾಡುತ್ತೇವೆ? ದೇವರನ್ನು ಮಿಾಯಿಸುತ್ತೇವೆ, ಅಲಂಕರಿಸುತ್ತೇವೆ, ಸುಂದರವಾದ ಹೂವು, ಸುಗಂಧಯುಕ್ತವಾದ ವಸ್ತುಗಳು–ಇವುಗಳನ್ನು ಅರ್ಪಿಸುತ್ತೇವೆ, ಅವನಿಗೆ ನೈವೇದ್ಯ ಮಾಡಿ "ಸ್ವೀಕರಿಸು" ಎಂದು ದೀರ್ಘದಂಡ ನಮಸ್ಕಾರ ಮಾಡುತ್ತೇವೆ, ಅವನ ಕೀರ್ತನೆಗಳನ್ನು ಹಾಡುತ್ತೇವೆ. ಮೊದ ಮೊದಲು ಇದರಲ್ಲಿ ಯಾವ ಒಂದು ಅರ್ಥವನ್ನೂ ಕಾಣದೆ ಅದನ್ನು ಯಾಂತ್ರಿಕವಾಗಿಯೋ, ಭಕ್ತಿರಹಿತವಾಗಿಯೋ ನಾವು ಮಾಡಬಹುದು. ಆದರೆ ಸದಾಚಾರದ ಕಟ್ಟುಪಾಡಿಗೆ ಒಳಗಾಗಿ ಬಲಾತ್ಕಾರದಿಂದ ಎಂಬಂತೆ ಇದನ್ನು ಆಚರಿಸಿದರೂ ಕೂಡ, ನಾವೇ ನಿರ್ಮಿಸಿಕೊಂಡಿರುವ ಆ ಮಧುರ ವಾತಾವರಣದ ಒತ್ತಡದಿಂದಾಗಿ ನಮಗೆ ಕ್ರಮಶಃ ಆ ದೇವನ ಬಗೆಗೆ ಕೆಲವು ಜಿಜ್ಞಾಸೆ ಹುಟ್ಟುವ ಸಾಧ್ಯತೆ ಇದ್ದೇ ಇರುತ್ತದೆ. ಈ ದೇವರೆಂದರೆ ಯಾರು? ಅವನ ಗುಣಗಳು ಏನು? ಅವನಿಗೂ ನನಗೂ ಅಥವಾ ಅವನಿಗೂ ಈ ಭೂಮಿಗೂ ಏನು ಸಂಬಂಧ? ಎಂಬ ದಾರಿ ಹೋಕ ಚಿಂತನೆಗಳಾದರೂ ನಮ್ಮ ಮನಸ್ಸನ್ನು ಹಾದುಹೋಗಬಹುದು. ಆ ಚಿಂತನೆಗಳೇ ಮೇಲೆ ಮೇಲೆ ಉಂಟಾದಾಗ ಅವು ಬಲಗೊಳ್ಳುತ್ತವೆ. ಆಗ ನಮ್ಮ ನೆನಪಿಗೆ ಬರುತ್ತದೆ–ದೇವರನ್ನು ದಯಾಮಯ ಎಂದಿದ್ದಾರೆ, ಕೃಪಾಸಾಗರ ಎಂದಿದ್ದಾರೆ, ಸರ್ವವ್ಯಾಪಿ ಎಂದಿದ್ದಾರೆ, ಕೋಟಿಸೂರ್ಯಪ್ರಕಾಶ ಉಳ್ಳವನು ಎಂದಿದ್ದಾರೆ ಎಂಬದು. ಸಾಗರದಷ್ಟು ಕೃಪೆ ಉಳ್ಳವನು ಎಂದರೆ ಅವನ ಕೃಪೆಯು ವಿಸ್ತಾರವೆಷ್ಟು? ಸರ್ವವ್ಯಾಪಿ ಎಂದರೆ ಅವನು ಎಲ್ಲೆಲ್ಲಿ ಎಲ್ಲ ಇದ್ದಾನೆ? ಭೂಮಿಯಲ್ಲಿ, ನೀರಿನಲ್ಲಿ, ಆಕಾಶದಲ್ಲಿ, ಗ್ರಹಗಳಲ್ಲಿ, ನಕ್ಷತ್ರಗಳಲ್ಲಿ, ಅದರಾಚೆ, ಆಚೆ, ಎಲ್ಲೆಲ್ಲಿಯೂ ಇದ್ದಾನೆ. ಕೋಟಿ ಸೂರ್ಯ ಪ್ರಭೆ ಎಂದರೆ ಅದರ ಪ್ರಕಾಶವೆಷ್ಟು? ಈ ಪ್ರತಿಯೊಂದು ಚಿಂತನೆ ಮಾಡುವಾಗಲೂ ನಮ್ಮ ಮನಸ್ಸಿನ ಕಲ್ಪನೆ ಕುಸಿದು ಬೀಳುತ್ತದೆ. ನಾವು ಕುಳಿತಿರುವದು ದೇವರ ಸಣ್ಣ ವಿಗ್ರಹದ ಮುಂದು-ಗಡೆ. ಆ ವಿಗ್ರಹದ ಮೂಲಕ ನಾವು ಚಿಂತಿಸಿರುವದು ನಮ್ಮ ಮನಸ್ಸಿನ ಕಲ್ಪನೆ ಕೂಡ ಹರಿಯಲಾರದಷ್ಟು ವಿಶಾಲವಾಗಿ. ಹೀಗೆ, ನಮ್ಮ ಮನಸ್ಸು ಯಾವದೇ ಸೀಮಿತ ಪ್ರಮಾಣದ ವಸ್ತು ಅಥವಾ ವಿಷಯವನ್ನು ಚಿಂತನೆ ಮಾಡದೆ ತನ್ನ ಕಲ್ಪನಾ ಸಾಮರ್ಥ್ಯ ಕೂಡ ಸೋಲುವಂತಹ ವಿಶಾಲವಾದ ಹರವಿನ ಚಿಂತನೆ

ಮಾಡುವದಕ್ಕೆ ಸಾಧ್ಯ ದೇವರ ಗುಣಗಳನ್ನು ಚಿಂತಿಸುವದರಿಂದ ಮಾತ್ರ ಎಂದು ಹೇಳಿದಂತಾಯಿತು. ಅಲ್ಲವೆ ?

ರಮೆ:– ಅದೇಕೆ ? ಅವನು ಸದ್ಗುಣಿ ಎಂದು ಯಾರೋ ಹೇಳಿದುದನ್ನು ನಾವು ನಂಬಬೇಕು ತಾನೆ ? ಅದರ ಬದಲಿಗೆ ಅವನು ಮಹಾ ಕ್ರೂರಿ, ಸಮುದ್ರ ದಷ್ಟು ವಿಶಾಲವಾದ ಕಠಿಣ ಹೃದಯಿ, ಅವನು ಕೋಟಿ ಸೂರ್ಯನಷ್ಟು ಪ್ರಕಾಶ ಮಾನವಾಗಿರುವದರ ಬದಲು ಅವನು ಕಗ್ಗತ್ತಲಿನ ರಾಶಿ ಎಂದೆಲ್ಲ ಏಕೆ ಚಿಂತಿಸ ಬಾರದು ?

ಮುರಳಿ:– ಚಿಂತಿಸಬಾರದೆಂದೇನೂ ಇಲ್ಲ. ಆದರೆ ಯಾವದೇ ಒಂದು ಚಿಂತನೆ ನಮ್ಮಲ್ಲಿ ಪುನಃ ಪುನಃ ಉಂಟಾದರೆ ಮಾತ್ರ ಅದು ಮನಸ್ಸಿನ ಮೇಲೆ ಶಕ್ತಿಶಾಲಿಯಾದ ಸಂಸ್ಕಾರವನ್ನು ಉಂಟುಮಾಡುತ್ತದೆ ಎಂದು ನೋಡಿದ್ದೇವೆ. ಹಾಗಾಗಿ ನಾವು ಒಮ್ಮೆ ಚಿಂತಿಸಿದುದನ್ನು ಪುನಃ ಚಿಂತಿಸುವಂತಾಗಬೇಕಾದರೆ ನಮಗೆ ಅದರಲ್ಲಿ ಆಕರ್ಷಣೆ ಹುಟ್ಟಬೇಕು. ಆಕರ್ಷಣೆ ಹುಟ್ಟಬೇಕಾದರೆ ಅದು ಸುಂದರವಾದುದೂ ಮನಸ್ಸಿಗೆ ಹಿತಕರವಾದುದೂ ಆಗಿರಬೇಕು. ಅವನು ಕ್ರೂರಿ, ನಿರ್ದಯಿ ಎಂದೆಲ್ಲ ಭಾವಿಸಿಕೊಳ್ಳುವದರಿಂದ ಹೀಗಾಗುವದಿಲ್ಲ. ಅದಕ್ಕಾಗಿಯೇ ದೇವರು ದಯಾಮಯನಾಗಿರುವದು, ಕರುಣಾಸಾಗರನಾಗಿರು ವದು, ಎಲ್ಲ.

ರಮೆ:– ಹೇಳಿಯಪ್ಪಾ, ಹೇಳಿ.

ಮುರಳಿ:– ಅದಕ್ಕೇ ನೋಡು. ನಾವು ಅವನನ್ನು ಸಾಕಾರನನ್ನಾಗಿ ಚಿಂತಿಸುವಾಗ ಕೂಡ ಅವನು ಸರ್ವಾಂಗ ಸುಂದರನೆಂದು ಚಿಂತಿಸುತ್ತೇವೆಯೇ ಹೊರತು, ಅವನಲ್ಲಿ ಎಳ್ಳಷ್ಟೂ ಕುರೂಪವನ್ನು ಕಾಣಲು ಇಚ್ಛಿಸುವದಿಲ್ಲ.

ರಮೆ:– ಆಯಿತು ಎಂದೆನಲ್ಲ, ಮುಂದೆ ಹೇಳಿ.

ಮುರಳಿ:– ಅಲ್ಲಿಂದ ಮುಂದೆ ನಾವು ದೇವರ ಸಣ್ಣ ವಿಗ್ರಹವನ್ನೇ ಕೇಂದ್ರವಾಗಿಟ್ಟುಕೊಂಡು, ಅಥವಾ ಅದರ ಅವಶ್ಯಕತೆ ಇಲ್ಲದೆ ಅವನ ಸ್ವರೂಪ ವನ್ನು ವಿಸ್ತರಿಸುತ್ತ ಹೋಗುತ್ತೇವೆ. ಅವನು ವಿರಾಡ್ರೂಪಿ. ವಿರಾಟ್ ಎಂದರೆ ಎಷ್ಟು ? ನಮ್ಮ ಕಲ್ಪನೆ ಸೋಲುತ್ತದೆ. ಅವನು ಸರ್ವಾಂತರ್ಯಾಮಿ, ಸರ್ವ ವ್ಯಾಪಿ. ಅದು ಹೇಗೆ ? ಅವನು ಈ ವಿಶ್ವದಲ್ಲಿ ಎಲ್ಲ, ಎಲ್ಲ ಕಡೆಗಳಲ್ಲಿಯೂ ಇದ್ದುಕೊಳ್ಳುವದು ಹೇಗೆ ? ಯಾವ ರೂಪದಲ್ಲಿ ಇರುತ್ತಾನೆ ? ಹಾಗಿದ್ದರೆ ಅವನನ್ನು ನಾವು ಚಿಂತಿಸುವದಾದರೂ ಹೇಗೆ ? ಏನನ್ನು ಕುರಿತು ಚಿಂತಿಸಿದರೆ ಅವನನ್ನು ಕುರಿತು ಚಿಂತಿಸಿದಂತಾಗುತ್ತದೆ ? ನಾವು ಕಲ್ಪಿಸಿಕೊಳ್ಳುವ ಈ ಯಾವ ಒಂದನ್ನು ಕುರಿತು ಚಿಂತಿಸಿದರೂ ಅವನನ್ನು ಅವನ ಪೂರ್ಣ ಸ್ವರೂಪ

ದಲ್ಲಿ ಚಿಂತಿಸಿದಂತಾಗುವದಿಲ್ಲ. ಅವನು, ನಮಗೆ ತಿಳಿಯುವ ಈ ಎಲ್ಲವೂ ಹೌದು, ಇದನ್ನೆಲ್ಲ ಮೀರಿದವನೂ ಹೌದು. ಈ ಹಂತದ "ದೇವರ ಚಿಂತನೆ"ಯು ಮೇಲೇರಿ, ಕೆಳಗೆ ಬಿದ್ದು, ಮೇಲೇರಿ, ಕೆಳಗೆ ಬಿದ್ದು ವಿಚಿತ್ರವಾದ ಅನುಭವ ವನ್ನು ಕೊಡುತ್ತದೆ. ದೇವರು ಹೀಗೆ ಅಮೂರ್ತ ಸ್ವರೂಪನೆಂದು, ನಾವು ಕಲ್ಪಿಸಿಕೊಳ್ಳಲಾಗದಷ್ಟು ವಿಶಾಲವಾದ ವ್ಯಾಪ್ತಿಯುಳ್ಳವನೆಂದು ನಾವು ನಂಬಿ ಕೂಡ ಅವನನ್ನು ಕುರಿತು ಚಿಂತಿಸುತ್ತಿರುವದೆಂಬದೇ ತಪಸ್ಸು, ಧ್ಯಾನ–ಎಲ್ಲ.

ರಮೆ:– ಇರಬಹುದು. ಆದರೆ ನಿಮ್ಮ ಮಾತಿನ ಪ್ರಕಾರ ಈ ಲೋಕದ ಕುರಿತಾದ ಯಾವ ಚಿಂತನೆಯೂ ಪೂರ್ಣ ಸುಖವನ್ನು ಕೊಡುವದಿಲ್ಲವೆಂಬದನ್ನು ಬೇಕಾದರೆ ಒಪ್ಪೋಣ. ಆದರೆ ಲೋಕಾತೀತವಾದ ದೇವರ ಅಮೂರ್ತ ಸ್ವರೂ ಪದ ಚಿಂತನೆ ಪೂರ್ಣ ಸುಖವನ್ನು ಕೊಡುತ್ತದೆಂದು ನಂಬುವದು ಹೇಗೆ ?

ಮುರಳಿ:– ನಮ್ಮ ಅನುಭವಕ್ಕೆ ಬಾರದ ವಿಷಯದ ಬಗೆಗೆ ಅನುಭವಿಗಳು ಹೇಳಿದುದನ್ನೇ ನಿಜವೆಂದು ನಂಬಬೇಕು ತಾನೆ ? ಒಬ್ಬರಲ್ಲ, ಇಬ್ಬರಲ್ಲ, ನೂರಾರು ಮಂದಿ ಮುಕ್ತಜೀವಿಗಳು ಪುನಃ ಪುನಃ ಒಂದೇ ವಿಧದ ಅನುಭವವನ್ನು ಪಡೆದು ಹೇಳಿದುದನ್ನು ನಂಬದಿರುವದು ಹೇಗೆ ?

ರಮೆ:– ಸರಿ. ಈಗ ಒಟ್ಟಿನಲ್ಲಿ ದೇವರಿದ್ದಾನೆಂದು ಆಯಿತೊ, ಇಲ್ಲವೆಂದು ಆಯಿತೊ ?

ಮುರಳಿ:– ನಂಬಿದರೆ ಇದ್ದಾನೆ. ಇಲ್ಲವಾದರೆ ಇಲ್ಲ.

ರಮೆ:– ಅಂದರೆ ಏನು ಹೇಳಿದಂತಾಯಿತು ?

ಮುರಳಿ:– ಯಥಾರ್ಥವನ್ನು ಹೇಳಿದಂತಾಯಿತು.

ರಮೆ:– ಹಾಗಲ್ಲ. ಈ ದೇವರ ಬಗೆಗೆ ಯಾಕೆ ಇಷ್ಟೆಲ್ಲ ಚರ್ಚೆ ಅಂತ ? ದೇವರಿದ್ದಾನೆ. ಅವನು ಪ್ರಭು, ನಾವು ಅವನ ಸೇವಕರು ಎಂದು ಹೇಳುತ್ತಾರೆ. ದೇವರಿಲ್ಲವೇ ಇಲ್ಲ ಎಂದೂ ಹೇಳುತ್ತಾರೆ. ನಾನೇ ದೇವರು ಎಂದು ಹೇಳುವ ಮೂರ್ಖರೂ ಇದ್ದಾರೆ. ಈ ರಗಳೆ ಸಾಲದೆಂಬದಕ್ಕೆ ಆತ್ಮ ಅಂತಲೋ, ಪರ ಮಾತ್ಮ ಅಂತಲೋ, ಪ್ರಕೃತಿ ಅಂತಲೋ ಎಲ್ಲ ಪರಿಚ್ಛೇದಗಳು ಬೇರೆ. ಈ ಕಬ್ಬಿ ಣದ ಕಡಲೆಗಳನ್ನೆಲ್ಲ ಕಡಿದು ಏನಾಗಬೇಕು ಅಂತ ?

ಮುರಳಿ:– ನಿನಗೆ ಏನೂ ಆಗಬೇಕಾಗಿಲ್ಲವೆಂದರೆ ಏನೂ ಆಗುವದು ಬೇಡ.

ರಮೆ:– ಹಾಗಲ್ಲ. ತಿಳಿಯಬೇಕು ಎಂಬ ಕುತೂಹಲವೂ ಇದೆ.

ಮುರಳಿ:– ಹಾಗಾದರೆ ತಿಳಿಯಲು ಪ್ರಯತ್ನಿಸು.

ರಮೆ:– ಹೇಳಿ, ನೋಡೋಣ, ಈ ಆತ್ಮ, ಪರಮಾತ್ಮ, ಜೀವ, ಜಡ, ಪ್ರಕೃತಿ, ಪುರುಷ ಅಂತ ಎಲ್ಲ ತಲೆ ಚಿಟ್ಟು ಹಿಡಿಸುವ ಇದೆಲ್ಲ ಏನು ಅಂತ.

ಮುರಳಿ:– ಹಾಗಾದರೆ ಭೀಮನ ಕತೆಯನ್ನು ಇನ್ನೊಮ್ಮೆ ಎಂದಾದರೂ ಹೇಳುತ್ತೇನೆ.

ರಮೆ:– ಹ್ಞಾಂ, ಹ್ಞಾಂ, ಅದಾಗದು. ಭೀಮನ ಕತೆಯನ್ನು ಮುಗಿಸಲೇ ಬೇಕು. ಏನೋ ಆ ಮಹಾರಾಯನ ದೆಸೆಯಿಂದ ಈ ಎಲ್ಲ ಒಳ್ಳೆಯ ವಿಚಾರಗಳ ಜಿಜ್ಞಾಸೆ ನಡೆಯುತ್ತಿದೆ. ಅವನ ಕತೆ ಬೇಕೇ ಬೇಕು.

ಮುರಳಿ:– ಹಾಗೆ ಬಾ. ಹಾಗಾದರೆ ನಿನ್ನ ಈ ಆತ್ಮ, ನನ್ನ ಆ ಪರ ಮಾತ್ಮ, ಅವರ ಈ ಪ್ರಕೃತಿ–ಎಲ್ಲದರ ಕುರಿತು ನಾಳೆ ವಿಮರ್ಶೆ ಮಾಡೋಣ. ಈಗ ಭೀಮನ ಕತೆಯನ್ನು ಮುಂದುವರಿಸುತ್ತೇನೆ.

ರಮೆ:– ಒಪ್ಪಿದೆ.

ಮುರಳಿ:– ನಿನ್ನೆ ಎಲ್ಲಿಗೆ ಬಿಟ್ಟಿದ್ದೆ ಹೇಳು ?

ರಮೆ:– ಎಲ್ಲಿಗಪ್ಪಾ ಅಂದರೆ....ಕೌರವ ಪಾಂಡವರ ಶಸ್ತ್ರವಿದ್ಯಾ ಪ್ರದರ್ಶನ ಮುಗಿದ ಮೇಲೆ ಭೀಮಾರ್ಜುನರು ದ್ರುಪದನನ್ನು ಹಿಡಿದು ತಂದು ಗುರು ದ್ರೋಣನಿಗೆ ಒಪ್ಪಿಸಿದರು. ಅವನು ಅವಮಾನಿತನಾಗಿ ದ್ರೌಪದಿ ಎಂಬ ಮಗ ಳನ್ನೂ, ದ್ರೋಣನನ್ನು ಕೊಲ್ಲಲಿಕ್ಕೆಂದು ಧೃಷ್ಟದ್ಯುಮ್ನ ಎಂಬ ಮಗನನ್ನೂ ಪಡೆದು ಅವನಿಗೆ ದ್ರೋಣನಿಂದಲೇ ಶಸ್ತ್ರವಿದ್ಯೆ ಹೇಳಿಸಿದನು.

ಮುರಳಿ:– ಭೇಷ್. ಆಯಿತೆ? ಪ್ರದರ್ಶನ ಶಾಲೆಯಲ್ಲಿ ಭೀಮ ದುರ್ಯೋ ಧನರಿಗೆ ನಡೆದ ಹೋರಾಟವನ್ನು ಕಂಡು ಪುರಜನರು ಹೆದರಿದರು. ತಮ್ಮ ಯುವರಾಜನಾದ ದುರ್ಯೋಧನನ ಮನಸ್ಸಿನಲ್ಲಿ ಭೀಮನ ಕುರಿತು ಸ್ಪಷ್ಟವಾಗಿ ಈಗ ಮೊಳೆತ ಭೀತಿಯು ಊರಿನ ಜನರ ಮಾತಿನ ವಿಷಯವಾಯಿತು. ಒಂದು ದಿನ ದುರ್ಯೋಧನನು ಕರ್ಣ, ಶಕುನಿ ಮೊದಲಾದವರೊಡನೆ ಮಂತ್ರಾ ಲೋಚನೆ ನಡೆಸುತ್ತಾ ದ್ರುಪದನ ರಾಜ್ಯದಲ್ಲಿ ತಮಗಾದ ಪರಾಭವವನ್ನೂ ಪಾಂಡವರಿಗಾದ ಜಯವನ್ನೂ, ಭೀಮನ ಅಸಾಮಾನ್ಯ ಬಲವನ್ನೂ ನೆನೆಸಿ ಕೊಂಡು ಬಹಳ ಅಸೂಯೆ ಪಡುತ್ತಾ "ಜವನದ ಸುಂದರ ವನದಲ್ಲಿ ತುರುಚೆಯ ಗಿಡವಿದ್ದಂತೆಯೂ, ಕಬ್ಬಿನ ವನದಲ್ಲಿ ಮುಳ್ಳಿನ ಗಿಡವಿದ್ದಂತೆಯೂ ನಮ್ಮ ಮಧ್ಯೆ ಆ ಭೀಮನಿದ್ದಾನೆ. ಉಳಿದ ನಾಲ್ವರು ಪಾಂಡವರಲ್ಲಿ ಯಾರ ಬಗೆಗೂ ನನಗೆ ಎಳ್ಳಷ್ಟೂ ಅಸೂಯೆಯಿಲ್ಲ. ಬೇಕಿದ್ದರೆ ಯುಧಿಷ್ಠಿರನೇ ಈ ರಾಜ್ಯವನ್ನು ಆಳಲಿ........"

ರಮೆ:– ಅಬ್ಬ.... ?

ಮುರಳಿ:– ಹೌದು ರಮಾ. ಇದರಿಂದ ತಿಳಿದುಕೊ, ಮಹಾಭಾರತ ಕತೆಯ ಪ್ರಧಾನ ನಾಯಕ ಭೀಮ ಎಂಬದಕ್ಕೆ ಮೊದಲನೆಯ ಸಾಕ್ಷ್ಯ ಇದು. ದುರ್ಯೋಧನನ ದುಃಖವನ್ನು ಕಂಡ ಕರ್ಣನು ತಾನು ಐವರು ಪಾಂಡವರನ್ನೂ ದಿಗ್ಬಲಿಕೊಟ್ಟು ಸುಯೋಧನನು ಸುರಕ್ಷಿತವಾಗಿರುವಂತೆ ಮಾಡುತ್ತೇನೆಂದನು. ಆದರೆ ಕರ್ಣನ ಈ ದುಡುಕಿನ ಮಾತಿಗೆ ತಡೆಯೊಡ್ಡಿದ ಶಕುನಿಯು ದೂರಾಲೋಚನೆಯನ್ನಿಟ್ಟು, ಶತ್ರುಗಳನ್ನು ನೇರವಾಗಿ ಎದುರಿಸುವದಕ್ಕಿಂತಲೂ ಅವರನ್ನು ತಂತ್ರದಿಂದ ನಾಶ ಮಾಡುವದು ಲೇಸೆಂಬದಕ್ಕಾಗಿ ಹೇಳಿದನು– ಅಪ್ಪಾ, ದುರ್ಯೋಧನಾ, ಕರ್ಣನು ಹೇಳುವದೇನೋ ಸರಿ. ಆದರೆ ಐದು ಮುಖ, ಹತ್ತು ತೋಳು, ಹದಿನೈದು ಕಣ್ಣುಗಳುಳ್ಳ ರುದ್ರನು ಒಂದು ಮುಖ, ಎರಡು ತೋಳು, ಎರಡು ಕಣ್ಣುಗಳನ್ನು ಧರಿಸಿ ಭೂಮಿಯಲ್ಲಿ ಹುಟ್ಟಿರುವಂತೆ ಭೀಮನು ಹುಟ್ಟಿದ್ದಾನೆ. ಅವನೆದುರಿನಲ್ಲಿ ಯಾರ ಆಟೋಪಗಳೂ ನಡೆಯುವದಿಲ್ಲ. ಸಾಲದುದಕ್ಕೆ ಯುದ್ಧದಲ್ಲಿ ಸೋಲನ್ನೇ ಕಾಣದ ಬಿಲ್ಗಾರನಾದ ಅರ್ಜುನನೂ ಇದ್ದಾನೆ. ಅವರು ಇನ್ನೂ ಬಲಿಷ್ಠರಾಗಿ ಬೆಳೆಯುವದಕ್ಕೆ ಮುಂಚೆ ಈಗಲೇ ಅವರನ್ನು ತೀರಿಸಿಬಿಟ್ಟರೆ ಮಾತ್ರ ನಿನ್ನ ಜೀವನವು ನಿರಾತಂಕವೆನಿಸೀತು. ಅದೂ ಏನು ? ಕಾಡಿನಲ್ಲಿ ಹುಟ್ಟಿದವರಿಗೆ ಕಾಡೇ ಗತಿಯಾಗಬೇಕು ಹೊರತು, ರಾಜ್ಯವು ಸಲ್ಲದು. ನನ್ನ ಸಲಹೆಯು ನಿನಗೆ ಒಪ್ಪಿಗೆಯಾಗುವದಿದ್ದರೆ ಹೇಳುತ್ತೇನೆ, ಕೇಳು. ಅರಗಿನಲ್ಲಿ ಒಂದು ಮನೆಯನ್ನು ಯಾರಿಗೂ ಗೊತ್ತಾಗದಂತೆ ನಾಜೂಕಾಗಿ ನಿರ್ಮಿಸಿ ಪಾಂಡವರನ್ನು ಉಪಾಯದಿಂದ ಮರಳುಮಾಡಿ ಅದರೊಳಗೆ ಸೇರಿಸಿ ಬೆಂಕಿ ಹಚ್ಚಬೇಕು....

ರಮೆ:– ಛೆ. ನಿಜವಾಗಿಯೂ ಆಗಿನ ಕಾಲದ ಜನರು ಅಷ್ಟು ನೀಚರೆ ?

ಮುರಳಿ:– ಆಗಿನ ಕಾಲದ ಜನರೂ ಕೆಲವರು ನೀಚರಾಗಿದ್ದರು. ಕೇಳು. ಶಕುನಿಯ ಈ ಸಲಹೆಯು ದುರ್ಯೋಧನನಿಗೆ ಬಹಳ ಒಪ್ಪಿಗೆಯಾಯಿತು. ಅದನ್ನು ಹೇಗಾದರೂ ಸಾಧಿಸಲೇಬೇಕೆಂದು ಅವನು ನಿಶ್ಚಯ ಮಾಡಿಕೊಂಡನು. ಅದೇ ದಿನ ರಾತ್ರಿ ಧೃತರಾಷ್ಟ್ರನಲ್ಲಿಗೆ ಹೋಗಿ ಎಲ್ಲವನ್ನೂ ವಿವರಿಸಿದನು. ಪಾಪ–ಪುಣ್ಯಗಳಿಗೆ ಅಂಜಿದ ಧೃತರಾಷ್ಟ್ರನು ಮೊದಲು ಒಪ್ಪಲಿಲ್ಲ.

ರಮೆ:– ಆಮೇಲೆ ಒಪ್ಪಿದ ?

ಮುರಳಿ:– ಹೌದು.

ರಮೆ:– ಏನು ಮನುಷ್ಯತ್ವ ಅವರದೆಲ್ಲ ?

ಮುರಳಿ:– ಧೃತರಾಷ್ಟ್ರ ಚಕ್ರವರ್ತಿಯೇನೋ ಹೌದು. ಆದರೆ ಕುರುಡನಾದ ಅವನಿಗೆ ತನ್ನ ಎಲ್ಲ ರಾಜ್ಯ, ಕೋಶ, ವೈಭವ, ಸರ್ವ ಸೌಖ್ಯಗಳೂ ಸೇರಿದ್ದುದು ದುರ್ಯೋಧನನೊಬ್ಬನಲ್ಲಿಯೇ. ತನ್ನ ಸಲಹೆಯನ್ನು ಧೃತರಾಷ್ಟ್ರನು

ಈಡೇರಿಸಿಕೊಡದಿದ್ದರೆ ತಾನು ಮನೆ ಬಿಟ್ಟು ಹೋಗುವದಾಗಿ ದುರ್ಯೋಧನನು ಬೆದರಿಕೆ ಹಾಕಿದಾಗ ಕುರುಡನು ಮಗನ ಸಲಹೆಗೆ ಒಪ್ಪಿಗೆ ಕೊಡಬೇಕಾಯಿತು. ಯಾವದೇ ಒಂದು ಪ್ರಬಲ ವ್ಯಾಮೋಹಕ್ಕೆ ಬಲಿಯಾದ ಮನುಷ್ಯನು ನ್ಯಾಯಾನ್ಯಾಯಗಳ ವಿವೇಚನೆಯನ್ನು ಕಳೆದುಕೊಳ್ಳುವದು ಆಶ್ಚರ್ಯವೇನೂ ಅಲ್ಲ. ಕುರುಡನು ಇದೇ ರೀತಿ ಪುತ್ರ ವ್ಯಾಮೋಹಕ್ಕೆ ಅಧೀನನಾಗಬೇಕಾಯಿತು.

ಈ ಸಲಹೆಯನ್ನು ಕಾರ್ಯರೂಪಕ್ಕೆ ತರುವ ತಂತ್ರದ ಅಂಗವಾಗಿ ಧೃತರಾಷ್ಟ್ರನು ಪಾಂಡವರನ್ನು ಕರೆಸಿ ಅವರಿಗೆ ಅರ್ಧರಾಜ್ಯವನ್ನು ಕೊಡುವದಾಗಿಯೂ ಇಂದ್ರಪ್ರಸ್ಥ ನಗರವು ಅವರ ರಾಜಧಾನಿಯಾಗಿರುವದಾಗಿಯೂ ತಿಳಿಸಿ ಅವರನ್ನು ಅವರ ರಾಜಧಾನಿಗೆ ಕಳುಹಿಸುವ ವ್ಯವಸ್ಥೆ ಮಾಡಿದನು. ಯಾವ ಕಪಟವನ್ನೂ ಅರಿಯದ ಪಾಂಡವರು ಒಂದು ಶುಭ ದಿನವನ್ನು ಗೊತ್ತು ಮಾಡಿ ಎಲ್ಲರಿಂದಲೂ ಬೀಳ್ಕೊಂಡು ಹೊರಟರು. ವಿದುರನು ರಹಸ್ಯವಾಗಿ ಕೆಲವು ಸಂಕೇತಗಳನ್ನು ಮಾಡಿ ಮುಂದೆ ಅವರಿಗೆ ಬರಲಿರುವ ಅಗ್ನಿಭಯವನ್ನು ಕುರಿತು ಎಚ್ಚರಿಸಿದ್ದನು.

ರಮೆ:– ಅವನು ಯಾರು, ಹೇಳಿ !

ಮುರಳಿ:– ವೇದವ್ಯಾಸರಿಗೆ ದಾಸಿಯೊಬ್ಬಳಲ್ಲಿ ಹುಟ್ಟಿದ ಧರ್ಮ ನಿರತ ವ್ಯಕ್ತಿ. ಈ ವೇಳೆಗಾಗಲೇ ಪುರೋಚನ ಎಂಬವನು ದುರ್ಯೋಧನನಿಂದ ಆಜ್ಞಪ್ತನಾಗಿ ಪಾಂಡವರು ಮಾರ್ಗದ ನಡುವೆ ತಂಗಬೇಕಾದ ಸ್ಥಳದಲ್ಲಿ ಅರಗು, ಕರ್ಪೂರ, ಬೆಲ್ಲ ಮೊದಲಾದ ದಾಹಕ ಪದಾರ್ಥಗಳಿಂದ ಒಂದು ಭವನವನ್ನು ನಿರ್ಮಿಸಿದ್ದನು. ಪೂರ್ವ ವ್ಯವಸ್ಥೆಯಂತೆ ಪಾಂಡವರು ಮಾರ್ಗ ಮಧ್ಯದಲ್ಲಿ ಆ ಮನೆಯೊಳಗೇ ರಾತ್ರೆ ತಂಗಿದರು. ಮನೆಯೊಳಗಿರುವಾಗ ಯುಧಿಷ್ಠಿರನಿಗೆ ವಿದುರನ ಸಂಕೇತ ನೆನಪಿಗೆ ಬಂದಿತು. ಆ ಸಂಕೇತವು ಇಲ್ಲಿ ಯಥಾರ್ಥವಾಗಿರುವದನ್ನು ಕಂಡ ಅವನು ಕೌರವರ ದೌರ್ಜನ್ಯವನ್ನು ನೆನೆಯುತ್ತ "ನಾವು ನಾಲ್ವರು ಸಮಿಧೆಗಳಾಗಿ, ಈ ಅರಗಿನ ಮನೆಯೆಂಬ ಅಗ್ನಿಕುಂಡದಲ್ಲಿ ಭೀಮನನ್ನೇ ಯಜ್ಞಪಶುವಾಗಿ ಮಾಡಿಕೊಂಡು ಕೌರವರು ಯಾಗ ಮಾಡಲು ಹವಣಿಸಿದರೆ! ಎಂದು ಸಂತಾಪದಿಂದ ನಕ್ಕನು.

ರಮೆ:– ನಾಲ್ವರೆಂದರೆ ಯುಧಿಷ್ಠಿರ, ಅರ್ಜುನ, ನಕುಲ, ಸಹದೇವರು.

ಮುರಳಿ:– ಹೌದು.

ರಮೆ:– ಅವರು ಸಮಿಧೆಗಳು.

ಮುರಳಿ:– ಹೌದು.

ರಮೆ:– ಭೀಮ, ಯಜ್ಞಪಶು.

ಮುರಳಿ:– ಹೌದು.

ರಮೆ:– ಹಾಗಾದರೆ ಕೌರವರ ಉದ್ದೇಶ ಭೀಮನನ್ನು ಸಮಾಪ್ತಿ ಮಾಡುವದು ಮಾತ್ರ ಎಂದಂತಾಯಿತು.

ಮುರಳಿ:– ಹೌದು.

ರಮೆ:– ಇತರ ನಾಲ್ವರು ಪಾಂಡವರು ಭೀಮನ ಜೊತೆಯಲ್ಲಿ ವಿಧಿಯಿಲ್ಲದೆ ಸಾಯಬೇಕಾವಷ್ಟಕ್ಕೆ ಮಾತ್ರ ಪಥಾರ್ಹರು ಎಂದಂತಾಯಿತು.

ಮುರಳಿ:– ಹೌದು.

ರಮೆ:– ಹೌದು, ಹೌದು, ಹೌದು. ಭೀಮ ಎಂದೊಡನೆ ಹಾರಿ ಬೀಳುತ್ತಿದ್ದ ನೀವು ಈಗ ನಾನು ಕೇಳಿದ್ದಕ್ಕೆಲ್ಲ ಬಸವನಂತೆ ಹೌದು, ಹೌದು ಎಂದು ತಲೆಯಾಡಿಸುತ್ತಾ ಕುಳಿತಿದ್ದೀರಿ ?

ಮುರಳಿ:– ನೀನು ಸರಿಯಾಗಿಯೇ ತಿಳಿದುಕೊಂಡಿದ್ದೀಯಲ್ಲ, ಮತ್ತೇನು ? ಕೌರವರ ದೃಷ್ಟಿಯಲ್ಲಿ–ಅಂದರೆ ಮಹಾಭಾರತ ಕತೆಯ ಖಳನಾಯಕರ ದೃಷ್ಟಿಯಲ್ಲಿ ಕಥಾನಾಯಕರಾದ ಪಾಂಡವರೆಂದರೆ ಭೀಮನೊಬ್ಬನೇ ಆಗಿದ್ದನೆಂಬದಕ್ಕೆ ಇದು ಸಾಕ್ಷಿ. ಉಳಿದ ನಾಲ್ವರು ಅವನ ಸೋದರರಾದುದರಿಂದಾಗಿ ಕತೆಯಲ್ಲಿ ಅಸ್ತಿತ್ವವನ್ನು ಪಡೆದರೇ ಹೊರತು, ಭೀಮನನ್ನು ಹೊರತಾಗಿ ಅವರು ಕತೆಯ ಪ್ರಧಾನ ಪಾತ್ರವನ್ನು ಪಡೆಯುತ್ತಿರಲಿಲ್ಲ. ಮಹಾಭಾರತದಂತಹ ಲೋಕೋತ್ತರವಾದ ಗ್ರಂಥದ ಮೂಲಕ ಪಾಂಡವರು ಅಂದಿನಿಂದ ಇಂದಿನ ವರೆಗೂ ಏನು ಕೀರ್ತಿಯನ್ನು ಗಳಿಸಿದ್ದಾರೋ ಅದು ಅವರಿಗೆ ಭೀಮನಿಂದಾಗಿ ಅಥವಾ ಭೀಮನಿದ್ದುದರಿಂದಾಗಿ–ಬಂದುದು ಎಂಬದರಲ್ಲಿ ಸಂಶಯವೇ ಇಲ್ಲ. ಧರ್ಮಕ್ಕೆ ಇಂತಹ ಒಂದು ಆಚಂದ್ರಾರ್ಕವಾದ ಕೀರ್ತಿಯನ್ನು ಗಳಿಸಿದ ಒಂದು ಚರಿತ್ರೆಯಲ್ಲಿ ಆ ಕೀರ್ತಿಗೆ ಪ್ರಧಾನ ನಿಮಿತ್ತವಾಗಿ ವಿಧಿಯು ಯಾವ ಒಬ್ಬ ಪುರುಷನನ್ನು ಆರಿಸಿತೋ, ಆ ಪುರುಷನು ಆ ಕೀರ್ತಿಗೆ ಅನುಗುಣವಾದ ಭವ್ಯ ವ್ಯಕ್ತಿತ್ವವನ್ನು ಹೊಂದಿಯೇ ಇರುತ್ತಾನೆ ಹೊರತು, ಅವನು, ಅನೇಕ ಪಂಡಿತರೆನಿಸಿಕೊಂಡವರು ಕೂಡ ವರ್ಣಿಸುವಂತೆ, ಕೇವಲ ರಣಮೂಢನಾದ ಯೋಧನಾಗಿರಲು ಸಾಧ್ಯವಿಲ್ಲ.

ರಮೆ:– ಇದನ್ನೆಲ್ಲ ನಿಮ್ಮ ಬಾಯಿಂದ ಕೇಳಬೇಕೆಂದೇ ನಾನು ನಿಮ್ಮನ್ನು ಕೆಣಕಿದುದು.

ಮುರಳಿ:– ನಿನ್ನ ಕುಚೇಷ್ಟೆ ನನಗೆ ಅರ್ಥವಾಗುತ್ತದೆ, ಕೇಳು. ನಮ್ಮ ಸಂಕಲ್ಪಕ್ಕಿಂತ ಮಿಗಿಲಾದುದು ವಿಧಿಯ ಸಂಕಲ್ಪ. ಅದೇ ದಿನ ಸಂಜೆ ಒಬ್ಬಳು

ಬೇಡಿತಿ ತನ್ನ ಐವರು ಮಕ್ಕಳೊಂದಿಗೆ ಅದೇ ಮನೆಯಲ್ಲಿ ತಂಗಿದ್ದಳು. ಇಷ್ಟರಲ್ಲಿಯೇ ವಿದುರನಿಂದ ಕಳುಹಿಸಲ್ಪಟ್ಟ ಖನಕನೆಂಬವನು ಪಾಂಡವರು ಹೊರಗೆ ಹೋಗಲು ಅನುಕೂಲವಾಗುವಂತೆ ಆ ಮನೆಯಿಂದ ಹೊರಡುವ ಒಂದು ಗುಪ್ತ ದ್ವಾರವನ್ನೂ ನಿರ್ಮಿಸಿದ್ದನು. ಬಹುಶಃ ನಡುರಾತ್ರಿಯಲ್ಲಿ ಪುರೋಚನನು ಮನೆಗೆ ಬೆಂಕಿ ಹಚ್ಚಬೇಕೆಂಬ ಏರ್ಪಾಡಿದ್ದಿರಬಹುದು. ಆದರೆ ಅದಕ್ಕೆ ಮುಂಚೆ ಪಾಂಡವರು ತಾವೇ ಆ ಮನೆಗೆ ಬೆಂಕಿ ಕೊಟ್ಟು ಸುರಂಗ ದ್ವಾರದಿಂದ ಹೊರಗೆ ನಡೆದರು. ಪುರೋಚನನೂ, ಐವರು ಮಕ್ಕಳ ಸಹಿತ ಬೇಡಿತಿಯೂ ಸುಟ್ಟು ಹೋದರು. ಆದರೆ ಸತ್ತವರು ಪಾಂಡವರೇ ಎಂದು ಎಲ್ಲರೂ ನಂಬಿದರು. ಕೌರವರು ಪಾಂಡವರಿಗೆ ಊರ್ಧ್ವದೈಹಿಕ ಕ್ರಿಯೆಗಳನ್ನೂ ಮಾಡಿ ಹಿಗ್ಗಿದರು.

ರಮೆ:— ಪಾಪಿಗಳು.

ಮುರಳಿ:— ನಿಜ. ಕೇಳು. ಈ ಕಡೆ ಪಾಂಡವರು ಒಂದು ಕಾಡನ್ನು ಸೇರಿ ಕತ್ತಲಿನಲ್ಲಿ ನಡೆದೂ ನಡೆದೂ ಬಹಳ ಬಳಲಿದರು. ಕುಂತಿಯೂ ನಕುಲ ಸಹದೇವರೂ ಕೊನೆಕೊನೆಗೆ ನಡೆಯಲು ಶಕ್ತಿ ಸಾಲದೆ ಕುಳಿತೇಬಿಟ್ಟರು. ಕುಂತಿಯು ಸ್ತ್ರೀ ಸಹಜವಾಗಿ "ಕೌರವರು ಬೇಕಿದ್ದರೆ ನಮ್ಮನ್ನು ಹಿಡಿದು ಕೊಲ್ಲಲಿ. ಅರಗಿನ ಮನೆಯಲ್ಲಿ ನಿಶ್ಚಿಂತೆಯಿಂದ ಸಾಯುತ್ತಿದ್ದ ನಮ್ಮನ್ನು ಹೊತ್ತು ತಂದು ಈ ಕಾಡಿನಲ್ಲಿ ಬಳಲಿಸುತ್ತಿರುವ ಭೀಮನೇ ನಮ್ಮ ನಿಜವಾದ ಶತ್ರು" ಎಂದು ಸಂಕಟದಿಂದ ಬುದ್ಧಿಭ್ರಮಣಗೊಂಡು ದೂರಿದಳು. ಇದರಿಂದ ಭೀಮನು ಪ್ರಚೋದನೆಗೊಂಡನು. ಅವನು ತನ್ನ ಒಂದು ಭುಜದಲ್ಲಿ ತಾಯಿಯನ್ನೂ, ಇನ್ನೊಂದರಲ್ಲಿ ಅಣ್ಣನನ್ನೂ, ಒಂದು ಕಂಕುಳಿನಲ್ಲಿ ಅರ್ಜುನನನ್ನೂ, ಇನ್ನೊಂದರಲ್ಲಿ ಮಾದ್ರಿಯ ಮಕ್ಕಳನ್ನೂ ಹೊತ್ತುಕೊಂಡು ಬಹಳ ದೂರ ನಡೆದನು.

ರಮೆ:— ಅವನ ಶರೀರದ ಗಾತ್ರವು ಆಗಿನ ಕಾಲದ ಇತರರಿಗಿಂತಲೂ ಬಹಳವಾಗಿ ದೊಡ್ಡದಿದ್ದಿರಬೇಕು.

ಮುರಳಿ:— ಖಂಡಿತವಾಗಿ ನಿಜ. ಹೀಗೆ ಐದು ಜನರನ್ನು ಹೊತ್ತು ಕಲ್ಲು, ಮುಳ್ಳು, ಕತ್ತಲೆಗಳನ್ನು ಲೆಕ್ಕಿಸದೆಯೇ ಬಹಳ ದೂರ ಕಾಡಿನಲ್ಲಿ ಸಾಗಿದ ಅವನು ತಾನು ಬಳಲಿದ್ದೇನೆನ್ನಲಿಲ್ಲ; ನೀರಡಿಸಿದ್ದೇನೆನ್ನಲಿಲ್ಲ; ಹಸಿವೆನ್ನಲಿಲ್ಲ. ಅವನು ಬಹಳ ಬಲಾಢ್ಯನಾಗಿದ್ದರೂ ಕೂಡ ಮಾನವ ಸಹಜವಾದ ಬಳಲಿಕೆಗಳಿಂದ ಹೊರತಾದವನಾಗಿರಲಿಲ್ಲ.

ಹೀಗೆ ಬಂದ ಅವನು ಸ್ವಲ್ಪ ವಿಶಾಲವಾದ ಒಂದು ಪ್ರದೇಶದಲ್ಲಿ ತನ್ನವರನು ಇಳಿಸಿ ತಾವರೆಯ ಎಲೆಯಲ್ಲಿ ನೀರನ್ನು ತಂದು ಎಲ್ಲರಿಗೂ ಕುಡಿಸಿದನು. ಗಿಡಗಳ

ಚಿಗುರುಗಳನ್ನು ಮುರಿದು ಹಾಸಿ ಮರದ ಅಡಿಯಲ್ಲಿ ಅವರು ವಿಶ್ರಮಿಸಲು ಅವಕಾಶ ಮಾಡಿಕೊಟ್ಟನು. ಆ ಐದು ಮಂದಿಯೂ ಬಳಲಿಕೆಯಿಂದ ನಿದ್ರಾವಶರಾದರು. ಆದರೆ ಅವರ ರಕ್ಷಣೆಯ ಹೊರೆಯನ್ನು ಹೊತ್ತಿದ್ದ ಭೀಮನು ನಿದ್ರಿಸುವಂತಿರಲಿಲ್ಲ. ಎಚ್ಚರವಾಗಿ ಕುಳಿತಿದ್ದ ಅವನು ತನ್ನ ತಾಯಿ ಮತ್ತು ಅಣ್ಣನ ಕಾಲುಗಳನ್ನು ಅವರಿಗೆ ಎಚ್ಚರಿಕೆಯಾಗದಂತೆ ಮೃದುವಾಗಿ, ಹಿತವಾಗಿ ಒತ್ತುತ್ತಾ ಅವರನ್ನೇ ದೃಷ್ಟಿಸಿ ನೋಡುತ್ತಿದ್ದಂತೆಯೇ, ಅವನಿಗೆ ಏಕೋ, ಅವನು ಹಿಂದೆಂದೂ ಅನುಭವಿಸದಷ್ಟು ದುಃಖ ಉಂಟಾಯಿತು. ಎಲ್ಲರ ಮುಖಗಳೂ ಬಾಡಿ ಕಳಾಹೀನವಾಗಿದ್ದವು, ಮೈ ಮಲಿನವಾಗಿತ್ತು, ತಲೆ ಕೆದರಿತ್ತು. ಭೀಮನಿಗೆ ವಿಪರೀತ ದುಃಖವಾಯಿತು. ರಾಜ್ಯವನ್ನು ಕೊಡುತ್ತೇವೆಂದು ಹೇಳಿ ಮೋಸದಿಂದ ಸುಟ್ಟು ಕೊಲ್ಲಲು ಬಯಸಿದ ತಂತ್ರಕ್ಕೆ ಸಿಕ್ಕಿ ಈಗ ತಾವು ಈ ಕಾಡಿನಲ್ಲಿ ದಿಕ್ಕಿಲ್ಲದವರಂತೆ ಬಿದ್ದಿರುವದನ್ನು ಜ್ಞಾಪಿಸಿಕೊಂಡು ಅವನು ಅಳಲಿದನು. ತನ್ನ ತಾಯಿಯ ಮುಖವನ್ನೇ ದಿಟ್ಟಿಸುತ್ತಾ ಅವನು ತನ್ನಷ್ಟಕ್ಕೇ "ಅಮ್ಮಾ, ನೀನು ನಿಜವಾಗಿಯೂ ಹಸ್ತಿನಾಪುರದ ರಾಣಿಯೆ! ನಿನ್ನ ಮಕ್ಕಳು ಮಹಾವೀರರೆನಿಸಿಕೊಂಡವರೆ! ನೀನು ಚಂದ್ರವಂಶದ ರಾಜನೊಬ್ಬನ ಪಟ್ಟದರಸಿಯೆ! ಅಯ್ಯೋ, ನಿನಗೆ ಒದಗಿರುವ ದುರವಸ್ಥೆಯೇ" ಎಂದುಕೊಳ್ಳುತ್ತಾ ಗಳಗಳನೆ ಅತ್ತನು.

ರಮೆ:– ಇದು ನಿಮ್ಮ ಸ್ವಂತ ಭಾರತ ಅಲ್ಲವಷ್ಟೆ?

ಮುರಳಿ:– ಏನು ಹಾಗಂದರೆ?

ರಮೆ:– ಅಲ್ಲ? ಭೀಮನ ಹೃದಯ ಮೃದುವಾಗಿತ್ತು ಎಂದು ತೋರಿಸಲು ವೇದವ್ಯಾಸ ಮತ್ತು ಕುಮಾರವ್ಯಾಸರು ಸಾಲದೆಂದು ನೀವೇನಾದರೂ ಒಬ್ಬ ಮರಿವ್ಯಾಸರಾಗಿ ಇದನ್ನು ಸೇರಿಸಿಲ್ಲ ತಾನೇ ಎಂದು ಕೇಳಿದೆ.

ಮುರಳಿ:– ವೇದವ್ಯಾಸ, ಕುಮಾರವ್ಯಾಸರನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗದೆ–ಆದರೆ ಅರ್ಥ ಮಾಡಿಕೊಂಡಿದ್ದೇವೆಂದು ನಂಬಿದ ಅನೇಕರು ಹಾಗೆ ಮಾಡುವದಿದೆ. ಆದರೆ ನಾನು ಅವರನ್ನು ಅರ್ಥ ಮಾಡಿಕೊಳ್ಳಲಿಕ್ಕೇ ಸಮರ್ಥನಲ್ಲ ಎಂದು ಆತ್ಮಪೂರ್ವಕವಾಗಿ ನಂಬಿದ್ದೇನೆ. ಹಾಗಾಗಿ ಅವರ ಬಳಿ ತಲಪಲು ಪ್ರಯತ್ನ ಪಡುತ್ತೇನೆ ಹೊರತು, ಅವರನ್ನು ಮೀರಿ ಹೋಗುವ ಧಾರ್ಷ್ಟ್ಯಕ್ಕೆ ಕೈ ಹಾಕಲಾರೆ. ಕೇಳು. ಭೀಮನ ವ್ಯಕ್ತಿತ್ವವನ್ನಾದರೂ ಈ ರೀತಿ ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದೇನೆ, ಅಷ್ಟೆ. ಅದನ್ನು ಪೂರ್ಣವಾಗಿ ತಿಳಿದಿದ್ದೇನೆ ಎಂದೂ ಹೇಳಲಾರೆ. ಇಲ್ಲಿನ ಭೀಮನ ದುಃಖ ಒಂದನ್ನೇ ವಿಮರ್ಶಿಸಿದರೆ ಅವನ ಪರಿಪಕ್ವ ವ್ಯಕ್ತಿತ್ವದ ದರ್ಶನ ನಮಗಾಗುತ್ತದೆ. ತನ್ನ ದುಃಖವನ್ನು ಮರೆತು ಇತರರಿಗಾಗಿ ಮರುಗುವ ಗುಣ ಅವನದು. ತನ್ನ ಬಳಲಿಕೆ, ನಿದ್ರೆಯ ಒತ್ತಡಗಳನ್ನು ಕಡೆಗಣಿಸಿ ತನ್ನ ತಾಯಿಗಾಗಿ ಅವನು ಏಕಾಂತದಲ್ಲಿ ಕಣ್ಣೀರಿಡುತ್ತಿದ್ದಾನೆ.

ಆದರೆ ಪೌರುಷವಂತನ ದುಃಖವು ಬಹಳ ಬೇಗ ಪೌರುಷಪ್ರಧಾನವಾದ ಸಿಟ್ಟಾಗಿ ಮಾರ್ಪಡುತ್ತದೆ. ಭೀಮನ ದುಃಖವೂ ಹೀಗೆಯೇ ಸಿಟ್ಟಾಗಿ ಮಾರ್ಪಟ್ಟು ಅವನು ಕೌರವರನ್ನು ಜ್ಞಾಪಿಸಿಕೊಳ್ಳುತ್ತಾ "ದುಷ್ಟಾ, ಧೃತರಾಷ್ಟ್ರ! ನಿನ್ನ ಬಯಕೆಯು ಈಗ ನೆರವೇರಿತೆ? ನನ್ನ ಈ ವೇದನೆಯ ಭರದಲ್ಲಿ ನಾನು ಈಗಿಂದೀಗಲೇ ನಿನ್ನಲ್ಲಿಗೆ ಬಂದು ನಿನ್ನನ್ನೂ ನಿನ್ನ ಮಕ್ಕಳನ್ನೂ ಆಹುತಿ ತೆಗೆದುಕೊಳ್ಳುತ್ತಿದ್ದೆ. ಆದರೆ, ಏನು ಮಾಡುವದು? ಧರ್ಮಮೂರ್ತಿಯಾದ, ನನ್ನ ಜ್ಯೇಷ್ಠನಾದ ಯುಧಿಷ್ಠಿರನಿಗೆ ನಿನ್ನ ಮೇಲೆ ಸಿಟ್ಟು ಬರಲೊಲ್ಲದು! ಹಾಗಾಗಿ ನೀನಿನ್ನೂ ಬದುಕಿರುವೆ" ಎಂದು ತನ್ನ ಮನೋವೇದನೆಯನ್ನು ತನ್ನಲ್ಲಿಯೇ ನುಂಗಿಕೊಂಡನು.

ರಮೆ:- ನಾನು ಈ ಹಿಂದೆ ಮಹಾಭಾರತವನ್ನು ಓದಿದ್ದರೂ, ನಿಜವಾಗಿ ಭೀಮನ ಕುರಿತು ಇದನ್ನೆಲ್ಲ ಓದಿದಂತೆಯೇ ನೆನಪಾಗುವದಿಲ್ಲ. ನೀವು ಇದನ್ನೆಲ್ಲ ಸ್ವಂತವಾಗಿ ಸೇರಿಸಿಯೇ ಹೇಳುತ್ತಿದ್ದೀರೋ ಏನೋ ಎಂಬ ಸಂಶಯ ಬರುವಂತೆಯೇ ಆಗುತ್ತಿದೆಯಪ್ಪ!

ಮುರಳಿ:-ಅದು ನಿನ್ನ ಓದುವ ಕ್ರಮದ ತಪ್ಪು. ಮಹಾಭಾರತವನ್ನು ಕೇವಲ ಮನೋರಂಜನೆಗಾಗಿ ಓದುವದು, ಸಮುದ್ರದಲ್ಲಿ ಕಪ್ಪೆಯ ಸಣ್ಣ ಚಿಪ್ಪುಗಳನ್ನು ಹುಡುಕುವದಕ್ಕಾಗಿ ನೀರಿನಲ್ಲಿ ಮುಳುಗಿ ತಾಸುಗಟ್ಟಲೆ ಇದ್ದು ಮೇಲೆ ಬರುವಂತಾಗುತ್ತದೆ. ತನ್ನ ಬದುಕಿಗಾಗಿ, ತನ್ನ ಸೌಕರ್ಯಗಳ ಲಾಭಕ್ಕಾಗಿ, ತನ್ನ ಶರೀರದ ರಕ್ಷಣೆಗಾಗಿ ತನ್ನ ಅಣ್ಣನನ್ನೇ ನಂಬಿ ಬದುಕಬೇಕಾಗಿರುವ ಒಬ್ಬ ತಮ್ಮನು ತನ್ನ ಅಣ್ಣನಲ್ಲಿ ಭಕ್ತಿ, ಗೌರವಗಳನ್ನು ತೋರಿಸುವದು ದೊಡ್ಡ ವಿಷಯವೇನೂ ಅಲ್ಲ. ತನ್ನ ಅಣ್ಣನಿಗೆ ಸೌಕರ್ಯ, ರಕ್ಷಣೆಗಳನ್ನು ತಾನೇ ಕೊಡುವಷ್ಟು ಬಲಾಢ್ಯನಾಗಿರುವ ಭೀಮನು ಅಣ್ಣನ ಒಡೆತನಕ್ಕೆ ತಲೆಬಾಗಿ ತನ್ನ ಶತ್ರುಗಳಿಂದ ತಾನು, ತನ್ನ ಪ್ರೀತಿಯ ತಾಯಿ, ಅಣ್ಣತಮ್ಮಂದಿರು ಮರಣಾಂತಿಕವಾದ ಸಂಕಷ್ಟಗಳನ್ನು ಅನುಭವಿಸಬೇಕಾಗಿ ಬಂದರೂ, ತನ್ನ ಶತ್ರುಗಳನ್ನೆಲ್ಲ ತಿಕ್ಕಿಹಾಕಲು ಸಮರ್ಥನಾಗಿದ್ದರೂ ಕೂಡ ಹಾಗೆ ಮಾಡದೆ ಒಳಗೇ ನೊಂದುಕೊಂಡು, ಆದರೂ ಅಣ್ಣನ ಸೇವೆ ಮಾಡುತ್ತ ಮುಂದುವರಿಯುವ ಅವನ ಗುಣ ಓದಿ ಮರೆಯುವಂತಹುದಲ್ಲ. ಬೆತ್ತದ ಕೋಲು ಬಗ್ಗುವದರಿಂದ ಅನೇಕ ಉಪಯೋಗಕ್ಕೆ ಬರುತ್ತದೆ. ಆದರೆ ಉಕ್ಕಿನ ಒಂದು ಕೋಲು ಬೆತ್ತದಂತೆ ಬಗ್ಗಬಹುದಾದರೆ ಅದರ ಬೆಲೆ ಬೆತ್ತದ ಬೆಲೆಗಿಂತ ಸಾವಿರಪಾಲು ಹೆಚ್ಚಾಗುತ್ತದೆ. ಇರಲಿ. ಕೇಳು.

ಹೀಗೆಯೇ ಸ್ವಲ್ಪ ಸಮಯವನ್ನು ತಳ್ಳಿದ ಭೀಮನಿಗೆ ಆಯಾಸದಿಂದಾಗಿ ನಿದ್ರೆಯು ಬಾಧಿಸತೊಡಗಿತು. ಬರಬರುತ್ತಾ ಅವನ ಮನಸ್ಥೈರ್ಯವನ್ನು ಪರೀಕ್ಷಿಸುವಷ್ಟರ ಮಟ್ಟಿಗೆ ಅದು ಪ್ರಬಲವಾದ ಬಾಧೆಯಾಯಿತು. ಆಗಾಗ ಕಣ್ಣುಗಳನ್ನರಳಿಸಿ ಇದನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದನು. ಆಗಾಗ ಬಲಾತ್ಕಾರವಾಗಿ

ತೂಕಡಿಕೆ ಬಂದುಬಿಡುತ್ತಿತ್ತು. ಆಗ ಮೈಯನ್ನೆಲ್ಲ ಜೋರಾಗಿ ಕೊಡವಿಕೊಂಡು ಇದನ್ನು ಪರಿಹರಿಸಲು ಪ್ರಯತ್ನಿಸುತ್ತಿದ್ದನು. ಆದರೂ ಮಿತಿಮೀರಿದ ಬಳಲಿಕೆಯಿಂದ ಒಮ್ಮೊಮ್ಮೆ ಅವನ ಪ್ರಯತ್ನಗಳನ್ನು ಮೀರಿ ಮೈ ಮರವೆ ಬಂದುಬಿಡುತ್ತಿತ್ತು. ತಾನೇ ಮೈ ಮರೆತರೆ ಈ ಘೋರವಾದ ಕಾಡಿನಲ್ಲಿ ತಾವು ಆರು ಮಂದಿಯೂ ಹೆಸರಿಲ್ಲದಂತಾಗಬಹುದೆಂದು ಯೋಚಿಸಿದ ಅವನು ಸಾಮಾನ್ಯ ಮಾನವರಿಗೆ ಕೇವಲ ಅಸಾಧ್ಯವಾದ ಪ್ರಚಂಡ ಮನಶ್ಶಕ್ತಿಯಿಂದ ಮೈ ಮರವೆಯನ್ನೂ ಸಂಪೂರ್ಣವಾಗಿ ಪರಿಹರಿಸಿಕೊಂಡು ಬಹಳ ಎಚ್ಚರದಿಂದ ಕಾಯುತ್ತಾ ಕುಳಿತನು.

ರಮೆ:- ಗಟ್ಟಿಗ.

ಮುರಳಿ:- ನಿನ್ನ ಮನೆಯಲ್ಲಿರುವ ಪಾತ್ರೆಗಳಲ್ಲೆಲ್ಲ ತುಂಬಿಸಿದರೂ ಇನ್ನೂ ಅಲ್ಲಿ ನೀರು ಉಳಿದಿರುವಪರಿಂಪ ಸಮುದ್ರದಲ್ಲಿ ತುಂಬ ನೀರಿದೆ ಎಂದು ಹೇಳುತ್ತಿರುವೆ.

ರಮೆ:- ಏನು ಒಗಟು ?

ಮುರಳಿ:- ನಿನಗೆ ತಿಳಿದಿರುವ ಶಬ್ದದಿಂದ ಭೀಮನ ಅಸಾಧ್ಯವಾದ ಮನಶ್ಶಕ್ತಿಯನ್ನು ವಿವರಿಸಲು ಪ್ರಯತ್ನಿಸಿದೆ ಎಂದೆ.

ರಮೆ:- ಹಾಗಾದರೆ ಅವನು ಗಟ್ಟಿಗನಲ್ಲವೆ ?

ಮುರಳಿ:- ಆ ಶಬ್ದ ಅಲ್ಲ ಎಂದೆ.

ರಮೆ:- ಬೇರೆ ಯಾವ ಶಬ್ದ ಬಳಸಬೇಕು ? ಬಳಸಿ.

ಮುರಳಿ:- ಶಬ್ದದ ಬಳಕೆಯಿಂದ ಅದನ್ನು ವಿವರಿಸಲು ಸಾಧ್ಯವಿಲ್ಲ. ಸಮುದ್ರದ ನೀರನ್ನು ಘನ ಅಡಿಗಳ ಲೆಕ್ಕದಲ್ಲಿ ಹೇಳುವದು ಸಾಧ್ಯವಾಗಬಹುದಾದರೂ ಅದು ಸರಿಯಾಗುವದಿಲ್ಲ. ಅದನ್ನು ನೋಡಬೇಕು, ಚಿಂತನೆಯನ್ನು ಹರಿಯಬಿಡಬೇಕು, ಮನಸ್ಸಿನಲ್ಲಿ ಅನುಭವಿಸಬೇಕು.

ರಮೆ:- ಭೀಮ ನಿದ್ದೆಯನ್ನು ಗೆದ್ದುದನ್ನು ?

ಮುರಳಿ:- ಅವನು ನಿದ್ದೆಯನ್ನು ಗೆದ್ದುದಷ್ಟೇ ಇಲ್ಲಿ ಒಳಗೊಂಡಿರುವದಲ್ಲ. ಒಬ್ಬ ಮನುಷ್ಯನ ಚೇತನ ಶಕ್ತಿಯನ್ನು ಸಂಪೂರ್ಣವಾಗಿ ಉಡುಗಿಸಿಡುವಷ್ಟು ದುಃಖ, ರೋಷಗಳ ಆಘಾತಕ್ಕೆ ಅವನು ಒಳಗಾಗಿದ್ದಾನೆ. ಒಬ್ಬಾತನ ಶರೀರ ಶಕ್ತಿಯನ್ನು ಸಂಪೂರ್ಣವಾಗಿ ಹೀರಿಬಿಡುವಷ್ಟು ಮಾರ್ಗಾಯಾಸ ಮತ್ತು ತನ್ನವರನ್ನು ಹೊತ್ತು ತಂದ ಬಳಲಿಕೆಗೆ ಗುರಿಯಾಗಿದ್ದಾನೆ. ಇಂತಹ ಸಂದರ್ಭಗಳಲ್ಲಿ ಸಾಮಾನ್ಯರು ಏನು ಮಾಡಿದರೂ ನಿವಾರಿಸಲು ಸಾಧ್ಯವೇ ಆಗದಂತಹ ನಿದ್ರೆಯ

ಅತಿಮಾನುಷ ಒತ್ತಡಕ್ಕೆ ಸಿಕ್ಕಿಬಿದ್ದಿದ್ದಾನೆ. ಸಾಲದುದಕ್ಕೆ ಕರ್ತವ್ಯ, ಜವಾಬ್ದಾರಿಕೆಗಳ ಮಹತ್ವವನ್ನು ಅರಿಯುವಷ್ಟು ಅನುಭವವನ್ನು ಪಡೆಯುವ ಪ್ರಾಯವಾಗದ ತಾರುಣ್ಯದಲ್ಲಿದ್ದಾನೆ. ಇದನ್ನೆಲ್ಲ ಅವನು ತನ್ನ ಮನಶ್ಶಕ್ತಿಯಿಂದ ಮೀರಿ ಕರ್ತವ್ಯ ನಿರತನಾದನೆಂದರೆ ಅವನು........

ರಮೆ:– ಗಟ್ಟಿಗನಲ್ಲವೆಂದೇ ಅರ್ಥ. ಅಲ್ಲ?

ಮುರಳಿ:– ಕುಚೇಷ್ಟೆ ಬಿಟ್ಟು ಕೇಳು ರಮಾ.

ರಮೆ:– ತಪ್ಪಾಯಿತು, ಹೇಳಿ.

ಮುರಳಿ:– ಈಗ, ನಿನ್ನಂತಹವರು ತಿಳಿದುಕೊಂಡಿರುವಂತಹ ಭೀಮ ಅವನಾಗಿದ್ದಿದ್ದರೆ ಅವನು ಮೇಲಿನ ಸಂದರ್ಭದಲ್ಲಿ "ನಿದ್ರೆ ಮಾಡುತ್ತಿರೋಣ, ಏನಾದರೂ ಬಂದರೆ ಎಚ್ಚರಗೊಳ್ಳಬಹುದು" ಎಂದುಕೊಂಡು, "ಈ ಕಾಡಿನಲ್ಲಿ ಅದೇನು ಬರುತ್ತದೆ!" ಎಂದು ತನ್ನ ಬಯಕೆಗೆ ಅನುಗುಣವಾದ ಅಭಿಪ್ರಾಯವನ್ನೂ ಸೃಷ್ಟಿಸಿಕೊಂಡು ಸಮಾಧಾನದಿಂದ ನಿದ್ರೆ ಮಾಡುವ ಜಡ ಸ್ವಭಾವದವನಾಗಬೇಕಿತ್ತು. ಆದರೆ ಅವನು ಅಂತಹ ಜಡನಲ್ಲ; ಸಾಮಾನ್ಯ ಸೂಕ್ಷ್ಮಮತಿಗಳಿಗೂ ಇಲ್ಲದಂತಹ ಸುಶಿಕ್ಷಿತ ಬುದ್ಧಿ ಆತನದು ಎಂಬದನ್ನು ನೀನು ಗಮನಿಸಬೇಕು.

ರಮೆ:– ಆದರೆ ಅವನು ಜಡನಂತೆ ವರ್ತಿಸಿದ ಸಂದರ್ಭಗಳೂ ಇವೆ.

ಮುರಳಿ:– ಇವೆ. ಭ್ರಾತೃವಾಕ್ಯವೆಂಬ ಕಟ್ಟಿನಿಂದ ಬಂಧಿತನಾದವನು ಅನಿವಾರ್ಯವಾಗಿ ನಿಷ್ಕ್ರಿಯನಾಗಬೇಕಾದ ಸಂದರ್ಭವನ್ನು ನೀವು ಅವನ ಜಡತನ ಎಂದು ಹೆಸರಿಸಿದ್ದೀರಿ. ಮುಂದೆ ಸಂದರ್ಭ ಬಂದಾಗ ಅದನ್ನು ವಿಮರ್ಶಿಸೋಣ. ಈಗ ಕೇಳು.

ರಮೆ:– ಹೇಳಿ, ಹೇಳಿ.

ಮುರಳಿ:– ಪಾಂಡವರು ಬಂದು ಸೇರಿದ್ದ ಆ ವನದಲ್ಲಿ ಹಿಡಿಂಬ ಎಂಬ ಒಬ್ಬ ರಾಕ್ಷಸನು ತನ್ನ ತಂಗಿ ಹಿಡಿಂಬಿ ಎಂಬವಳೊಡನೆ ವಾಸಿಸುತ್ತಿದ್ದನು. ಹಿಡಿಂಬನಿಗೆ ಮನುಷ್ಯರ ವಾಸನೆ ತಗಲಿತು. ತನ್ನ ಆಹಾರಕ್ಕಾಗಿ ಆ ಮನುಷ್ಯರನ್ನು ಹುಡುಕಿಕೊಂಡು ತರಬೇಕೆಂದು ತನ್ನ ತಂಗಿಯನ್ನು ಕಳುಹಿಸಿದನು. ಭಯಂಕರಾಕೃತಿಯುಳ್ಳ ಅವಳು ಬರುತ್ತ ದೂರದಿಂದ ಅಚ್ಚುಕಟ್ಟಾದ ದೇಹ ಸೌಷ್ಠವದಿಂದ ಮೆರೆಯುತ್ತಿದ್ದ ತರುಣ ಭೀಮನು ಕುಳಿತಿರುವದನ್ನು ಕಂಡು ಅವನಿಗೆ ತನ್ನ ಮನಸ್ಸನ್ನು ಸೋತಳು.

ರಮೆ:– ಅಂದರೆ?

ಮುರಳಿ:– ಹೆಣ್ಣಿಗೂ ಇದನ್ನು ಹೇಳಿಕೊಡಬೇಕೇನು ?

ರಮೆ:– ಅದನ್ನೇ ನಾನು ಕೇಳಿದ್ದು. ಸರಿ, ಮುಂದೆ ಹೇಳಿ.

ಮುರಳಿ:– ತಾನು ಅತೀ ಸುಂದರಿಯ ವೇಷ ತಾಳಿ ಭೀಮನೆದುರಿನಲ್ಲಿ ಸುಳಿದಳು. ಆದರೆ ಕಾರ್ಯ ಗೌರವದಲ್ಲಿದ್ದ ಭೀಮನು ಅವಳತ್ತ ನೋಡಲೇ ಇಲ್ಲ.

ರಮೆ:– ಭೇಷ್. ಭೀಮನ ಸ್ಥಾನದಲ್ಲಿ ನೀವಿರುತ್ತಿದ್ದರೆ ?

ಮುರಳಿ:– ನಾನೇನು ! ಬ್ರಹ್ಮರ್ಷಿಯಾಗುವದಕ್ಕೆ ಮುಂಚೆ ವಿಶ್ವಾಮಿತ್ರ ನಿರುತ್ತಿದ್ದರೂ ಕತೆ ಬೇರೆಯದಾಗುತ್ತಿತ್ತು.

ರಮೆ:– ಅಂತೂ ಭೀಮ ಅಷ್ಟೊಂದು ಸಂಯಮಿ ಎನ್ನುತ್ತೀರಿ.

ಮುರಳಿ:– ಅನ್ನುವದು ನಾನಲ್ಲ. ವ್ಯಾಸರು. ಕೇವಲ ಸಂಯಮಿ ಎಂದು ಹೇಳಿ ಅಷ್ಟಕ್ಕೇ ಬಿಟ್ಟುಬಿಡಬೇಡ. ಆ ಸಂಯಮದ ಅಗಾಧತೆಯನ್ನು ಅಳೆಯಲು ಪ್ರಯತ್ನಿಸು. ಭೀಮನು ಅವಿವಾಹಿತ ತರುಣ. ಸ್ಥಳ, ನಿರ್ಜನವಾದ ಗೊಂಡಾರಣ್ಯ. ಎದುರಿನಲ್ಲಿರುವದು ಬಯಸಿ ಬೇಡುತ್ತಿರುವ ಸುಂದರ ಹೆಣ್ಣು. ಇಷ್ಟಾಗಿ ಭೀಮನೇನೂ ಬ್ರಹ್ಮಚರ್ಯ ವ್ರತವನ್ನು ಕೈಗೊಂಡಿದ್ದವನಲ್ಲ. ಕೇವಲ ತನ್ನ ಜ್ಞಾತಿಗಳ ರಕ್ಷಣೆಯ ಹೊರೆ ಹೊತ್ತ ಕರ್ತವ್ಯವೊಂದೇ ಅವನನ್ನು ಇಂತಹ ಪ್ರಬಲ ಆಕರ್ಷಕ ಪರಿಸ್ಥಿತಿಯಿಂದಲೂ ವಿಮುಖನನ್ನಾಗಿ ಮಾಡಲು ಸಾಧ್ಯವಾಯಿತೆಂದರೆ ಅವನ ಸಂಯಮದ ಮಟ್ಟ, ಕರ್ತವ್ಯದ ಪ್ರಜ್ಞೆ, ಚಾರಿತ್ರ್ಯದ ಶುದ್ಧತೆ ಎಷ್ಟೆಂಬದನ್ನು ಊಹಿಸಿಕೊ.

ರಮೆ:– ಆಗಲಪ್ಪಾ, ಈಗೇನು ? ಅವನು ಮಹಾಶೀಲವಂತ ಎಂದು ಒಪ್ಪಿಕೊಂಡಿದ್ದೇನಲ್ಲ ! ಮುಂದಕ್ಕೆ ಹೇಳಿ.

ಮುರಳಿ:– ನೀನು ಒಪ್ಪಿಕೊಳ್ಳದಿದ್ದರೆ ಪರಿಸ್ಥಿತಿ ಬದಲಾಗುವದೂ ಇಲ್ಲ, ಅನ್ನು. ಕೇಳು. ಹಿಡಿಂಬಿಯು ತಾನು ಭೀಮನಿಗೆ ಮನಸೋತಿರುವದಾಗಿಯೂ ತಾವಿಬ್ಬರೂ ಹಿಮಾಚಲಕ್ಕೆ ಹೋಗಿ ವಿಹರಿಸಿಕೊಂಡಿರಲು ತಾನು ಬಯಸಿರುವದಾಗಿಯೂ ಭೀಮನು ಅದನ್ನು ನಡೆಸಿಕೊಡಬೇಕೆಂದೂ ಪ್ರಾರ್ಥಿಸಿದಳು. ಅಷ್ಟರಲ್ಲಿ ನಾಲಗೆಯ ಚಪಲಕ್ಕೆ ದಾಸನಾಗಿದ್ದ ಹಿಡಿಂಬನು ತನ್ನ ತಂಗಿಯು ಬರುವದಕ್ಕೆ ತಡ ಮಾಡಿದುದರಿಂದ ಅವಳ ಮೇಲೂ ಕೋಪಿಸಿಕೊಂಡು ಬೊಬ್ಬಿಡುತ್ತಾ ಭೀಮನಿಗೆದುರಾಗಿ ಬಂದನು. ಭೀಮನದೆಂತಹ ಕೆಚ್ಚೆದೆ ! ಗಂಡುಗಳ ಗಂಡಲ್ಲವೆ ಅವನು ! ಮೇಲಾಗಿ ಕರ್ತವ್ಯಪ್ರಜ್ಞೆ. ಶತ್ರುವು ಒಮ್ಮಿಂದೊಮ್ಮೆಗೇ ಮೇಲೇರಿ ಬರುತ್ತಿದ್ದಾಗ ಬೇರೆಯವರಾಗಿದ್ದರೆ ಅವನಿಗಿಂತ ಇಮ್ಮಡಿಯಾದ ಆಟಾಟೋಪದಿಂದ ಅವನ ಮೇಲೆ ಹಾರಿ ಬೀಳದಿರುತ್ತಿದ್ದರೆ ? ಇಷ್ಟಾಗಿ ತಾನು ತನ್ನ ಶತ್ರುವಿಗೆ ಆಹಾರವಾಗು

ವಂಥವನು ! ಹಾಗಿರುವಾಗ ಭೀಮನ ಭಯ, ಗಾಬರಿ ಎಷ್ಟಿರಬೇಕಿತ್ತು ! ಆದರೆ ಭೀಮನು ಹಾಗಲ್ಲ.

ರಮೆ:– ಜಡ !

ಮುರಳಿ:– ಅವನಿಗೆ ದೂರದೃಷ್ಟಿ ಸ್ವಾಭಾವಿಕವಾಗಿ ಬಂದಿತ್ತು. ಸ್ವಬಲದಲ್ಲಿ ಇತರ ಯಾವ ವೀರನಿಗೂ ಇಲ್ಲದ ನಂಬಿಕೆ ಇತ್ತು.

ರಮೆ:– ಹಾಗೆ !

ಮುರಳಿ:– ಹಾಗಾಗಿ ಅವನು ಹಿಡಿಂಬನನ್ನು ಕುರಿತು "ಎಲವೋ ನಾಯಿ. ಮಲಗಿದವರಿದ್ದಾರು. ದೂರ ನಡೆ. ಕುಸ್ತಿ ಮಾಡೋಣವಂತೆ" ಎಂದೆನ್ನುತ್ತಾ ಮೇಲಿದ್ದು ಅವನನ್ನು ತರುಬಿದನು. ತನ್ನ ಬೇಟೆಯ ಮೃಗ ಈ ರೀತಿ ತನ್ನ ಮೇಲೆಯೇ ಏರಿ ಬರಬಹುದೆಂದು ಆ ರಾಕ್ಷಸನು ಎಣಿಸಿರಬಹುದೆ ! ಅವನು ಮೊದ ಮೊದಲು ಭೀಮನನ್ನು ಕಡೆಗೆಣಿಸಿ ಹೊಡೆದಾಡಿದರೂ ಕೊನೆಕೊನೆಗೆ ತನ್ನ ಸರ್ವಶಕ್ತಿಯೂ ಭೀಮನ ಮುಂದೆ ವ್ಯರ್ಥವಾಗುತ್ತಿರುವದನ್ನು ಕಂಡು ಕೊಂಡನು. ಕೊನೆಗೂ ಬೇಟೆಯ ಮೃಗವೇ ಬೇಟೆಗಾರನನ್ನು ಆಹುತಿ ತೆಗೆದು ಕೊಂಡಿತು. ಹಿಡಿಂಬನು ಸತ್ತು ಬಿದ್ದನು. ಇವರ ಹೆಣಗಾಟದ ಈ ಶಬ್ದಕ್ಕೆ ಎಚ್ಚರ ಗೊಂಡ ಯುಧಿಷ್ಠಿರಾದಿಗಳು ರಾಕ್ಷಸನ ಶವವನ್ನು ನೋಡಿ ಬೆಚ್ಚಿ ಬಿದ್ದು ಭೀಮ ನನ್ನು ಕುರಿತು "ಭೀಮಾ, ನಮ್ಮನ್ನು ಎಚ್ಚರಗೊಳಿಸಿ ಇವನೊಂದಿಗೆ ಹೊಡೆದಾಡ ಬಾರದಿತ್ತೆ ? ಬಳಲಿದ ನಮ್ಮನ್ನು ಹೊತ್ತು ತಂದ ಬಳಲಿಕೆಯಲ್ಲಿಯೇ ನೀನು ಈ ರಾಕ್ಷಸನನ್ನು ಕೊಂದು ಹಾಕಿರುವೆ. ನಮ್ಮ ಪುಣ್ಯವೇ ಪುಣ್ಯ" ಎಂದು ಹೇಳಿ ಹರ್ಷಿಸಿದರು.

ಇಷ್ಟರಲ್ಲಿ, ಒಡ ಹುಟ್ಟಿದವನ ಸಾವಿಗಿಂತಲೂ ಸುಂದರಾಂಗನನ್ನು ಸೇರುವ ಚಿಂತೆಯಲ್ಲಿಯೇ ಕೊರಗುತ್ತಿದ್ದ ಹಿಡಿಂಬೆಯು ಕುಂತಿ, ಯುಧಿಷ್ಠಿರಾದಿಗಳ ಮೂಲಕವೂ ಭೀಮನಿಗೆ ಹೇಳಿಸಿದಳು. ರಾಕ್ಷಸಿಯನ್ನು ತಾನು ಒಲ್ಲೆನೆಂಬದು ಭೀಮನ ನಿಶ್ಚಯವಾಗಿತ್ತು. ಕೊನೆಗೆ ವೇದವ್ಯಾಸರು ಬಂದು ಭೀಮನಿಗೆ ಹಿಡಿಂ ಬೆಯಲ್ಲಿ ಒಬ್ಬ ಬಲಾಧಿಕನಾಗುವ ಕುಮಾರನಾಗುವನೆಂದು ಮುಂತಾಗಿ ಒಡಂ ಬಡಿಸಿದ ಮೇಲೆ ಋಷಿವಾಕ್ಯವನ್ನು ಮೀರಲಾರದೆ ಭೀಮನು, ಅವಳಲ್ಲಿ ತನಗೆ ಒಬ್ಬ ಮಗನಾಗುವ ವರೆಗೆ ಮಾತ್ರ ತಾನು ಅವಳ ಸಹವಾಸದಲ್ಲಿರುತ್ತೇನೆಂಬದಕ್ಕೆ ಅವಳ ಒಪ್ಪಿಗೆಯನ್ನು ಪಡೆದು ಅವಳೊಡನೆ ಅನೇಕ ಸ್ಥಳಗಳಲ್ಲಿ ವಿಹರಿಸಿದನು. ಕ್ರಮೇಣ ಅವಳಲ್ಲಿ ಅವನಿಗೆ ಘಟೋತ್ಕಚನೆಂಬ, ಮುಂದೆ ಅರಿಭಯಂಕರನಾಗುವ, ಮಗನು ಹುಟ್ಟಿದನು. ಮಗನನ್ನೂ ತಾಯಿಯನ್ನೂ ಅಲ್ಲಿಯೇ ನಿಲ್ಲಿಸಿ, ಅವರಿಗೆ ಬೇಕಾದಾಗ ತಾನು ಅವರನ್ನು ಬಂದು ನೋಡುವದಾಗಿ ಭೀಮನು ಅವಳನ್ನು

ಒಡಂಬಡಿಸಿದ ಮೇಲೆ ಪಾಂಡವರು ಬ್ರಾಹ್ಮಣ ವೇಷವನ್ನು ಧರಿಸಿ ಮುಂದೆ ನಡೆದರು.

ರಮೆ:– ಅದೇನು ?

ಮುರಳಿ:– ಯಾವದು ? ಎಲ್ಲಿ ?

ರಮೆ:– ಯಾವದು, ಎಲ್ಲಿ ! ಪಾಂಡವರು ಬ್ರಾಹ್ಮಣರ ವೇಷ ಧರಿಸಿದ್ದೇಕೆ ಅಂತ ?

ಮುರಳಿ:– ಅದೋ ! ಅದು ತಮ್ಮನ್ನು ಯಾರೂ ಪತ್ತೆ ಹಚ್ಚದಿರಲಿ ಎಂಬದಕ್ಕಾಗಿ. ಅಲ್ಲಿಂದ ಮುಂದೆ ಏಕಚಕ್ರವೆಂಬ ಒಂದು ಅಗ್ರಹಾರದಲ್ಲಿ ನಿಂತು ಭಿಕ್ಷಾಜೀವನ ನಡೆಸುತ್ತಾ ಕಾಲಹರಣ ಮಾಡಿದರು.

ರಮೆ:– ಎಂಥವರಿಗೆ ಎಂಥ ಜೀವನ !

ಮುರಳಿ:– ನಿಜವೇ. ಆದರೆ ಯಾವದೇ ಒಂದು ವಿಪತ್ತಿನ ಬಾಧೆಯನ್ನು ಅಳೆಯುವದು, ಅದು ಆ ವ್ಯಕ್ತಿಯ ಮನಸ್ಸಿನ ಮೇಲೆ ಎಂತಹ ಪರಿಣಾಮ ಮಾಡಿದೆ ಎಂಬದರಿಂದ. ಪಾಂಡವರು ಭಿಕ್ಷೆ ಬೇಡಿ ಜೀವಿಸುತ್ತಿದ್ದರೂ ಕೂಡ ನಿಯಮಿತವಾದ ಕ್ರಮದ ದಿನಚರಿಯಿಂದ ಬದುಕಿ, ಬೇಡಿ ತಂದ ಅನ್ನದಲ್ಲಿ ಸರಿ ಅರ್ಧ ಭಾಗವನ್ನು ಭೀಮನೊಬ್ಬನಿಗೇ ಕೊಟ್ಟು, ಉಳಿದ ಅರ್ಧ ಭಾಗವನ್ನು ತಾವು ಐವರೂ ಹಂಚಿಕೊಳ್ಳುತ್ತಿದ್ದರು.

ರಮೆ:– ಅಂತೂ, ಭೀಮನೆಂದರೆ ಭಯಂಕರ ಸ್ವರೂಪವಿದ್ದವನು ಎಂಬದು ಸುಳ್ಳಲ್ಲ.

ಮುರಳಿ:– ಯಾಕೆ ಸುಳ್ಳಲ್ಲ ?

ರಮೆ:– ಹಾಗಾದರೆ ಅವನದು ಭಯಂಕರ ಸ್ವರೂಪವಾಗಿರಲಿಲ್ಲವೊ ?

ಮುರಳಿ:– ಆಗಿರಲಿಲ್ಲ ಎಂದೆ.

ರಮೆ:– ಅವನು ಇತರರಂತೆಯೇ ಇದ್ದನೊ ?

ಮುರಳಿ:– ಇತರರಂತೆ ಎಂದರೆ ?

ರಮೆ:– ಇತರರಂತೆ ಎಂದರೆ ಬೇರೆಯವರಷ್ಟೇ ಉದ್ದವಾಗಿ, ದಪ್ಪವಾಗಿ ಇದ್ದನೋ ಅಂದೆ ?

ಮುರಳಿ:– ಇದ್ದಿರಲಿಕ್ಕಿಲ್ಲ.

ರಮೆ:– ಅವರಿಗಿಂತ ತುಂಬ ಹೆಚ್ಚು ಉದ್ದ-ದಪ್ಪ ಎಲ್ಲ ಇರಲಿಲ್ಲವೊ ?

ಮುರಳಿ:– ಇದ್ದಿರಬಹುದು.

ರಮೆ:– ಮತ್ತೆ, ಆಗ ಇಲ್ಲ ಎಂದಿರಿ ?

ಮುರಳಿ:– ಹೌದು, ಹೇಳಿದೆ.

ರಮೆ:– ಈಗ ಇದ್ದ ಅನ್ನುತ್ತೀರಿ ?

ಮುರಳಿ:– ಅನ್ನುತ್ತೇನೆ.

ರಮೆ:– ನಿಮಗೆ ಕನ್ನಡ ಭಾಷೆ ಅರ್ಥವಾಗುವದಿಲ್ಲವೇನು ?

ಮುರಳಿ:– ಸುಮಾರಾಗಿ ಅರ್ಥವಾಗುತ್ತದೆ.

ರಮೆ:– ಭೀಮ ತುಂಬ ಉದ್ದವಾಗಿ, ದಪ್ಪವಾಗಿ ಇದ್ದ ಎಂದು ಒಪ್ಪುತ್ತೀರಿ. ನಾನು ಹಿಂದೆ ಇದನ್ನೇ ಹೇಳಿದಾಗ ಇಲ್ಲ ಅಂದಿರಿ.

ಮುರಳಿ:– ಅವನ ಸ್ವರೂಪ ಭಯಂಕರವಾಗಿರಲಿಲ್ಲ ಎಂದೆ.

ರಮೆ:– ಅಂತೂ, ನೀವು....? ಹ್ಞೂಂ, ಹೇಳಿ ಮುಂದೆ.

ಮುರಳಿ:– ಅವರು ಹೀಗೆಯೇ ಇರುತ್ತಿದ್ದಾಗ ಒಂದು ದಿನ ನೆರೆಮನೆಯವರು ಶೋಕಿಸುತ್ತಿರುವದು ಇವರಿಗೆ ಕೇಳಿಬಂತು. ಕುಂತಿ ಅಲ್ಲಿಗೆ ಹೋಗಿ ಶೋಕದ ಕಾರಣವನ್ನು ವಿಚಾರಿಸಿದಳು. ಆ ಮನೆಯವರು ದುಃಖಿಸುತ್ತಾ "ಅಮ್ಮಾ, ಈ ಊರಿನಲ್ಲಿ ನೆಲಸಿರುವ ಬಕನೆಂಬ ರಾಕ್ಷಸನ ಊಟಕ್ಕೆ ದಿನಕ್ಕೊಬ್ಬೊಬ್ಬರ ಮನೆಯಿಂದ ಹನ್ನೆರಡು ಖಂಡುಗದ ಅಕ್ಕಿಯ ಅನ್ನವನ್ನು, ಎರಡು ಎತ್ತುಗಳನ್ನು ಹೂಡಿದ ಬಂಡಿಯಲ್ಲಿ ತುಂಬಿಸಿ ಒಬ್ಬ ಮನುಷ್ಯನ ಸಮೇತವಾಗಿ ಕಳುಹಿಸಬೇಕು. ಇದರ ನಾಳೆಯ ಸರದಿ ನನಗೆ ಬಂದಿದೆ. ನನಗಿರುವ ಒಬ್ಬನೇ ಮಗನ ಮದುವೆಯು ನಾಳೆಗೇ ನಿಶ್ಚಯವಾಗಿದೆ" ಎಂದು ಗೋಳಿಟ್ಟರು.

ರಮೆ:– ಒಂದು ದಿನಕ್ಕೆ ಹನ್ನೆರಡು ಖಂಡುಗ ಅಕ್ಕಿಯ ಅನ್ನ, ಎರಡು ಎತ್ತುಗಳು, ಒಬ್ಬ ಮನುಷ್ಯ–ಇಷ್ಟನ್ನು ತಿನ್ನುವ ಒಂದು ಜೀವಿ ಈ ಭೂಮಿಯ ಮೇಲೆ ಯಾವದೇ ಭಾಗದಲ್ಲಿ, ಯಾವದೇ ಕಾಲದಲ್ಲಿ ಬದುಕಿತ್ತು ಎಂದು ನಾನೀಗ ನಂಬಬೇಕು.

ಮುರಳಿ:– ಬದುಕಿರಲು ಸಾಧ್ಯವೇ ಇಲ್ಲ ಎಂಬದನ್ನು ನಂಬಬಾರದು.

ರಮೆ:– ನಿಮಗೆ ಭ್ರಮೆ.

ಮುರಳಿ:– ನಿನಗೆ ಮಂಕು.

ರಮೆ:– ನನಗೇಕೆ ಮಂಕು ? ಮಹಾಭಾರತದಲ್ಲಿ ಏನು ಬರೆದಿದ್ದರೂ ಅದು ನಡೆದೇ ಇದೆ ಎಂದು ಕಣ್ಣು ಮುಚ್ಚಿ ಒಪ್ಪಿಕೊಳ್ಳುವ ನಿಮಗೇ ಮಂಕು ಹಿಡಿದಿರುವದು.

ಮುರಳಿ:– ಲೋಕದಲ್ಲಿ ಈಗ ಇರುವದು, ಹಿಂದೆ ಇದ್ದುದು, ಮುಂದೆ ಇರಬಹುದಾದುದು–ಎಲ್ಲವನ್ನೂ ನಾನು ಪ್ರತ್ಯಕ್ಷವಾಗಿ ನೋಡಿದ್ದೇನೆ. ಅಥವಾ ನಾನು ನೋಡದೆ ಇರುವ ಯಾವದೂ ಕೂಡ ಇಂದಿಗಾಗಲಿ, ಹಿಂದೆಯಾಗಲಿ, ಮುಂದಕ್ಕಾಗಲಿ ಇರಲು ಸಾಧ್ಯವಿಲ್ಲ ಎಂದು ನಿನಗೇ ಭ್ರಾಂತಿ ಹಿಡಿದಿರುವದು.

ರಮೆ:– ನೀವು ಏನು ಮಾತನಾಡುತ್ತೀರಿ ? ಅಷ್ಟೆಲ್ಲ ತಿನ್ನುವದು ಎಂದರೇನು ?

ಮುರಳಿ:– ಆನೆಯನ್ನು ಕಂಡಿರದ, ಆನೆಯ ಬಗೆಗೆ ಕೇಳಿರದ ಒಂದು ವ್ಯಕ್ತಿ, ಆನೆಯು ತಿನ್ನುವ ಆಹಾರದ ಪ್ರಮಾಣವನ್ನೂ, ಆನೆಯು ಮಾಡುವ ಕೆಲಸದ ಪ್ರಮಾಣವನ್ನೂ ಮೊದಲ ಬಾರಿಗೆ ಕೇಳಿದರೆ ನಿನ್ನ ಹಾಗೆಯೇ ಚಿರಿಪಿರಿ ಗುಟ್ಟಲು ಸಾಧ್ಯವಿದೆ. ತಿಮಿಂಗಿಲವನ್ನು ನೋಡದ ನನಗೆ, ಅದರ ಕುರಿತು ಓದಿದ್ದರೂ ಕೂಡ, ಅದರ ಗಾತ್ರವನ್ನು ಕಲ್ಪಿಸಿಕೊಳ್ಳುವದು ಕಷ್ಟವಾಗುತ್ತದೆ.

ರಮೆ:– ಅದು ಪ್ರಾಣಿಗಳ ವಿಚಾರ.

ಮುರಳಿ:– ವಿಚಾರ ಪ್ರಾಣಿಯದೇ ಇರಬಹುದು, ಮನುಷ್ಯನದೇ ಇರಬಹುದು. ನಾವು ಕಲ್ಪಿಸಿಕೊಳ್ಳಲಾರದಷ್ಟು ಅದ್ಭುತವಾದ ವಿಚಾರಗಳನ್ನು ಸೃಷ್ಟಿಸುವ ಶಕ್ತಿ ಪ್ರಕೃತಿಗಿದೆ ಎಂಬದನ್ನು ನಾವು ಒಪ್ಪಬೇಕು. ಈಗಲೇ, ನಮ್ಮ ಸುತ್ತಮುತ್ತಲೂ ಇರುವದನ್ನೇ ತೆಗೆದುಕೊ. ಕೆಲವರು ತಿನ್ನುವ ಒಂದು ಹೊತ್ತಿನ ಆಹಾರ ನನಗೆ ಹತ್ತು ಹೊತ್ತಿಗೆ ಸಾಕಾಗುತ್ತದೆ ಎಂಬದು ಸಾಮಾನ್ಯ ವಿಚಾರವಷ್ಟೆ! ಈ ಹತ್ತು ನೂರಾದಾಗ ಅದು ಸೋಜಿಗವೆನಿಸೀತು, ನೂರು ಸಾವಿರವಾದಾಗ, ಹತ್ತು ಸಾವಿರವಾದಾಗ ಹೆಚ್ಚು ಹೆಚ್ಚು ಅದ್ಭುತ ಎನಿಸುತ್ತದೆ. ಅದು ಕಲ್ಪನೆಯ ಮಿತಿಯನ್ನು ದಾಟಿದಾಗ ಸ್ಥಿರವಾದ ಒಂದು ಗ್ರಂಥಕ್ಕೆ ವಿಷಯವಾಗುತ್ತದೆ.

ರಮೆ:– ಆ ಕಲ್ಪನೆ ಎಷ್ಟೇ ಮಿತಿಮೀರಿದರೂ ಅದಕ್ಕೆ ಒಂದು ಅಂತ್ಯ ಬೇಡವೆ ?

ಮುರಳಿ:– ಬೇಕು. ಆದರೆ ಆ ಅಂತ್ಯವನ್ನು ನಿರ್ಧರಿಸಲು ವೇದವ್ಯಾಸರಿಗಿಂತಲೂ ನಾನು ಹೆಚ್ಚು ಸಮರ್ಥನಲ್ಲ ಎಂಬದನ್ನು ನಾನೇಕೆ ಒಪ್ಪಿಕೊಳ್ಳಬಾರದು ? ಮಹಾಭಾರತ ಕತೆಯನ್ನು ಬರೆದ ವೇದವ್ಯಾಸರು ಉತ್ಪ್ರೇಕ್ಷೆಗಳನ್ನು ಸೇರಿಸಲು ಅಸಮರ್ಥರಾಗಿದ್ದರು ಎಂದು ನಾನು ಹೇಳುವದಿಲ್ಲ. ಆದರೆ ಆ ಗ್ರಂಥದಲ್ಲಿ ಉತ್ಪ್ರೇಕ್ಷೆಯನ್ನು ಸೇರಿಸುವ ಅವಶ್ಯಕತೆ ಅವರಿಗಿರಲಿಲ್ಲ ಎಂದು ನಂಬುತ್ತೇನೆ. ನಾನು ಈ ಹಿಂದೆ ಹೇಳಿದ ಹಲವು ಘಟನೆಗಳನ್ನು ಅವರು ಚಿತ್ರಿಸಿರುವ ರೀತಿ ನೋಡಿದರೆ ಸತ್ಯಕ್ಕೆ ಅಪಚಾರವಾಗದ ರೀತಿಯಲ್ಲಿ ತಮ್ಮ

ಕಾಲದಲ್ಲಿ ನಡೆದ ಒಂದು ಅದ್ಭುತವಾದ ಇತಿಹಾಸವನ್ನು ಅವರು ಹೀಗೆ ಬರೆದರು ಎಂದೇ ನಂಬಬೇಕಾಗುತ್ತದೆ.

ಈ ವಿಚಾರದಲ್ಲಿ ಪುನಃ ಹೇಳುತ್ತೇನೆ. ಮಹಾಭಾರತ ಕತೆ ಸಂಪೂರ್ಣವಾಗಿ ನಡೆದಿಲ್ಲದ ಹಾಗೂ ಕೇವಲ ಕವಿ ಕಲ್ಪನೆಯ ಒಂದು ಕತೆಯೇ ಇರಬಹುದು. ಅಥವಾ ಆ ಕತೆಗೆ ಮೂಲವಾದ ಒಂದಷ್ಟು ಅಂಶ ನಿಜವಾಗಿ ನಡೆದುದಾಗಿದ್ದು ಇತರ ಅಂಶಗಳನ್ನೆಲ್ಲ ವ್ಯಾಸರು ತಮ್ಮ ಕಲ್ಪನೆಯಿಂದ ಜೋಡಿಸಿಯೂ ಇರಬಹುದು. ಅಥವಾ ಈ ಕತೆ ಘಟನೆಗಳ ಯಥಾವತ್ ನಿರೂಪಣೆಯೇ ಇರಬಹುದು. ಈ ಮೂರರಲ್ಲಿ ಯಾವ ಒಂದು ಅಭಿಪ್ರಾಯವನ್ನೂ ನಾವು ವಾದಕ್ಕೆಡೆಯಿಲ್ಲದಂತೆ ಸಿದ್ಧಗೊಳಿಸಲು ಸಾಧ್ಯವಿಲ್ಲ. ಹಾಗಿರುವಾಗ ಈ ಪೈಕಿ ಯಾವ ಅಭಿಪ್ರಾಯವನ್ನು ಸ್ವೀಕರಿಸುವದು ಅಪೇಕ್ಷಣೀಯ ಎಂಬದನ್ನು ವಿಮರ್ಶಿಸಬೇಕಾಗುತ್ತದೆ. ಹೀಗೆ ಮಾಡುವದಕ್ಕೆ ಮುಂಚೆ ಮಹಾಭಾರತ ಕತೆಯ ಕಾಲ, ಅದರ ಕರ್ತೃ, ಅದು ಸಾರ್ವತ್ರಿಕವಾಗಿ ಒಪ್ಪಲ್ಪಟ್ಟಿರುವ ರೀತಿ, ಹಾಗೆ ಒಪ್ಪಲ್ಪಟ್ಟಿರುವದರಿಂದ ಆಗಿರುವ ಒಳಿತು, ಕೆಡಕು– ಇವುಗಳನ್ನು ವಿಮರ್ಶಿಸಬೇಕಾಗುತ್ತದೆ.

ಮಹಾಭಾರತ ಕತೆಯು ನಮ್ಮ ಇಂದಿನ ಕಾದಂಬರಿಗಳಂತೆ ಪ್ರಮುಖವಾಗಿ ಮನೋರಂಜನೆ ನೀಡುವ ಕೃತಿ ಎಂಬದನ್ನು ಪ್ರಾರಂಭದಲ್ಲಿಯೇ ಅಲ್ಲಗಳೆಯಬೇಕಾಗುತ್ತದೆ. ಅದು ರಂಜನೆಗಾಗಿ ಅಥವಾ ಸ್ವಾರಸ್ಯವಾದ ಕಾವ್ಯವಾಗಿ ಬರೆಯಲ್ಪಟ್ಟಿದ್ದರೆ ಅದು ಈ ಹಲವು ಶತಮಾನಗಳ ಕಾಲದಿಂದ ಎಲ್ಲ ವಿಧದ ಅಭಿರುಚಿಯ ಜನಗಳಿಗೂ ಪ್ರಿಯವಾದ ಕೃತಿಯಾಗಿ ಉಳಿಯುತ್ತಿರಲಿಲ್ಲ. ಅದಕ್ಕಿಂತಲೂ ಹೆಚ್ಚು ರಂಜಕವಾದ, ಹೆಚ್ಚು ಉತ್ತಮ ಕಾವ್ಯವೆನಿಸಿದ ಕೃತಿಗಳು ನಮ್ಮಲ್ಲಿ ಬೇಕಷ್ಟಿವೆ. ಮಹಾಭಾರತವು ಜಾನಪದ ವಸ್ತುವನ್ನು ಆಧರಿಸಿರದಿದ್ದರೂ ಸಾಮಾನ್ಯರ ಮೆಚ್ಚುಗೆಯನ್ನು, ರಾಜಮಾನ್ಯವಾದ ಕಾವ್ಯವಲ್ಲದಿದ್ದರೂ ಬುದ್ಧಿವಂತರ ಮೆಚ್ಚುಗೆಯನ್ನು ಗಳಿಸಿ ಮುಂದುವರೆದಿದೆ. ಅದು ನೀತಿ ಪ್ರಧಾನವಾದ ಗ್ರಂಥವೂ ಅಲ್ಲ ಎಂದು ಹಿಂದೆಯೇ ಹೇಳಿದ್ದೇನೆ. ಅದರ ಕರ್ತೃವಿನ ಕುರಿತಾಗಿಯೂ ಹಿಂದೆ ಹೇಳಿದ್ದೇನೆ. ಕಾವ್ಯಾನಂದದ ಸುಖ, ಜನರಂಜನೆ, ಕೀರ್ತಿ, ಹಣ–ಯಾವದನ್ನೂ ಅವರು ಈ ಕೃತಿಯ ಮೂಲಕ ಗಳಿಸುವ ಅಪೇಕ್ಷೆ ಅವರಲ್ಲಿ ಇದ್ದಿರಲು ಸಾಧ್ಯವಿಲ್ಲ.

ಇನ್ನು ಜನತೆಯಾದರೂ ಕೂಡ ಶತ ಶತಮಾನಗಳ ಕಾಲ ಒಂದು ಮೂರ್ಖ ಅಭಿಪ್ರಾಯವನ್ನು ಮಾನ್ಯ ಮಾಡಿಕೊಂಡೇ ಬರಲು ಸಾಧ್ಯ ಎಂದು ನಂಬುವದೂ ತಪ್ಪಾಗುತ್ತದೆ. ದೇವರು ಒಬ್ಬನೇ, ಅವನು ಸರ್ವಶಕ್ತ ಎಂದು ನಂಬಿರುವ ಸಂಸ್ಕೃತಿಯ ನಮ್ಮ ಜನ ತಮ್ಮ ಹಲವು ಬಗೆಯ ಅವಶ್ಯಕತೆಗಳ ಪೂರೈಕೆಗೆ ಹಲವು ದೇವರನ್ನು ಸೃಷ್ಟಿಸಿಕೊಂಡಿದ್ದಾರೆ. ವಿದ್ಯೆಗೊಬ್ಬ, ಸಿದ್ಧಿಗೊಬ್ಬ, ಹಣಕ್ಕೊಬ್ಬಳು, ಗುಣಕ್ಕೊಬ್ಬ–ಎಂದು ನೂರು ದೇವರುಗಳು ನಮ್ಮಲ್ಲಿದ್ದಾರೆ. ಅಂತಹ

ಜನತೆ ಈ ಒಂದು ಗ್ರಂಥವನ್ನು ಇದು ನಮ್ಮ ಹಿಂದಿನವರ ಚರಿತ್ರೆ ಎಂದು ಸಾರ್ವತ್ರಿಕವಾಗಿ ಒಪ್ಪಿಕೊಂಡಿದೆ ಎನ್ನುವದು ಒಂದು ವಿಶೇಷ ಸಂಗತಿ.

ಅದು ಹೀಗೆ ಒಪ್ಪಲ್ಪಟ್ಟಿರುವದರಿಂದ ಈ ಸಮಾಜದ ಮೇಲೆ ಆಗಿರುವ ಸತ್ಪರಿಣಾಮವಂತೂ ಕಲ್ಪನೆಗೆ ಮೀರಿದುದು. ನಮ್ಮ ಬಗೆಗೆ ನಮಗೆ ಅಭಿಮಾನ ಇದ್ದರೆ ಮಾತ್ರ ನಾವು ಜೀವನದಲ್ಲಿ ಏನನ್ನಾದರೂ ಸಾಧಿಸಲು ಸಾಧ್ಯ. ಒಂದು ಸಮಾಜದಲ್ಲಿ ಹತ್ತು ಮಂದಿಗೆ ಹತ್ತು ವಿಧದ ಬೇರೆ ಬೇರೆ ಅಭಿಮಾನಕರ ವಿಷಯಗಳಿರುವದರ ಬದಲು ಎಲ್ಲರಿಗೂ ಸಾಮಾನ್ಯವಾದ ಒಂದು ಅಭಿಮಾನದ ವಿಷಯವಿದ್ದರೆ ಆ ಸಮಾಜ ಸದಾಕಾಲವೂ ತನ್ನಲ್ಲಿ ಏಕತೆಯನ್ನು ಕಂಡುಕೊಂಡು ಬಲಿಷ್ಠವಾದುದಾಗಿರುತ್ತದೆ. ಭಾರತೀಯ ಸಮಾಜಕ್ಕೆ ಮಹಾಭಾರತವು ಅಂತಹ ಸಾರ್ವತ್ರಿಕವಾದ ಅಭಿಮಾನವನ್ನು ಒದಗಿಸಿದೆ. ಇದನ್ನು ನಾವು ನಮ್ಮ ಅಪಕ್ವ ವಿಮರ್ಶೆಯ ದೌರ್ಬಲ್ಯದಿಂದಾಗಿ ನಾಶಗೊಳಿಸಲು ಪ್ರಯತ್ನಿಸುವದು ದೊಡ್ಡ ಅಪರಾಧವಾಗುತ್ತದೆ.

ಹಾಗಿದ್ದ ಮೇಲೆ ಮಹಾಭಾರತದ ಘಟನೆಗಳೆಲ್ಲ ನಡೆದ ವಿಷಯಗಳೇ ಇರಬಹುದಾದರೆ ಅದು ಹೇಗೆ ಸಾಧ್ಯ ಎಂದು ತರ್ಕಿಸುವದೊಂದೇ ಮಹಾಭಾರತದ ಕುರಿತು ನಾವು ಮಾಡಬೇಕಾದ ವಿಮರ್ಶೆಯಾಗುತ್ತದೆ. ಅದನ್ನು ಮಾಡಲು ಪ್ರಯತ್ನಿಸಿಯೇ ನಾನು ಆಗಾಗ ನಿನ್ನ ಕೋಪಕ್ಕೆ ಈಡಾಗುತ್ತಿರುವದು.

ರಮೆ:- ಅಯ್ಯೋ, ಕೋಪವೇಕಪ್ಪ ಸದ್ಯ ! ನಾನು ಆಗಾಗ ಹಾಗೆ ಚುಚ್ಚುವದರಿಂದ ತಾನೇ ನಿಮ್ಮ ಮೆದುಳಿನ ಒಳಕಣಗಳಲ್ಲಿರುವ ಸಾರವೆಲ್ಲ ಹೊರಗೆ ಬರುವದು ? ಇಲ್ಲವಾಗಿದ್ದರೆ ಈಗಿನಂತೆ ಹೇಳದೆ ಪುರಾಣ ಹೇಳುತ್ತಿದ್ದಿರಿ.

ಮುರಳಿ:- ಜಾಣೆ. ಕೇಳು. ಬ್ರಾಹ್ಮಣನ ದುಃಖಕ್ಕೆ ಪ್ರತಿಯಾಗಿ ಕುಂತಿಯು "ಅಯ್ಯೋ, ನನಗೆ ಬಹಳ ಸತ್ವಯುತರಾದ ಐದು ಜನ ಮಕ್ಕಳಿದ್ದೂ ಕೂಡ ನಾವು ಭಿಕ್ಷೆಯಿಂದ ಜೀವಿಸಬೇಕಾಗಿ ಬಂದಿದೆ. ಅದರಲ್ಲಿಯೂ ಒಬ್ಬ ಮಗನ ಹೊಟ್ಟೆಗೆ ಸಾಕಷ್ಟು ಕೊಡುವದಂತೂ ನನ್ನಿಂದ ಸಾಧ್ಯವಾಗದ ಕೆಲಸವಾಗಿದೆ. ಆದುದರಿಂದ ಅವನನ್ನು ನಿಮ್ಮ ರಾಕ್ಷಸನ ಆಹಾರಕ್ಕಾಗಿ ಕಳುಹಿಸುತ್ತೇನೆ.......

ರಮೆ:- ಭೀಮನ ಮೇಲೆ ಕುಂತಿಗೆ ಪ್ರೀತಿ ಕಡಿಮೆ ಇತ್ತು ಎಂದು ಇದು ತೋರಿಸುವದಿಲ್ಲವೆ ?

ಮುರಳಿ:- ಭೀಮನ ಪರಾಕ್ರಮದ ಬಗೆಗೆ ಆಕೆಗೆ ಅಷ್ಟೊಂದು ವಿಶ್ವಾಸವಿತ್ತು ಎಂಬದನ್ನು ತೋರಿಸುತ್ತದೆ. ಇದನ್ನು ನೀನು ಚೆನ್ನಾಗಿ ಗಮನಿಸಬೇಕು. ಯಾವ ತಾಯಿಯೇ ಆದರೂ ಕೂಡ ಕೇವಲ ಒಂದು ಊಟಕ್ಕಾಗಿ ತನ್ನ ಮಗನನ್ನು ಬೇರೊಬ್ಬರ ಕೂಡೆ ಕದನಕ್ಕೆ ಕಳುಹಿಸಲು ಬಯಸುವದಿಲ್ಲ. ಅದರಲ್ಲಿಯೂ ಇಲ್ಲಿ

ಬಕನು ಹನ್ನೆರಡು ಖಂಡುಗ ಅಕ್ಕಿಯ ಅನ್ನವನ್ನು ಪ್ರತಿ ದಿನವೂ ತಿನ್ನುವಷ್ಟು ಬಲಾಢ್ಯನು ಎಂದು ಅವಳು ಕೇಳಿದ್ದಳು. ಅಂತಹವನನ್ನಾದರೂ ಭೀಮನು ಸರಾಗ ವಾಗಿ ಹೊಡೆದುರುಳಿಸುವನೆಂದು ತಾಯಿಯಾದವಳು ನಂಬಿರಬೇಕಾದರೆ ಭೀಮನ ದೇಹದಾರ್ಢ್ಯ ಆಗಿನ ದಿನಗಳಲ್ಲೇ ಅತ್ಯಂತ ವಿಶಿಷ್ಟವಾದುದೆನಿಸಿರಬೇಕು. ಏನನ್ನು ತ್ತೀಯ ?

ರಮೆ:– ಹೌದು. ಮುಂದೆ ಹೇಳಿ.

ಮುರಳಿ:– ಕೇಳು. ಹೀಗೆ ಹೇಳಿದ ಕುಂತಿಯು ಅನ್ನ ಮೊದಲಾದ ಇತರ ಸಾಮಗ್ರಿಗಳನ್ನು ಸಿದ್ಧಗೊಳಿಸುವಂತೆ ಬ್ರಾಹ್ಮಣನಿಗೆ ತಿಳಿಸಿದಳು. ಇದರಿಂದ ಆಶ್ಚರ್ಯಗೊಂಡ ಬ್ರಾಹ್ಮಣನು "ಅಮ್ಮ, ಸಾಕಲು ಸಾಧ್ಯವಿಲ್ಲದ ಕಾರಣಕ್ಕಾಗಿ ಯಾರಾದರೂ ಹೆತ್ತ ಮಕ್ಕಳನ್ನು ಕೊಲ್ಲುವರೆ ? ನೆರಹೊರೆಯವರು ಅಪಹಾಸ್ಯ ಮಾಡುವಂತಹ ನಿನ್ನ ಈ ಉಪಕಾರ ಬೇಡ" ಎನ್ನಲು ಕುಂತಿಯು ಅವನನ್ನು ಸಮಾಧಾನೋಕ್ತಿಗಳಿಂದ ಒಡಂಬಡಿಸಿ ಮನೆಗೆ ಬಂದು ನಡೆದ ಎಲ್ಲ ವಿಷಯವನ್ನೂ ತನ್ನ ಮಕ್ಕಳಿಗೆ ತಿಳಿಸಿದಳು. ತುಷ್ಟಿಯೂಟದ ವರ್ತಮಾನವನ್ನು ಕೇಳಿದ ಭೀಮನು ಸಂತೋಷದಿಂದ ಬಾಹುಗಳನ್ನಪ್ಪಳಿಸಿದನು.

ರಮೆ:– ಅದೆಂತಹ ಜಿಹ್ವಾ ಚಾಪಲ್ಯ ? ತನ್ನ ಮುಂದಿರುವ ಕಾರ್ಯಗಳಲ್ಲಿ ಪ್ರಾಮುಖ್ಯವಾಗಿದ್ದುದು ಊಟವೋ, ರಾಕ್ಷಸ ವಧೆಯೊ ಎಂದು ತಿಳಿಯಬೇಡವೇ ಭೀಮನಿಗೆ.

ಮುರಳಿ:– ಸ್ವಬಲದಲ್ಲಿ ನಂಬಿಕೆ ಇಲ್ಲದವರು ಹಾಗೆ ಚಿಂತಿಸುವದು ಸಹಜ. ಆದರೆ ತನ್ನ ಬಲದ ಇತಿಮಿತಿಗಳನ್ನು ಖಚಿತವಾಗಿ ತಿಳಿದುಕೊಂಡಿದ್ದ ಭೀಮನಿಗೆ ಅಂತಹ ಜಿಜ್ಞಾಸೆ ಅವಶ್ಯವಾಗಿರಲಿಲ್ಲ. ತನ್ನ ತೋಳುಗಳನ್ನೇ ಆಯುಧವಾಗಿ ಪಡೆದಿದ್ದ ಅವನಿಗೆ ತನ್ನ ಆಯುಧ ಮುರಿದೀತಲ್ಲಾ, ರಥವಿಲ್ಲವಲ್ಲಾ, ಎಂಬ ಯಾವ ಚಿಂತೆಯೂ ಬಾಧಿಸುವಂತಿರಲಿಲ್ಲ. ಅವನಿಗೆ ಅಪೂರ್ವವಾಗಿದ್ದುದು ಹೃಷ್ಟ ಭೋಜನವಲ್ಲದೆ ಸೆಣಸಾಟವಲ್ಲ........

ರಮೆ:– ನೀವು ದಯವಿಟ್ಟು ವಾದಕ್ಕಾಗಿ ವಾದ ಮಾಡಬೇಡಿ. ಒಬ್ಬನನ್ನು ಮೆಚ್ಚಿಕೊಂಡ ಮಾತ್ರಕ್ಕೆ ಅವನು ಮಾಡಿದುದನ್ನೆಲ್ಲ ಮೆಚ್ಚಿಕೊಳ್ಳಬೇಕೆಂಬ ಭ್ರಾಂತಿ, ವ್ಯಕ್ತಿತ್ವ ವಿಮರ್ಶೆಗೆ ಹಿತಕಾರಿಯಾದ ಲಕ್ಷಣವಲ್ಲ. ನೀವು ಹೇಳಿದುದೇ ಆಗಲಿ. ಭೀಮನಿಗೆ ಸ್ವಬಲದಲ್ಲಿ ಪರಿಪೂರ್ಣ ವಿಶ್ವಾಸವಿತ್ತು ಎಂದು ಒಪ್ಪಿ ಕೊಳ್ಳೋಣ. ಆದರೆ ಪ್ರಪಂಚದಲ್ಲಿ ಯಾರು ಬಂದರೂ ಅವರನ್ನು ಎದುರಿಸಿ ಗೆದ್ದುಬಿಡುತ್ತೇನೆಂದು, ತಾನು ಏನನ್ನೂ ಗೆಲ್ಲಬಲ್ಲೆ ಎಂಬ ಸರ್ವಶಕ್ತ ಭಾವನೆ ಅವನಿಗಿತ್ತೇನು ?

ಮುರಳಿ :– ಇಲ್ಲ.

ರಮೆ:– ಹಾಗಿದ್ದಮೇಲೆ ಎದುರಾಳಿಯ ಬಲಾಬಲಗಳನ್ನು ತಿಳಿದುಕೊಂಡ ಮೇಲೆ ಮಾತ್ರವೇ ತಾನೆ ಅವನು ಆ ಬಲಕ್ಕೆ ತನ್ನ ಬಲವನ್ನು ಹೋಲಿಸಿಕೊಂಡು ತನ್ನ ಬಲದಲ್ಲಿ ವಿಶ್ವಾಸವನ್ನೋ ಅವಿಶ್ವಾಸವನ್ನೋ ತಾಳಲು ಅವನಿಗೆ ಸಾಧ್ಯವಾಗುತ್ತಿದ್ದುದು ?

ಮುರಳಿ:– ಹೌದು.

ರಮೆ:– ಹಾಗಾದರೆ ಇಲ್ಲಿ ಬಕನನ್ನು ಇನ್ನೂ ನೋಡಿಯೇ ಇಲ್ಲದ ಅವನು ಬಕನ ಬಲಾಬಲಗಳನ್ನು ತಿಳಿದುಕೊಳ್ಳುವದಕ್ಕೆ ಮುಂಚೆಯೇ ತನ್ನ ಬಲದ ಬಗೆಗೆ ವಿಶ್ವಾಸ ತಾಳಲು ಅವನಿಗೆ ಹೇಗೆ ಸಾಧ್ಯವಾಯಿತು ?

ಮುರಳಿ:– ನಿಜ. ಬುದ್ಧಿವಂತಿಕೆಯ ಪ್ರಶ್ನೆ. ಬಕನ ಬಲಾಬಲವನ್ನು ಊಹಿಸುವದು ಅವನಿಗೆ ಕಷ್ಟವಾಗಲಿಲ್ಲ. ಕ್ರೂರವಾದ ಘೋರಾರಣ್ಯದಲ್ಲಿ ವಾಸ ಮಾಡಿಕೊಂಡಿದ್ದು ಪರಾಕ್ರಮದಿಂದ ತನ್ನ ಆಹಾರವನ್ನು ಗಳಿಸಬೇಕಾದ ರಾಕ್ಷಸ, ದುರ್ಬಲರಾದ ಬ್ರಾಹ್ಮಣರ ಅಗ್ರಹಾರದಲ್ಲಿ ಸೇರಿಕೊಂಡು ಅವರನ್ನು ಹೆದರಿಸಿ ತನ್ನ ಆ ದಿನದ ಆಹಾರ ಅದಾಗಿಯೇ ತನ್ನ ಬಳಿಗೆ ಬರುವಂತೆ ಉಪಾಯ ಹೂಡಿ ಹೇಗೋ ಜೀವನ ಸಾಗಿಸುತ್ತಿದ್ದುದನ್ನು ಗಮನಿಸಲು ಭೀಮನಿಗೆ ಕಷ್ಟವಾಗಬೇಕಾಗಿರಲಿಲ್ಲ. ಕೇವಲ ಮುದಿತನದಿಂದಲೋ ಅಥವಾ ಇನ್ಯಾವದೋ ದೇಹದೌರ್ಬಲ್ಯದಿಂದಲೋ ಅವನು ಬಲ ಕಳೆದುಕೊಂಡು ಹೀಗೆ ಬದುಕುತ್ತಿದ್ದ ಎಂದು ಯಾರು ಕೂಡ ಊಹಿಸಬಹುದಿತ್ತು.

ರಮೆ:– ಇನ್ನೊಂದು ಮಾತು. ನೀವು ಹೇಳುತ್ತೀರಿ, ಪಾಂಡವರು ಈ ಅಗ್ರಹಾರಕ್ಕೆ ಬಂದು ಬಹಳ ದಿನ ಆಯಿತು ಎಂದು. ಆ ಅಗ್ರಹಾರದ ಬ್ರಾಹ್ಮಣರು ದಿನಕ್ಕೆ ಒಬ್ಬೊಬ್ಬರ ಮನೆಯಂತೆ ಆ ರಾಕ್ಷಸನಿಗೆ ಅನ್ನ, ಎತ್ತು ಮನುಷ್ಯರನ್ನು ಪೂರೈಸುತ್ತಿದ್ದರು ಎಂದೂ ಹೇಳುತ್ತೀರಿ. ಇದು ಒಂದು ಊರಿನಲ್ಲಿ ನಡೆಯುವ ಒಂದು ಅಸಾಮಾನ್ಯ ಘಟನೆಯೆಂಬದು ಸ್ಪಷ್ಟ. ಹಾಗಿದ್ದರೆ ಇಂತಹ ಒಂದು ವಿಚಿತ್ರ ವಿಷಯದ ಕುರಿತು ಪಾಂಡವರಿಗೆ ಅಷ್ಟು ದಿನಗಳ ಕಾಲ ಯಾರೂ ಹೇಳಲಿಲ್ಲವೆ ?

ಮುರಳಿ:– ಭೀಮನ ಸ್ವಬಲದ ನಂಬಿಕೆಗೂ ಇದಕ್ಕೂ ಏನು ಸಂಬಂಧ ?

ರಮೆ:– ಆ ವಿಚಾರ ಆಯಿತಲ್ಲಾ ! ಇದನ್ನು ಕೇಳಿದೆ.

ಮುರಳಿ:– ಆ ವಿಚಾರ ಏನಾಯಿತು ?

ರಮೆ:– ಏನಾಗುವದು ? ನೀವು ವಹಿಸಿಕೊಂಡ ವಾದದ ಪಕ್ಷ ಯಾವಾ

ಗಲೂ ಏನಾಗುತ್ತದೋ ಅದೇ ಆಯಿತು. ಇದನ್ನು ಹೇಳಿ ನೋಡೋಣ. ವ್ಯಾಸರು ಎಲ್ಲ ಸರಿ ಬರೆದಿದ್ದಾರೆ ಎಂದು ವಾದಿಸುತ್ತೀರಲ್ಲಾ, ಇದನ್ನು ಹೇಳಿ.

ಮುರಳಿ:– ಯಾವದನ್ನು ?

ರಮೆ:– ಅದೇ. ಬಕನ ವಿಷಯ ಪಾಂಡವರಿಗೆ ಅಷ್ಟು ದಿನ ಯಾರೂ ಹೇಳ ಲಿಲ್ಲ ಎಂಬದು ನಿಮ್ಮ ವಿಶ್ವಾಸವನ್ನು ಗಳಿಸುತ್ತದೋ ಅಂತ.

ಮುರಳಿ:– ಈ ವಿಷಯುವನ್ನು ಪಾಂಡವರಿಗೆ ಯಾರೂ ಹೇಳಲಿಲ್ಲ ಎಂದು ನಿನಗೆ ಯಾರು ಹೇಳಿದರು ?

ರಮೆ:– ನೀವೇ ಅಲ್ಲವೇ ಹೇಳಿದ್ದು ? ಕುಂತಿ ಪಕ್ಕದ ಮನೆಯ ರೋದನ ಕೇಳಿ ಅಲ್ಲಿಗೆ ಹೋದಾಗ ಅವನು ಬಕನ ವಿಷಯ ಹೇಳಿದ ಎಂದು ?

ಮುರಳಿ:– ಹೌದು. ಬಕನ ಬಾಯಿಗೆ ನನ್ನ ಮಗ ಬಲಿಯಾಗಬೇಕಾಗಿದೆ ಎಂದು ಹೇಳಿದನೇ ಹೊರತು, ಬಕನ ಕುರಿತಾಗಿ ಕುಂತಿಗೆ ಸಿಕ್ಕಿದ ಮೊದಲನೇ ಪ್ರಸ್ತಾಪವೇ ಅದು ಎಂದು ಎಲ್ಲಿ ಹೇಳಿದೆ ?

ಬಕನ ವಿಷಯ ಪಾಂಡವರಿಗೆ ಮೊದಲೇ ತಿಳಿದಿದ್ದಿತು ಎನ್ನುವದಕ್ಕೆ ಇನ್ನೂ ಒಂದು ಉದಾಹರಣೆ ಇದೆ. ಬಕನ ವಿಷಯ ಪ್ರಸ್ತಾಪ ಮಾಡಿದ ತಕ್ಷಣವೇ ಕುಂತಿಯು ತನ್ನ ಮಕ್ಕಳಲ್ಲಿಯೂ ಈ ವಿಚಾರವನ್ನು ಚರ್ಚಿಸದೆ ಆಗಿಂದಾಗಲೇ ತನ್ನ ಮಗನನ್ನು ಬಕನಲ್ಲಿಗೆ ಕಳುಹಿಸುತ್ತೇನೆಂದು ಹೇಳಿರುವದನ್ನು ನೋಡಿದರೆ ಪಾಂಡವರು, ಕುಂತಿ–ಎಲ್ಲ ಸೇರಿ ಈ ಹಿಂದೆ ಬಕನ ಕುರಿತು ಲೋಕಾಭಿರಾಮವಾಗಿ ಮಾತನಾಡಿಕೊಂಡಿದ್ದು ಅವನ ಬಲಾಬಲಗಳನ್ನು ತಮ್ಮಲ್ಲಿಯೇ ಚರ್ಚೆ ಮಾಡಿದ್ದರು ಎಂಬದೂ ಸ್ಪಷ್ಟವಾಗುತ್ತದೆ. ಅಗ್ರಹಾರದಲ್ಲಿ ಇತರರ ವರದಿ ಬಂದಾಗ ತಾವಾಗಿ ಅವರಿಗೆ ತಮ್ಮ ಸಹಾಯವನ್ನು ಅರ್ಪಿಸಿಕೊಂಡು ಹೋಗಲು ಮನಸ್ಸು ಬಾರದೆ, ತಮಗೆ ಸಹಜವಾಗಿ ಇತರರಿಗಿಂತ ಹೆಚ್ಚು ಪರಿಚಯ, ಸ್ನೇಹ ಬೆಳೆದಿದ್ದಿರಬಹುದಾದ ತಮ್ಮ ಪಕ್ಕದ ಮನೆಯವರಿಗೆ ಈ ವಿಪತ್ತು ಬಂದಾಗ ಅದನ್ನು ತಾವು ಪರಿಹರಿಸಲು ಮನಸ್ಸು ಮಾಡಿದುದು ಕೇವಲ ಸಹಜವಾಗಿ ಕಾಣುತ್ತದೆ.

ರಾಕ್ಷಸನೇ ಆಗಲಿ, ಭೀಮನೇ ಆಗಲಿ, ಹನ್ನೆರಡು ಖಂಡುಗ ಅಕ್ಕಿಯ ಅನ್ನ ವನ್ನು ತಿನ್ನುವದು ಹಾಸ್ಯಾಸ್ಪದ ವಿಚಾರವೆಂದು ಮನಗಂಡು ಆ ಭಾಗವನ್ನು ಕೈಬಿಡ ಬೇಕೆಂದು ವ್ಯಾಸರಿಗೆ ಅನಿಸಿದ್ದರೆ ಅವರು ಭೀಮನನ್ನು ಪಕ್ಕದ ಮನೆಯವನ ನೆರವಿಗೆ ಕಳುಹಿಸುವದರ ಬದಲು, ಆ ದಿನದ ಸರದಿ ಪಾಂಡವರಿಗೇ ಬಂದಿತ್ತೆಂದೂ,

ಅಷ್ಟು ಅನ್ನವನ್ನು ಸಿದ್ಧಗೊಳಿಸಲು ಶಕ್ತರಲ್ಲದಿದ್ದ ಅವರು ಭೀಮನನ್ನು ಬರಿಗೈಯಲ್ಲಿ ಕಳುಹಿಸಿ ರಾಕ್ಷಸನನ್ನು ಕೊಲ್ಲಿಸಿದರೆಂದೂ ಬರೆಯುಬಹುದಾಗಿತ್ತು.

ರಮೆ:– ಪುರಾಣ ಸಾಕು. ಕತೆ ಹೇಳಿ.

ಮುರಳಿ:– ಪುರಾಣಕ್ಕೆ ಪ್ರೇರಣೆ ನೀನೇ. ಹೋಗಲಿ, ಕೇಳು. ಕುಂತಿಯು ಭೀಮನನ್ನು ರಾಕ್ಷಸನ ಬಳಿಗೆ ಕಳುಹಿಸುವದಾಗಿ ಮಾಡಿಕೊಂಡು ಬಂದ ನಿರ್ಧಾರವನ್ನು ಕೇಳಿ ಯುಧಿಷ್ಠಿರಾದಿಗಳು ಸ್ವಲ್ಪ ಅಂಜಿದರು. ಯುಧಿಷ್ಠಿರನು ತಾಯಿಯನ್ನು ಕುರಿತು "ಅಮ್ಮಾ, ಇದೇನು ಕಾರ್ಯವನ್ನು ಮಾಡಲು ನಿಶ್ಚಯಿಸಿಕೊಂಡು ಬಂದಿರುವೆ? ಯಾವಾತನ ಬಾಹುಬಲದ ನಂಬಿಕೆಯಿಂದ ನಾವು ನಿಶ್ಚಿಂತೆಯಾಗಿ ನಿದ್ರೆ ಮಾಡಬಲ್ಲವರಾಗಿದ್ದೆವೋ, ಯಾವನ ಬಾಹುಬಲದ ನೆನಪಿನಿಂದಲೇ ದುರ್ಯೋಧನಾದಿಗಳಿಗೆ ನಿದ್ರೆ ಬರುತ್ತಿಲ್ಲವೋ, ಯಾವನ ಮುಂದಾಳ್ತನದಲ್ಲಿಯೇ ನಾವು ಪುನಃ ರಾಜ್ಯವನ್ನು ಸಂಪಾದಿಸಿಯೇವೆಂದು ನಂಬಿಕೊಂಡಿದ್ದೇವೋ ಅಂತಹ ಭೀಮನನ್ನು ರಾಕ್ಷಸನಿಗೆ ಆಹಾರವಾಗಿ ಕೊಡಲು ಅದು ಹೇಗೆ ನಿರ್ಧರಿಸಿದೆ?

ರಮೆ:– ಯುಧಿಷ್ಠಿರನೇಕೆ ಹಾಗೆ ಹೇಳಿದ?

ಮುರಳಿ:– ಬ್ರಾಹ್ಮಣ ಸಹಜವಾದ ಸಾತ್ವಿಕತೆ ಅಥವಾ ಕ್ಷಾತ್ರಹೀನತೆ. ಆದರೂ ಅವನ ಮಾತಿನಿಂದ ಭೀಮನು ಪಾಂಡವರ ರಕ್ಷಕನೂ ಕೌರವರ ಪ್ರಮುಖ ಶತ್ರುವೂ ಆಗಿದ್ದ ಎಂಬದು ವ್ಯಕ್ತವಾಗುವದನ್ನು ಗಮನಿಸು. ಅವನ ಮಾತಿಗೆ ಕುಂತಿಯು "ಧರ್ಮಜಾ, ಯಾವನ ಬಾಹುಬಲದ ನಂಬಿಕೆಯಿಂದ ನಾವು ನಿಶ್ಚಿಂತರಾಗಿದ್ದೇವೆಂದು ನೀನು ಹೇಳಿದೆಯೋ, ಅವನ ಅದೇ ಬಾಹುಬಲವನ್ನು ನಂಬಿಯೇ ನಾನು ಈ ನಿಶ್ಚಯ ಮಾಡಿಕೊಂಡು ಬಂದಿರುವದು" ಎಂದು ಹೇಳಿದಳು. ಭೀಮನು ಎಲ್ಲರಲ್ಲಿಯೂ ನಂಬಿಕೆ ಹುಟ್ಟಿಸಿ ಮಲಗಿದನು. ರಾತ್ರಿ ಕಳೆದು ಬೆಳಕು ಹರಿಯುವ ಮುಂಚಿನ ಹೊತ್ತು. ನೆರೆಮನೆಯಿಂದ ಭವ್ಯವಾದ ಅಡುಗೆ ಘಮಘಮಿಸುತ್ತಿತ್ತು. "ಇಂತಹ ಒಳ್ಳೆಯ ಭೋಜನಕ್ಕೆ ಅವಕಾಶ ಮಾಡಿಕೊಟ್ಟ ನನ್ನ ತಾಯಿಯನ್ನು ನಾಳೆಯ ಊಟದ ಹೊತ್ತಿನಲ್ಲಿ ನೆನೆಯುತ್ತೇನೆ" ಎಂದುಕೊಂಡು ಲಗುಬಗೆಯಿಂದ ಎದ್ದ ಭೀಮನು ಹೊರಡಲು ಅನುವಾದನು. ಬೆರಳ ದರ್ಭೆಯನ್ನು ಹರಿದು ವೀರಗಚ್ಚೆಯನ್ನುಟ್ಟು, ಕುಂತಿ ಮತ್ತು ಯುಧಿಷ್ಠಿರರಿಗೆ ನಮಸ್ಕರಿಸಿ ತುಂಬಿಸಲ್ಪಟ್ಟು ಸಿದ್ಧವಾಗಿದ್ದ ಬಂಡಿಯನ್ನೇರಿ ಹೂಂಕರಿಸುತ್ತಾ ಎತ್ತುಗಳನ್ನು ಓಡಿಸಿದನು. ಆ ವೇಳೆಗಾಗಲೇ ಅಲ್ಪ ಸ್ವಲ್ಪ ಸುದ್ದಿ ಹರಡಿ ಕುತೂಹಲಕ್ಕಾಗಿ ಬಂಡಿಯನ್ನು ಹಿಂಬಾಲಿಸುತ್ತಿದ್ದ ಪೌರರಿಗೆ "ನೀವೆಲ್ಲ ಏಕೆ ಬರುತ್ತೀರಿ? ನಾನೊಬ್ಬನೇ ಹೋಗಿ ಸಾಯುತ್ತೇನೆ. ಹಿಂದೆ ಹೋಗಿ" ಎಂದು ಅವರನ್ನು ಹಿಂತಿರುಗಿಸಿ ತಾನು ದಾರಿ ಸಾಗಿಸುತ್ತಿದ್ದಂತೆಯೇ ಪುಷ್ಕಳವಾದ ಪಾರಣೆಯಲ್ಲಿ

ತೊಡಗಿದನು. ಬಕನ ಸಮೀಪವನ್ನು ಸೇರುವದರಲ್ಲಿಯೇ ಬಂಡಿಯು ಬಹು ಭಾಗ ಬರಿದಾಯಿತು. ದೂರದಿಂದ ಬಕನನ್ನು ನೋಡಿದ ಭೀಮನು "ಎಲವೋ ಕುನ್ನಿ! ನಿನಗೂ ಕೊಂಚ ಕೂಳಿದೆ. ತಿನ್ನು ಬಾ" ಎಂದು ತಿರಸ್ಕಾರಯುತವಾಗಿ ಕುಚೋದ್ಯ ಮಾಡಿದನು. ರಾಕ್ಷಸನು ತನ್ನ ಕಣ್ಣುಗಳನ್ನೇ ತಾನು ನಂಬಲಾಗ ಲಿಲ್ಲ. ಹೇಗೂ ಸುಧಾರಿಸಿಕೊಂಡು ಅವನು ಭೀಮನನ್ನು ಕುರಿತು "ಎಲವೋ ಉದ್ದಂಡ! ನಿಲ್ಲು. ನಿಮ್ಮೂರಿನ ಹಾರುವರನ್ನೆಲ್ಲ ಹಿಡಿದು ನುಂಗಿಬಿಡುತ್ತೇನೆ" ಎನ್ನುತ್ತಾ ಸಿಟ್ಟಿನಿಂದ ಮೇಲೆದ್ದನು. ಆದರೂ ಭೀಮನು ಅವನಿಗೆ ಬೆಲೆ ಕೊಡದೆ ತನ್ನ ಕಾರ್ಯದಲ್ಲಿಯೇ ಮಗ್ನನಾಗಿದ್ದನು. ಉಳಿದ ಅನ್ನವನ್ನು ತುತ್ತುಗಟ್ಟಿ ತಿನ್ನುತ್ತಾ ಮಧ್ಯೆ ಮಧ್ಯೆ ಬಕನನ್ನು ಕರೆಯುವಂತೆ ಬೆರಳನ್ನಾಡಿಸಿ ಗೇಲಿ ಮಾಡುತ್ತಾ ಊಟದ ಮುಕ್ತಾಯ ಹಂತಕ್ಕೆ ಸಮೀಪಿಸುತ್ತಿದ್ದನು.

ರಮೆ:– ಮೂರನೆಯುವರು ನೋಡದ ತಮಾಷೆ ಆದೇತಕ್ಕೆ ?

ಮುರಳಿ:– ಶತ್ರುವನ್ನು ತಾನು ಗೇಲಿ ಮಾಡುವಷ್ಟು ಅವನನ್ನು ತುಚ್ಛವಾಗಿ ಕಾಣುವ ಪರಾಕ್ರಮ ತನ್ನದು ಎಂಬದನ್ನು ಇತರರು ನೋಡಲಿ ಎಂದು ಬಯಸುವ ವೀರರೂ ಇರುತ್ತಾರೆ, ನಿಜ. ತಾವು ನಿಜವಾಗಿಯೂ ವೀರರಾಗಿರಲಿ, ಇಲ್ಲದಿರಲಿ, ಇತರರು ತಮ್ಮನ್ನು ವೀರರು ಎಂದು ಕರೆದರೆ ಅದರಿಂದಲೇ ತೃಪ್ತಿಪಡುವಂತಹ ವೀರತನ ಇವರದು. ಆದರೆ ಭೀಮನಿಗೆ ಹಾಗಲ್ಲ. ಎಷ್ಟೇ ಪ್ರಮಾದದ ವಿಷಯ ವಾದರೂ ಅದನ್ನು ಗಡಿಬಿಡಿ ಮಾಡಿಕೊಳ್ಳದೆ ಎದುರಿಸುವದು ಮತ್ತು ತನ್ನನ್ನು ಹೊಗಳಿಸಿಕೊಳ್ಳುವದರಲ್ಲಿ ಅನಾಸಕ್ತಿ–ಇವು ಅವನ ರಕ್ತದಲ್ಲಿ ಸೇರಿದ್ದ ಗುಣಗಳು. ಇಂತಹವರು ಮಾತ್ರವೇ ಅದ್ಭುತವಾದ ವ್ಯಕ್ತಿತ್ವ ಹೊಂದಿರುತ್ತಾರೆಂಬದೂ, ಅವ ರಿಂದಲೇ ಅದ್ಭುತವಾದ ಕೆಲಸಗಳು ಸಾಧಿಸಲ್ಪಡಲು ಸಾಧ್ಯವಾಗುವದು ಎಂಬದೂ ನಿನಗೆ ತಿಳಿಯಬಹುದು. ಕೇಳು. ಭೀಮನ ಇಂತಹ ಅನಿರೀಕ್ಷಿತ ಉದ್ಧಟತನದಿಂದ ಮೊದಲು ಬೆರಗಾದ ರಾಕ್ಷಸನು ಈಗ ರೋಷಗೊಂಡು ಎರಡು ಕೈಗಳ ಮುಷ್ಟಿ ಯನ್ನೂ ಸೇರಿಸಿ ಭೀಮನ ಬೆನ್ನಿಗೆ ಬಲವಾಗಿ ಗುದ್ದಿದನು.

ರಮೆ:– ಎರಡು ಕೈಗಳ ಮುಷ್ಟಿ ಏಕೆ ? ಒಬ್ಬಾತ ರಾಕ್ಷಸನೆಂದಮೇಲೆ, ಎದುರಾಳಿಯು ಸಾಮಾನ್ಯ ಮನುಷ್ಯನೆಂದಮೇಲೆ ಈ ರೀತಿ ಸಮಬಲನೊಂದಿಗೆ ಹೋರಾಡುವಂತೆ ರಾಕ್ಷಸನೇಕೆ ಗುದ್ದಿದ ?

ಮುರಳಿ:– ಇದರಿಂದ ಒಂದು ವಿಷಯ ಗೊತ್ತಾಗುತ್ತದೆ. ಭೀಮನ ದೇಹ ಬಲದ ಪೂರ್ವಾಪರಗಳು ರಾಕ್ಷಸನಿಗೆ ತಿಳಿಯದಿದ್ದರೂ, ಅವನನ್ನು ನೋಡುವಾಗಲೇ ಅವನೊಬ್ಬ ಪ್ರಚಂಡ ಎಂದು ರಾಕ್ಷಸನಿಗೆ ಗೊತ್ತಾಗುವಂತಿದ್ದಿರಬೇಕು. ಅಂದರೆ, ಭೀಮನ ದೇಹದ ಪ್ರಮಾಣ ಮನುಷ್ಯರಿಗೆ ಅಸಾಮಾನ್ಯವಾಗುವಷ್ಟು, ಹಾಗೂ

ರಾಕ್ಷಸರ ದೇಹ ಪ್ರಮಾಣಕ್ಕೆ ಹೋಲಿಸಲು ಸಾಧ್ಯವಾಗುವಷ್ಟು ದೊಡ್ಡದಾಗಿದ್ದಿರಲೇ ಬೇಕು. ಏನನ್ನುತ್ತಿ ?

ರಮೆ:– ಹೌದು. ಮುಂದೆ ಹೇಳಿ.

ಮುರಳಿ:– ಬಕನ ಈ ಪೆಟ್ಟನ್ನು ಗಮನಿಸದೆಯೇ ಭೀಮನು ಬಂಡಿಯನ್ನು ಬರಿದು ಮಾಡುವವದರಲ್ಲಿಯೇ ಆಸಕ್ತನಾಗಿದ್ದನು.

ರಮೆ:– ನೀವು ಏನೇ ಹೇಳಿ. ಭೀಮನ ಕರ್ತವ್ಯಪ್ರಜ್ಞೆಗಿಂತಲೂ ಆತನ ಹೊಟ್ಟೆಬಾಕತನವೇ ಇದರಲ್ಲಿ ಎದ್ದು ಕಾಣುತ್ತದೆ. ತನ್ನ ಎದುರಾಳಿಯು ರಾಕ್ಷಸ ನೆಂದು ತಿಳಿದಿದ್ದು ಕೂಡ, ಅವನು ತನ್ನ ಮೇಲೆ ಎರಗಿದಾಗಲೂ ತಾನು ಅವನನ್ನು ನಿವಾರಿಸುವವರ ಬದಲು ತಿನ್ನುವದರಲ್ಲಿಯೇ ಆಸಕ್ತನಾಗಿದ್ದ ಭೀಮನ ನಡತೆ ಯನ್ನು ಮೆಚ್ಚಿಕೊಳ್ಳಲು ನನಗಂತೂ ಕಷ್ಟವಾಗುತ್ತದೆ.

ಮುರಳಿ:– ಬಕನ ಕುರಿತು ಪಾಂಡವರು ಈ ಹಿಂದೆಯೇ ಚರ್ಚೆ ಮಾಡಿ ಕೊಂಡಿದ್ದರೆಂದೂ, ಅವನೊಬ್ಬ ಮುದಿ ರಾಕ್ಷಸನೆಂಬದನ್ನು ಅವರು ಊಹಿಸಿದ್ದ ರೆಂದೂ ಹಿಂದೆಯೇ ಹೇಳಿದ್ದೇನೆ. ಈಗ ಆ ರಾಕ್ಷಸನನ್ನು ಪ್ರತ್ಯಕ್ಷವಾಗಿ ಕಾಣು ವಾಗ ಭೀಮನಿಗೆ ತಮ್ಮ ಊಹೆ ಬಹಳ ಸರಿ ಎಂದು ಗೊತ್ತಾಗಿದ್ದಿರಬೇಕು. ಅಲ್ಲದೆ ಹಿಡಿಂಬನನ್ನು ಎದುರಿಸುವಾಗ ಅವನು ಕರ್ತವ್ಯಕ್ಕೆ ತೋರಿದ ಆದ್ಯತೆ ಯನ್ನು ಇಲ್ಲಿ ತೋರಿಸಲಿಲ್ಲವೆಂದರೆ ಅವನು ಬಕನ ಬಗೆಗೆ ಹಗುರವಾದ ಅಭಿ ಪ್ರಾಯವನ್ನು ತಳೆದಿದ್ದನೆಂದೂ, ಶತ್ರುವನ್ನು ನೋಡಿದ ತಕ್ಷಣವೇ ಅವನ ಬಲಾ ಬಲಗಳನ್ನು ಸರಿಯಾಗಿ ತಿಳಿದುಕೊಳ್ಳುವ ವೀರಸಹಜವಾದ ಕೌಶಲ್ಯ ಭೀಮನಿಗೆ ಕರಗತವಾಗಿತ್ತೆಂದೂ ತಿಳಿಯುವದಿಲ್ಲವೆ ? ತಿಳಿಯುತ್ತದೋ ಇಲ್ಲವೋ ಹೇಳು.

ರಮೆ:– ತಿಳಿಯುತ್ತದಪ್ಪಾ, ತಿಳಿಯುತ್ತದೆ. ಮುಂದೆ ಹೇಳಿ.

ಮುರಳಿ:– ಕೇಳು. ತನ್ನ ಬಲವಾದ ಗುದ್ದನ್ನೂ ಈ ರೀತಿ ಕಡೆಗೆಣಿಸಿದ ಭೀಮನನ್ನು ಕಂಡ ಬಕನು ಮತ್ತೂ ಕೆರಳಿ ಮರದ ಕೊಂಬೆಗಳನ್ನು ಮುರಿದು ತಂದು ಭೀಮನನ್ನು ಬಡಿದನು. ಭೀಮನು ತಿರುಗಿ ನೋಡಿ ಬಕನನ್ನು ಕುರಿತು....

ರಮೆ:– ಅಂದರೆ ಬಕನು ಭೀಮನ ಬೆನ್ನಿನ ಭಾಗದಿಂದಲೇ ಅವನನ್ನು ಹೊಡೆಯುತ್ತಿದ್ದನು ಎಂದು ಅರ್ಥವೊ ?

ಮುರಳಿ:– ಇದಕ್ಕೆ ಬೇರೆ ಅರ್ಥವಿರಲು ಸಾಧ್ಯವೊ ?

ರಮೆ:– ಅಂದರೆ ಇದು ಏನನ್ನು ತೋರಿಸುತ್ತದೆ ?

ಮುರಳಿ:– ಬಕನು ಭೀಮನ ಹಿಂಭಾಗದಿಂದ ಅವನನ್ನು ಹೊಡೆಯುತ್ತಿದ್ದ ನೆಂದು ತೋರಿಸುತ್ತದೆ.

ರಮೆ:– ಕೊಂಕು ಬಿಟ್ಟು ಹೇಳಿ. ಅದೇಕೆ ಅವನು ಮುಂಭಾಗದಿಂದ ಹೊಡೆಯಲಿಲ್ಲ ?

ಮುರಳಿ:– ಮನುಷ್ಯನ ಹಿಂಭಾಗದಲ್ಲಿ ಕಣ್ಣುಗಳಿರುವದಿಲ್ಲ. ಕೈಕಾಲುಗಳನ್ನು ಮುಂಭಾಗದಂತೆ ಹಿಂಭಾಗದಲ್ಲಿ ಉಪಯೋಗಿಸಲು ಸಾಧ್ಯವಿಲ್ಲ ಎಂಬ "ಅಪೂರ್ವ" ವಿಚಾರವು ಬಕನಿಗೆ ತಿಳಿದಿದ್ದಿತು ಎಂಬದರಿಂದ ಇರಬಹುದೆ ?

ರಮೆ:– ಅದಿರಬಹುದು. ಮುಂಭಾಗದಿಂದ ಹೊಡೆದರೆ ಏನಾದೀತೆಂದು ಬಕನು ಊಹಿಸಿದ ?

ಮುರಳಿ:– ಭೀಮಕಾಯದ, ಈ ಕಟ್ಟುಮಸ್ತು ದೇಹದ ಯುವಕ ತನ್ನನು ತೀರಿಸಿಬಿಟ್ಟಾನೆಂದು ಊಹಿಸಿದ ಎನ್ನಲೇಬೇಕಷ್ಟೆ ? ಕೇಳು. ಬಕನನ್ನು ಹಿಂತಿರುಗ್ಗಿ ನೋಡಿದ ಭೀಮನು ದೀರ್ಘವಾಗಿ ತೇಗುತ್ತ "ಎಲವೋ ಕುನ್ನಿ ರಕ್ಕಸ. ಇನ್ನೂ ಸ್ವಲ್ಪ ಅನ್ನ ಬಾಕಿಯಾಗಿಬಿಟ್ಟಿದೆ. ಅಪೂರ್ವವಾಗಿ ಇಂತಹ ಪುಷ್ಕಳವಾದ ಊಟ ನಿನ್ನ ದೆಸೆಯಿಂದ ನನಗೆ ಈ ದಿನ ಸಿಕ್ಕಿತು. ನಾನು ತೃಪ್ತಿಯಿಂದ ಊಟ ಮಾಡುತ್ತಿದ್ದಾಗ, ಪಾಪ, ನೀನು ನನ್ನನ್ನು ಹೊಡೆದು, ಹೊಡೆದು ವೃಥಾ ನೋವು ಮಾಡಿಕೊಂಡೆ. ನನ್ನ ಸಹಿತವಾಗಿ ನೀನು ಈ ಊರಿನ ಬ್ರಾಹ್ಮಣರನ್ನು ಹಿಂಡುವೆ. ಅಲ್ಲವೇ, ನೀಚಾ" ಎನ್ನುತ್ತಾ ಕ್ರಮೇಣ ಮದವೇರಿದ ಭೀಮನು ಒಂದು ಪ್ರಚಂಡವಾದ ಸಿಂಹನಾದವನ್ನು ಮಾಡಿ ಖಳನೊಂದಿಗೆ ಮಲ್ಲಯುದ್ಧಕ್ಕಿಳಿದನು. ಸ್ವಲ್ಪ ಸಮಯ ಭೀಕರವಾದ ಯುದ್ಧವಾಯಿತು. ಬಲವಾದ ಊಟವನ್ನು ಕಾಯುತ್ತಿದ್ದ ಬಕನಿಗೆ ಬಲವಾದ ಹೊಡೆತ ಸಿಕ್ಕಿದುದರಿಂದ ಅವನು ಭಯವಿಹ್ವಲನಾಗಿ, ಆದರೂ ಜೀವದಾಸೆಗಾಗಿ ಹೆಣಗಾಡಿದನು. ಭೀಮನು ತನ್ನ ತಾಯಿ ಮತ್ತು ಸೋದರರ ಹೇಳಿಕೆಗಳನ್ನು ಜ್ಞಾಪಿಸಿಕೊಂಡು ರಾಕ್ಷಸನನ್ನು ಪೂರೈಸಲು ನಿರ್ಧರಿಸಿದನು. ಭೀಮನ ಮನೋನಿಶ್ಚಯದ ಮುಂದೆ, ಹಾರುವರನ್ನು ಹೆದರಿಸಿ, ಕಾಡಿ, ಹೊಟ್ಟೆ ಹೊರೆಯುತ್ತಿದ್ದ ರಾಕ್ಷಸನ ಆಟ ನಡೆಯಲು ಸಾಧ್ಯವಿರಲಿಲ್ಲ. ಅವನು ಭೀಮನಿಗೆ ಪ್ರಾಣವನ್ನು ಒಪ್ಪಿಸಬೇಕಾಯಿತು. ಅವನ ಹೆಣವನ್ನು ಬಂಡಿಯ ಹಿಂದೆ ಕಟ್ಟಿಕೊಂಡು ಬಂದು ಭೀಮನು ತನ್ನ ಮನೆಯನ್ನು ಸೇರಿ, ಆ ಊರಿನ ಬ್ರಾಹ್ಮಣರೆಲ್ಲರ ಅಪಾರ ಕೃತಜ್ಞತೆಗೂ, ಹೃತ್ಪೂರ್ವಕ ಆಶೀರ್ವಾದಕ್ಕೂ ತನ್ನವರ ಪ್ರಶಂಸೆಗೂ ಪಾತ್ರನಾದನು.

ಪಾಂಡವರು ಹೀಗೆಯೇ ಏಕಚಕ್ರ ನಗರದಲ್ಲಿ ಒಂದು ವರ್ಷವನ್ನು ಕಳೆದರು. ಒಮ್ಮೆ ದ್ರುಪದನ ಪಟ್ಟಣದಲ್ಲಿ ಅವನ ಮಗಳಾದ ದ್ರೌಪದಿಯ ಸ್ವಯಂವರ ನಡೆಯುತ್ತದೆಂಬ ವರ್ತಮಾನವನ್ನು ಕೇಳಿ ಬ್ರಾಹ್ಮಣರ ವೇಷದಲ್ಲಿಯೇ "ಸಂತುಷ್ಟ ಭೋಜನವಾದರೂ ಸಿಕ್ಕೀತಲ್ಲಾ" ಎಂದು ನೆಪ ಹೇಳಿಕೊಂಡು ಅಲ್ಲಿಗೆ ಹೊರಟರು.

ದಾರಿಯಲ್ಲಿ ಅವರನ್ನು ಎದುರಿಸಿದ ಅಂಗಾರವರ್ಮನೆಂಬ ಗಂಧರ್ವನನ್ನು ಜಯಿಸಿ ಪಾಂಚಾಲ ನಗರವನ್ನು ಸೇರಿದರು. ಸ್ವಯಂವರ ಮಂಟಪ ಶೋಭಾಯಮಾನವಾಗಿ ರಚಿತವಾಗಿದ್ದಿತು. ವಧುವಿನ ರೂಪಕ್ಕೆ ತಕ್ಕಂತೆಯೇ ಅದೂ ರೂಪಿತವಾಗಿತ್ತು. ಎಲ್ಲ ಕಡೆಗಳಿಂದಲೂ ರಾಜರು, ಬ್ರಾಹ್ಮಣರು ಬಂದು ಸೇರಿದ್ದರು. ಮತ್ಸ್ಯ ಯಂತ್ರವನ್ನು ಭೇದಿಸುವವರಿಗೆ ದ್ರೌಪದಿಯು ಲಭ್ಯವಾಗುತ್ತಿದ್ದಳು. ಎಷ್ಟೋ ಅರಸರು ಪ್ರಯತ್ನಪಟ್ಟರು. ಯಾರೂ ಯಶಸ್ವಿಯಾಗಲಿಲ್ಲ. ಆಗಿನ ಭಾರತ ದಲ್ಲಿಯೇ ಮಹಾ ವೀರರೆಂದೆನಿಸಿಕೊಂಡ ಜರಾಸಂಧ, ಶಿಶುಪಾಲ, ಶಲ್ಯ, ಕರ್ಣ ಮೊದಲಾದ ಎಲ್ಲರೂ ಪರಾಜಿತರಾದರು.

ರಮೆ:– ಕರ್ಣನೂ ?

ಮುರಳಿ:– ಹೌದು. ಅವನು, ಇನ್ನೇನು, ಲಕ್ಷ್ಯವನ್ನು ಭೇದಿಸಿದ ಎನ್ನುವ ವೇಳೆಗೆ ತಾನು ಸೂತನನ್ನು ವಿವಾಹವಾಗುವದಿಲ್ಲವೆಂದು ದ್ರೌಪದಿ ಹೇಳಿಬಿಟ್ಟಳು.

ರಮೆ:–ಅನ್ಯಾಯ. ಸೂತನೇನು ? ಅವನೂ ಕುಂತಿಯ ಮಗನಾಗಿರಲಿಲ್ಲವೆ?

ಮುರಳಿ:–ಆಗಿದ್ದ. ಆದರೆ ವಿಧಿಯ ಏರ್ಪಾಡನ್ನು ಮೀರಲು ಯಾರಿಗೆ ಸಾಧ್ಯ ?

ರಮೆ:– ವಿಧಿ. ಅದೆಲ್ಲ ಕೈಲಾಗದವರ ನೆವಗಳು. ಪರಾಕ್ರಮದಿಂದ ಹೆಣ್ಣನ್ನು ಗೆಲ್ಲುವವನಿಗೆ ವಿಧಿಯೇನು ಮಾಡುತ್ತದೆ? ಅವನು ಬಲಾತ್ಕಾರದಿಂದ ಅವಳನ್ನು ವಿವಾಹವಾಗಬೇಕಿತ್ತು.

ಮುರಳಿ:– ಅದು ನಿನ್ನ ಅಭಿಪ್ರಾಯ. ವಿಧಿ ಎಂದರೆ ಇದು. ನಿನ್ನನ್ನು ಅದ್ಯಾವದೋ ಊರಿನ ಜಮೀನ್ದಾರನ ಮಗನಿಗೇ ಕೊಡಬೇಕೆಂದು ನಿನ್ನ ಅಪ್ಪ, ಅಮ್ಮ ಬಹಳ ಪ್ರಯತ್ನ ಪಟ್ಟರು; ಜಮೀನ್ದಾರನ ಮನೆಯವರಿಗೂ ಬಹಳ ಆಸೆಯಿತ್ತು ಎಂದೆಲ್ಲ ಹೇಳುತ್ತಿದ್ದೆಯಲ್ಲಾ, ಮತ್ತೇಕೆ ನೀನು ಅವನನ್ನು ಮದುವೆ ಯಾಗದೆ ಈ ಬಡಪಾಯಿಯ ಕೈ ಹಿಡಿದೆ ?

ರಮೆ:– ಅದು, ನಮ್ಮ ಜಾತಕ ಸರಿಬೀಳಲಿಲ್ಲವಂತೆ, ಅದಕ್ಕಾಗಿ.

ಮುರಳಿ:– ಕರ್ಣ, ದ್ರೌಪದಿಯರ ಜಾತಕಗಳೂ ಸರಿ ಬೀಳುತ್ತಿರಲಿಲ್ಲವಂತೆ. ಅದನ್ನು ನಾನು ವಿಧಿ ಎಂದು ಹೇಳಿದೆ, ಅಷ್ಟೆ. ಕೇಳು. ಕ್ಷತ್ರಿಯರೆಲ್ಲ ಈ ರೀತಿ ಸೋತ ಮೇಲೆ ದ್ರುಪದನ ಇಚ್ಛೆಯಂತೆ ಬ್ರಾಹ್ಮಣರು ಯಂತ್ರದ ಪ್ರಯೋಗ ಮಾಡುವ ಅವಕಾಶ ಒದಗಿತು. ಆದರೆ ಯಾವ ಬ್ರಾಹ್ಮಣನೂ ಮುಂದೆ ಬರಲಿಲ್ಲ. ಬ್ರಾಹ್ಮಣ ವೇಷದಲ್ಲಿದ್ದ ಅರ್ಜುನನು ಮುಂದೆ ಬಂದು ಯಂತ್ರವನ್ನು ಭೇದಿಸಿ

ದ್ರೌಪದಿಯನ್ನು ಗೆದ್ದನು. ಉಳಿದ ರಾಜರು ದಂಗೆ ಎದ್ದರು. ಭೀಮಾರ್ಜುನರು ಅವರನ್ನು ಹೊಡೆದು ಓಡಿಸಿದರು.

ಮನೆಗೆ ಬಂದ ಅರ್ಜುನನು ತಮಾಷೆಗೆಂದು "ಅಮ್ಮಾ ಒಂದು ಅಪೂರ್ವ ವಸ್ತುವನ್ನು ಪಡೆದಿದ್ದೇನೆ" ಎಂದನು. ಯಾವ ವಿಷಯವೂ ತಿಳಿಯದ ಕುಂತಿಯು ತಾಯ್ತನದ ಸಹಜತೆಯಿಂದ "ಐವರೂ ಕೂಡಿ ಉಪಯೋಗಿಸಿ" ಎಂದಳು. ತಾಯಿಯ ಮಾತನ್ನು ಅಕ್ಷರಶಃ ಪಾಲಿಸುತ್ತಿದ್ದ ಪಾಂಡವರು ಮಾರನೆಯ ದಿನ ವಿವಾಹ ಮಂಟಪದಲ್ಲಿ ಐವರೂ ಭೂಷಿತರಾಗಿ ಬಂದು ಕುಳಿತರು. ಇದನ್ನು ನೋಡಿದ ದ್ರುಪದನು ಚಕಿತನಾದನು. ಅಲ್ಲಿ ಕುಳಿತಿದ್ದವರು ಪಾಂಡವರೇ ಎಂದು ತಿಳಿದು ತನ್ನ ಅಭಿಲಾಷೆ ನೆರವೇರಿದುದಕ್ಕಾಗಿ ಅವನಿಗೆ ಸಂತೋಷವೂ ಆಯಿತು. ಎಂದೂ ನಡೆಯದ ಸೋಜಿಗ ತನ್ನಿಂದ ನಡೆಯಬೇಕಾಗಿದೆಯಲ್ಲಾ ಎಂದು ದುಃಖವೂ ಆಯಿತು. ಅಷ್ಟರಲ್ಲಿ ಅಲ್ಲಿಗೆ ವೇದವ್ಯಾಸರು ಬಂದು ಅದು ಶಾಸ್ತ್ರ ಸಮ್ಮತವೇ ಎಂದು ತಿಳಿಸಿ ಅವನ ಸಂಶಯವನ್ನು ನಿವಾರಿಸಿದರು. ದ್ರೌಪದಿ ಐವರು ಸೋದರರ ಪತ್ನಿಯಾದಳು.

ರಮೆ:– ಅಂತೂ ವಿಚಿತ್ರವೇ ಸರಿ.

ಮುರಳಿ:– ವಿಚಿತ್ರವಾದ್ದರಿಂದಲೇ ವ್ಯಾಸರು ಇದನ್ನೆಲ್ಲ ಬರೆದಿಟ್ಟರು. ಏನೂ ವಿಶೇಷಗಳಿಲ್ಲದೆ ನಾನೊಬ್ಬ ನಿನ್ನೊಬ್ಬಳನ್ನು ಮದುವೆಯಾಗಿ ಮಕ್ಕಳನ್ನು ಪಡೆದು ಒಂದಾನೊಂದು ದಿನ ಸತ್ತುಹೋದರೆ ನಮ್ಮ ಕತೆಯನ್ನು ಯಾರು ಬರೆಯುತ್ತಾರೆ, ಯಾರು ಓದುತ್ತಾರೆ?

ರಮೆ:– ಅದು ಸರಿ ಎನ್ನಿ. ಮುಂದೆ ಹೇಳಿ.

ಮುರಳಿ:– ದ್ರೌಪದಿಯನ್ನು ಮದುವೆಯಾದವರು ಪಾಂಡವರೇ ಎಂದೂ, ಅವರು ಅರಗಿನ ಮನೆಯಲ್ಲಿ ಸಾಯಲಿಲ್ಲವೆಂದೂ ತಿಳಿದ ಕೌರವರು ಪಾಂಚಾಲನ ಪಟ್ಟಣವನ್ನು ಮುತ್ತಿದರು. ಆದರೆ ಏನೂ ಮಾಡಲಾರದೆ ಸೋತು ಹಿಂದಿರು ಗಿದರು. ಭೀಷ್ಮ, ದ್ರೋಣ ಮೊದಲಾದವರ ಸಲಹೆಯಂತೆ ಧೃತರಾಷ್ಟ್ರನು ಪಾಂಡವರನ್ನು ಕರೆಸಿ ತನ್ನ ಸಮಸ್ತ ಐಶ್ವರ್ಯವನ್ನೂ ಸರಿ ಪಾಲು ಮಾಡಿ ಪಾಂಡವರಿಗೆ ಇಂದ್ರಪ್ರಸ್ಥವನ್ನು ರಾಜಧಾನಿಯನ್ನಾಗಿ ಗೊತ್ತುಪಡಿಸಿ ಅವರನ್ನು ಕಳುಹಿಸಿಕೊಟ್ಟನು.

ರಮೆ:– ಪಾಪ.

ಮುರಳಿ:– ಅದನ್ನು ನಾನು ಮಾಡುವದಿಲ್ಲ. ಆ ಶಬ್ದ ನನ್ನ ಕಿವಿಗೆ ಬಿದ್ದರೆ ನಾನು ಆ ಸ್ಥಳ ಬಿಡುತ್ತೇನೆ. ಆದುದರಿಂದ ಇದೋ ಎದ್ದೆ.

ರಮೆ:– ಅಯ್ಯೋ ರಾಮಾ, ಇದೇನಿದು ?

ಮುರಳಿ:– ಇದು, ನೋಡು, ಕೈ ಗಡಿಯಾರ. ಗಂಟೆ ಎಷ್ಟು ನೋಡು.

ರಮೆ:– ಅಯ್ಯೋ, ಇಷ್ಟು ಹೊತ್ತಾಗಿಬಿಟ್ಟಿತೆ ? ಆಗಲಿ. ನಾಳೆ ಮುಂದುವರಿಸೋಣ.

††††††

# ಮೂರನೆಯ ಸಂಜೆ

**ಮು**ರಳಿ:– ಪಾಂಡವ ದ್ವೇಷಿಯಾದ ತನ್ನ ಮಗನ ಕೆಟ್ಟ ಯೋಜನೆಗಳನ್ನೆಲ್ಲ ನಿಷ್ಫಲ ಗೊಳಿಸಿದ ವಿಧಿಯ ನಿಬಂಧನೆಗೆ ಅನಿವಾರ್ಯವಾಗಿ ಒಳಗಾಗಬೇಕಾಗಿ ಬಂದ ಧೃತ ರಾಷ್ಟ್ರನು ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟು ಅವರಿಗೆ ಇಂದ್ರಪ್ರಸ್ಥ ನಗರ ವನ್ನು ರಾಜಧಾನಿಯನ್ನಾಗಿ ಗೊತ್ತುಪಡಿಸಿ ಅವರನ್ನು ಕಳುಹಿಸಿಕೊಟ್ಟನು. ಹೀಗಿರು ವಾಗ........

ರಮೆ:– ....ಪ್ರಪಂಚ ಏನು ವಿಚಿತ್ರ !

ಮುರಳಿ:– ಹೌದು. ವಿಧಿಯ ಸಂಕಲ್ಪ ಬಹಳ ವಿಚಿತ್ರವಾಗಿರುತ್ತದೆ.

ರಮೆ:– ಎಂತೆಂತಹ ಪ್ರಾಣಿಗಳನ್ನೆಲ್ಲ ಆ ವಿಧಿ ಸೃಷ್ಟಿಸುತ್ತದೆ. ಅಲ್ಲ ?

ಮುರಳಿ:– ಪ್ರಾಣಿಯನ್ನೆ ? ಈಗ ಎಂಥಾ ಪ್ರಾಣಿಯನ್ನು ಕಂಡೆ ?

ರಮೆ:– ಅದೇ, ಹೇಳಿದೆನಲ್ಲ, ವಿಚಿತ್ರ ಎಂದು.

ಮುರಳಿ:– ವಿಚಿತ್ರ ಪ್ರಾಣಿಯನ್ನು ಕಂಡೆಯಾ ?

ರಮೆ:– ಹಾಗೇ ಏನೋ ಹೇಳಿದೆ.

ಮುರಳಿ:– ಹೇಳಿದೆಯಾ, ಕಂಡೆಯಾ ?

ರಮೆ:– ಹೇಳಿದೆ, ಕಂಡೆ........

ಮುರಳಿ:– ಈಗ ಕಂಡೆಯಾ ?

ರಮೆ:– ಈಗಲೇ ಎನ್ನಬಹುದು.

ಮುರಳಿ:– ಎಲ್ಲಿ ಕಂಡೆ ?

ರಮೆ:– ಇಲ್ಲೇ ಎನ್ನಬಹುದು.

ಮುರಳಿ:– ಎಂಥಾ ಪ್ರಾಣಿ ?

ರಮೆ:– ವಿಚಿತ್ರದ್ದು.

ಮುರಳಿ:– ಈಗ ಎಲ್ಲಿ ಹೋಯಿತು ?

ರಮೆ:– ಎಲ್ಲಿಯೂ ಹೋಗಿಲ್ಲ.

ಮುರಳಿ:— ಇಲ್ಲೇ ಇದೆಯಾ ?

ರಮೆ:— ಇದೆಎನ್ನಬಹುದು.

ಮುರಳಿ:— ಎಲ್ಲಿ, ನನಗೆ ತೋರಿಸು ?

ರಮೆ:— ....ಇಲ್ಲಿ !

ಮುರಳಿ:— ಎಲ್ಲಿ ?

ರಮೆ:— ಇಲ್ಲಿ !

ಮುರಳಿ:— ಅದು ನಾನು.

ರಮೆ:— ನೀವಲ್ಲ ಎಂದೆನೆ ?

ಮುರಳಿ:— ನಾನು ವಿಚಿತ್ರ ಪ್ರಾಣಿಯೆ ?

ರಮೆ:— ಅಲ್ಲ, ಪ್ರಕೃತಿಯ ವಿಚಿತ್ರ ಸೃಷ್ಟಿಯನ್ನು ಹೇಳಿದೆ, ಅಷ್ಟೆ.

ಮುರಳಿ:— ನಾನು ಅನ್ನುತ್ತಿ, ವಿಚಿತ್ರ ಸೃಷ್ಟಿ ಅನ್ನುತ್ತಿ ? ಏನು ವಿಚಿತ್ರ ಕಂಡೆ ಅಂತ ?

ರಮೆ:— ಕೆಲವು ಪ್ರಾಣಿಗಳು ಬೇರೆ ಏನನ್ನು ಮರೆತರೂ ತಾವು ಕೊಟ್ಟ ಮಾತನ್ನು ಮರೆಯುವದಿಲ್ಲ. ಕೆಲವು ಕೊಟ್ಟ ಮಾತನ್ನೂ, ನೆನಪಿಡಬೇಕಾದ ಇತರ ವಿಷಯಗಳನ್ನೂ ಮರೆಯದೆ ಜ್ಞಾಪಕದಲ್ಲಿಟ್ಟುಕೊಳ್ಳುತ್ತವೆ. ಇನ್ನು ಕೆಲವು ಕೊಟ್ಟ ಮಾತನ್ನು ಮರೆತು ಬೇರೆ ಏನನ್ನೋ ನೆನಪಿನಲ್ಲಿಟ್ಟುಕೊಳ್ಳುತ್ತವೆ. ಮತ್ತೆ ಕೆಲವಂತೂ........

ಮುರಳಿ:— ಎಲ್ಲಾ ಅರ್ಥವಾಯಿತು, ನಾನು ಕೊಟ್ಟ ಮಾತನ್ನು ಏನು ಮರೆತಿದ್ದೇನೆ ಹೇಳು.

ರಮೆ:— ಜ್ಞಾಪಿಸಿಕೊಳ್ಳಿ.

ಮುರಳಿ:— ಜ್ಞಾಪಕದಲ್ಲಿರುವದಾಗಿದ್ದರೆ ನಿನ್ನಿಂದ ಏಕೆ ಹೇಳಿಸಿಕೊಳ್ಳುತ್ತಿದ್ದೆ?

ರಮೆ:— ಅಂತೂ ಪ್ರಯತ್ನಿಸಿ.

ಮುರಳಿ:— ನನಗೆ ನೆನಪು ಬರುವದಿಲ್ಲವಪ್ಪ. ಏನು ? ಈ ಬೇಸಿಗೆಯಲ್ಲಿ ಸಾಧ್ಯವಾದರೆ ತಿರುಪತಿಗೆ ಹೋಗೋಣ ಎಂದು ಯಾವತ್ತೋ ಹೇಳಿದ್ದೆನಲ್ಲ, ಅದುವಾ ?

ರಮೆ:— ಸರಿ, ಸರಿ. ನೀವು ತಿರುಪತಿಗೆ ಕರೆದುಕೊಂಡು ಹೋಗುತ್ತೀರೆಂದು ನಾನು ನಂಬಬೇಡವೇ, ಸದ್ಯ !

ಮುರಳಿ:– ಮತ್ತೇನಪ್ಪ! ನಿಮ್ಮ ತಾಯಿಗೊಂದು ಸೀರೆ ತೆಗೆದುಕೊಟ್ಟರೆ ಆದೀತು ಎಂದು ಯಾವಾಗಲೋ ಹೇಳಿದ್ದೆನಲ್ಲ........

ರಮೆ:– ಛೀ. ನಿಮ್ಮ ಕೈಲಿ ಹರಿಯುದ ಕೆಲಸಗಳನ್ನು ನೀವು ಮಾಡುತ್ತೇನೆಂದು ಎಷ್ಟೇ ಭರವಸೆಯಿಂದ ಹೇಳಿದ್ದರೂ ನಾನು ಅದ್ಯಾವದನ್ನೂ ನಂಬಿಕೊಂಡು ನಿಮ್ಮನ್ನು ಕೇಳುತ್ತಿಲ್ಲ, ಹೆದರಬೇಡಿ.

ಮುರಳಿ:– ಹಾಗಾದರೆ ನನ್ನ ಕೈಲಾಗುವ ಏನನ್ನು ಹೇಳಿ ಮಾಡದಿದ್ದೇನೆ.... ಹ್ಞಾಂ, ತಿಳಿಯಿತು, ತಿಳಿಯಿತು. ಇಷ್ಟಕ್ಕೆ ಇಷ್ಟು ಪುರಾಣ ಹೇಳಬೇಕಾಗಿತ್ತೇನು? ಅಂತೂ ಸ್ತ್ರೀಯರಿಗೆ ಸಣ್ಣ ಪುಟ್ಟ ವಿಚಾರದಲ್ಲಿಯೂ ಎಷ್ಟು ಆಸೆ ಇರುತ್ತದಲ್ಲಾ....!

ರಮೆ:– ಏನು ಆಸೆ? ಏನು ಆಸೆಯಲ್ಲಿ ನಾನು ಏನು ಕೇಳಿದೆ ಅಂತ ನೀವು ಹೇಳುವದು?

ಮುರಳಿ:– ಗೊತ್ತಾಯಿತಮ್ಮ, ನೀನೇನೋ ಬೇಡಬಾರದ್ದಕ್ಕೆ ಬೇಡಿಬಿಟ್ಟೆ ಅಂತ ನಿನ್ನ ಹೆಣ್ಣುತನದ ಗೌರವ ಮುಳುಗಿಹೋದಂತೆ ಏನೂ ಆಡಬೇಡ. ನನಗೆ ಗೊತ್ತಾಗಿಯೇಬಿಟ್ಟಿತು.

ರಮೆ:– ಛೀ, ಇದೇನು ನೀವು ಏನೇನೋ ಹೇಳುವದು? ನಾನು ಏನು ಬೇಡಿದೆ ಅಂತ?

ಮುರಳಿ:– ಏನೋ ಸೋತವಳ ಹಾಗೆ, ಸೋಲನ್ನು ಒಪ್ಪಿಕೊಳ್ಳಬೇಕಾದವಳ ಹಾಗೆ, ಪ್ರತಿಷ್ಠೆ ಕೆಣಕಲ್ಪಟ್ಟವಳ ಹಾಗೆ ಪರಿತಪಿಸಬೇಡ ರಮಾ. ನನಗೆ ಚೆನ್ನಾಗಿ ನೆನಪಿಗೆ ಬಂದುಬಿಟ್ಟಿದೆ. ಒಪ್ಪಿಕೊಂಡು ಬಿಡು. ಸುಮ್ಮನೆ ಸಮಯ ಕಳೆಯುವದು ಯಾಕೆ?

ರಮೆ:– ನಿಮಗೆಲ್ಲೋ ತಲೆ ಕೆಟ್ಟಿದೆ. ಏನು ಹೇಳಿ, ಹಾಗಾದರೆ ನಾನು ಹೇಳಿದುದು?

ಮುರಳಿ:– ಹೇಳಲೊ?

ರಮೆ:– ಹೇಳಿ ಅಂದೆ.

ಮುರಳಿ:– ನೀನು ಉಟ್ಟಿರುವ ಈ ಸೀರೆಯುನ್ನು ಮೊನ್ನೆ ಕ್ರಯಕ್ಕೆ ತಂದಾಗ ಹೇಳಿದ್ದೆ–ಇದು ನಿನಗೆ ಚೆನ್ನಾಗಿ ಒಪ್ಪುತ್ತದೆ; ಅದನ್ನು ಉಟ್ಟ ದಿನ ನಿನ್ನ ಮುಖವನ್ನೊಮ್ಮೆ ಚುಂ........

ರಮೆ:–........ಥೂ. ನೀವು ಯಾಕೆ ಹೀಗಾದಿರಿ ಅಂತ! ಭೀಮ, ಮಹಾಭಾರತ ಎಲ್ಲ ಹೋಯಿತು. ಈಗ ಇಲ್ಲಿಗೆ ತಲಪಿದ್ದೀರಿ.

ಮುರಳಿ:– ಮತ್ತೆ ನನ್ನ ಕೈಲಿ ಹರಿಯುವ ಕೆಲಸ ಎಂದೆ ? ಹಾಗಾದರೆ ಅದಲ್ಲವೇನು ನೀನು ಹೇಳಿದ್ದು ?

ರಮೆ:– ನನಗೇನೂ ಹುಚ್ಚು ಹಿಡಿದಿಲ್ಲ, ಅದನ್ನು ಹೇಳುವದಕ್ಕೆ.

ಮುರಳಿ:– ಓಹೊ. ಹುಚ್ಚು ಹಿಡಿದಾಗ ಮಾತ್ರವೇ ನೀನದನ್ನು ಬಯಸುವದೊ ?

ರಮೆ:– ಥೂ. ಯಾಕಪ್ಪಾ ಸಮಯ ಹೀಗೆ ಹಾಳು ಮಾಡುತ್ತೀರಿ ! ಹಾಳಾಗಿ ಹೋಗಲಿ, ಮುಂದಕ್ಕೆ ಕತೆಯನ್ನಾದರೂ ಹೇಳಿ.

ಮುರಳಿ:– ಅದೇನು ಹೇಳಿಬಿಡು. ನಾನು ಏನನ್ನು ಮರೆತಿದ್ದೇನೆ ಎನ್ನುವವನ್ನು ಬಾಯಿಬಿಟ್ಟು ಹೇಳಿಬಿಡು. ನೋಡೋಣ.

ರಮೆ:– ನಿನ್ನೆ ಸಂಜೆ ಕತೆಗೆ ಮುಂಚೆ, ಮನುಷ್ಯನ ಸುಖ, ದುಃಖ, ದೇವರು, ಅವನು ಇದ್ದಾನೋ, ಇಲ್ಲವೋ ಎಂಬದನ್ನೆಲ್ಲ ಮಾತನಾಡುತ್ತಿದ್ದಾಗ ಪ್ರಾಸಂಗಿಕವಾಗಿ ಆತ್ಮ, ಪರಮಾತ್ಮ, ಪ್ರಕೃತಿ ಅಂತ ಎಲ್ಲ ವಿಚಾರ ಬಂತು. ನೆನಪಿದೆಯಾ ?

ಮುರಳಿ:– ಇದೆ.

ರಮೆ:– ಅದರ ವಿಚಾರ ಹೇಳಿ ಎಂದು ನಾನು ಕೇಳಿದಾಗ ನಾಳೆ ಆಗಲಿ ಎಂದು ನೀವು ಹೇಳಿದುದು ನೆನಪಿದೆಯಾ ?

ಮುರಳಿ:– ಹಾಗೆ. ಆತ್ಮ, ಪ್ರಕೃತಿ, ಪುರುಷ ಅನ್ನುವದರ ವಿಚಾರ ಹೇಳಬೇಕು ಅಂತ. ಹಾಗನ್ನು ಮತ್ತೆ. ಅದರ ವಿಚಾರ ಏನು ಹೇಳಬೇಕು ಹೇಳು.

ರಮೆ:– ಈ ಆತ್ಮ ಅಂತ ಅನ್ನುತ್ತಾರಲ್ಲ ? ಅದು ಇದೆಯೋ ? ಇದ್ದರೆ ಹೇಗಿದೆ ? ನಾವು ಸಾಯುವಾಗ ಅದು ಏನಾಗುತ್ತದೆ ? ಅದಕ್ಕೂ ಈ ಪ್ರಕೃತಿ ಅನ್ನುವದಕ್ಕೂ ಏನು ಸಂಬಂಧ ? ಈ ಎರಡರ ನಡುವೆ ದೇವರು ಎನ್ನುವವನು ಏನು ಸಂಬಂಧ ಪಡೆದಿರುತ್ತಾನೆ ? ಎಲ್ಲರ ಆತ್ಮವೂ ಒಂದೇ ಅನ್ನುತ್ತಾರಲ್ಲ, ಅದು ಹೇಗೆ ? ಇದನ್ನೆಲ್ಲ ಹೇಳಿ ನೋಡೋಣ.

ಮುರಳಿ:– ಹಾಗೆ. ಹಾಗಾದರೆ ಭೀಮನ ಕತೆ ಹೇಳುವದು ಬೇಡ ಅನ್ನುತ್ತಿ.

ರಮೆ:– ಅದೂ ಬೇಕು. ಈ ವಿಚಾರವನ್ನೂ ಒಂದು ನಾಲ್ಕು ಮಾತಿನಲ್ಲಿ ಹೇಳಿ ಅಂತ.

ಮುರಳಿ:– ಎಲ್ಲರ ಆತ್ಮವೂ ಒಂದೇ. ಆತ್ಮನಿಗೂ ಪರಮಾತ್ಮನಿಗೂ

ವ್ಯತ್ಯಾಸವಿಲ್ಲ. ಈ ವಿಶ್ವ ಎನ್ನುವದು ಪರಮಾತ್ಮನ ಪ್ರಕೃತಿ. ಎಲ್ಲವೂ ಪರಮಾತ್ಮನೇ ಆಗಿದೆ. ಆಯಿತಲ್ಲ ?

ರಮೆ:– ಏನಾಯಿತು ?

ಮುರಳಿ:– ನಾಲ್ಕು ಮಾತಿನಲ್ಲಿ ಹೇಳಿಯಾಯಿತು.

ರಮೆ:– ಬಹಳ ಸಂತೋಷ. ಎಲ್ಲ ಅರ್ಥವಾಯಿತು. ಈಗ ಭೀಮನ ಕತೆ ಮುಂದುವರಿಸಿ.

ಮುರಳಿ:– ಪಾಂಡವರು ಇಂದ್ರಪ್ರಸ್ಥವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು........

ರಮೆ:– ವಿನಯವನ್ನು ಕಲಿಸುವದು ವಿದ್ಯೆಯ ಲಕ್ಷಣವಂತೆ. ಹಾಗಿದ್ದಮೇಲೆ ಜಂಭ ಇರುವವರು ವಿದ್ಯೆಯಿಂದ ದೂರವಾದವರು ಎಂದಂತೆಯೇ ಆಗುತ್ತದೆ.

ಮುರಳಿ:– ನಿಜ, ನಿಜ. ನನ್ನ ವಿನಯವನ್ನು ನೋಡಿಯೇ ನೀನು ನನ್ನನ್ನು ವಿದ್ಯಾವಂತ ಎಂದು ತಿಳಿಯಲು ಸಾಧ್ಯವಾಗಿರಬೇಕು. ಅಲ್ಲ ?

ರಮೆ:– ಅದರ ವಿರುದ್ಧ.

ಮುರಳಿ:– ದೇವರಿಗೆ ಸಮಾನನಾದ ಪತಿಗೆ ನಿಜವಾಗಿ ಜಂಭವಿಲ್ಲದಿದ್ದರೂ ಅವನನ್ನು ಜಂಭಗಾರ ಎಂದು ಹೇಳುವ ಹೆಂಡತಿಯು ಪಾಪಿಯೂ, ದುರಹಂಕಾರಿಯೂ ಆಗುತ್ತಾಳೆ.

ರಮೆ:– ಆಗಲಿ. ನಾನು ಪಾಪಿಯಾದರೆ ನೀವೇನೂ ನರಕಕ್ಕೆ ಹೋಗಬೇಕಾಗಿಲ್ಲವಲ್ಲ ! ಸಾಧ್ಯವಾದರೆ ಕತೆ ಹೇಳಿ. ಇಲ್ಲವಾದರೆ........

ಮುರಳಿ:– ........ಕ್ಷಮಿಸಬೇಕು. ಯಾವದೋ ಮರೆವಿನಲ್ಲಿ ಹೇಳಿಬಿಟ್ಟೆ. ತಪ್ಪಾಯಿತು. ಸುಂದರಿಯರು ನರಕಕ್ಕೆ ಹೋಗುವದೇ ಇಲ್ಲ. ಅವರು ಸ್ವತಃ ಸ್ವರ್ಗವನ್ನು ಕೊಡಬಲ್ಲವರು.

ರಮೆ:– ನಿಮ್ಮ ಹೊಗಳಿಕೆಯೂ ಬೇಡ, ಹಳಿಯುವಿಕೆಯೂ ಬೇಡ. ಏನೋ, ನನಗೆ ತಿಳಿಯದ ವಿಚಾರವನ್ನು ಸ್ವಲ್ಪ ಹೇಳಿ ಅಂದರೆ ಪಾಪಿ, ನರಕ, ಸುಂದರಿ, ಸ್ವರ್ಗ ಅಂತ ಎಲ್ಲ ಹೇಳುತ್ತಾರೆ !

ಮುರಳಿ:– ನೀನು ಕೇಳಿದ ವಿಚಾರ ಬಹಳ ಗಹನವಾದುದು ರಮಾ. ಆತ್ಮ, ಪರಮಾತ್ಮ, ಪ್ರಕೃತಿ, ವಿಶ್ವ, ಮಾಯೆ, ಮೋಕ್ಷ, ಪುನರ್ಜನ್ಮ-ಇವೆಲ್ಲ ಒಂದಕ್ಕೊಂದು ಸಂಬಂಧಿಸಿದ ವಿಷಯಗಳು. ಅವೆಲ್ಲವುಗಳ ಕುರಿತು ಜಿಜ್ಞಾಸೆಯೇ ವೇದಾಂತ ಎನ್ನುವದು. ಮಾನವನ ಅತ್ಯದ್ಭುತ ಮೇಧಾಶಕ್ತಿಯ ಅತ್ಯುತ್ತಮ

ಫಲವೇ ಈ ವೇದಾಂತ. ಆದರೆ ಈ ವೇದಾಂತ ನೀಡಿರುವ ಸಿದ್ಧಾಂತದ ಬಗೆಗೆ ಒಮ್ಮತವಿಲ್ಲ. ಲೋಕದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ರೀತಿಯ ಸಿದ್ಧಾಂತ ಗಳನ್ನು ರೂಪಿಸಲಾಗಿದೆ. ಆದರೂ ಈ ಪರೋಕ್ಷ ಜ್ಞಾನಕ್ಕೆ ಭಾರತವೇ ಇಂದಿಗೂ ತವರುಮನೆಯಾಗಿದೆ. ಇಲ್ಲಿಯೇ ಆದರೂ ಕೂಡ ಈ ಅದ್ಭುತವಾದ ಜ್ಞಾನಕ್ಕೆ ಸಾರ್ವತ್ರಿಕವಾದ ಒಂದೇ ಸಿದ್ಧಾಂತ ಇರುವದಿಲ್ಲ. ಕುರುಡರು ಆನೆಯನ್ನು ಬೇರೆಬೇರೆಯಾಗಿ ವರ್ಣಿಸುವಂತೆಯೇ, ನಮ್ಮ ಇಂದ್ರಿಯಗಳಿಗೆ ಅತೀತವಾದ ಈ ಜ್ಞಾನವನ್ನು ಮಾನವರು ಬೇರೆಬೇರೆಯಾಗಿ ವರ್ಣಿಸಿದ್ದಾರೆ. ಅದು ಅನಿವಾರ್ಯ ಕೂಡ.

ಹಾಗಿರುವಾಗ ಇಷ್ಟು ಅತ್ಯದ್ಭುತವಾದ ಒಂದು ವಿಚಾರವನ್ನು, ಇಷ್ಟು ಅಭಿಪ್ರಾಯ ಭೇದಗಳಿರುವ ವಿಚಾರವನ್ನು, ನಾನು ನಿನಗೆ ನಾಲ್ಕು ಮಾತು ಗಳಲ್ಲಿ ಹೇಳಬೇಕೆಂದರೆ ಅದು ಹೇಗೆ ಸಾಧ್ಯ ?

ರಮೆ:– ಅಂತೂ ಸ್ವಲ್ಪದರಲ್ಲಿ ಎಷ್ಟು ಹೆಚ್ಚು ಹೇಳಲು ಸಾಧ್ಯವೋ ಅಷ್ಟು ಹೇಳಿ. ನೀವೇನಪ್ಪಾ, ಬುದ್ಧಿವಂತರು. ನಿಮಗೆ ಮಾತು ಕಲಿಸಿ ಕೊಡಬೇಕೇನು ?

ಮುರಳಿ:– ನಾನು ಬುದ್ಧಿವಂತನಲ್ಲದಿದ್ದರೂ ನೀನು ನನ್ನನ್ನು ಸುಳ್ಳು ಮಾತಿನಲ್ಲಿ ಹೊಗಳುವದನ್ನು ಒಪ್ಪಿಕೊಳ್ಳುವಷ್ಟು ಹೆಡ್ಡನೂ ಅಲ್ಲ ಅನ್ನು. ಇರಲಿ. ಯಾವದನ್ನು ನಮ್ಮ ಹಿಂದಿನವರು ಪರೋಕ್ಷ ಜ್ಞಾನ, ವೇದಾಂತ ಜ್ಞಾನ, ಆಧ್ಯಾತ್ಮ ಶಾಸ್ತ್ರ, ಆತ್ಮ ಜ್ಞಾನ, ಅಪರ ವಿಜ್ಞಾನ, ಅಲೌಕಿಕ ಜ್ಞಾನ ಎಂದು ಬೇರೆ ಬೇರೆ ಹೆಸರುಗಳಲ್ಲಿ ಕರೆದಿದ್ದಾರೋ ಅದರ ಕುರಿತು ಬಹಳ ಸ್ಥೂಲವಾಗಿ ಹೇಳಲು ಪ್ರಯತ್ನಿಸುತ್ತೇನೆ. ಆದರೆ ಹೇಳಹೇಳುತ್ತಾ ಈ ದಿನ ಭೀಮನ ಕತೆಗೆ ಸಂಚಕಾರ ಬರಬಹುದು.

ರಮೆ:– ಅದು ಕೂಡದು. ಇದನ್ನು ಒಂದಷ್ಟು ಹೇಳಿ ಉಳಿದುದನ್ನು ನಾಳೆಗೆ ಮುಂದುವರಿಸಿ.

ಮುರಳಿ:– ಆಗಲಿ. ಪ್ರಯತ್ನಿಸೋಣ. ಕೇಳುವಾಗ ಏಕಾಗ್ರತೆ ಇರಲಿ. ಕೇಳು. ಈಗ ಆತ್ಮ, ಪರಮಾತ್ಮ, ಪ್ರಕೃತಿ–ಇವುಗಳ ಬಗೆಗೆ ತಾನೇ ನಿನಗೆ ವಿವ ರಣೆ ಬೇಕಾಗಿರುವದು ?

ರಮೆ:– ಹೌದು.

ಮುರಳಿ:– ಪರಮಾತ್ಮನ ಕುರಿತಾಗಿ ನಿನ್ನೆ ಸಂಜೆ ಸಾಕಷ್ಟು ವಿಶ್ಲೇಷಣೆ ಮಾಡಿದ್ದೇವೆ. ಈಗ ಆತ್ಮ ಮತ್ತು ಪ್ರಕೃತಿಗಳ ಕುರಿತಾಗಿ ನೋಡೋಣ. ಆಗದೆ ?

ರವಿ:– ಆಗಲಿ.

ಮುರಳಿ:– ಈಗ ಆತ್ಮ ಎಂಬದು "ನಾನು" ಎಂಬದನ್ನು ಪ್ರತಿನಿಧಿಸುತ್ತದೆ. "ನಾನು" ಎಂದರೆ ಅನೇಕರು ಅನೇಕ ವಿಧವಾಗಿ ತಿಳಿದುಕೊಂಡಿರುವಂತಲ್ಲದೆ ನಿಜವಾದ "ನಾನು" ಯಾವದೋ ಅದನ್ನು ಆತ್ಮ ಎಂದು ಕರೆಯಲಾಗಿದೆ. ಅಂದರೆ ಪ್ರತಿಯೊಂದು ಜೀವಿಯ "ನಾನೂ" ಆದರದರ ಆತ್ಮ ಎನಿಸುತ್ತದೆ. ಇಂತಹ ಆತ್ಮದ ಕುರಿತಾದ ಸರಿಯಾದ ಜ್ಞಾನ, ಅರಿವಿನ ಪೂರ್ಣತೆ ಎನ್ನಲಾಗಿದೆ. ವ್ಯಾವಹಾರಿಕ ಜೀವನದಲ್ಲಿ ಈ ಆತ್ಮನಿಗೂ ಜೀವಿಗಳಿಗೂ – ಮಾನವರಿಗೆ ಎನ್ನೋಣ; ವಿವರಣೆ ಸುಲಭವಾಗುತ್ತದೆ – ಇರುವ ಸಂಬಂಧದ ಆಧಾರದಲ್ಲಿ ವಿಂಗಡಿಸಿದರೆ ಮೂರು ಪ್ರಮುಖ ಬಗೆಯ ಮಾನವರಿದ್ದಾರೆ. ಈ ದೇಹವೇ "ನಾನು" ಎಂದು ತಿಳಿದು ಆತ್ಮದ ಇರವನ್ನು ನಿರ್ಲಕ್ಷ್ಯ ಮಾಡಿರುವ ವರ್ಗ ಒಂದು. "ನಾನು" ಎಂದರೆ ಈ ದೇಹವಲ್ಲ: ಜಡವಾದ ಈ ದೇಹಕ್ಕೆ ಚೈತನ್ಯವನ್ನು ನೀಡುವ ನಿಜವಾದ "ನಾನು" ಬೇರೆ ಯಾರೋ ಆಗಿದ್ದೇನೆ. ಅಂತಹ "ನಾನು" ಈ ದೇಹದಿಂದ ಪ್ರತ್ಯೇಕವಾಗಿರುವವನೂ, ದೇಹದಂತೆ ಅಶಾಶ್ವತನಲ್ಲದವನೂ ಆಗಿ "ನಾನು" ಈ ದೇಹ ನನಗೆ ಬರುವದಕ್ಕೆ ಹಿಂದೆಯೂ ಇದ್ದು ಈ ದೇಹ ಹೊರಟು ಹೋದ ಅನಂತರವೂ ಇರುವವನು ಎಂದು ತಿಳಿದುಕೊಂಡು, ಆದರೂ ವ್ಯವಹಾರಕ್ಕೋಸ್ಕರ ಈ ದೇಹವೇ "ನಾನು" ಎನ್ನುವಂತೆ ವರ್ತಿಸುವ ವರ್ಗ ಎರಡನೆಯದು. "ನಾನು" ಈ ದೇಹದಿಂದ ಸಂಪೂರ್ಣ ಬೇರೆಯೇ. ಈ ದೇಹಕ್ಕೆ ಒದಗುವ ಸುಖ, ದುಃಖಗಳ್ಯಾವವೂ "ನನಗೆ" ಅಂಟುವಂತಿಲ್ಲ. ಈ ದೇಹ ಮಾಡುವ ಪಾಪ, ಪುಣ್ಯಗಳಿಂದಲೂ ಅತೀತನಾಗಿರುವವನು "ನಾನು" ಎಂಬ ನಿರಂತರ ಅನುಭವದಲ್ಲಿ ಬದುಕುವ ಮುಕ್ತರು ಅಥವಾ ಆತ್ಮಜ್ಞಾನಿಗಳು ಮೂರನೆಯ ವರ್ಗ. ಆದರೆ ಈ ಲೋಕದಲ್ಲಿ ನೋಡುವಾಗ ಈ ದೇಹವನ್ನೇ "ನಾನು" ಎಂದು ತಿಳಿದು ವ್ಯವಹರಿಸುವವರನ್ನು ಮಾತ್ರವೇ ಕಾಣುತ್ತೇವೆ. ದೇಹಾಭಿಮಾನ ಬಿಟ್ಟ ಬ್ರಹ್ಮಜ್ಞಾನಿಗಳು ಶತಮಾನದಲ್ಲಿ ಎಲ್ಲಿಯೋ ಆಗೊಮ್ಮೆ ಈಗೊಮ್ಮೆ ಕಾಣಿಸಿಕೊಳ್ಳುತ್ತಾರೆ, ಅಷ್ಟೆ.

ಈಗ ಮೊದಲನೆಯದಾಗಿ ಈ ಆತ್ಮದ ತಿಳಿವಳಿಕೆ ನಮಗೆ ಏಕೆ ಬೇಕು ಎಂಬದನ್ನು ನೋಡೋಣ. ಜೀವನದಲ್ಲಿ ಅನಿವಾರ್ಯವಾಗಿ ಬರುವ ಈ ದುಃಖಗಳನ್ನು ಒಲ್ಲದೆ ನಿರಂತರವಾದ, ಶಾಶ್ವತವಾದ ಸುಖವನ್ನು ಹುಡುಕುತ್ತಾ ಹೊರಟ ಮಾನವ ಕೊನೆಯಲ್ಲಿ ದೇವರ ಸಾನ್ನಿಧ್ಯದಲ್ಲಿ ತನ್ನ ಶೋಧವನ್ನು ನಿಲ್ಲಿಸಿದ ಎಂದು ನಿನ್ನೆ ನೋಡಿದ್ದೇವೆ. ಅದೇ ಶೋಧದಲ್ಲಿ ಹೊರಟ ಇನ್ನು ಕೆಲವರು ತಮ್ಮ ಆ ಶೋಧವನ್ನು ಆತ್ಮನಲ್ಲಿ ಐಕ್ಯಗೊಳಿಸಿ ನೆಮ್ಮದಿ ಪಡೆದರು ಎಂದು ಹೇಳಬಹುದು. ಅಂದರೆ ದೇವರ ಕೃಪೆಯಿಂದ ನಾವು ಅಂತಿಮವಾಗಿ ಈ ದುಃಖವನ್ನು ಗೆಲ್ಲಲು ಸಾಧ್ಯವಾಗು

ವಂತೆಯೇ ಆತ್ಮಜ್ಞಾನದಿಂದಲೂ ಸಾಧ್ಯ ಎಂದು ಕಂಡುಹಿಡಿದರು. ಇವೆರಡೂ ಮಾರ್ಗಗಳು ಬೇರೆ ಬೇರೆ ಎನ್ನುವಂತೆ ಕಾಣಿಸಿದರೂ ಎರಡೂ ಕೂಡ ತಲಪುವ ಗುರಿ ಒಂದೇ ಎಂಬದನ್ನು ಆಮೇಲೆ ನೋಡೋಣ. ಈಗ ಇಷ್ಟು. ಕಷ್ಟಗಳನ್ನು ಒಲ್ಲದೆ ಸುಖವನ್ನೇ ಅಪೇಕ್ಷಿಸಿದ ಮಾನವ ಅದು ಹೇಗೆ ಆತ್ಮ ಸಂಶೋಧನೆ ಮಾಡಿಕೊಂಡ ಎಂಬದನ್ನು ನೋಡೋಣ. ಕೇವಲ ಪಶುವಿನ ಬೌದ್ಧಿಕ ಮಟ್ಟದಿಂದ ಮೇಲೇರದ ಮನುಷ್ಯ ತನ್ನ ದೇಹದೊಳಗೆ ಆತ್ಮ ಇದೆಯೆಂದು ಹೋಗಲಿ, ಒಂದು ಮನಸ್ಸೆಂಬದಿದೆ ಎಂದು ಕೂಡ ತಿಳಿಯಲಾರದೆ ದೇಹವೇ ತಾನೆಂಬಂತೆ ವರ್ತಿಸುವದನ್ನೂ ನೋಡುತ್ತೇವೆ. ಅವನಿಗಿಂತ ಹೆಚ್ಚು ವಿಕಾಸ ಹೊಂದಿದವರು ದೇಹಕ್ಕಿಂತ ಮನಸ್ಸು ಪ್ರಬಲವಾದುದೆಂದೂ ದೇಹದ ಚೇಷ್ಟೆಗಳು ಮನಸ್ಸನ್ನು ಅವಲಂಬಿಸಿವೆಯೆಂದೂ ತಿಳಿಯುತ್ತಾರೆ. ಅವರಿಗಿಂತ ಮುಂದುವರಿದವರು ಮನಸ್ಸಿನ ಮೂಲವೇ ಆತ್ಮವೆಂದೂ ಆ ಆತ್ಮವು ಅಚಲವಾದುದೂ, ಮನಸ್ಸಿನಂತೆ ಚಂಚಲವಲ್ಲದುದೂ ಆಗಿದೆಯೆಂದು ತಿಳಿದು ತಾವು ಆತ್ಮನಲ್ಲಿಯೇ ನೆಲೆಗೊಳ್ಳುವದರ ಮೂಲಕ ಮನಸ್ಸು, ದೇಹಗಳ ವ್ಯಾಪಾರಗಳಿಂದ ನಿರ್ಲಿಪ್ತತೆಯನ್ನು ಹೊಂದಿ ಸದಾ ಆನಂದ ಪಡೆದಿರುತ್ತಾರೆ.

ದೇಹವೇ ತಾನೆಂಬ ಒಂದು ಜೀವಿ ತಾನು ಪಾವನವಾದ ಆತ್ಮ ಎಂಬ ವಿಕಾಸವನ್ನು ಪಡೆಯಲು ವಿವಿಧ ಹಂತಗಳನ್ನು ಹೇಗೆ ದಾಟಿ ಬರುತ್ತದೆ ಎಂಬದನ್ನು ನಮ್ಮ ಹಿಂದಿನವರು ನಿರೂಪಿಸಿರುವ ವಿಷ್ಣುವಿನ ದಶಾವತಾರಗಳ ಕತೆಗಳ ಮೂಲಕ ಕಂಡುಕೊಳ್ಳಬಹುದು. ವಿಷ್ಣುವು ಪ್ರಥಮವಾಗಿ ಮತ್ಸ್ಯಾವತಾರವನ್ನೆತ್ತಿದನೆಂಬ ಕತೆಯಿದೆ. ಆ ಹಂತದಲ್ಲಿ ಆತ್ಮದ ಪ್ರಕಾಶವಿರಲಿ, ಮನಸ್ಸಿನ ಪ್ರಕಾಶ ಕೂಡ ಇರುವದಿಲ್ಲ. ಕೈಕಾಲುಗಳು ಕೂಡ ಇಲ್ಲದಂತೆ ದೇಹವೇ ಸಾಕಷ್ಟು ವಿಕಾಸಗೊಳ್ಳದೆ ಆ ಜೀವಿ ಭೂಮಿಯ ಮೇಲೆ ಬಾಳಲೂ ಸಾಧ್ಯವಾಗದೆ ನೀರಿನೊಳಗೇ ಅಡ್ಡಾಡುವ ಮೀನಾಗಿ ಬದುಕಿರುತ್ತದೆ.

ಎರಡನೆಯದು ಕೂರ್ಮಾವತಾರ. ಇಲ್ಲಿ ದೇಹವು ಸ್ವಲ್ಪ ವಿಕಾಸವನ್ನು ಕಾಣುತ್ತದೆ. ನೀರಿನೊಳಗೆ ಮಾತ್ರವೇ ಅಲ್ಲದೆ ಭೂಮಿಯ ಮೇಲೂ ಹರಿದಾಡಬಲ್ಲಷ್ಟು ದೇಹದ ವಿಕಾಸ ಬಂದಿರುತ್ತದೆ. ಆದರೆ ಇಲ್ಲಿಯೂ ಮನಸ್ಸಿನ ಮತ್ತು ಆತ್ಮದ ಪ್ರಕಾಶ ಇರುವದಿಲ್ಲ.

ಮೂರನೆಯದು ವರಾಹಾವತಾರ. ದೇಹವು ನೀರನ್ನು ಬಿಟ್ಟುಬಿಟ್ಟು ಭೂಮಿಯನ್ನೇ ಅವಲಂಬಿಸಿ ಬದುಕುತ್ತದೆ. ನೀರಿನಲ್ಲಿ ಮಾತ್ರವೇ ಮೀನಾಗಿದ್ದಾಗ ದೇಹ ಅಲ್ಲಿ ಎಷ್ಟು ಬಲಿಷ್ಠವಾಗಿದ್ದಿತೋ, ಕೂರ್ಮಾವತಾರದಲ್ಲಿ ಆಮೆಯಾಗಿ ನೀರು–ಭೂಮಿಗಳೆರಡರಲ್ಲಿಯೂ ಇರಬೇಕಾದಾಗ ಇದ್ದ ದೇಹದ ದೌರ್ಬಲ್ಯ ಈಗ ಹೋಗಿ ಭೂಮಿಯನ್ನು ಕೊರೆಯುವ ಬಲಿಷ್ಠವಾದ, ಒರಟಾದ ಹಂದಿಯಾಗಿ ದೇಹ

ವಿಕಾಸಗೊಂಡಿರುತ್ತದೆ. ಆದರೆ ಮನಸ್ಸು ಆತ್ಮಗಳ ಪ್ರಕಾಶ ಇನ್ನೂ ಬಂದಿರುವದಿಲ್ಲ. ಕೂರ್ಮನಿಗಿಂತ ದೇಹದಲ್ಲಿ ಮಾತ್ರವೇ ವಿಕಾಸವನ್ನು ಈ ಅವತಾರ ಪಡೆದಿದೆ.

ಮುಂದಿನದು ನರಸಿಂಹಾವತಾರ. ಇಲ್ಲಿ ದೇಹವು ಬಹಳ ಮಟ್ಟಿಗೆ ವಿಕಾಸವಾಗಿಹೋಗಿದೆ. ಹಂದಿಗಿಂತ ಅದೆಷ್ಟೋ ಹೆಚ್ಚು ಪ್ರಬಲವಾದ ಶರೀರವನ್ನು ಇಲ್ಲಿ ಪಡೆಯಲಾಗಿದೆ. ಜೊತೆಗೆ ಮನಸ್ಸಿನ ಪ್ರಭಾವವೂ ಕಾಣಿಸಿಕೊಂಡಿದೆ. ಹಂದಿಗೆ ಇಲ್ಲದಿದ್ದ ಸಂಕಲ್ಪ ಶಕ್ತಿ ಇಲ್ಲಿ ಕಾಣಿಸಿಕೊಂಡು ಒಂದು ಉದ್ದೇಶದ ಸ್ಪಷ್ಟ ಪೂರೈಕೆಗಾಗಿ ಈ ಅವತಾರ ಏರ್ಪಟ್ಟಿದೆ. ಆದರೆ ಮನಸ್ಸಿನ ಶಕ್ತಿ ಇಲ್ಲಿ ಬಹಳ ದುರ್ಬಲವಾಗಿದೆ. ಒಂದೇ ಒಂದು ಉದ್ದೇಶಕ್ಕಾಗಿ ಕ್ರೂರವಾಗಿ ಒಡಮೂಡಿದ ಈ ಅವತಾರ ಅಲ್ಲಿಗೇ ಮುಕ್ತಾಯಗೊಳ್ಳುತ್ತದೆ. ಮನಸ್ಸು ಇಲ್ಲಿ ಕೇವಲ ತಮೋಗುಣಪ್ರಧಾನವಾದುದಾಗಿರುತ್ತದೆ.

ಐದನೆಯದು ವಾಮನಾವತಾರ. ಇಲ್ಲಿಗೆ ದೇಹದ ವಿಕಾಸ ಒಂದು ವಿಧವಾಗಿ ಪೂರ್ಣಗೊಂಡಂತಾಗಿ ಮನೋವಿಕಾಸವು ಬಹಳ ಮಟ್ಟಿಗೆ ಮುಂದುವರಿದಿದೆ. ಈ ಅವತಾರವು ಪೂರ್ಣವಾಗಿ ಮನುಷ್ಯ ರೂಪ. ಮನಸ್ಸು ಹಿಂದಿನ ತಮೋಗುಣವನ್ನು ಬಿಟ್ಟುಬಿಟ್ಟು ಕೇವಲ ಸಾತ್ವಿಕವಾಗಿ ಪರಿವರ್ತನೆ ಹೊಂದಿದೆ. ಆದುದರಿಂದಲೇ ಇಲ್ಲಿಯೂ ರಜೋಗುಣಕ್ಕೆ ಸಂಬಂಧಿಸುವ ಹೆಚ್ಚಿನ ಚಟುವಟಿಕೆಗಳು ಕಾಣಿಸುವದಿಲ್ಲ. ಯಾವದೋ ಒಂದು ಸಾತ್ವಿಕ ಉದ್ದೇಶವನ್ನು ನೆರವೇರಿಸಿ ಈ ಅವತಾರ ಮುಕ್ತಾಯವಾಗುತ್ತದೆ.

ನಾಲ್ಕನೆಯ ನರಸಿಂಹಾವತಾರ ತಮೋಗುಣ ಪ್ರಧಾನವಾಗಿದ್ದು, ಐದನೆಯ ವಾಮನಾವತಾರ ಸತ್ವಗುಣ ಪ್ರಧಾನವಾದುದಾಗಿದ್ದರೆ ಆರನೆಯ ಭಾರ್ಗವ ಅಥವಾ ಪರಶುರಾಮಾವತಾರವು ಕೇವಲ ರಜೋಗುಣ ಪ್ರಧಾನವಾದುದಾಗಿರುತ್ತದೆ. ಹಿಂದಿನ "ವಾಮನ" (ಕುಳ್ಳ) ಅವತಾರಕ್ಕಿಂತ ದೇಹವು ಈ ಭಾರ್ಗವ ರಾಮಾವತಾರದಲ್ಲಿ ಇನ್ನೂ ಸ್ವಲ್ಪ ಹೆಚ್ಚು ವಿಕಾಸ ಹೊಂದಿ ಕಟ್ಟುಮಸ್ತಾದ ಆಕಾರವನ್ನು ಪಡೆದಿದೆ. ನರಸಿಂಹಾವತಾರದ ತಮೋಗುಣ ಪ್ರಚೋದಿತವಾದ "ಒಮ್ಮೆಗೇ ಪ್ರಚಂಡ ಚಟುವಟಿಕೆ ಮತ್ತು ಕೂಡಲೇ ಮುಕ್ತಾಯ" ಎಂಬಂತೆ ಇಲ್ಲಿ ಆಗದೆ ರಜೋಗುಣಕ್ಕೆ ಸರಿಯಾದಂತೆ ಭಾರ್ಗವನ ಚಟುವಟಿಕೆ ದೀರ್ಘ ಕಾಲ ನಡೆಯುತ್ತದೆ. ದೇಹವು ಇಲ್ಲಿಗೆ ಸುಮಾರಾಗಿ ಪೂರ್ಣ ವಿಕಾಸವನ್ನು ಪಡೆದು ಮನಸ್ಸು ಅಸಾಧ್ಯವಾದುದನ್ನು ಜೀವನದುದ್ದಕ್ಕೂ ಯೋಜಿಸಿ ಸಾಧಿಸುವಷ್ಟಕ್ಕೆ ವಿಕಾಸ ಪಡೆದಿದೆ.

ಮುಂದಿನದು ರಾಮಾವತಾರ. ದೇಹವು ಇಲ್ಲಿಗೆ ಇನ್ನೂ ಅಷ್ಟು ವಿಕಾಸ

ಪಡೆದು ರಾಮನು ಸರ್ವಾಂಗ ಸುಂದರನಾಗಿದ್ದಾನೆ. ಮನಸ್ಸು ವಿಕಾಸದ ಪೂರ್ಣ ಘಟ್ಟವನ್ನು ತಲಪಿದೆ. ಸತ್ವಗುಣ ಪ್ರಧಾನನಾದ ಶ್ರೀರಾಮ ವಾಮನನಂತಲ್ಲದೆ ಜೀವನಕ್ಕೆ ಅವಶ್ಯವಾದ ರಜೋಗುಣವನ್ನೂ ಸಾಕಷ್ಟು ಪಡೆದು, ಆದರೆ ಅದನ್ನು ಸತ್ವಗುಣಕ್ಕೆ ಅಧೀನವಾಗಿಸಿ ಪುರುಷೋತ್ತಮ ಎನಿಸಿಕೊಳ್ಳುತ್ತಾನೆ. ಇಲ್ಲಿಗೆ ಮನಸ್ಸು ವಿಕಾಸದ ಪೂರ್ಣ ಹಂತವನ್ನು ತಲಪಿದ್ದರೂ, ಅವನಿಗೆ ತಾನು ಪರಮ ಪುರುಷನೆಂಬ ಆತ್ಮದ ನೆನಪು ಆಗಾಗ ಬರುತ್ತದೆಯೇ ಹೊರತು ಅವನು ಸ್ವತಃ ಪರಮ ಪುರುಷನಾಗಿ ಜೀವಿಸಲು ಅಸಮರ್ಥನಾಗಿದ್ದಾನೆ. ಮನಸ್ಸಿನಲ್ಲಿ ತಮೋ ಗುಣದ ಛಾಯೆ ಇನ್ನೂ ಅಲ್ಪಸ್ವಲ್ಪ ಇದೆ. ಹಾಗಾಗಿ ಅವನು ಸೀತೆಗಾಗಿ, ಲಕ್ಷ್ಮಣನಿಗಾಗಿ ಆಗಾಗ ದುಃಖದಿಂದ ಕಣ್ಣೀರು ಹಾಕುತ್ತಾನೆ.

ಅಂದರೆ ರಾಮಾವತಾರದಲ್ಲಿ ದೇಹವು ಹೆಚ್ಚು ಪಾಲು ಪೂರ್ಣ ವಿಕಾಸವನ್ನು ಪಡೆದಿದೆ, ಮನಸ್ಸು ಒಮ್ಮೆ ದೇಹದೊಂದಿಗೂ ಒಮ್ಮೆ ಆತ್ಮನೊಂದಿಗೂ ತನ್ನನ್ನು ಹೊಂದಿಸಿಕೊಳ್ಳುವಷ್ಟರ ಮಟ್ಟಿಗೆ ವಿಕಾಸವನ್ನು ಪಡೆದಿದೆ.

ವಿಕಾಸದಲ್ಲಿ ಕೊನೆಯದು ಕೃಷ್ಣಾವತಾರ. ದೇಹವು ಇನ್ನು ವಿಕಾಸವನ್ನು ಪಡೆಯಲಾರದಷ್ಟು ಪೂರ್ಣ ವಿಕಾಸವನ್ನು ಈ ಅವತಾರದಲ್ಲಿ ಪಡೆದಿದೆ. ಕೃಷ್ಣನನ್ನು ನೋಡಿದವರೆಲ್ಲರೂ ಮೋಹಗೊಳ್ಳುತ್ತಿದ್ದರಂತೆ. ಮನಸ್ಸು ಸತ್ವ, ರಜಸ್ಸು, ತಮಸ್ಸು–ಈ ಮೂರೂ ಗುಣಗಳನ್ನು ದಾಟಿ ತ್ರಿಗುಣಾತೀತನೆನಿಸಿದ ಕೃಷ್ಣನು ತನ್ನ ಅವತಾರವಾಗುವಾಗಿನಿಂದ ಕೊನೆಯ ತನಕವೂ ತಾನು ಪರಮ ಪುರುಷ ಎಂಬ ಪೂರ್ಣ ಪ್ರಜ್ಞೆಯನ್ನು ಪಡೆದಿರುತ್ತಾನೆ. ಇವನಿಗೆ ದುಃಖವೆಂಬದೇ ಇಲ್ಲ. ಅವನು ನಿತ್ಯ ತೃಪ್ತ. ಅವನ ಸಿಟ್ಟು, ಪ್ರೇಮ-ಎಲ್ಲವೂ ಅವತಾರದ ಉದ್ದೇಶ ಸಾಧನೆಯ ಚಟುವಟಿಕೆಗಳ ಅಂಗವಾಗಿ ಅಷ್ಟೆ. ಅವನು ಪರಮಾತ್ಮ ನೆಂದು ಅವನಿಗೇ ಗೊತ್ತು. ತನ್ನ ವಿಶ್ವರೂಪವನ್ನೇ ಅವನು ಇತರರಿಗೆ ತೋರಿಸಿದ.

ಪ್ರತಿ ಜೀವಿಯೂ ವಿಕಾಸದ ಇದೇ ಮಾರ್ಗವನ್ನು ತುಳಿಯಬೇಕು. ಸಾವಿರ ಮನುಷ್ಯರು ವಿಕಾಸದ ಸಾವಿರ ಬಗೆಯ ಹಂತಗಳಲ್ಲಿರುತ್ತಾರೆ. ಇಂತಹ ವಿಕಾಸವನ್ನು ಜೀವಿಯು ಬಯಸಿ ಪಡೆಯುವದೆಂದೇನೂ ಇಲ್ಲ. ವಿಕಾಸವು ಪ್ರಕೃತಿಯ ಧರ್ಮ. ಪ್ರತಿ ಜೀವಿಯೂ ತನಗೆ ತಿಳಿದಿರಲಿ, ತಿಳಿಯದಿರಲಿ ವಿಕಾಸದ ಈ ಪ್ರಭಾವಕ್ಕೆ ಒಳಗಾಗಿಯೇ ಇರುತ್ತದೆ. ನಮ್ಮ ಜೀವನದ ಪ್ರತಿ ಯೊಂದು ನಿಮಿಷದಲ್ಲಿಯೂ ನಾವು ವಿಕಾಸದ ಏಣಿಯಲ್ಲಿ ಮೇಲೆ ಮೇಲೆ ಹೋಗಿಯೇ ಇರುತ್ತೇವೆ. ತುಂಬ ನಿದ್ದೆ ಬರುತ್ತಿದೆಯಾ ರಮಾ ?

ರಮೆ:– ಇಲ್ಲವಲ್ಲ ?

ಮುರಳಿ:– ಮತ್ತೇಕೆ, ಮಂಕು ಹಿಡಿದವಳಂತೆ ಕುಳಿತುಬಿಟ್ಟೆದ್ದಿ ?

ರಮೆ:– ಕಣ್ಣು ಕಟ್ಟಿ ಕಾಣದ ಲೋಕದಲ್ಲಿ ಬಿಟ್ಟಂತಾಗಿತ್ತು, ಅಷ್ಟೆ. ಆದರೆ ಆ ಲೋಕದ ದೃಶ್ಯವನ್ನು ನೋಡಿ ಆನಂದಿಸುತ್ತಿದ್ದೇನೆ.

ಮುರಳಿ:– ಅಲ್ಲ, ಇಷ್ಟರಲ್ಲಿ ಒಂದು ಹತ್ತು ಪ್ರಶ್ನೆಗಳಾದರೂ ಹೊರಡ ಬೇಕಿತ್ತು. ಅವು ಏಕೆ ಬರಲಿಲ್ಲ ಅಂತ ಕುತೂಹಲ ಬಂದು ಕೇಳಿದೆ.

ರಮೆ:– ಪ್ರಶ್ನೆಯೇನೂ ಇಲ್ಲ. ಈ ಆತ್ಮದ ಬಗೆಗೇ ಕೆಲವು ಮೂಲ ಸಮಸ್ಯೆಗಳು ನನಗಿವೆ. ಎಲ್ಲರ ಆತ್ಮವೂ ಒಂದೇ ಎಂದಿರಿ. ಇಲ್ಲವೆ ?

ಮುರಳಿ:– ಹೌದು.

ರಮೆ:– ಅದು ಹೇಗೆ ? ಈ ಆತ್ಮ ಎಂದರೆ ಏನು ? ನಮ್ಮೊಳಗೆ ಅದು ಇದೆ ಎಂದು ನಾವು ಕಂಡುಕೊಳ್ಳುವದಾದರೂ ಹೇಗೆ ? ಅದರ ಆದಿ ಯಾವಾಗ ? ಅಂತ್ಯ ಯಾವಾಗ ? ನಮ್ಮ ಈ ಜೀವನಕ್ಕೂ ಈ ಆತ್ಮನ ಜ್ಞಾನಕ್ಕೂ ಸಂಬಂಧ ವೇನು ? ಈ ದೇಹ ಎಂಬದು "ನಾನು" ಅಲ್ಲ ಎಂದಾದರೆ ಇದು ಏಕೆ ಉಂಟಾ ಯಿತು ? ಈ ಮನಸ್ಸು ಎಂಬದರ ಉಗಮ ಅಂತ್ಯಗಳೇನು ? ಇವೆಲ್ಲ ಸರಿಯಾಗಿ ಗೊತ್ತಾಗಬೇಕಲ್ಲ !

ಮುರಳಿ:- ಅದಕ್ಕೇ ನಾನಂದದ್ದು ರಮಾ. ಇದು ಅತ್ಯಂತ ಗಹನ ವಿಚಾರ. ಇದರಲ್ಲಿ ಏನು ಹೇಳಬೇಕು, ಏನು ಹೇಳಬಾರದು ಎಂದು ತಿಳಿಯುವದಿಲ್ಲ. ಈ ಕುರಿತು ಯಾವದಾದರೂ ಒಂದೇ ಪ್ರಶ್ನೆಯನ್ನು ಕೇಳಿದರೆ ಹೇಗೋ ಉತ್ತರ ಕೊಡಬಹುದು. ಆದರೆ ನೀನು ಕೇಳಿದ ಎಲ್ಲ ಪ್ರಶ್ನೆಗಳೂ ಒಂದಕ್ಕೊಂದು ಸಂಬಂಧಿತವಾಗಿರುವದರಿಂದ ಈ ಕುರಿತು ಒಂದು ಪ್ರಶ್ನೆಗೆ ಉತ್ತರ ಸಿಕ್ಕಬೇಕಾ ದರೂ ಇಡಿಯ ಜ್ಞಾನವನ್ನೇ ಪಡೆದುಕೊಳ್ಳಬೇಕಾಗುತ್ತದೆ. ಅದುದರಿಂದ ಸದ್ಯಕ್ಕೆ ಇದರ ಜಿಜ್ಞಾಸೆ ಸಾಕು. ಭೀಮನ ಕತೆಯನ್ನು ಮುಗಿಸಿ ಅನಂತರ ಬೇಕಿದ್ದರೆ ಇದನ್ನು ವಿಚಾರಿಸೋಣ. ಆಗದೆ ?

ರಮೆ:– ಬಲವಾದ ಕಾರಣವಿಲ್ಲದೆ ನಾವು ಒಂದು ಉತ್ತಮ ವಿಚಾರದ ವಿಮರ್ಶೆಯನ್ನು ಬಿಡುತ್ತಿರುವದು ನನಗೇಕೋ ಹಿತವಾಗುತ್ತಿಲ್ಲ. ನೀವು ಮಾರ್ಗ ವನ್ನು ಗೊತ್ತುಮಾಡಿಕೊಳ್ಳದೆ ಗುರಿಯನ್ನು ಉದ್ದೇಶಿಸಿ ಹೊರಟು ಎಲ್ಲೆಲ್ಲಿಯೋ ಅಲೆಯುತ್ತಿದ್ದೀರಿ. ನಿಮ್ಮ ಗುರಿ ಏನೆಂಬದು ನನಗೆ ತಿಳಿಯದೆ ನಿಮ್ಮ ಅಲೆ ದಾಟವನ್ನು ನಾನೂ ಮೂಕಳಾಗಿ ನೋಡುತ್ತಿದ್ದೇನೆ.........

ಮುರಳಿ:– ಕರುಣಾಳು ಬಾ ಗೆಳತಿ ಮುಸುಕಿದೀ ಮಬ್ಬಿನಲ್ಲಿ ಕೈಹಿಡಿದು ನಡೆಸೆನ್ನನು.........

ರಮೆ:– ಸಾಕು, ಸಾಕು. ನಮ್ಮ ಇಂದಿನ ವಿಷಯದ ತೂಕವನ್ನು ಕಡಿಮೆ ಮಾಡುವ ನಿಮ್ಮ ಲಘುವಾದ ಹಾಸ್ಯಗಳೇನೂ ಬೇಡ. ಈಗ ಸುಮ್ಮನೆ ನಾನು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಿ. ಆಗ ಎಲ್ಲ ಸರಿ ಹೋಗುತ್ತದೆ. ಆಗುತ್ತದೇನು ?

ಮುರಳಿ:– ಆಗಲಿ ಟೀಚರ್.

ರಮೆ:– ಹೇಳುವದು ನಿಮಗೆ ಅರ್ಥವಾಗುವದಿಲ್ಲವೋ ಅಂತ? ಹೇಳಿ. ಈಗ ನಾನೇ ಇದ್ದೇನೆ........

ಮುರಳಿ:– ....ನಾನೂ ಇದ್ದೇನೆ.

ರಮೆ:– ಥೂ, ನಿಮ್ಮ ಪಮ್ಮಯ್ಯ. ಏನೋ ಉಂಟಾಗಿರುವ ಒಂದು ಗಂಭೀರ ವಾತಾವರಣವನ್ನು ಹಾಳುಮಾಡಬೇಡಿ, ದಯವಿಟ್ಟು. ಹೇಳಿ. ನನಗೆ ಆತ್ಮಜ್ಞಾನ ಏಕೆ ಬೇಕು ? ಅಂತಹ ಯಾವ ಜ್ಞಾನವಿಲ್ಲದವರೂ ಕೂಡ ಬದುಕಿನಲ್ಲಿ ಬೇಕಷ್ಟು ಯಶಸ್ಸು ಗಳಿಸಿ ಸುಖವಾಗಿರುವಾಗ ಈ ಆತ್ಮಜ್ಞಾನವನ್ನು ಕಟ್ಟಿಕೊಂಡು ನಮಗೇನಾಗಬೇಕು ?

ಮುರಳಿ:– ಹಾಗೆ ಕೇಳು. ನೀನು ಮುಷ್ಟಿ ಬಿಗಿ ಹಿಡಿದಷ್ಟೂ, ಕೈ ಏರಿಸಿದಷ್ಟೂ, ಕಣ್ಣರಳಿಸಿದಷ್ಟೂ, ಹುಬ್ಬೇರಿಸಿದಷ್ಟೂ ನನಗೆ ಪ್ರಚೋದನೆ ಹೆಚ್ಚು ಉಂಟಾಗುತ್ತದೆ. ಹಾಗೆ ಕೇಳು. ನಮಗೆ ಆತ್ಮಜ್ಞಾನ ಯಾಕೆ ಬೇಕು ಅಂತ. ಅಲ್ಲವೆ ?

ರಮೆ:– ಹೌದು.

ಮುರಳಿ:– ಈಜಲು ಕಲಿಯುವದು ಯಾಕೆ ಬೇಕು ಎಂದೂ ಕೇಳಬಹುದು. ಈಜಲು ಕಲಿಯದಿದ್ದರೂ ಹೊಟ್ಟೆ ತುಂಬುತ್ತದೆ. ಅದನ್ನು ಕಲಿತು ಏನಾಗಬೇಕು ? ಎಂದು ಕೇಳಬಹುದು. ಆದರೆ ಎಂದಾದರೊಮ್ಮೆ ನಾವು ಕಾಲು ಜಾರಿ ನೀರಿನಲ್ಲಿ ಬಿದ್ದು ಮುಳುಗಿ ಎದ್ದು ಸಂಕಟಪಡುವಾಗ "ಅಯ್ಯೋ, ಏನು ಗತಿ ?" ಎಂಬ ಉದ್ಗಾರ ಹೊರಡುವ ಸಂದರ್ಭ ಬರುವದಾದರೆ ಈಜು ಕಲಿಯುವದರ ಅವಶ್ಯಕತೆ ಚೆನ್ನಾಗಿ ಅರ್ಥವಾಗುತ್ತದೆ. ಆದರೆ ಈಜು ಕಲಿಯದಿರುವವರೆಲ್ಲ ನೀರಿನಲ್ಲಿ ಬಿದ್ದೇ ಬೀಳುತ್ತಾರೆ ಎಂಬ ನಿಯಮವಿಲ್ಲ. ಈಜಲು ಗೊತ್ತಿಲ್ಲದವನು ಸಾಧ್ಯವಾದಷ್ಟು ಮಟ್ಟಿಗೂ ನೀರನ್ನು ತಪ್ಪಿಸಿ ಬದುಕಲೂ ಸಾಧ್ಯವಾಗಬಹುದು. ಆದರೆ ಜೀವನದಲ್ಲಿ ಹಾಗಲ್ಲ. ದುಃಖದಲ್ಲಿ ಮುಳುಗದಿರುವಂತೆ ನಾವು ದುಃಖವನ್ನು ತಪ್ಪಿಸಿ ಬದುಕುತ್ತೇವೆನ್ನುವ ಸಾಧ್ಯತೆಯೇ ಇಲ್ಲ. ಅಥವಾ ಈ ದುಃಖವು ಜೀವನದಲ್ಲಿ ಎಂದಾದರೊಮ್ಮೆ ಬರುವಂತಹದು ಎನ್ನುವಂತೆಯೂ ಇಲ್ಲ. ಸುಖದುಃಖಗಳು ಜೀವನ ಶರೀರದ ಎರಡು ಕಾಲುಗಳು. ಒಮ್ಮೆ ಇದರಲ್ಲಿ

ಹೆಜ್ಜೆ ಇಟ್ಟರೆ ಇನ್ನೊಮ್ಮೆ ಅದರಲ್ಲಿ ಇಡಲೇಬೇಕು. ಹೀಗೆ ಜೀವನದಲ್ಲಿ ಅನಿವಾರ್ಯವಾಗಿ ಬರುವ ದುಃಖವನ್ನು ತಪ್ಪಿಸಿಕೊಳ್ಳಲು ಇತರ ಯಾವದೇ ಪರಿಹಾರ ಮಾರ್ಗವಿರುವದಿಲ್ಲ. ಒಂದೋ ದೇವರನ್ನು ಮೊರೆ ಹೊಗಬೇಕು, ಇಲ್ಲವೇ ಆತ್ಮ ಶೋಧನೆಗೆ ತೊಡಗಬೇಕು. ಈ ಎರಡರ ಪರಿಣಾಮವೂ ಒಂದೇ. ದೇವರಿಗೆ ತನ್ನನ್ನು ಸಂಪೂರ್ಣವಾಗಿ ಶರಣಾಗಿಸಿ ತನ್ನ ಈ ಎಲ್ಲ ದುಃಖಗಳಿಗೆ ಕಾರಣವಾದ ತನ್ನ "ಅಹಂ" ಅನ್ನು ಅವನಲ್ಲಿ ಪೂರ್ಣವಾಗಿ ಲಯಗೊಳಿಸಿ ಅದು ಪ್ರತ್ಯೇಕವಾದ ಅಸ್ತಿತ್ವವನ್ನು ಹೊಂದದೆ ಇರುವಂತೆ ಮಾಡುವದು ಎಂದರೂ ಒಂದೇ, ತನ್ನ ಈ ದುಃಖಗಳಿಗೆಲ್ಲ ಕಾರಣವಾದ ಈ "ಅಹಂ"ಭಾವ ಎಂಥದು, ಅದರ ಸ್ವರೂಪವೇನು, ಅದರ ಮೂಲ ಯಾವದು ಎಂಬದರ ಶೋಧ ಮಾಡಲು ಹೊರಟು ಕೊನೆಯಲ್ಲಿ "ನಾನು" ಎಂದರೆ ಆ "ಅಹಂ"ಭಾವವನ್ನು ದಾಟಿ ತ್ರಿಗುಣಾತೀತನಾಗಿರುವ ಆತ್ಮ ಎಂದು ತಿಳಿದುಕೊಳ್ಳುವದೆಂದರೂ ಒಂದೇ.

ಹೀಗೆ ಆತ್ಮಜ್ಞಾನ ಬೇಕಾಗುವದು, ನಾವು ದುಃಖದಿಂದ ಪಾರಾಗಬೇಕು ಎಂಬ ಪ್ರಬಲವಾದ ಬಯಕೆಯನ್ನು ಪಡೆದಾಗ.

ಇನ್ನು, ಇಷ್ಟಾಗಿ ಇದೊಂದು ಜ್ಞಾನ. ಯಾವದನ್ನು ತಿಳಿದ ಅನಂತರ ಲೋಕದಲ್ಲಿ ಇನ್ಯಾವದನ್ನೂ ತಿಳಿಯಬೇಕಾಗಿಲ್ಲವೋ ಅಂತಹ ತಿಳಿವಳಿಕೆ ಇದು ಎಂದು ಇದನ್ನು ತಿಳಿದವರು ಹಿಂದೆ ಹೇಳಿದ್ದಾರೆ. ಯಾವದೇ ಜ್ಞಾನವನ್ನು ಮನುಷ್ಯ ಯಾಕೆ ಪಡೆಯುತ್ತಾನೆ ಎಂದು ಕೇಳುವದು ಬುದ್ಧಿವಂತಿಕೆಯ ಪ್ರಶ್ನೆಯಲ್ಲ. ಸಂಗೀತ, ಶಿಲ್ಪ, ಸಾಹಿತ್ಯ, ನೃತ್ಯ, ವಿಜ್ಞಾನ ಮೊದಲಾದ ಜ್ಞಾನಗಳನ್ನು ಯಾಕೆ ಅಭ್ಯಾಸ ಮಾಡುತ್ತಾರೆ ಎಂದು ಕೇಳುವದು ಅಜ್ಞಾನದಿಂದಾಗಿ. ಇನ್ನು ವೇದಾಂತ ಅಥವಾ ಆತ್ಮಜ್ಞಾನದ ಬಗೆಗಂತೂ ಈ ಪ್ರಶ್ನೆ ಕೇಳಿದರೆ ಹಾಗೆ ಕೇಳುವವರು ಮನೋವಿಕಾಸದಲ್ಲಿ ಇನ್ನೂ ಬಹಳ ಹಿಂದುಳಿದಿದ್ದಾರೆ ಎಂದೇ ತಿಳಿಯಬೇಕಾಗುತ್ತದೆ.

ಆಹಾರ, ನಿದ್ರೆ, ಮೈಥುನಗಳು ಎಲ್ಲ ಪ್ರಾಣಿಗಳಿಗೂ ಸಾಮಾನ್ಯವಾಗಿವೆ. ಮಾನವ ಅಷ್ಟರಿಂದಲೇ ತೃಪ್ತನಾಗದೆ ಕಲೆ ಎನಿಸುವ ವಿವಿಧ ಶಾಸ್ತ್ರಗಳನ್ನು ಕಂಡುಕೊಂಡು ಜೀವನವನ್ನು ಹೆಚ್ಚು ಸುಂದರವಾದುದನ್ನಾಗಿಯೂ ಅರ್ಥಯುತವಾದುದನ್ನಾಗಿಯೂ ಮಾಡಲು ಪ್ರಯತ್ನಿಸಿದ್ದಾನೆ. ಈ ಮಟ್ಟದಿಂದಲೂ ತೃಪ್ತನಾಗದೆ ಮೇಲೇರಿದ ಮಾನವ ಈ ಪ್ರಪಂಚ ಎಂದರೇನು? ಇಲ್ಲಿ ಆಗುವ ಈ ನಿರಂತರ ಬದಲಾವಣೆಗಳಿಗೆಲ್ಲ ಕಾರಣವೇನು? ಇದರಲ್ಲಿ ನಾನು ಯಾರು? ನಾನು ಈ ಭೂಮಿಯ ಮೇಲೆ ಹೇಗೆ ಉಂಟಾದೆ? ಸತ್ತ ಮೇಲೆ ನಾನು ಎಲ್ಲಿಗೆ ಹೋಗುತ್ತೇನೆ? ಮಾನವ-ಮಾನವರಲ್ಲಿಯೇ ಇರುವ ಈ ಸಾವಿರ ಭೇದಗಳು ಏಕಾಗಿ ಉಂಟಾಗಿವೆ? ಈ ಭೂಮಿ ಹೇಗಾಯಿತು? ಈ ಗ್ರಹ, ನಕ್ಷತ್ರಗಳೆಲ್ಲ ಏನು?

ಎಂಬ ಬೃಹತ್ ಪ್ರಶ್ನೆಗಳಿಗೆ ಉತ್ತರ ಹುಡುಕುವ ಪ್ರಯತ್ನ ಕೈಗೊಂಡಿದ್ದಾನೆ. ಇದು ಮನೋವಿಕಾಸದ ಬಹಳ ಮೇಲಿನ ಮಟ್ಟ. ಈ ಮಟ್ಟದಲ್ಲಿ ಇಂದಿನ ವಿಜ್ಞಾನಿ ಮತ್ತು ಆತ್ಮಜ್ಞಾನಿ ಇಬ್ಬರೂ ಬೇರೆ ಬೇರೆ ಮಾರ್ಗಗಳನ್ನು ಹಿಡಿದು ಹೊರಡುತ್ತಾರೆ. ಭೌತಿಕವೆನಿಸಿ ಕಾಣುವ ಈ ಪ್ರಶ್ನೆಗಳಿಗೆಲ್ಲ ಭೌತಿಕವಾದ ಉತ್ತರಗಳು ಸಿಕ್ಕುತ್ತವೆ ಎಂದು ನಂಬಿ ವಿಜ್ಞಾನಿಯು ಸಂಶೋಧನೆಯಲ್ಲಿ ತೊಡಗಿದರೆ, ಭೌತಿಕವೆನಿಸಿ ಕಾಣುವ ಇವುಗಳಿಗೆಲ್ಲ ಮೂಲವಾದುದು ಆಧ್ಯಾತ್ಮಿಕ ತತ್ತ್ವಗಳೆಂದು ನಂಬುವ ಆತ್ಮಜ್ಞಾನಿ ಇವುಗಳಿಗೆ ಆತ್ಮಜ್ಞಾನ ರೂಪದ ಉತ್ತರಗಳನ್ನು ಕಂಡುಹಿಡಿಯಲು ತೊಡಗುತ್ತಾನೆ.

ಹೀಗೆ, ಆತ್ಮಜ್ಞಾನ ಪಡೆಯಲು ಏಕೆ ಪ್ರಯತ್ನಿಸಬೇಕು ಎಂಬ ಪ್ರಶ್ನೆ ಉದ್ಭವವಾಗುವದೇ ಇಲ್ಲ. ಸಂಗೀತ ಕಲಿತು ಏನಾಗಬೇಕೆಂದು ಕೇಳುವ ಮಟ್ಟದಲ್ಲಿರುವವನು ಎಂದಿಗೂ ಸಂಗೀತ ಕಲಿಯಲಾರ. ಆದರೆ ಸಂಗೀತ ಕಲಿಯುವದಕ್ಕಾಗಿ ಜೀವನದ ಇತರ ಎಲ್ಲ ಸುಖಗಳನ್ನೂ ತ್ಯಾಗ ಮಾಡುವವರು ಹಾಗೆ ಮಾಡಿಯಾದರೂ ಸಂಗೀತ ಕಲಿಯುತ್ತಾರೆ. ಆತ್ಮಜ್ಞಾನವೂ ಹಾಗೆಯೇ. ಆಯಾ ವಿಕಾಸದ ಮಟ್ಟದಲ್ಲಿ ಪ್ರಕೃತಿಯು ಜೀವಿಯನ್ನು ಆಯಾ ಜ್ಞಾನದತ್ತ ಬಲಾತ್ಕಾರವಾಗಿ ತಳ್ಳುತ್ತದೆ. ಪ್ರಕೃತಿಯ ಶಕ್ತಿಯನ್ನು ಮೀರಲು ಯಾರಿಗೂ ಸಾಧ್ಯವಾಗುವದಿಲ್ಲ. ಅದರ ಶಕ್ತಿ ಎಷ್ಟೆಂದರೆ, ಯಾವ ಪ್ರಕೃತಿಯು ಪರಮಾತ್ಮನದೇ ಆದ ಶಕ್ತಿ ಎಂದು ಪರಿಗಣಿಸಲ್ಪಟ್ಟಿದೆಯೋ ಅಂತಹ ಪರಮಾತ್ಮನು ಈ ಪ್ರಕೃತಿಯನ್ನಾಶ್ರಯಿಸಿ ಭೂಮಿಯಲ್ಲಿ ಅವತಾರ ಮಾಡುವಾಗಲೂ ಅವನು ಈ ಪ್ರಕೃತಿಯ ನಿಯಮಕ್ಕೆ ಬದ್ಧನಾಗಿಯೇ ಇರಬೇಕಾಗುತ್ತದೆ ಎಂದು ನಮ್ಮವರು ಹೇಳಿದ್ದಾರೆ. ಹಾಗೆಯೇ ಜೀವಿಯ ವಿಕಾಸವೂ ಪ್ರಕೃತಿಯ ಧರ್ಮಕ್ಕೆ ಅನುಗುಣವಾಗಿಯೇ ಆಗುತ್ತದೆ. ಅಂತಹ ವಿಕಾಸ ಕಡ್ಡಾಯವಾಗಿ ಆಗಬೇಕೆಂದಾದರೆ, ಆ ವಿಕಾಸಕ್ಕೆ ಅವಶ್ಯವಾದ ವಿವಿಧ ಜ್ಞಾನಗಳನ್ನೂ ಜೀವಿ ಕಡ್ಡಾಯವಾಗಿ ಪಡೆಯಲೇಬೇಕಾಗುತ್ತದೆ. ಜೀವಿಯ ವಿಕಾಸದ ಕೊನೆಯ ಘಟ್ಟವಾದ ಮೋಕ್ಷಕ್ಕಾದರೂ ಜೀವಿಯು ಆತ್ಮಜ್ಞಾನವನ್ನು ಗಳಿಸಲೇಬೇಕಾಗುತ್ತದೆ.

ಜೀವಿಗೆ ಆತ್ಮಜ್ಞಾನ ಏಕೆ ಬೇಕು ಎಂದು ನೀನು ಕೇಳುವ ಪ್ರಶ್ನೆ ನಾವು ರಾಷ್ಟ್ರಪ್ರೇಮವನ್ನು ಏಕೆ ಬೆಳೆಸಿಕೊಳ್ಳಬೇಕು? ನಮ್ಮವರಲ್ಲದ ಯಾರೋ ಮಾನವರ ದುಃಖಗಳಿಗಾಗಿ ನಾವು ಯಾಕೆ ಅನುಕಂಪ ತೋರಿಸಬೇಕು ಎಂದು ಕೇಳಿದಂತಾಗುತ್ತದೆ....

ರಮು:– ಸಾಕು ಬಿಡಿ. ನಾನೇನು ಅಷ್ಟೊಂದು ಬುದ್ಧಿ ಇಲ್ಲದವಳೆ? ಯಾವಾಗಲೋ ಅರ್ಥವಾಯಿತು, ನಮಗೆ ಆತ್ಮಜ್ಞಾನ ಯಾಕೆ ಬೇಕು ಅನ್ನು

ವದು. ಸುಮ್ಮನೆ ಅದನ್ನೇ ಹಿಂದೆ, ಮುಂದೆ, ಬೇರೆ ಬೇರೆ ವಿಧಗಳಲ್ಲಿ ಏಕೆ ಹೇಳುತ್ತಾ ಇದ್ದೀರಿ?

ಮುರಳಿ:– ಮರದ ಮೇಲಿರುವ ಹಣ್ಣನ್ನು ತಿನ್ನಬೇಕು. ಕಲ್ಲು ಹೊಡೆಯುತ್ತಾ ಇರುವದು. ಅದು ಬೀಳುವದಂತೂ ಹೋಗಲಿ, ಆ ಹಣ್ಣು ಜೋಲಾಡುತ್ತಿರುವ ಕೊಂಬೆಗಾದರೂ ಕಲ್ಲು ತಗುಲಿ ಹಣ್ಣು ಅಲುಗಾಡಿದರಾದರೂ ಕಲ್ಲು ಹೊಡೆಯುವದನ್ನು ನಿಲ್ಲಿಸಬಹುದು........

ರಮೆ:– ನೀವು ಮಲೆನಾಡಿನಲ್ಲಿ ಮಳೆ ಹೊಯ್ದಂತೆ ಉಪನ್ಯಾಸ ಕೊಡುತ್ತ ಇದ್ದಾಗ ನಾನು ಎಷ್ಟು ಸಾರಿ ಅಲುಗಾಡಲಿಲ್ಲ! ಒಮ್ಮೆ ಇಲ್ಲಿ ಸುಸ್ತಾಗಿ ಎದ್ದು ಇಲ್ಲಿಂದ ಹೋಗಲು ಪ್ರಯತ್ನಿಸುವಷ್ಟು ಅಲುಗಾಡಿದ್ದೇನೆ. ನಿಮ್ಮ ಆವೇಶಗಳಲ್ಲಿ ನಿಮಗೆ ಇದ್ಯಾವದೂ ಕಾಣಿಸದಿದ್ದರೆ ನನ್ನ ತಪ್ಪೆ?

ಮುರಳಿ:– ಹೆಣ್ಣು ಚಂಚಲೆ ಎಂದು ತಿಳಿದಿರುವ ನಾನು ನಿನ್ನ ದೇಹದ ಈ ಅಲುಗಾಟಗಳು ನಿನ್ನ ಮೆದುಳಿನಲ್ಲಾದ ಬದಲಾವಣೆಯಿಂದ ಆದುದು ಎಂದು ತಿಳಿಯಲು ಸಾಧ್ಯವಾಗಲಿಲ್ಲ.

ರಮೆ:– ಹೆಣ್ಣು ಚಂಚಲೆ ಎಂಬದನ್ನು ಅದು ಹೇಗೆ ಇಲ್ಲಿ ಹೇಳುತ್ತೀರಿ?

ಮುರಳಿ:– ....ಅಂದರೆ ಅವಳ ದೇಹ ಚಂಚಲವಾದುದು. ಒಮ್ಮೆ ಇಲ್ಲಿ ಇದ್ದರೆ ಇನ್ನೊಮ್ಮೆ ಬೇರೆಲ್ಲಿಯೋ ಇರಲು ಬಯಸುತ್ತದೆ........

ರಮೆ:– ಇಲ್ಲಿ, ಬೇರೆಲ್ಲಿಯೋ ಅಂದರೆ?

ಮುರಳಿ:– ಅಂದರೆ, ಒಮ್ಮೆ ಇಲ್ಲಿ ನನ್ನ ಬಳಿ ಇರಲು ಬಯಸಿದರೆ ಇನ್ನೊಂದು ಘಳಿಗೆಯಲ್ಲಿ ಬೇರೆಲ್ಲಿಯೋ ಯಾರೊಂದಿಗೋ........

ರಮೆ:– ........ಸಾಕು, ಸಾಕು. ಗಂಡಿನ ದುರಹಂಕಾರಕ್ಕೆ ಸಹಜವಾದ ಈ ಮಾತನ್ನು ಆಡುವದೇನೂ ಬೇಡ. ಹೆಣ್ಣಿನ ದೇಹ ಚಂಚಲವಂತೆ. ನಮ್ಮ ಮನಸ್ಸು ನಿಮ್ಮ ಗಂಡಸರ ಮನಸ್ಸಿನಷ್ಟು ಒರಟಾಗಿ ಕಲ್ಲಾಗಿರದೆ ನಮ್ಮದು ಬಹಳ ಅನುಕಂಪಯುಕ್ತವೂ, ಪಾಪಕ್ಕೆ ಅಂಜುವದೂ ಆಗಿ ಮೃದುವಾಗಿರುವದನ್ನು ಒರಟರಾದ ನೀವು–ಗಂಡಸರು "ಚಂಚಲ" ಎಂದು ಕರೆದುಕೊಂಡು ನಮ್ಮ ಮೇಲೆ ನಿಮ್ಮ ಶ್ರೇಷ್ಠತೆಯನ್ನು ಸ್ಥಾಪಿಸಲು ಪ್ರಯತ್ನಿಸಿರಬಹುದು. ಹಾಗಾಗಿ ನಮ್ಮ ಮನಸ್ಸು ಚಂಚಲವಾಗಿರದೆ ನಿಮ್ಮದಕ್ಕಿಂತ ಮೃದುವಾದುದು ಎನ್ನುವದೇ ಸರಿ. ನಮ್ಮ ದೇಹ ಚಂಚಲವಂತೆ! ಯಾವ ಶಾಸ್ತ್ರದಲ್ಲಿ ಹೇಳಿದೆ, ಹೆಂಗಸರ ದೇಹ ಚಂಚಲ ಎಂದು? ಅದು ನಿಮ್ಮದೇ. ಗಂಡಸರ ಹಣೆಯ ಬರಹ ಯಾವ ಹೆಂಡತಿಗೆ ತಿಳಿದಿಲ್ಲ? ತಮ್ಮ ದೌರ್ಬಲ್ಯವನ್ನು ಇತರರಲ್ಲಿ ಆರೋಪಿಸುವದರಿಂದಲೇ ಕಾಣಿಸುವದಿಲ್ಲವೇ, ನೀವು, ಗಂಡು ಜಾತಿ, ಎಂತಹ ನಿರ್ದಯಿಗಳು,

ಪಕ್ಷಪಾತಿಗಳು, ಅನ್ಯಾಯಿಗಳು ಎಂಬದು ? ನಾವು ಮನಸ್ಸಿನ ಮಾರ್ದವ, ಅನು ಕಂಪಗಳಿಂದ ಕೂಡಿ........

ಮುರಳಿ:—........ಯುಧಿಷ್ಠಿರನು ತಮ್ಮಂದಿರೊಂದಿಗೆ ಇಂದ್ರಪ್ರಸ್ಥವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು........

ರಮೆ:—........ಏನೋ ಬುದ್ಧಿವಂತರು, ಒಂದಷ್ಟು ವಿಷಯ ತಿಳಿದುಕೊಂಡಿದ್ದಾರೆ, ಹೇಳಲಿ, ಕೇಳೋಣ ಅಂತ ಸುಮ್ಮನೆ ಕೇಳುತ್ತ ಕುಳಿತರೆ ನನ್ನ ದೇಹ ಜೇರೆ ಯಾವನಲ್ಲಿಗೋ ಹೋಗಲು ಹೊರಟಿತ್ತಂತೆ........! ನಿಮ್ಮ ಗಂಡು ಜಾತಿಯೇ ಹಾಗೆ. ನಿಜ ಹೇಳಿ. ಯಾವ ಗಂಡಸು ತನ್ನ ಹೆಂಡತಿಯೊಬ್ಬಳನ್ನೇ ನಂಬಿಕೊಂಡಿದ್ದಾನೆ ?

ಮುರಳಿ:—ಅಂದರೆ ? ನಂಬದೆ ಜೇರೇನು ಮಾಡುತ್ತಾನೆ ?

ರಮೆ:— ಏನು ಮಾಡುತ್ತಾನೆ !

ಮುರಳಿ:— ಏನು ಮಾಡುತ್ತಾನೆ ಎಂದೆ ?

ರಮೆ:— ಅಯ್ಯೋ ಪಾಪ. ನಿಮಗೆ ಗೊತ್ತೇ ಇಲ್ಲ !

ಮುರಳಿ:— ಇಲ್ಲ, ಗೊತ್ತಿಲ್ಲ. ಏನು ಮಾಡುತ್ತಾನೆ, ಹೇಳು.

ರಮೆ:— ಏನು ಮಾಡುತ್ತಾನೋ ನಿಮ್ಮನ್ನೇ ನೀವು ಕೇಳಿಕೊಳ್ಳಿ.

ಮುರಳಿ:— ನನ್ನನ್ನು ಕೇಳಿಕೊಂಡೆ. ಉತ್ತರ ಸಿಕ್ಕಲಿಲ್ಲ. ನಿನಗೆ ತಿಳಿದಿದ್ದರೆ ಹೇಳು. ತಿಳಿಯದೆ ಸುಮ್ಮನೆ ನಾನು ಹೇಳಿದುದಕ್ಕೆ ನೀನು ಏನೋ ಹೇಳಿದ್ದರೆ ಬೇಡ ಬಿಡು.

ರಮೆ:— ಸುಮ್ಮನೆ ಏನೋ ಹೇಳಿದುದೇನೂ ಅಲ್ಲ. ಇರುವದನ್ನೇ ಹೇಳಿದುದು.

ಮುರಳಿ:— ಹಾಗಾದರೆ ಆ "ಇರುವದು" ಏನು ಎಂದು ಕೇಳಿದೆ ?

ರಮೆ:— ಏನು ! ಸುಮ್ಮನೆ ನನ್ನ ಬಾಯಿಂದ ಅಂತಹ ಅಸಹ್ಯವನ್ನೆಲ್ಲ ಯಾಕೆ ಹೇಳಿಸುತ್ತೀರಿ ?

ಮುರಳಿ:— ಆ ಅಸಹ್ಯ ಗಂಡಸರಿಗೆ ಸೇರಿದುದು ತಾನೆ ! ಹೇಳಲಿಕ್ಕೇನು ?

ರಮೆ:— ಏನೂ ಗೊತ್ತಿಲ್ಲದಂತೆ ಯಾಕೆ ಮಾತನಾಡುತ್ತೀರಿ ? ನಿಮ್ಮ ಗಂಡಸರ ಪೈಕಿ ಪರ ಸ್ತ್ರೀ ಗಮನ ಮಾಡದವರು ಯಾರಿದ್ದಾರೆ ?

ಮುರಳಿ:— ಹಾಗೆ. ಏನು ಮಾಡದವರು, ಎಂದೆ ?

ರಮೆ:— ಏನು ಮಾಡದವರು, ಪರಸ್ತ್ರೀ ಗಮನ ಮಾಡದವರು !

ಮುರಳಿ:– ಅಂದರೆ ಬೇರೆ ಸ್ತ್ರೀಯ ಬಳಿ ಹೋಗದವರು. ಅಲ್ಲ ?

ರಮೆ:– ಅಲ್ಲ ಏನು ? ಹೌದೇ ಹೌದು.

ಮುರಳಿ:– ಅಂದರೆ, ನಿನ್ನ ಪ್ರಕಾರ ಪ್ರತಿ ಗಂಡಸೂ ಹೀಗೆ ಮಾಡುತ್ತಾನೆ.

ರಮೆ:– ಮಾಡದೇ ಏನು ಮಾಡುತ್ತಾನೆ !

ಮುರಳಿ:– ಪ್ರತಿ ಗಂಡಸೂ ಬೇರೆ ಹೆಣ್ಣಿನಲ್ಲಿಗೆ ಹೋಗುತ್ತಾನೆ. ಅಂದರೆ ಹೀಗಾಯಿತು. ಗಂಡಸು ಹೋಗುತ್ತಾನೆ, ಹೆಂಗಸು ಹೋಗುವದಿಲ್ಲ. ಬದಲು ತನ್ನಲ್ಲಿಗೆ ಕರೆಸಿಕೊಳ್ಳುತ್ತಾಳೆ !

ರಮೆ:– ...........

ಮುರಳಿ:– ಹಾಗಲ್ಲವೇ ರಮಾ ನೀನು ಹೇಳಿದ್ದು ?

ರಮೆ:– ನನಗೆ ಗೊತ್ತಿಲ್ಲ.

ಮುರಳಿ:– ಆದರೆ ನನಗೆ ಗೊತ್ತಿದೆ.

ರಮೆ:– ಗೊತ್ತಿದ್ದರೆ ಇಟ್ಟುಕೊಳ್ಳಿ. ಹಾಗೆಯೇ ಆಗಲಿ. ನಾವೆಲ್ಲ ಕೆಟ್ಟವರೇ. ಈಗ ಏನಾಯಿತು ?

ಮುರಳಿ:– ನೀವೆಲ್ಲ ಕೆಟ್ಟವರು ಎಂದು ನೀನು ಒಪ್ಪಿಕೊಂಡಂತಾಯಿತು.

ರಮೆ:– ಥೂ ಸಾಕಪ್ಪಾ ಈ ಹೆಣ್ಣು ಜನ್ಮ. ಯಾಕಾಗಿ ಹುಟ್ಟಿದೆವೊ ಈ ಜನ್ಮದಲ್ಲಿ !

ಮುರಳಿ:– ಪ್ರಜೋತ್ಪತ್ತಿಗಾಗಿ. ಏನೂ ದುಃಖ ಬೇಡ. ಹೆಣ್ಣಿನ ಜನ್ಮದ ಗುರಿಯೇ ಅದು. ಪ್ರಕೃತಿಯ ಏರ್ಪಾಡೇ ಹಾಗೆ.

ರಮೆ:– ಹೌದು, ಹೌದು. ಪ್ರಕೃತಿಯ ಏರ್ಪಾಡು ! ನೀವೆಲ್ಲ ಹುಟ್ಟಿರುವದು ಲೋಕದ ಉದ್ಧಾರಕ್ಕೆ. ನಾವು ಹುಟ್ಟಿರುವದು ಪ್ರಜೋತ್ಪಾದನೆಗೆ.

ಮುರಳಿ:– ನಾವು ಲೋಕೋದ್ಧಾರಕ್ಕೆ ಹುಟ್ಟಿರುವದೆಂದಲ್ಲ. ನಿಮ್ಮ ಪ್ರಜೋತ್ಪಾದನೆಯ ಗುರಿ ಸಾಧನೆಗೆ ಸಹಾಯಕರಾಗಿ ಮಾತ್ರವೇ ಗಂಡಿನ ಜನ್ಮ ಉಂಟಾಗಿರುವದು. ಇದರಲ್ಲಿ ಏನೂ ಸಂಶಯ ಬೇಡ. ಪ್ರಕೃತಿಯ ಮೂಲ ಉದ್ದೇಶವೇ ಇದು.

ರಮೆ:– ಅಂದರೆ ಈಗ ಯಾರು ಒಳ್ಳೆಯವರು ಎಂದು ಹೇಳಿದಂತಾಯಿತು ? ಹೆಂಗಸರೋ, ಗಂಡಸರೊ ?

ಮುರಳಿ:– ಒಳ್ಳೆಯವರು, ಕೆಟ್ಟವರು ಎಂಬ ವಿಂಗಡಣೆಯೇ ಇಲ್ಲಿ ಇಲ್ಲ. ಪ್ರಕೃತಿ ಧರ್ಮವನ್ನು ಹೇಳುತ್ತಿದ್ದೇನೆ, ಅಷ್ಟೆ.

ರಮೆ:– ಏನದು ನಿಮ್ಮ ಆ ಪ್ರಕೃತಿ ಧರ್ಮ?

ಮುರಳಿ:– ಅದೊಂದು ದೊಡ್ಡ ರಹಸ್ಯ. ಪ್ರಕೃತಿಯು ಈ ಬಲವಾದ ನಿಯಮಗಳನ್ನು ಮಾನವನು ಬಲವಾದ ಕಡಿವಾಣದಿಂದ ನಿಯಂತ್ರಿಸಲು ಪ್ರಯತ್ನಿಸಿದ್ದಾನೆ. ಅದರಲ್ಲಿ ಅವನು ಸ್ವಲ್ಪ ಸಫಲನಾದರೂ ಬಹಳ ಮಟ್ಟಿಗೆ ವಿಫಲನಾಗಿದ್ದಾನೆ.

ರಮೆ:– ಅದೇನು ಅಂತ ಬಿಡಿಸಿ ಹೇಳುವದಾದರೆ ಹೇಳಿ. ನನಗೆ ಈ ರೀತಿಯ ಸೂತ್ರವಾಕ್ಯಗಳು ಅರ್ಥವಾಗುವದಿಲ್ಲ.

ಮುರಳಿ:– ಅದನ್ನು ಹೇಳಬೇಕಾದರೆ ಗಂಟೆಗಟ್ಟಲೆ ಹಿಡಿದೀತು. ಹೇಳಲೇನು?

ರಮೆ:– ಥತ್. ನನಗೊಂದೂ ಅರ್ಥವಾಗುವದಿಲ್ಲವಪ್ಪ. ಭೀಮನ ಕತೆ ಅಂತ ಪ್ರಾರಂಭವಾಯಿತು. ಅದು ಎಲ್ಲಿಯೋ ನಿಂತಿತು. ಆತ್ಮ ಗೀತ್ಮ ಅಂತ ಪ್ರಾರಂಭವಾಯಿತು. ಅದೂ ಎಲ್ಲಿಯೋ ನಿಂತಿತು. ಈಗ ಗಂಡು ಹೆಣ್ಣು ಅಂತ ಶುರು ಮಾಡಿದ್ದೀರಿ.

ಮುರಳಿ:– ಹಾಗಾದರೆ ಇದು ಯಾವದೂ ಬೇಡವೊ? ಪಕ್ಕದ ಮನೆಯ ನೀಲಮ್ಮ ಮೊನ್ನೆ ಅದೇನೋ ಗಲಾಟೆ ಮಾಡಿಕೊಂಡಳಂತಲ್ಲ, ಅದರ ವಿಚಾರ ಮಾತನಾಡೋಣವೆ?

ರಮೆ:– ಯಾರು ಏನು ಮಾಡಿದರೆ ನಮಗಾದ ತೊಂದರೆ ಏನು? ಯಾವದೂ ಬೇಡ. ಭೀಮನ ಕತೆಯನ್ನು ಮುಂದುವರಿಸಿ.

ಮುರಳಿ:– ಹಾಗಾದರೆ ಗಂಡು–ಹೆಣ್ಣುಗಳ ಸಂಬಂಧದ ವಿಚಾರ ಬೇಡವೊ?

ರಮೆ:– ನಾಳೆ ಪ್ರಾರಂಭದಲ್ಲಿ ಹೇಳಿ.

ಮುರಳಿ:– ಆತ್ಮನಿಗೆ ರಜೆ ಕೊಡೋಣವೊ?

ರಮೆ:– ಹೌದು. ನಾಳೆ ಅದರ ಕುರಿತು ಉಳಿದ ವಿಚಾರ ಹೇಳಿ. ಅದು ಮುಗಿದ ಮೇಲೆ ಗಂಡು–ಹೆಣ್ಣುಗಳ ಕುರಿತು ಹೇಳಿ. ಆದರೆ ಪ್ರತಿ ದಿನವೂ ಭೀಮನ ಕತೆ ಮಾತ್ರ ಮುಂದುವರಿಯಲೇಬೇಕು.

ಮುರಳಿ:– ಅಪ್ಪಣೆ. ಈಗ ಏನು ಹೇಳಲಿ?

ರಮೆ:– ಒಳ್ಳೆ ಪೆದ್ದಂಭಟ್ಟನ ಹಾಗೆ ಮಾತಾಡಬೇಡಿ. ಭೀಮನ ಕತೆ ಮುಂದುವರಿಸಿ.

ಮುರಳಿ:–ಸರಿ. ಯುಧಿಷ್ಠಿರನು ತನ್ನ ಹೆಸರಿಗೆ ತಕ್ಕಂತೆ ರಾಜ್ಯವಾಳುತ್ತಿದ್ದನು. ಹೀಗಿರುವಾಗ ಒಮ್ಮೆ ನಾರದರು ಅವನಲ್ಲಿಗೆ ಬಂದರು.

ರಮೆ:– ಈ ನಾರದರ ಕತೆಯನ್ನೆಲ್ಲ ನೀವು ನಂಬುತ್ತೀರಾ ?

ಮುರಳಿ:– ಅವರ ಕತೆ ಏನು ?

ರಮೆ:– ಹೇಳುತ್ತಾರಲ್ಲಾ, ಅವರು ತ್ರಿಲೋಕ ಸಂಚಾರಿ, ಎಲ್ಲಿಂದರಲ್ಲಿಗೆ ಸಂಕಲ್ಪ ಮಾತ್ರದಿಂದಲೇ ಹೋಗಲು ಶಕ್ತಿ ಇರುವವರು ಎಂದೆಲ್ಲ ಹೇಳುತ್ತಾರಲ್ಲಾ, ಅದು ಇದ್ದಿರಬಹುದೆ ?

ಮುರಳಿ:– ಯಾಕೆ ಇದ್ದಿರಬಾರದು ?

ರಮೆ:– ಯಾಕೆ ಇದ್ದಿರಬಹುದು ಎಂದು ನೀವು ಹೇಳಿ.

ಮುರಳಿ:– ನಾನೇಕೆ ಹೇಳಬೇಕು ? ಒಂದು ವಿಷಯವನ್ನು "ಇದು ಹೀಗೆ" ಎಂದು ನಾನು ಹೇಳುತ್ತೇನೆ. "ಅದು ಹಾಗಿರಲು ಸಾಧ್ಯವಿಲ್ಲ" ಎಂದು ಸಿದ್ಧಗೊಳಿಸುವದು ನಿನ್ನ ಕೆಲಸ.

ರಮೆ:– ಸಾಧ್ಯವಿಲ್ಲ ಎನ್ನುವದು ಹಗಲಿನಷ್ಟು ಸ್ಪಷ್ಟವಾಗಿರುವಾಗ ಅದನ್ನು ಸಿದ್ಧಗೊಳಿಸಲಿಕ್ಕೇನಿದೆ ?

ಮುರಳಿ:– ಹಾಗೆ. ನೀನು ಕಣ್ಣು ಬಿಟ್ಟಾಗಲೆಲ್ಲ ಹಗಲು. ನಾನು ಕಣ್ಣು ಬಿಟ್ಟಾಗಲೆಲ್ಲ ಕತ್ತಲು.

ರಮೆ:– ಅದೇನು ಹಾಗನ್ನುತ್ತೀರಿ ?

ಮುರಳಿ:– ಅಲ್ಲವೇ ಮತ್ತೆ ? ಒಂದು ವಿಷಯ ಸಾಧ್ಯವೇ ಇಲ್ಲ ಎಂದು ನೀನು ಹೇಳಿದರೆ ಅದೇ ಪರಮ ಸತ್ಯ. ಅದು ಸಾಧ್ಯ ಎಂದು ನಾನು ಹೇಳಿದರೆ ಅದು ಸುಳ್ಳು.

ರಮೆ:– ನಾನು, ನೀವು ಅಂತ ಅಲ್ಲ. ಒಬ್ಬ ಮನುಷ್ಯ ಮೂರು ಲೋಕ ಹೋಗಲಿ, ಇದೇ ಲೋಕದಲ್ಲಾದರೂ ಬೇಕು ಬೇಕಾದ ಕಡೆಗೆ ಬೇಕು ಬೇಕಾದಾಗ ತಟಕ್ಕನೆ ಹೋಗಲು ಸಾಧ್ಯ ಎಂದು ನಂಬುವಷ್ಟು ಮೂರ್ಖರಾಗಬೇಕೇನು ನಾವೆಲ್ಲ ?

ಮುರಳಿ:– ಛೆ, ಅದು ಮೂರ್ಖತನ ಏಕಾಗುತ್ತದೆ ? ಮೂರ್ಖತನ ಅಲ್ಲವೇ ಅಲ್ಲ.

ರಮೆ:– ಸರಿ, ಹಾಗನ್ನಿ ಮತ್ತೆ. ವೈಜ್ಞಾನಿಕವಾದ ತರ್ಕವನ್ನು ಮೂರ್ಖತನ ಎಂದರೆ ಮತ್ತೆ !

ಮುರಳಿ:– ಮೂರ್ಖತನವಲ್ಲ. ಖಂಡಿತ ಅಲ್ಲ.

ರಮೆ:– ವೈಜ್ಞಾನಿಕವಾದ ತರ್ಕ ಹೌದೋ ಅಲ್ಲವೊ ?

ಮುರಳಿ:– ಅದೂ ಅಲ್ಲ.

ರಮೆ:– ಮತ್ತೇನು ?

ಮುರಳಿ:– ಏನೇ ಇರಲಿ, ಮೂರ್ಖತನ ಖಂಡಿತ ಅಲ್ಲ.

ರಮೆ:– ಮೂರ್ಖತನವಲ್ಲದಿದ್ದರೆ ಮತ್ತೇನು ಎಂದೆ.

ಮುರಳಿ:– ಬುದ್ಧಿ ಶಕ್ತಿಯ ಮಿತಿ.

ರಮೆ:– ನೀವು ಹೇಳುವ ಅಡುಗೂಲಜ್ಜಿ ಕತೆಗಳನ್ನೆಲ್ಲ ನಂಬುವದು ದೊಡ್ಡ ಬುದ್ಧಿವಂತಿಕೆ ! ಅವುಗಳ ಟೊಳ್ಳುತನವನ್ನು ಬಯಲಿಗೆಳೆಯುವದು ಮೊಂಡು ಬುದ್ಧಿಯ ಲಕ್ಷಣ ! ಅಯ್ಯೋ ಯಾವ ನಾರದ ಎಲ್ಲಿಗೆ ಹೋದರೇನು, ಎಲ್ಲಿಗೆ ಬಂದ ರೇನು ? ನಾನಿನ್ನು ತುಟಿ ಪಿಟಕ್ಕೆಂದರೆ ಕೇಳಿ ! ಈಗ ಕೇಳಿದುದು ತಪ್ಪಾಯಿತು. ಕ್ಷಮಿಸಿಬಿಟ್ಟು ಮುಂದಕ್ಕೆ ಕತೆ ಹೇಳಿ.

ಮುರಳಿ:– ನೋಡು ರಮಾ. ಈ ವರೆಗೆ ಇಂತಹ ಪ್ರಸಂಗಗಳನ್ನು ಎಷ್ಟೋ ಚರ್ಚಿಸಿದ್ದೇವೆ. ನೀನೇ ಒಪ್ಪಿಕೊಂಡಿದ್ದೀಯ........

ರಮೆ:– ನಾರದನ ವಿಚಾರ ಬರಲೇ ಇಲ್ಲ, ಒಪ್ಪಿಕೊಳ್ಳಲಿಕ್ಕೆ.

ಮುರಳಿ:– ನಾರದ ಅಂತ ಅಲ್ಲ. ನಮ್ಮ ಇಂದಿನ ವ್ಯವಹಾರಗಳಲ್ಲಿ ನಾವು ಕಾಣಲಾರದ ಎಷ್ಟೋ ವಿಚಾರಗಳು ಹಿಂದೆ ನಡೆದಿರಲೂ ಸಾಕು, ಮುಂದೆ ನಡೆಯ ಲಿಕ್ಕೂ ಸಾಕು. ನೀನು ಕೇವಲ ಇಂದಿನ ವ್ಯಾವಹಾರಿಕ ವಿದ್ಯೆ ಕಲಿತುದರಿಂದಾಗಿ ನಿನ್ನ ಕಲ್ಪನಾಸಾಮರ್ಥ್ಯ, ಚಿಂತನಾ ಶಕ್ತಿಗಳು ಕೂಡ ಬಹಳ ಇಕ್ಕಟ್ಟಾಗಿ ರೂಪುಗೊಂಡುಬಿಟ್ಟವೆ. ನೀನು ಇತ್ತೀಚಿನ ವರೆಗೂ ಇದ್ದ ಕೆಲವು ಸಾಧು ಸಂತರ, ಮಹಾಪುರುಷರ ಜೀವನವನ್ನೇ ಓದಿ ನೋಡು. ನಾವು ನಂಬಲಿಕ್ಕೇ ಸಾಧ್ಯವಾಗದ ಘಟನೆಗಳು ಅವರಿಂದ ನಡೆದಿವೆ.

ರಮೆ:– ಒಂದು ಕಡೆಯಲ್ಲಿ ಇದ್ದಂತೆಯೇ ಅಂತರ್ಧಾನ ಅಂತ ಆಗಿಬಿಟ್ಟು ಬೇರೆ ಎಲ್ಲಿಯೋ ಒಂದು ಕಡೆ "ಟಕ್" ಅಂತ ಪ್ರತ್ಯಕ್ಷ ಎನಿಸಿಕೊಂಡಿದ್ದಾರೊ ?

ಮುರಳಿ:– ಅದೂ ಎನಿಸಿಕೊಂಡಿದ್ದಾರೆ, ಅದಕ್ಕಿಂತಲೂ ಅದ್ಭುತಗಳನ್ನೂ ಮಾಡಿದ್ದಾರೆ. ಅದೃಶ್ಯವಾಗುವದು, ರೂಪಾಂತರ ಹೊಂದುವದು, ದೇಹವನ್ನು ಬೆಳೆಸಿಕೊಳ್ಳುವದು, ಸಣ್ಣದು ಮಾಡಿಕೊಳ್ಳುವದು, ಶವದೊಳಗೆ ಪ್ರವೇಶಿಸುವದು, ಇಲ್ಲದುದನ್ನು ತರಿಸಿಕೊಳ್ಳುವದು, ಬೇಕೆಂದಲ್ಲಿಗೆ ಹೋಗುವದು–ಇವೆಲ್ಲ ಮಹಾ ಅದ್ಭುತಗಳೇನೂ ಅಲ್ಲ. ಸಿದ್ಧಿಗಳೆಂದು ಕರೆಸಿಕೊಳ್ಳುವ ಇವುಗಳನ್ನೆಲ್ಲ ಮಂತ್ರದಿಂದ ಕರಗತ ಮಾಡಿಕೊಳ್ಳಬಹುದು, ಮೂಲಿಕೆಗಳಿಂದ ಮಾಡಿಕೊಳ್ಳಬಹುದು, ತಪಸ್ಸಿನಿಂದ ಮಾಡಿಕೊಳ್ಳಬಹುದು. ಹೀಗೆ ಮಾಡಿಕೊಂಡವರು ಈಚೀಚೆಗೂ

ಬದುಕಿದ್ದರು, ಇಂದಿಗೂ ಬದುಕಿರಬಹುದು. ಅದರ ವಿಚಾರ ಎಂದಾದರೂ ಒಂದು ದಿನ ಬೇಕಿದ್ದರೆ ಚರ್ಚಿಸೋಣ. ನಾರದರು ಇಂತಹ ಒಬ್ಬ ಸಿದ್ಧ ಪುರುಷ. ಸಿದ್ಧಿಗಳನ್ನೂ ಪಡೆದಿದ್ದು, ಭಗವಂತನ ಪರಮ ಭಕ್ತರೂ ಆಗಿದ್ದು ಅವರು ತಮ್ಮ ಚಟುವಟಿಕೆಗಳನ್ನೆಲ್ಲ ಸ್ವಾರ್ಥಕ್ಕಾಗಿ ಬಳಸದೆ ಲೋಕೋಪಕಾರ ಕ್ಕಾಗಿಯೇ ಮೀಸಲಾಗಿಡುತ್ತಿದ್ದುದರಿಂದ ನಮ್ಮ ಹಿಂದಿನ ಗ್ರಂಥಗಳಲ್ಲಿ ಅವರ ಪಾತ್ರವನ್ನು ಬಹಳ ಕೊಂಡಾಡಲಾಗಿದೆ. ಗೊತ್ತಾಯಿತೇನು ?

ರಮೆ:– ಆಯಿತಪ್ಪಾ, ಹೇಳಿ.

ಮುರಳಿ:– ಕೇಳು. ಯುಧಿಷ್ಠಿರನಲ್ಲಿಗೆ ಬಂದ ನಾರದರು ದ್ರೌಪದಿಯು ಐವರಿಗೂ ಏಕ ಕಾಲದಲ್ಲಿ ಪತ್ನಿಯಾಗಿರುವ ಅಪೂರ್ವ ವಿಷಯವನ್ನು ಪ್ರಸ್ತಾಪಿ ಸುತ್ತಾ ಹೆಣ್ಣಿನ ನಿಮಿತ್ತದಿಂದಾಗಿ ಇಬ್ಬರು ಗಂಡಸರು ತುಂಬ ಸ್ನೇಹಿತರೇ ಆಗಿ ದ್ದರೂ ಅವರು ಪರಸ್ಪರ ವೈರಿಗಳಾಗುವ ಸಾಧ್ಯತೆಯನ್ನು ವಿವರಿಸಿ, ಧರ್ಮ ನಿಷ್ಠರೂ, ಸಹೋದರರೆಲ್ಲರೂ ಐಕಮತ್ಯದಿಂದ ಬಾಳುವವರಲ್ಲಿ ಆದರ್ಶಪ್ರಾಯರೂ, ತೇಜೋವಂತರೂ, ತಮ್ಮ ತೇಜಸ್ಸಿನಿಂದಲೇ ಮುಂದಕ್ಕೆ ಯಾವುದೋ ಮಹಾ ದೊಡ್ಡ ಕಾರ್ಯಗಳನ್ನು ಮಾಡಬಲ್ಲವರೆಂದು ಇತರರು ತಿಳಿಯಲು ಸಾಧ್ಯವಾಗು ವಂತಿರುವವರೂ ಆದ ಪಾಂಡವರೊಳಗೆ ಈ ಒಂದು ಹೆಣ್ಣಿನ ನಿಮಿತ್ತದಿಂದಾಗಿ ವೈಷಮ್ಯ ತಲೆದೋರಬಾರದೆಂದು ಬಯಸಿ ಯುಧಿಷ್ಠಿರನಿಗೆ ಸಲಹೆ ಮಾಡಿದರು. ಐವರು ಪಾಂಡವರೂ ದ್ರೌಪದಿಯನ್ನು ಒಬ್ಬೊಬ್ಬರು ಒಂದೊಂದು ವರ್ಷದಲ್ಲಿ ಸ್ವೀಕರಿಸಿರಬೇಕೆಂದೂ, ಈ ಕಟ್ಟಳೆಯ ಪ್ರಕಾರ ಆಕೆಯು ಒಬ್ಬನೊಂದಿಗೆ ಅಂತಃ ಪುರದಲ್ಲಿರುವದನ್ನು ಉಳಿದವರಲ್ಲಿ ಯಾರಾದರೂ ಕಂಡರೆ ಹಾಗೆ ಕಂಡವನು ಪ್ರಾಯಶ್ಚಿತ್ತ ರೂಪವಾಗಿ ಒಂದು ವರ್ಷ ತೀರ್ಥಯಾತ್ರೆ ಮಾಡಬೇಕೆಂದೂ ಸೂಚಿಸಿದರು ಪಾಂಡವರು ಇದನ್ನು ಸಂತೋಷದಿಂದ ಒಪ್ಪಿದರು.

ಹೀಗಿರುವಾಗ ಒಮ್ಮೆ ಯುಧಿಷ್ಠಿರನೂ ದ್ರೌಪದಿಯೂ ಅಂತಃಪುರದಲ್ಲಿದ್ದ ಸಮಯವಾಗಿತ್ತು. ಕೆಲವು ಬ್ರಾಹ್ಮಣರಿಗೆ ಒದಗಿದ ಯಾವದೋ ಸಂಕಟವನ್ನು ನಿವಾರಿಸುವದಕ್ಕಾಗಿ ಅರ್ಜುನನಿಗೆ ಹಿರಿಯಣ್ಣನ ಅಂತಃಪುರದಲ್ಲಿದ್ದ ತನ್ನ ಧನು ರ್ಬಾಣಗಳು ಬೇಕಾದವು. ಆ ಸಮಯದಲ್ಲಿ ಅಂತಃಪುರ ಪ್ರವೇಶವು ತಾವು ಒಪ್ಪಿಕೊಂಡಿದ್ದ ನಿಯಮಕ್ಕೆ ವಿರೋಧವಾಗುವಂತಿದ್ದರೂ ಕೂಡ ಬ್ರಾಹ್ಮಣರ ಕಷ್ಟ ಪರಿಹಾರಕ್ಕೇ ಪ್ರಾಧಾನ್ಯ ಕೊಟ್ಟು ಅರ್ಜುನನು ಅಂತಃಪುರದೊಳಗೆ ಹೊಕ್ಕು ಅಣ್ಣನ ಕ್ಷಮಾಯಾಚನೆ ಮಾಡಿ ಧನುರ್ಬಾಣಗಳನ್ನು ತೆಗೆದುಕೊಂಡು ಬಂದು ಬ್ರಾಹ್ಮಣರ ಸಂಕಟವನ್ನು ನಿವಾರಣೆ ಮಾಡಿ, ತಾವು ಒಪ್ಪಿಕೊಂಡಿದ್ದ ನಿಯಮ ದಂತೆ ತೀರ್ಥಯಾತ್ರೆಗೆ ಹೊರಟನು. ಭಾರತವನ್ನು ಪ್ರದಕ್ಷಿಣಾಕಾರವಾಗಿ ಪ್ರೋರ್ತಿ ಯಾಗಿ ಸುತ್ತಿದ ಅವನು ದ್ವಾರಕಿಗೆ ಸನ್ಯಾಸಿ ವೇಷದಲ್ಲಿ ಬಂದು ಕೃಷ್ಣನ ಸಹಾಯ

ದಿಂದ ಬಲರಾಮನನ್ನು ವಂಚಿಸಿ ಅವರ ತಂಗಿಯಾದ ಸುಭದ್ರೆಯನ್ನು ರಾಕ್ಷಸ ವಿಧಾನದಲ್ಲಿ ವರಿಸಿ ಇಂದ್ರಪ್ರಸ್ಥಕ್ಕೆ ಬಂದು ಸೇರಿದನು. ಕ್ರಮೇಣ ಸುಭದ್ರೆಯು ಅಭಿಮನ್ಯುವೆಂಬ ಕುಮಾರನನ್ನು ಹಡೆದಳು.

ಹೀಗೆಯೇ ಇರುವಾಗ ಒಮ್ಮೆ ಕೃಷ್ಣಾರ್ಜುನರು ವಿಹರಿಸುತ್ತಿದ್ದ ಕಾಲದಲ್ಲಿ ಇಂದ್ರನ ಖಾಂಡವ ವನವನ್ನು ದಹಿಸಬೇಕೆಂಬ ತನ್ನ ಅಪೇಕ್ಷೆಯನ್ನು ಅಗ್ನಿಯು ಇವರಲ್ಲಿ ವ್ಯಕ್ತಪಡಿಸಿ ಅವರ ಸಹಾಯವನ್ನು ಕೋರಿದನು. ಇವರ ರಕ್ಷಣೆಯನ್ನು ಪಡೆದ ಅವನು ಆ ವನವನ್ನು ಸುಟ್ಟುದರಿಂದ ಇವರುಗಳು ಇಂದ್ರನ ಕೋಪಕ್ಕೆ ಪಾತ್ರರಾದರೂ ಕೂಡ ಅವನನ್ನು ನಿವಾರಿಸಿ ಕೊನೆಗೆ ಅವನ ಆದರಕ್ಕೂ ಪಾತ್ರ ರಾದರು. ಇದರ ಪರಿಣಾಮವಾಗಿ ಅರ್ಜುನನಿಗೆ ಗಾಂಢೀವವೆಂಬ ಮಹಾ ಧನುಸ್ಸೂ, ಬಾಣಗಳು ಅಕ್ಷಯವಾಗುವ ಬತ್ತಳಿಕೆಯೂ ದೊರೆತವು.

ರಮೆ:– ಮಹಾ ಧನುಸ್ಸೆ ?

ಮುರಳಿ:– ಹೌದು. ಅರ್ಜುನನ ಗಾಂಢೀವವೆಂಬದು ಅಂದಿನಿಂದ ಇಂದಿಗೂ ಪ್ರಸಿದ್ಧವಾಗಿಲ್ಲವೆ ?

ರಮೆ:– ಅದರ ಪ್ರಸಿದ್ಧಿಗೆ ನಿಜವಾಗಿ ಏನು ಕಾರಣ ?

ಮುರಳಿ:– ಇಂದಿನ ಅಣುಬಾಂಬು, ಹೈಡ್ರೋಜನ್ ಬಾಂಬು ಎಂಬವೆಲ್ಲ ಈ ಕೈ ಬಾಂಬುಗಳಿಗಿಂತ ಹೆಚ್ಚು ಪ್ರಚಂಡವಾದವು ಎಂಬದಕ್ಕೆ ಕಾರಣ ಕೊಡುತ್ತ ಕೂರಬೇಕೇನು ?

ರಮೆ:– ಅಂದರೆ ಅಷ್ಟು ಬಲವಾದ ಧನುಸ್ಸು ಆಗಿನ ಕಾಲದಲ್ಲಿ ಬೇರೆ ಯಾರಲ್ಲಿಯೂ ಇರಲಿಲ್ಲವೆಂದು ಅರ್ಥವೊ ?

ಮುರಳಿ:– ಇರಲಿಲ್ಲ ಎಂದು ಮಾತ್ರವಲ್ಲ. ಗಾಂಢೀವ ಧನುಸ್ಸಿನ ಹೆದೆ ಯನ್ನೇ ಏರಿಸಲು ಕೃಷ್ಣ, ಭೀಮ ಮತ್ತು ಅರ್ಜುನ–ಇವರು ಮೂವರು ಮಾತ್ರವೇ ಸಮರ್ಥರಾಗಿದ್ದುದು.

ರಮೆ:– ಭೀಮನೂ ?

ಮುರಳಿ:– ಅಂದರೆ ?

ರಮೆ:– ಅಂದರೆ, ಅಂದರೆ ?

ಮುರಳಿ:– ಅಂದರೇ ಅಂದರೆ, ಭೀಮನು ನಿನ್ನ ದೃಷ್ಟಿಯಲ್ಲಿ ಅರ್ಜುನನಿ ಗಿಂತಲೂ ಕಡಿಮೆಯಾದುದೇಕೆ ಎಂದು ?

ರಮೆ:– ಕಡಿಮೆ ಎಂದಲ್ಲ. ಗದೆಯಲ್ಲೇ ಪ್ರವೀಣನಾಗಿದ್ದ ಅವನು ಇಂತಹ

ಒಂದು ದೊಡ್ಡ ಧನುಸ್ಸನ್ನೂ ಉಪಯೋಗಿಸಲು ಸಮರ್ಥನಾಗಿದ್ದನೇ ಎಂದು ಕೇಳಿದೆ.

ಮುರಳಿ:– ಅಂತಹ ದೊಡ್ಡ ಧನುಸ್ಸನ್ನು ಬಳಸಲು ಸಮರ್ಥನಾಗಿ, ಆದರೆ ತಾನು ಯುದ್ಧಗಳಲ್ಲಿ ಮಾಡಲು ಸಾಧ್ಯವಾಗಿದ್ದ ಇನ್ನೂ ದೊಡ್ಡ ಸಾಹಸಗಳಿಗೆ ಈ ಧನುಸ್ಸಿನ ದೊಡ್ಡತನ ಸಾಲದಾಗುವದೆಂಬದಕ್ಕಾಗಿ ಅವನು ಗದೆಯನ್ನು ಬಳಸುತ್ತಿದ್ದನು ಎಂಬ ಉದಾರ ಭಾವನೆ ನಿನಗೇಕೆ ಬರಲಿಲ್ಲ?

ರಮೆ:– ಆಗಲಿ. ನನ್ನ ಜಿಪುಣತನವನ್ನು ಬಿಡುತ್ತೇನೆ. ತಾವು ಔದಾರ್ಯದಿಂದ ಕತೆ ಮುಂದುವರಿಸಿ.

ಮುರಳಿ:– ಮಯ ಎಂಬ ಒಬ್ಬ ಗಂಧರ್ವನು ಪಾಂಡವರ ಸ್ನೇಹಿತನಾಗಿದ್ದನು. ಆ ಸ್ನೇಹದ ಕುರುಹಾಗಿ ಅವನು ಪಾಂಡವರಿಗೆ ಅತ್ಯಂತ ಅಪೂರ್ವವಾದ ಒಂದು ಸಭಾ ಭವನವನ್ನು ನಿರ್ಮಿಸಿ ಕೊಟ್ಟನು. ಅದರ ರಚನೆಯು, ಮುಂದೆ ನೀನು ಕೇಳುವಂತೆ, ದುರ್ಯೋಧನನಂತಹ ಮಹಾರಾಜನನ್ನೂ ಭ್ರಮೆಗೊಳಿಸುವಂತಹ ಬೆರಗಿನಿಂದ ಕೂಡಿತ್ತು. ಇಷ್ಟೇ ಅಲ್ಲದೆ ಮಯನು ಹಿಂದೆ ಕೃತಯುಗದಲ್ಲಿದ್ದ ಸಗರ ವಂಶದವರು ಉಪಯೋಗಿಸುತ್ತಿದ್ದ ಹಾಗೂ ಯಮನ ಕಾಲದಂಡವನ್ನೂ ಎದುರಿಸುವಷ್ಟು ಪ್ರಚಂಡವಾದ ಒಂದು ಉಕ್ಕಿನ ಗದೆಯನ್ನು ತನ್ನ ಸ್ನೇಹದ ಕುರುಹಾಗಿ ಭೀಮನಿಗೆ ಕೊಟ್ಟನು.

ರಮೆ:– ಸಗರ ವಂಶದವರೆ?

ಮುರಳಿ:– ಹೌದು. ಸಾಗರ ಎಂದು ಕರೆಯಲ್ಪಡುವ ಈ ಸಮುದ್ರಗಳನ್ನು ನಿರ್ಮಾಣ ಮಾಡಿದವರು. ಶ್ರೀರಾಮನ ವಂಶದಲ್ಲಿ ರಾಮನಿಗಿಂತ ಬಹಳ ಹಿಂದಿನವರು.

ರಮೆ:– ಸರಿ.

ಮುರಳಿ:– ಹೀಗೆಯೇ ಇರುವಾಗ ಒಮ್ಮೆ ನಾರದರು ಇಂದ್ರಪ್ರಸ್ಥಕ್ಕೆ ಬಂದರು.

ರಮೆ:– ಪುನಃ?

ಮುರಳಿ:– ಹೌದು. ಪ್ರಾಸಂಗಿಕವಾಗಿ ಯುಧಿಷ್ಠಿರನು ನಾರದರಲ್ಲಿ ಊರ್ಧ್ವಲೋಕಗಳ ಸ್ಥಿತಿಗತಿಗಳನ್ನು ವಿಚಾರಿಸಿದಾಗ ನಾರದರು, ಹರಿಶ್ಚಂದ್ರಾದಿ ರಾಜರುಗಳು ರಾಜಸೂಯ ಯಾಗದ ಬಲದಿಂದ ಇಂದ್ರನ ಸಮಾನ ಸ್ಥಾನವನ್ನು ಪಡೆದಿರುವದನ್ನೂ, ಪಾಂಡವರ ತಂದೆಯಾದ ಪಾಂಡುವು ಆ ಸ್ಥಾನದಿಂದ ವಂಚಿತನಾಗಿರುವದನ್ನೂ ತಿಳಿಸಿ ತಂದೆಯ ಸದ್ಗತಿಗೋಸ್ಕರ ಪಾಂಡವರು ರಾಜಸೂಯ ಯಾಗ

ವನ್ನು ಮಾಡಬೇಕೆಂದು ಸೂಚಿಸಿ ಹೊರಟುಹೋದರು. ಯುಧಿಷ್ಠಿರನಿಗೆ ಇದೇ ಒಂದು ಚಿಂತೆಯಾಗಿಬಿಟ್ಟಿತು.

ರಮೆ:– ಯಾವದು ? ನಾರದರು ಹೊರಟು ಹೋದುದೆ ?

ಮುರಳಿ:– ಹೌದು. ತಮ್ಮ ತಂದೆಯ ಕುರಿತು ಹಾಗೆ ಹೇಳಿ ಹೊರಟು ಹೋದುದು.

ರಮೆ:– ಈ ಸ್ವರ್ಗ, ನರಕ–ಇವೆಲ್ಲ ಇವೆಯೆಂದು ಒಪ್ಪುತ್ತೀರಿ ?

ಮುರಳಿ:– ಒಪ್ಪುತ್ತೇನೆ.

ರಮೆ:– ಹೇಗೆ ?

ಮುರಳಿ:– ಒಪ್ಪುವದೆಲ್ಲವನ್ನೂ ಎಲ್ಲರೂ ಹೇಗೆ ಒಪ್ಪುತ್ತಾರೆಯೋ ಹಾಗೆ.

ರಮೆ:– ಅದು ಸರಿ. ಯಾವ ಕಾರಣದಿಂದ ಒಪ್ಪುತ್ತೀರಿ ಎಂದೆ.

ಮುರಳಿ:– ಒಪ್ಪುವದೆಲ್ಲವನ್ನೂ ಎಲ್ಲರೂ ಯಾವ ಕಾರಣದಿಂದ ಒಪ್ಪುತ್ತಾರೆಯೋ ಅದೇ ರೀತಿ.

ರಮೆ:– ಇದನ್ನು ಒಪ್ಪುವದಕ್ಕೆ ನಿಮಗೆ ಏನು ಆಧಾರ ?

ಮುರಳಿ:– ಇದನ್ನು ಒಪ್ಪದಿರುವದಕ್ಕೆ ನಿನಗೆ ಏನು ಆಧಾರ ?

ರಮೆ:– ಒಳ್ಳೇ ತಮಾಷೆ ! ಸ್ವರ್ಗ, ನರಕ ಇಲ್ಲ ಎನ್ನಲು ಏನು ಆಧಾರ ಬೇಕು ?

ಮುರಳಿ:– ಅಷ್ಟೇ ತಮಾಷೆ, ಸ್ವರ್ಗ, ನರಕ ಇದೆ ಎನ್ನಲು ಏನು ಆಧಾರ ಬೇಕು ಎಂದು ಕೇಳುವದು !

ರಮೆ:– ಇರುವದು ಯಾವದೇ ಆದರೂ ಯಾವದೇ ಇಂದ್ರಿಯಕ್ಕಾದರೂ, ಕೊನೆಗೆ ಬುದ್ಧಿಗಾದರೂ ಗೋಚರಿಸಬೇಡವೆ ?

ಮುರಳಿ:– ಈ ಲೋಕದಲ್ಲಿ ನನಗೆ, ನಿನಗೆ ಇದೆ ಎನಿಸುವ ಅನೇಕ ವಸ್ತುಗಳು, ವಿಷಯುಗಳು, ಕಡಿಮೆ ಬುದ್ಧಿಯವರಿಗೆ ಇಲ್ಲ ಎನಿಸಿವೆ. ಏನು ಮಾಡೋಣ ?

ರಮೆ:– ಓಹೋ ! ತುಂಬ ಬುದ್ಧಿ ಇರುವ ನಿಮ್ಮಂಥವರಿಗೆ ಮಾತ್ರ ಈ ಸ್ವರ್ಗ, ನರಕಗಳು ಇರುವದು ತಿಳಿಯುವದೊ ?

ಮುರಳಿ:– ಏನಿಲ್ಲ. ಕಡಿಮೆ ಬುದ್ಧಿ ಇರುವ ನಿನ್ನಂತಹವರಿಗೂ ತಿಳಿಯುತ್ತದೆ.

ರಮೆ:– ತೋರಿಸಿ, ಹಾಗಾದರೆ.

ಮುರಳಿ:– ಸತ್ತ ಮೇಲೆ ಅವು ಕಾಣಿಸದಿದ್ದರೆ ನನ್ನನ್ನು ಕೇಳು. ತೋರಿಸುತ್ತೇನೆ.

ರಮೆ:– ಹಾಳಾಗಲಿ ಸದ್ಯ. ಚರ್ಚೆಯ ಈ ನರಕ ನೋಡಿದ್ದು ಸಾಕು. ಕತೆಯ ಸ್ವರ್ಗ ತೋರಿಸಿ.

ಮುರಳಿ:– ಸರಿ ಮತ್ತೆ. ಸ್ವರ್ಗ ನರಕಗಳ ಛಾಯೆಯನ್ನು ಇಲ್ಲಿಯೇ ನೋಡಿದೆಯಲ್ಲ! ಮೂಲ ಪ್ರದೇಶಗಳ ಬಗೆಗೆ ಕಲ್ಪನೆಯನ್ನು ಹರಿಯಬಿಡು. ಸದ್ಯಕ್ಕೆ ಕತೆಯನ್ನು ಸ್ವರ್ಗಕ್ಕೆ ಕಳುಹಿಸುವದು ಬೇಡ. ಕೇಳು. ತಂದೆಯ ಸದ್ಗತಿಯನ್ನು ಸಾಧಿಸುವ ಆ ಮಹಾಯಾಗವನ್ನು ಮಾಡುವದರ ಕುರಿತು ಯುಧಿಷ್ಠಿರನು ತುಂಬ ಚಿಂತಿಸತೊಡಗಿದನು. ಈ ಸಂಬಂಧವಾಗಿ ಸಮಾಲೋಚನೆ ನಡೆಸಲು ತನ್ನ ಆಪ್ತೇಷ್ಟರೆಲ್ಲರನ್ನೂ ಆಹ್ವಾನಿಸಿ, ಅವರ ಸಲಹೆಗಳ ಮೇಲೆ ನಿರ್ಧಾರವನ್ನು ಕೈಗೊಳ್ಳುವದಕ್ಕಾಗಿ ಕೃಷ್ಣನನ್ನೂ ಕರೆಸಿದನು. ರಾಜಕಾರಣದಲ್ಲಿ ನುರಿತಿದ್ದ ಕೃಷ್ಣನು "ಇದೇನು ಮಕ್ಕಳಾಟವೆ? ಭಾರತದ ಬೇರೆ ಬೇರೆ ರಾಜರು, ಅದರಲ್ಲಿಯೂ ಶಿಶುಪಾಲ, ಜರಾಸಂಧ ಮೊದಲಾದವರನ್ನು ಗೆಲ್ಲುವದು ಅಸಾಧ್ಯದ ಕೆಲಸ. ಪ್ರಯತ್ನಪಟ್ಟರೆ ಬೇರೆ ಎಲ್ಲರನ್ನೂ ಹೇಗೂ ಸೋಲಿಸಬಹುದು. ಆದರೆ ಶಿಶುಪಾಲ, ಜರಾಸಂಧರನ್ನು ಗೆಲ್ಲುವದು ಬಹುಮಟ್ಟಿಗೆ ದುಸ್ಸಾಧ್ಯವೇ. ಅದರಲ್ಲಿಯೂ ಯಾರಿಗೆ ಅನೇಕ ಬಾರಿ ನಾನೇ ಸೋತುಹೋಗಿದ್ದೇನೋ ಅಂತಹ ಆ ಜರಾಸಂಧನನ್ನು ಗೆಲ್ಲುವದು ಸಾಧ್ಯವೇ ಇಲ್ಲ ಎನಿಸುತ್ತದೆ. ಯುಧಿಷ್ಠಿರಾ, ಆ ಜರಾಸಂಧನು ಸಾಮಾನ್ಯನೆಂದು ತಿಳಿಯಬೇಡ. ಮಹಾ ಪರಾಕ್ರಮಿ ಎನಿಸಿಕೊಂಡಿರುವ ಸಾಕ್ಷಾತ್ ಶಿಶುಪಾಲನೇ ಆ ಜರಾಸಂಧನ ಕೈಕೆಳಗೆ ಅವನ ಸೇನಾಪತಿಯಾಗಿರುವಾಗ ಅವನ ಪರಾಕ್ರಮವು ಎಷ್ಟು ಅಗಾಧವಾದುದೆಂದು ಕಲ್ಪಿಸಿಕೊ. ಹಂಸ ಡಿಂಭಕರೆಂಬ ಮಹಾ ಬಲಶಾಲಿಗಳೂ, ಮುರ, ನರಕರುಗಳನ್ನು ಜಯಿಸಿದ ಕಾಲನೇಮಿ ಎಂಬ ಬಲಾಢ್ಯನೂ ಕೂಡ ಈ ಜರಾಸಂಧನನ್ನು ಆಶ್ರಯಿಸಿರುವರೆಂದರೆ ಅವನು ಎಷ್ಟರ ಮಟ್ಟಿಗೆ ಅಜೇಯನಾಗಿದ್ದಾನೆ ಎಂಬದನ್ನು ಊಹಿಸಿಕೊ. ನಾನು ನನ್ನ ಸಮಸ್ತ ಯಾದವ ಬಲದೊಂದಿಗೆ ಅವನನ್ನು ಎದುರಿಸಲಾರದೆ ಅವನಿಗೆ ಹದಿನೆಂಟು ಬಾರಿ ಸೋತಿದ್ದೇನೆ. ಜರಾಸಂಧನು ಬದುಕಿರುವಷ್ಟು ಕಾಲ ಬೇರೆ ರಾಜರ್ಯಾರೂ ರಾಜಸೂಯವನ್ನು ಮಾಡುವದು ಪುರುಷ ಪ್ರಯತ್ನಕ್ಕೆ ಮೀರಿದ ಕೆಲಸವೇ" ಎಂದನು. ಸ್ವತಃ ಕೃಷ್ಣನೇ ನಿರಾಸೆಯನ್ನುಂಟು ಮಾಡುವ ಈ ಮಾತುಗಳನ್ನಾಡಲು, ಪಿತೃಋಣವನ್ನು ತೀರಿಸಲಾಗದ ತನ್ನ ಅಸಮರ್ಥ ಪರಿಸ್ಥಿತಿಯನ್ನು ಮನಗಂಡ ಯುಧಿಷ್ಠಿರನು ಬಹಳ ಖೇದಗೊಂಡನು.

ಇದನ್ನು ಕಂಡ ಭೀಮನು ಅಣ್ಣನನ್ನು ಸಮಾಧಾನಪಡಿಸುತ್ತಾ "ಅಣ್ಣಾ,

ಕಾರ್ಯ ಪ್ರವೃತ್ತಿಯಲ್ಲಿ ಉಪಾಯಗಳನ್ನರಿಯದೆ ದುರ್ಬಲನಾಗಿರುವ ರಾಜನು ತನ್ನ ರಾಜ್ಯವನ್ನು ಸುಲಭವಾಗಿ ಕಳೆದುಕೊಳ್ಳುವನು. ಸ್ವತಃ ದುರ್ಬಲನಾಗಿದ್ದರೂ ಕೂಡ ಉಪಾಯಾಂತರಗಳಿಂದ ಪ್ರಯತ್ನವನ್ನು ಎಡೆಬಿಡದೆ ಮುಂದುವರಿಸುವವನು ನಿಶ್ಚಯವಾಗಿಯೂ ವಿಜಯಿಯಾಗುವನು. ನಿನ್ನಂತಹ ಪುರುಷ ಶ್ರೇಷ್ಠನು ಮನಸ್ಸಿನಲ್ಲಿ ಸಂಕಲ್ಪಿಸಿದ ಯಾಗಕ್ಕೆ ಭಂಗವೆ ? ಇದೊ, ನೋಡು. ಈ ಕೃಷ್ಣನಲ್ಲಿ ಉಪಾಯವೂ, ನನ್ನಲ್ಲಿ ಪರಾಕ್ರಮವೂ, ಧನಂಜಯ, ವಿಜಯ ಎಂದು ಮುಂತಾಗಿ ಕರೆಯಲ್ಪಡುವ ಅರ್ಜುನನಲ್ಲಿ ಜಯವೂ ಸಿದ್ಧವಾಗಿವೆ. ಒಡೆಯಾ, ಕೃಷ್ಣನ ಕೃಪೆಯೊಂದಿದ್ದರೆ ಜರಾಸಂಧನು ಅದೆಷ್ಟು ಬಲವಂತನಾಗಿದ್ದರೂ ಕೂಡ ಅವನನ್ನು ಕೊಂದು ದಿಗ್ವಿಜಯ ಕಾಲದಲ್ಲಿ ಸಮಸ್ತ ರಾಜರನ್ನೂ ನಿನ್ನ ಆಶ್ರಿತರನ್ನಾಗಿ ಮಾಡುತ್ತೇನೆ. ಯಾಗದ ಕೆಲಸಕ್ಕೆ ಋಷಿಗಳೇ ಮೊದಲಾದವರು ಯಾರು ಬೇಕೋ ಅವರನ್ನು ಕರೆಸು" ಎಂದು ಮಹತ್ವದ ಮಾತುಗಳನ್ನಾಡಿದನು.

ರಮೆ:– ನಿಮ್ಮ ಭೀಮನು ಆಡಿದ ಮಾತುಗಳಾದುದರಿಂದ ಅವು "ಮಹತ್ವದವು" ಅಂತಲೊ ? ಅಥವಾ ಭೀಮನು "ಮಹತ್ವ"ದ ಮಾತನ್ನು ಮಾತ್ರ ಆಡುವದೆಂತಲೊ ? ಇಲ್ಲಿ ಅವನಾಡಿದ ಮಾತುಗಳು ಅದೇನಪ್ಪಾ, ಅಂತಹ ಮಹತ್ವದಿಂದ ಕೂಡಿದ್ದುದು ?

ಮುರಳಿ:– ಕೇಳು, ಕೇಳು. ಒಬ್ಬಾತನ ವ್ಯಕ್ತಿತ್ವವನ್ನು ವಿಮರ್ಶೆ ಮಾಡುವಾಗ ಕೇವಲ ಅವನ ಕೃತಿಗಳನ್ನು ವಿಮರ್ಶೆ ಮಾಡುವದಕ್ಕಿಂತಲೂ ಅವನ ಮನಸ್ಸಿನ ರಚನೆಯನ್ನು ಹೊರಗೆ ತೋರಿಸುವಂತಹ ಸಂದರ್ಭಗಳಲ್ಲಿ ಅವನು ಆಡುವ ಮಾತುಗಳನ್ನು ವಿಮರ್ಶಿಸುವದು ಅವಶ್ಯವಾಗುತ್ತದೆ. ಶ್ಯಾವಿಗೆಯನ್ನು ಮಾಡಿ ತಿನ್ನಬೇಕೆಂದು ಬಹಳ ದಿನಗಳಿಂದ ಹಂಬಲಿಸುತ್ತಿದ್ದ ನೀನು ಶ್ಯಾವಿಗೆಯನ್ನು ಮಾಡಲು ಅದರ ಒರಳು ಇಲ್ಲದೆ ಪರಿತಪಿಸುತ್ತಿದ್ದಾಗ ಪಕ್ಕದ ಮನೆಯ ಶಾಂತಮ್ಮ "ನಾನು ಒರಳು ಕೊಡುತ್ತೇನೆ, ಶ್ಯಾವಿಗೆ ಮಾಡಿ" ಎಂದು ಹೇಳಿದಾಗ ನೀನು ಅವರನ್ನು ಎಷ್ಟು ಕೊಂಡಾಡಿದೆ ! ಸ್ವಭಾವತಃ ಮಹಾ ಧರ್ಮಾತ್ಮನಾದ ಯುಧಿಷ್ಠಿರನು ತನ್ನ ತೀರಿ ಹೋದ ತಂದೆಗೆ ಸದ್ಗತಿಯನ್ನು ಕೊಡಿಸುವದಕ್ಕಾಗಿ ತಾನು ರಾಜಸೂಯ ಯಾಗ ಮಾಡಬೇಕೆಂದು ಬಹಳ ಬಯಸಿದಾಗ ತನ್ನ ಆಪ್ತೇಷ್ಟರು ಮತ್ತು ಸಾಕ್ಷಾತ್ ಕೃಷ್ಣ ಕೂಡ ತನಗೆ ಆ ಯಾಗವನ್ನು ನಡೆಸಲು ಸಾಧ್ಯವಾಗಲಾರದೆಂದು ಹೇಳಿದಾಗ ಅವನ ಮನಸ್ಸಿಗೆ ಎಷ್ಟು ವ್ಯಥೆಯಾಗಿರಬಹುದೆಂಬದನ್ನು ಊಹಿಸಿಕೊಳ್ಳಬಲ್ಲೆಯಷ್ಟೆ ? ತಾನೊಬ್ಬ ಸಾರ್ವಭೌಮನಾಗಿದ್ದೂ ಕೂಡ, ತನಗೆ ಭೀಮಾರ್ಜುನರಂತಹ ಬಲಿಷ್ಠ ತಮ್ಮಂದಿರಿದ್ದೂ ಕೂಡ, ಅನೇಕ ಬಂಧು ಬಾಂಧವರು, ಹಾಗೂ ಸಾಲದುದಕ್ಕೆ ಆಗಿನ ಕಾಲದಲ್ಲಿಯೇ ತನ್ನ ಹಲವು ಕಾರ್ಯಗಳಿಂದ ಆಗಲೇ ಲೋಕಪ್ರಸಿದ್ಧಿ ಪಡೆ

ದಿದ್ದ ಸಾಕ್ಷಾತ್ ಕೃಷ್ಣ–ಇವರುಗಳೆಲ್ಲರೂ ತನ್ನ ಭಾಗಕ್ಕೆ ಇದ್ದು ಕೂಡ ನಾರದರು ಸೂಚಿಸಿ ಹೋದ ಈ ಯಾಗವನ್ನು ತನ್ನ ತಂದೆಗಾಗಿ ತಾನು ಮಾಡಲಾರದೆ ಹೋದೆನಲ್ಲಾ ಎಂದು ಅವನ ಧರ್ಮನಿಷ್ಠ ಹೃದಯವು ಎಷ್ಟು ನೊಂದುಕೊಂಡಿರಬಹುದು ಎಂಬದನ್ನು ನೀನು ಕಲ್ಪಿಸಿಕೊಳ್ಳಬೇಕು. ಹೀಗೆ ತನ್ನವರೆಲ್ಲರೂ ಸೇರಿದ ಸಭೆಯಲ್ಲಿ ತನ್ನ ಸಂಕಲ್ಪಕ್ಕೆ ದೊಡ್ಡ ಭಂಗ ಬಂದು ಅಲ್ಲಿ ತೀವ್ರ ನಿರಾಶೆಯ ವಾತಾವರಣ ಮೂಡಿದ್ದಾಗ ಆ ವಾತಾವರಣವನ್ನೇ ಬದಲಾಯಿಸಿ "ನೀನು ಯಾಗಕ್ಕಾಗಿ ಋಷಿಗಳನ್ನು ಕರೆಸು" ಎಂದು ಹೇಳುವಂತಹ ಆಶಾದಾಯಕ ವಾತಾವರಣವನ್ನು ನಿರ್ಮಿಸುವವನು ಅಂತರ್ಯದಲ್ಲಿ ಒಬ್ಬ ಪ್ರಚಂಡನಾಗಿರಲೇಬೇಕು. ಯುಧಿಷ್ಠಿರನಂತಹ ಒಬ್ಬ ಪುಣ್ಯಾತ್ಮನಿಗಾದ ನಿರಾಶೆಯನ್ನು ನೋಡಿ ಸಹಿಸಲಾರದ ಭೀಮನು ತನ್ನ ಅಣ್ಣನ ಸುಖಕ್ಕಾಗಿ, ಅವನ ಸಂಕಲ್ಪ ನೆರವೇರುವದಕ್ಕಾಗಿ ತನ್ನ ಪರಾಕ್ರಮವನ್ನು ಧಾರೆ ಎರೆಯಲು ಹೊರಟ ಅವನ ಸಂಕಲ್ಪ ಶಕ್ತಿ ಮಹಾಭಾರತದಲ್ಲಿ ಕೃಷ್ಣನಿಗೊಬ್ಬನಿಗಲ್ಲದೆ ಬೇರೆ ಯಾರಿಗೂ ಇರಲಿಲ್ಲ ಎಂಬದನ್ನು ಮುಂದಿನ ಇನ್ನೂ ಹಲವು ಘಟನೆಗಳಿಂದ ನಾವು ತಿಳಿದು ಕೊಳ್ಳಬಹುದು.

ರಮೆ:– ನಿಮ್ಮ ವಾದವನ್ನು ಸ್ವಲ್ಪಮಟ್ಟಿಗೆ ಒಪ್ಪಿಕೊಳ್ಳಬೇಕಾದದು ಇಲ್ಲಿರುವ ಪರಿಸ್ಥಿತಿಯಿಂದಾಗಿ ಅಲ್ಲ, ಕೇವಲ ನಿಮ್ಮ ಮಾತಿನ ರಭಸದಿಂದಾಗಿ.

ಮುರಳಿ:– ಏಕೆ ಹಾಗನ್ನುತ್ತೀ ?

ರಮೆ:– ಪುಣ್ಯಾತ್ಮನಾದ ಅಣ್ಣನಿಗೆ ದುಃಖವನ್ನುಂಟುಮಾಡುವ ನಿರಾಶೆಯ ವಾತಾವರಣವನ್ನು ಭೀಮನು ಬದಲಿಸಿದ ಎನ್ನುವದು ಅವನ ಬಗೆಗೆ ನಾವು ಹೇಳಬಲ್ಲ ಆದರದ ಮಾತುಗಳಿಗೆ ಅವಕಾಶ ಮಾಡಿಕೊಡಬಹುದಾದರೂ ಕೂಡ, ಯಾವ ಕಾರ್ಯವು ಕೇವಲ ಅಸಾಧ್ಯ ಎಂದು ಪಾಂಡವರ ಆಪ್ತೇಷ್ಟರು–ಅದರಲ್ಲಿಯೂ ರಾಜತಂತ್ರದಲ್ಲಿ ನಿಪುಣನಾದ ಸಾಕ್ಷಾತ್ ಕೃಷ್ಣನೇ ಹೇಳಿದ್ದಾನೋ, ಅದನ್ನು ತಾನು ಮಾಡಿಬಿಡುತ್ತೇನೆ ಎಂದು ಹೇಳುವದು ಭೀಮನಿಗೆ ಮಾತ್ರ ಉಚಿತವಾದ ಉದ್ಧಟತನ, ಪರಿಸ್ಥಿತಿಯನ್ನು ತಿಳಿದುಕೊಳ್ಳಲಾರದೆ ಕೆಲಸಕ್ಕೆ ಕೈ ಹಾಕುವ ಮೂರ್ಖತನ ಹಾಗೂ ತಾನೊಬ್ಬ ಮಹಾವೀರನೆಂದು ತಿಳಿದುಕೊಂಡಿರುವ ದುರಹಂಕಾರ ಎಂಬದನ್ನೂ ನೀವೇಕೆ ಒಪ್ಪಬಾರದು ?

ಮುರಳಿ:– ನಿನ್ನಂತಹ ಸುಂದರಿ ಅಲ್ಪಸ್ವಲ್ಪವಾದರೂ ಬುದ್ಧಿವಂತಿಕೆಯನ್ನು ಸೂಸುವ ಇಂತಹ ಸವಾಲನ್ನು ಹಾಕುವಾಗ ಅದನ್ನು ಒಪ್ಪಿಕೊಂಡುಬಿಡುವದು ಸುಖದ ಹಾದಿ ಎಂದು ಕೆಲವೊಮ್ಮೆ ಅನಿಸುವದಾದರೂ ಹಾಗೆ ಮಾಡುವದು ಸತ್ಯಕ್ಕೆ ಅಪಚಾರವಾಗುತ್ತದೆ ಎಂಬದರಿಂದಾಗಿ ಅದನ್ನು ಒಪ್ಪಿಕೊಳ್ಳದಿರಬೇಕಾಗುತ್ತದೆ.

ಭೀಮನ ಮಾತುಗಳನ್ನು ನೀನು ಸೂಕ್ಷ್ಮವಾಗಿ ಪರಿಶೀಲನೆ ಮಾಡಿರಲಿಕ್ಕಿಲ್ಲ. ಎಂತಹ ದುರ್ಜಯವಾದ ಕೆಲಸವಾದರೂ ಅದನ್ನು ಉಪಾಯಗಳಿಂದ ಸಾಧಿಸ ಬೇಕು ಎಂದು ಭೀಮನು ಸೂಚಿಸುತ್ತಾನೆ. ಪ್ರತಿಬಾರಿಯೂ ನೇರವಾದ ಹೋರಾಟ ವನ್ನೇ ಅವನು ಆಧರಿಸಿರಲಿಲ್ಲ ಎಂಬ ಇಲ್ಲಿನ ಧ್ವನಿ ಭೀಮನ ಕುರಿತು ಬಹಳ ತಿಳಿಸುತ್ತದೆ. ಜರಾಸಂಧನನ್ನು ಗೆಲ್ಲುವದು ಅಸಾಧ್ಯವೆಂಬ ಕೃಷ್ಣನ ಮಾತನ್ನು ಈ ಮೂಲಕ ಅವನು ಒಪ್ಪಿಕೊಳ್ಳುತ್ತಾನೆ. ಕೃಷ್ಣನು ಹೇಳಿದುದು ಸುಳ್ಳೆಂದೂ ತಾನು ಜರಾಸಂಧನನ್ನು ಗೆದ್ದುಬಿಡುತ್ತೇನೆಂದೂ ಅವನು ಕೊಚ್ಚಿಕೊಳ್ಳುವದಿಲ್ಲ. ಆದರೆ ಕೃಷ್ಣನ ಮಾತಿನಂತೆ ಜರಾಸಂಧನು ದುರ್ಜಯನಾದರೂ ಕೂಡ ಅವನನ್ನು ಉಪಾಯದಿಂದ ಗೆಲ್ಲಬೇಕು ಎಂದು ಸೂಚಿಸುತ್ತಾನೆ. ಆ ಉಪಾಯ ತಮ್ಮಲ್ಲಿ ಯಾರಲ್ಲಿಯೂ ಇಲ್ಲವೆಂದೂ, ಕೃಷ್ಣನಲ್ಲಿ ಮಾತ್ರ ಅದು ಇದೆಯೆಂದೂ ಸೂಚಿಸಿ ಆ ಕುರಿತು ಕೃಷ್ಣನ ಕೃಪೆಯನ್ನೂ ಕೋರುತ್ತಾನೆ. ಕೃಷ್ಣನೊಂದಿಗೆ ಸಖ್ಯವನ್ನು ಬೆಳೆಸಿ ಓಡಾಡುತ್ತಿದ್ದವನು ಅರ್ಜುನನಾದರೂ ಕೃಷ್ಣನ ಸಾಮರ್ಥ್ಯ, ಮಹತ್ವ, ಮೌಲ್ಯಗಳನ್ನು ಭೀಮನು ದೂರದಿಂದಲೇ ಕಂಡು ತಿಳಿದುಕೊಂಡಿದ್ದ ಎಂಬದು ಇವರಿಂದ ಸ್ಪಷ್ಟವಾಗುತ್ತದೆ. ಯುಧಿಷ್ಠಿರನಿಗೆ ತನ್ನಂತಹ ವೀರ ತಮ್ಮನಿದ್ದೂ, ಕೃಷ್ಣನಂತಹ ಕುಶಲಿಯ ಸಹಾಯವಿದ್ದೂ ಅವನ ಸಂಕಲ್ಪವು ಹಾಳಾಗಬಾರದೆಂಬ ದಕ್ಕಾಗಿ ಭೀಮನು ತನ್ನ ಪರಾಕ್ರಮವನ್ನು ಅಣ್ಣನಿಗಾಗಿ ವಿನಿಯೋಗಿಸಲು ತಾನು ಸಿದ್ಧನಾಗಿರುವದನ್ನು ಘೋಷಿಸುವದರೊಂದಿಗೇ, ತಮಗೆ ಅವಶ್ಯವಾದ ಕೃಷ್ಣನ ಸಹಾಯ, ಕೃಪೆಗಳನ್ನೂ ತಮ್ಮ ಪರವಾಗಿ ಈ ರೀತಿಯಲ್ಲಿ ಸೆಳೆದುಕೊಳ್ಳುತ್ತಿದ್ದಾನೆ.

ಜೀವನದಲ್ಲಿ ಮಹತ್ಕಾರ್ಯಗಳನ್ನು ಸಾಧಿಸಬಲ್ಲವರು ಮಾತ್ರವೇ ಈ ರೀತಿ ಯಾಗಿ ವಿಷಮ ಪರಿಸ್ಥಿತಿಯನ್ನೂ ಬದಲಾಯಿಸಲು ಸಮರ್ಥರಾಗುತ್ತಾರೆ. ಪರಿಸ್ಥಿತಿಯ ವಿಷಮತೆಯಿಂದ ಕಂಗಾಲಾಗದೆ ಅದನ್ನು ಅನುಕೂಲಕರವಾದ ರೀತಿಗೆ ಬದಲಾಯಿಸಲು ಏನೆಲ್ಲ ಬೇಕೋ ಅದನ್ನು ಸರಿಯಾಗಿ ಅರಿತುಕೊಂಡು, ಹಾಗೆ ಬೇಕಾದುದನ್ನು ಒದಗಿಸಿಕೊಳ್ಳುವ ಜಾಣ್ಮೆ ಮಹಾನಾಯಕರಿಗೆ ಮಾತ್ರ ಲಭ್ಯವಾಗಿರುತ್ತದೆ. ಭೀಮನಲ್ಲಿ........

ರಮೆ:– ....ಅಯ್ಯೋ ಉಪನ್ಯಾಸ ಸಾಕಪ್ಪಾ. ಹೇಳಿದುದನ್ನೇ ತಿರುಗಿಸಿ, ಮುರುಗಿಸಿ ಅದೆಷ್ಟು ಬಾರಿ ಹೇಳಬೇಕು, ಹೇಳಿ! ಆಯಿತು. ಭೀಮ ಮಹಾ ನಾಯಕ, ಮಹಾವೀರ, ಮಹಾಬುದ್ಧಿವಂತ, ಮಹಾಚತುರ, ಮಹಾ ಕರುಣಿ, ಮಹಾಭಕ್ತ ಎಲ್ಲ ಹೌದು. ಏನೋ ಒಂದು ಸಂಶಯ ಬಂದು ಏನಾದರೂ ಕೇಳಿ ಬಿಟ್ಟರೆ ಸಾಕುಮಾಡಿಬಿಡುತ್ತೀರಿ.

ಮುರಳಿ:– ಏನಮ್ಮಾ ಮಾಡೋದು! ಸೂಜಿ ಮೊನೆಯಷ್ಟೇ ಸಣ್ಣದಾದರೂ ತೂತವಿರುವ ಫುಟ್‌ಬಾಲ್ ಸಿಕ್ಕಿದವನ ಪಾಡೇ ಹೀಗೆ. ಗಾಳಿ ಹೊಡೆಯೋದು,

ಹೊಡೆಯೋದು, ಹೊಡೆಯೋದೆ. ಗಾಳಿ ತುಂಬಿದಂತೆ ಕಾಣಿಸುತ್ತದೆಯೇ ಹೊರತು, ಸ್ವಲ್ಪ ಹೊತ್ತು ಬಿಟ್ಟಮೇಲೆ ಪುನಃ ಖಾಲಿ. ಸ್ವಲ್ಪ ತುಂಬ ಹೊತ್ತು ಗಾಳಿ ಇರಲಿ ಅಂತ ಒಮ್ಮೆ ಗಾಳಿ ಹೊಡೆಯುವಾಗಲೇ, ಅವಶ್ಯವಾದುದಕ್ಕಿಂತ ಒಂದಷ್ಟು ಹೆಚ್ಚಿಗೇನೇ ಹೊಡೆದುಬಿಡೋದು !

ರಮೆ:- ನನ್ನ ತಲೆ ತೂತಾದ ಫುಟ್‌ಬಾಲ್ ಆದರೆ ನಿಮ್ಮ ಬುದ್ಧಿ ಕೆಟ್ಟು ಹೋದ ಅಲಾರಂ ಗಡಿಯಾರದಂತೆ. ಮಲಗಿದ್ದವರನ್ನು ಏಳಿಸುವ ಅದರ ಉದ್ದೇಶ ಪೂರೈಕೆಯಾದ ಮೇಲೂ ಅದು ತಲೆ ಚಿಟ್ಟು ಹಿಡಿಸುವಂತೆ ಹೊಡೆದುಕೊಳ್ಳುತ್ತಾ ಇರುತ್ತದೆ.

ಮುರಳಿ:- ಆಗಲಿ. ನನ್ನ ವಾಯುವ್ಯಾಸ್ತ್ರವನ್ನು ನಿನ್ನ ಘಂಟಾಶಕ್ತಿಯಿಂದ ನಿಷ್ಫಲಗೊಳಿಸಿದೆ. ಯುದ್ಧ ನಿಲ್ಲಿಸಿ ಕತೆ ಮುಂದುವರಿಸೋಣ.

ರಮೆ:- ಹಾಗೆ ದಾರಿಗೆ ಬನ್ನಿ.

ಮುರಳಿ:- ಬಂದೆ. ನನ್ನ ಹಿಂದೆಯೇ ನೀನೂ ಬಾ. ಕೇಳು. ಭೀಮನ ಈ ಮಾತನ್ನು ಅರ್ಜುನನೂ ಸಮರ್ಥಿಸಿದನು. ತನ್ನ ಉಪಾಯ ಫಲಿಸಿದುದರಿಂದ ಕೃಷ್ಣನೂ ಮನಸ್ಸಿನಲ್ಲಿ ಸಂತೋಷಗೊಂಡು............

ರಮೆ:- ಏನು ಉಪಾಯ ಇಲ್ಲಿ ?

ಮುರಳಿ:- ಕೃಷ್ಣನ ಜೀವನ ಚರಿತ್ರೆಯನ್ನು ನೀನು ತಿಳಿದುಕೊಂಡಿದ್ದರೆ ನಿನಗೆ ಗೊತ್ತಾಗುತ್ತಿತ್ತು. ಮಾನವತೆಯ ಅತ್ಯಂತಕ ಪರಿಪೂರ್ಣ ಸ್ಥಿತಿಯ ಆವಿರ್ಭಾವ ಕೃಷ್ಣ ಎಂಬ ಹೆಸರಿನಲ್ಲಿ ಆಗಿದೆ. ಕಾರ್ಯದಲ್ಲಿ, ನಡತೆಯಲ್ಲಿ, ಮಾತಿನಲ್ಲಿ-ಪ್ರತಿಯೊಂದರಲ್ಲಿಯೂ ಅವನದು ಲೋಕಕ್ಕೆ ಆದರ್ಶವಾದ ಗುಣ. ಅವನು ರಾಜತಂತ್ರ ನಿಪುಣನೇ ಅಲ್ಲ, ಮಹಾನ್ ಮನಶ್ಶಾಸ್ತ್ರಜ್ಞನೂ ಆಗಿದ್ದನು. ಯಾವ ಯಾವ ವ್ಯಕ್ತಿಯ ಗುಣ ಹೇಗೆ, ಹೇಗಿದೆ, ಯಾರ ಬಲ ಎಷ್ಟಿದೆ, ಯಾರ ದೌರ್ಬಲ್ಯ ಯಾವದು ಎಂಬದನ್ನೆಲ್ಲ ಬಹಳ ಸೂಕ್ಷ್ಮವಾಗಿ ತಿಳಿದುಕೊಳ್ಳಬಲ್ಲ ಪ್ರಚಂಡ ಮೇಧಾವಿ ಅವನು. ಸ್ತ್ರೀಯರಿಗೆ ಅವರ ಆರ್ತತೆಯ ಕಾಲದಲ್ಲಿ ರಕ್ಷಣೆಯ ಭರವಸೆಯನ್ನು ಕೊಟ್ಟರೆ ಅವರನ್ನು ಹೇಗೆ ತನ್ನಲ್ಲಿ ಶರಣುಗೊಳಿಸಬಹುದೆಂದು ತಿಳಿದು ನಡೆದುಕೊಳ್ಳುತ್ತಿದ್ದನೋ, ಯುಧಿಷ್ಠಿರನಿಗೆ ಕೇವಲ ಗಂಭೀರವಾದ ಸಾಂತ್ವನ ನೀಡಿದರೆ ಅವನೂ ತೃಪ್ತನಾಗುತ್ತಾನೆಂದು ತಿಳಿದಿದ್ದನು. ಅರ್ಜುನನೊಂದಿಗೆ ಸದಾಕಾಲ ತಾನೇ ಸ್ವತಃ ಇರುತ್ತಿದ್ದು ಅವನಿಗೆ ಆಗಾಗ ಮಾರ್ಗದರ್ಶನ ನೀಡಿದರೆ ಮಾತ್ರ ಅವನಿಂದ ದೊಡ್ಡ ಕೆಲಸಗಳನ್ನು ಮಾಡಿಸಬಹುದೆಂದು ಅರಿತಿದ್ದ ಅವನು ಭೀಮನ ಮನೋಧೃತಿ ಉದ್ರೇಕಗೊಳ್ಳುವಂತೆ ಅವನನ್ನು ಕೆಣಕಿದರೆ ಅವನು ಕಾರ್ಯ ಸಾಧನೆ ಮಾಡುವವನೆಂದೂ ತಿಳಿದಿ

ದ್ದನು. ಕರ್ಣನನ್ನು ಭೇದದಲ್ಲಿ, ದುರ್ಯೋಧನನನ್ನು ರಾಜತಂತ್ರದಲ್ಲಿ, ಭೀಷ್ಮದ್ರೋಣರನ್ನು ಅವರ ವಾತ್ಸಲ್ಯ ಗುಣವನ್ನು ಬಳಸಿಕೊಂಡು, ಶಿಶುಪಾಲ ನನ್ನು ಪರಾಕ್ರಮದಲ್ಲಿ–ಹೀಗೆ ಒಬ್ಬೊಬ್ಬರನ್ನೂ ಒಂದೊಂದು ವಿಧದಿಂದ ಗೆದ್ದ ನಿಪುಣ ಕೃಷ್ಣ. ಪ್ರಚಂಡ ಮನೋ ನಿಶ್ಚಯ ಗುಣವಿದ್ದ ಭೀಮನಿಗೆ ಯಾವ ಕೆಲಸವನ್ನೇ ಆದರೂ ಅದು ಅವನಿಂದ ಅಸಾಧ್ಯ ಎಂಬ ಸವಾಲನ್ನು ಹಾಕಿದರೆ ಅವನು ತನ್ನ ಪ್ರಾಣವನ್ನೇ ಫಣವನ್ನಾಗಿಟ್ಟು ಆ ಕಾರ್ಯ ಸಾಧನೆಗೆ ಕೈಹಾಕುತ್ತಾ ನೆಂಬ ವಿಷಯ ಕೃಷ್ಣನಿಗೆ ತಿಳಿದಿದ್ದುದರಿಂದಲೇ ಜರಾಸಂಧನ ಅಜೇಯತ್ವವನ್ನು ಅಷ್ಟರಮಟ್ಟಿಗೆ ವಿವರಿಸಿ ಅವನನ್ನು ಗೆಲ್ಲುವದು ಪಾಂಡವರಿಂದ–ಭೀಮನಿಂದ ಎಂದು ಸ್ಪಷ್ಟವಾಗುವಂತೆ–ಅಸಾಧ್ಯ ಎಂದು ಅವನು ಹೇಳಿದುದು.

ರಮೆ:- ಬಹಳ ಹಿಂದೆಯೇ ಅರ್ಥವಾಯಿತು. ಕತೆ ಮುಂದುವರಿಯಲಿ.

ಮುರಳಿ:- ಮಹದಾಜ್ಞೆ. ತನ್ನ ಮಾತಿಗೆ ಭೀಮನ ಪ್ರತಿಕ್ರಿಯೆ ಇಂತಹುದೇ ಬರುತ್ತದೆಂಬದನ್ನು ಊಹಿಸಿದ್ದ ಕೃಷ್ಣನು ಅವನ ನಿರ್ಧಾರಯುತವಾದ ಮಾತು ಗಳಿಂದ ಸಂತೋಷಗೊಂಡು ಯುಧಿಷ್ಠಿರನನ್ನು ಕುರಿತು "ಯುಧಿಷ್ಠಿರಾ, ಜರಾ ಸಂಧನು ತನ್ನ ಬಾಹುಬಲದ ಕೆಚ್ಚಿನಿಂದಾಗಿ ನಿಶ್ಚಯವಾಗಿಯೂ ಬೇರೆಯವ ರೊಡನೆ ಯುದ್ಧವನ್ನು ಅಪೇಕ್ಷಿಸದೆ ಭೀಮನೊಂದಿಗೇ ಯುದ್ಧಕ್ಕೆ ನಿಲ್ಲುವನು. ಜನನಿಬಿಡವಾದ ಲೋಕಕ್ಕೆಲ್ಲ ಯಮನು ಹೇಗೆ ಒಬ್ಬನೇಯೋ ಹಾಗೆ ಮಹಾ ಬಲಾಢ್ಯನಾದ ಭೀಮನು ಜರಾಸಂಧನನ್ನು ಕೊಲ್ಲುವನು. ನಿನಗೆ ಭೀಮನ ಬಲವು ಚೆನ್ನಾಗಿ ತಿಳಿದಿದ್ದರೆ ಭೀಮಾರ್ಜುನರನ್ನು ನನ್ನ ಸಂಗಡ ಕಳುಹಿಸು. ವಿಚಿತ್ರ ರೀತಿಯಲ್ಲಿ ಹುಟ್ಟಿ ಅಜೇಯನಾಗಿ ಬೆಳೆದಿರುವ ಜರಾಸಂಧನನ್ನು ವಧಿಸಲು ಭೀಮ ನಿಗೆ ವೀರ ಸೇಸೆಯನ್ನಿಕ್ಕು" ಎಂದನು. ಯುಧಿಷ್ಠಿರನಿಗೆ ಭೀಮ, ಜರಾಸಂಧರ ಬಲಾಬಲಗಳು ತಿಳಿದಿದ್ದಿರಲಿ, ಇಲ್ಲದಿರಲಿ, ಕೃಷ್ಣನು ಸೂಚಿಸಿದ ಮೇಲೆ ಅವನು ಹಿಂದೆ–ಮುಂದೆ ನೋಡುವಂತೆಯೇ ಇರಲಿಲ್ಲ.

ಕೃಷ್ಣ, ಭೀಮ, ಅರ್ಜುನರು ಸ್ನಾತಕ ಬ್ರಾಹ್ಮಣರ ವೇಷವನ್ನು ಧರಿಸಿ ಒಂದು ಶುಭ ಮುಹೂರ್ತದಲ್ಲಿ ಚತುರಂಗಬಲ ಸಮೇತರಾಗಿ ಹೊರಟು ಐಶ್ವರ್ಯ ದಿಂದ ತುಂಬಿದ್ದ ಮಗಧ ದೇಶವನ್ನು ನೋಡುತ್ತಾ ಜರಾಸಂಧನ ಪಟ್ಟಣವನ್ನು ತಲಪಿದರು. ಪಟ್ಟಣದ ಸಮೀಪದ ಒಂದು ಗಿರಿಯ ಮೇಲಿದ್ದ ಮೂರು ದೊಡ್ಡ ಭೇರಿಗಳನ್ನು ನಡುರಾತ್ರಿಯಲ್ಲಿ ಹೊಡೆದು ಪುಡಿ ಪುಡಿ ಮಾಡಿ ಜರಾಸಂಧನೊಡನೆ ತಾವು ಕಾಲು ಕೆರೆದು ಕಲಹವನ್ನಪೇಕ್ಷಿಸುತ್ತಿರುವದಕ್ಕೆ ನಾಂದಿ ಹಾಡಿದರು. ಅಲ್ಲಿಂದ ಮುಂದುವರಿದು ಪಟ್ಟಣವನ್ನು ಪ್ರವೇಶಿಸಿ ಹೋಗುತ್ತಿದ್ದಂತೆಯೇ ದಾರಿಯುದ್ದಕ್ಕೂ ದಾಂಧಲೆಯನ್ನೆಬ್ಬಿಸಿ ಅಡ್ಡ ಬಂದವರನ್ನು ಕೊಂದು ಉರುಳಿಸುತ್ತಾ ಜರಾಸಂಧನ ಅರಮನೆಯನ್ನು ಅದರ ಪಶ್ಚಿಮ ದ್ವಾರದ ಮೂಲಕ ಪ್ರವೇಶಿಸಿದರು.

ರಮೆ:– ಈ ಪುಂಡಾಟಗಳೆಲ್ಲ ಏಕೆ ?

ಮುರಳಿ:– ಜರಾಸಂಧನನ್ನು ರೊಚ್ಚಿಗೆಬ್ಬಿಸುವದಕ್ಕಾಗಿ........ಕೇಳು. ಈ ಕೋಲಾಹಲದಿಂದ ಎಚ್ಚೆತ್ತ ಜರಾಸಂಧನು ಭೇರಿಗಳು ಒಡೆಯಲ್ಪಟ್ಟುದು ಅಪ ಶಕುನವೆಂದು ಶಾಸ್ತ್ರಜ್ಞರಿಂದ ತಿಳಿದು ಅದಕ್ಕಾಗಿ ಶಾಂತಿಕ್ರಿಯೆಗಳನ್ನು ಮಾಡುವ ಭರದಲ್ಲಿದ್ದನು. ಆ ವೇಳೆಗೆ ಅದ್ವಾರದಿಂದ ಪ್ರವೇಶಿಸಿದ ಈ ಮೂವರನ್ನು ಕಂಡನು. ಭೇರಿಗಳು ಒಡೆದ ಅಪಶಕುನದ ನೆನಪೂ, ಅಪರ ಹೊತ್ತಿನಲ್ಲಿ ಮೂವರ ಅದ್ವಾರ ಪ್ರವೇಶವೂ, ಸಂಶಯುವನ್ನು ಕೆರಳಿಸುವಂತಿದ್ದ ಅವರ ವೇಷವೂ ಅವನನ್ನು ಒಮ್ಮೆಗೆ ಚಕಿತಗೊಳಿಸಿದವು. "ಇಡಿಯ ಭರತ ಖಂಡದ ರಾಜರು ಗಳೆಲ್ಲ ನಾನು ನೋಡಿ ಬಿಟ್ಟವರು. ಇವರ್ಯಾರಿರಬಹುದು ?" ಎಂದು ತರ್ಕಿಸಿ ಅವ ರನ್ನು ಕುರಿತು "ನೀವು ಯಾರು ? ನಿಮ್ಮ ಬರುವಿಕೆಯು ಸಹಜವಾದುದೊ, ಕೃತ್ರಿಮದಿಂದ ಕೂಡಿದುದೊ ? ಅಸಭ್ಯ ರೀತಿಯಲ್ಲಿ ವರ್ತಿಸಿಕೊಂಡು ಏಕೆ ಬಂದಿರಿ ? ನಾನು ನಿಮಗೆ ವಿರೋಧಿಯೆ ? ವಿರೋಧಿಯಾಗಿದ್ದರೆ ಆ ವಿರೋಧಕ್ಕೆ ಕಾರಣವೇನು ? ನೀವು ಯಾರು ಯಾರು ?" ಎಂದು ಪ್ರಶ್ನಿಸಿದನು. ಅವರ ವೇಷವು ಬ್ರಾಹ್ಮಣರದೇ ಆಗಿದ್ದರೂ ಅವರ ವರ್ತನೆಯು ಕೇವಲ ಶತ್ರು ಗಳಿಗೆ ಸಹಜವಾಗಿದ್ದುದರಿಂದ ಅವನು ಶಂಕೆಯಿಂದ ಹೀಗೆ ಪ್ರಶ್ನಿಸಿದ್ದನು.

ಅವನಿಗೆ ಕೃಷ್ಣನು ಉತ್ತರ ಕೊಡುತ್ತಾ "ಅಯ್ಯಾ, ನಾವು ಕ್ಷತ್ರಿಯರು. ನೀನು ನಮಗೆ ವೈರಿಯಾಗಿರುವೆಯಾದ್ದರಿಂದ ನಾವು ವೈರಿಗಳಿಗೆ ಸಹಜವಾಗುವಂತೆ ನಿನ್ನ ಮನೆಯನ್ನು ಅದ್ವಾರದ ಮೂಲಕ ಪ್ರವೇಶಿಸಿ ಬಂದಿದ್ದೇವೆ. ನೀನು ಅನೇಕ ರಾಜರುಗಳನ್ನು ಸೆರೆಯಲ್ಲಿಟ್ಟಿರುವದರಿಂದಾಗಿ ನಮಗೆ ವೈರಿಯಾಗಿದ್ದೀಯೆ. ನಾನು ಕೃಷ್ಣ. ಇವನು ಶತ್ರು ಭಯಂಕರನಾದ ಭೀಮ. ಇವನು ಸತ್ವಶಾಲಿ ಅರ್ಜುನ. ನೀನು ದುಷ್ಟನಾಗಿರುವದರಿಂದ ನಿನ್ನನ್ನು ಕೊಲ್ಲಲು ಬಂದಿದ್ದೇವೆ" ಎಂದನು.

ಈ ಮಾತನ್ನು ಕೇಳಿ ಕೋಪದಿಂದ ಒಮ್ಮೆಗೇ ಕಣ್ಣು ಕೆಂಪಾದ ಜರಾಸಂಧನು ತನ್ನವರಿಗೆ ಅವರನ್ನು ತೋರಿಸುತ್ತಾ ಹೇಳಿದನು – "ಇದೋ, ಇವನೇ ನನ್ನ ಅಳಿಯು ನಾದ ಕಂಸನ ಸೋದರ ಅಳಿಯು, ಕೃಷ್ಣನೆಂಬ ಪುಂಡ; ನನಗೆ ಅನೇಕ ಬಾರಿ ಹೆದರಿ ಓಡಿ ಹೋದ ಹೇಡಿ ಮೊಮ್ಮಗ"! ಹೀಗೆಂದು ಅವನನ್ನು ಮೂದಲಿಸಿ ಅವನತ್ತ ತಿರುಗಿ "ಎಲವೋ ಗೊಲ್ಲ ! ಯುದ್ಧವೆಂದರೆ ಕೊಳಲನ್ನೂದಿ ಗೋಪಿಯರನ್ನು ಮರಳು ಮಾಡಿದಂತೆ ಎಂದು ತಿಳಿದೆಯಾ ? ಒಂದು ಎತ್ತು, ಒಂದು ಹಕ್ಕಿ, ಒಂದು ಹೆಂಗಸು ಮೊದಲಾದವನ್ನು ಕೊಂದ ನೀನೂ ಒಬ್ಬ ವೀರನಾಗಿಬಿಟ್ಟೆ, ಅಲ್ಲವೆ ? ಸುಮ್ಮನೆ ನನ್ನನ್ನು ಕೆಣಕಿ ನೀನು ಈಗ ಕೆಟ್ಟೆ" ಎಂದು ಭಂಗಿಸಿ ಭೀಮಾರ್ಜುನ ರನ್ನು ಕುರಿತು "ರಾಜಪುತ್ರರೆ, ಸಾವನ್ನು ಹುಡುಕಿಕೊಂಡು ಬಂದಿರುವ ಈ ದನ

ಕಾಯುವವನೊಂದಿಗೆ ನೀವು ಸೇರಿಕೊಂಡಿದ್ದೀರಿ. ಇವನಿಗೆ ಮರುಳಾಗಿ ಇವನಿಂದ ಹಾಳಾಗಬೇಡಿ" ಎಂದು ಬುದ್ಧಿ ಹೇಳಲು ಪ್ರಾರಂಭಿಸಿದನು.

ಅವನ ಮಾತನ್ನು ಅಲ್ಲಿಗೇ ತಡೆದು ಭೀಮನು ಅವನನ್ನು ಕುರಿತು "ಎಲವೋ ಜರಾಸಂಧ. ಆಡಂಬರದ ಮಾತುಗಳನ್ನೇ ಆಡಿ ಅಷ್ಟರಿಂದಲೇ ವೀರನಾಗಲು ಹವಣಿಸುತ್ತಿರುವೆಯೇನು ? ನೀನು ತಿಳಿದುಕೊಂಡಿರುವಷ್ಟು ವೀರತನ ನಿನ್ನಲ್ಲಿದ್ದರೆ ಅದನ್ನೀಗ ನಮ್ಮಲ್ಲಿ ತೋರಿಸು. ಹದಿನಾಲ್ಕು ಲೋಕಗಳನ್ನು ಸಂಕಲ್ಪ ಮಾತ್ರ ದಿಂದ ಇಲ್ಲದಂತೆ ಮಾಡಬಲ್ಲ ಕೃಷ್ಣನನ್ನು ಅವಹೇಳನ ಮಾಡುತ್ತಿರುವ ನಿನ್ನ ದೌಷ್ಟ್ಯಕ್ಕೆ ಧಿಕ್ಕಾರವಿರಲಿ" ಎಂದನು.

ರಮೆ:- ಭೀಮನೂ ಇಂತಹ ಗೊಡ್ಡು ಭಕ್ತಿಯನ್ನು ಕೃಷ್ಣನಲ್ಲಿ ಇಟ್ಟಿದ್ದನೊ ?

ಮುರಳಿ:- ಏನು ಗೊಡ್ಡು ಭಕ್ತಿ ?

ರಮೆ:- ಗೊಡ್ಡು ಭಕ್ತಿಯಲ್ಲದೆ ಮತ್ತೇನು ? ಹದಿನಾಲ್ಕು ಲೋಕಗಳನ್ನು, ಅದೂ ಕೇವಲ ಸಂಕಲ್ಪದಿಂದಲೇ ಇಲ್ಲದಂತೆ ಮಾಡುವ ಕೃಷ್ಣನ ಜೊತೆಯಲ್ಲಿ ತಾವಿರುವಾಗ ಅವರಿಗೆ ಈ ಪರದಾಟವೆಲ್ಲ ಏಕೆ ಬೇಕಿತ್ತು ? ಅರಮನೆಯಲ್ಲಿ ಆರಾಮವಾಗಿ ಕುಳಿತುಕೊಂಡು ಕೃಷ್ಣನಿಗೆ ಹೇಳಿ ಅವನಿಂದ ಸಂಕಲ್ಪ ಮಾಡಿಸಿ ಜರಾಸಂಧ ಮೊದಲಾದವರು ಕುಳಿತಲ್ಲಿ ಕುಳಿತಂತೆಯೇ ಟಿಕ್ ಟಿಕ್ ಎಂದು ಸತ್ತುಹೋಗುವಂತೆ ಮಾಡಬಹುದಿತ್ತಲ್ಲ ?

ಮುರಳಿ:- ಮೊಸರಿನಲ್ಲಿ ಗಾಜಿನ ಚೂರು ಸಿಕ್ಕಿದಂತೆ ರಮಾ, ನಿನ್ನ ಮಾತು. ಕೃಷ್ಣನು ಸರ್ವಶಕ್ತನಾದ ಭಗವಂತನ ಅವತಾರ ಎಂದು ತಿಳಿಯುವಷ್ಟು ಸೂಕ್ಷ್ಮಮತಿಯೂ, ವಿಚಾರವಂತನೂ, ಪರಿಶುದ್ಧಾತ್ಮನೂ ಆಗಿದ್ದ ಭೀಮನು, ಮಾನವನು ಸರ್ವ ಪ್ರಯತ್ನಗಳನ್ನೂ ಕೈಗೊಂಡು ಕಾರ್ಯಸಿದ್ಧಿಯ ಫಲಾಫಲಗಳಲ್ಲಿ ವ್ಯಾಮೋಹವಿಲ್ಲದೆ ಇರಬೇಕೇ ಹೊರತು, ಭಗವಂತನೇ ಆದರೂ ಈ ವಿಶ್ವದ ಪ್ರಕೃತಿ ನಿಯಮವನ್ನು ಉಲ್ಲಂಘಿಸಲಾರನು ಎಂದು ತಿಳಿದುಕೊಂಡಿದ್ದ ಕರ್ಮಯೋಗಿಯೂ ಆಗಿದ್ದನು ಎಂಬದನ್ನು ಅವನ ಅನೇಕ ಮಾತು ಮತ್ತು ಕೃತಿಗಳಿಂದ ತಿಳಿಯಬಹುದು. ಗೊಡ್ಡು ಭಕ್ತಿ ಎಂದು ನೀನು ಏನನ್ನು ಕರೆಯುತ್ತೀಯೋ, ಅದನ್ನು ನಂಬಿ ಕ್ರಿಯಾವಿಹೀನನಾಗಿ ಕೈ ತಟ್ಟಿ ಕೂರುವ ಸ್ವಭಾವವೂ ಭೀಮನದಾಗಿರಲಿಲ್ಲ; ಅಥವಾ ಪುರುಷ ಪ್ರಯತ್ನವೇ ಎಲ್ಲವನ್ನೂ ಸಾಧಿಸಬಹುದು ಎಂಬ ದುರಹಂಕಾರದಿಂದ, ಎಲ್ಲ ಪ್ರಯತ್ನಗಳಿಗೂ ಮಿಗಿಲಾದ ದೈವವೆಂಬದಿದೆ ಎನ್ನುವದನ್ನು ನಿರಾಕರಿಸಿ ಕೆಲಸ ಮಾಡುತ್ತಿದ್ದ ಅಸಂಸ್ಕೃತನೂ ಅವನಾಗಿರಲಿಲ್ಲ. ಅವನ ಈ ಗುಣವನ್ನು ಸರಿಯಾಗಿ ತಿಳಿದುಕೊಳ್ಳದೆ........

ರಮೆ:— ಭೀಮನು ಜರಾಸಂಧನನ್ನು ಜರೆದನು. ಆ ಮೇಲೆ?

ಮುರಳಿ:— ಇನ್ನೂ ಚಿಕ್ಕವರೆಂದು ತಾನು ಭೀಮಾರ್ಜುನರಿಗೆ ಬುದ್ಧಿ ಹೇಳಿದುದಕ್ಕೆ ಪ್ರತಿಯಾಗಿ ಭೀಮನಾಡಿದ ಕಠಿಣ ಮಾತುಗಳನ್ನು ಕೇಳಿ ಕೆರಳಿದ ಜರಾಸಂಧನು ಕೋಪದಿಂದ ಕಿಡಿಕಿಡಿಯಾಗಿ ಆ ಮೂವರೂ ಅವರ ಚತುರಂಗಬಲ ಸಮೇತವಾಗಿ ತನ್ನೊಡನೆ ಯುದ್ಧ ಮಾಡಬಹುದೆಂದೂ ತಾನು ಅವರನ್ನು ನಿರ್ನಾಮ ಮಾಡುವದು ನಿಶ್ಚಯವೆಂದೂ ದೃಢವಾಗಿ ಹೇಳಿದನು. ಒಬ್ಬನ ಮೇಲೆ ಮೂವರು ಕೈ ಮಾಡುವದು ಅನುಚಿತವೆಂದೂ ತಾವು ಮೂವರಲ್ಲಿ ಯಾರೊಬ್ಬನೊಂದಿಗಾದರೂ ಜರಾಸಂಧನು ಯುದ್ಧ ಮಾಡಬಹುದಾಗಿಯೂ ಕೃಷ್ಣನು ಅವನಿಗೆ ತಿಳಿಸಿದನು. ವೀರರ ವೀರನಾದ ಜರಾಸಂಧನು ಕೃಷ್ಣನು ತನ್ನಿಂದ ಅನೇಕ ಬಾರಿ ಸೋಲಿಸಲ್ಪಟ್ಟು ಓಡಿ ಹೋದ ರಣ ನಾಟಕ ಪಲಾಯನ ಪಂಡಿತನೆಂದೂ, ಅರ್ಜುನನು ಕೇವಲ ಎಳೆಯುವನಾದ್ದರಿಂದ ತನಗೆ ಸಮಾನನಲ್ಲವೆಂದೂ........

ರಮೆ:— ಕೃಷ್ಣನಿಗೂ ಅರ್ಜುನನಿಗೂ ವಯಸ್ಸಿನಲ್ಲಿ ಬಹಳ ವ್ಯತ್ಯಾಸವಿತ್ತೇನು?

ಮುರಳಿ:— ಇಲ್ಲ. ಆದರೆ ಆಕೃತಿಯಲ್ಲಿ, ಬೆಳವಣಿಗೆಯಲ್ಲಿ ಅವನು ಸ್ವಲ್ಪ ಸಣ್ಣವನಾಗಿ ಕಾಣಿಸುತ್ತಿದ್ದನೆಂದು ನಾವು ಊಹಿಸಬಹುದು.

ರಮೆ:— ಆದರೆ ಅವನು ಕೂಡ ಜರಾಸಂಧನನ್ನು ಸೋಲಿಸಲು ಶಕ್ತ ಎಂದು ಕೃಷ್ಣನು ಹೇಳಿದಂತಾಯಿತಲ್ಲ?

ಮುರಳಿ:— ಹಾಗೆ ಹೇಳಿದಂತಾಗಲಿಲ್ಲ. ಅದಕ್ಕಾಗಿಯೇ ಹಿಂದೆ ನಾನು ಹೇಳಿದುದು—ಇತರರ ವ್ಯಕ್ತಿತ್ವ, ಬಲ, ದೌರ್ಬಲ್ಯಗಳನ್ನು ತಿಳಿದು ವರ್ತಿಸುವದರಲ್ಲಿ ಕೃಷ್ಣನು ಅಸಾಮಾನ್ಯ ಪ್ರೌಢಿಮೆಯನ್ನು ಪಡೆದಿದ್ದನು ಎಂದು. ಜರಾಸಂಧನು ತನ್ನನ್ನೂ ಯುದ್ಧಕ್ಕೆ ಆಹ್ವಾನಿಸಬಹುದು ಎಂದು ಕೃಷ್ಣನು ಹೇಳಿಕೊಳ್ಳುತ್ತಾನೆ. ಆದರೆ ತಾನು ಈ ಹಿಂದೆ ಅನೇಕ ಬಾರಿ ಜರಾಸಂಧನಿಗೆ ಸೋತು ಓಡಿಹೋದುದನ್ನು ಅವನು ಮರೆತಿದ್ದಾನೆ ಎಂದು ಇದರ ಅರ್ಥವಲ್ಲ. ಜರಾಸಂಧನು ಕೇವಲ ವೀರನಷ್ಟೇ ಅಲ್ಲ, ವೀರನ ಗುಣವನ್ನೂ ಪಡೆದಿದ್ದವನು ಎಂಬದನ್ನು ಕೃಷ್ಣನು ಚೆನ್ನಾಗಿ ತಿಳಿದಿದ್ದನು. ವೀರನಾದವನು ತನಗೆ ಸಮಾನರಾದವರೊಂದಿಗೆ ಯುದ್ಧವನ್ನು ಅಪೇಕ್ಷಿಸುತ್ತಾನೆಯೇ ಹೊರತು, ತನಗಿಂತ ದುರ್ಬಲರಲ್ಲಿ ಹೊಡೆದಾಡಲು ಬಯಸುವದಿಲ್ಲ. ಜರಾಸಂಧನಿಗೆ ಹೆದರಿ ಹಲವು ಬಾರಿ ಓಡಿಹೋಗಿದ್ದ ಕೃಷ್ಣನು ಭೀಮನಂತಹ ಬಲಾಢ್ಯನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ಜರಾಸಂಧನನ್ನು ಕೊಲ್ಲಿಸಿದನು" ಎಂಬ ಹೇಡಿತನದ ಲೋಕಾಪವಾದ ತನ್ನ ಮೇಲೆ ಬರಬಾರದೆಂಬದಕ್ಕಾಗಿ ಅವನು

ಅರ್ಜುನನನ್ನೂ ಜೊತೆಯಲ್ಲಿ ಕರೆದೊಯ್ದುದು. ಹಾಗೂ ತಮ್ಮ ಪೈಕಿ ಯಾರೊಂದಿಗಾದರೂ ಜರಾಸಂಧನು ಯುದ್ಧ ಮಾಡಬಹುದೆಂದು ತಿಳಿಸಿದುದು.

ರಮೆ:– ತಾನೇನೋ ಭೀಮನೊಂದಿಗೆ ಹೋಗಬೇಕಾಗಿತ್ತು, ಸರಿ. ಆದರೆ ಅರ್ಜುನನನ್ನು ಅವನೇಕೆ ಜೊತೆಯಲ್ಲಿ ಕರೆದೊಯ್ದುದು? ಹೀಗೆ ಅವನನ್ನು ಕರೆದೊಯ್ಯುವಾಗ ಅವನು ಕೂಡ ಜರಾಸಂಧನ ಸಮಬಲನೆಂದು ಕೃಷ್ಣನು ತಿಳಿದಿದ್ದನು ಎಂದು ಊಹಿಸಲು ಸಾಧ್ಯವಿಲ್ಲವೆ?

ಮುರಳಿ:– ಇಲ್ಲ. ಭೀಮನೊಬ್ಬ ಮಾತ್ರವೇ ಜರಾಸಂಧನನ್ನು ಕೊಲ್ಲಲು ಸಮರ್ಥ ಎಂದು ಕೃಷ್ಣನು ಈ ಹಿಂದೆ ಯುಧಿಷ್ಠಿರನಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. ಆದರೆ, ಕೇವಲ ಜರಾಸಂಧನೇ ಅಲ್ಲದೆ ಅವನಲ್ಲಿರುವ ಇತರ ವೀರರೂ, ಚತುರಂಗ ಬಲವೂ ತಮ್ಮನ್ನೇನಾದರೂ ಎದುರಿಸುವದಾದರೆ ಅವರನ್ನು ತಡೆಯಲು ಬೇಕಾಗುತ್ತದೆ ಎಂಬದಕ್ಕಾಗಿ ಅವನು ಅರ್ಜುನನನ್ನು ಜೊತೆಯಲ್ಲಿ ಒಯ್ದಿರಲು ಸಾಧ್ಯವಿದೆ........

ರಮೆ:– ತಾನು ಕೃಷ್ಣಾರ್ಜುನರಿಬ್ಬರೊಂದಿಗೂ ಯುದ್ಧ ಮಾಡುವದಿಲ್ಲವೆಂದು ಜರಾಸಂಧನು ಹೇಳಿದನು. ಮತ್ತೆ?

ಮುರಳಿ:– ಆದರೆ ಹೇಗೂ ತನ್ನಲ್ಲಿ ಶತ್ರುತ್ವವನ್ನು ಸಾಧಿಸಿ ಮೂವರು ಬಂದು ಯುದ್ಧವನ್ನು ಬೇಡುತ್ತಿದ್ದಾರೆ. ಅವರೊಂದಿಗೆ ಹೋರಾಡಬೇಕಾದುದು ಜರಾಸಂಧನಿಗೆ ಅನಿವಾರ್ಯವಾಗಿತ್ತು. ಹಾಗಾಗಿ ಆ ಮೂವರ ಪೈಕಿ ಭೀಮನ ಮಹದಾಕೃತಿಯನ್ನೂ, ಅವನ ಕೈಯಲ್ಲಿದ್ದ ಮಹಾಗದೆಯನ್ನೂ ನೋಡಿ ಅವನ ಅಸಾಮಾನ್ಯ ಪೌರುಷದ ವೃತ್ತಾಂತವನ್ನು ಈ ಹಿಂದೆ ತಾನು ಕೇಳಿದ್ದುದನ್ನೂ ಸ್ಮರಿಸಿಕೊಂಡು ತಾನು ಅವನೊಂದಿಗೇ ಯುದ್ಧ ಮಾಡುವದಾಗಿ ತಿಳಿಸಿದನು.

ಸರಿ. ಆಗಿನ ಕ್ರಮದಂತೆ ಚಂದನ, ಕರ್ಪೂರ, ಜವಾಜಿ ಮೊದಲಾದ ಸುಗಂಧ ದ್ರವ್ಯಗಳನ್ನೂ, ವೀಳೆಯವನ್ನೂ ಇಬ್ಬರೂ ಉಪಯೋಗಿಸಿಕೊಂಡರು. ಯುದ್ಧಕ್ಕಾಗಿ ತವಕಿಸುತ್ತಿದ್ದ ಭೀಮನು ಜರಾಸಂಧನಿಗೆ ಕತ್ತಿ, ಕೊಡಲಿ, ಬಿಲ್ಲು, ಗದೆ ಮೊದಲಾದ ಯಾವದೇ ಆಯುಧದಿಂದ ತನ್ನೊಡನೆ ಯುದ್ಧ ಮಾಡಬಹುದೆಂದು ತಿಳಿಸಿದನು. ಅದಕ್ಕೆ ಜರಾಸಂಧನು "ಆಯುಧಗಳಿಂದ ಹೊಡೆದಾಡಿ ಗೆಲ್ಲುವ ಶ್ರೇಯಸ್ಸು ಆ ಆಯುಧಗಳಿಗೂ ಸಲ್ಲಬಹುದು. ನೀನು ಬಹಳ ಶರೀರ ದಾರ್ಢ್ಯವುಳ್ಳವನೆಂದು ಕೇಳಿದ್ದೇನೆ. ನೀನು ಕಲಿಭೀಮನೇ ಹೌದೇ ಎಂಬದನ್ನು ಪರೀಕ್ಷಿಸುತ್ತೇನೆ. ಮಲ್ಲಯುದ್ಧಕ್ಕಿಳಿ" ಎಂದನು.

ವಿಶಾಲವಾದ ರಾಜಾಂಗಣವೇ ಕುಸ್ತಿಯ ಕಳನಾಯಿತು. ಪ್ರೇಕ್ಷಕರೂ ಅಸಂಖ್ಯಾತವಾಗಿ ನೆರೆದರು. ಕಾರ್ತಿಕ ಶುದ್ಧ ಪಾಡ್ಯಮಿಯಲ್ಲಿ ಯುದ್ಧವು ಆರಂಭ

ವಾಯಿತು. ರಮಾ, ಮಲ್ಲಯುದ್ಧವನ್ನು ರೋಮಾಂಚನಗೊಂಡು ರೆಪ್ಪೆ ಮುಚ್ಚದೆ, ಉಸಿರನ್ನು ತಡೆ ಹಿಡಿದು ನೋಡಬಹುದೇ ಹೊರತು, ಅದು ಹೇಗೆ ನಡೆಯಿತು ಎಂದು ಯಾರು ತಾನೇ ಬಾಯಿಯಲ್ಲಿ ವಿವರಿಸಬಲ್ಲರು, ಹೇಳು. ಒಂದು ಕಡೆ, ಇಡಿಯ ಭಾರತದಲ್ಲಿಯೇ ಅಜೇಯನೆನಿಸಿ ಎಲ್ಲ ರಾಜರುಗಳಿಗೂ ಸಿಂಹಸ್ವಪ್ನ ದಂತಿದ್ದ ಪ್ರಚಂಡ ಪರಾಕ್ರಮಿ ಜರಾಸಂಧ. ಅವನಿಗೆದುರಾಗಿ ಇನ್ನೂ ತರುಣನಾದ ಹಾಗೂ ತನ್ನ ದೇಹದಾರ್ಢ್ಯದಿಂದ ಇಡಿಯ ಭಾರತದಲ್ಲಿಯೇ ಪ್ರಸಿದ್ಧನಾಗುತ್ತಿದ್ದ ರಣಕಾಮಿಯಾದ ಭೀಮ. ತನ್ನೊಂದಿಗೆ ಸೆಣಸಿ ಹಲವು ಬಾರಿ ಓಡಿಹೋಗಿ ತಾನು ಯಾವನನ್ನು ಕೇವಲ ಗೊಲ್ಲ ಎಂದು ತೃಣೀಕರಿಸಿ ಕಂಡಿದ್ದನೋ ಅಂತಹ ಕೃಷ್ಣನು ಉದ್ಧಟತನದಿಂದ ಭೀಮನನ್ನು ತನ್ನೊಡನೆ ಕರೆತಂದು ಕಾಲು ಕೆರೆದು ಯುದ್ಧಕ್ಕೆ ನಿಂತಿರುವದರಿಂದ ಕೃಷ್ಣನು ಇನ್ನು ಎಂದಿಗೂ ತನ್ನ ತಂಟೆಗೆ ಬಾರ ದಂತೆ ಮಾಡಲು ಅವನ ಕಡೆಯವನಾದ ಭೀಮನನ್ನು ಕೊಂದುಹಾಕಬೇಕೆಂದು ನಿರ್ಧರಿಸಿರುವ ಜರಾಸಂಧ ಒಂದು ಕಡೆ ನಿಂತಿದ್ದಾನೆ. ತನ್ನ ತಂದೆಗೆ ಸದ್ಗತಿ ಯನ್ನು ಕೊಡುವ, ತನ್ನ ಅಣ್ಣನಿಗೆ ಸಂತೋಷವನ್ನುಂಟುಮಾಡುವ ಯಾವ ರಾಜಸೂಯ ಯಾಗ ಮಾಡಲು ಪ್ರಧಾನವಾದ ಅಡ್ಡಿಯಾಗಿರುವ ಜರಾಸಂಧನನ್ನು ಕೊಲ್ಲದಿದ್ದರೆ, ಕೃಷ್ಣನು ಈ ಹಿಂದೆ ಯಾವ ಕಾರ್ಯವು ತಮ್ಮಿಂದ ಅಸಾಧ್ಯವಾದು ದೆಂದು ಹೇಳಿದ್ದನೋ ಅದನ್ನು ಹೇಗಾದರೂ ತಾವು ಸಾಧಿಸುತ್ತೇವೆಂದು ವಾದಿಸಿ ಹೊರಟ ತನ್ನ ನಿರ್ಧಾರವು ನಿಷ್ಫಲವಾಗುವದರಿಂದಾಗಿ ತಾನು ಈಗ ಜರಾಸಂಧ ನನ್ನು ಕೊಂದೇ ತೀರಬೇಕೆಂದು ನಿಶ್ಚಯಿಸಿ ನಿಂತ ಭೀಮನು ಜರಾಸಂಧನನ್ನು ಎದುರಿಸಿದ್ದಾನೆ. ಹೀಗಿರುವಾಗ ಅವರಿಬ್ಬರ ಕದನ ಹೇಗಿರಬಹುದು, ಊಹಿಸಿಕೊ. ಭರತ ಖಂಡವು ಆ ಯುಗದಲ್ಲಿ ಕಂಡ ಇಬ್ಬರು ಅಸಾಮಾನ್ಯ ವೀರರು ಒಬ್ಬರ ನ್ನೊಬ್ಬರು ಎದುರಿಸಿ ನಿಂತಾಗ ಆ ಹೋರಾಟ ಹೇಗಿದ್ದಿರಲಿಕ್ಕಿಲ್ಲ !

ಸಿಡಿಲು ಸಿಡಿಲಿಗೆರಗುವಂತೆ........

ರಮೆ:– ಶಹಭಾಸ್.

ಮುರಳಿ:– ಕೇಳು. ನೀಲಾಚಲ ಪರ್ವತವು ನಿಷಧಾಚಲ ಪರ್ವತದ ಮೇಲೆ ಎರಗುವಂತೆ, ಒಬ್ಬರಿಗೊಬ್ಬರು ಸಿಕ್ಕದ ರೀತಿಯಲ್ಲಿ, ಸಿಕ್ಕಿದಾಗ ಹಲವಾರು ಬಂಧ ಗಳಲ್ಲಿ ಹಿಡಿದು, ಜಟ್ಟಿ ಕಾಳಗದ ಅಂತರಾಳವನ್ನು ಬಗಿದು ಹೊರಗೆಡಹುವಂತೆ ಆ ಜಗಜಟ್ಟಿಗಳಿಬ್ಬರೂ ಸೆಣಸಾಡಿದರು. ಇವರ ಮೈಯಿಂದ ಸುರಿದ ಬೆವರಿ ನಿಂದ ಅಡಿಯ ಧೂಳು ಕೆಸರಾಯಿತು. ಇಬ್ಬರಲ್ಲಿ ಯಾರ ಸತ್ವವೂ ಕುಗ್ಗಲಿಲ್ಲ. ಯಾರ ಸಾರವೂ ತೀರಲಿಲ್ಲ. ಯಾರ ಭುಜಬಲವೂ ಇಳಿಯಲಿಲ್ಲ. ಯಾರ ಸಿಟ್ಟೂ ಆರಲಿಲ್ಲ. ಯಾರ ದರ್ಪವೂ ಕರಗಲಿಲ್ಲ. ಯಾರ ಜಯಾಕಾಂಕ್ಷೆಯೂ ಹಿಂಗಲಿಲ್ಲ. ಎದುರಾಳಿಯ ಸಾವನ್ನೇ ಗುರಿಯಾಗಿಟ್ಟುಕೊಂಡು ಹೊಡೆದಾಡಿ

ದರು, ಆ ಭೀಮ ಮಾಗಧರು. ಕೃಷ್ಣಾರ್ಜುನರು ಭೀಮನನ್ನು ಆಗಾಗ "ಭಲೇ, ಶಹಭಾಸ್, ಭೇಷ್, ಜಗಜಟ್ಟಿಯೇ, ಮಝಪೂತು, ಪರಬಲ ಭಯಂಕರನಾದ ನಿನ್ನ ಪ್ರತಿ ಮಲ್ಲನು ನಿನಗೆ ಎಷ್ಟು ಮಾತ್ರದವನು! ಭಲೆ!" ಎಂದು ಹುರಿದುಂಬಿಸುತ್ತಿದ್ದರು. ಈ ಕಡೆಯಿಂದ ಮಾಗಧನ ವಂದಿಮಾಗದರೂ, ಹೊಗಳು ಭಟ್ಟರೂ ಜರಾಸಂಧನ ಲೋಕ ಪ್ರಸಿದ್ಧವಾದ ಬಿರುದಾವಳಿಗಳನ್ನು ಹಾಡಿ ಹುರಿದುಂಬಿಸುತ್ತಿದ್ದರು. ಇಬ್ಬರೂ ಕ್ಷಣಕಾಲ ದೂರ ನಿಂತು ವೀಳೆಯವನ್ನು ಸೇವಿಸಿ ಪುನಃ ಮುಷ್ಟಾಮುಷ್ಟಿಗೆ ಪ್ರಾರಂಭಿಸಿದರು. ಅಬ್ಬ! ಅದೇನು ಪೆಟ್ಟುಗಳು! ಎದೆಯು ಇಬ್ಭಾಗವಾಗುವಂತೆ, ಮೋರೆಯು ತಿರುಗಿ ಹೋಗುವಂತೆ, ನೆತ್ತಿಯು ಬಾಯಿ ಬಿರಿಯುವಂತೆ, ಗೋಣು ಮುರಿದು ಬೀಳುವಂತೆ ಭೀಕರವಾಗಿ ಹೊಡೆದಾಡಿದರು. ತ್ರೇತೆಯಲ್ಲಿ ರಾವಣ ಹನುಮಂತರು ಹೊಡೆದಾಡಿದಷ್ಟು ಭಯಂಕರವಾಗಿ, ದ್ವಾಪರದಲ್ಲಿ ಕೃಷ್ಣ ಚಾಣೂರರು ಹೊಡೆದಾಡಿದಷ್ಟು ಬಿರುಸಾಗಿ, ನಟರಾಜನ ಕಲ್ಪಾಂತ ನಾಟ್ಯದಷ್ಟು ಭಯಾನಕವಾಗಿ, ಕಾಲಭೈರವನ ಹಣೆಗಣ್ಣಿನಷ್ಟು ಘೋರವಾಗಿ ಬಡಿದಾಡಿದರು. ಇವರ ಹೊಡೆದಾಟವು ಪ್ರೇಕ್ಷಕರ ಸರ್ವ ಚೈತನ್ಯವನ್ನೂ ಅಪಹರಿಸಿ ಅವರನ್ನು ಚಿತ್ರದ ಬೊಂಬೆಗಳಂತೆ ನಿಲ್ಲಿಸಿತ್ತು. ಮಗದ ದೇಶದಲ್ಲಿ ನಿಮಿಷ ನಿಮಿಷಕ್ಕೂ ಕುತೂಹಲವು ಹೆಚ್ಚುತ್ತಿದ್ದಿತು. ಅರ್ಜುನನ ರಕ್ತಕಣಗಳು ಕುದಿಯುತ್ತಿದ್ದವು. ಕೃಷ್ಣನು ಭೀಮ ವಿಜಯದ ನಿಮಿಷವನ್ನು ಕುತೂಹಲದಿಂದ ನಿರೀಕ್ಷಿಸುತ್ತಿದ್ದನು. ಮಗಧ ಪರಿವಾರವು, ಅಜೇಯನೆನಿಸಿ ಶತ್ರುಗಳನ್ನು ಸುಲಭವಾಗಿ ಸೋಲಿಸುತ್ತಿದ್ದ ತಮ್ಮ ಒಡೆಯನು ಗೆಲವಿಗಾಗಿ ಪಡುತ್ತಿರುವ ಪರಿಶ್ರಮವನ್ನು ಕಂಡು ಸಂದೇಹದಿಂದ ಕಳವಳಗೊಂಡಿದ್ದಿತು. ಪಾಂಡವ ಬಲವು ತಮ್ಮ ಒಡೆಯನ ಭೀಮ ಬಲವನ್ನು ಕಂಡು, ತಮ್ಮೊಡನಿದ್ದರೂ ತಾವು ತಿಳಿಯದೆ ಇದ್ದ ಒಂದು ಅದ್ಭುತವನ್ನು ಕಂಡಂತಾಗಿ ದಿಗ್ಭ್ರಾಂತವಾಗಿದ್ದಿತು.

ರಮಾ, ಪರಿಸ್ಥಿತಿಯನ್ನು ಚಿತ್ರಿಸಿಕೊ. ಇಡಿಯ ಭರತಖಂಡವನ್ನೇ ತನ್ನ ಪರಾಕ್ರಮದಿಂದ ಗಡಗಡನೆ ನಡುಗಿಸಿ ಶಿಶುಪಾಲ, ಹಂಸ, ಡಿಂಭಕ, ಕಾಲನೇಮಿ ಮೊದಲಾದ ಅಖಿಲ ಭಾರತ ಪ್ರಸಿದ್ಧಿಯ ಪ್ರಚಂಡ ವೀರರನ್ನೇ ತನ್ನ ವೀರ್ಯಬಲದಿಂದ ತನ್ನ ಆಶ್ರಿತರನ್ನಾಗಿ ಮಾಡಿಕೊಂಡು ಕೃಷ್ಣನಂತಹ ಶಕ್ತನನ್ನೇ ಹಲವು ಬಾರಿ ಸೋಲಿಸಿ ಓಡಿಸಿ ತನಗೆ ಲೋಕದಲ್ಲಿ ಎದುರೇ ಇಲ್ಲವೆಂಬಂತೆ ಸಹಜವಾಗಿ ಮೆರೆದಿದ್ದ ಜರಾಸಂಧನಿಗೆ ಯಾವ ವ್ಯಕ್ತಿಯಿಂದಾಗಿ ಈಗ ಜಯಾಕಾಂಕ್ಷೆಯು ಸಂದೇಹದಲ್ಲಿ ಸಿಕ್ಕಿಕೊಂಡಿತೋ ಅಂತಹ ಪುತ್ರನನ್ನು ಪಡೆದ ಕುಂತಿ ಎಷ್ಟು ಧನ್ಯಳು, ಯೋಚಿಸು. ಇರಲಿ. ಯುದ್ಧಾರಂಭವಾದ ಐದನೆಯ ದಿವಸದಲ್ಲಿ ಕದನವು ಭೀಕರವಾಗಿ ನಡೆಯಿತು. ಎರಡು ಕಡೆಯಿಂದಲೂ ತಯಾರಿಸಿ ಕೊಡುವ

ವೀಳೆಯವನ್ನು ಕೇಳಿಕೊಳ್ಳುವಷ್ಟು ಬಿಡುವಲ್ಲದೆ ಉಳಿದ ಕಾಲದಲ್ಲಿ ಹೋರಾಟವು ನಿರಂತರವಾಗಿ ಸಾಗಿತು.

ರಮೆ:— ಐದು ದಿನವೆ ? ಅನ್ನವಿಲ್ಲದೆ ಹೊಡೆದಾಡುವದೆ ?

ಮುರಳಿ:— ಹೌದು. ಅನ್ನದೊಳಗೆ ಪ್ರಾಣವನ್ನು ಹುದುಗಿಸಿಟ್ಟುಕೊಂಡಿರುವ ಹುಲುಜೀವಿಗಳು ನಾವು. ವೀರರು ತಮ್ಮ ಶರೀರದಲ್ಲಿ ರಕ್ತವಿರುವಷ್ಟು ಕಾಲವೂ ತ್ರಾಣವನ್ನು ಪಡೆದಿರುತ್ತಾರೆ. ಐದಲ್ಲ, ಕೇಳು ಹದಿನಾಲ್ಕನೆಯ ದಿನದಲ್ಲಿ ಜರಾಸಂಧನ ಬಾಹು ಸತ್ವವು ಕುಂದುತ್ತಾ ಬಂದಿತು. ಜಯದಾಸೆಯು ಜಾರಿತು. ಪ್ರತಾಪದ ಕೆಂಪು ಕರಿದಾಗುತ್ತಾ ಬಂದಿತು. ಇದನ್ನು ತಿಳಿದುಕೊಂಡ ಕೃಷ್ಣನು ಭೀಮನಿಗೆ, ಆತನ ತಂದೆಯಾದ ವಾಯುದೇವನನ್ನು ಸ್ತುತಿಸುವಂತೆ ಸೂಚಿಸಿದನು. ಅದೇ ಪ್ರಕಾರ ನಿಶ್ಚಲ ಮನಸ್ಸಿನಿಂದ ವಾಯು ದೇವನನ್ನು ಧ್ಯಾನಿಸುತ್ತಾ, ನೂತನವಾಗಿ ಸತ್ವವನ್ನು ಗಳಿಸಿಕೊಂಡ ಭೀಮನು ಜರಾಸಂಧನನ್ನು ಒಮ್ಮೆಗೇ ಹಿಡಿದು ಗಿರಗಿರನೆ ತಿರುಗಿಸಿ ನೆಲಕ್ಕೆ ಬಡಿದು ಅವನನ್ನು ಕೈಗಳಿಂದ ಕ್ರೂರವಾಗಿ ಮರ್ದಿಸಿ ಒಂದು ಪ್ರಚಂಡವಾದ ಸಿಂಹನಾದವನ್ನು ಮಾಡಿದನು. ಅವನು ಜರಾಸಂಧನನ್ನು ಮುಷ್ಟಿಯಿಂದ ಗುದ್ದುವ ಶಬ್ದವೂ ಅವನ ಸಿಂಹನಾದದ ಘೋರ ಶಬ್ದವೂ ಅಲ್ಲಿದ್ದ ಸಮಸ್ತ ಜೀವಿಗಳಿಗೂ ಅವರ್ಣನೀಯವಾದ ಎದೆ ನಡುಕವನ್ನು ತಂದವು. ಸ್ತ್ರೀಯರಿಗೆ ಗರ್ಭಸ್ರಾವಗಳಾದವು. ಹೀಗೆ ಆವೇಶಪೂರ್ಣನಾದ ಭೀಮನು ಜರಾಸಂಧನ ಎರಡು ಕಾಲುಗಳನ್ನೂ ಹಿಡಿದು ದೇಹವನ್ನು ಸೀಳಿ ಬಿಸಾಡಿದನು. ಆದರೆ ಸೀಳುಗಳು ತಾವಾಗಿಯೇ ಬಂದು ಸೇರಿಕೊಳ್ಳುತ್ತಿದ್ದವು. ಪುನಃ ಸೀಳಿ ಬಿಸುಡಲು ಪುನಃ ಬಂದು ಸೇರಿಕೊಳ್ಳುತ್ತಿದ್ದವು. ಹೀಗೆಯೇ ಅನೇಕ ಬಾರಿ ನಡೆಯಲು ಕೃಷ್ಣನ ಸಲಹೆಯಂತೆ ಭೀಮನು ಸೀಳುಗಳನ್ನು ತಲೆಕೆಳಗಾಗಿ ಜೋಡಿಸಲು, ವೀರಾದಿವೀರನಾಗಿ ಅಜೇಯ ಪೌರುಷವಂತನೆನಿಸಿಕೊಂಡಿದ್ದ ಮಗಧಾಧಿಪತಿ ಜರಾಸಂಧನು ಭೀಮನಿಂದ ಹತನಾದನು.

ರಮೆ:— ಇಂತಹ ಪ್ರಚಂಡನು ತಮ್ಮ ಮೂವರಲ್ಲಿ ಯಾರೊಬ್ಬನೊಂದಿಗಾದರೂ ಯುದ್ಧ ಮಾಡಬಹುದೆಂದು ಕೃಷ್ಣನು ಹೇಗೆ ಹೇಳಿದ ಅಂತ ? ನಾವು ಬಹಳ ಸುಲಭವಾಗಿಯೇ ಊಹಿಸಬಹುದಾದಂತೆ ಜರಾಸಂಧನನ್ನು ಗೆಲ್ಲಲು ಭೀಮನಿಗೆ ಕೂಡ ಸಾಧ್ಯ ಎಂದು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲದಿರುವಾಗ ಕೃಷ್ಣ ಏಕೆ ಹಾಗೆ ಹೇಳಿದ ?

ಮುರಳಿ:— ಇದನ್ನು ಹಿಂದೆಯೇ ಹೇಳಿದೆನಲ್ಲ ರಮಾ ? ಪರಮ ವೀರನಾದ ಜರಾಸಂಧನು ತನಗೆ ಏನೇನೂ ಸಮನಲ್ಲದ ಅರ್ಜುನನನ್ನು ಯುದ್ಧಕ್ಕೆ ಕರೆದಾನೆ ? ತನ್ನಿಂದ ಇಪ್ಪತ್ತೊಂದು ಬಾರಿ ಸೋಲಿಸಲ್ಪಟ್ಟು ಓಡಿಹೋದ ಕೃಷ್ಣನನ್ನು ಕರೆ

ದಾನೆ? ಹಾಗಿದ್ದರೂ ಅರ್ಜುನನನ್ನು ಜೊತೆಯಲ್ಲಿ ಕರೆತರಲು ಬೇರೊಂದು ಕಾರಣವೂ ಇದ್ದಿರಬಹುದು. ಇಡಿಯ ಯುಗದ ಅವಧಿಯಲ್ಲಿ ಆಗೊಮ್ಮೆ ಈಗೊಮ್ಮೆ ನಡೆಯುವ ಅಂತಹ ಪ್ರಚಂಡ ಯುದ್ಧಗಳನ್ನು ಪ್ರತ್ಯಕ್ಷವಾಗಿ ನೋಡುವದು ಕ್ಷತ್ರಿಯನಿಗೆ ಅಪೂರ್ವವಾದ ಯುದ್ಧ ಶಿಕ್ಷಣವೇ ಆಗುವದಿಲ್ಲವೆ? ಮುಂದೆ ಕೃಷ್ಣನ ಕಲ್ಪನೆಯಂತೆ ನಡೆಯಲಿರುವ ದೊಡ್ಡ ಯುದ್ಧಗಳಲ್ಲಿ ಪಾಲುಗೊಳ್ಳಬೇಕಾದ ಅರ್ಜುನನು ಇಂತಹ ಒಂದು ರೋಮಾಂಚಕಾರೀ ಕದನವನ್ನು ನೋಡುವದು ಅವನಿಗೆ ಪ್ರಯೋಜನಕಾರಿಯಾಗುವದಿಲ್ಲವೆ?

ರಮೆ:– ಆ ಸೀಳುಗಳ ಕತೆ ಏನು? ದೂರ ದೂರ ಎಸೆಯಲ್ಪಟ್ಟ ಶರೀರದ ಸೀಳುಗಳು ಹಾಗೆಲ್ಲ ಬಂದು ಸೇರಿಕೊಳ್ಳುತ್ತವೆಯೆ?

ಮುರಳಿ:– ಸೇರಿಕೊಳ್ಳುತ್ತವೆ–ಇಲ್ಲ. ಸೇರಿಕೊಂಡವು–ಹೌದು.

ರಮೆ:– ಅಂದರೆ?

ಮುರಳಿ:– ಅಂದರೆ ಹೀಗೆ. ನಿನ್ನನ್ನು ನನ್ನನ್ನು ಹಾಗೆ ಸೀಳಿ ಎಸೆದರೆ ಸೀಳುಗಳು ಸೇರಿಕೊಳ್ಳುವದಿಲ್ಲ. ಜರಾಸಂಧನ ಸೀಳುಗಳು ಸೇರಿಕೊಂಡವು.

ರಮೆ:– ಅದೇ, ಏನು ಕಾರಣ ಎಂದೆ.

ಮುರಳಿ:– ಅವನಿಗೆ ಅಂತಹ ವರವಿತ್ತು. ಅದೇ ಕಾರಣ.

ರಮೆ:– ಏನು ವರವೋ, ಏನು ಶಾಪವೋ ಅಪ್ಪ. ಸುಮ್ಮನೆ ಆಚೆಗೆ ಭೀಮ ಅವನನ್ನು ಗುದ್ದಿ ಕೊಂದ ಎಂದಿದ್ದರೆ ಸಾಕಾಗುತ್ತಿತ್ತು. ಇದೆಲ್ಲ ಯಾಕೆ ಬರೆಯಬೇಕು?

ಮುರಳಿ:– "ಅವಳ ಚುಂಬನ", "ಸೆರಗು ಜಾರಿತು", "ತೋಳ ತೆಕ್ಕೆಯಲ್ಲಿ" ಎಂದು ಮುಂತಾಗಿ ಕಾಮವಿಕಾರಗಳನ್ನು ಕಕ್ಕುವ ಹೊಲಸು ಸಾಹಿತ್ಯಕ್ಕೆ ನೀನು ಮಹಾಭಾರತವನ್ನು ಹೋಲಿಸಿದಂತೆ ಮಾತನಾಡಿದರೆ ಅದರಿಂದ ಈ ಇತಿಹಾಸ ಗ್ರಂಥಕ್ಕೆ ಅಪಚಾರವಾಗುವದಿಲ್ಲವಾದರೂ ನಿನ್ನ ತಿಳಿವಳಿಕೆಯ ಮಟ್ಟ ಎಷ್ಟು ಕೆಳಗಿನದು ಎಂಬದಂತೂ ಗೊತ್ತಾಗಿಬಿಡುತ್ತದೆ. ಯಾವದನ್ನೇ ವಿಮರ್ಶಿಸುವಾಗಲೂ........

ರಮೆ:– ಏನು? ನಾನು ಅಂಥದೇನು ಹೇಳಿದೆ? ನಿಮ್ಮ ಮಹಾಭಾರತ ಗ್ರಂಥವನ್ನು ತೆಗಳಿದೆನೇನು?

ಮುರಳಿ:– ತೆಗಳಿದೆಯೊ, ಹೊಗಳಿದೆಯೊ. ನೀನು ಒಪ್ಪುವಂತಹ ವಿಚಾರಗಳನ್ನು ಮಾತ್ರವೇ ವೇದವ್ಯಾಸರು ಬರೆದಿದ್ದರೆ ಅವರು ಉತ್ತಮ ಗ್ರಂಥಕರ್ತರೆಂದು ನೀನು ಒಪ್ಪಿಕೊಳ್ಳುತ್ತಿದ್ದೆ ಎಂಬಂತೆ ಮಾತನಾಡುತ್ತಿದ್ದೀಯೆ. ಸ್ಥೂರ

ನೆಯ ಬಾರಿಗೆ ಹೇಳುತ್ತಿದ್ದೇನೆ ರಮಾ. ವ್ಯಾಸರು ಮಹಾಭಾರತವನ್ನು ಬರೆದುದು ನೀವು ಯಾರನ್ನೂ ಮೆಚ್ಚಿಸಲಿಕ್ಕಲ್ಲ. ಅಥವಾ ತನ್ನ ಪ್ರತಿಭಾಶಕ್ತಿಯನ್ನು ತಾನೇ ಮೆಚ್ಚಿಕೊಳ್ಳಲಿಕ್ಕೂ ಅಲ್ಲ.

ರಮೆ:– ಹಾಗಿದ್ದರೆ ಮತ್ತೇಕೆ ಜರಾಸಂಧನ ಶರೀರದ ಹೋಳುಗಳು ದೂರ ದೂರ ಎಸೆಯಲ್ಪಟ್ಟರೂ ಅವು ತಾವಾಗಿಯೇ ಬಂದು ಸೇರಿಕೊಳ್ಳುತ್ತಿದ್ದವು ಎಂದು ಅವರು ಬರೆದುದು ?

ಮುರಳಿ:– ಅವರು ಅದನ್ನು ಬರೆಯದೆ ಹೋಗಿದ್ದರೆ ಏನಾಗುತ್ತಿತ್ತು ಎಂದು ನಿನ್ನ ಅಭಿಪ್ರಾಯ ?

ರಮೆ:– ಅದೇ. ಏನಾಗುತ್ತಿತ್ತು ಎಂದು ನಾನೂ ಕೇಳುವದು.

ಮುರಳಿ:– ಏನೂ ಆಗುತ್ತಿರಲಿಲ್ಲ. ಸತ್ಯಕ್ಕೆ ಅಪಚಾರ ಮಾಡಿದಂತಾಗುತ್ತಿತ್ತು. ಅಷ್ಟೆ.

ರಮೆ:– ಏನು ಅಪಚಾರ ?

ಮುರಳಿ:– ಏನು ಅಪಚಾರ ಎಂದರೆ ಏನು ಹೇಳುವದು ? ತಾವು ಸ್ವತಃ ಕಂಡ ಅಥವಾ ನೇರವಾಗಿ ಕೇಳಿದ ಘಟನೆಯನ್ನು ಪೂರ್ಣವಾಗಿ ಹೇಳದಿರುವಂತಹ ಅಪಚಾರ ನಡೆಯುತ್ತಿತ್ತು.

ರಮೆ:– ಹಾಗಾದರೆ ಅವನ ಹೋಳುಗಳು ಬಂದು ಸೇರಿಕೊಂಡುದು ನಿಜ ಎನ್ನುತ್ತೀರಿ.

ಮುರಳಿ:– ಸುಳ್ಳು ಎಂದು ಹೇಳಲು ಆಧಾರವೇ ಸಿಕ್ಕುವದಿಲ್ಲ.

ರಮೆ:– ಹೇಗೆ ?

ಮುರಳಿ:– ಹೀಗೆ. ಸೀಳುಗಳು ಬಂದು ಸೇರಿಕೊಳ್ಳುವ ವಿಚಾರವನ್ನು ವ್ಯಾಸರು ಕೇವಲ ತಮ್ಮ ಕಲ್ಪನೆಯಿಂದಲೇ ಊಹಿಸಿ ಬರೆದು ಸೇರಿಸಿದರೆಂದು ಇಟ್ಟುಕೊ. ಹಾಗೆ ಮಾಡಿದುದರಿಂದ ಅವರು ಏನನ್ನು ಸಾಧಿಸಿದಂತಾಗುತ್ತಿತ್ತು ? ತಮ್ಮ ಕಥಾನಾಯಕನಾದ ಭೀಮನ ಪೌರುಷವನ್ನು ಹೆಚ್ಚಿಸಿ ಹೇಳಿದಂತೆ ಆಗುತ್ತಿತ್ತೆ ? ಇಲ್ಲ. ಭೀಮ ಹೇಗಿದ್ದರೂ ಜರಾಸಂಧನನ್ನು ಕೆಡವಿ ಸೋಲಿಸಿದ್ದಾನೆ. ಜರಾಸಂಧನು ಇನ್ನು ಮೇಲೇಳುವಂತೆಯೂ ಇರಲಿಲ್ಲ. ಹಾಗಿರುವಾಗ ಈ ಸೀಳುಗಳ ಸ್ವಯಂ ಚಾಲನೆಯ ಘಟನೆಯಿಂದಾಗಿ ಜರಾಸಂಧನ ಪರಾಕ್ರಮವೇನೂ ಹೆಚ್ಚಲಿಲ್ಲ. ಭೀಮನು ಜರಾಸಂಧನನ್ನು ಗುದ್ದಿ ಕೊಂದನು ಎಂದು ವ್ಯಾಸರು ಬರೆದಿದ್ದರೂ ಅದರಿಂದ ಭೀಮನ ಪರಾಕ್ರಮ ಕಡಿಮೆ ಎನಿಸುತ್ತಿರಲಿಲ್ಲ.

ರಮೆ:– ಅದೇ ನಾನು ಹೇಳುವದು. ಮತ್ತೆ ಅದನ್ನೇಕೆ ಸೇರಿಸಿದರು ಎಂದು ?

ಮುರಳಿ:– ನಡೆದುದನ್ನೆಲ್ಲ ಬರೆದುಬಿಡೋಣ ಎಂಬದಕ್ಕಾಗಿ ಮಾತ್ರವೇ ಅಲ್ಲದೆ ಬೇರೆ ಯಾವ ಕಾರಣವೂ ಇದಕ್ಕೆ ಸಿಕ್ಕುವದಿಲ್ಲ.

ರಮೆ:– ಹಾಗೆಲ್ಲ ಈಗೇಕೆ ನಡೆಯುವದಿಲ್ಲ ?

ಮುರಳಿ:– ಇಪ್ಪತ್ತೈದು ವರ್ಷಗಳ ಹಿಂದೆ ಮನುಷ್ಯನು ಚಂದ್ರಲೋಕಕ್ಕೆ ಹೋಗಿ ಏಕೆ ಇಳಿಯಲಿಲ್ಲ ಎಂದು ಕೇಳಿದಂತೆ ! ದ್ವಾಪರದ ಕಾಲ ನಮ್ಮ ದೇಶವು ಸರ್ವ ವಿಧದಲ್ಲಿಯೂ ಮುಂದುವರಿದಿತ್ತು. ಪ್ರಕೃತಿಯ ರಹಸ್ಯಗಳನ್ನು ಬಹಳ ಅಗಾಧ ಪ್ರಮಾಣದಲ್ಲಿ ತಿಳಿದುಕೊಂಡಿದ್ದ ಅವರು ಅನೇಕ ಅಸಾಮಾನ್ಯವಾದ ಸಾಧನೆಗಳನ್ನು ಪಡೆದುಕೊಂಡಿದ್ದರು. ಮಂತ್ರ, ತಪಸ್ಸು, ಸಿದ್ಧಿ, ಔಷಧಿ ಮತ್ತಿತರ ಕ್ಷೇತ್ರಗಳಲ್ಲಿ ಅವರು ಪಡೆದಿದ್ದ ಸಾಧನೆ ನಮ್ಮ ಕಲ್ಪನೆಗೂ ಮೀರಿದಷ್ಟಿತ್ತು. ಪ್ರಕೃತಿಯ ಶಕ್ತಿಯನ್ನು ಬಳಸಿಕೊಂಡು ಇಂದಿನ ವಿಜ್ಞಾನವು ಪಡೆದಿರುವ ಈ ಅಲ್ಪ ಸಾಧನೆಗಳನ್ನೇ ಅಚ್ಚರಿಯಿಂದ ಕಾಣುವ ನಾವು, ಪ್ರಕೃತಿಗೂ ಮೀರಿದ ಆತ್ಮಶಕ್ತಿಯನ್ನು ಉಪಯೋಗಿಸಿ ಅಂದಿನವರು ಪಡೆದಿದ್ದ ಸಾಧನೆಗಳನ್ನು ಸಂಶಯದ ದೃಷ್ಟಿಯಿಂದಲೇ ನೋಡುವದು ಸಹಜವಾಗಿದೆ. ಆದರೆ ಆಯಾ ಲೋಕವನ್ನು ನಾವು ಪ್ರವೇಶಿಸುವಾಗ ಆಯಾ ಲೋಕಕ್ಕೆ ಸಹಜವಾದ ಅಲ್ಪಸ್ವಲ್ಪ ವಿಚಾರಗಳನ್ನು ತಿಳಿದುಕೊಳ್ಳದಿದ್ದರೆ ನಾವು ಅಲ್ಲಿ ನಗೆಪಾಟಲಿಗೆ ಗುರಿಯಾಗಬೇಕಾಗುತ್ತದೆ. ಚಂದ್ರಲೋಕದಲ್ಲಿ ಇಳಿಯುವ ಮಾನವ ಭೂಮಿಯ ವಾತಾವರಣದ ಪ್ರಮಾಣಗಳಿಂದಲೇ ಅಲ್ಲಿ ನಡೆದಾಡಲು ಸಾಧ್ಯವಿಲ್ಲ. ಅಷ್ಟೇಕೆ ? ವೈಜ್ಞಾನಿಕ ಸಾಧನೆಗಳಿಂದ ತುಂಬಿರುವ ನಗರಗಳಿಗೆ ಹೋಗುವ ಹಳ್ಳಿಗನು ತನ್ನ ಕಲ್ಪನೆಯನ್ನು ಹರಿಯಗೊಡದಿದ್ದರೆ ಮೂರ್ಖನಂತೆಯೇ ವ್ಯವಹರಿಸಬೇಕಾಗುತ್ತದೆ. ನಮ್ಮ ಪೂರ್ವಜರ ಚರಿತ್ರೆಯೂ ಹಾಗೆಯೇ.

ಇಷ್ಟಾಗಿ ಮಹಾಭಾರತ ಕಾಲದ ಪ್ರತಿಯೊಬ್ಬನ ದೇಹದ ಸೀಳುಗಳೂ ತಾವಾಗಿ ಬಂದು ಸೇರಿಕೊಳ್ಳುತ್ತಿದ್ದವು ಎಂದೇನೂ ನಾವು ಓದುವದಿಲ್ಲ. ಆಗಿನ ಕಾಲದಲ್ಲಿಯೇ ಅಪೂರ್ವ ಪರಾಕ್ರಮಿ ಎನಿಸಿಕೊಂಡಿದ್ದ ಒಬ್ಬ ಜರಾಸಂಧನಿಗೆ ಹಾಗಾಗುತ್ತಿತ್ತು. ಈಚಿನ ಯುದ್ಧಗಳಲ್ಲಿ ಕೂಡ ನಾವು, ರುಂಡ ಬಿದ್ದುಹೋದ ಮುಂಡಗಳು ಓಡಾಡುವದನ್ನು ಕೇಳಿದ್ದೇವೆ..............

ರಮೆ:– ಇರಲಪ್ಪಾ, ಒಪ್ಪೋಣ. ವೇದವ್ಯಾಸರು ಸತ್ಯವನ್ನೇ ಬರೆದಿದ್ದಾರೆ ಎಂದಿಟ್ಟುಕೊಳ್ಳೋಣ. ಆದರೆ ಪ್ರಪಂಚದ ಬೇರೆ ಬೇರೆ ಭಾಗಗಳ ಬೇರೆ ಬೇರೆ

ಮತೀಯ ಗ್ರಂಥಗಳಲ್ಲಿ ಪ್ರತಿಯೊಂದರಲ್ಲಿಯೂ ಇಂತಹ ಅತಿ ಪ್ರಕೃತಿ ಘಟನೆಗಳು ವ್ಯಕ್ತವಾಗಿವೆಯಲ್ಲ, ಅವುಗಳೆಲ್ಲವನ್ನೂ ಕೂಡ ನಾವು ಒಪ್ಪಲೇಬೇಕಾತ್ತದೆ ತಾನೆ?

ಮುರಳಿ:– ಒಬ್ಬ ಉದಾರಿ ಇರುತ್ತಾನೆ. ಒಂದು ದಿನ ಅವನ ಬಳಿ ಹತ್ತು ಜನ ಸಹಾಯಾರ್ಥಿಗಳು ಬರುತ್ತಾರೆ. ಒಬ್ಬನು ತನ್ನ ತಾಯಿ ಸತ್ತುಹೋಗಿದ್ದಾಳೆಂದೂ, ಇನ್ನೊಬ್ಬನು ತನ್ನ ಮಗಳ ಮದುವೆ ಹಣದ ಅಭಾವದಿಂದ ನಿಂತುಹೋಗಲಿದೆಯೆಂದೂ, ಹೀಗೆ ಹತ್ತು ಮಂದಿಯೂ ಏನೇನೋ ಕಾರಣಗಳನ್ನು ಹೇಳಿಕೊಂಡು ಸಹಾಯವನ್ನು ಯಾಚಿಸುತ್ತಾರೆ. ಯಾಚನೆಗೆ ಬರುವವರು ಸುಳ್ಳು ಹೇಳುವದು ಸಹಜವಾದುದರಿಂದ ಉದಾರಿಯು ಆ ಪೈಕಿ ಮೊದಲಿನವನನ್ನು ಬಹಳ ಹೊತ್ತು ಪ್ರಶ್ನಿಸಿ ಅವನ ಕಷ್ಟವು ನ್ಯಾಯವಾದುದೆಂದು ನಿಶ್ಚಯಿಸಿಕೊಂಡು ಅವನಿಗೆ ನೂರು ರೂಪಾಯಿ ಕೊಡಲು ಮುಂದಾಗುತ್ತಾನೆ. ಆ ವೇಳೆಗೆ ಸರಿಯಾಗಿ ಅವನ ಹೆಂಡತಿ ಒಳಗಿನಿಂದ ಬಂದು ತನ್ನ ಗಂಡನು ಒಬ್ಬಾತನಿಗೆ ನೂರು ರೂಪಾಯಿ ಕೊಡುತ್ತಿರುವದನ್ನೂ, ಇನ್ನೂ ಅಂತಹ ಒಂಬತ್ತು ಮಂದಿ ಕಾಯುತ್ತಿರುವದನ್ನೂ ನೋಡಿ ಗಂಡನನ್ನು ಕುರಿತು "ನೀವು ಬಂದ ಬಂದವರಿಗೆಲ್ಲ ಹೀಗೆ ನೂರು ನೂರು ರೂಪಾಯಿ ಕೊಡುತ್ತಾ ಹೋದರೆ ನಾವು ತಿರುಪೆ ಎತ್ತಲು ಹೋಗಬೇಕಾದೀತು. ಒಬ್ಬನಿಗೆ ನೂರು ರೂಪಾಯಿ ಕೊಟ್ಟಮೇಲೆ ಇಲ್ಲಿರುವ ಇತರ ಒಂಬತ್ತು ಮಂದಿಗೂ ಅಷ್ಟಷ್ಟೇ ಹಣ ತೆರಬೇಕೋ ಬೇಡವೋ" ಎಂದು ರೇಗಾಡುತ್ತಾಳೆ. "ಸಹಾಯಾರ್ಥಿಗಳು ಹೇಳುವದೆಲ್ಲವೂ ಸತ್ಯವಾಗಿರುವದಿಲ್ಲ. ಎಲ್ಲರೂ ಸುಳ್ಳು ಹೇಳುವವರೇ ಬರುವದೂ ಇಲ್ಲ. ಎಲ್ಲರೂ ಸಹಾಯಾರ್ಥಿಗಳೇ ಹೌದಾದರೂ ಒಬ್ಬೊಬ್ಬರನ್ನೂ ಬೇರೆ ಬೇರೆಯಾಗಿಯೇ ವಿಮರ್ಶಿಸಿ ಪರೀಕ್ಷೆ ಮಾಡಬೇಕು. ಹಾಗೆ ಮಾಡಿಯೇ ಹಣ ಕೊಡುತ್ತಿದ್ದೇನೆ. ನಿನಗೆ ಗಾಬರಿ ಬೇಡ" ಎಂದು ಗಂಡ ಹೇಳುತ್ತಾನೆ. ಅದೇ ರೀತಿ ಪ್ರಪಂಚದಾದ್ಯಂತ ಇರುವ ಮತೀಯ ಗ್ರಂಥಗಳೆಲ್ಲವೂ ಅತಿ ಪ್ರಕೃತಿ ಘಟನೆಗಳಿಂದ ಕೂಡಿ ಒಂದೇ ರೀತಿ ಕಾಣಿಸಿದರೂ ಅವುಗಳಲ್ಲಿ...............

ರಮೆ:– ಇದೇ ಬೇಜಾರು. ಒಂದನ್ನು ಹಿಡಿದರೆ ನೀವು ಅದನ್ನು ಬಿಡುವದೇ ಇಲ್ಲ. ಆಯಿತು ಬಿಡಿ. ಮಹಾಭಾರತ ಕತೆಯಲ್ಲಿ ನೀವು ಹೇಳುವ ಯಾವ ಘಟನೆ ಬಂದರೂ ಅದು ನಡೆಯಿತೆಂದೇ ಮುಂದಕ್ಕೆ ಒಪ್ಪಿಕೊಳ್ಳುತ್ತೇನೆ. ಕತೆ ಮುಂದುವರಿಸಿ.

ಮುರಳಿ:–ಒಪ್ಪಿಕೊಳ್ಳುವದು ಮುಖ್ಯವಲ್ಲ, ರಮಾ. ಒಪ್ಪಿಗೆಯಾಗಿ ಒಪ್ಪಿಕೊ ಎನ್ನುತ್ತೇನೆ, ಅಷ್ಟೆ.

ರಮೆ:– ಒಪ್ಪಿಗೆಯಾಗಿಯೇ ಒಪ್ಪಿಕೊಳ್ಳುತ್ತೇನೆ. ಮುಂದಕ್ಕೆ ಹೇಳಿ. ಜರಾಸಂಧ ಸತ್ತ.

ಮುರಳಿ:– ಜರಾಸಂಘ ಸತ್ತ. ಸತ್ತ ಮೇಲೆ ಏನು ಮಾಡುವರೆಂದು ಗೊತ್ತು ತಾನೆ! ನನ್ನನ್ನೇನು ಕೇಳುತ್ತಿ ?

ರಮೆ:– ಅಯ್ಯೋ ಅವನು ಸತ್ತ. ಸತ್ತವನನ್ನು ಸುಟ್ಟರು. ಸಾಯಿಸಿದವನ ವಿಚಾರ ಹೇಳಬಾರದೆ ?

ಮುರಳಿ:– ಖಂಡಿತ ಹೇಳಬಹುದು. ಕೇಳು. ಜರಾಸಂಘನನ್ನು ಭರತ ಖಂಡದ ವೀರರಲ್ಲಿ ಅಗ್ರೇಸರನೆಂದು ತಾವು ಭಾವಿಸಿ ಹೆಮ್ಮೆಯಿಂದಿದ್ದ ಅವನ ಪುರಜನರು ಅವನ ಭೀಕರ ಮರಣದಿಂದ ಶರೀರದ ಚೈತನ್ಯವನ್ನೇ ಕಳೆದುಕೊಂಡಂತೆ ಭಯಪಟ್ಟು ದಿಕ್ಕಾಪಾಲಾಗಿ ಓಡಿ ಹೋಗುತ್ತಿದ್ದಾಗ ಕೃಷ್ಣನು ಅವರನ್ನು ಕುರಿತು "ಹೆದರಬೇಡಿ. ಇದು ಭೀಮನು ನಿಮಗೆ ಕೊಡುವ ಅಭಯ" ಎಂದು........

ರಮೆ:– ಭೇಷ್, ಭೇಷ್.

ಮುರಳಿ:– ಏನು ?

ರಮೆ:– ಭೀಮನು ಕೊಡುವ ಅಭಯ........

ಮುರಳಿ:– ಭೀಮನು ಕೊಡುವ ಅಭಯ ಭೇಷ್ ಎಂದೆ ?

ರಮೆ:– ಭೀಮನು ಕೊಡುವ ಅಭಯ ಎಂದು ಕೃಷ್ಣನು ಹೇಳಿದುದು ಭೇಷ್ ಎಂದೆ. ಬಹಳ ಸೂಕ್ತವಾದ, ದೊಡ್ಡ ಘಟನೆಯನ್ನು ಸಣ್ಣದರಲ್ಲಿ ಸಮರ್ಥವಾಗಿ ಹೇಳುವ ಮಾತು. ಮುಂದುವರಿಸಿ.

ಮುರಳಿ:– ಒಳ್ಳೆ ಜಟಕಾ ಕುದುರೆ ಆಗಿಹೋದೆನಲ್ಲ ನಾನು. ಆಗಲಿ ಕೇಳು.

ರಮೆ:– ಅದೇನು ಜಟಕಾ ಕುದುರೆ ಎಂದರೆ ?

ಮುರಳಿ:– ಜಟಕಾ ಕುದುರೆ ಎಂದರೆ, ಜಟಕಾ ಅನ್ನುವ ಎರಡು ಚಕ್ರದ ಲಘುವಾದ ಬಂಡಿ ಇರುತ್ತದೆ. ಅದನ್ನು ಎಳೆಯಲು ನಾಲ್ಕು ಕಾಲಿನ, ಕೊಂಬಿಲ್ಲದ ಒಂದು ವಿಧದ ಪ್ರಾಣಿಯನ್ನು ಕಟ್ಟುತ್ತಾರೆ. ಅದಕ್ಕೆ ಕುದುರೆ ಎನ್ನುತ್ತಾರೆ.

ರಮೆ:– ಹಾಗೇನು ? ನನಗೆ ಗೊತ್ತೇ ಇರಲಿಲ್ಲ. ನಿಮ್ಮನ್ನೊಮ್ಮೆ ಅಂತಹ ಕುದುರೆಯ ಬದಲಿಗೆ ಜಟಕಾಕ್ಕೆ ಕಟ್ಟಿದ್ದರೊ ?

ಮುರಳಿ:– ಅಲ್ಲ, ನೀನು ಈಗ ಕಟ್ಟಿದ್ದೀ ಎಂದೆ.

ರಮೆ:– ಹೇಗೆ ?

ಮುರಳಿ:– ಹಾಗೇ. ಕುದುರೆ ಗಾಡಿಯನ್ನು ಎಳೆದುಕೊಂಡು ಹೋಗುತ್ತಾ ಇರುತ್ತದೆ. ಗಾಡಿ ಹೊಡೆಯುವವನು ಇದ್ದಕ್ಕಿದ್ದಂತೆ ಅದನ್ನು ನಿಲ್ಲಿಸಿಬಿಡುತ್ತಾನೆ.

ಹಾಗೇ ನಿಂತಾದರೂ ಇರೋಣವೆಂದರೆ ಇದ್ದಕ್ಕಿದ್ದಂತೆ ಹೊರಡು ಎಂದುಬಿಡುತ್ತಾನೆ. ನೇರವಾಗಿ ಹೋಗುತ್ತ ಇರುತ್ತದೆ. ಇದ್ದಕ್ಕಿದ್ದಂತೆ ಎಡಕ್ಕೋ ಬಲಕ್ಕೋ ತಿರುಗಿಸಿಬಿಡುತ್ತಾನೆ. ಅಲ್ಲಿಯಾದರೂ ಸರಿಯಾಗಿ ಹೋಗೋಣವೆಂದರೆ ........

ರವೆ:– ........ಇದು ಭೀಮನು ಕೊಡುವ ಅಭಯ ಎಂದು ಕೃಷ್ಣನು ಪುರಜನರಿಗೆ ಹೇಳಿದನು.

ಮುರಳಿ:– ಮೂಕಪ್ರಾಣಿಯ ಜೀವನವೇ ಹೀಗೆ....ಹೇಳಿದನು. ಕೃಷ್ಣ ಹಾಗೆಂದು ಹೇಳಿದನು. ಹೇಳಿ ಸಮಾಧಾನಪಡಿಸಿದನು. ಹಾಗಾಗಿ ಪುರಜನರು ಓಡುವದು ನಿಂತಿತು. ಜರಾಸಂಧನ ಉತ್ತರಕ್ರಿಯೆಗಳನ್ನು ಅವನ ಮಗನಾದ ಸಹದೇವ ಎಂಬವನಿಂದಲೇ ಮಾಡಿಸಿ ಅವನನ್ನು ಆ ದೇಶದಲ್ಲಿ ಪಾಂಡವರ ಸಾಮಂತ ರಾಜನನ್ನಾಗಿ ಮಾಡಿ, ಜರಾಸಂಧನು ಸೆರೆಯಲ್ಲಿಟ್ಟಿದ್ದ ರಾಜರುಗಳನ್ನೆಲ್ಲ ಸೆರೆಯಿಂದ ಬಿಡಿಸಿ ಅವರವರ ದೇಶಗಳಿಗೆ ಕಳುಹಿಸಿ ಭೀಮಾರ್ಜುನರೊಂದಿಗೆ ಕೃಷ್ಣನು ಯುಧಿಷ್ಠಿರನಲ್ಲಿಗೆ ಬಂದನು. ವಿಷಯವನ್ನು ತಿಳಿದ ಯುಧಿಷ್ಠಿರನು ಯಾವ ಸ್ಥಿತಿಯನ್ನು ಪಡೆದಿರಬಹುದು ಯೋಚಿಸು.

ರವೆ:– ಯೋಚಿಸಿದೆ. ಅವನು ಸಂತೋಷಪಟ್ಟಿರಬಹುದು.

ಮುರಳಿ:– ನೀನು ಕಾಫಿ ಕುಡಿಯುವಾಗ ನಿನಗೆ ಆಗುವ ಸಂತೋಷದಷ್ಟು. ಅಲ್ಲ ?

ರವೆ:– ತುಂಬ ಸಂತೋಷಪಟ್ಟಿರಬಹುದು. ಸರಿಯೊ ?

ಮುರಳಿ:– ಸಂತೋಷ ಎಂಬದು ಇಲ್ಲಿ ಬಳಸಬಹುದಾದ ಶಬ್ದವೆ ? ತಾನು ತನ್ನ ತಂದೆಗೆ ಹಿರಿಯ ಮಗನಾಗಿ ಹುಟ್ಟಿದುದರಿಂದ ತನ್ನ ಮೇಲೆ ಬಿದ್ದಿದ್ದ ಪಿತೃಋಣವನ್ನು ತೀರಿಸಲು ತಾನು ಬಹಳವಾಗಿ ಬಯಸಿ ಆ ಬಯಕೆ ತನ್ನಂತಹ ಮಹಾರಾಜನಿಗೂ ಕೈಗೂಡುವದಿಲ್ಲವೆಂದೆನಿಸಿದಾಗ, ಹಾಗೆ ಕೈಗೂಡದಿರಲು ತನಗೆ ಪ್ರಬಲವಾಗಿ ಅಡ್ಡಿಯಾಗಿದ್ದ ಹಾಗೂ ತಮ್ಮಂತಹ ವೀರರಿಗೇ ಸಿಂಹಸ್ವಪ್ನವಾಗಿದ್ದ ಜರಾಸಂಧನನ್ನು ನಾಶ ಮಾಡಿ ಭಾರತದಲ್ಲಿ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಿದುದೇ ಅಲ್ಲದೆ ತನ್ನ ಸಂಕಲ್ಪವನ್ನೂ ನೆರವೇರಿಸಲು ತನಗೆ ಸಾಧ್ಯವಾಗುವಂತೆ ಮಾಡಿದ ಭೀಮನನ್ನು ತಮ್ಮನನ್ನಾಗಿ ಪಡೆದ ತನ್ನ ಜನ್ಮಾಂತರಗಳ ಸುಕೃತದ ನೆನಪಿನ ಅಮೃತ ವರ್ಷದಲ್ಲಿ ನೆನೆನೆನೆದು ಎದೆಯೊಡೆಯುವಂತೆ ಹಿಗ್ಗಿರಲಿಕ್ಕಿಲ್ಲವೆ ?

ರವೆ:– ಓ, ಹಾಗೆ........ಎದೆಯೊಡೆಯಲಿಲ್ಲ ತಾನೆ ! ದಯವಿಟ್ಟು ಮುಂದುವರಿಸಿ.

ಮುರಳಿ:– ನೋಡು, ಈಗ ನಾನು ಕುದುರೆಯಲ್ಲ. ನಾನು ಈಗ ನಿನ್ನ

ಪತಿ. ದಯವಿಟ್ಟಿದ್ದೇನೆ. ಕೇಳು. ರಾಜಸೂಯ ಯಾಗದ ತಳಪಾಯವು ಜರಾಸಂಧ ವಧೆಯಿಂದ ಭದ್ರವಾಗಿ ಹಾಕಲ್ಪಟ್ಟಂತಾಯಿತು. ಇನ್ನುಳಿದುದು ದಿಗ್ವಿಜಯ ಕಾರ್ಯ. ಉತ್ತರ ದಿಕ್ಕಿಗೆ ಅರ್ಜುನನೂ, ಪಶ್ಚಿಮಕ್ಕೆ ನಕುಲನೂ ಹೋಗಿ ಲೆಕ್ಕ ವಿಲ್ಲದಷ್ಟು ಬಂಡಿಗಳಲ್ಲಿ ದ್ರವ್ಯಗಳನ್ನು ಹೇರಿ ತಂದರು. ದಕ್ಷಿಣಕ್ಕೆ ಹೋದ ಸಹದೇವನು ಭೀಮಪುತ್ರನಾದ ಘಟೋತ್ಕಚನ ಮೂಲಕ ಲಂಕೆಯಿಂದಲೂ ಕಪ್ಪಕಾಣಿಕೆಗಳನ್ನು ತರಿಸಿದನು. ಪೂರ್ವ ಭಾಗಕ್ಕೆ ಭೀಮನು ನಡೆದನು. ಹೇಗೆ ಗೊತ್ತೆ ರಮಾ ?

ರಮೆ:– ಗೊತ್ತು, ಗೊತ್ತು. ತಲೆಯಲ್ಲೇ ನಡೆದು ಹೋಗಿರಬೇಕು. ಅಲ್ಲ ?

ಮುರಳಿ:– ಹೌದು. ನೀನು ತಲೆಮೀರಿ ಮಾತನಾಡುತ್ತಿರುವಂತೆ. ತಲೆ ಹರಟೆ ಆಡುತ್ತಾಳೆ. ತಲೆಯಲ್ಲಿ ನಡೆದನಂತೆ ! ಹೇಗೆ ಹೋದ ಗೊತ್ತೇ ಎಂದರೆ ತಲೆಹರಟೆ............

ರಮೆ:– ಹೇಗೆ ಹೋದ ಹೇಳಿ, ಹೋಗಲಿ.

ಮುರಳಿ:– ತಲೆಯಲ್ಲಿ ನಡೆದುಹೋದ.

ರಮೆ:– ತುಂಬ ಉಪಕಾರ. ನನ್ನ ತಲೆ ಹರಟೆಯನ್ನು ನೀವು ವಹಿಸಿ ಕೊಂಡು ತುಂಬ ಉಪಕಾರ ಮಾಡಿದಿರಿ. ದಯವಿಟ್ಟು ಕತೆ ಮುಂದುವರಿಸ ಬೇಕು.

ಮುರಳಿ:– ಹೇಗೆ ಮುಂದುವರಿಸಬೇಕು ? ಇನ್ನೊಮ್ಮೆ ಹೇಳು.

ರಮೆ:– ದಯವಿಟ್ಟು, ಕೃಪೆಯಿಟ್ಟು.

ಮುರಳಿ:– ಎರಡೂ ಇಟ್ಟಿದ್ದೇನೆ. ಕೇಳು. ಭೀಮನೇನು ? ಭೀಮನನ್ನು ನಾಯಕನನ್ನಾಗಿ ಪಡೆದ ಆ ಸೈನ್ಯದ ಉತ್ಸಾಹಯುಕ್ತವಾದ ನಡಿಗೆ ಮತ್ತು ರಣ ವಾದ್ಯಗಳ ಮೊಳಗುವಿಕೆಯಿಂದಲೇ ಅದು ಭೀಮನ ಸೈನ್ಯವೇ ಇರಬೇಕೆಂದು ಊಹಿಸಿದ ರಾಜರು ಮುಂದುಮುಂದಾಗಿಯೇ ಬಂದು ಕಪ್ಪಕಾಣಿಕೆಗಳನ್ನು ಸಲ್ಲಿಸು ತ್ತಿದ್ದರು.

ರಮೆ:– ಹಾಗೆ ನಡೆದ.

ಮುರಳಿ:– ಹಾಗೆ ನಡೆದ. ಅವನ ದಿಗ್ವಿಜಯವನ್ನು ವರ್ಣಿಸಲಿಕ್ಕೇ ಸಾಧ್ಯ ವಿಲ್ಲದಂತೆ ಅವನು ಸಾಗಿ....

ರಮೆ:– ಅಂದರೆ ಅವನು ಅಷ್ಟೊಂದು ಸಂಖ್ಯೆಯಲ್ಲಿ ವರ್ಣನಾತೀತವಾದ ಘೋರಯುದ್ಧಗಳನ್ನು ಮಾಡಬೇಕಾಯಿತು ಎಂದೊ ?

ಮುರಳಿ:– ಅಲ್ಲ. ಅದರ ವಿರುದ್ಧ. ದಿಗ್ವಿಜಯಕ್ಕೆ ಸಾಮಾನ್ಯನು ಯಾರಾದರೂ ಹೋಗಿದ್ದರೆ ಅವನಿಗೆ ಹೆಜ್ಜೆಹೆಜ್ಜೆಗೂ ಹೀಗೆ ಬಲವಾದ ಯುದ್ಧ ಎದುರು ಬೀಳುತ್ತಿತ್ತು. ಆದರೆ ಇಲ್ಲಿ ಸಾಕ್ಷಾತ್ ಭೀಮನೇ ಹೋಗಿರುವಾಗ–ಅದರಲ್ಲಿಯೂ ಜರಾಸಂಧನನ್ನೇ ಕೊಂದುಹಾಕಿದನೆಂಬ ಬಿಸಿ ಸುದ್ದಿಯು ಕಿವಿಯಲ್ಲಿ ಇನ್ನೂ ಆರಿಲ್ಲದಿರುವಾಗಲೇ ಅವನು ದಿಗ್ವಿಜಯಕ್ಕೆ ಹೋಗಿರುವಾಗ ಅವನು "ಇವನನ್ನು ಗೆದ್ದ, ಅವನನ್ನು ಸೋಲಿಸಿದ, ಆಚೆಯವನನ್ನು ಹುಡಿಗುಟ್ಟಿದ, ಈಚೆಯವನನ್ನು ಬಡಿಪಟ್ಟಿದ" ಎಂದಿಷ್ಟೇ ಹೇಳಿ ಮುಗಿಸಬೇಕಲ್ಲದೆ ಬೇರೆ ಯಾವ ವಿವರಣೆ ಇದ್ದೀತು! ಒಬ್ಬ ರಾಜನಿಂದಲೇ ಆರು ಸಾವಿರ ಬಂಡಿಗಳಲ್ಲಿ ಹಿಡಿಸುವಷ್ಟು ಅಮೂಲ್ಯವಾದ ವಸ್ತುಗಳನ್ನು ಪಡೆದನಂತೆ. ಈ ರೀತಿ ಅನುಪಮವಾದ ವಸ್ತುಗಳನ್ನು ಬೇಕಷ್ಟು ಹೊರಿಸಿ ತಂದು ನಗುತ್ತಾ ಯುಧಿಷ್ಠಿರನಿಗೆ ನಮಸ್ಕರಿಸಿ ಅರ್ಜುನ, ಯಮಳರನ್ನು ಆಲಿಂಗಿಸಿದನು.

ಇನ್ನುಳಿದುದು ಯಾಗದ ಕಾರ್ಯ. ಲಾಳ, ಮಾಳವ, ಚೋಳ, ಗೌಳ ಮೊದಲಾದ ಚಪ್ಪನ್ನಾರು ದೇಶಗಳಿಂದಲೂ........

ರಮೆ:– ಎಂಥಾ ನಾರು ?

ಮುರಳಿ:– ಬಾಳೆ ನಾರು.

ರಮೆ:– ಅಲ್ಲ, ಅದೇನೋ ಹೇಳಿದಿರಲ್ಲ, ಏನೋ ದೇಶ ಅಂತ. ಅದು ಏನು ಎಂದೆ.

ಮುರಳಿ:– ಚಪ್ಪನ್ನಾರು ಎಂದರೆ ಐವತ್ತಾರು ಅಂತ. ಆಗ ಭರತ ಖಂಡವು ಐವತ್ತಾರು ಬೇರೆ ಬೇರೆ ಸಂಸ್ಥಾನಗಳಿಂದ ಕೂಡಿತ್ತಂತೆ. ಅಲ್ಲಿಯ ರಾಜರುಗಳೆಲ್ಲ ಬಂದರು ಎಂದರೆ ಸಮಗ್ರ ಭರತ ಖಂಡವೇ ಒಂದೆಡೆ ಸೇರಿತು ಎಂದರ್ಥ. ಇನ್ನೊಂದು ಕಡೆಯಿಂದ ಆಂಗಿರಸ, ವಸಿಷ್ಠ ಮೊದಲಾದ ಮಹರ್ಷಿಗಳೂ ದಯಮಾಡಿಸಿದರು. ಸಮಾರಂಭದ ಮೇಲ್ವಿಚಾರಣೆ ಭೀಷ್ಮನದಾಯಿತು. ದುರ್ಯೋಧನ, ಕರ್ಣ ಮೊದಲಾದ ಸಮಸ್ತ ಆಪ್ತರಿಗೂ ಸಮಾರಂಭದ ಒಂದೊಂದು ಕಾರ್ಯವನ್ನು ನಿಗದಿಗೊಳಿಸಲಾಯಿತು. ಯಜ್ಞವು ಭರದಿಂದ ಸಾಗಿತು. ದೇವತೆಗಳು, ಋಷಿಗಳು, ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯ, ಶೂದ್ರ, ಚಾಂಡಾಲಾದಿ ಸಮಸ್ತರೂ ತೃಪ್ತಿಗೊಂಡರು. ತೃಪ್ತಿ ಎಂದರೆ ನಾಲಗೆಯ ತೃಪ್ತಿಯಲ್ಲ: ಮನಃ ಪೂರ್ತಿಯ ತೃಪ್ತಿ. ಯಾಗವು ಮುಕ್ತಾಯದ ಘಟ್ಟಕ್ಕೆ ಸಮೀಪಿಸಿತು. ಕೊನೆಯದಾಗಿ ಉಳಿದುದು ಯಾಗದ ಅಗ್ರಪೂಜೆ.

ರಮೆ:– ಆ ಅಗ್ರ ಗಿಗ್ರ ಎಂದರೆ ಏನು ಅಂತ ಸ್ವಲ್ಪ ಹೇಳಿಕೊಡು ಹೋಗಿ.

ಮುರಳಿ:– ಅಂದರೆ ನಾವು ಮದುವೆ ಮೊದಲಾದ ಶುಭ ಸಮಾರಂಭಗಳಲ್ಲಿ ಸಭಾಪೂಜೆ ಎಂದು ಮಾಡುವದಿಲ್ಲವೆ? ಹೆಚ್ಚು ಕಡಿಮೆ ಅದೇ ರೀತಿ. ಅದರೆ ಇಲ್ಲಿ ಆ ಸಭೆಯಲ್ಲಿರುವ ಲಕ್ಷೋಪಲಕ್ಷ ಮಾನವರಲ್ಲಿ ಎಲ್ಲರಿಗಿಂತಲೂ ಶ್ರೇಷ್ಠನಾದ ವನಿಗೆ ಪ್ರಥಮಾಸನವನ್ನು ಕೊಟ್ಟು ಯಾಗದ ಕರ್ತೃವು ಅವನನ್ನು ಗೌರವಿಸು ವದು.

ರಮೆ:– ಹಾಗೆ ಹೇಳಿ. ಜರಾಸಂಧನನ್ನು ಕೊಂದದ್ದಕ್ಕಾಗಿ ನಿಮ್ಮ ನಾಯಕ ಭೀಮನಿಗೆ ಪೂಜೆ ಮಾಡಿದರು ಎಂದು ಹೇಳಿಬಿಡಿ, ಸಾಕು. ಮುಂದಕ್ಕೆ ಹೇಳಿ.

ಮುರಳಿ:– ಮುಂದಕ್ಕೆ ಹೇಳಲಿಕ್ಕೇನಿದೆ? ಎಲ್ಲ ನಿನಗೇ ಗೊತ್ತಿದೆಯಲ್ಲ! ನೀನೇ ಹೇಳಿ ಬಿಡು. ನಾನು ಕೇಳುತ್ತಾ ಕೂರುತ್ತೇನೆ.

ರಮೆ:– ನೀವು ಓದಿರುವುದನ್ನು ಹೇಳುತ್ತೀರಿ. ನೋಡಿ, ನಾನು ಜ್ಞಾನದೃಷ್ಟಿ ಯಿಂದಲೇ ಹೇಗೆ ತಿಳಿದುಕೊಂಡು ಹೇಳಿದೆ ಅಂತ!

ಮುರಳಿ:– ಜ್ಞಾನದೃಷ್ಟಿಯೋ, ಏನು ದೃಷ್ಟಿಯೋ. ನಿನ್ನ ದೃಷ್ಟಿಯಿಂದ ಜೀರಿಲ್ಲದನ್ನೂ ನೋಡುತ್ತೇನೆ ಎಂದುಕೊಂಡಿದ್ದೀ. ದುರದೃಷ್ಟವೆಂದರೆ ಆ ದೃಷ್ಟಿಯು ತನ್ನನ್ನು ತಾನೇ ನೋಡಿಕೊಳ್ಳಲಾರದು.

ರಮೆ:– ಅಂದರೆ?

ಮುರಳಿ:– ಅಂದರೆ, ಆ ದೃಷ್ಟಿ ತನ್ನನ್ನು ತಾನು ನೋಡಿಕೊಳ್ಳಲಾರದೆ ತನ್ನ ಹೆಸರನ್ನು ಜ್ಞಾನದೃಷ್ಟಿ ಎಂದು ಕರೆದುಕೊಂಡುಬಿಟ್ಟಿದೆ.

ರಮೆ:– ಅದನ್ನು ಮತ್ತೆ ಹೇಗೆ ಕರೆಯಬೇಕಿತ್ತು?

ಮುರಳಿ:– ಹೇಗೆ ಕರೆಯುವುದು ಎಂದಲ್ಲ. ಅದಕ್ಕಿರುವ ನಿಜವಾದ ಹೆಸರು ಕುರುಡು ದೃಷ್ಟಿ ಎಂದು.

ರಮೆ:– ಯಾಕೆ!

ಮುರಳಿ:– ಕಂಡದ್ದೆಲ್ಲ ಭೀಮನೇ ಇರಬೇಕೆಂದು ಶಂಕಿಸುವ ದೃಷ್ಟಿಗೆ ಜ್ಞಾನ ದೃಷ್ಟಿ ಎನ್ನುತ್ತಾರೊ ಕುರುಡು ದೃಷ್ಟಿ ಎನ್ನುತ್ತಾರೊ?

ರಮೆ:– ಭೀಮನಿಗೆ ಅಗ್ರಪೂಜೆ ಮಾಡಿದರು ಎಂದುದಕ್ಕೆ ಹೇಳುತ್ತಿದ್ದೀರಾ?

ಮುರಳಿ:– ನಿನ್ನದು ಜ್ಞಾನದೃಷ್ಟಿ ಹೋಗಲಿ, ಸಾಮಾನ್ಯ ದೃಷ್ಟಿ ಕೂಡ ಅಲ್ಲ ಎನ್ನುವದು ಇದರಿಂದ ಗೊತ್ತಾಗುವುದಿಲ್ಲವೇ?

ರಮೆ:– ಹೇಗೆ?

ಮುರಳಿ:– ಯಾಗದ ಕರ್ತೃ ಯುಧಿಷ್ಠಿರ ಎಂದ ಮೇಲೆ ಆ ಕರ್ತೃವು ತನ್ನ

ತಮ್ಮನನ್ನೇ ಪೂಜಿಸುತ್ತಾನೆಯೆ ? ಅಥವಾ ಅವನೊಬ್ಬನೇ ಯಾಗ ಮಾಡಿದಂತಾಯಿತೇ ?

ರಮೆ:– ಹಾಗಾದರೆ ಭೀಮನೂ ಯಾಗ ಮಾಡಿದನೊ ?

ಮುರಳಿ:– ಭೀಮನು ಮಾಡಿದನೊ, ಯಾರು ಮಾಡಿದರೊ, ಇದೆಲ್ಲ ನಿನಗೆ ಅರ್ಥವಾಗದ ವಿಷಯ.

ರಮೆ:– ಹೌದೇ ಹೌದು. ಸಾವಿರಾರು ವರ್ಷಗಳ ಹಿಂದಿನ ಈ ಯಾಗ, ಯಜ್ಞ, ಜಪ, ತಪ, ಮಂತ್ರ, ತಂತ್ರ ಎಲ್ಲವನ್ನೂ ತಿಳಿದುಕೊಂಡು ನನಗೆ ಆಗ ಬೇಕಾದುದೇನು ? ಹೊಟ್ಟೆಹೊರೆಯುವುದಕ್ಕೆ ಪೂಜಾರಿಯ ಕೆಲಸ ಮಾಡುವವರು ಬಿಟ್ಟರೆ ಇದನ್ನೆಲ್ಲ ನಾವು ಏಕೆ ತಿಳಿದುಕೊಳ್ಳಬೇಕು ?

ಮುರಳಿ:– ಓಹೋ, ಹಾಗೆ. ಹಾಗಿದ್ದರೆ, ಹೊಟ್ಟೆ ಹೊರೆಯಲು ಪೂಜಾರಿಯವರಂತಹ ಕೀಳು ಕೆಲಸವನ್ನು ಮಾಡಬೇಕಾದ ದುರವಸ್ಥೆಗೆ ಸಿಕ್ಕದ ನಿನ್ನಂತಹ ಶ್ರೇಷ್ಠ ವ್ಯಕ್ತಿಯು ತಿಳಿದುಕೊಳ್ಳಬೇಕಾದ ವಿಷಯಗಳು ಯಾವವು ?

ರಮೆ:– ನಾನು ಶ್ರೇಷ್ಠ ಎಂದಲ್ಲ. ಆದರೂ ನಮಗೆ ಆ ಗೊಡ್ಡು ವಿಚಾರಗಳೆಲ್ಲ ಬೇಕಿಲ್ಲ ಎಂದೆ, ಅಷ್ಟೆ.

ಮುರಳಿ:– ಹಾಗಾದರೆ ನಿಮಗೆ ಬೇಕಾದ ಗರ್ಭಿಣಿ ವಿಚಾರಗಳು ಯಾವವು ಎಂದೆ ?

ರಮೆ:– ಬೇಕಷ್ಟು ವಿಷಯಗಳಿವೆ. ಈ ಸಮಾಜದಲ್ಲಿ ಚೆನ್ನಾಗಿ ಬದುಕಲು ಬೇಕಾದ ಲೋಕ ವ್ಯವಹಾರ ಜ್ಞಾನಗಳನ್ನು ನಾವು ತಿಳಿದುಕೊಂಡಿರಬೇಕು.

ಮುರಳಿ:– ಅದೇ, ಅವುಗಳು ಯಾವವು ಎಂದು ನಾನು ಕೇಳಿದುದು.

ರಮೆ:– ಸಾವಿರಾರು ಇರುವದನ್ನೆಲ್ಲ ಹೆಸರಿಸಿಕೊಂಡು ಕೂರಲಿಕ್ಕಾಗುತ್ತದೇನು ? ಈಗ ಸಾಮಾನ್ಯವಾಗಿ ಶಾಲಾ ಕಾಲೇಜುಗಳಲ್ಲಿ ಏನನ್ನು ಕಲಿಸುತ್ತಾರೋ ಅವು ಮತ್ತು ಅವಕ್ಕೆ ಸಂಬಂಧಪಟ್ಟ ಇತರ ವಿಷಯಗಳು.

ಮುರಳಿ:– ಗೊಡ್ಡು ವಿಚಾರಗಳಿಗಿಂತ ಈ ವಿಚಾರಗಳ ಹಿರಿಮೆ ಏನು ?

ರಮೆ:– ಹಿರಿಮೆ ಏನೆಂದರೆ? ಇವು ತಾನೇ ನಮ್ಮ ಇಂದಿನ ಜೀವನಕ್ಕೆ ಅವಶ್ಯವಾದವು ?

ಮುರಳಿ:– ಜೀವನಕ್ಕೆ ಎಂದರೆ ಜೀವನದ ಯಾವ ಭಾಗಕ್ಕೆ ?

ರಮೆ:– ಯಾವ ಭಾಗಕ್ಕಂತೆ ! ಜೀವನ ಎಂದರೆ ಏನೆಲ್ಲ ಬೇಡ? ಹಣ, ಕಾಸು, ವೃತ್ತಿ, ಮನೆ, ಮಠ, ಸಂಸಾರ, ಇತರರೊಂದಿಗೆ ವ್ಯವಹಾರ, ಪ್ರಪಂಚದಲ್ಲಿ ಏನೇನು ನಡೆಯುತ್ತಿದೆ ಎಂದು ತಿಳಿದುಕೊಳ್ಳುವ ಶಕ್ತಿ–ಇದೆಲ್ಲ ಸೇರುತ್ತದೆ.

ಮುರಳಿ:– ಅಂದರೆ, ಪ್ರಪಂಚದಲ್ಲಿ ಏನೇನು ನಡೆಯುತ್ತಿದೆ ಎಂದು ತಿಳಿದು ಕೊಳ್ಳುವದನ್ನು ಬಿಟ್ಟರೆ ಕಾಡು ಜನಾಂಗದ ಜೀವನದಂತೆ.

ರಮೆ:– ಕಾಡು ಜನಾಂಗದ ಜೀವನ ಯಾಕೆ? ಈಗ ಕಾಲೇಜಿನಲ್ಲಿ ಓದಿ ಪದವೀಧರರಾದವರ ತಿಳಿವಳಿಕೆಗೂ ಇತರರ ತಿಳಿವಳಿಕೆಗೂ ವ್ಯತ್ಯಾಸವಿಲ್ಲವೇನು ?

ಮುರಳಿ:– ಏನಿದೆ ಎಂದು ಕೇಳಿದೆ.

ರಮೆ:– ಥರ್. ನನಗೆ ಗೊತ್ತಿಲ್ಲವಪ್ಪ. ಇದೆಂಥಾ ಹಾಳು ವಾಗ್ವಾದ. ಏನು ಹೇಳಲಿಕ್ಕಿದೆಯೋ ಅದನ್ನು ಹೇಳಿಬಿಡಿ. ನಾನು ಹೇಳಿದುದರಲ್ಲಿ ಏನಾದರೂ ತಪ್ಪು ಎಂದು ನಿಮಗೆ ಕಂಡರೆ ಅದನ್ನು ಒಪ್ಪಿಕೊಂಡುಬಿಡುತ್ತೇನೆ. ಸದ್ಯ ಈ ಚರ್ಚೆಯನ್ನು ನಿಲ್ಲಿಸಿ.

ಮುರಳಿ:– ಈ ರೀತಿಯ ವ್ಯವಹಾರಜ್ಞಾನವನ್ನೇ ನೀನು ಬಿ.ಎ. ಪದವಿ ತರಗತಿಯಲ್ಲಿ ಕಲಿತುದೊ ?

ರಮೆ:– ನಾನು ಏನು ಕಲಿತಿದ್ದೇನೋ, ಏನು ಬಿಟ್ಟಿದ್ದೇನೋ. ಅದನ್ನು ಕಟ್ಟಿಕೊಂಡು ನಿಮಗೇನಾಗಬೇಕು ?

ಮುರಳಿ:– ಹಾಗಲ್ಲ. ನನ್ನ ಗೊಡ್ಡು ವಿಚಾರಗಳು ನಿನ್ನ ಗರ್ಭಿಣಿ ವಿಚಾರಗಳ ಸಂಪರ್ಕ ಪಡೆದರೆ ಇವೂ ಏನಾದರೂ ಮಕ್ಕಳನ್ನು ಹಡೆದಾವೋ ಎಂಬ ಆಸೆಗಾಗಿ ಕೇಳುತ್ತಿದ್ದೇನೆ. ಅಷ್ಟೆ.

ರಮೆ:– ನಾನೊಬ್ಬಳೇನೋ ಬುದ್ಧಿವಂತಳಲ್ಲದಿರಬಹುದು. ಆದರೆ ಪದವೀಧರರಾದವರನ್ನೆಲ್ಲ ನೀವು ಈ ರೀತಿ ಅಪಹಾಸ್ಯ ಮಾಡಬಾರದು.

ಮುರಳಿ:– ಮಾಡಿದೆನೆ ? ಅವರು ಪದವಿಯನ್ನು ಪಡೆದುದಕ್ಕಾಗಿ ಅವರನ್ನು ಗೌರವಿಸದಿದ್ದೇನೆಯೆ ? ಆದರೆ ನಿಜವಾದ ಜ್ಞಾನವನ್ನು ಅಜ್ಞಾನ ಎಂದು ಹೇಳುವದೇ ಅವರ ಪದವಿಯ ಲಕ್ಷಣವಾದರೆ ನಾನದನ್ನು ಖಂಡಿಸಬೇಡವೆ ?

ರಮೆ:– ಹಾಗಾದರೆ ಈ ಯಾಗ, ಯಜ್ಞಗಳ ವಿಚಾರಗಳೆಲ್ಲ ನಿಜವಾದ ಜ್ಞಾನವೊ ? ಬಿ.ಎ. ಯಲ್ಲಿ ಕಲಿಯುವದು ಅಜ್ಞಾನವೊ ?

ಮುರಳಿ:– ಅದು ಜ್ಞಾನವೂ ಅಲ್ಲ, ಇದು ಅಜ್ಞಾನವೂ ಅಲ್ಲ. ಬರಿಗಣ್ಣಿನಲ್ಲಿ ಈ ಪ್ರಪಂಚವನ್ನೆಲ್ಲ ನೋಡಿ ಇದರ ವಿವರಗಳನ್ನೆಲ್ಲ ಸಂಗ್ರಹಿಸುವವನು ಮೂರ್ಖನೆಂದು ಯಾರೂ ಹೇಳುವದಿಲ್ಲ. ಆದರೆ ದುರ್ಬೀನಿನ ಮೂಲಕ, ಬರಿಗಣ್ಣಿಗೆ ಕಾಣಿಸದುದನ್ನು ನೋಡಿ ನಮಗೆ ಹೇಳುವವನು ಮೊದಲಿನವನಿಗಿಂತ ಹೆಚ್ಚು ತಿಳಿವಳಿಕೆ ಇರುವವನು ಎಂದು ಹೇಳುವದು ತಪ್ಪೆ ? ಹಾಗೆಯೇ ನಿನ್ನ ಈಗಿನ ವಿದ್ಯಾಭ್ಯಾಸ, ಹಾಗೂ ಅದರ ಫಲವಾದ ವಿಜ್ಞಾನ ಕೂಡ ನಮ್ಮ ಈ ಇಂದ್ರಿಯಗಳಿಗೆ

ಕಾಣುವ ವಿಷಯುಗಳ ವಿಶ್ಲೇಷಣೆಯನ್ನು ಮಾತ್ರ ಮಾಡಲು ಸಾಧ್ಯತೆ ಪಡೆದಿರುವದು. ಆದರೆ ಇಂದ್ರಿಯಗಳಿಗೆ ಕಾಣಿಸುವ ಅಷ್ಟು ಮಾತ್ರನೇ ಈ ಪ್ರಪಂಚವ ಪೂರ್ಣ ಸತ್ಯವನ್ನು ಹೊರಗೆಡವಲು ಅಸಮರ್ಥವಾಗಿದೆ ಎಂಬದು ನಮ್ಮ ಪೂರ್ವಜರ ತಿಳಿವಳಿಕೆಯಾಗಿತ್ತು. ಇಂದ್ರಿಯಗಳಿಗೆ ಅತೀತವಾದ ಈ ವಿಶ್ವದ ರಹಸ್ಯವನ್ನು ಕಂಡುಕೊಳ್ಳಲು ಅವರು ಪ್ರಯತ್ನಿಸಿದರು. ಕಂಡಿದ್ದೇವೆ ಎಂದು ಸಾರಿದರು ಕೂಡ. ಯಾವ ವಿಷಯುವನ್ನು ತಿಳಿದ ಮೇಲೆ ಬೇರೇನನ್ನೂ ನಾವು ತೀಯು ಬೇಕಿಲ್ಲವೋ ಅಂತಹ ಜ್ಞಾನದ ಮೂಲವನ್ನೇ ತಾವು ತಲಪಿದ್ದೇವೆ ಎಂದರು. ಅವರ ಬೇರೆ ಬೇರೆ ಅಂಗವಾಗಿಯೋ, ಆ ಜ್ಞಾನವನ್ನು ತಲಪಲು ಬೇರೆ ಬೇರೆ ಮಾರ್ಗಗಳಾಗಿಯೋ, ಆ ಸಾಧನೆಯ ವಿವಿಧ ಹಂತಗಳಾಗಿಯೋ ಈ ಯಜ್ಞ, ಯಾಗ, ಜಪ, ತಪ–ಎಲ್ಲ ಹುಟ್ಟಿಕೊಂಡಿವೆ. ಅವುಗಳ ಗುರಿ, ಮಾರ್ಗ, ಪ್ರಯೋಜನ ಯಾವದನ್ನೂ ತಿಳಿಯದೆ, ಅವುಗಳನ್ನು ಗೌರವಿಸುವವರು ಪೂಜಾರಿಗಳೆಂಬ ಹಾಸ್ಯಾಸ್ಪದ ವ್ಯಕ್ತಿಗಳೆಂದು ನೀನು ಅಪಹಾಸ್ಯ ಮಾಡುವದಾದರೆ, ನಿಜವಾಗಿ ಅಪಹಾಸ್ಯಕ್ಕೆ ಈಡಾಗಬೇಕಾದವರು ಯಾರಾಗುತ್ತಾರೆ ?

ನೋಡು ರಮಾ, ಭರತ ಖಂಡದಲ್ಲಿ ಹುಟ್ಟಿದ ನಿನ್ನಷ್ಟು ಶ್ರೀಮಂತರು ಪ್ರಪಂಚದ ಯಾವ ಭಾಗದಲ್ಲಿಯೂ ಇಲ್ಲ ಎಂಬ ಸತ್ಯವನ್ನು ತಿಳಿದುಕೊಳ್ಳಲಾರದೆ ನೀನು ತೀರಾ ದರಿದ್ರಳಂತೆ ವರ್ತಿಸುವದನ್ನು ನೋಡಿದರೆ ಅದಕ್ಕಾಗಿ ನಿಜವಾಗಿ ಪಶ್ಚಾತ್ತಾಪಪಡಲೇಬೇಕಾಗುತ್ತದೆ. ಅನುಪಮವಾದ, ಅಸಾಧ್ಯವಾದ, ಅಪಾರವಾದ ಪಿತ್ರಾರ್ಜಿತ ಆಸ್ತಿಗೆ ನೀನು ಉತ್ತರಾಧಿಕಾರಿಯಾಗಿರುವದು ನಿನಗೆ ಗೊತ್ತಾಗಬೇಡವೆ ? ಮಹಾಮಹಿಮರಾದ ಆ ನಿನ್ನ ಹಿರಿಯರ, ಪ್ರಪಂಚದ ಆ ಶ್ರೇಷ್ಠ ಹಿರಿಯರ ಸತತ ಚಿಂತನೆಯಿಂದ, ಅಸಾಧ್ಯ ಶ್ರಮದಿಂದ, ಸ್ವಹಿತ ತ್ಯಾಗದಿಂದ, ಲೋಕೋಪಕಾರ ಬುದ್ಧಿಯ ಫಲದಿಂದ ನಮಗೆ ಅನುಗ್ರಹೀತವಾಗಿರುವ ಅವರ ಅನುಭವ ನಿದರ್ಶನಗಳನ್ನು, ಲೋಕದ ಚಿರಸತ್ಯವನ್ನು, ಶಾಶ್ವತ ಧರ್ಮವನ್ನು, ಪರಮ ಜ್ಞಾನವನ್ನು ನಾವು–ಅವರ ರಕ್ತ ಕಣಗಳನ್ನೇ ದೇಹದಲ್ಲಿ ಪಡೆದ ನಾವು ಧಿಕ್ಕರಿಸಿದರೆ ನಾವು ನಮಗೆ ಮಾತ್ರ ದ್ರೋಹ ಮಾಡಿಕೊಳ್ಳುತ್ತಿರುವದಲ್ಲ, ನಮ್ಮ ದೇಶದ ಭವ್ಯತೆಗೆ ಮಾತ್ರ ಅಪಚಾರ ಮಾಡುತ್ತಿರುವದಲ್ಲ, ಯಾವ ಸಂಪತ್ತಿನಿಂದಾಗಿ ಮಾನವ ಕೋಟಿಯೇ ಪ್ರಯೋಜನ ಪಡೆಯಬಲ್ಲದೋ, ಆ ಮಾನವ ಕುಲಕ್ಕೇ ಅಪಚಾರ ಮಾಡುತ್ತಿದ್ದೇವೆ ಎಂದು ನನಗನಿಸುತ್ತದೆ. ಗುರುಭಕ್ತಿಯಿಂದ ಪ್ರೇರಿತನಾಗಿ, ಸಂಪ್ರದಾಯಾನುಷ್ಠಾನಪರತೆಯಿಂದಾಗಿ ಹಿರಿಯರ ಆದರ್ಶವನ್ನು ಸ್ವಲ್ಪ ಪ್ರಮಾಣದಲ್ಲೇ ಆದರೂ, ವಿಕೃತ ರೂಪದಲ್ಲೇ ಆದರೂ, ಉಳಿಸಿಕೊಂಡು ತನ್ನ ಜೀವನವನ್ನೇ ಅದಕ್ಕಾಗಿ ಮೀಸಲಿಟ್ಟಿರುವ ಪೂಜಾರಿಯಂತಹವರು ನಿನ್ನಂತಹವರ ತಿರಸ್ಕಾರಕ್ಕೆ ಗುರಿಯಾದರೆ ನಮ್ಮ ಈ ಅಸಾಧ್ಯ ಸಂಪತ್ತಿನ ಗತಿ ಏನಾಗಬೇಕು ?

ಈ ರೀತಿ ನಮ್ಮತನವನ್ನು ಕಳೆದುಕೊಂಡು ದರಿದ್ರರಾಗಿದ್ದ ನಮ್ಮನ್ನು ಕಂಡಲ್ಲವೇ ಪಾಶ್ಚಾತ್ಯರು ತಾವು ಹೇಳಿದುದೇ ಅಗಾಧ ಜ್ಞಾನವೆಂದು ಅದನ್ನೇ ಸ್ಥಿರಗೊಳಿಸಲು ಸಾಧ್ಯವಾದುದು? ನಮ್ಮ ಅಮೂಲ್ಯವಾದ ಸಂಪತ್ತನ್ನು ನಾವು ನಿಜವಾಗಿ ಬಳಸಬಲ್ಲವರಾಗಿದ್ದರೆ, ನಾವು ಈ ಸಂಪತ್ತಿನ ಬಲದಿಂದಾಗಿ ಪಾಶ್ಚಾತ್ಯರ ಭೌತಿಕ ಸಾಧನೆಯ ಜ್ಞಾನವು ನಮ್ಮವರ ಮುಂದೆ ಕೇವಲ ಬಾಲಿಶ ಜ್ಞಾನವೆಂದು ಹೇಳಬಹುದಾಗಿತ್ತು. ನಮ್ಮದೇ ಆಗಿರುವ ನಮ್ಮ ಸಂಪತ್ತನ್ನೂ ಅನುಭವಿಸಲಾರದೆ, ಪಾಶ್ಚಾತ್ಯರ ಭೌತಿಕ ಸಾಧನೆಗಳನ್ನೂ ಗಳಿಸಲಾರದೆ ನಾವು, ಬಲಿಷ್ಠನಾದ ತಂದೆಯಿಂದ ತಪ್ಪಿಸಿಕೊಂಡು ತಬ್ಬಲಿಯಂತಾದ ಮಗು ಕಂಡ ಕಂಡವರ ಮನೆಯ ಮುಂದೆ ಕೈಜೋಡಿಸಿ ನಿಲ್ಲಬೇಕಾಗಿ ಬಂದು ಅವರಿಂದ ಧಿಕ್ಕರಿಸಲ್ಪಡುವಂತೆ ಆಗಿದ್ದೇವೆ. ವಿದ್ಯಾವಂತರೆನಿಸಿಕೊಂಡ ನಿನ್ನಂತಹ ಯುವಜನರು ಇಂದು ಆ ರೀತಿ ತಬ್ಬಲಿಗಳಾಗಿ ಪಾಶ್ಚಾತ್ಯ ಸಂಸ್ಕೃತಿಯ ಮುಂದೆ ಕೈ ಜೋಡಿಸಿಕೊಂಡು ಭಿಕ್ಷೆಗೆ ನಿಂತಿರುವವರಿಂದ ಮಾತ್ರವೇ ನಿಮಗೆ ಪೂಜಾರಿಗಳು, ಯಜ್ಞ, ಯಾಗಗಳು, ಜಪ, ತಪಸ್ಸುಗಳು ಹಾಸ್ಯಾಸ್ಪದವಾಗಿ ಕಾಣಿಸುತ್ತಿರುವದು. ಅದಲ್ಲವಾದರೆ ನೀನು ಅವುಗಳನ್ನು ಅಪಹಾಸ್ಯ ಮಾಡಬೇಕಾದ ಅವಶ್ಯಕತೆಯಾದರೂ ಏನಿದೆ? ಅವುಗಳು ನಿನಗೆ ಏನು ಕೇಡುಂಟು ಮಾಡಿವೆ? ಅಥವಾ ಅವುಗಳ ಬಗೆಗೆ ನೀನು ಮಾತನಾಡಲು ಅವುಗಳ ವಿಚಾರವನ್ನು ಎಷ್ಟು ಆಳವಾಗಿ ತಿಳಿದುಕೊಂಡಿದ್ದಿ? ಯಾವದೂ ಇಲ್ಲ. ಪಾಶ್ಚಾತ್ಯರು ಇದನ್ನೆಲ್ಲ ಮೂಢ ನಂಬಿಕೆ ಎಂದು ಹಳಿಯುತ್ತಾರೆಂಬದನ್ನು ನೀನು ಯಾರಿಂದಲೋ ಕೇಳಿರಬಹುದು. ಅಷ್ಟಕ್ಕೇ ಅದು ಮೂಢ ನಂಬಿಕೆ ಎಂಬ ದೃಢವಾದ ತೀರ್ಮಾನಕ್ಕೆ ನೀನು ಬಂದುಬಿಟ್ಟಿದ್ದೀಯೆ.

ಏಕೆ ರಮಾ? ಯಾವದೇ ವಿಷಯವನ್ನು ಯೋಚಿಸಿ, ತರ್ಕಿಸಿ, ನಿನ್ನದೇ ಆದ ನಿರ್ಧಾರಕ್ಕೆ ಬರಬಲ್ಲ ಮಹಾ ಶಕ್ತಿಯನ್ನು ದೇವರು ನಿನಗೂ ಕರುಣಿಸಿದ್ದಾನೆ. ಆ ಶಕ್ತಿಯನ್ನೇಕೆ ತುಕ್ಕು ಹಿಡಿಸಿ ಹಾಳು ಮಾಡುತ್ತಿ? ಭಾರತದಲ್ಲಿ ಹುಟ್ಟಿರುವ ನಿನಗೆ ಸ್ಥಿರವಾದ ಹಿನ್ನೆಲೆ ಇದೆ ರಮಾ. ಸ್ಪಷ್ಟವಾದ ಮಾರ್ಗಗಳೂ ಇವೆ. ಸಮರ್ಥರಾದ ಮಾರ್ಗದರ್ಶಕರೂ ಇದ್ದಾರೆ. ಸ್ವಯಂ ಪ್ರಕಾಶಿತವಾದ ಮಹಾನ್ ಗುರಿ ಇದೆ. ಕೊರತೆ ಇರುವದು ನಿನ್ನ ಸಂಕಲ್ಪದಲ್ಲಿ. ಬೇಕಾದುದು, ಅದನ್ನು ಪಡೆಯುವ ಮನಸ್ಸು ಮಾತ್ರ.

ರಮೆ:– ಹಾಗಿದ್ದರೆ ಅಗ್ರಪೂಜೆ ಯಾರಿಗಾಯಿತು?

ಮುರಳಿ:– ಹುಚ್ಚು ಹುಡುಗಿ. ಅಗ್ರಪೂಜೆಯನ್ನು ಯಾರಿಗೆ ಮಾಡಬೇಕೆಂದು ಕೇಳಿದ ಯುಧಿಷ್ಠಿರನಿಗೆ ಭೀಷ್ಮನು ಕೃಷ್ಣನನ್ನು ಸೂಚಿಸಿದನು. ಅದೇ ಪ್ರಕಾರ ಕೃಷ್ಣನನ್ನು ರಾಜಮರ್ಯಾದೆಗಳಿಂದ ಕರೆತಂದು ಪೀಠದಲ್ಲಿ ಕುಳ್ಳಿರಿಸಿ ಪೂಜಿಸಲಾಯಿತು. ಸಭೆಯಲ್ಲಿದ್ದ ಕೆಲವು ರಾಜರು ಇದನ್ನು ಸಹಿಸಲಿಲ್ಲ. ಆ

ಪೈಕಿ ಕೆಲವರು ಪಾಂಡವರಲ್ಲಿ ತಮಗಿದ್ದ ಸ್ನೇಹದಿಂದಾಗಿಯೂ, ಇನ್ನು ಕೆಲವರು ಕೃಷ್ಣನ ಮೇಲಿನ ಗೌರವದಿಂದಾಗಿಯೂ ಅದನ್ನು ವಿರೋಧಿಸಲಾಗದೆ, ಆದರೂ ಅಸಮಾಧಾನ ಪಟ್ಟುಕೊಂಡು ಸುಮ್ಮನಿದ್ದರು. ಆದರೆ ಚೇದಿ ದೇಶದ ರಾಜನಾದ ಶಿಶುಪಾಲನೆಂಬವನು........

ರಮೆ:– ಯಾರು? ಜರಾಸಂಧನ ಸೇನಾಪತಿಯಾಗಿದ್ದನೆಂದು ಹೇಳಿದಿರಲ್ಲ, ಅವನೇ?

ಮುರಳಿ:– ಶಿಶುಪಾಲನು ವಿಧಿಯಿಂದ ಪ್ರೇರಿತನಾಗಿ........

ರಮೆ:– ಅಯ್ಯೋ, ನಾನು ಕೇಳಿದುದಕ್ಕೆ ಉತ್ತರವೇ ಇಲ್ಲ?

ಮುರಳಿ:– ವಿಧಿಯಿಂದ ಪ್ರೇರಿತನಾಗಿ ಭೀಷ್ಮನನ್ನೂ, ಪಾಂಡವರನ್ನೂ....

ರಮೆ:– ಇದೇನಿದು?

ಮುರಳಿ:– ಯಾವದು? ಎಲ್ಲಿ?

ರಮೆ:– ನನ್ನ ಪ್ರಶ್ನೆಗೆ ಉತ್ತರವೇ ಇಲ್ಲ?

ಮುರಳಿ:– ನಾನು ಈ ಹಿಂದೆ ನಮ್ಮ ಆಧ್ಯಾತ್ಮ ಸಂಪತ್ತಿನ ಕುರಿತು ಅಷ್ಟೊಂದು ಮಾತನಾಡುತ್ತಿದ್ದಾಗಲೂ ನೀನು ಪಟ್‌ಪಿಟ್ ಅನ್ನದೆ ಇದ್ದಕ್ಕಿದ್ದಂತೆ ಅಗ್ರಪೂಜೆಗೇ ಹಾರಿಬಿಟ್ಟೆ?

ರಮೆ:– ನೀವು ಹೇಳುವದನ್ನೆಲ್ಲ ಮೌನದಿಂದ ಕೇಳಿದೆ ತಾನೆ? ಮೌನವೇ ಸಮ್ಮತಿಯ ಲಕ್ಷಣವೂ ಹೌದು ತಾನೆ? ಮತ್ತೇನು? ಒಪ್ಪಿಗೆಯಾದ ಮೇಲೆ ನಿಮ್ಮ ಕಥಾಭಾಗವನ್ನು ಜ್ಞಾಪಿಸಿದೆ. ನೀವೇಕೆ ನನ್ನ ಪ್ರಶ್ನೆಗೆ ಉತ್ತರ ಕೊಡದಿದ್ದುದು?

ಮುರಳಿ:– ನಿನ್ನ ಪ್ರಶ್ನೆಗೆ ನನ್ನ ಮೌನವೂ ಸಮ್ಮತಿಯಾಗಬೇಕಷ್ಟೆ? ಶಿಶುಪಾಲನು ಜರಾಸಂಧನ ಸೇನಾಪತಿಯೆ? ಎಂದು ಕೇಳಿದೆ. ಅಲ್ಲ ಎನ್ನದೆ, ಹೌದು ಎನ್ನದೆ ಆ ಕುರಿತು ಮೌನ ತಾಳಿ ಮುಂದುವರಿದೆ!

ರಮೆ:– ನೀವೇನೂ ಸಾಮಾನ್ಯದ ಜನವಲ್ಲ. ನೀವು, ಅಬ್ಬ!

ಮುರಳಿ:– ನನ್ನ ಕತೆ ನೀನು ಹೇಳುವದು ಮುಗಿಯಿತೊ? ಭೀಮನ ಕತೆ ಮುಂದುವರಿಸಲೊ?

ರಮೆ:– ಹೇಳಿ, ಹೇಳಿ. ಇರಲಿ. ಹೇಳಿ.

ಮುರಳಿ:– ಇರಲಿ, ಕೇಳು. ಶಿಶುಪಾಲನು ಪಾಂಡವರ ಪೂಜೆಯನ್ನು ಸ್ವೀಕರಿಸಿದ ಕೃಷ್ಣನನ್ನೂ, ಕೃಷ್ಣನನ್ನು ಪೂಜೆಗೆ ಸೂಚಿಸಿದ ಭೀಷ್ಮನನ್ನೂ ಮನಸಾರೆ

ಸಭೆಯಲ್ಲಿ ಹಳಿದು ಮಾತನಾಡಿದನು. ಪಂಡಿತರು, ವೀರರು, ಜ್ಞಾನಿಗಳು ಮೊದಲಾದ ಅನೇಕ ಶ್ರೇಷ್ಠ ವ್ಯಕ್ತಿಗಳು ಸಭೆಯಲ್ಲಿರುವಾಗ ಕುಲಾಧಮನಾದ ಕೃಷ್ಣನನ್ನು ಪೂಜಿಸಿದುದು ಅವರೆಲ್ಲರಿಗೂ ಮಾಡಿದ ಅವಮಾನವೆಂದು ದೂಷಿಸಿದನು. ಅವನಿಗೆ ಉತ್ತರ ಕೊಟ್ಟ ಭೀಷ್ಮನು ಕೃಷ್ಣನು ಸಾಕ್ಷಾತ್ ಪರಬ್ರಹ್ಮ ಸ್ವರೂಪನೆಂದು ತಿಳಿಸಿ ಅವನನ್ನು ಹಳಿಯುವ ಶಿಶುಪಾಲನು ಅಧಮನೆಂದು ಹೀಯಾಳಿಸಿದನು. ಇದರಿಂದ ಕೆರಳಿದ ಚೈದ್ಯನು, ಭೀಷ್ಮನನ್ನು, ಪಾಂಡವರನ್ನು ಇಮ್ಮಡಿಯಾಗಿ ಹಳಿದು ಕೃಷ್ಣನ ಕುರಿತು ಬಹಳ ಅವಹೇಳನಕರವಾದ ಮಾತುಗಳನ್ನಾಡಿದನು. ಇದನ್ನು ಕೇಳುತ್ತ ಕೇಳುತ್ತ ಭೀಮನಿಗೆ ಮಿತಿಮೀರಿದ ರೋಷವುಂಟಾಯಿತು. ಅವನ ಮೈಮೇಲಿನ ಕೂದಲು ನೆಟ್ಟಗೆ ನಿಂತವು. ಕಣ್ಣುಗಳು ಕೆಂಡದಂತೆ ಕೆಂಪಾದವು. ಸಿಟ್ಟಿನಿಂದ ಬಿಡುತ್ತಿದ್ದ ನಿಟ್ಟುಸಿರಿನಲ್ಲಿ ಹೊಗೆಯೂ ರೋಷವಹ್ನಿ ಜ್ವಾಲೆಯೂ ಹೊರಟಂತೆ ಕಾಣುತ್ತಿದ್ದಿತು. ತಾಳ್ಮೆಯನ್ನು ಮೀರಿದ ಕೋಪದ ಕಾವಿನಿಂದ ಕುತ್ತಿಗೆಯ ಮೇಲಿನ ಶುಭ್ರ ಮುಕ್ತಾವಳಿಯು ಕಳೆಗುಂದಿತು. ತ್ರಿಕೂಟಾಚಲದ ಮೇಲೆ ಮೂರು ಶಾಖೆಗಳಾಗಿ ಹರಿಯುತ್ತಿರುವ ಗಂಗಾನದಿಯಂತೆ ತೋರುತ್ತಿದ್ದ ಹುಬ್ಬಿನ ಗಂಟುಗಳನ್ನೂ ರೊಚ್ಚಿನಿಂದ ಅವನು ಹಲ್ಲು ಕಚ್ಚುತ್ತಿದ್ದುದನ್ನೂ ನೋಡಿ ಆ ಸಭೆಯಲ್ಲಿದ್ದ ಸಮಸ್ತ ರಾಜರೂ ನಡುಗಿದರು. ಸೆರಗನ್ನು ಸರಿಪಡಿಸಿಕೊಂಡು, ಕಿರೀಟವನ್ನು ಹಾವಿನ ಹೆಡೆಯಂತೆ ಬಾಗಿ ನಿಲ್ಲಿಸಿ, ಸೈನ್ಯವನ್ನು ಸಜ್ಜುಗೊಳಿಸುವದಕ್ಕೆ ಮಂತ್ರಿಗೆ ಆಜ್ಞಾಪಿಸಿ, ಒರೆಯಿಂದ ಕತ್ತಿಯನ್ನು ಹಿಡಿದು ಹೊರಡುವದಕ್ಕೆ ಸಿದ್ಧನಾಗುತ್ತಿದ್ದ ಭೀಮಪರಾಕ್ರಮಿಯನ್ನು ಕಂಡ ಭೀಷ್ಮನು ಕಾರ್ಯವು ವಿಪರೀತಕ್ಕೇರುವದೆಂದು ಒಂದೇ ನೆಗೆತಕ್ಕೆ ಹಾರಿ ಭೀಮನ ಕೈಯಿಂದ ಕತ್ತಿಯನ್ನು ಕಿತ್ತುಕೊಂಡು ಅವನ ಭುಜವನ್ನು ಅದುಮಿ ಸಮಾಧಾನೋಕ್ತಿಗಳಿಂದ ಅವನನ್ನು ಕೂರಿಸಿದನು. ಇದನ್ನು ನೋಡುತ್ತಿದ್ದ ಶಿಶುಪಾಲನು ರೋಷವನ್ನು ತಡೆಯಲಾರದೆ "ಎಲ್ಲವೋ ಭೀಷ್ಮ, ಭೀಮನನ್ನು ಬಿಡು. ಅವನನ್ನು ಕಡಿದು ಹಾಕಿ ಯಾಗಕ್ಕೆ ಪೂರ್ಣಾಹುತಿಯನ್ನು ಕೊಡುವೆನು. ದಕ್ಷಯಜ್ಞದ ರುದ್ರನನ್ನು ಮೀರುವೆನು" ಎಂದು ಬೊಬ್ಬಿರಿದನು. ಇದನ್ನು ಕೇಳಿದ ಭೀಮನೂ ತಳಮಳಿಸಿ "ತಾತಾ, ನನ್ನನ್ನು ಬಿಡು. ಅಹಂಕಾರದಿಂದ ಬೊಗಳುತ್ತಿರುವ ಇವನನ್ನು ಉಳಿಸಬಾರದು. ನನ್ನನ್ನು ತಡೆದು ರಾಜಕಾರ್ಯವನ್ನು ಕೆಡಿಸದಿರು" ಎಂದು ಗುಡುಗಿದನು. ಭೀಷ್ಮನು ಅವನನ್ನು ಪುನಃ ತಡೆಯುತ್ತಾ "ಅಪ್ಪಾ, ಈ ಶಿಶುಪಾಲನು ಪೂರ್ವದಲ್ಲಿ ರಾವಣ. ಇವನ ಕೊಲೆ ವಿಷ್ಣುವಾದ ಕೃಷ್ಣನಿಗೇ ಮೀಸಲು. ಇವನ ನೂರು ಅಪರಾಧಗಳನ್ನು ತಾನು ಕ್ಷಮಿಸುವದಾಗಿ ಇವನ ತಾಯಿಗೆ ಕೃಷ್ಣನು ಮಾತು ಕೊಟ್ಟಿದ್ದಾನೆ. ಶಿಶುಪಾಲನು ತನ್ನ ಅಪರಾಧಗಳನ್ನು ನೂರಕ್ಕೆ ತಲಪಿಸುತ್ತಿದ್ದಾನೆ. ಸ್ವಲ್ಪ ಸೈರಿಸು" ಎಂದನು. ಹಿರಿಯನಾದ ಭೀಷ್ಮನ ಮಾತಿಗೂ ಕೃಷ್ಣನ ಮಹಿಮೆಗೂ ತಲೆಬಾಗಿದ ಭೀಮನು

ಸಹನಾತೀತವಾಗಿ ಬೆಳೆದಿದ್ದ ತನ್ನ ಸಿಟ್ಟನ್ನು ಅಸಾಮಾನ್ಯವಾದ ಮನೋದಾರ್ಢ್ಯದಿಂದ ತಗ್ಗಿಸಿ ಸುಮ್ಮನೆ ಕುಳಿತನು.

ರಮೆ:– ಭೀಮ ಮಾಡುವದೆಲ್ಲ ಅಸಾಮಾನ್ಯವೇ ! ಏನನ್ನುತ್ತೀರಿ ?

ಮುರಳಿ:– ನೋಡಿದೆಯಾ ! ಈಗೀಗ ನಿನಗೆ ಭೀಮನ ವ್ಯಕ್ತಿತ್ವದ ಪರಿಚಯ ಚೆನ್ನಾಗಿ ಆಗುತ್ತಿದೆ.

ರಮೆ:– ಅಂದರೆ, ನೀವು ಕುರಿತು ಹೇಳುವ ಯಾರೇ ಆಗಲಿ, ಅವರು ಅಸಾಮಾನ್ಯರೇ ಆಗಿರುತ್ತಾರೆ. ಏನನ್ನುತ್ತೀರಿ ?

ಮುರಳಿ:– ಹಾಗಂದರೆ ?

ರಮೆ:– ಅಲ್ಲ ! ಪ್ರತಿ ತಾಯಿಗೂ ತನ್ನ ಮಗು ಅಸಾಮಾನ್ಯವೇ ಆಗಿರುತ್ತದೆ ಎಂದೆ. ಏನನ್ನುತ್ತೀರಿ ?

ಮುರಳಿ:– ಓಹೊ. ವ್ಯಂಗ್ಯವೊ ! ಭೀಮನು ತನ್ನ ಸಿಟ್ಟನ್ನು ತಡೆದುಕೊಂಡುದು ಅಸಾಮಾನ್ಯವಾದ ಮನೋದಾರ್ಢ್ಯದಿಂದ ಅಲ್ಲ ಎನ್ನುತ್ತೀಯಾ ?

ರಮೆ:– ಭೀಮನ ವ್ಯಕ್ತಿತ್ವವು ಬಹಳ ಸಣ್ಣದು ಎಂದು ನಾನು ವಾದಿಸುತ್ತಿದ್ದೇನೆ ಎಂದೇನೂ ತಿಳಿಯಬೇಡಿ. ನಿಮ್ಮ ವ್ಯಕ್ತಿತ್ವವನ್ನು ವಿಮರ್ಶೆ ಮಾಡುತ್ತಿದ್ದೇನೆ, ಅಷ್ಟೆ. ಈಗ ನೋಡಿ. ಭೀಮನಿಗೆ ಅಸಾಧ್ಯ ಸಿಟ್ಟು ಬಂತು ಎನ್ನುತ್ತೀರಿ. ಅದನ್ನು ಅವನು ತಡೆದುಕೊಂಡುದು ಅವನ ಅಸಾಮಾನ್ಯ ಶಕ್ತಿ ಎನ್ನುತ್ತೀರಿ. ಆದರೆ, ಅವನಿಗೆ ಯಾವದರಿಂದಾಗಿ ಅಪಾರವಾದ ಸಿಟ್ಟು ಬಂತೊ, ಆ ಘಟನೆಯನ್ನು ಅರ್ಜುನಾದಿಗಳೂ ನೋಡುತ್ತಿದ್ದರು. ಅವರಿಗೆ ಸಿಟ್ಟೂ ಬರಲಿಲ್ಲ, ಅದನ್ನು ತಡೆಯುವ ಆವಶ್ಯಕತೆಯೂ ಬರಲಿಲ್ಲ. ಇವನು ಸಿಟ್ಟನ್ನು ಬರಿಸಿಕೊಳ್ಳುವದು ಒಂದು ಅಸಾಮಾನ್ಯ ವಿಷಯ; ಆಮೇಲೆ ಅದನ್ನು ತಡೆಯುವದು ಇನ್ನೊಂದು ಅಸಾಮಾನ್ಯ ವಿಷಯ–ಇದೇ ತಾನೇ ಅವನ ದೊಡ್ಡ ವ್ಯಕ್ತಿತ್ವ ?

ಮುರಳಿ:– ಹಾಗೆ. ಹುಟ್ಟಿದ ಮೇಲೆ ಒಮ್ಮೆಯೂ ಮದ್ಯಪಾನ ಮಾಡದವನು ತಾನು ಕುಡುಕನಲ್ಲವೆಂಬ ಹೆಮ್ಮೆಯನ್ನು ತಾಳುವದಕ್ಕಿಂತಲೂ, ಜೀವನದ ಗುರಿಯೇ ಮದ್ಯಪಾನವೆಂಬಷ್ಟು ಕುಡಿತದ ಚಟವು ರಕ್ತಗತವಾಗಿ ಉಳ್ಳವನು ತಾನು ಕುಡಿಯುವದನ್ನು ಬಿಟ್ಟು ಪಡೆಯುವ ಹೆಮ್ಮೆ ವೈಶಿಷ್ಟ್ಯಪೂರ್ಣವಾದುದು. ಕುಡಿತವಾದರೂ ನಾವು ಸ್ವೀಕರಿಸಬಹುದಾದ, ಬಿಡಬಹುದಾದ ಚಟ. ಸಿಟ್ಟು, ಅನ್ಯಾಯವನ್ನು ಕಂಡಾಗ ಪ್ರತಿಭಟಿಸುವ ಗುಣ ಹೀಗಲ್ಲ. ಅದು ರಕ್ತಗತವಾಗಿರುವ ಸ್ವಭಾವ. ನೀನಂದ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಶಿಶುಪಾಲನು ಕೃಷ್ಣನನ್ನು ಹೀಯಾಳಿಸಿ ಮಾತನಾಡಿದುದು ನ್ಯಾಯವಿರುದ್ಧವಾದುದೆಂದು ಎಲ್ಲ ಪಾಂಡವರಿಗೂ, ಇತರ ಅನೇಕರಿಗೂ ತಿಳಿದಿದ್ದಿತು. ಆದರೆ ಅದನ್ನು ಪ್ರತಿಭಟಿಸು

ವಲ್ಲಿ ಯುಧಿಷ್ಠಿರನು ಧರ್ಮರಾಯನೆನಿಸಿಕೊಂಡವನಾಗಿ, ನಕುಲ ಸಹದೇವರು ಎಳೆಯರಾಗಿ ಅಸಮರ್ಥರಾದರು. ಆದರೂ ಭವಿಷ್ಯತ್ತನ್ನು ಬಲ್ಲ ಸಹದೇವನು ಗುಡುಗುತ್ತಲೇ ಇದ್ದನು. ಕೃಷ್ಣ, ಭೀಷ್ಮರಿಗೆ ಶಿಶುಪಾಲನ ಪೂರ್ವಾಪರ ತಿಳಿದಿದ್ದುದರಿಂದ ಅವರು ಸಮಯದ ಪಕ್ವತೆಗಾಗಿ ಕಾಯುತ್ತಿದ್ದರು. ಇನ್ನುಳಿದವರು ಭೀಮ, ಅರ್ಜುನ ಇಬ್ಬರು. ಈ ಇಬ್ಬರಲ್ಲಿ ಬಹಿರಂಗವಾಗಿ ನಡೆಯುತ್ತಿರುವ ಅನ್ಯಾಯವನ್ನು ಸಹಿಸದೆ ಸಿಡಿದೆದ್ದವನು ಮೇಲೋ, ಅನ್ಯಾಯವನ್ನು ನೋಡುತ್ತಲೇ ತಾಳ್ಮೆಯಿಂದ ಕುಳಿತಿದ್ದವನು ಮೇಲೊ? ಅನ್ಯಾಯವನ್ನು ಸಹಿಸಿಕೊಳ್ಳುವದು ಶಾಂತ ಪ್ರವೃತ್ತಿಯನ್ನು ಅವಲಂಬಿಸಬೇಕಾದ ಬ್ರಾಹ್ಮಣರಿಗೇ ದುಸ್ಸಾಧ್ಯವೆಂದಮೇಲೆ ಸತ್ವಶಾಲಿಯಾದ ಕ್ಷತ್ರಿಯನಿಗೆ ಸಾಧ್ಯವಾಗುತ್ತದೆಯೆ? ಸಾಧ್ಯವಾಗಬೇಕೆ? ಒಬ್ಬ ಮಹಾತ್ಮನನ್ನು ಸಾವಿರ ಜನರ ಮುಂದೆ ದೂಷಿಸುತ್ತಿರುವ ಒಬ್ಬ ದುಷ್ಟನ ಮೇಲೆ ಕೈ ಮಾಡಲು ಹವಣಿಸದಿರುವದು ಯಾವ ದೊಡ್ಡ ಗುಣವನ್ನು ತೋರಿಸುತ್ತದೆ? ಕುಲಕ್ಕೆ ಹಿರಿಯನೂ, ಪ್ರಾಜ್ಞನೂ ಆದ ಭೀಷ್ಮನ ಸಲಹೆಯ ಪ್ರಕಾರ, ತಾವೆಲ್ಲರೂ ಗೌರವದಿಂದ ಕಾಣುತ್ತಿದ್ದ ಕೃಷ್ಣನನ್ನು ತಾವುಗಳು ಪೂಜಿಸಿದುದನ್ನು ಶಿಶುಪಾಲನು ಬಹಿರಂಗವಾಗಿ ಖಂಡಿಸುತ್ತಿದ್ದಾಗ, ಅಂತಹ ಖಂಡನೆಯು ಅಖಂಡವಾಗಿ ಮುಂದುವರಿದು ಪರಿಸ್ಥಿತಿಯು ಮತ್ತೂ ಮತ್ತೂ ಹದಗೆಡುತ್ತಿರುವಾಗ ಅದನ್ನು ನಿವಾರಿಸಲು ಬೇಕಾದ ಸಿಟ್ಟನ್ನು ತಾಳಿದ ಭೀಮನು ತನ್ನನ್ನು ತಡೆದ ಭೀಷ್ಮನಿಗೆ "ನನ್ನನ್ನು ತಡೆದು ರಾಜಕಾರಣವನ್ನು ಕೆಡಿಸಬೇಡ" ಎಂದು ಹೇಳಿದುದು ಅವನ ಕರ್ತವ್ಯ ಪರಾಯಣತೆಯನ್ನೂ ತೋರಿಸುವದಿಲ್ಲವೆ?

ಇನ್ನು ಅಂತಹ ಅದಮ್ಯವಾದ ಸಿಟ್ಟನ್ನು ನಿಯಂತ್ರಿಸಿಕೊಳ್ಳಲು ಸಾಧ್ಯವಾಗುತ್ತಿದ್ದುದು ನಿಜವಾಗಿ ಭೀಮನಿಗಿದ್ದ ಒಂದು ಅಸಾಮಾನ್ಯ ಗುಣವೇ. ತಾಳ್ಮೆಯೇ ತಮ್ಮ ಧ್ಯೇಯದ ಅಡಿಪಾಯವಾಗಿರಬೇಕಾದ ಋಷಿಗಳೇ ತಾಳ್ಮೆಯನ್ನು ಮೀರುವಾಗ ಭೀಮನಂತಹ ವೀರ ಕ್ಷತ್ರಿಯನು ಹಿರಿತನಕ್ಕೆ ಗೌರವ ಕೊಟ್ಟು ತನ್ನ ಸಿಟ್ಟನ್ನು ಹಿಡಿತಕ್ಕೆ ತಂದುಕೊಳ್ಳುವದು ಜನ್ಮಾಂತರಗಳಲ್ಲಿ ಅಭ್ಯಾಸ ಮಾಡಿದರೂ ಸುಲಭವಾಗಿ ಕರಗತವಾಗದ ಮಹಾನ್ ಮನೋದಾರ್ಢ್ಯ.

ರಮೆ:- ನಾನು ಹಿಂದೆಯೇ ಹೇಳಿದಂತೆ ಚೆನ್ನಾಗಿ ಮಾತನಾಡುವ ಶಕ್ತಿಯನ್ನು ದೇವರು ನಿಮಗೆ ಕೊಟ್ಟಿದ್ದಾನೆ. ಆದುದರಿಂದ ಒಂದು ಸಣ್ಣ ವಿಚಾರ ತೆಗೆದುಕೊಂಡರೂ ಅದನ್ನು ಎಳೆದು, ಬಿಡಿಸಿ, ಜಜ್ಜಿ, ಹರಡಿ ಚೆಲ್ಲುವಂತೆ ಮಾತನಾಡಿಬಿಡುತ್ತೀರಿ. ಆಮೇಲೆ "ಏನನ್ನುವೆ ರಮಾ" ಎಂದು ಕೇಳುತ್ತೀರಿ. ಏನೋ ಹೇಳಬೇಕೆನಿಸಿದರೂ ಏನು ಹೇಳಬೇಕೆಂಬದು ಗೊತ್ತಾಗದೆ ನಿಮ್ಮ ಅಭಿಪ್ರಾಯವನ್ನೇ ಒಪ್ಪಿಕೊಂಡುಬಿಡಬೇಕಾಗುತ್ತದೆ. ಈಗ ಇದನ್ನೇ ತೆಗೆದುಕೊಳ್ಳಿ. ಭೀಮನಿಗೆ ಬಂದಿದ್ದ ಸಿಟ್ಟು ಶಾಂತವಾಯಿತು ಎನ್ನುವ ಸಣ್ಣ ವಿಚಾರಕ್ಕೆ ಎಷ್ಟೊಂದು

ವ್ಯಾಖ್ಯಾನ ಮಾಡಿದಿರಿ ! ವ್ಯಾಖ್ಯಾನವಾದರೂ ಹೋಗಲಿ. ಅದೇ ಅವನ ದೊಡ್ಡ ಗುಣ ; ಆದುದರಿಂದಲೇ ಅವನು ಮಹಾ ವ್ಯಕ್ತಿ ಎಂದು ವಾದಿಸಲೂ ತೊಡಗುತ್ತೀರಿ. ಇದನ್ನೆಲ್ಲ ನಾನು ಹೇಗೆ ಒಪ್ಪುವದು ಹೇಳಿ !

ಮುರಳಿ:– ಭೀಮನ ಸಿಟ್ಟು ಶಾಂತವಾಹುದು ದೊಡ್ಡ ವಿಷಯವಲ್ಲ ಎಂಬದು ನಿನ್ನ ಅಭಿಪ್ರಾಯ.

ರಮೆ:– ಅಲ್ಲವೇ ಮತ್ತೆ ?

ಮುರಳಿ:– ರೊಚ್ಚಿಗೆದ್ದ ಒಂದು ಗೂಳಿ ನಿನ್ನ ಮಗುವನ್ನು ತಿವಿದು ಕೊಲ್ಲಬೇಕೆಂಬದಕ್ಕಾಗಿ ಪ್ರಚಂಡ ಕೋಪದಿಂದ ಓಡಿ ಬರುತ್ತಿದೆ ಎನ್ನು. ಇದ್ದಕ್ಕಿದ್ದಂತೆ, ಮಗುವಿನ ಬಳಿಗೆ ಬಂದಾಗ ಅದಕ್ಕೇನೋ ವೈರಾಗ್ಯ ಬಂದುಬಿಟ್ಟು ಅದು ಶಾಂತವಾಗಿ ಹಿಂದಿರುಗುತ್ತದೆ ಎನ್ನು. ಅದರ ಬದಲು ಹಾಗೆ ನುಗ್ಗಿ ಬರುವ ಗೂಳಿಯನ್ನು ನಾನು ಧೈರ್ಯದಿಂದ ಎದುರಿಸಿ ನಿಂತು ನನ್ನ ಸರ್ವಶಕ್ತಿಯನ್ನೂ ಪ್ರಯೋಗಿಸಿ ಅದನ್ನು ತಡೆದು ಹೋರಾಡಿ ಆ ಗೂಳಿಯನ್ನು ನೆಲಕ್ಕೆ ಉರುಳಿಸುತ್ತೇನೆ, ಎನ್ನು. ಗೂಳಿ ತಾನಾಗಿ ಶಾಂತವಾದಾಗಲೂ ಇದ್ದ ಪರಿಸ್ಥಿತಿ ಒಂದೇ, ಈಗ ಅದು ಸತ್ತು ಶಾಂತವಾಗಿ ಮಲಗಿರುವಾಗಿನ ಪರಿಸ್ಥಿತಿಯೂ ಒಂದೇ ಎನ್ನುತ್ತೀಯಾ ?

ರಮೆ:– ಇಲ್ಲ.

ಮುರಳಿ:– ಭೀಮನ ಸಿಟ್ಟು ಹಾಗೆಯೇ. ಸಿಟ್ಟು, ದುಃಖ, ಕಾಮ ಮೊದಲಾದ ಮನೋವಿಕಾರಗಳ ಬಲ ಎಷ್ಟಿದೆಯೆಂಬದನ್ನು ನೀನು ತಿಳಿಯಲಾರದೆ ಹೋದರೆ ನೀನು ವ್ಯಕ್ತಿಯ ಅಂತಸ್ಸತ್ವವನ್ನು ಎಂದಿಗೂ ಅಳೆಯಲಾರೆ. ಈ ಯಾವದೇ ಮನೋವಿಕಾರವು ಪ್ರಬಲವಾಗಿ ತೋರಿಕೊಂಡಿತೆಂದರೆ ಆ ವ್ಯಕ್ತಿ ತನ್ನ ಮೇಲಿನ ಹತೋಟಿಯನ್ನು ಸಂಪೂರ್ಣವಾಗಿ ಕಳೆದುಕೊಳ್ಳುತ್ತದೆ. ಆ ವಿಕಾರವು ಅವನನ್ನು ಗೊಂಬೆಯಂತೆ ನಡೆಸಿಕೊಳ್ಳುತ್ತದೆ. ನಮ್ಮ ನಿತ್ಯ ಜೀವನದಲ್ಲಿ ಕಾಣುವ ಈ ವಿಚಾರಗಳನ್ನೆಲ್ಲ ನೀನು ನನ್ನಿಂದ ವಿವರವಾಗಿ ಹೇಳಿಸಿಕೊಳ್ಳಬಾರದಾಗಿತ್ತು. ಭೀಮನಿಗೆ ಬಂದ ಸಿಟ್ಟಿನ ಭರದಲ್ಲಿ ಅವನು ಭೀಷ್ಮನ ಮಾತಿಗೆ ಗೌರವ ಕೊಡುವದನ್ನೇ ಆಗಲಿ, ತನಗೆ ಶಿಶುಪಾಲನನ್ನು ಕೊಲ್ಲಲು ಸಾಧ್ಯವೇ ಇಲ್ಲವೇ ಎಂಬ ಅಥವಾ ಅವನನ್ನು ಕೊಂದರೆ ಅದರ ಪರಿಣಾಮವೇನಾದೀತು ಎಂಬ ಯಾವದೇ ವಿಮರ್ಶೆಯನ್ನಾಗಲೀ ಮಾಡಲು ಅವನಿಗೆ ಪ್ರಜ್ಞೆಯೇ ಇದ್ದಿರಲು ಸಾಧ್ಯವಿಲ್ಲ. ಪ್ರಚಂಡವಾದ ಸಂಯಮಶಕ್ತಿ ಇರುವವರು ಮಾತ್ರವೇ ತಮ್ಮಲ್ಲಿ ಹುಟ್ಟಿಕೊಳ್ಳುವ ವಿಕಾರವನ್ನು ನಿಯಂತ್ರಣದಲ್ಲಿಟ್ಟುಕೊಳ್ಳಬಲ್ಲರು. ಈ ಸಂಯಮ ಶಕ್ತಿ ಇರುವವರೇ ಋಷಿಗಳು, ತಪಸ್ವಿಗಳು; ಅದಿಲ್ಲದಿರುವವರೇ ರಾಕ್ಷಸರು, ದುಷ್ಟರು. ಒಬ್ಬನ ಮನಸ್ಸು ಪ್ರಶಾಂತವಾಗಿರುವಾಗ ಅವನ ವ್ಯಕ್ತಿತ್ವವನ್ನು ಅಳೆಯುವದಕ್ಕಿಂತಲೂ ಅದು ಕ್ಷೋಭೆಗೊಂಡಾಗ ಅವನು ಹೇಗೆ ವರ್ತಿಸುತ್ತಾನೆ

ಎಂದು ನೋಡುವದರಿಂದ ಅವನ ಮಾನಸಪತಿಯಲ್ಲಿ ರಾಕ್ಷಸಾಂಶ ಎಷ್ಟು, ದೈವಾಂಶ ಎಷ್ಟು ಎಂಬವನ್ನು ತಿಳಿಯಬಹುದು. ಈ ದೃಷ್ಟಿಯಿಂದ ಭೀಮನನ್ನು ಅಳೆದರೆ ಮಹಾಭಾರತದಲ್ಲಿ ಕೃಷ್ಣನನ್ನು ಬಿಟ್ಟರೆ ಇವನೇ ಅತ್ಯಂತ ಆದರ್ಶವಾದ ವ್ಯಕ್ತಿತ್ವ ಪಡೆದಿದ್ದವನು ಎಂದು ತಿಳಿಯುತ್ತದೆ.

ರಮೆ:– ಭೀಷ್ಮ, ಯುಧಿಷ್ಠಿರರಿಗೂ ಇಲ್ಲದಷ್ಟು ?

ಮುರಳಿ:– ಮಹಾಭಾರತದ ಅದ್ಭುತ ನಾಟಕದಲ್ಲಿ ನೇರವಾಗಿ ಪಾತ್ರಧಾರಿಯಾಗಿಲ್ಲದ ಭೀಷ್ಮನೊಂದಿಗೆ ಭೀಮನ ತುಲನೆ ಮಾಡುವದು ತಪ್ಪಾಗುತ್ತದೆ. ಇನ್ನು ಧರ್ಮಪರಾಯಣತೆಯ ತೂಕವು ಯಾವದೇ ಸೃಜನಾತ್ಮಕವಾದ ಚಟುವಟಿಕೆ ಮಾಡಲು ಯುಧಿಷ್ಠಿರನನ್ನು ಬಿಡದಷ್ಟು ಅಗಾಧವಾಗಿದ್ದುದರಿಂದ ಅವನೊಂದಿಗೂ ಭೀಮನ ವ್ಯಕ್ತಿತ್ವವನ್ನು ಹೋಲಿಸಲಾಗುವದಿಲ್ಲ. ಮಹಾಭಾರತದ ಪ್ರಧಾನ ಪಾತ್ರಧಾರಿಗಳು ದುರ್ಯೋಧನ, ಕರ್ಣ ಒಂದು ಕಡೆ, ಭೀಮ, ಅರ್ಜುನರು ಇನ್ನೊಂದು ಕಡೆ; ಹಾಗೂ ಕೃಷ್ಣ–ಇಷ್ಟು ಮಂದಿ ಮಾತ್ರ.

ರಮೆ:– ಆಯಿತು. ಒಪ್ಪಿದೆ. ಕತೆ ಹೇಳಿ.

ಮುರಳಿ:– ಕೇಳು. ಇಷ್ಟರಲ್ಲಿ ಹಸಿದ ಹುಲಿಯಂತೆ ಕೆರಳಿದ್ದ ಶಿಶುಪಾಲನು ತನ್ನ ಅಂತ್ಯಕಾಲವು ಸಮೀಪಿಸುತ್ತಿರುವಾಗ, ಆ ಅಂತ್ಯವನ್ನು ತಂದುಕೊಳ್ಳಲು ಬೇಕಾದ ತನ್ನ ಶತಾಪರಾಧಗಳನ್ನೂ ವಿಧಿಯ ಸಂಕಲ್ಪದಂತೆ ತೀರಿಸಲೇಬೇಕಾಗಿದ್ದು ಕೃಷ್ಣನನ್ನೂ, ಭೀಷ್ಮನನ್ನೂ, ಪಾಂಡವರನ್ನೂ, ಅವರ ಕುಲಗಳನ್ನೂ ಹುಚ್ಚನಂತೆ ಜರೆಯುತ್ತಾ ಕೃಷ್ಣನನ್ನು ಮನಸ್ವೀ ಹಳಿದು ಅವನನ್ನು ತನ್ನೊಂದಿಗೆ ಯುದ್ಧಕ್ಕೆ ಆಹ್ವಾನಿಸಿ ಯಾಗ ಮಂಟಪದಿಂದ ಹೊರಗೆ ನಡೆದನು. ಸಂದರ್ಭವು ಸರಿಯಾಗಿ ಒದಗಿದುದರಿಂದ ಕೃಷ್ಣನೂ ಹೊರಹೊರಟು ಶಿಶುಪಾಲನೊಂದಿಗೆ ಯುದ್ಧ ಮಾಡಿ ತನ್ನ ಚಕ್ರಾಯುಧದಿಂದ ಅವನ ಮತ್ತು ದಂತವಕ್ತ್ರನ ಪ್ರಾಣಗಳನ್ನು ನೀಗಿದನು. ಶಿಶುಪಾಲ ದಂತವಕ್ತ್ರರು ಜಯವಿಜಯರಾಗಿ ವಿರಾಜಿಸಿದರು. ಕೃಷ್ಣನ ಅಗ್ರಪೂಜೆಯೊಂದಿಗೆ ರಾಜಸೂಯ ಯಾಗವು ಸಮಾಪ್ತಿಗೊಂಡಿತು. ನೆರೆದವರೆಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗಿದರು. ಪಾಂಡವರಿಗೆ ಹಿತವಚನವನ್ನು ಹೇಳಿ ಕೃಷ್ಣನೂ ಹಿಂದಿರುಗಿದನು.

ಎಂಬಲ್ಲಿಗೆ ಮಹಾಭಾರತದೊಳ್ ಮೂರನೆ ಸಂಜೆಯ ಕಥಾ ವಿಸ್ತಾರಂ ಸಂಪೂರ್ಣಂ.

ರಮೆ:– ಇನ್ನು ನಾಳೆ ಸಂಜೆ.

ಮುರಳಿ:– ಅವ್.

ರಮೆ:– ಆವೋ, ಓಮೊ, ಏಳಿ.

††††††

# ನಾಲ್ಕನೆಯ ಸಂಜೆ

**ಮು**ರಳಿ:– ನಿನ್ನೆಯ ದಿನ ಕತೆ ಎಲ್ಲಿಗೆ ಬಿಟ್ಟೆವು ಹೇಳು ?

ರಮೆ:– ನಿಮ್ಮ ಈ ಆತ್ಮಜ್ಞಾನವು ವಿಜ್ಞಾನಕ್ಕಿಂತ ಹೇಗೆ ಉತ್ತಮವಾದುದು, ಹೇಳಿ.

ಮುರಳಿ:– ಒಬ್ಬ ಆತ್ಮಜ್ಞಾನಿಯನ್ನೂ ಒಬ್ಬ ವಿಜ್ಞಾನಿಯನ್ನೂ ಕೂರಿಸಿ ಚರ್ಚೆ ಮಾಡಲು ಬಿಡು.

ರಮೆ:– ಮತ್ತೆ ವಿಷಯ ಗೊತ್ತಿಲ್ಲದೆ ಏಕೆ ವಿಜ್ಞಾನವನ್ನು ನಿಕೃಷ್ಟವಾಗಿ ಕಾಣುತ್ತೀರಿ ?

ಮುರಳಿ:– "ವಿಷಯ ಗೊತ್ತಿಲ್ಲದೆ" ಎಂದು ನೀನೇ ಹೇಳಿದ್ದೀಯಲ್ಲ !

ರಮೆ:– ನಿಮಗೆ ವಿಷಯ ಗೊತ್ತಿಲ್ಲದಿರುವದು ! ಅಬ್ಬ ! ನಿಮ್ಮ ನೇರಕ್ಕೆ ಬೇಕಾದರೆ ನೀವು ಯಾವ ವಿಷಯದ ಮೇಲೆ ಬೇಕಾದರೂ ಮಾತನಾಡುತ್ತೀರಿ.

ಮುರಳಿ:– ನನ್ನ ನೇರಕ್ಕೆ ತಾನೆ ? ನನ್ನ "ನೇರ" ಇತರರ "ನೇರ"ವನ್ನು ಎಲ್ಲಿಯೂ ಮುಟ್ಟುವದಿಲ್ಲವೆಂದಾದರೆ ಮತ್ತೇಕೆ ನನ್ನನ್ನು ದಣಿಸುತ್ತಿ ?

ರಮೆ:–ಅರಗಿಣಿಯ ಮಾತು ನಿಜವಾಗಿಯೂ ನಮಗೆ ಅರ್ಥವಾಗುತ್ತದೆಯೆ ? ಆದರೂ ಅದನ್ನು ನಾವು ಮಾತನಾಡಿಸುವದಿಲ್ಲವೆ ?

ಮುರಳಿ:– ಹೌದು. ಇನ್ನೊಬ್ಬರು ಆಡುವದು ಅರ್ಥವಾಗದಿದ್ದರೂ ಅದನ್ನು ಕೇಳುತ್ತ ಕೂರುವ ಮೂರ್ಖರ ಮುಂದೆ ಮಾತನಾಡುವದು ನನಗೆ ರುಚಿಸುವದಿಲ್ಲ.

ರಮೆ:– ಪರವಾಗಿಲ್ಲ, ನೀವು ! ಏನೋ ಪಾಪ, ಅರಗಿಣಿ ಎಂದರೆ ನೀವು ತೋಳನಂತೆ ನುಂಗಲಿಕ್ಕೇ ಬರುತ್ತೀರಿ. ಚಿಂತೆಯಿಲ್ಲ !

ಮುರಳಿ:– ತೋಳ ಬರುವಾಗಲೂ ಚಿಂತೆ ಇಲ್ಲದಿರುವದು ಆತ್ಮಜ್ಞಾನದ ಲಕ್ಷಣವೂ ಆಗಬಲ್ಲದು. ನಿಮ್ಮ ವಿಜ್ಞಾನ ಇದಕ್ಕೆ ಏನು ಹೇಳುತ್ತದೆ ?

ರಮೆ:– ನೀವೇ ತಾನೆ, ವಿಜ್ಞಾನಿ, ಸುಜ್ಞಾನಿ ಎಲ್ಲ ? ನಾನು ಮೂರ್ಖಳು

ತಾನೆ ? ನೀವು ಹೇಳುವದನ್ನು ಕೇಳಲು ಕೂಡ ಯೋಗ್ಯತೆ ಇಲ್ಲದವಳು ? ನನ್ನನ್ನೇಕೆ ಕೇಳುತ್ತೀರಿ ?

ಮುರಳಿ:– ಕಿನ್ನರಿ ಬಾರಿಸಲೇಬೇಕೆಂಬ ಚಟ ಹಿಡಿದವರಿಗೆ ಜಾಣರು ಸಿಕ್ಕದಿದ್ದರೆ ಕೋಣನನ್ನೇ ಕುರಿತಾದರೂ ಬಾರಿಸಬೇಕಾಗುತ್ತದೆ !

ರಮೆ:– ಆಗಲಿ. ಇಲ್ಲಿಗೆ ನಿಮ್ಮ ಕತೆ, ಗಿತೆ ಎಲ್ಲ ಸಾಕು. ಯಾರಾದರೂ ಜಾಣೆ ಸಿಕ್ಕಿದರೆ ಅವಳ ಮುಂದೆಯೇ ಎಲ್ಲವನ್ನೂ ಹೇಳಿ.

ಮುರಳಿ:– ಅವಳಿದ್ದಲ್ಲಿಗೆ ನಾನು ಹೋಗಬೇಕೊ, ಅವಳನ್ನು ಇಲ್ಲಿಗೆ ಕರೆದುಕೊಂಡು ಬರಬಹುದೊ ?

ರಮೆ:– ಕರೆದುಕೊಂಡು ಬನ್ನಿ. ಕೆರಳಿದ ಕೋಣನ ಮುಂದೆ ಜಾಣೆಯನ್ನು ನಿಲ್ಲಿಸಿದರೆ ಏನಾದೀತು ಎಂದು ತಿಳಿಯುವ ಮೂರ್ಖರೊಂದಿಗೆ ಏನು ಮಾತನಾಡಲಿ !

ಮುರಳಿ:– ಭಲೆ, ನಿನಗೆ ನಾನು ಅನುಗ್ರಹಿಸಿದೆ. ಈಗ ನಿನ್ನ ಕೋಣನ ರೂಪು ಹೋಗಿ ನೀನು ಜಾಣೆಯಾಗಿಬಿಟ್ಟೆ. ನನ್ನ ಅನುಗ್ರಹಕ್ಕೆ ಅಷ್ಟು ಶಕ್ತಿ ಇದೆ.

ರಮೆ:– ಕವುಚಿ ಬಿದ್ದು ನೆಲ ಕಚ್ಚುತ್ತಿದ್ದರೂ ನಾನು ಆಕಾಶದಲ್ಲಿ ತೇಲುತ್ತಿದ್ದೇನೆಂದು ಕೊಚ್ಚಿಕೊಳ್ಳುವ ನಿಮ್ಮ ಆಡಂಬರವೆಲ್ಲ ಸಾಕು.

ಮುರಳಿ:– ಛೆ, ಛೆ. ನನ್ನ ಅನುಗ್ರಹ ನಿನಗೆ ವಿಪರೀತವಾಗಿಹೋಯಿತು. ಇದ್ದಬದ್ದದ್ದೆಲ್ಲ ನಿನಗೇ ಹೋಗಿಬಿಟ್ಟಿತು. ನನ್ನಲ್ಲಿ........

ರಮೆ:– ತೆಗೆದುಕೊಳ್ಳಿ. ಅನುಗ್ರಹ ಕೊಡುತ್ತೇನೆ. ಚೇತರಿಸಿಕೊಳ್ಳಿ.

ಮುರಳಿ:– ಕಳ್ಳಿ

ರಮೆ:– ಕಳ್ಳನ ಅರ್ಧಾಂಗಿ ಅಂತಲೊ ?

ಮುರಳಿ:– ಎಲಾ ! ನಿನಗೇನು ಬಂತು ಈ ದಿನ ಅಂತ ?

ರಮೆ:– ನಿಮ್ಮೊಂದಿಗೆ ಇದನ್ನೇ ಮಾತನಾಡುತ್ತಾ ಕುಳಿತರೆ ನಮ್ಮ ಸಂಧ್ಯಾವಂದನ ಕಾರ್ಯಕ್ರಮ ಕೆಟ್ಟುಹೋಗುತ್ತದೆ. ಈ ಹರಟೆ ಸಾಕು. ಕತೆ ಹೇಳಿ.

ಮುರಳಿ:– ನಿನ್ನೆ ಎಲ್ಲಿಗೆ ಬಿಟ್ಟೆ ಹೇಳು.

ರಮೆ:– ಕತೆಗಿಂತ ಮುಂಚೆ, ನಿನ್ನೆ ಅರ್ಧಕ್ಕೆ ನಿಲ್ಲಿಸಿದ ಆತ್ಮವಿಚಾರ ಮರೆತೇಹೋಯಿತೇನು ?

ಮುರಳಿ:– ಅದನ್ನು ಎಲ್ಲಿಗೆ ಬಿಟ್ಟೆ ಹೇಳು.

ರಮೆ:– ಬಿಡುವದೇನು ಮಣ್ಣು ? ಈಗ ಹೇಳಿ. ವಿಜ್ಞಾನಕ್ಕೂ, ಆತ್ಮ

ಜ್ಞಾನಕ್ಕೂ ವ್ಯತ್ಯಾಸವೇನು ? ಯಾವುದರ ಮಾರ್ಗ ಹೇಗೆ ? ಯಾವ ಮಾರ್ಗ ಸಾಧು ? ಎಲ್ಲ ಹೇಳಿ.

ಮುರಳಿ:- ಹೇಳುವದಲ್ಲ. ಚರ್ಚಿಸೋಣ. ನಾನು ವಿಷಯವನ್ನು ಪ್ರಾರಂಭಿಸುತ್ತೇನೆ.

ರಮೆ:– ಆಗಲಿ ಪ್ರಾರಂಭಿಸಿ.

ಮುರಳಿ:– ಈಗ ನೋಡು. ವಿಜ್ಞಾನಿಯನ್ನೂ ಆತ್ಮಜ್ಞಾನಿಯನ್ನೂ ಹೀಗೆ ಹೋಲಿಸಬಹುದು. ಯಾರೋ ಇಬ್ಬರು ಒಂದು ದೊಡ್ಡ ಕಾಡಿನೊಳಗೆ ಏಕೋ ಹೋಗಿಬಿಟ್ಟಿದ್ದಾರೆ ಎಂದಿಟ್ಟುಕೊ. ಅದು ಭಯಂಕರವಾದ ಗೊಂಡಾರಣ್ಯ. ಅಲೆದೂ ಅಲೆದೂ ಅವರಿಬ್ಬರೂ ಕಾಡಿನ ಮಧ್ಯೆ ದಾರಿ ತಪ್ಪಿಸಿಕೊಂಡುಬಿಡುತ್ತಾರೆ. ಆ ಪ್ರದೇಶವು ಅವರಿಬ್ಬರಿಗೆ ಸಂಪೂರ್ಣ ಹೊಸತಾದುದರಿಂದ ಅವರು ಎಷ್ಟು ಪ್ರಯತ್ನಪಟ್ಟರೂ ಸರಿಯಾದ ದಾರಿಯನ್ನು ಕಂಡುಕೊಳ್ಳಲು ಅಸಮರ್ಥರಾಗುತ್ತಾರೆ. ಅವರ ಪೈಕಿ ಒಬ್ಬನು ಬಹಳ ಸಾಹಸಿ. ಹೊಸ ಪರಿಸ್ಥಿತಿಯಿಂದಾಗಿ ಧೃತಿಗೆಡದ ಧೈರ್ಯವಂತ. ಯಾವ ಸೋಲಿಗೂ ಕುಗ್ಗದಷ್ಟು ಉತ್ಸಾಹಶಕ್ತಿ ಅವನಲ್ಲಿರುತ್ತದೆ. ಅವನು ತಮಗುಂಟಾದ ಸೋಲಿನಿಂದ ಅಧೀರನಾಗುವದಿಲ್ಲ. ದಾರಿ ಹುಡುಕುವ ಬಯಕೆಯನ್ನು ಒತ್ತಟ್ಟಿಗಿಟ್ಟು ಸದ್ಯದಲ್ಲಿ ಅವನನ್ನು ಕಾಡುತ್ತಿರುವ ಹಸಿವೆ,ಬಾಯಾರಿಕೆಗಳನ್ನು ತೃಪ್ತಿಪಡಿಸಲು ಪ್ರಯತ್ನಿಸುತ್ತಾನೆ. ಅವನ ಈ ಪ್ರಯತ್ನದಲ್ಲಿ ಅವನಿಗೆ ಹೊಸ ಹೊಸ ವಿಶೇಷಗಳು ಕಾಣಿಸುತ್ತವೆ. ಹಸಿದಿದ್ದ ಅವನಿಗೆ ನೀರು, ಹಣ್ಣು, ಎಲ್ಲ ಆಗಾಗ ದೊರಕುತ್ತವೆ. ಇದರಿಂದ ಇನ್ನೂ ಹೆಚ್ಚಾಗಿ ಉತ್ಸಾಹಗೊಂಡ ಅವನು ತನ್ನ ಪ್ರಯತ್ನವನ್ನು ಮತ್ತೂ ಮುಂದುವರಿಸುತ್ತಾನೆ. ಆದರೆ ಬರಬರುತ್ತಾ ಅವನು ತನ್ನ ಈ ಪರಿಶ್ರಮದಲ್ಲಿ ಸೋಲದೆ ಹೆಚ್ಚು ಹೆಚ್ಚು ಉತ್ಸಾಹದಿಂದ ಕಾಡಿನಲ್ಲೆಲ್ಲ ಅಲೆದಾಡುತ್ತಿದ್ದಾನೆಯೇ ಹೊರತು, ಆ ಕಾಡಿನಿಂದ ಹೊರಗೆ ಹೋಗುವ ದಾರಿಯನ್ನು ಕಂಡುಹಿಡಿಯುವ ಮೂಲ ಗುರಿಯಿಂದ ಅವನು ಬಹಳ ದೂರ ಹೋಗಿಬಿಟ್ಟಿರುತ್ತಾನೆ, ತನಗೆ ದೊರಕುತ್ತಿರುವ ಹೊಸ ಹೊಸ ಹಣ್ಣುಗಳ ರುಚಿಯಲ್ಲಿಯೇ ಮಗ್ನನಾಗಿಬಿಟ್ಟು.

ಇನ್ನೊಬ್ಬ ಹಾಗಲ್ಲ. ಇವನು ಮೊದಲಿನವನಂತೆ ವಿಪರೀತ ಅಲೆದಾಡುವದಿಲ್ಲ. ಅಲ್ಪ ಸ್ವಲ್ಪ ತಿರುಗಾಡಿದ ಇವನು ಒಂದು ಕಡೆ ನಿಂತು ತಾನು ಹೊರಗೆ ಹೋಗುವ ದಾರಿಯನ್ನು ಕಂಡುಕೊಳ್ಳಬೇಕಾದರೆ ತಾನು ಯಾವ ದಾರಿಗಾಗಿ ಬಂದಿದ್ದೇನೆ ಎಂಬದನ್ನು ಕಂಡುಹಿಡಿದುಕೊಳ್ಳುವದು ಉತ್ತಮವೆಂದು ಆ ಕುರಿತು ಚಿಂತಿಸುತ್ತಾನೆ. ತಾನು ಬಂದ ಮಾರ್ಗದ ದಿಕ್ಕು, ಗುರುತುಗಳನ್ನು ಕಂಡುಕೊಳ್ಳಲು ಆಳವಾಗಿ ಚಿಂತಿಸಿ ಪರಿಶ್ರಮಪಡುತ್ತಾನೆ. ಇವನಿಗಾದರೂ ಸರಿ

ದಾರಿಯು ತಕ್ಷಣ ಗೊತ್ತಾಗುವದಿಲ್ಲ. ಆದರೂ, ಇವನು ತಾನು ಬಂದ ದಾರಿಯಲ್ಲೇ ಜಾಗರೂಕತೆಯಿಂದ ಹಿಂದೆ ಹಿಂದೆ ಹೋಗುತ್ತ, ಯಾವದೋ ಒಂದು ನಿಮಿಷದಲ್ಲಿ ತನಗೆ ಅರಿವಿಲ್ಲದಂತೆಯೇ ತಾನು ಕಾಡಿನಿಂದ ಹೊರಗೆ ಬಂದಿರುವದನ್ನು ಕಂಡುಕೊಳ್ಳುತ್ತಾನೆ.

ಹೀಗೆ ವಿಜ್ಞಾನಿಯ ದೃಷ್ಟಿ ಬಹಿರ್ಮುಖವಾಗಿರುವದೂ, ಆತ್ಮಜ್ಞಾನಿಯದು ಅಂತರ್ಮುಖಿಯಾಗಿರುವದೂ ಅವರಿಬ್ಬರಲ್ಲಿ ಪ್ರಧಾನ ವ್ಯತ್ಯಾಸ.

ವಿಜ್ಞಾನಿಯ ಪ್ರಮುಖ ಪ್ರಶ್ನೆಗಳು ಹೀಗಿರುತ್ತವೆ. ಈ ಲೋಕವೆಲ್ಲ ಏನು ? ಇದು ಯಾವಾಗ ಉಂಟಾಯಿತು ? ಹೇಗೆ ಉಂಟಾಯಿತು ? ಇದು ಏಕೆ ಉಂಟಾಯಿತು ? ಇದರ ಮುನ್ನಡೆ ಹೇಗೆ ? ಇದಕ್ಕೆ ಅಂತ್ಯವಿದೆಯೆ ? ಇದ್ದರೆ ಅದು ಹೇಗಿರುತ್ತದೆ ? – ಇತ್ಯಾದಿ.

ಆತ್ಮಜ್ಞಾನಿಯೂ ಈ ಪ್ರಶ್ನೆಗಳನ್ನು ಕೇಳಿಕೊಳ್ಳುವದರಿಂದಲೇ ತನ್ನ ಜಿಜ್ಞಾಸೆಯನ್ನು ಪ್ರಾರಂಭಿಸುತ್ತಾನೆ.

ವಿಜ್ಞಾನಿಯು ಈ ರಹಸ್ಯಗಳನ್ನೆಲ್ಲ ಭೇದಿಸಲು ಸಾಹಸದಿಂದ ಮುನ್ನುಗ್ಗುತ್ತಾನೆ. ಅವನ ಈ ಪ್ರಬಲ ಪರಿಶ್ರಮದ ಹಾದಿಯಲ್ಲಿ ಅವನಿಗೆ ಅಷ್ಟಿಷ್ಟು ಸುಖದಾಯಕವಾದ ಫಲಗಳು ದೊರಕುತ್ತವಾದರೂ ಅವನು ತನ್ನ ಮೂಲಗುರಿಯಿಂದ ಇನ್ನೂ ಬಹಳ ದೂರದಲ್ಲಿರುವದನ್ನು ಕಂಡುಕೊಳ್ಳುತ್ತಾನೆ. ಸೃಷ್ಟಿಯ ರಹಸ್ಯವನ್ನು ಅವನು ಭೇದಿಸಲು ಪ್ರಯತ್ನಿಸಿದಷ್ಟೂ ಅದು ಹೆಚ್ಚು ಹೆಚ್ಚು ನಿಗೂಢವಾಗಿಯೇ ಪರಿಣಮಿಸುತ್ತದೆ. ಸೃಷ್ಟಿಯ ರಹಸ್ಯದ ಆಳವಾಗಲಿ, ಇದರ ವ್ಯಾಪ್ತಿಯ ವೈಶಾಲ್ಯವಾಗಲಿ ಅಂತ್ಯವೇ ಇಲ್ಲದಷ್ಟು, ಪಾರವೇ ಇಲ್ಲದಷ್ಟು ಅನಂತವಾಗಿರುವದನ್ನು ಅವನು ಕಂಡುಕೊಳ್ಳುತ್ತಾನೆ. ತಾನು ಈ ಸೃಷ್ಟಿಯ ರಹಸ್ಯವನ್ನು ಹೆಚ್ಚು ಹೆಚ್ಚು ಭೇದಿಸುತ್ತಿದ್ದೇನೆಂದು ಭಾವಿಸಿ ಅವನು ಮುಂದುವರೆದಷ್ಟೂ ಆ ರಹಸ್ಯದ ಆಳ ಹೆಚ್ಚುತ್ತಲೇ ಹೋಗುವದನ್ನು ಅವನು ಕಾಣುತ್ತಾನೆ.

ಆತ್ಮಜ್ಞಾನಿಯಾದರೂ ತನ್ನ ಜಿಜ್ಞಾಸೆಯನ್ನು ಈ ಸೃಷ್ಟಿಯ ರಹಸ್ಯವನ್ನು ಕಂಡುಕೊಳ್ಳುವ ಇಚ್ಛೆಯಿಂದಲೇ ಪ್ರಾರಂಭಿಸುತ್ತಾನೆ. ಅದರ ರಹಸ್ಯದ ಅಲ್ಪಸ್ವಲ್ಪ ಅಂಶಗಳು ತನಗೆ ತಿಳಿದಂತಾದಾಗಲೂ ಕೂಡ ಅವನು ವಿಜ್ಞಾನಿಯಂತೆ, ಇನ್ನೂ ಹೆಚ್ಚು ಪ್ರಯತ್ನಪಟ್ಟರೆ ಸೃಷ್ಟಿಯ ಪೂರ್ಣ ರಹಸ್ಯ ತಿಳಿದೀತು ಎಂಬ ಭ್ರಮೆಗೆ ಮಾರು ಹೋಗದೆ, ಈ ಸೃಷ್ಟಿಯ ರಹಸ್ಯವನ್ನು ಇಷ್ಟರಮಟ್ಟಿಗಾದರೂ ತಾನು ತಿಳಿದುದರಿಂದ ತನಗೆ ಆದ ಲಾಭ ಮತ್ತು ನಷ್ಟಗಳೇನು ಎಂದು ಯೋಚಿಸುತ್ತಾನೆ. ಮೂಲತಃ ಸುಖಾಪೇಕ್ಷಿಯಾದ ಮಾನವ, ಸೃಷ್ಟಿಯ ರಹಸ್ಯವನ್ನು ಕಂಡುಕೊಳ್ಳಲು ಪ್ರಯತ್ನಿಸುವದು ಕೂಡ ಸುಖಾಪೇಕ್ಷೆಯಿಂದಲೇ ಎಂಬದನ್ನು ಕಂಡುಕೊಂಡು,

ತನ್ನ ಹೊಸ ಸಂಶೋಧನೆಗಳಿಂದಾಗಿ ತನ್ನ ಸುಖ ಹೆಚ್ಚಿದೆಯೆ ? ತಾನು ಹೆಚ್ಚು ತೃಪ್ತನಾಗಿದ್ದೇನೆಯೆ ? ಎಂದು ಪ್ರಶ್ನಿಸಿಕೊಳ್ಳುತ್ತಾನೆ. ಅವನು ಪಡೆಯುವ ಉತ್ತರ ನಿರಾಶಾದಾಯಕವಾಗಿರುತ್ತದೆ. ಇತ್ತ ಸೃಷ್ಟಿಯ ರಹಸ್ಯವನ್ನೂ ಕಾಣಲು ಸಾಧ್ಯವಾಗದೆ, ಅತ್ತ ತನಗೆ ಮೂಲವಾಗಿ ಬೇಕಾಗಿರುವ ಮನಶ್ಶಾಂತಿಯೂ ದೊರಕದೆ ಇರುವ ಈ ಪ್ರಯತ್ನವು ತನಗೆ ಬೇಕಾದ ಸರಿಯಾದ ಮಾರ್ಗವಲ್ಲ ಎಂಬದನ್ನು ಆತ್ಮಜ್ಞಾನಿ ಕಂಡುಕೊಳ್ಳುತ್ತಾನೆ.

ರಮೆ:- ಇದನ್ನೆಲ್ಲ ಯಾವ ಆಧಾರದಿಂದ ಹೇಳುತ್ತೀರಿ ?

ಮುರಳಿ:- ಭಾರತೀಯ ಜೀವನಾದರ್ಶವೇ ಇದಕ್ಕೆ ಆಧಾರ. ರಾಜ ಮಹಾರಾಜರುಗಳ ಪೈಕಿಯೂ ಋಷಿಯಂತೆ ಬದುಕುವ ರಾಜರ್ಷಿಯೇ ಶ್ರೇಷ್ಠನಾದವನು; ಮಾನಸಿಕ ಶಾಂತಿ ಬೇಕಾದರೆ, ನಮಗೆ ತೃಪ್ತಿಯನ್ನು ಕೊಡುವವುಗಳೆಂದು ನಾವು ಭಾವಿಸುವ ಕಾಮನೆಗಳನ್ನು ಅಟ್ಟಿಕೊಂಡು ಹೋಗುವದರ ಬದಲು, ಅವುಗಳಿಗೆ ಬೆನ್ನು ಹಾಕಿ ವೈರಾಗ್ಯ ತಾಳಬೇಕು ಎಂಬ ನಮ್ಮವರ ಆದರ್ಶವೇ ಇದಕ್ಕೆ ಆಧಾರ.

ರಮೆ:- ಸರಿ.

ಮುರಳಿ:- ಈ ಸೃಷ್ಟಿಯ ವ್ಯಾಪ್ತಿ ಕಲ್ಪನೆಗೆ ಕೂಡ ನಿಲುಕದಷ್ಟು ಅಗಾಧವಾದುದು. ಇದರ ಪೂರ್ವಾಪರಗಳನ್ನು ಸ್ಪಷ್ಟವಾಗಿ ತಿಳಿದುಕೊಳ್ಳಲು ಮಾನವನಿಗಿರುವ ಆಯುಷ್ಯ ಕೇವಲ ಅತ್ಯಲ್ಪವಾದುದು. ಆದರೂ ಹಲವಾರು ತಲೆಮಾರುಗಳ ಅವಧಿಯಲ್ಲಾದರೂ ಮಾನವನು ಕೊನೆಗೊಮ್ಮೆ ಇದರ ರಹಸ್ಯವನ್ನು ಕಂಡುಕೊಂಡನೆಂದೇ ಇಟ್ಟುಕೊಳ್ಳೋಣ. ಇಷ್ಟು ಭಗೀರಥ ಪ್ರಯತ್ನಪಟ್ಟು ಅವನು ಆ ನಿಮಿಷದಲ್ಲಿ ಸಾಧಿಸಿದುದಾದರೂ ಏನು ? ಅವನ ಅಂತಹ ಸಾಧನೆಯಿಂದ ಮಾನವ ಕುಲವು ಪರಿಪೂರ್ಣವಾದ ಮನಶ್ಶಾಂತಿಯನ್ನು ಪಡೆಯಬಲ್ಲದೆಂಬ ಭರವಸೆಯೇನೂ ಇಲ್ಲ. ಏಕೆಂದರೆ, ವಿಜ್ಞಾನಿಯು ಈಗಾಗಲೇ ಗಳಿಸಿರುವ ಸಾರ್ಥಕತೆಯಿಂದಾಗಿ ಮಾನವರಿಗೆ ಭೌತಿಕವಾದ ಸೌಕರ್ಯ ಹೆಚ್ಚಾಗಿರಬಹುದಾದರೂ ಮಾನಸಿಕವಾದ ಶಾಂತಿ ಎಳ್ಳಿನಷ್ಟೂ ಹೆಚ್ಚಿರುವದಿಲ್ಲ. ಹಾಗಿರುವಾಗ ಅವನ ಸಂಶೋಧನೆಯಿಂದ-ಅದು ಎಷ್ಟು ಮಹತ್ವದ್ದೇ ಆಗಿರಲಿ-ಲೋಕಕ್ಕೆ ಅವಶ್ಯವಾದ ಲಾಭ ಏನೂ ಆಗಲಿಲ್ಲವೆಂಬದು ಸ್ಪಷ್ಟವಾಗಿಯೇ ಇದೆ.

ನಮ್ಮ ಪೂರ್ವಜರಾದರೂ ಪ್ರಕೃತಿಯ ಶಕ್ತಿಯನ್ನು ಕೈವಶ ಮಾಡಿಕೊಳ್ಳುವ ವಿಜ್ಞಾನದಲ್ಲಿ ಕೈ ಹಾಕಲಿಲ್ಲ ಎಂದು ಹೇಳುವಂತಿಲ್ಲ. ಮೂಲಿಕೆ, ಮಂತ್ರ, ತಪಸ್ಸು ಮೊದಲಾದವುಗಳ ಮೂಲಕ ಅವರು ಇಂದಿನ ಪರಮಾಣು ಬಾಂಬನ್ನು ಮೀರಿಸುವಂತಹ ಮಾರಕಾಸ್ತ್ರಗಳನ್ನು ಕಂಡುಹಿಡಿದಿದ್ದರು. ಮನೋವೇಗದಲ್ಲಿ ಸಂಚರಿಸುವ ಸಿದ್ಧಿಯನ್ನು ಪಡೆದುಕೊಂಡಿದ್ದರು. ನೆಲದ ಆಳದಿಂದ ನೀರನ್ನೆತ್ತುವ,

ನದಿಗಳನ್ನು ಶೋಷಿಸುವ, ಬೇಕೆಂದಾಗ ಮಳೆಯನ್ನು ಬರಿಸುವ, ಬೆಂಕಿಯನ್ನು ಚೆಲ್ಲುವ, ಲೋಕದ ಯಾವದೇ ಮೂಲೆಯಲ್ಲಿ ನಡೆಯುತ್ತಿರುವ ವಿದ್ಯಮಾನವನ್ನು ಕುಳಿತಲ್ಲಿ ನೋಡುವ, ಕೇಳುವ, ಬೇರೆ ಲೋಕಗಳಿಗೆ ಹಾಯಾಗಿ ಹೋಗಿ ಬರುವ –ಇನ್ನೂ ಅನೇಕ ವಿಧವಾದ ಸಾಧನೆಗಳನ್ನು ಅವರು ಪಡೆದಿದ್ದರು. ಯಾವ ಸಾಧನೆಗೆ ಇಂದಿನ ವಿಜ್ಞಾನ ಸಾಧನೆಯನ್ನು ಹೋಲಿಸಿದರೆ ಇಂದಿನದು ಇನ್ನೂ ಶೈಶವಾವಸ್ಥೆಯಲ್ಲಿಯೇ ಇದೆ ಎಂದು ಹೇಳಬಹುದೊ, ಅಂತಹ ದೊಡ್ಡ ಸಾಧನೆ ಗಳನ್ನು ಪಡೆದಿದ್ದಾಗಲೂ ಕೂಡ ನಮ್ಮವರು ಆ ಸಾಧನೆಗಳಿಗಿಂತ ಹೆಚ್ಚು ಗೌರ ವಾರ್ಹವಾದ, ಅಪೇಕ್ಷಣೀಯವಾದ, ಅವಶ್ಯವಾದ ಸಾಧನೆ ಆತ್ಮ ಸಾಕ್ಷಾತ್ಕಾರ ಎಂದು ತಿಳಿದುಕೊಂಡಿದ್ದರು. ಭೌತಿಕ ಸಾಧನೆಯ ಪ್ರತೀಕವಾದ ಕ್ಷತ್ರಿಯ ಬಲಕ್ಕೆ ಧಿಕ್ಕಾರವನ್ನು ಸೂಚಿಸಿ ಬ್ರಹ್ಮ ತೇಜಸ್ಸಿನ ಬಲಕ್ಕೆ ಶಿರಸಾ ಮಣಿದ ಪರಂಪರೆ ನಮ್ಮದು.

ರಮೆ:– ಇರಲಿ, ಭೌತಿಕವಾದ ಸಾಧನೆಗಳು ಆತ್ಮ ಸಂಬಂಧವಾದ ಸಾಧನೆ ಗಿಂತ ಹೇಗೆ ಅನಪೇಕ್ಷಣೀಯವಾದುದು ಎನ್ನುತ್ತೀರಿ ?

ಮುರಳಿ:– ಅದನ್ನು ಸ್ಥೂಲವಾಗಿ ಹಿಂದೆ ಹೇಳಿದ್ದೇನೆ. ಪ್ರಕೃತಿಯ ಶಕ್ತಿ ಪ್ರಚಂಡವಾದುದು. ಮೊದಲನೆಯದಾಗಿ ಅದನ್ನು ಗೆಲ್ಲುವ ಇನ್ನೊಂದು ಶಕ್ತಿ ಇರಲು ಸಾಧ್ಯವಿಲ್ಲ. ಒಂದು ವೇಳೆ ಗೆದ್ದರೂ ಕೂಡ ಮಾನವನು ಅಂತಹ ಗೆಲ್ಲು ವಿಕೆಯಿಂದ ಉತ್ತಮ ಎನಿಸಿಕೊಳ್ಳಲಾರ. ಸುಖವು ಭೌತಿಕ ಸಾಧನೆಗಳನ್ನು ಅವಲಂಬಿಸಿದೆ ಎಂದು ನಂಬುವ ವಿಜ್ಞಾನಿ ದೇಹಕ್ಕೆ ಸುಖ ದೊರೆತಷ್ಟೂ ಮನಸ್ಸಿಗೆ ಹೆಚ್ಚು ನೆಮ್ಮದಿ ದೊರಕುತ್ತದೆ ಎಂದು ಭಾವಿಸುತ್ತಾನೆ. ಆದರೆ ಸುಖದ ಮೂಲ ಹೊರಗೆಲ್ಲಿಯೂ ಇಲ್ಲದೆ ಅದು ತನ್ನ ಆತ್ಮನೊಳಗೇ ಇದೆ ಎಂದು ಆತ್ಮಜ್ಞಾನಿ ತೋರಿಸಿಕೊಡುತ್ತಾನೆ. ಇದು ನಮ್ಮೆಲ್ಲರ ಸಾಮಾನ್ಯ ಅನುಭವದಿಂದಲೂ ಸಿದ್ಧ ವಾಗುತ್ತದೆ. ಅಥವಾ ವಿಜ್ಞಾನಿಯ ಗುರಿಯು ಸದಾಕಾಲ ಶರೀರ ಸುಖವನ್ನು ಒದಗಿಸುವದಷ್ಟೇ ಅಲ್ಲದೆ ಪ್ರಕೃತಿಯ ರಹಸ್ಯವನ್ನು ತಿಳಿಯುವ ಮಾನಸಿಕ ಕುತೂ ಹಲವನ್ನು ತಣಿಸುವದಕ್ಕಾಗಿಯೂ ಇರುತ್ತದಾದ್ದರಿಂದ ಅದು ಬೌದ್ಧಿಕ ನೆಮ್ಮ ದಿಯ ಮೂಲಕ ಮನಸ್ಸಮಾಧಾನವನ್ನೂ ಕೊಡುತ್ತದೆ ಎಂಬದು ಕೂಡ ಸರಿ ಯಲ್ಲ. ವಿಜ್ಞಾನಿಯ ಯಾವದೇ ಸಂಶೋಧನೆಯು ಒಂದು ನಿಶ್ಚಿತ ಮಿತಿಯನ್ನು ತಲಪಬಹುದೇ ಹೊರತು ಅದರಿಂದ ಆಚೆಗೆ ಹೋಗಲಾರದು. ಬೀಜವು ಗಿಡ ವಾಗುವ ಚಮತ್ಕಾರವನ್ನು ಕಂಡು ಹಿಡಿಯುವ ವಿಜ್ಞಾನಿ ಆ ಬೀಜದ ಮೇಲೆ ಗಾಳಿ, ಬೆಳಕು, ಮಣ್ಣಿನ ಪೋಷಕಾಂಶ, ನೀರು–ಇವುಗಳೆಲ್ಲ ಹೇಗೆ ಹೇಗೆ ಪ್ರಭಾವ ಬೀರುತ್ತವೆ ಎಂಬದನ್ನಷ್ಟೇ ಹೇಳಿಯಾನೇ ಹೊರತು ಅದರಿಂದಾಚೆಗೆ ಏನೂ ಹೇಳ ಲಾರ–ಮನೆಗೆ ತಂದ ಸಾಮಗ್ರಿಗಳನ್ನು ಮನೆಯಾಕೆ ಅಡುಗೆ ಮಾಡುವಂತೆ.

ಸಾಮುಗ್ರಿಗಳನ್ನು ಒದಗಿಸುವ ಶಕ್ತಿ ಅವಳಿಗಿಲ್ಲ. ಒಂದು ಭಕ್ಷ್ಯದ ರುಚಿ ಹಾಗೆಯೇ ಏಕಿದೆ, ಬೇರೆ ಭಕ್ಷ್ಯದ ರುಚಿಯಂತೆ ಇದು ಏಕಿಲ್ಲ ಎಂಬದಕ್ಕೆ ಅವಳು ವಿವರಣೆ ಕೊಟ್ಟಾಳು. ಯಾವ ವಸ್ತು ಏನು ರುಚಿಯನ್ನು ಕೊಡಬಲ್ಲದು ಎಂಬದು ಅವಳ ಅಡುಗೆಯ ಪ್ರಯೋಗದಿಂದ ಆಕೆಗೆ ಗೊತ್ತಾಗಿದೆ. ವಿಜ್ಞಾನಿಯಾದರೂ ಇಷ್ಟೆ. ಬಹಳ ಕಷ್ಟಪಟ್ಟು ಪೆಟ್ಟಿಗೆಯ ಬಾಗಿಲು ತೆರೆದು ಒಳಗಿನ ವಸ್ತುಗಳನ್ನು ನಮಗೆ ತೋರಿಸಿಯಾನು. ಅವೆಲ್ಲವುಗಳ ಹೆಸರನ್ನೂ ಹೇಳಿಯಾನು. ಆದರೆ ಆ ಪೆಟ್ಟಿಗೆ ಅಲ್ಲಿಗೆ ಏಕೆ ಬಂತು? ಆ ವಸ್ತುಗಳನ್ನು ಅದರೊಳಗೆ ಇಟ್ಟವರು ಯಾರು? ಅವುಗಳನ್ನು ತಯಾರಿಸಿದುದೆಲ್ಲಿ? ಎಂಬ ಮೂಲ ಪ್ರಶ್ನೆಗಳಿಗೆ ಅವನು ಉತ್ತರ ಕೊಡಲಾರ–ಪ್ರತಿಯೊಂದು ವಸ್ತುವಿನ ಮೂಲಧಾತು ಇಂತಹದು ಎಂದು ಹೇಳುತ್ತಾನೆ. ಆ ಮೂಲ ಧಾತುವಿನ ಮೂಲ ಏನು? ಅದು ಅಲ್ಲಿ ಯಾಕೆ ಬಂದಿದೆ? ಇತ್ಯಾದಿ ವಿವರಗಳನ್ನು ಅವನು ಹೇಳಲಾರ.

ರಮೆ:– ಯಾಕೆ ಹಾಗನ್ನುತ್ತೀರಿ? ಎಷ್ಟೋ ಮೂಲವಾದ ಸಂಶೋಧನೆಗಳನ್ನೇ ಅವನು ಮಾಡಿದ್ದಾನಲ್ಲ?

ಮುರಳಿ:– ಹೌದು. ಒಟ್ಟನಲ್ಲಿ ಹೇಳುವಾಗ ಹೀಗೆ ಹೇಳಬೇಕಾಗುತ್ತದೆ. ವಿಜ್ಞಾನಿಯ ಒಂದೊಂದು ಸಂಶೋಧನೆಯನ್ನೂ ಬೇರೆ ಬೇರೆಯಾಗಿ ವಿಮರ್ಶಿಸಿದರೆ ಅವನು ಮೂಲಕ್ಕೆ ಬಂದಾಗ ಮೂಕನಾಗಿ ನಿಂತಿದ್ದಾನೆ ಎಂಬದನ್ನು ಅವನೇ ಹೇಳುತ್ತಾನೆ. ಇಷ್ಟಾಗಿ ರಮಾ, ಅವನು ಒಂದು ವಿಷಯದ ಏಕೆ? ಎಲ್ಲ ವಿಷಯಗಳ ಮೂಲವನ್ನೂ ಕಂಡುಹಿಡಿದನೆಂದೇ ಇಟ್ಟುಕೊ. ಅದರ ಪ್ರಯೋಜನವೇನು? ಚಂದ್ರಲೋಕಕ್ಕೆ ಹೋಗಿದ್ದಾನೆ. ಅದರ ಆಚೆಯ ಲೋಕಗಳಿಗೂ ಹೋದಾನು. ಸಮುದ್ರದ ತಳದಲ್ಲಿ ವಾಸ ಮಾಡಿ ಬಂದಿದ್ದಾನೆ. ಆದರೂ ಏನು?

ರಮೆ:– ಆಗಲಿ. ಹಾಗಿದ್ದರೆ ಬ್ರಹ್ಮಜ್ಞಾನಿಗೂ ವಿಜ್ಞಾನಿಗೂ ಎಲ್ಲಿ ವ್ಯತ್ಯಾಸ ಬಂದಿರುವದು ಎನ್ನುತ್ತೀರಿ? ಇವನದು ಸರಿ ಹೇಗೆ ಅವನದು ತಪ್ಪು ಹೇಗೆ?

ಮುರಳಿ:– ಇದನ್ನು ಹಿಂದೆಯೇ ಹೇಳಿದ್ದೇನೆ. ಒಂದು ಟಾರ್ಚ್ ಲೈಟ್ ಇದೆ ಎನ್ನು. ಕತ್ತಲಿನಲ್ಲಿ ಅದು ಬೆಳಕನ್ನು ಬೀರುತ್ತದೆ. ಅದರೊಳಗಿರುವ ಬಲ್ಬ್ ಎನ್ನುವದು ಕುತೂಹಲಿಯಾದ ಮಾನವ ಎಂದು ತಿಳಿದುಕೊ. ಅದು ಪ್ರಕೃತಿಯನ್ನು ನೋಡುತ್ತದೆ. "ಎಲಾ! ಈ ಪ್ರಕೃತಿ ಹೇಗೆ ಕಾಣಿಸುತ್ತಿದೆ? ಅದರಲ್ಲಿ ಕೆಲವು ಕಡೆ ಬೆಳಕೂ, ಕೆಲವು ಕಡೆ ಕತ್ತಲೂ ಇರುವದೇಕೆ? ಈ ಬೆಳಕು ನಿಜವಾಗಿ ಎಲ್ಲಿಂದ ಬಂತು?" ಎಂಬ ಕುತೂಹಲದಿಂದ ಅದು ಬೆಳಕಿನ

ರಶ್ಮಿಯನ್ನು ಅನುಸರಿಸಿ ಬೆಳಕಿನ ಮೂಲವನ್ನು ಹುಡುಕುತ್ತಾ ಹೊರಗೆ ಹೊರಡುತ್ತದೆ. ಅದರ ಪ್ರವಾಸ ಕಾಲದಲ್ಲಿ ಅದಕ್ಕೆ ನೂರು ವಿಧದ ಚಮತ್ಕಾರಗಳು ಕಾಣಸಿಗಬಹುದಾದರೂ ಬೆಳಕಿನ ಮೂಲ ಮಾತ್ರ ಕಾಣಸಿಕ್ಕುವದಿಲ್ಲ. ವಿಜ್ಞಾನಿಯ ಸಂಶೋಧನೆ ಹೀಗೆ.

ಆತ್ಮಜ್ಞಾನಿ ಹೇಳುತ್ತಾನೆ–ಬೆಳಕಿನ ಮೂಲವನ್ನು ಹುಡುಕಲು ಆ ಬಲ್ಬು ಹೊರಗೆ ಹೋಗಬಾರದಿತ್ತು. ಆ ಬೆಳಕು ತನ್ನದೇ ಎಂದೂ, ಆದರೆ ತನಗೂ ಆ ಬೆಳಕಿನ ಶಕ್ತಿಯನ್ನು ನೀಡಿರುವ "ಸೆಲ್"ಗಳು ತನ್ನ ಬೆನ್ನ ಹಿಂದೇ ಇವೆಯೆಂದೂ ಅದು ತಿಳಿದುಕೊಳ್ಳಬೇಕಾಗಿತ್ತು. ನಾನು ಹಿಂದೆಯೇ ಹೇಳಿದಂತೆ ವಿಜ್ಞಾನಿಯ ಏಕಾಗ್ರತೆ ಹೊರಗೆ ಹರಿದಿದೆ. ಬ್ರಹ್ಮಜ್ಞಾನಿಯದು ತನ್ನೊಳಗೇ ಹರಿದಿದೆ.

ರಮೆ:– ಇರಬಹುದು. ಆತ್ಮಜ್ಞಾನಿ ತನ್ನೊಳಗೆ ವಿಚಾರಿಸಿಕೊಂಡು ಆತ್ಮನ ಸಾಕ್ಷಾತ್ಕಾರ ಮಾಡಿಕೊಳ್ಳಬಹುದು. ಆದರೆ ಅಷ್ಟರಿಂದ ಅವನು ಈ ವಿಶ್ವದ ವಿವರಗಳನ್ನು ಕಂಡು ಹಿಡಿದಂತೆ ಆಗಲಿಲ್ಲವಷ್ಟೆ? ವಿಜ್ಞಾನಿಯು ಈ ಕೆಲಸವನ್ನು ಮಾಡುತ್ತಿದ್ದಾನೆ. ಅದರಲ್ಲಿ ಏನು ತಪ್ಪು?

ಮುರಳಿ:– ತಪ್ಪು, ಸರಿಯ ಪ್ರಶ್ನೆಯಲ್ಲ. ಬೆಟ್ಟವನ್ನು ಅಗೆದು ಇಲಿಯನ್ನು ಹಿಡಿದರು ಎಂಬಂತೆ. ಮೊದಲನೆಯದಾಗಿ, ಒಂದು ಇಲಿಯನ್ನು ಹುಡುಕುವದಕ್ಕೋಸ್ಕರ ಇಡಿಯ ಬೆಟ್ಟವನ್ನೇ ಅಗೆಯಲು ಸಾಧ್ಯವಿಲ್ಲ. ಬಹಳ ಪ್ರಯತ್ನದಿಂದ ಸಾಧ್ಯವಾದರೂ ಕೂಡ ಅದು ಪ್ರಯೋಜನಕಾರಿಯಾದ ಪ್ರಯತ್ನವಾಗುವದಿಲ್ಲ.

ವಿಜ್ಞಾನಿಯ ಕಾರ್ಯದಲ್ಲಿ ಇನ್ನೊಂದು ದೊಡ್ಡ ದೋಷವಿದೆ. ಆ ದೋಷದಿಂದಾಗಿ ಅವನು ಶತಮಾನಗಳ ಕಾಲ ಸಂಶೋಧನೆ ನಡೆಸಿದರೂ ಸಫಲವಾಗಲು ಸಾಧ್ಯವಿಲ್ಲ. ಈಗೀಗ ಈ ಸೌಂದರ್ಯ ಸ್ಪರ್ಧೆ ನಡೆಯುತ್ತದಷ್ಟೆ! ಆ ಸೌಂದರ್ಯ ಸ್ಪರ್ಧೆಯಲ್ಲಿ ಭಾಗವಹಿಸಲು ಒಬ್ಬಳು ತರುಣಿ ಬರುತ್ತಾಳೆ ಎಂದಿಟ್ಟುಕೊ. ಅವಳು ಹುಟ್ಟಿದಂದಿನಿಂದ ಒಮ್ಮೆಯೂ ತನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡಿರುವದಿಲ್ಲ ಎಂದಿಟ್ಟುಕೊ. ಅಂಥವಳು ಸೌಂದರ್ಯ ಸ್ಪರ್ಧೆಯಲ್ಲಿ ಭಾಗವಹಿಸಲು ಎಷ್ಟರಮಟ್ಟಿಗೆ ಅರ್ಹತೆ ಪಡೆದಿರುತ್ತಾಳೆ? ಹಾಗೆಯೇ, ಪ್ರಕೃತಿಯ ಒಂದು ಅವಿಭಾಜ್ಯ ಅಂಗವಾದ ಈ ಮಾನವನು, ಆ ಪ್ರಕೃತಿಯ ರಹಸ್ಯವೇನು ಎಂದು ಪ್ರಶ್ನಿಸುತ್ತಿರುವ ತಾನು ನಿಜವಾಗಿ ಯಾರು ಎಂಬದನ್ನು ತಿಳಿದುಕೊಳ್ಳದೆ ಸಂಶೋಧನೆ ಮಾಡುತ್ತಾ ಹೋಗುವದು, ತಾನು ಮೈಯಲ್ಲಿ ಹಚ್ಚಿಕೊಂಡಿರುವ ಸುಗಂಧವು ಎಲ್ಲಿಂದ ಬರುತ್ತಿದೆ ಎಂದು ಹುಡುಕುತ್ತಾ ಊರೂರು ಅಲೆದಂತೆ ಆಗುತ್ತದೆ.

ರಮೆ:– ಅಂದರೆ, ನೀವು ಏನು ಹೇಳುತ್ತಿದ್ದೀರಿ?

ಮುರಳಿ:– ಇದಕ್ಕೆ ತತ್ತ್ವ ಅನ್ನುತ್ತಾರೆ, ವೇದಾಂತ ಅನ್ನುತ್ತಾರೆ, ಆಧ್ಯಾತ್ಮ ವಿದ್ಯೆ ಅನ್ನುತ್ತಾರೆ, ಇನ್ನೂ ಅನೇಕ ರೀತಿ ಕರೆಯುತ್ತಾರೆ.

ರಮೆ:– ಓಹೋ. ಇದೇನಾ ನಿಮ್ಮ ದೊಡ್ಡ ಬ್ರಹ್ಮ ವಿದ್ಯೆ ?

ಮುರಳಿ:– ಯಾವದು ?

ರಮೆ:– ಅದೇ ಈಗ ನೀವು ಹೇಳುತ್ತಿದ್ದುದು ?

ಮುರಳಿ:– ಅದೇ ಬ್ರಹ್ಮವಿದ್ಯೆ ಅಲ್ಲದಿದ್ದರೂ ಬ್ರಹ್ಮ ವಿದ್ಯೆಯ ಕುರಿತು ಹೇಳುತ್ತಿದ್ದುದು ನಿಜ.

ರಮೆ:– ಸಾಕು ಬಿಡಿ. ಆ ಬ್ರಹ್ಮವಿದ್ಯೆಯನ್ನು ತಿಳಿಯುವ ಬಯಕೆ ನನಗೇನೂ ಇಲ್ಲ. ಭೀಮನ ಕತೆ ಮುಂದುವರಿಸಿ.

ಮುರಳಿ:– ಏನು, ಇದ್ದಕ್ಕಿದ್ದಂತೆ ?

ರಮೆ:– ಕುತೂಹಲದಿಂದ ನಾವು ಬಳಿ ಸಾರುತ್ತಿರುವ ವಸ್ತು ಇಂಥದೆಂದು ಗೊತ್ತಾದಮೇಲೆ ಅದರ ಬುಡಕ್ಕೇ ಹೋಗುವ ಹತ್ತು ಹೆಜ್ಜೆಯ ಶ್ರಮ ಪಡಬೇಕೇಕೆ ?

ಮುರಳಿ:– ಅಂತೂ ನಾನು ಮಹಾ ಭಾಗ್ಯವಂತ.

ರಮೆ:– ಹೇಗೆ ?

ಮುರಳಿ:– ನಿನ್ನಂತಹ ಪುಣ್ಯಾತ್ಮಳ ಕೈ ಹಿಡಿದುದರಿಂದ.

ರಮೆ:– ಅದೇನು ಹಾಗೆ ಹೇಳುತ್ತೀರಿ ?

ಮುರಳಿ:– ಹೌದು. ಯಾವ ವಿದ್ಯೆಯನ್ನು ಕರಗತ ಮಾಡಿಕೊಳ್ಳಲು ಅನೇಕ ಜನ್ಮಗಳನ್ನೆತ್ತಬೇಕು ಎಂದು ಹೇಳುತ್ತಾರೊ, ಯಾವದರ ಸಿದ್ಧಿಗಾಗಿ ವರ್ಷಗಟ್ಟಲೆ ತಪ, ಅನುಷ್ಠಾನಾದಿಗಳನ್ನು ಮಾಡಿ ನವೆಯಬೇಕು ಎನ್ನುತ್ತಾರೋ, ಅಂತಹ ವಿದ್ಯೆ ನಿನಗೆ ಹತ್ತು ಹೆಜ್ಜೆ ಇದೆ ಎನ್ನುವಾಗಲೇ ಕರಗತವಾಗಿಬಿಟ್ಟಿತೆಂದರೆ ಅದೇನು ಸಾಮಾನ್ಯ ವಿಚಾರವೆ ?

ರಮೆ:– ನಿಮ್ಮ ಆ ವಿದ್ಯೆ ನನಗೆ ಕರಗತವಾಯಿತೆಂದು ನಾನು ಹೇಳಲಿಲ್ಲ. ನಿಮ್ಮ ಮಾತಿನ ಪ್ರಕಾರ ನಿಮ್ಮ ಆ ಯಾವ ವಿದ್ಯೆಗೆ ಇಂದಿನ ವಿಜ್ಞಾನದ ಪ್ರಚಂಡ ಸಾಧನೆಗಳನ್ನೂ ಹೋಲಿಸಿದರೆ ವಿಜ್ಞಾನವು ಕೇವಲ ನಿಷ್ಪ್ರಯೋಜಕ ಎನಿಸುವದೆಂದು ನೀವು ಹೇಳುತ್ತಿದ್ದೀರೋ ನಿಮ್ಮ ಆ ವಿದ್ಯೆಯನ್ನು ತಿಳಿಯಲು ಹೋಗಿ ವಿಜ್ಞಾನದ ಬಗೆಗೆ ನನಗಿರುವ ಗೌರವವನ್ನು ಕಳೆದುಕೊಂಡು ನಾನು ಈ ಊರಿನ ಮುದಿ ವಿಧವೆಯರಂತೆ ಗೊಡ್ಡು ಎನಿಸಿಕೊಳ್ಳಲು ಬಯಸುವದಿಲ್ಲ. ಈ ವಿಷಯ ಚರ್ಚೆಯೇ ಬೇಡ. ದಯವಿಟ್ಟು ಭೀಮನ ಕತೆಯನ್ನು ಮುಂದುವರಿಸಿ.

ಮುರಳಿ:– ಚರ್ಚೆ ಬೇಕೆಂದು ನಾನು ಹೇಳುವದಿಲ್ಲ. ಆದರೆ ನನ್ನ ಗೊಡ್ಡುತನವನ್ನು ಪರಿಹಾರ ಮಾಡುತ್ತೀಯೋ ಏನೋ ಎಂಬ ಆಸೆಯಿಂದ ಕೇಳುತ್ತಿದ್ದೇನೆ, ಅಷ್ಟೆ, ಅದೇಕೆ ಹಾಗೆ ಹೇಳುತ್ತೀಯಾ ಎಂದು.

ರಮೆ:– ಬೇಡವೇ ಬೇಡ. ಅದರ ಕುರಿತು ಮಾತೇ ಬೇಡ.

ಮುರಳಿ:– ಯಾಕೆ?

ರಮೆ:– ನಿಮ್ಮದು ಏನೋ ಒಂದು ತಂತ್ರ ಇದೆ. ಎಷ್ಟೇ ಅಗಣ್ಯವಾದ ವಿಷಯವನ್ನಾದರೂ ನೀವು ಹೇಗೆ ಹೇಗೋ ಎಲ್ಲ ವಾದಿಸಿ ಅದು ಬಹಳ ಮಹತ್ವದ್ದು, ಅದಕ್ಕಿಂತ ಮಹತ್ವದ ವಿಷಯವೇ ಇಲ್ಲ ಎಂದು ನಾವು ನಂಬಿಬಿಡುವಂತೆ ಬೆರಗು ಮಾಡಿಬಿಡುತ್ತೀರಿ. ಮಾತಿಗೆ ಅವಕಾಶ ಕೊಟ್ಟರೆ ನಿಮ್ಮ ಈ ಆತ್ಮದ ವಿಚಾರವನ್ನು ಹಾಗೇ ಮಾಡಿಬಿಡುತ್ತೀರಿ. ಒಂದು ವಿಷಯಕ್ಕೆ ಬೆರಗಾಗಿ ಅದನ್ನು ಗೌರವಿಸುವದಕ್ಕೂ, ಅದರ ನಿಜವಾದ ಮಹತ್ವವನ್ನು ತಿಳಿದುಕೊಂಡು ಅದನ್ನು ಗೌರವಿಸುವದಕ್ಕೂ ವ್ಯತ್ಯಾಸವಿದೆ ತಾನೆ? ಹೀಗೆ, ಅಗಣ್ಯವಾದುದನ್ನು ನಿಮ್ಮ ಮಾತಿಗೆ ಬೆರಗಾಗಿ ಗಣ್ಯವಾದುದೆಂದು ಒಪ್ಪಿಕೊಂಡು ಸತ್ಯಕ್ಕೆ ಏಕೆ ಅಪಚಾರ ಮಾಡಲಿ? ಅದಕ್ಕೇ ಹೇಳಿದುದು, ಆ ಮಾತೇ ಬೇಡ ಅಂತ.

ಮುರಳಿ:– ನೂರಕ್ಕೆ ನೂರು ಹೆಣ್ಣು ನೀನು.

ರಮೆ:– ಹಾಗಿರುವದರಿಂದ ನನಗೇನೂ ಅವಮಾನವಾಗುವದಿಲ್ಲ. ಅಂತೂ ಅದೇನು ಹಾಗೆ ಹೇಳಿದಿರಿ?

ಮುರಳಿ:– ಬೇಕು ಎಂದರೆ ಬೇಕು. ಮೂರು ಲೋಕದ ಕಣ್ಣು ತಪ್ಪಿಸಿ ಯಾದರೂ ಸಾಧಿಸಲೇ ಬೇಕು. ಬೇಡ ಎಂದರೆ ಬೇಡವೇ ಬೇಡ. ಮೂರು ಲೋಕ ಬಲಾತ್ಕರಿಸಿದರೂ ಖಂಡಿತ ಬೇಡ. ಇದೇ ಹೆಣ್ಣುತನದ ಶೇಕಡಾ ನೂರರ ಲಕ್ಷಣ.

ರಮೆ:– ನಾನು ಇಷ್ಟರವುಟ್ಟಿಗೆ ಬೇಡ ಎನ್ನುತ್ತಿದ್ದರೂ ನೀವು ಬೇಕೇ ಬೇಕು ಎಂದು ಹಟ ಹಿಡಿಯುತ್ತಿರುವದು ಏನನ್ನು ತೋರಿಸುತ್ತದೆ? ನಿಮ್ಮಲ್ಲಿ ಪುರುಷತ್ವ ಕಡಿಮೆಯಾಗಿ ಹೆಣ್ಣುತನವೇ ಹೆಚ್ಚಾಗಿದೆ ಎಂದು ತೋರಿಸುತ್ತದೇನು?

ಮುರಳಿ:– ಅಬ್ಬ, ನೀನು! ಇರಲಿ. ರಾಜಸೂಯ ಯಾಗದ ಅಗ್ರಪೂಜೆಯು ಕೃಷ್ಣನಿಗೆ........

ರಮೆ:– ........ ನಾನು ಈ ಆತ್ಮಜ್ಞಾನ ಅಂದರೆ ಅದೇನೋ ಭಾರೀ ವಿದ್ಯೆ ಎಂಬ ಭ್ರಾಂತಿಯಲ್ಲಿದ್ದೆ........

ಮುರಳಿ:– ಕೃಷ್ಣನಿಗೆ ಅಗ್ರಪೂಜೆಯು ಸಂದಾಯವಾದ ಮೇಲೆ ........

ರಮೆ:– ಅಲ್ಲ ? ನೀವು ನಿಜವಾಗಿಯೂ ಒಬ್ಬರು ಬುದ್ಧಿವಂತರು ಎಂದು ಕೊಂಡಿದ್ದೆ. ನೀವೇನು ಈ ಆತ್ಮ ವಿದ್ಯೆಯನ್ನು ಅಷ್ಟು ದೊಡ್ಡದು ಮಾಡಿ ವಿಜ್ಞಾನವನ್ನು ಕಡೆಗೆಣಿಸುವದು ಅಂತ ?

ಮುರಳಿ:– ಬುದ್ಧಿವಂತಿಕೆಗೂ ಮೂರ್ಖತನಕ್ಕೂ ಇದೇ ವ್ಯತ್ಯಾಸ.

ರಮೆ:– ಯಾವದು ?

ಮುರಳಿ:– ಒಂದು ವಿಷಯವನ್ನು, ವಸ್ತುವನ್ನು, ಬುದ್ಧಿವಂತಿಕೆಯಿಂದ ವಿಮರ್ಶಿಸಿ ಅದು ತನಗೆ ಬೇಡ ಎಂದು ತಿರಸ್ಕರಿಸಿದರೆ ತಾನು ಹಾಗೆ ತಿರಸ್ಕರಿಸಿದು ದರ ಬಗೆಗೆ ತನಗೆ ತೃಪ್ತಿ, ಸಮಾಧಾನಗಳಿರುತ್ತದಷ್ಟೇ ಅಲ್ಲದೆ, ತಾನು ಹಾಗೇಕೆ ಮಾಡಿದೆ ಎಂಬ ರಹಸ್ಯವಾದ ಸಂಶಯು ಇರುವದೇ ಇಲ್ಲ. ವಿಷಯವನ್ನು ವಿಮರ್ಶಿ ಸದೆ ಮೂರ್ಖತನದಿಂದ ಅದನ್ನು ತಿರಸ್ಕರಿಸಿ ಪಟ್ಟುಹಿಡಿದು ಕುಳಿತರೆ, ತಾನು ಹಾಗೆ ತಿರಸ್ಕರಿಸಿದುದು ಸರಿಯೋ, ತಪ್ಪೊ ಎಂಬ ರಹಸ್ಯ ಸಂಶಯುವು ತನ್ನನ್ನು ಸದಾ ಕಾಡಿ ಮನಸ್ಸಮಾಧಾನನನ್ನು ಕೆಡಿಸುತ್ತದೆ.

ರಮೆ:– ಅದೇ, ಅದೇ. ದೇವರು ಏನೋ ಸ್ವಲ್ಪ ಬುದ್ಧಿ ಕೊಟ್ಟದ್ದಾ ನೆಂಬದಕ್ಕಾಗಿ ತನ್ನ ಭಯಂಕರ ಮೂರ್ಖತನವನ್ನು ಜಾಣತನವೆಂದು ಪ್ರದರ್ಶಿಸಿ ಕೊಂಡು, ಇತರರ ಜಾಣತನವನ್ನೂ ಮೂರ್ಖತನವೆಂದು ವಾದಿಸುವ ನಿಮ್ಮೆದುರಿನಲ್ಲಿ ಯಾವ ಜಾಣರು ಜಾಣರೆಂದು ಕರೆಯಲ್ಪಟ್ಟಾರು, ಹೇಳಿ !

ಮುರಳಿ:– ಚರ್ಚೆ ಮಾಡೋಣ ಎಂದರೆ ಬೇಡ ಅನ್ನುತ್ತೀಯ. ಸುಮ್ಮನೆ ನೀನು ಜಾಣ, ನಾನು ಮೂರ್ಖ ಎಂದುಕೊಂಡು ಮೊಂಡು ವಾದ ಮಾಡುತ್ತ ಕಾಲ ತಳ್ಳುತ್ತೀಯು. ನನ್ನ ಬಾಯಿಯಿಂದ ನೀನು ಜಾಣೆ ಎನಿಸಿಕೊಳ್ಳದಿದ್ದರೆ ನೀನು ನಿಜವಾಗಿ ಜಾಣೆ ಹೌದೋ ಅಲ್ಲವೋ ಎಂಬ ಶಂಕೆಯೂ ನಿನಗೆ ಬಲವಾಗಿದೆ. ಕತ್ತಲಿನ ಈ ಗುದ್ದಾಟವೇಕೆ? ಆತ್ಮಜ್ಞಾನವು ನಿನ್ನ ಕಡೆಗಣ್ಣಿನ ನೋಟವನ್ನು ಕೂಡ ಪಡೆಯುಬೇಕಾಗಿಲ್ಲದಿರುವಷ್ಟು ಅಗಣ್ಯವೆಂದು ನಿನಗೆ ಏಕೆ ಅನ್ನಿಸಿತು, ಹೇಳು ?

ರಮೆ:– ಅಲ್ಲ ? ಈ ಪ್ರಕೃತಿಯ ರಹಸ್ಯವೇನು ಎಂದು ಕಂಡು ಹಿಡಿಯಲು ಪ್ರಯತ್ನಿಸುವ ವಿಜ್ಞಾನಿಗೆ, ತಾನೇ ಯಾರೆಂಬ ವಿಚಾರ ತಿಳಿಯುವುದಿಲ್ಲ; ಆದುದರಿಂದ ಅವನು, ಅವನ ವಿದ್ಯೆ ಎಲ್ಲ ಕೆಳಮಟ್ಟದ್ದು ಎನ್ನುತ್ತೀರಲ್ಲ; ಇಂತಹ ಕ್ಷುಲ್ಲಕ ಅಭಿಪ್ರಾಯದ ಬಗೆಗೆ ನಿಜವಾಗಿ ವಾದ ಮಾಡಬೇಕೇ ಹೇಳಿ !

ಮುರಳಿ:– ಓ, ಇದೇನಾ ! ಇರಲಿ. ಹಾಗಾದರೆ ವಿಜ್ಞಾನಿಗೆ ತಾನು ಯಾರೆಂಬದು ಗೊತ್ತು ಎನ್ನುತ್ತೀಯಾ ?

ರಮೆ:– ಇದೇನು ಮಕ್ಕಳಂತೆ ಮಾತನಾಡುತ್ತಿದ್ದೀರಿ? ವಿಜ್ಞಾನಿಗೇನು, ಯಾರಿಗೆ ತಾನೇ ಗೊತ್ತಾಗುವದಿಲ್ಲ, ತಾನು ಯಾರು ಎಂಬದು?

ಮುರಳಿ:– ನಿನಗೂ ಗೊತ್ತು, ನೀನು ಯಾರೆಂಬದು?

ರಮೆ:– ಛೆ, ಈ ರೀತಿಯ ಹುಚ್ಚು ಮಾತುಗಳನ್ನಾಡುತ್ತ ಕಾಲ ಕಳೆಯುವದು ಬೇಡ. ಕತೆಯಾದರೂ ಹೇಳಿ.

ಮುರಳಿ:– ಕತೆ ಹೇಳುತ್ತೇನೆ. ಒಂದೆರಡೇ ಮಾತು. ನೀನು ಹಾಗಾದರೆ ಯಾರು?

ರಮೆ:– ಅಲ್ಲ? ನಿಜವಾಗಿ ಇದು ಎಂತಹ ಪ್ರಶ್ನೆ ಅಂತ?

ಮುರಳಿ:– ಎಂತಹ ಪ್ರಶ್ನೆಯೇನೂ ಅಲ್ಲ. ನಾನು ಯಾರೆಂಬದನ್ನು ತಿಳಿಯುಲು ನಾನು ತುಂಬ ಪ್ರಯತ್ನಿಸುತ್ತಿದ್ದೇನೆ. ನೀನು ಯಾರೆಂದು ತಿಳಿದುಕೊಂಡಿರುವ ನಿನ್ನಿಂದ ಏನಾದರೂ ನನಗೆ ಪ್ರಯೋಜನವಾದೀತೋ ಏನೋ ಎಂದು ಕೇಳುತ್ತಿದ್ದೇನೆ, ಅಷ್ಟೆ. ನನ್ನದು ಹುಚ್ಚು ಪ್ರಶ್ನೆಯೇ ಆಗಲಿ. ಸ್ವಲ್ಪ ಸೈರಿಸಿಕೊಂಡು ಉತ್ತರ ಕೊಡು, ನೋಡೋಣ.

ರಮೆ:– ಏನು ಸೈರಣೆಯೋ ಏನೋಪ್ಪ. ಏನಾದರೂ ಆಗಿರಲಿ. ಕೇಳಿ.

ಮುರಳಿ:– ನೀನು ನಿಜವಾಗಿ ಯಾರು?

ರಮೆ:– ಇದರಲ್ಲಿ ನಿಜವಾಗಿ, ಸುಳ್ಳಾಗಿ ಎಂದು ಎರಡು ನಾನು ಇಲ್ಲ. ನಾನು ಒಬ್ಬಳೇ. ಅದರಲ್ಲಿ ನಿಜವಾಗಿ ಎಂದು ಬೇರೆ ಏನಿದೆ?

ಮುರಳಿ:– ಆಗಲಿ. ನಿಜವಾಗಿ ಎಂದು ಬೇಡ. ನೀನು ಯಾರು?

ರಮೆ:– ನಾನು ರಮೆ.

ಮುರಳಿ:– ನಿನ್ನ ಹೆಸರನ್ನು ನಾನು ಕೇಳುತ್ತಿಲ್ಲ. ನೀನು ಯಾರು ಎಂದು ಕೇಳಿದೆ.

ರಮೆ:– ಹೆಸರಿಲ್ಲದೆ ನಾನು ಯಾರೆಂದು ಹೇಗೆ ಹೇಳುವದು? ಹಾಗಾದರೆ ನಾನೊಬ್ಬಳು ಹೆಂಗಸು.

ಮುರಳಿ:– ನೀನು ಗಂಡಸಲ್ಲ ಎಂದು ಹೇಗೆ ಹೇಳುತ್ತಿ?

ರಮೆ:– ನಿಮಗೆ ನಿಜವಾಗಿಯೂ ಈ ದಿನ ಯಾಕೋ ತಲೆ ಕೆಟ್ಟುಹೋಗಿದೆ.

ಮುರಳಿ:– ಛೆ. ಸೈರಿಸಿಕೊ. ಕೇಳಿದಷ್ಟಕ್ಕೇ ದಯವಿಟ್ಟು ಉತ್ತರ ಹೇಳು.

ರಮೆ:– ಗ್ರಹಚಾರ. ಆಗಲಿ, ಕೇಳಿ.

ಮುರಳಿ:– ನೀನು ಹೆಂಗಸು ಎನ್ನಬೇಕಾದರೆ ಗಂಡಸಲ್ಲ ಎಂದು ಏಕೆ ಹೇಳುತ್ತಿ ಎಂದು ಕೇಳಿದೆ.

ರಮೆ:– ನನ್ನ ಶರೀರ ಲಕ್ಷಣಗಳು ಗಂಡಸಿನವಲ್ಲದೆ ಹೆಂಗಸಿನದಾದ್ದರಿಂದ ನಾನು ಗಂಡಸಲ್ಲ, ಹೆಂಗಸು.

ಮುರಳಿ:– ಸರಿ. ಅಂದರೆ ನೀನು ಹೆಂಗಸು. ಶರೀರದಿಂದಾಗಿ ನೀನು ನಿನ್ನನ್ನು ಹೆಂಗಸು ಎಂದು ತಿಳಿದುಕೊಂಡಿದ್ದೀ. ಅರ್ಥಾತ್ ನೀನು, ಎಂದರೆ ನಿನ್ನ ಈ ಶರೀರ ಎಂದು ತಿಳಿದುಕೊಂಡಿದ್ದಿ.

ರಮೆ:– ಹೌದು. ನಾನು ಎಂದರೆ ಈ ಶರೀರವಲ್ಲದೆ, ಇದರ ಹೊರತೇನು ನಾನು ಎಂಬದು ?

ಮುರಳಿ:– ಅಂದರೆ, ಈ ಶರೀರ ಏನೋ ಅದುವೇ ನೀನು.

ರಮೆ:– ಹೌದೇ ಹೌದು.

ಮುರಳಿ:– ಈ ಹೊತ್ತು ಇಲ್ಲಿಗೆ ನಿಲ್ಲಿಸೋಣ. "ನಾನು ಎಂದರೆ ಈ ಶರೀರ" ಎಂದು ನೀನು ಹೇಳುತ್ತೀ. ಇಲ್ಲಿಂದ ಮುಂದಕ್ಕೆ ನಾಳೆ ಚರ್ಚಿಸೋಣ. ಈಗ ಕತೆ ಮುಂದುವರಿಸೋಣ. ಹೇಗೆ ?

ರಮೆ:– ಆಗಲಿ ಸದ್ಯ. ಅಂತೂ ಇದರಲ್ಲಿ ಚರ್ಚೆ ಮುಂದುವರಿಸುವದಕ್ಕೆ ಏನಿದೆಯೋ ಭಗವಂತನಿಗೇ ಗೊತ್ತು. ಈಗ ಹಾಗಾದರೆ ನೀವು ಎಂದರೆ ಈ ಶರೀರ ಅಲ್ಲವೊ ? ಇದು ಯಾರೋ ಬೇರೆಯವರೊ ?

ಮುರಳಿ:– ಅದೇ. ಅದನ್ನೆಲ್ಲ ನಾಳೆ ಚರ್ಚಿಸೋಣ ಎಂದೆ.

ರಮೆ:– ಆಯಿತಪ್ಪ. ಕತೆಯನ್ನಾದರೂ ಹೇಳಿ, ಈ ಕಾಡುಹರಟೆಗಿಂತ.

ಮುರಳಿ:– ಈ ಹರಟೆ ಕಾಡಿನಲ್ಲೇ ಪ್ರಾರಂಭವಾಗಿರಬೇಕು ಎನ್ನು. ಆದಿರಲಿ. ಕತೆ ಎಲ್ಲಿಗೆ ಬಿಟ್ಟದ್ದೆ ಹೇಳು ?

ರಮೆ:– ಅದೇ. ನಿಮಗೆ ಇದೆಲ್ಲ ನೆನಪಿರುವದಿಲ್ಲ. ಎಂಥೆಂಥದೋ ಹುಚ್ಚುಹುಚ್ಚು ವಿಷಯುಗಳನ್ನು ಏನೋ ಬ್ರಹ್ಮವಿದ್ಯೆ ಎಂಬಂತೆ ನೆನಪಿನಲ್ಲಿಟ್ಟುಕೊಳ್ಳುತ್ತೀರಿ.

ಮುರಳಿ:– ಅಂದರೆ, ಬ್ರಹ್ಮವಿದ್ಯೆ ಎಂದರೆ ಬಹಳ ಶ್ರೇಷ್ಠವಾದ ವಿದ್ಯೆ ಎಂದು ಒಪ್ಪುತ್ತಿ ?

ರಮೆ:– ಏನೋ ರೂಢಿಯಲ್ಲಿ ಬಂದ ಮಾತನ್ನು ಹೇಳಿಬಿಟ್ಟೆ ಅಷ್ಟೆ. ಬ್ರಹ್ಮವಿದ್ಯೆ ಎಂಥದು ಎನ್ನುವದನ್ನು ನೀವೇ ಹೇಳುತ್ತಿದ್ದೀರಲ್ಲ ! ನೀವು ಈಗ ಹೇಳುತ್ತಿದ್ದುದೂ ಬ್ರಹ್ಮ ವಿದ್ಯೆಯೇನೊ ?

ಮುರಳಿ:– ಯಾವದು ?

ರಮೆ:– ಅದೇ. ನೀನು ಯಾರು ಹೇಳು ? ನೀನು ಹೆಂಗಸೆಂದು ಹೇಗೆ ಹೇಳುತ್ತಿ ? ಈ ಶರೀರವೇ ನೀನೊ ? ಎಂದೆಲ್ಲ ಕೇಳುತ್ತಿದ್ದಿರಲ್ಲ ! ಅದೆಲ್ಲ ಬ್ರಹ್ಮ ವಿದ್ಯೆಗೇ ಸೇರಿದುದೋ ಎಂದು ಕೇಳಿದೆ.

ಮುರಳಿ:– ಹೌದು.

ರಮೆ:– ನೀವೂ, ನಿಮ್ಮ ಬ್ರಹ್ಮನೂ, ಈ ವಿದ್ಯೆಯೂ ! ನಿಜವಾಗಿ ಹೇಳು ತ್ತೇನೆ. ನೀವು ಆ ದರಿದ್ರ ವಿದ್ಯೆಯ ವಿಚಾರ ಇಲ್ಲಿಗೇ ಬಿಟ್ಟುಬಿಡಿ. ಕತೆ ಗಿತೆ ಚೆನ್ನಾಗಿ ಹೇಳುತ್ತೀರಿ. ಅದನ್ನೇ ಇನ್ನೂ ಹೆಚ್ಚು ವ್ಯಾಸಂಗ ಮಾಡಿ. ನನಗೇಕೋ ಕೆಲವೊಮ್ಮೆ ನಿಮ್ಮನ್ನು ನೆನಸಿಕೊಂಡರೆ ಹೆದರಿಕೆಯೂ ಆಗುತ್ತದೆ.

ಮುರಳಿ:– ಯಾಕೆ ?

ರಮೆ:– ಯಾಕೆ !

ಮುರಳಿ:– ಯಾಕೆ ಅಂತ ? ಇವನಿಗೆ ಹುಚ್ಚು ಹಿಡಿಯುತ್ತಿದೆಯೋ ಏನೋ ಅಂತಲೆ ?

ರಮೆ:– ಇಲ್ಲ ಮತ್ತೆ !

ಮುರಳಿ:– ಹುಚ್ಚು ಹುಡುಗಿ. ಈಗ ಆ ಮಾತು ಸಾಕು. ನಾಳೆ ಮುಂದು ವರಿಸೋಣ. ಕತೆ ಎಲ್ಲಿಗೆ ನಿಲ್ಲಿಸಿದ್ದೆ ಹೇಳು.

ರಮೆ:– ರಾಜಸೂಯ ಯಾಗ ಮುಗಿದು ಕೃಷ್ಣ ಕೂಡ ದ್ವಾರಕಿಗೆ ಹಿಂದಿರು ಗಿದ.

ಮುರಳಿ:– ಹಿಂದಿರುಗಿದ. ಆದರೆ ಯುಧಿಷ್ಠಿರಾದಿಗಳು ಈ ಯಾಗವನ್ನು ನಡೆಸಿ ಪಡೆದ ಕೀರ್ತಿ, ಸಂಪತ್ತು, ಗೌರವಗಳನ್ನು ನೋಡಿ ದುರ್ಯೋಧನನಿಗೆ ತಡೆಯಲಾರದಷ್ಟು ಕಿಚ್ಚುಂಟಾಯಿತು. ಅವನು ತನ್ನ ಅರಮನೆಯನ್ನು ನಡು ರಾತ್ರಿಯಲ್ಲಿ ಸೇರಿ ಯಾರನ್ನೂ ಒಳಹೊಗಲು ಬಿಡದೆ ಏಕಾಂತದಲ್ಲಿ ಮೌನವಾಗಿ ಪಾಂಡವರ ವೈಭವವನ್ನೂ ತನ್ನ ಪರಿಭವವನ್ನೂ ಚಿಂತಿಸುತ್ತಾ ತೊಳಲಾಡಿದನು. ಅವನನ್ನು ಸಮಾಧಾನಪಡಿಸುತ್ತಾ ಶಕುನಿಯು ಕೇವಲ ಮುಗ್ಧನಾದ ಯುಧಿಷ್ಠಿರ ನನ್ನು ತಾನು ಜೂಜಾಟದಲ್ಲಿ ಗೆಲ್ಲುವೆನೆಂದೂ ಆ ಮೂಲಕ ಪಾಂಡವರನ್ನು ಪರಾ ಭವಗೊಳಿಸಬಹುದೆಂದೂ ಸೂಚಿಸಿದನು. ಇದರಿಂದ ದುರ್ಯೋಧನನಿಗೆ ಏನೋ ಆಸೆ ಹುಟ್ಟಿದಂತಾಗಿ ಅವನು ಉಬ್ಬಿಹೋದನು. ಅವನು ತನ್ನ ತಂದೆಯಲ್ಲಿಗೆ ಹೋಗಿ ತನ್ನ ದಾಯಾದಿಗಳ ಅಭ್ಯುದಯದ ಸಮಯದಲ್ಲಿ ತನಗೆ ಉಂಟಾದ ಪರಾಭವವನ್ನು ಅವನಿಗೆ ವಿವರಿಸುತ್ತಾ "ತಂದೆಯೇ, ಯುಧಿಷ್ಠಿರನು, ಮಯನಿಂದ ನಿರ್ಮಿತವಾದ ಸಭೆ

ಯಲ್ಲಿ ಒಡ್ಡೋಲಗ ನಡೆಸುತ್ತ ನನ್ನನ್ನು ಕರೆಯಿಸಿದನು. ಆ ಸಭಾಭವನದ ವಿಚಿತ್ರತರವಾದ ಶಿಲ್ಪಗಳನ್ನು ನಾನು ತಿಳಿಯದೆ ನೀರಿದ್ದಲ್ಲಿ ನೆಲವೆಂದೂ, ನೆಲವನ್ನು ನೀರೆಂದೂ ಭ್ರಮಿಸಿ ಅಪಹಾಸ್ಯಕ್ಕೀಡಾದೆನು. ಒಂದು ವಿಗ್ರಹದಲ್ಲಿ ಪ್ರತಿಬಿಂಬಿಸುತ್ತಿದ್ದ ಬಾಗಿಲಿನ ಬಿಂಬವನ್ನು ಪ್ರವೇಶಿಸಲು ಹೋಗಿ ವಿಗ್ರಹಕ್ಕೆ ಡಿಕ್ಕಿ ಹೊಡೆದೆನು. ಭೀಮ, ದ್ರೌಪದಿಯರು ನನ್ನನ್ನು ಕಂಡು ಬಹಳವಾಗಿ ನಕ್ಕರು. ನಾನು ಈ ರೀತಿ ಸಂಕಟಪಡುತ್ತಿದ್ದುದನ್ನು ನೋಡಿ ಭೀಮನು ನನ್ನನ್ನು ಕುರಿತು "ಕೌರವ ರಾಜಾ, ಇದೋ ಇದು ಬಾಗಿಲು. ಇದು ಬಾಗಿಲಲ್ಲ. ಇವು ಕಂಭಗಳು, ಇಲ್ಲಿ ಕಂಭಗಳಿಲ್ಲ ಎನ್ನುತ್ತಾ ಕುರುಡನನ್ನು ನಡೆಸುವಂತೆ ನನ್ನನ್ನು ಕರೆದುಕೊಂಡು ಹೋದನು. ಭೀಮನ ದೃಷ್ಟಿಯಲ್ಲಿ ನಾನು ಎಷ್ಟರಮಟ್ಟಿಗೆ ದಡ್ಡನೆನಿಸಿಕೊಂಡು ಬಿಟ್ಟೆ! ಈ ಅವಮಾನವನ್ನು ನಾನು ಸಹಿಸಲಾರದೆ ಆ ಕೂಡಲೇ ಸತ್ತುಬಿಡಬೇಕೆಂದು ನಿಶ್ಚಯಿಸಿದೆ. ಆದರೆ ನನ್ನ ಮಾತಾಪಿತರಾದ ನಿಮಗೋಸ್ಕರ ಹೇಗೋ ಮನಸ್ಸನ್ನು ಬಿಗಿಹಿಡಿದೆ. ಸಾಧ್ಯವಿದ್ದಿದ್ದರೆ ನನ್ನ ಆಗಿನ ಆ ಉದ್ವೇಗದ ಭರದಲ್ಲಿ ಅಲ್ಲಿಯೇ ಭೀಮನನ್ನು ತೀರಿಸಿಬಿಡುತ್ತಿದ್ದೆ. ಆದರೆ ಅವನನ್ನು ನಾನು ಕೆಣಕಿದ್ದಿದ್ದರೆ ಶಿಶುಪಾಲನಿಗಾದ ಗತಿಯೇ ನನಗೂ ಆಗುತ್ತಿತ್ತು. ಇದನ್ನೆಲ್ಲ ಅವರ ಸರಿಸಮಾನನಾದ ನಾನು ಹೇಗೆ ಸಹಿಸಲಿ ? ಭೀಮನ ವಿಕಟಾಟ್ಟಹಾಸವು ಈಗಲೂ ನನ್ನನ್ನು ದಹಿಸುತ್ತಿದೆ. ಆದುದರಿಂದ ಅಲ್ಲಿದ್ದ ಅವರ ಸಭಾಭವನದಂತಹುದೇ ಒಂದನ್ನು ಇಲ್ಲಿಯೂ ನಿರ್ಮಿಸಿ, ಪಾಂಡವರನ್ನು ಜೂಜಿಗೆ ಕರೆಸಿ, ಅವರು ನಿರ್ಗತಿಕರಾಗುವವರೆಗೂ ಅವರನ್ನು ಜೂಜಿನಲ್ಲಿ ಸೋಲಿಸಿ ಅವರ ಮೇಲೆ ಪ್ರತೀಕಾರ ಮಾಡುವದಕ್ಕೆ ನನಗೆ ಅನುಮತಿ ಕೊಡು" ಎಂದು ಕೋರಿಕೊಂಡನು. ಧೃತರಾಷ್ಟ್ರನು ಎಷ್ಟು ಬುದ್ಧಿ ಹೇಳಿದರೂ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಹಿಡಿದ ಹಟವನ್ನು ಬಿಡುವವನಾಗಿರಲಿಲ್ಲ, ದುರ್ಯೋಧನ. ವಿಧಿಯಿಲ್ಲದೆ, ಮಗನ ಮೇಲಿನ ವ್ಯಾಮೋಹದಿಂದ ಅವನ ಮಾತಿಗೆ ಒಪ್ಪಿ ಪಾಂಡವರನ್ನು ಕರೆತರಲು ಧೃತರಾಷ್ಟ್ರನು ವಿದುರನನ್ನು ಕಳುಹಿಸಿದನು. ಈ ಸಲಹೆಯನ್ನು ವಿದುರನು ವಿರೋಧಿಸಿಯೂ ಪ್ರಯೋಜನವಾಗದ್ದರಿಂದ ಅವನು ಪಾಂಡವರಲ್ಲಿಗೆ ಬಂದು ವಿನೋದಕ್ಕಾಗಿ ಜೂಜಾಡಲು ಬರಬೇಕೆಂದು ಅವರನ್ನು ದುರ್ಯೋಧನನು ಆಹ್ವಾನಿಸಿರುವದಾಗಿ ತಿಳಿಸಿದನು. ಸಂಗಡಲೇ, ಮಿತಿಮೀರಿ ಜೂಜಾಡುವದು ಕೆಟ್ಟುದೆಂದೂ ಅವನು ಯುಧಿಷ್ಠಿರನನ್ನು ಎಚ್ಚರಿಸಿದನು. ಯುಧಿಷ್ಠಿರನು ಈ ಆಹ್ವಾನದ ಕುರಿತಾಗಿ ಯುವರಾಜನಾದ ಭೀಮನ ಸಲಹೆ ಕೇಳಲು ಅವನು ಯುಧಿಷ್ಠಿರನ ತೀರ್ಮಾನಕ್ಕೆ ತಾನು ಬದ್ಧನೆಂದು ತಿಳಿಸಿಬಿಟ್ಟನು.

ಮಾರನೆಯ ದಿನ ಸಕಲ ಸೈನ್ಯ, ರಾಣಿಯರನ್ನು ಒಳಗೊಂಡು ಪಾಂಡವರು ವಿದುರನ ಸಂಗಡ ಹಸ್ತಿನಾವತಿಗೆ ಪ್ರಯಾಣ ಹೊರಟರು. ದಾರಿಯಲ್ಲಿ ಕಾಣಿಸಿ

ಕೊಂಡ ಅನೇಕ ದುಶ್ಶಕುನಗಳನ್ನು ವಿಧಿ ಪ್ರೇರಿತರಾಗಿ ಲಕ್ಷಿಸದೆ ಅವರು ಹಸ್ತಿನಾವತಿಗೆ ಬಂದು ಧೃತರಾಷ್ಟ್ರನಿಗೆ ನಮಸ್ಕರಿಸಿದರು. ಆ ದಿನ ಸುಖವಾಗಿ ಕಳೆಯಿತು. ನೂತನವಾಗಿ ಕಟ್ಟಿದ್ದ ಸಭಾಭವನವನ್ನು ನೋಡಿಯೂ ಆಯಿತು. ಅನಂತರ ಶಕುನಿಯು ಯುಧಿಷ್ಠಿರನನ್ನು ಜೂಜಿಗೆ ಕರೆದನು. ಪ್ರಾರಂಭದಲ್ಲಿ ಅವನು ಈ ಆಹ್ವಾನವನ್ನು ನಿರಾಕರಿಸದರೂ ಶಕುನಿಯ ಮೂದಲಿಕೆಯ ಮಾತುಗಳಿಂದ ಮತ್ತನಾಗಿ ಕೊನೆಗೆ ಜೂಜಿಗೆ ಸಮ್ಮತಿಸಿದನು. ಫಣವಿಟ್ಟು ಜೂಜಾಡಿದನು. ಯುಧಿಷ್ಠಿರನು ಮೊದಲಿಗೆ ಎರಡು ಸಾವಿರ ಚಿನ್ನದ ರಥಗಳನ್ನು ಸೋತನು. ಅನಂತರ ಪ್ರತಿಯೊಂದು ಆಟದಲ್ಲಿಯೂ ಅನುಕ್ರಮವಾಗಿ ಎರಡು ಸಾವಿರ ವಾರನಾರಿಯರನ್ನು, ಹತ್ತು ಸಾವಿರ ಹೂಡಿದ ರಥಗಳನ್ನು, ತನ್ನ ಎಲ್ಲ ಸೈನ್ಯವನ್ನು ಸೋತುಬಿಟ್ಟನು. ಈ ದುರಂತವನ್ನು ಸಹಿಸಲಾರದೆ ವಿದುರನು ಪ್ರತಿಭಟಿಸಿದನಾದರೂ ದುರ್ಯೋಧನನು ಅವನನ್ನು ಗದರಿಸಿ ಕುಳ್ಳಿರಿಸಿದನು.

ಪುನಃ ಆಟವು ಪ್ರಾರಂಭವಾಯಿತು. ಯುಧಿಷ್ಠಿರನು ಪುನಃ ಕ್ರಮವಾಗಿ ತನ್ನ ಸಮಸ್ತ ಭಂಡಾರವನ್ನೂ, ಸಹದೇವ, ನಕುಲ, ಅರ್ಜುನ–ಈ ಮೂವರ ಮೈ ಮೇಲಿನ ಆಭರಣಗಳನ್ನೂ........

ರಮೆ:– ಭೀಮನದು ?

ಮುರಳಿ:– ಇಲ್ಲ. ಭೀಮನ ಕಿರೀಟ ಹೋದರೆ ಯುವರಾಜತ್ವವೇ ಹೋದಂತಾಗುತ್ತಿದ್ದುದರಿಂದ ಅದನ್ನು ಒಡ್ಡಲಿಲ್ಲ. ಹೀಗೆ ತನ್ನದೆನ್ನುವ ಎಲ್ಲ ವಸ್ತುಗಳನ್ನೂ ಸೋತು ಕೊನೆಗೆ ಫಣವಾಗಿಡಲು ಯಾವ ವಸ್ತುವೂ ಇಲ್ಲದಂತಾಗಿ ತನ್ನ ತಮ್ಮ ನಕುಲನನ್ನೇ ಫಣವಾಗಿ ಒಡ್ಡಿದನು.

ರಮೆ:– ಛೀ ಛೀ ಛೀ.

ಮುರಳಿ:– ಕೇಳು. ನಕುಲ ಸಹದೇವರನ್ನೂ ಒಡ್ಡಿ ಸೋತನು. ಆಟದ ಮತ್ತೇರಿ ಬುದ್ಧಿಯನ್ನು ಕಳೆದುಕೊಂಡಂತಿದ್ದ ಯುಧಿಷ್ಠಿರನಿಗಿರಲಿ; ಅಪದೆಸೆಯ ಆಘಾತ ತಮ್ಮ ಮೇಲೆರಗುತ್ತಾ ಇದ್ದುದನ್ನು ಅಸಹಾಯಕನಾಗಿ ಕುಳಿತು ನೋಡಬೇಕಾಗಿದ್ದ ಭೀಮನಿಗೆ ಹೇಗಾಗಿರಬೇಕು ! ಅವನ ಸ್ವಭಾವಸಹಜವಾದ ಸಿಟ್ಟನ್ನು ಮೆಟ್ಟಿ ನಿಲ್ಲುವಷ್ಟು ತಾಳ್ಮೆ, ಭ್ರಾತೃಪ್ರೇಮಗಳಿಲ್ಲದಿರುತ್ತಿದ್ದರೆ ಅವನು ಇಷ್ಟರಲ್ಲಿಯೇ ದುರ್ಯೋಧನ ಶಕುನಿಯರನ್ನು ಪೂರೈಸಿ ಅಣ್ಣನ ಮೇಲೆ ಎರಗಬೇಕಾಗಿತ್ತು. ಆದರೆ ಅವನು ಹಾಗೆ ಮಾಡುವದರ ಬದಲು ತನಗೆ ಬುದ್ಧಿ ಹೇಳಲು ಬಂದ ಶಕುನಿಗೆ ಉತ್ತರ ಕೊಡುತ್ತ "ಎಲವೋ ನಾವು ನಾಲ್ವರು ತಮ್ಮಂದಿರೂ ಯುಧಿಷ್ಠಿರನ ಶರೀರವೇ. ಮುಂಡವು ಚಲಿಸುವಾಗ ಕೈಗಳೂ ಅದನ್ನು ಅನುಸರಿಸುವಂತೆ

ಯುಧಿಷ್ಠಿರನು ಏನು ಸ್ಥಿತಿಯನ್ನು ಪಡೆಯುತ್ತಿದ್ದಾನೋ, ನನ್ನದೂ ಅದೇಯೋ ಎಂದು ತಿಳಿಸಿದನು.

ರಮೆ:– ಅವನು ಹಾಗೆ ಹೇಳುವದು ಸಹಜವೇ. ಅದರಲ್ಲಿ ಹೆಚ್ಚುಗಾರಿಕೆ ಏನಿದೆ?

ಮುರಳಿ:– ಏನಿಲ್ಲ ಅನ್ನು. ಈಗ ನಾನೂ ನೀನೂ ಇದ್ದೇವೆ.

ರಮೆ:– ಇಲ್ಲಿ.

ಮುರಳಿ:– ಇಲ್ಲಿಯೇ. ನೀನು ನೋಡನೋಡುತ್ತ ಇರುವಂತೆಯೇ ನಾನು ನನ್ನ ಸಮಸ್ತ ಸ್ವತ್ತುಗಳನ್ನೂ, ಸಾಲದುದಕ್ಕೆ ನಿನ್ನ ಮೈ ಮೇಲಿರುವ ಆಭರಣ, ಸೀರೆ, ಕುಪ್ಪಸ ಮೊದಲಾದುವನ್ನೂ ಒಬ್ಬಳು ವೇಶ್ಯೆಗೆ ಕೊಡುತ್ತಾ ಹೋದರೆ ನೀನೇನು ಮಾಡುವೆ?

ರಮೆ:– ಕೊಡುವ ಪ್ರಶ್ನೆ ಎಲ್ಲಿ ಬರುತ್ತದೆ? ಅವಳು ನಾನಿರುವಾಗ ಈ ಮನೆಯ ಮೆಟ್ಟಲು ಹತ್ತಿ ಬರಲು ಸಾಧ್ಯವಾದರೆ ತಾನೇ ನೀವು ಕೊಡುವ ಸಾಧ್ಯತೆ ಬರುವದು?

ಮುರಳಿ:– ಒಂದು ವೇಳೆ ಅವಳು ಬಂದು ನಾನು ಅವಳಿಗೆ ಕೊಡುತ್ತಾ ಹೋಗುತ್ತೇನೆ ಎಂದಿಟ್ಟುಕೊ. ಆಗ ನೀನೇನು ಮಾಡುತ್ತಿ?

ರಮೆ:– ಮಾಡುವದೆ? ಕಬ್ಬಿಣದ ಊದು ಕೊಳವೆ ಹಿಡಿದು ಅವಳ ತಲೆಯೊಡೆದು ಹಾಕದಿದ್ದರೆ ನಾನು ಹೆಣ್ಣೇ ಅಲ್ಲ.

ಮುರಳಿ:– ಏನೂ ಮಾಡಲು ಕೈಲಾಗದ ನಿನ್ನಂತಹ ಚಿಲ್ಲರೆ ವ್ಯಕ್ತಿಯೇ ಹಾಗೆ ಮಾಡಲು ಮನಸ್ಸು ಮಾಡುವಾಗ, ಕೌರವಾದಿಗಳ ರಕ್ತ ಹೀರಲು ಸಮರ್ಥನಾಗಿದ್ದ ಭೀಮನು ತಮ್ಮ ಸರ್ವ ನಾಶವಾಗುತ್ತಿರುವದನ್ನೂ ನೋಡಿ ಕೊಂಡು ಸಹನೆಯಿಂದ ಕುಳಿತಿದ್ದ ಎಂಬದು ಕಾಣಲು ಸಾಮಾನ್ಯವೆನಿಸಿದರೂ ಕಲ್ಪನೆಗೆ ಅಸಾಮಾನ್ಯವಾಗಿ ಕಾಣಿಸುವ ಗುಣ. ಭೀಮನ ದೇಹದಾರ್ಢ್ಯ, ಕೋಪ, ಯುದ್ಧಾಸಕ್ತಿಗಳು ಅವನನ್ನು ಅವನ ಕಾಲದ ಇತರರಿಗಿಂತ ಹೆಚ್ಚು ವಿಶಿಷ್ಟಪೂರ್ಣವಾದ ವ್ಯಕ್ತಿಯನ್ನಾಗಿ ಮಾಡಿರುವುದು ನಿಜ. ಆದರೆ ಅವನ ಸಹನಶೀಲತೆ ಅವನನ್ನು ಈ ದೇಶದಲ್ಲಿ ಯಾವದೇ ಕಾಲದಲ್ಲಿ ಆಗಿಹೋದ ಕೇವಲ ಕೆಲವೇ ಮಹಾನುಭಾವರ ಸಾಲಿನಲ್ಲಿ ಸೇರಿಸುತ್ತದೆ ಎಂಬುದನ್ನು ವಿಮರ್ಶಕರು ನೋಡದಿರುವದು ಒಂದು ವಿಚಿತ್ರವೇ ಸರಿ. ಇಂದ್ರಿಯಗಳ ಮೇಲೆ ಸಂಪೂರ್ಣವಾದ ಹತೋಟಿಯಿಟ್ಟು, ಎಂತಹ ಪ್ರಕ್ಷುಬ್ಧವಾದ ಪರಿಸ್ಥಿತಿ ಒದಗಿದರೂ ಭಾವೋದ್ವೇಗಕ್ಕೆ

ಪ್ರಾಧಾನ್ಯ ಕೊಡದೆ, ಪರಿಸ್ಥಿತಿಯ ಹಿಂದುಮುಂದುಗಳನ್ನು ನಿಧಾನವಾಗಿ ವಿಮರ್ಶಿಸಿ ಕೊನೆಗೊಂದು ಶೀರ್ಮಾನಕ್ಕೆ ಬಂದು ಆ ಶೀರ್ಮಾನದ ಗುರಿಯನ್ನು ಸಾಧಿಸುವದಕ್ಕಾಗಿ ಮೈಮೇಲೆ ಪ್ರಜ್ಞೆ ಇಲ್ಲದಿರುವಷ್ಟು ಮಟ್ಟಿಗೆ ಪ್ರಯತ್ನಿಸುವ ಗುಣವನ್ನು ಸ್ವಭಾವದಲ್ಲಿಯೇ ಪಡೆದಿದ್ದ ಭೀಮನು ಮೌನಯೋಗಿ ಹಾಗೂ ಲೋಕದ ಕಾರ್ಯಪ್ರವೃತ್ತ–ಈ ಇಬ್ಬರ ಮಹದ್ಗುಣಗಳನ್ನೂ ಅತ್ಯುತ್ಕೃಷ್ಟ ಪ್ರಮಾಣದಲ್ಲಿ ಪಡೆದಿದ್ದ ಒಬ್ಬ ಅನ್ಯಾದೃಶ ಸ್ವಭಾವದವನು ಎಂಬದನ್ನು ಅವನ ವರ್ತನೆಯ ಹೆಜ್ಜೆ ಹೆಜ್ಜೆಯಲ್ಲಿಯೂ ಕಾಣಲು ಸಾಧ್ಯವಾಗಿರುವಾಗ ಈ ವಿಮರ್ಶಕರೆಂಬವರು ಅವನನ್ನು ಕೇವಲ ಒಬ್ಬ ಒರಟು........

ರಮೆ:– ........ಅಂತೂ ಯುಧಿಷ್ಠಿರನು ಮೂವರು ತಮ್ಮಂದಿರನ್ನೂ ಸೋತುಬಿಟ್ಟ. ಛೆ. ಆಮೇಲೆ?

ಮುರಳಿ:– ಅನಂತರ ಶಕುನಿಯು ಭೀಮನನ್ನೇ–ಯಾವ ಒಬ್ಬನಿಗಾಗಿಯೇ ದುರ್ಯೋಧನನು ಈ ಎಲ್ಲ ಪ್ರಯತ್ನಗಳನ್ನು ಕೈಗೊಂಡಿದ್ದನೋ ಅಂತಹ ಭೀಮನನ್ನೇ–ಪಣವಾಗಿ ಒಡ್ಡುವಂತೆ ಯುಧಿಷ್ಠಿರನಿಗೆ ತಿಳಿಸಲು ಅವನು "ಸೌಬಲಾ, ಈ ಭೀಮನೇ ನಮಗೆಲ್ಲರಿಗೂ ನಿಯಾಮಕನು. ಯುದ್ಧಗಳಲ್ಲಿ ನಮ್ಮ ರಕ್ಷಕನೂ ಇವನೇ. ಇವನು ಅನ್ಯಾಯ, ಅವಮಾನಗಳನ್ನು ಎಳ್ಳಷ್ಟೂ ಸಹಿಸದ ಮಹಾತ್ಮನು. ಇದೋ ಅಂತಹವನನ್ನೇ ಪಣವಾಗಿ ಒಡ್ಡುವೆನು" ಎನ್ನುತ್ತಾ ಆಟವಾಡಿದನು. ಹತಭಾಗ್ಯನಾದ ಅವನು ಭೀಮನನ್ನೂ ಆಟದಲ್ಲಿ ಸೋತು ಹುಚ್ಚನಂತಾದನು. ಈ ಹುಚ್ಚಿನ ಭರದಲ್ಲಿಯೇ ತನ್ನನ್ನೂ ಒಡ್ಡಿ–ಸೋತುಕೊಂಡು ಕೊನೆಗೆ ದ್ರೌಪದಿಯನ್ನೂ ಒಡ್ಡಿ ಸೋತು ಅವಳನ್ನು ಪರಾಧೀನೆಯನ್ನಾಗಿ ಮಾಡಿದನು. ಈಗ ದುರ್ಯೋಧನನ ಮನಸ್ಸು ಬಹಳ ಹಗುರವಾದಂತಾಯಿತು. ಪ್ರಕೃತಿಯು ಬಹಳ ವಿಶಾಲವಾದುದು. ಮಾನವನ ಸಣ್ಣಪುಟ್ಟ ತಪ್ಪುಗಳನ್ನು ಮನ್ನಿಸುವಷ್ಟು ಅದು ವಿಶಾಲವಾದುದು. ಆದರೆ ಒಬ್ಬಾತನ ದೌಷ್ಟ್ಯವು ಪ್ರಕೃತಿಯ ಈ ವಿಶಾಲವಾದ ಸಹನೆಯನ್ನು ಮೀರಿ ಹೋಗುವಷ್ಟು ದೊಡ್ಡದಾದಾಗ ಅವನು ಸಹಜವಾಗಿಯೇ ಪ್ರಕೃತಿಯ ವಿಕೋಪಕ್ಕೆ ಪಾತ್ರನಾಗುತ್ತಾನೆ. ದುರ್ಯೋಧನನ ವರ್ತನೆ ಇದಕ್ಕೆ ಉದಾಹರಣೆ. ಪಾಂಡವರ ಅಭ್ಯುದಯುವನ್ನು ಸಹಿಸದಿದ್ದುದೇ ಅವನ ಮೊದಲ ತಪ್ಪು. ನ್ಯಾಯಸಮ್ಮತವಾದ ತಮ್ಮ ರಾಜ್ಯವನ್ನು ಆಳಿಕೊಂಡು ಕೌರವರದಕ್ಕೆ ಆಸೆಪಡದೆ ಅವರು ತಮ್ಮ ಅಭ್ಯುದಯುವನ್ನು ತಾವು ಸಾಧಿಸಿಕೊಂಡಿದ್ದುದನ್ನು ದುರ್ಯೋಧನನು ದ್ವೇಷಿಸಬೇಕಾಗಿರಲಿಲ್ಲ. ಆದರೆ ದುಷ್ಟರ ಮಾರ್ಗವೇ ಬೇರೆ. ಪಾಂಡವರ ಉತ್ಕರ್ಷವನ್ನು ಸಹಿಸದೆ ಅವನು ಅವರನ್ನು ನಿರ್ಗತಿಕರನ್ನಾಗಿ ಮಾಡಲು ಬಯಸಿದನು. ಯಾವ ಧರ್ಮವನ್ನು ಆಧರಿಸಿಯೇ ಪ್ರಕೃತಿ ಇಷ್ಟೊಂದು ಸರ್ವಶಕ್ತವೆನಿಸಿದೆಯೋ ಆ ಧರ್ಮಕ್ಕೆ ದುರ್ಯೋಧನನು

ಇಷ್ಟರಿಂದಲೇ ವ್ಯತಿರಿಕ್ತವಾಗಿ ನಡೆದಂತಾಗಿತ್ತು. ಅವನ ಈ ವರ್ತನೆಗೆ ಪ್ರತಿ ಕ್ರಿಯೆಯು ಅವನಿಗೆ ನಿಧಾನವಾಗಿಯಾದರೂ ದೊರಕುವಷ್ಟರ ವುಟ್ಟಿಗೆ ಅವನು ದುಃಖದ ಪೈರಿಗೆ ಬೀಜ ಬಿತ್ತಿದ್ದನು. ಆದರೆ ಪೂರ್ವಕೃತ ಕರ್ಮದ ಪ್ರೇರಣೆಗೆ ವಶನಾಗಿದ್ದ ಅವನು ಪ್ರಕೃತಿಯ ಪ್ರಕೋಪವನ್ನು ನಿಧಾನವಾಗಿ ಪಡೆಯಲು ಮನಸ್ಸು ಮಾಡುವಂತಿರಲಿಲ್ಲ. ಅವನ ಪಾಪದ ಕೊಡವು ಬೇಗ ಬೇಗನೇ ತುಂಬ ಬೇಕಾಗಿತ್ತು. ಹಾಗಾಗಿ, ಪಾಂಡವರನ್ನು ನಿರ್ಗತಿಕರನ್ನಾಗಿ ಮಾಡಿದುದರಿಂದಲೇ ತೃಪ್ತನಾಗದ ಅವನು ದ್ರೌಪದಿಯು ತನ್ನ ಸೇವಕಿಯಾಗಬೇಕೆಂದೂ, ಹಾಗಾಗು ವದನ್ನು ಇತರರೆಲ್ಲರೂ ನೋಡಬೇಕೆಂದೂ ಕೂಡ ಬಯಸಿ ಆಕೆಯನ್ನು ಕರೆತರು ವಂತೆ ವಿದುರನಿಗೆ ಆಜ್ಞಾಪಿಸಿದನು. ಪಾಂಡವರನ್ನು ತಾನು ಕರೆತಂದುದರಿಂದ ಅವರು ಇಂತಹ ವಿಪತ್ತುಗಳೆಲ್ಲವನ್ನೂ ಎದುರಿಸಬೇಕಾಯಿತೆಂಬದರಿಂದಾಗಿಯೇ ಬಹಳ ನೊಂದುಕೊಂಡಿದ್ದ ವಿದುರನು ದುರ್ಯೋಧನನ ದುರ್ವರ್ತನೆಯನ್ನು ಈಗಾಗಲೇ ಹಲವು ಬಾರಿ ವಿರೋಧಿಸಿದಂತೆ ಈಗಲೂ ವಿರೋಧಿಸಿ "ದುರ್ಯೋಧನಾ, ಸಿಡಿಲನ್ನು ತಟ್ಟಿ ವೈನೋವಿಗೆ ಶಾಖ ಕೊಡಲು ಪ್ರಯತ್ನಿಸುತ್ತಿದ್ದೀಯೆ. ಪಾಂಡ ವರು ಯಾರನ್ನು ತಮ್ಮ ಬಾಹುಬಲದಿಂದ ಗೆದ್ದುಕೊಂಡಿದ್ದಾರೋ ಅಂತಹ ದ್ರೌಪದಿಯನ್ನು, ಬಕ, ಹಿಡಿಂಬ, ಜರಾಸಂಧರಂತಹ ಪ್ರಬಲರನ್ನು ಕೊಂದಿರುವ ಮಹಾಪರಾಕ್ರಮಿಗಳ ಪಟ್ಟದ ರಾಣಿಯನ್ನು ನೀನು ತೊತ್ತಿನ ಕೆಲಸಕ್ಕೆ ನೇಮಿಸಿ ಕೊಳ್ಳುವೆಯಾ ?" ಎಂದು ಎಚ್ಚರಿಸಿದನು. ಆಕೆಯು ಬಕ, ಹಿಡಿಂಬ, ಜರಾಸಂಧ ರಂತಹ ಪ್ರಖ್ಯಾತ ವೀರರನ್ನು ಕೊಂದವರ ಪಟ್ಟದ ರಾಣಿಯಾದುದರಿಂದಲೇ ದುರ್ಯೋಧನನು ಆಕೆಯನ್ನು ಬಹಿರಂಗವಾಗಿ ತನ್ನ ತೊತ್ತಾಗಿ ಮಾಡಿಕೊಳ್ಳಲು ಬಯಸಿದ್ದನೆಂಬದು ........

ರಮೆ:– ಅದು ಹೇಗೆ ?

ಮುರಳಿ:– ಅಲ್ಲವೆ ? ಚಿಕ್ಕಂದಿನಿಂದಲೂ ದುರ್ಯೋಧನನ ಕಣ್ಣಿನ ನೋವಾ ಗಿದ್ದವನು ಭೀಮನೊಬ್ಬನೇ ಅಲ್ಲವೆ ? ಅಂತಹ ಭೀಮನನ್ನು ನಾಶಮಾಡಲು ತಾವು ಎಷ್ಟೇ ಪ್ರಯತ್ನಪಟ್ಟರೂ ಅವನು ನಾಶ ಹೊಂದುವದರ ಬದಲು ಹಿಡಿಂಬ, ಜರಾಸಂಧ ಮೊದಲಾದ ಪ್ರಸಿದ್ಧ ವೀರರನ್ನು ಗೆದ್ದು ಹೆಜ್ಜೆ ಹೆಜ್ಜೆಗೂ ಹೆಚ್ಚು ಹೆಚ್ಚು ಲೋಕ ಪ್ರಸಿದ್ಧನಾಗುತ್ತಿದ್ದುದನ್ನಲ್ಲವೇ ದುರ್ಯೋಧನು ಕ್ಷಣಮಾತ್ರಕ್ಕೂ ಸಹಿಸಲಾಗದೆ ಇದ್ದುದು ? ಅಂತಹ ಭೀಮನನ್ನು ಬೇರಾವ ವಿಧದಿಂದಲೂ ಗೆಲ್ಲಲು ಸಾಧ್ಯವಾಗದಿರುವಾಗ ಈ ದ್ಯೂತದ ಮೂಲಕವಾದರೂ ಗೆದ್ದುಕೊಳ್ಳಲು ಸಾಧ್ಯ ವಾದುದಕ್ಕಾಗಿ ದುರ್ಯೋಧನ ಉಬ್ಬಿ ಹೋಗಿದ್ದರೆ ಅದು ಸಹಜವೇ ಅಲ್ಲವೆ ? ಆದರೆ ವಿದುರನ ಸುಂದರವಾದ ಹೋಲಿಕೆಯಂತೆ ದುರ್ಯೋಧನನು ಈಗ ಸಿಡಿ ಲನ್ನು ಕಟ್ಟಿ ಅಷ್ಟೇ ಇಟ್ಟದ್ದುದು ಇಷ್ಟರಿಂದಲೇ ಅವನು ತೃಪ್ತನಾಗಿದ್ದಿದ್ದರೆ ಅವ

ನಿಗೆ ಎಷ್ಟೋ ಕ್ಷೇಮುವಾಗುತ್ತಿತ್ತು. ಆದರೆ ಅವನು ಹಾಗೆ ಕಟ್ಟಿಟ್ಟ ಸಿಡಿಲನ್ನು ಮೈಮೇಲೆ ಹಾಕಿಕೊಳ್ಳುವಂತೆ ಅದರ ಮೂಲಕ ಶಾಖ ಕೊಟ್ಟುಕೊಳ್ಳಲೂ ಪ್ರಯತ್ನಿಸುತ್ತಿದ್ದಾನೆ. ಜರಾಸಂಧನನ್ನು ಕೊಂದ ಭಾರತದ ವೀರಶಿರೋಮಣಿ ಭೀಮನು ದ್ಯೂತದ ದುರ್ವ್ಯಾಮೋಹಕ್ಕೇ ಆದರೂ ಅದು ತನ್ನ ಅಣ್ಣನಾದುದರಿಂದ ಅದಕ್ಕೆ ವಿಧೇಯನಾಗಿ ತನ್ನನ್ನೇ ತಾನು ದುರ್ಯೋಧನನಿಗೆ ಕೊಟ್ಟುಕೊಂಡಿದ್ದರೂ ದುರ್ಯೋಧನನು ಅದರಿಂದಷ್ಟೇ ತೃಪ್ತನಾಗದೆ ಭೀಮನ ಅಂತರಾಳವನ್ನೇ ಕೆಣಕು ವಂತೆ ಅವನ ಪತ್ನಿ ದ್ರೌಪದಿಯನ್ನು ಅವಮಾನಗೊಳಿಸಲು ಪ್ರಯತ್ನಿಸಿದುದು ಭೀಮನನ್ನಲ್ಲ, ಪ್ರಕೃತಿಯ ಶಾಂತಿಯನ್ನೇ ಭೀಕರವಾಗಿ ಕದಡಿದಂತಾಗುತ್ತದೆಂಬ ದನ್ನು ತಿಳಿಯಲಾರದವನಾಗಿದ್ದನು. ಅದು ದುರ್ಯೋಧನನದು ಮಾತ್ರವಲ್ಲ, ಎಲ್ಲ ದುಷ್ಟರ ದೌರ್ಭಾಗ್ಯವೂ ಹೀಗೆಯೇ ಅನ್ನು.

ವಿದುರನ ಎಚ್ಚರಿಕೆಗೆ ಮನ್ನಣೆ ಕೊಡದ ದುರ್ಯೋಧನನು ದ್ರೌಪದಿಯನ್ನು ಕರೆತರಲು ಒಬ್ಬ ಸೇವಕನನ್ನು ಕಳುಹಿಸಿದನು. ಆ ದೂತನಲ್ಲಿ ದ್ರೌಪದಿಯು "ಯುಧಿಷ್ಠಿರನು ಮೊದಲು ತನ್ನನ್ನು ತಾನು ಸೋತುಕೊಂಡು ಅನಂತರ ನನ್ನನ್ನು ಸೋತರೆ ಅದು ನ್ಯಾಯ ಸಮ್ಮತವೆ ? ಎಂದು ಸಭೆಯಲ್ಲಿರುವ ಪಂಡಿತರನ್ನು ಕೇಳಿ ನನಗೆ ತಿಳಿಸು" ಎಂದು ಹೇಳಿ ಕಳುಹಿಸಿದಳು. ಆ ದೂತನು ಅದೇ ಪ್ರಕಾರ ಬಂದು ದುರ್ಯೋಧನನಲ್ಲಿ ತಿಳಿಸಲು ಅವನು ಆ ದೂತನನ್ನೇ ಗದರಿಸುತ್ತಾ "ಭೀಮನು ಹೆದರಿಸುವನೆಂದು ಭಯ ಪಡುತ್ತಿರುವ ಈ ದೂತ ನಾಯಿಯನ್ನು ಹೊರಗೆ ತಳ್ಳು.........

ರಮೆ:– ಇಲ್ಲಿ ಪಾಪ, ಭೀಮನೇಕೆ ಬಂದ ?

ಮುರಳಿ:– ಭೀಮ ಬರಲಿಲ್ಲ. ದುರ್ಯೋಧನನ ಮನಸ್ಥಿತಿ ಬಂದಿದೆ.

ರಮೆ:– ಏನು ?

ಮುರಳಿ:– ದೂತ ಭೀಮನಿಗೂ ಹೆದರಿರಲಿಲ್ಲ. ದುರ್ಯೋಧನನಿಗೂ ಹೆದರಿರಲಿಲ್ಲ. ದ್ರೌಪದಿ ಹೇಳಿ ಕಳುಹಿಸಿದುದನ್ನು ಇದ್ದುದಿದ್ದಂತೆ ಹೇಳಿದ, ಅಷ್ಟೆ. ಆದರೆ ಭೀಮನ ಹೆದರಿಕೆ ಇದ್ದುದು ನಿಜವಾಗಿ ದುರ್ಯೋಧನನಿಗೆ. ಯಾರದೇ ಯಾವದೇ ವರ್ತನೆಯಲ್ಲಿಯೂ ಅವನು ಕಾಣುತ್ತಿದ್ದುದು ಭೀಮನ ಚಿತ್ರವನ್ನು. ತನಗೆ ಭೀಮನ ಕುರಿತು ನಿರಂತರವಾಗಿದ್ದ ಭಯವನ್ನು ಅವನು ದೂತನಲ್ಲಿಯೂ ಕಾಣುತ್ತಾನೆ. ದೂತನು ತನ್ನಕಾರ್ಯದಲ್ಲಿ ಸಫಲನಾಗದಿದ್ದುದು ಭಯದಿಂದಲೇ ಎಂದೂ, ಭಯ ಎನ್ನುವದು ಭೀಮನಿಂದ ಮಾತ್ರ ಉಂಟಾಗಲು ಸಾಧ್ಯವೆಂದೂ ಭ್ರಮಿಸಿರುವ ಅವನ ಮನಸ್ಸಿನಲ್ಲಿ ಭೀಮನ ಕುರಿತಾದ ಭಯವು ಎಷ್ಟು ಆಳಕ್ಕೆ ಇಳಿದಿತ್ತು ಎನ್ನುವದನ್ನು ನಾವು ಕಾಣಬಹುದು. ಭೀಮ ಬದುಕಿರುವಷ್ಟು ಕಾಲ

ದ್ರೌಪದಿಯನ್ನು ತಾನು ಕಣ್ಣೆತ್ತಿ ನೋಡಲೂ ಸಾಧ್ಯವಿಲ್ಲವೆಂಬದು ದುರ್ಯೋಧನನಿಗೆ ಗೊತ್ತಿತ್ತು. ಆದರೆ ಈಗ ಭೀಮನ ಕಣ್ಣೆದುರಿನಲ್ಲಿಯೇ ಅವನ ಮಡದಿಯನ್ನು ತೊತ್ತಿನಂತೆ ಕಾಣಲು ಸಾಧ್ಯವಾಗಿರುವ ಅಪೂರ್ವ ಘಟನೆಯಿಂದ ಅವನು ತನ್ನನ್ನೇ ತಾನು ನಂಬಲಾರದ ಸ್ಥಿತಿಯಲ್ಲಿದ್ದಾನೆ. ತಾನು ದ್ರೌಪದಿಯೊಡನೆ ಹೀಗೆ ವರ್ತಿಸಲು ಆ ದೂತ ಅಡ್ಡ ಬರುತ್ತಿದ್ದಾನೆಂದು ಭ್ರಮಿಸಿ ತನಗೇ ಭೀಮನ ಹೆದರಿಕೆ ಇಲ್ಲದೆ ತಾನು ದ್ರೌಪದಿಯಲ್ಲಿ ಮನಬಂದಂತೆ ವರ್ತಿಸಲು ಸಾಧ್ಯವಾಗಿರುವಾಗ ಈ ದೂತ ತಾನು ಬಯಸಿದ ವರ್ತನೆಗೆ ಸಹಾಯಕನಾಗದೆ ಇರುವದು ಭೀಮನ ಹೆದರಿಕೆಯಿಂದಾಗಿ ಎಂದು ಭ್ರಮಿಸುತ್ತಿದ್ದಾನೆ. ಅರಿ ಷಡ್ವರ್ಗಗಳೆಂದು ನಾವು ಯಾವದನ್ನು ಕರೆಯುತ್ತೇವೋ ಅದರಲ್ಲಿ ಯಾವದೇ ಒಂದು ಮೇರೆ ಮೀರಿದಾಗ ಆ ವ್ಯಕ್ತಿಯು ತನ್ನ ಎದುರಿನಲ್ಲಿ ಏನಿದೆ, ತಾನು ಏನು ಮಾಡುತ್ತಿದ್ದೇನೆ, ಇತರರು ಏನು ಮಾಡಿಯಾರು ಎಂಬ ಯಾವದೇ ಪರಿಜ್ಞಾನವನ್ನು ಕಳೆದುಕೊಳ್ಳುವಷ್ಟು ಕುರುಡಾಗುತ್ತಾನೆ ಎಂಬದಕ್ಕೆ ದುರ್ಯೋಧನನ ಈ ವರ್ತನೆ ಒಂದು ಉತ್ತಮ ನಿದರ್ಶನ.

ಕೇಳು. ದೂತನಲ್ಲಿ ಹೀಗೆ ಆರೋಪಣೆ ಮಾಡಿದ ದುರ್ಯೋಧನನು ತನ್ನ ತಮ್ಮನನ್ನು ಕರೆದು "ದುಶ್ಯಾಸನಾ, ನೀನು ಹೋಗಿ ಪಾಂಚಾಲಿಯನ್ನು ಎಳೆದು ಕೊಂಡು ಬಾ" ಎಂದು ಹೇಳಿ ಕಳುಹಿಸಿದನು. ಕಳುಹಿಸಿದವನು ದುರ್ಯೋಧನ, ಹೋಗುತ್ತಿರುವವನು ದುಶ್ಯಾಸನ. ಸಾವಿರಾರು ಸಖೀಜನರ ಮಧ್ಯೆ ರಾರಾಜಿಸುತ್ತಿದ್ದ ದ್ರೌಪದಿಯಲ್ಲಿಗೆ ಅವನು ಹಠಾತ್ತಾಗಿ ನುಗ್ಗಿದನು. ಈ ಅನಿರೀಕ್ಷಿತ ಆಕ್ರಮಣವನ್ನು ತಡೆಯಲು ಮುಂದೆ ಬಂದ ಸ್ತ್ರೀಯರನ್ನು ಹೊಡೆದು, ಬಡಿದು, ತಿವಿದು, ಚದುರಿಸಿ ದ್ರೌಪದಿಯನ್ನು ರಾಜಸಭೆಗೆ ಬರಹೇಳಿದನು. ದ್ರೌಪದಿಯು ಈ ಹಿಂದೆ ತಾನು ದೂತನಲ್ಲಿ ಕೇಳಿದಂತೆಯೇ ಇವನನ್ನೂ ಕೇಳಿದಳಷ್ಟೇ ಅಲ್ಲದೆ ತಾನು ಪುಷ್ಪವತಿಯಾಗಿರುವದಾಗಿಯೂ ತಿಳಿಸಿದಳು. ದುಶ್ಯಾಸನನ ಪ್ರತಿಕ್ರಿಯೆ ಬಹಳ ಕಠೋರವಾಗಿತ್ತು. ಅವಳು ಇಲ್ಲಿ ಪುಷ್ಪವತಿಯಾಗಿದ್ದರೆ ದುರ್ಯೋಧನನ ಮನೆಯಲ್ಲಿ ಫಲವತಿಯಾಗಬಹುದೆಂದು ಕೆಡೆ ನುಡಿದು ಅವಳ ತುರುಬಿಗೆ ಕೈ ಹಾಕಿ ಅವಳನ್ನು ಬಲಾತ್ಕಾರದಿಂದ ಪಶುವನ್ನು ಎಳೆಯುವಂತೆ ಎಳೆಯುತ್ತಾ ಹೊರಟನು. ತಡೆಯಲು ಬಂದ ಸ್ತ್ರೀಯರಿಗೆ ಪ್ರಾಣಾಪತ್ತು ಕಾದಿದ್ದಿತು.

ರಮೆ:– ಕಲ್ಪನೆಗೂ ಮೀರುವ ವಿಷಯ. ಇದರಿಂದಾಗಿಯೇ ಮಹಾಭಾರತವು ಇಷ್ಟು ಅಪೂರ್ವವಾದ ಕೃತಿ ಎನಿಸಿಕೊಂಡಿರುವದು. ಯಾರೂ ದಿಕ್ಕಿಲ್ಲದ, ಏನೂ ಗತಿಯಿಲ್ಲದ ಒಂದು ಭಿಕಾರಿ ಹೆಂಗಸನ್ನೇ ಆದರೂ ರಸ್ತೆಯಲ್ಲಿ ತುರುಬು ಹಿಡಿದು ಎಳೆದೊಯ್ಯುವ ದೃಶ್ಯವನ್ನು ನಾವು ಕಲ್ಪಿಸಲು ಸಾಧ್ಯವಾಗದೆ ಇರುವಾಗ ದ್ರೌಪದಿಯನ್ನು............

ಮುರಳಿ:– ...........ಕೇವಲ ಕೆಲವೇ ದಿನಗಳ ಹಿಂದೆ ರಾಜಸೂಯ ಯಾಗದ ಸಂದರ್ಭದಲ್ಲಿ ಯುಧಿಷ್ಠಿರ ಮಹಾರಾಜನ ಅರ್ಧಾಂಗಿಯಾಗಿ ಮೆರೆದು ಸಕಲ ಸಾಮಂತರಿಂದಲೂ ಗೌರವವನ್ನು ಪಡೆದ ಆ ಮಹಾರಾಣಿಯನ್ನು, ಲೋಕೈಕ ವೀರರೆನಿಸಿದ ಐವರು ಗಂಡಂದಿರ ವಜ್ರರಕ್ಷೆಯಲ್ಲಿ ದೇವ ಮಾನವ ರಿಂದಲೂ ಅಬಾಧಿತಳಾಗಿರಬೇಕಾಗಿದ್ದ ಪಾಂಚಾಲೆಯನ್ನು ಆ ತುಂಬಿದ ಸಭೆಗೆ ತುರುಬು ಹಿಡಿದು ಎಳೆದು ತರುವದೆಂದರೆ ಆ ಪರಿಸ್ಥಿತಿ ಹೇಗಿದ್ದಿರ ಬಹುದು ಊಹಿಸು! ಸಾವಿಗಿಂತಲೂ ಅದೆಷ್ಟೋ ಪಾಲು ದುರ್ಭರವಾದ ಈ ದುರವಸ್ಥೆಯಿಂದಾಗಿ ವಿಪರೀತ ಗೋಳಿಡುತ್ತಿದ್ದ ದ್ರೌಪದಿಯು ರಾಜಸಭೆಯನ್ನು ಪ್ರವೇಶಿಸಿದಳು. ಸಭಿಕರು ಈ ದೃಶ್ಯವನ್ನು ನೋಡಲಾರದೆ ತಲೆ ತಗ್ಗಿಸಿ ಮೌನವಾಗಿ ಕುಳಿತರು. ಅನ್ಯಾಯವು ತನ್ನ ಪೂರ್ಣ ಪ್ರಾಬಲ್ಯವನ್ನು ಆವಾಹಿಸಿಕೊಂಡು ಸ್ವಚ್ಛಂದವಾಗಿ ನಾಟ್ಯವಾಡುತ್ತಿರುವಲ್ಲಿ ನ್ಯಾಯವು ತಲೆ ಎತ್ತ ಬೇಕಾದರೆ ಬಹಳ ಪ್ರಯತ್ನ ಬೇಕಷ್ಟೆ!

ಈ ಅಸಹನೀಯ ದೃಶ್ಯವನ್ನು ನೋಡುತ್ತಿದ್ದ ಭೀಷ್ಮನು ತಡೆಯಲಾರದೆ ಅದನ್ನು ವಿರೋಧಿಸಿದನು. ಅದಕ್ಕೆ ದುರ್ಯೋಧನನು "ತಾತಾ, ಇವರು ನಮಗೆ ಸೋತಿದ್ದಾರೆ. ಹಾಗಾಗಿ ನಮ್ಮ ವಶವರ್ತಿಗಳಾಗಿದ್ದಾರೆ. ಈ ದ್ರೌಪದಿ ನನಗೆ ಸೇವಕಿಯಾಗಲೇಬೇಕು" ಎಂದು ಗರ್ವದಿಂದ ಉತ್ತರಕೊಟ್ಟನು.

ರಮೆ:– ಅಲ್ಲ? ಅಲ್ಲಿದ್ದ ಗಂಡಸರೆಲ್ಲರೂ ಶಿಖಂಡಿಗಳಾಗಿದ್ದರೆ? ಹೋಗಲಿ. ಅವಳ ಗಂಡಂದಿರೆನಿಸಿಕೊಂಡಿದ್ದ ಆ ಐದು ಮಂದಿ ಪಾಂಡವರು ಹೃದಯವನ್ನೂ ದುರ್ಯೋಧನನಿಗೆ ಸೋತಿದ್ದರೆ? ಆ ಹಾಳು ಗೊಡ್ಡು ಧರ್ಮಾಚರಣೆಯಿಂದ ಅವರು ಗಳಿಸುತ್ತೇವೆಂದುಕೊಳ್ಳುವ ಆ ಸುಡುಗಾಡು ಪುಣ್ಯ ತಮ್ಮ ಕೈ ಹಿಡಿದಾಕೆ ಯನ್ನು ತಮ್ಮೆದುರಿನಲ್ಲಿಯೇ ಪರರಿಗೆ ಒಪ್ಪಿಸಿ ಅವಮಾನ ಮಾಡಿಸುತ್ತಿರುವ ಪಾಪದಿಂದ ವ್ಯರ್ಥವಾಗುವದಿಲ್ಲವೆ? ಇಂತಹ ಧರ್ಮಕ್ಕೆ ಬೆಂಕಿ ಹಚ್ಚಿತು. ಧರ್ಮ, ಧರ್ಮ ಎಂದು ನಪುಂಸಕರಂತೆ ಕುಳಿತರೂ ಕೂಡ ಮನುಷ್ಯನಿಗೆ ಅಂತಃಕರಣ, ನ್ಯಾಯದ ಕಡೆಗೆ ಒಲವು, ಕ್ಷತ್ರಿಯ ಸಹಜವಾದ ಪೌರುಷ, ಗಂಡಸಿನ–ಗಂಡನ ಕರ್ತವ್ಯ ಪ್ರಜ್ಞೆ, ಭೂತದಯೆ, ಸ್ತ್ರೀಯ ಸಂಕಟವನ್ನು ಅಳೆಯಬಲ್ಲ ವಿವೇಚನಾಶಕ್ತಿ ಇದೊಂದೂ ಬೇಡವೆ?

ಮುರಳಿ:– ನಿಜ ರಮಾ. ನಮಗೆ ಹಾಗೆಲ್ಲ ಅನ್ನಿಸುವದು ಸಹಜ. ಭೀಷ್ಮನೊಬ್ಬ ಮಹಾ ಪ್ರಾಜ್ಞ ತಾನೆ? ಅವನು ದ್ರೌಪದಿಯನ್ನು ಕುರಿತು ಅವಳು ಪ್ರಶ್ನಿಸಿದ ವಿಷಯವು ಬಹಳ ಸೂಕ್ಷ್ಮವಾದುದೆಂದೂ, ಯುಧಿಷ್ಠಿರನು ತಾನೇ ಪರತಂತ್ರನಾಗಿದ್ದಾಗ ಹೆಂಡತಿಯನ್ನು ಒಡ್ಡಿದುದು ಸರಿಯಲ್ಲವೆಂದೂ, ಆದರೆ ಎಂತಹ ಸ್ಥಿತಿಯಲ್ಲೇ ಆದರೂ ಪತ್ನಿಯು ಪತಿಗೆ ಅಧೀನಳೇ ಎಂದೂ–

ಹೀಗೆ ಅವಳ ಪ್ರಶ್ನೆಯು ಬಗೆಗೆ ಎರಡೂ ವಿಧದಲ್ಲಿ ಚರ್ಚಿಸುವ ಅವಕಾಶವಾಗುತ್ತ ದೆಂದೂ, ಆದರೆ ಮಹಾ ಧರ್ಮಿಷ್ಠನಾದ ಯುಧಿಷ್ಠಿರನೇ ಅವಳನ್ನು ಒಡ್ಡಿದವ ನಾಗಿರುವಾಗ ಇತರರು ಅದರ ವಿರುದ್ಧವಾಗಿ ವ್ಯಾಖ್ಯಾನ ಮಾಡಲು ಸಾಧ್ಯವಿಲ್ಲ ವೆಂದೂ ತಿಳಿಸಿದನು.

ಆದರೂ ನೀನಂದಂತೆ ಮನುಷ್ಯನು ದಯಾಂತಃಕರಣವುಳ್ಳವನಾಗಿರಬೇಕೆಂಬ ದರಲ್ಲಿ ಎರಡು ಅಭಿಪ್ರಾಯವಿಲ್ಲ. ಧರ್ಮದ ವಿವೇಚನೆ ಸೂಕ್ಷ್ಮವಾಗಿದ್ದಿರಬಹು ದಾದರೂ, ಆ ವಿವೇಚನೆ ಮಾಡುತ್ತ ಕುಳಿತಾಗ ಪರಿಸ್ಥಿತಿಯು ಕೈ ಮೀರಿ ಹೋಗುತ್ತದೆಂಬದು ಸ್ಪಷ್ಟವಾಗಿದ್ದರೆ ವಿವೇಚನೆಯನ್ನು ನಿಲ್ಲಿಸಿ ತಕ್ಷಣ ಕಾರ್ಯ ಪ್ರವೃತ್ತನಾಗಬೇಕಾದುದೂ ಮಾನವನಿಗೆ ಅವಶ್ಯವೇ. ಆದರೆ ಇಂತಹ ಸಂದರ್ಭದಲ್ಲಿ ಸರಿ–ತಪ್ಪುಗಳನ್ನು ನಾವು ಘಟನೆಯ ಅನಂತರ ವಿರಾಮದಲ್ಲಿ ಕುಳಿತು ವಿಶ್ಲೇಷಣೆ ಮಾಡುವಷ್ಟು ಸುಲಭವಾಗಿ ಘಟನೆ ನಡೆಯುತ್ತಿರುವಾಗ ಮಾಡಲು ಸಾಧ್ಯವಾ ಗುವದಿಲ್ಲ. ಇಂತಹ ಮಹತ್ವದ ಘಟನೆಗಳು ನಡೆಯುವದು ವಿಧಿಯ ಪ್ರಬಲವಾದ ಸಂಕಲ್ಪದಿಂದಾಗಿ ಮಾತ್ರ. ಆ ಘಟನೆಗೆ ಸಾಕ್ಷಿಗಳಾಗಿದ್ದವರು ತಮ್ಮ ವಿವೇಚನಾ ಶಕ್ತಿ, ಕಾರ್ಯಪ್ರವೃತ್ತಿಯ ಗುಣ– ಇವುಗಳನ್ನು ಕಳೆದುಕೊಂಡು ಗೊಂಬೆಗಳಂತೆ ಕೂರುವದು ಕೂಡ ವಿಧಿಯ ಆ ಸಂಕಲ್ಪದ ಪ್ರಭಾವದಿಂದಲೇ. ದ್ರೌಪದಿಯ ಮಾನಭಂಗದಂತಹ ಅತ್ಯಪೂರ್ವವಾದ ಘಟನೆಯಲ್ಲಿ ಮಾತ್ರವೇ ನಾವು ಪ್ರಕೃತಿಯ ಈ ರಹಸ್ಯವನ್ನು ಕಂಡುಕೊಳ್ಳಬೇಕಾಗಿಲ್ಲ. ನಮ್ಮಗಳ ಜೀವನದ ಸಾಮಾನ್ಯ ಘಟನೆಗಳಲ್ಲಿ ಕೂಡ ನಾವಿದನ್ನು ಪ್ರತಿನಿತ್ಯ ಕಾಣಬಹುದು.

ಘಟನೆ ನಡೆಯುತ್ತದೆ. ಅದು ನಡೆಯಲು ಯಾರೆಲ್ಲ ಕಾರ್ಯಪ್ರವೃತ್ತ ರಾಗಬೇಕೋ ಅವರು ಭೂತಹಿಡಿದವರಂತೆ ಕಾರ್ಯಪ್ರವೃತ್ತರಾಗುವದು, ಆ ಘಟನೆ ನಡೆಯದಂತೆ ಯಾರೆಲ್ಲ ತಡೆಯಬಲ್ಲರೋ ಅವರೂ ಭೂತ ಹಿಡಿದವರಂತೆ ಮೂಕರಾಗಿ ನೋಡುತ್ತ ಕೂರುವದು–ಈ ಎರಡು ಕೂಡ ಘಟನೆ ನಡೆಯುವದರ ಅಂಗವಾಗಿಯೇ ನಡೆಯುತ್ತದೆ. "ನಾವು ಮಾಡಿದೆವು" ಎಂಬದೂ ಸುಳ್ಳು. "ನಾವು ಮಾಡಲಿಲ್ಲ" ಎಂಬದೂ ಸುಳ್ಳು. "ಅದು ಆಯಿತು" ಎಂಬದಷ್ಟೇ ಸತ್ಯ. ಈ ತತ್ವ ವಿಚಾರ ಸದ್ಯಕ್ಕೆ ನಮಗೆ ಬೇಡ. ಕತೆಯನ್ನು ಕೇಳು.

ರಮೆ:– ಹೌದು. ಹೇಳಿ

ಮುರಳಿ:– ಇಷ್ಟರಲ್ಲಿ ಭೀಮನ ಸಹನೆ ಮೀರಿತು. ಕೌರವರನ್ನೂ, ಶಕುನಿ ಯನ್ನೂ ಕೊಲ್ಲುವದು ಧರ್ಮದ ದೃಷ್ಟಿಯಲ್ಲಿ ಅನುಚಿತವೆಂದು ಭಾವಿಸಿ, ತಾನೂ ಪರಾಧೀನನಾಗಿದ್ದುದನ್ನು ಜ್ಞಾಪಿಸಿಕೊಂಡು, ಆದರೂ ಅಬಲೆಯ ಆರ್ತತೆಯನ್ನು ಸಹಿಸಲಾರದೆ ಅಂತಃಕರಣ ಕಲಕಿ ಮರುಗಿದನು. ಯಾವದರ ಕಾರಣದಿಂದಾಗಿ

ತಮ್ಮೆಲ್ಲರ ನಲ್ಮೆಯ ಮಡದಿಯಾದ ದ್ರೌಪದಿಯು ಪರಾಧೀನೆಯಾಗಿ ಈ ದುರವಸ್ಥೆಯನ್ನು ಅನುಭವಿಸಬೇಕಾಗಿ ಬಂದಿತ್ತೋ, ಯಾವದರ ಕಾರಣದಿಂದಾಗಿ ತಮ್ಮ ಲೋಕೋತ್ತರವಾದ ಪೌರುಷ ಕೂಡ ಇಂದು ಬಂಜೆ ಹಸುವಿನಂತೆ ಫಲರಹಿತವಾಗಿತ್ತೋ ಅಂತಹ ಸೋಲಿಗೆ – ಅರ್ಥಾತ್ ಆ ಸೋಲನ್ನು ತಂದ ಜೂಜಿಗೆ –ಕಾರಣನಾದ ಯುಧಿಷ್ಠಿರನಲ್ಲಿ, ಜೂಜಿನ ಮತ್ತಿನಲ್ಲಿ ಮುಂದಾಗಬಹುದಾದ ಅನರ್ಥಗಳನ್ನು ಕಲ್ಪಿಸಿಕೊಳ್ಳಲಾರದೆ ಈ ದುರವಸ್ಥೆಗೆ ಏಕಮಾತ್ರ ಕಾರಣನಾದ ಅಣ್ಣನಲ್ಲಿ ಭೀಮನಿಗೆ ಅಸಮಾಧಾನ ಉಂಟಾಯಿತು. ಸಹಿಸಲಸಾಧ್ಯವಾದ ದುಃಖ ಮತ್ತು ಅದನ್ನು ಅನುಸರಿಸಿ ಬರುವ ಸಿಟ್ಟು – ಈ ಎರಡರ ಸಮ್ಮಿಳನದ ಉನ್ಮಾದಾವಸ್ಥೆಯಲ್ಲಿ ಭೀಮನು ಬೇರೇನನ್ನೂ ಮಾಡಲಾರದವನಾಗಿ, ಆದರೂ ಮೂಕ ಪಶುವಿನಂತೆ ಸುಮ್ಮನೆ ಕೂರಲಾರದವನಾಗಿ ಯುಧಿಷ್ಠಿರನತ್ತ ತಿರುಗಿ "ಅಣ್ಣಾ, ಹಿಂದೆ ದ್ಯೂತವಾಡಿದ ರಾಜರುಗಳ್ಯಾರೂ ಕೂಡ ತಮ್ಮ ಅರಮನೆಯ ದಾಸಿಯರನ್ನೇ ಆದರೂ ಪಣವಾಗಿ ಒಡ್ಡಿರುವದಿಲ್ಲ. ನೀನು ಸಮಸ್ತ ಐಶ್ವರ್ಯವನ್ನೂ, ನಮ್ಮನ್ನೂ ಸೋತಿರುವೆ. ಇದಕ್ಕಾಗಿಯೂ ನನಗೆ ಅಸಮಾಧಾನವಾಗುತ್ತಿಲ್ಲ, ನೀನು ನಮ್ಮೆಲ್ಲರಿಗೂ ಸ್ವಾಮಿಯಾಗಿರುವದರಿಂದ. ಆದರೆ ನಿನಗೆ ಅಧಿಕಾರವಿದೆಯೆಂಬದಕ್ಕಾಗಿ ನೀನು, ಇಂತಹ ದುರ್ದೆಶೆಗೆ ಅರ್ಹಳಲ್ಲದ, ಸುಕುಮಾರಿಯಾದ, ನಿನ್ನ ಪಟ್ಟಮಹಿಷಿಯಾದ, ಅಗ್ನಿಪುತ್ರಿಯಾದ ದ್ರೌಪದಿಯನ್ನು ಪಣವಾಗಿಟ್ಟುದು ನಿಜವಾಗಿಯೂ ಅಕ್ರಮವೆ. ಸ್ವಯಂವರ ಕಾಲದಲ್ಲಿ ಈ ಭೂಮಿಯ ಮೇಲಿರುವ ಯಾವ ರಾಜನಿಗೂ ದೊರಕದಿದ್ದ ಈ ನಾರೀ ರತ್ನವನ್ನು ಕ್ರೂರಿಗಳೂ, ಅಲ್ಪರೂ ಆದ ಕೌರವರ ಕೈಯಿಂದ ಎಳೆದಾಡಿಸುವಂತೆ ಮಾಡಿರುವವನು ನೀನೇ. ಈ ದೃಶ್ಯವನ್ನು ಮಾತ್ರ ನಾನು ಖಂಡಿತವಾಗಿಯೂ ಸಹಿಸಲಾರೆ. ಕೌರವರಿಗೆ ದಾಸನಾಗಿರುವ ನಾನು ಇದರ ಪ್ರತೀಕಾರವನ್ನು ಅವರ ಮೇಲೆ ತೀರಿಸಲಾರೆ. ಬದಲು ನಿನ್ನನ್ನೇ ಇದಕ್ಕೆ ಗುರಿಯಾಗಿ ಹಿಡಿದಿರುವೆನು" ಎಂದು ಹೇಳಿ ತನ್ನೊಳಗಿನ ತಳಮಳದ ಆಸ್ಫೋಟನೆಗೆ ಅವಕಾಶ ಬೇಕೇ ಬೇಕಾಗಿ ಬಂದುದರಿಂದ ಸಹದೇವನನ್ನು ಕರೆದು ಬೆಂಕಿಯನ್ನು ತರುವಂತೆಯೂ ಅದರಿಂದ ತಾನು ಅಣ್ಣನ ದ್ಯೂತವಾಡಿದ ತೋಳನ್ನು ಸುಡುವಂತೆಯೂ........

ರಮೆ:– ಛೆ, ಛೆ. ಹೆಚ್ಚಾಯಿತು.

ಮುರಳಿ:– ಅದು ಅಭಿಪ್ರಾಯ.

ರಮೆ:– ಅಭಿಪ್ರಾಯವೇನು ? ಭೀಮನಿಗೂ ಅಣ್ಣನ ಮೇಲೆ ಅಪಾರವಾದ ಭಕ್ತಿ ಇತ್ತು ; ಅವನು ಅನ್ಯಾಯವನ್ನು ಸಹಿಸದ ತನ್ನ ಆಸ್ಫೋಟಕ ಶಕ್ತಿಯನ್ನೂ ಅಣ್ಣನ ಮೇಲಿನ ಗೌರವದಿಂದ ತಡೆದುಕೊಳ್ಳುತ್ತಿದ್ದನು ಎಂಬ ನಿಮ್ಮ ಶ್ಲಾಘನೆಗೆ ಅವನು ಅನರ್ಹನಾಗಿ ಈಗ ವರ್ತಿಸಿಲ್ಲವೆ ?

ಮುರಳಿ:– ಇರಬಹುದು. ಆದರೆ ಯಾವದಕ್ಕೇ ಆದರೂ ಒಂದು ಮಿತಿ ಇರ ಬೇಕು ತಾನೆ? ಈ ಪ್ರಕರಣದಿಂದ ಕೂಡ ಭೀಮನ ಧರ್ಮನಿಷ್ಠೆಯೇ ವ್ಯಕ್ತ ವಾಗುತ್ತಿದೆ ಹೊರತು ಅವನು ಅನುಚಿತ ಮಾಡಿದನೆಂದಾಗುವದಿಲ್ಲ.

ರಮೆ:– ಹೇಗೆ ?

ಮುರಳಿ:– ದ್ರೌಪದಿಗೆ ಒದಗಿರುವ ದುರವಸ್ಥೆಯನ್ನು ನೀನೇ ಕೇಳಿ ಮರುಗಿದ್ದೀಯ. ಇಲ್ಲವೆ ?

ರಮೆ:– ಖಂಡಿತ ಹೌದು.

ಮುರಳಿ:– ಅವಳನ್ನು ಯುಧಿಷ್ಠಿರ ತನ್ನನ್ನು ಸೋತುಕೊಂಡು ಅನಂತರ ಸೋತನೋ, ಮುಂಚೆಯೇ ಸೋತನೋ ಎಂಬ ಎಲ್ಲ ಜಿಜ್ಞಾಸೆ ಪಂಡಿತರಿಗೆ ಸೇರಿದ ಬೌದ್ಧಿಕ ವಿವಾದಾಂಶ. ಆದರೆ ಅವಳು ದುರ್ಯೋಧನನಿಗೆ ಅಧೀನಳಾ ದುದು ನ್ಯಾಯವೇ ಎನ್ನಬಹುದಾದರೂ ಕೂಡ ಅವಳನ್ನು ಬಹಿರಂಗವಾಗಿ ಜುಟ್ಟು ಹಿಡಿದು ಎಳೆದು ತಂದು ರಾಜಸಭೆಯಲ್ಲಿ ನೂಕಿದುದೂ ಸರಿಯೇ ಎಂದು ಯಾರೂ ಹೇಳುವಂತಿಲ್ಲ. ಅಲ್ಲವೆ ?

ರಮೆ:– ಖಂಡಿತವಾಗಿ ಹೌದು.

ಮುರಳಿ:– ಹೀಗೆ, ತನ್ನ ಪತ್ನಿಯ ಮೇಲೆ ತನ್ನ ಕಣ್ಣೆದುರಿನಲ್ಲಿ ಒಂದು ಸಹಿಸಲಸಾಧ್ಯವಾದ ಅನ್ಯಾಯವನ್ನು ಎಸಗಲಾಗುತ್ತಿರುವದನ್ನು ಭೀಮ ನೋಡು ತ್ತಿದ್ದಾನೆ. ಹಾಗಿರುವಾಗ ಅವನಲ್ಲಿ ಯಾವ ಪ್ರತಿಕ್ರಿಯೆ ಮೂಡಬೇಕು ? ಅಥವಾ ಇಂತಹ ಘೋರ ಅನ್ಯಾಯವನ್ನು ನೋಡಿಕೊಂಡೂ ಅವನು ಸುಮ್ಮನೆ ಕುಳಿತಿರ ಬೇಕೆಂದು ಬಯಸುತ್ತೀಯಾ ?

ರಮೆ:– ಇಲ್ಲ ಆದರೆ ಅವನು ಕೌರವರ ಮೇಲೆಯೇ ಪ್ರತೀಕಾರ ಮಾಡ ಬೇಕಾಗಿತ್ತು.

ಮುರಳಿ:– ಅದನ್ನು ಅವನೇ ಹೇಳಿದ್ದಾನೆ. ತಾನು ತನ್ನ ಅಣ್ಣನಿಗೆ ತನ್ನನ್ನು ಸಂಪೂರ್ಣವಾಗಿ ಶರಣಾಗಿಸಿಕೊಂಡುದರಿಂದಲೇ ಅವನು ಕೌರವರ ಮೇಲೆ ಎರಗಲು ಸಾಧ್ಯವಾಗದಿದ್ದುದು.

ರಮೆ:– ಹೇಗೆ ?

ಮುರಳಿ:– ಯುಧಿಷ್ಠಿರ ತನ್ನನ್ನು ಸೋತು ತನ್ನನ್ನು ಕೌರವರ ದಾಸನನ್ನಾಗಿ ಮಾಡಿದ್ದಾನೆ. ಇದು ತನಗೆ ಅಸಹನೀಯವೇ ಆದರೂ ತನ್ನ ಮೇಲೆ ಅಣ್ಣನಿಗಿದ್ದ ಸ್ವಾತಂತ್ರ್ಯಕ್ಕೆ ಮಣಿದು ತಾನು ಕೌರವರ ದಾಸ್ಯವನ್ನು ಸ್ವೀಕರಿಸಿದ್ದಾನೆ. ಅಣ್ಣನ ಅನುಚಿತ ವರ್ತನೆಗೇ ಆದರೂ ಎಷ್ಟರಮಟ್ಟಿಗೆ ಶರಣಾಗಿದ್ದಾನೆಂದರೆ, ತಾನು ದಾಸ

ನಾಗಿರುವದರಿಂದ ತನಗೆ ಈಗ ಸ್ವಾಮಿಯಾಗಿರುವ ದುರ್ಯೋಧನನ ರಕ್ತ ಹೀರ ಬೇಕೆಂಬಷ್ಟು ಕೋಪ ತನಗೆ ಉಂಟಾಗಿದ್ದರೂ ಅದನ್ನು ತಡೆದುಕೊಂಡು, ಅಣ್ಣನು ತನ್ನನ್ನು ದಾಸ್ಯಕ್ಕೆ ಗುರಿಪಡಿಸಿದುದನ್ನು ಗೌರವಿಸಿ ಕೌರವರ ಮೇಲೆ ಕೈ ಮಾಡಲು ಹಿಂಜರಿದು ಕುಳಿತಿದ್ದಾನೆ.

ಇದು, ಅವನಿಗೆ ಅಣ್ಣನ ಮೇಲಿರುವ ಅಪಾರವಾದ ಭಕ್ತಿಗೆ ಸ್ಪಷ್ಟವಾದ ಉದಾಹರಣೆ. ಹಾಗೆಂದ ಮಾತ್ರಕ್ಕೇ ಅಲ್ಲಿ ಒಬ್ಬಳು ಅಬಲೆಯ ಮೇಲೆ ನಡೆಯು ತ್ತಿರುವ ಘೋರ ಅಪಚಾರವನ್ನು ನೋಡುತ್ತ ಸುಮ್ಮನೆ ಕುಳಿತರೆ – ಆತನು ಇತರರ ದಾಸನೇ ಆಗಿರಲಿ – ಅವನಿಗೆ ಮಾನವತ್ವವೇ ಇಲ್ಲದಂತಾಗುವದೂ ನಿಜವೇ. ಅದಕ್ಕೆ ತನ್ನ ಪ್ರತಿಭಟನೆಯನ್ನು ತೋರಿಸಲೇಬೇಕು. ಬೇರೆ ಹೇಗೆ ತೋರಿಸುವದು? ದ್ರೌಪದಿಯ ಮೇಲೆ ಆಗುತ್ತಿದ್ದ ಅನ್ಯಾಯಕ್ಕೆ ಕಾರಣರು ಇಬ್ಬರು – ಆಕೆಯನ್ನು ಎಳೆತಂದ ಕೌರವರು ಮತ್ತು ಆಕೆಯನ್ನು ಎಳೆತರಲು ಅವಕಾಶ ಮಾಡಿಕೊಟ್ಟ ಯುಧಿಷ್ಠಿರ. ಕೌರವರ ಮೇಲೆ ತಾನು ಕೈ ಮಾಡುವಂತಿಲ್ಲ. ಹಾಗಾಗಿ ಯುಧಿಷ್ಠಿರನ ಯಾವ ಅಧರ್ಮ ವ್ಯವಹಾರವು ಈ ದುರವಸ್ಥೆಗೆ ಎಡೆಮಾಡಿ ಕೊಟ್ಟಿತೋ, ಅವನ ಆ ಅಧರ್ಮ ಕಾರ್ಯವನ್ನು ತಾನು ಖಂಡಿಸುವದರ ಪ್ರತೀಕ ವಾಗಿ ಅವನ ತೋಳನ್ನು ಸುಡುತ್ತೇನೆಂದು ಭೀಮ ಹೇಳುತ್ತಿದ್ದಾನೆ.

ಅನ್ಯಾಯವನ್ನು ಎಷ್ಟು ಮಾತ್ರಕ್ಕೂ ಸಹಿಸದ ಭೀಮನು ಬೇರೆ ಏನು ತಾನೇ ಮಾಡಲು ಸಾಧ್ಯವಿತ್ತು ಹೇಳು? ಆತ್ಮಹತ್ಯೆ ಮಾಡಿಕೊಳ್ಳಬೇಕು. ಅದು ಪುರು ಷತ್ವದ ಲಕ್ಷಣವಲ್ಲ.

ರಮೆ:– ಇರಲಿ, ಕತೆ ಮುಂದುವರಿಸಿ.

ಮುರಳಿ:– ಬೆಂಕಿಯನ್ನು ತರಲು ಆಜ್ಞಾಪಿಸಲ್ಪಟ್ಟ ಸಹದೇವನನ್ನು ಅರ್ಜುನನು ತಡೆದು ಯುಧಿಷ್ಠಿರನು ತಮಗೆಲ್ಲರಿಗೂ ಸ್ವಾಮಿಯಾಗಿರುವದರಿಂದ ಅವನನ್ನು ಅನುಸರಿಸುವದೇ ಧರ್ಮವೆಂದು ಬುದ್ಧಿ ಹೇಳಿದನು.

ರಮೆ:– ಹೆಂಡತಿಯನ್ನು ಮಾರಿಯಾದರೂ ಧರ್ಮವನ್ನು ಕಟ್ಟಿಕೊಳ್ಳಲು ಬಯಸಿರುವ ಇವರೆಲ್ಲರೂ ಏನು ಚರಿತ್ರಾರ್ಹ ಪುರುಷರೋ ಕಾಣೆ!

ಮುರಳಿ:– ಇಲ್ಲಿ ಧರ್ಮ, ಅಧರ್ಮಗಳನ್ನು ಹುಡುಕುವದು ಬಹಳ ಕಷ್ಟ. ಅವರುಗಳ ಈ ವರ್ತನೆಯಿಂದ ಅವರಲ್ಲಿ ಪ್ರತಿಯೊಬ್ಬರ ವ್ಯಕ್ತಿತ್ವವು ಸ್ಪಷ್ಟವಾಗಿ ತಿಳಿಯುತ್ತದೆ ಎಂಬದಷ್ಟೇ ಇಲ್ಲಿ ಮುಖ್ಯವಾದ ಅಂಶ. ಕೇಳು. ಅನ್ಯಾಯದ ವಿರುದ್ಧ ತನ್ನೊಳಗೆ ಆಸ್ಫೋಟಗೊಳ್ಳುತ್ತಿದ್ದ ಪ್ರಚಂಡ ಜ್ವಾಲಾಮುಖಿಯನ್ನು ತಡೆದು, ತಡೆದು ಬಳಲುತ್ತಿದ್ದ ಭೀಮನ ಕಾರ್ಯಪ್ರವೃತ್ತಿಗೆ ಅರ್ಜುನನು ತನ್ನ ಅಸಮಾಧಾನ ವನ್ನು ಸೂಚಿಸಿದಾಗ ಭೀಮನು ಬಹಳ ಸಂಕಟಪಡುತ್ತಾ "ಅರ್ಜುನಾ, ಈ

ಪ್ರಾಣವು ನನ್ನ ಶರೀರದಿಂದ ತೊಲಗಿದರೂ, ನನ್ನ ಅಂಗಾಂಗಗಳನ್ನು ಕತ್ತರಿಸಿ ಸುಟ್ಟರೂ ಮನಸ್ಸಿನ ಈ ವ್ಯಥೆಯು ಹೋಗುವದಿಲ್ಲ. ಹೆಂಗಸನ್ನು–ತನ್ನ ಧರ್ಮ ಪತ್ನಿಯನ್ನು–ಈ ರೀತಿ ಪಣವಾಗಿಟ್ಟು ಸೋತು ಅವಳನ್ನು ಇಂತಹ ಅಧಮರ ವಶಕ್ಕೆ ಯಾರಾದರೂ ದೂಡುವರೆ? ಅವಳ ಗಂಡಂದಿರೆನಿಸಿಕೊಂಡಿರುವ ಈ ನಮಗೆ ಇಂತಹ ದುರವಸ್ಥೆಯನ್ನು ನೋಡುತ್ತ ಮೂಕರಾಗಿ ಕುಳಿತುಕೊಳ್ಳುವದಕ್ಕಿಂತಲೂ ಹೆಚ್ಚಿನ ಅಭಿಮಾನ ಭಂಗ ಬೇರೇನಿದೆ? ಶಿವಶಿವಾ, ಯಾವ ಈ ನನ್ನ ತೋಳುಗಳಿಂದ ಈ ಪಾಪಾತ್ಮರಾದ ಕೌರವರನ್ನು ಬಡಿದು ಕೊಲ್ಲಬೇಕಾಗಿದ್ದಿತೋ ಅವು ಈಗ ನಿಷ್ಪ್ರಯೋಜಕವಾಗಿವೆ. ದೇಹಕ್ಕೆ ಕೇವಲ ಭಾರವಾಗಿರುವ ಈ ನನ್ನ ತೋಳುಗಳನ್ನೇ ಸುಟ್ಟುಕೊಳ್ಳುತ್ತೇನೆ. ಸಹದೇವ, ಬೆಂಕಿಯನ್ನು ತೆಗೆದುಕೊಂಡು ಬಾ. ಈ ದೇಹವೇನೂ ಶಾಶ್ವತವಾದುದಲ್ಲವಷ್ಟೇ?" ಎಂದು ನೊಂದು ನುಡಿದನು. ಅನ್ಯಾಯದ ಹತ್ಯೆಯ ಪ್ರತೀಕವಾಗಿ ಸುಟ್ಟುಹಾಕಲು ಅಣ್ಣನ ತೋಳಾದರೇನು, ತನ್ನದಾದರೇನು, ಭೀಮನಿಗೆ!

ರಮೆ:– ಆಹ. ಮಣಿದೆ, ನಿಮ್ಮ ಭೀಮನ ವ್ಯಕ್ತಿತ್ವಕ್ಕೆ. ಬಹುಶಃ ಮಹಾಭಾರತದ ನಾಯಕರೆಲ್ಲರೂ ಸೇರಿದ್ದ ಆ ರಾಜಸಭೆಯಲ್ಲಿ ಒಬ್ಬ ಅಬಲೆಯ ಮಾನಭಂಗ ನಡೆಯುತ್ತಿದ್ದಾಗ ಯಾರು ಹೇಗೆ ವರ್ತಿಸಿದರೆಂದು ನೋಡುವದರಿಂದಷ್ಟೇ ಪ್ರತಿಯೊಬ್ಬನ ವ್ಯಕ್ತಿತ್ವವನ್ನೂ ಅಳೆದುಬಿಡಬಹುದು ಎಂದೆನಿಸುತ್ತದೆ, ನನಗೆ. ಇಲ್ಲಿ ಭೀಮನ ವ್ಯಕ್ತಿತ್ವ ಹಿಮಾಲಯದಂತೆ ವಿರಾಜಮಾನವಾಗಿರುವಾಗ ಇತರ ಎಲ್ಲರೂ ಸಣ್ಣಪುಟ್ಟ ಗುಡ್ಡಗಳಂತೆ ಅಗಣ್ಯವಾಗಿಬಿಡುತ್ತಾರೆ. ಭೀಮನ ವ್ಯಕ್ತಿತ್ವದ ಕುರಿತು ನಿಮ್ಮಂತೆ ನಾನು ಎಳೆಎಳೆಯಾಗಿ ವ್ಯಾಖ್ಯಾನ ಮಾಡಲಾರೆನಾದರೂ–ಬಹುಶಃ ಅದು ವ್ಯಾಖ್ಯಾನಕ್ಕೆ ಸಿಕ್ಕದಷ್ಟು ಅಗಾಧವಾದುದೂ, ಅದನ್ನು ನೋಡುವವರ ಮನಸ್ಸನ್ನು ಸಂಪೂರ್ಣವಾಗಿ ಸೆರೆ ಹಿಡಿಯುವದರಿಂದಾಗಿ ಅವರನ್ನು ಶುದ್ಧ ಮೂಕರನ್ನಾಗಿ ಮಾಡುವಂತಹದೂ ಆದುದರಿಂದಲೇ ಅದರ ಬಗೆಗೆ ಏನೂ ಹೇಳಲಾರದವಳಾಗಿದ್ದೇನೋ ಏನೋ ಭೀಮನ ಗುಣದ ಪ್ರತಿಯೊಂದು ಅಂಶವನ್ನೂ ಹೋಲಿಕೆಯಿಲ್ಲದ ಶ್ರೇಷ್ಠ ವಿಶೇಷಣಗಳಿಂದಲೇ ಹೇಳಬೇಕಾಗುತ್ತದೆ. ಅನ್ಯಾಯವು ಎಲ್ಲಿಯೇ ನಡೆದರೂ ಅದನ್ನು ಹತ್ತಿಕ್ಕುವ ಅದಮ್ಯ ಬಯಕೆ, ಆ ಬಯಕೆಯನ್ನು ಈಡೇರಿಸಲು ಸಮರ್ಥವಾದ ಅದಮ್ಯ ಕೋಪ, ಆ ಕೋಪವನ್ನು ಸಾರ್ಥಕಗೊಳಿಸಲು ಸಮರ್ಥವಾದ ಅದ್ವಿತೀಯ ದೇಹಬಲ, ಇಷ್ಟೆಲ್ಲ ಇದ್ದರೂ ಅವೆಲ್ಲವನ್ನೂ ನಿಯಂತ್ರಣದಲ್ಲಿಟ್ಟುಕೊಳ್ಳಲು ಸಾಧ್ಯವಾಗುವ ಅತ್ಯದ್ಭುತ ಸಹನ ಶಕ್ತಿ, ಕೆಡಕು ರೀತಿಯಲ್ಲಿ ವರ್ತಿಸಿದರೂ ಅಂತಹ ಅಣ್ಣನಿಗೆ ವಿಧೇಯನಾಗಿರುವ ಗುರುಭಕ್ತಿ, ಅತ್ಯಂತ ನೀಚ ರೀತಿಯಲ್ಲಿ ವರ್ತಿಸಿದರೂ ತನ್ನ ಒಡೆಯರಾದ ಕೌರವರ ಮೇಲೆ ಕೈಮಾಡಲೊಲ್ಲದ ಧರ್ಮನಿಷ್ಠೆ, ಹೆಣ್ಣಿನ ಗೋಳನ್ನು ನಿವಾರಿಸಲಾರದ ತಾನು

ಬದುಕಿರುವದೇ ನಿಷ್ಫಲವೆಂಬಷ್ಟು ದಯಾಂತಃಕರಣ....ಭೀಮನ ವ್ಯಕ್ತಿತ್ವವನ್ನು ನೀವು ಭೂತಗನ್ನಡಿ ಹಿಡಿದು ನೋಡುತ್ತಿದ್ದೀರೋ ಎಂದೆನಿಸುತ್ತಿತ್ತು. ನಿಜವಾಗಿ ಹಾಗಲ್ಲ. ಅವನ ವ್ಯಕ್ತಿತ್ವದ ಅಗಾಧತೆಯನ್ನು, ಆಳವನ್ನು ಕಂಡುಕೊಳ್ಳಲು ಸೂಕ್ಷ್ಮವಾದ ಬುದ್ಧಿಯೂ ಪಕ್ವವಾದ ಹೃದಯವೂ ಬೇಕಾಗಬಹುದು ಎಂದು ಈಗ ನನಗನಿಸುತ್ತಿದೆ. ಇಂತಹ ಒಬ್ಬ ವ್ಯಕ್ತಿ ನಮ್ಮ ಈ ದೇಶದಲ್ಲಿ ಹುಟ್ಟಿದ್ದನೋ ಇಲ್ಲವೋ ಎಂಬ ವಿಚಾರ ಅಪ್ರಾಮುಖ್ಯವಾದುದು. ಅವನು ಹುಟ್ಟಿದ್ದರೆ ಸರಿಯಷ್ಟೆ. ಇಲ್ಲವಾದರೂ ಕೂಡ ಅಂತಹ ಒಂದು ವ್ಯಕ್ತಿ ಚಿತ್ರವನ್ನು ರೂಪಿಸಿದ ಆ ಕವಿಯಾದರೂ ಈ ದೇಶದಲ್ಲಿ ಹುಟ್ಟಿದ್ದಾನೆಂಬದಂತೂ ಸತ್ಯ. ಅಷ್ಟರಿಂದಲೇ ನಮ್ಮ ಸಂಸ್ಕೃತಿ ಪಾವನವಾಗಬಲ್ಲದು. ಹೇಳಿ, ಹೇಳಿ. ಮುಂದಕ್ಕೆ ಕತೆ ಹೇಳಿ.

ಮುರಳಿ:– ನೀನು ಹೇಳುವದನ್ನೇ ಇನ್ನೂ ಅಷ್ಟು ಕೇಳೋಣ ಎನಿಸುತ್ತದೆ. ಏಕೆ ಹೇಳಲೊಲ್ಲೆ ?

ರಮೆ:– ನಿಜವಾಗಿ ಈಗ ಬೇರೆ ವಿಚಾರ ಬೇಡಿ. ಕತೆಯ ಗಾಂಭೀರ್ಯ ಹೋಗಿಬಿಡುತ್ತದೆ. ದಯವಿಟ್ಟು ಮುಂದುವರಿಸಿ.

ಮುರಳಿ:– ನಿಜ, ಕೇಳು. ಇಷ್ಟರಲ್ಲಿ "ತೊತ್ತುಗಳಿಗೆ ವಸ್ತ್ರಾಭರಣಗಳೇಕೆ ? ಅವುಗಳನ್ನು ತೆಗೆದು ಹಾಕು" ಎಂದು ದುರ್ಯೋಧನನು, ತಮ್ಮನಿಗೆ ಆಜ್ಞಾಪಿಸಿದನು. ಅದನ್ನು ಕೇಳಿ ಐದು ಜನ ಪಾಂಡವರೂ ತಾವಾಗಿಯೇ ಎಲ್ಲವನ್ನೂ ಕಳಚಿಟ್ಟು ಏಕವಸ್ತ್ರಧಾರಿಗಳಾದರು. ಆದರೆ ಸ್ತ್ರೀಯೊಬ್ಬಳು ಹಾಗೆ ಮಾಡಲು ಸಾಧ್ಯವೆ? ಮೇಲಾಗಿ, ಅವಳು ಪುಷ್ಪವತಿಯಾಗಿದ್ದು ಈಗಾಗಲೇ ಏಕವಸ್ತ್ರಧಾರಿಣಿಯಾಗಿದ್ದವಳು. ಏನೂ ಮಾಡದೆ ಸುಮ್ಮನೆ ನಿಂತಿದ್ದ ಅವಳ ಸೆರಗನ್ನು ದುಶ್ಯಾಸನನು ಹಿಡಿದನು.

ರಮೆ:– ಅಬ್ಬ ! ಕಲ್ಪನೆಗೂ ಮೀರಿದ ಘಟನೆ. ಪಾಂಡವರು ಸುಮ್ಮನೇ ಇದ್ದರು ?

ಮುರಳಿ:– ಸೋತವರು ತಾನೆ ? ಯುಧಿಷ್ಠಿರ ಜೂಜಿನಲ್ಲಿ ಸೋತಿದ್ದವನು. ತಮ್ಮಂದಿರು ಅಣ್ಣನಿಗೆ ಸೋತಿದ್ದವರು. ಅವರಲ್ಲಿ ಪೌರುಷವನ್ನು ಹೇಗೆ ತಾನೆ ನಿರೀಕ್ಷಿಸಲು ಸಾಧ್ಯ ! ಮಾನವು ಪ್ರಾಣಕ್ಕಿಂತಲೂ ಮಿಗಿಲಾದುದೆಂದು ತಿಳಿಯುವ ಹೆಣ್ಣು ಜನ್ಮವುಳ್ಳ ದ್ರೌಪದಿಯು–ಐವರು ಲೋಕೈಕ ವೀರರ ಪಟ್ಟದ ರಾಣಿಯು ಅಸೂಹ್ಯ ಪ್ರಮಾಣದ ದಿಗಿಲಿನಿಂದೊಡಗೂಡಿ ತನ್ನ ಗಂಡಂದಿರನ್ನು, ಭೀಷ್ಮ, ದ್ರೋಣ, ಕೃಪಾಚಾರ್ಯರನ್ನು, ಗಾಂಧಾರಿ, ಭಾನುಮತಿ, ದುಶ್ಶಳೆಯರನ್ನು, ನೆರೆದಿದ್ದ ತನ್ನಂತಹ ಸಮಸ್ತ ಮಹಿಳೆಯರನ್ನು, ಅಲಂಕಾರವಾಗಿ ಕುಳಿತಿದ್ದ ಎಲ್ಲ ರಾಜ ಮಹಾರಾಜರುಗಳನ್ನು, ಮಂತ್ರಿಗಳನ್ನು, ಕೊನೆಗೆ ಪರಿವಾರದ ಸೇವಕರನ್ನು

ಕೂಡ ಬೇರೆ ಬೇರೆಯಾಗಿ ಮನಸ್ಸು ಕರಗುವಂತೆ ಅಂಗಲಾಚಿ ಬೇಡಿಕೊಂಡಳು. ಕಣ್ಣೀರು ಸುರಿಸಿ ಸಹಾಯವನ್ನು ಕೋರಿದಳು. ಇನ್ನೂ ಹೋಗದಿದ್ದ ತನ್ನ ಪ್ರಾಣವನ್ನು ಮಾನದ ಎದುರಿನಲ್ಲಿ ತೃಣವಾಗೆಣಿಸಿ ದುಶ್ಶಾಸನನೊಂದಿಗೆ ಆ ಕೋಮಲಾಂಗಿ ಹೆಣಗುತ್ತಾ, ದಿಕ್ಕಿಲ್ಲದವಳಿಗೆ ಸಹಜವಾಗುವಂತೆ ಗಟ್ಟಿಯಾಗಿ ರೋಧಿಸಿದಳು.

...........ವಿಶ್ವದ ಯೋಜನೆ ಅದ್ಭುತವಾದುದು. ಜೀವನದ ಘಟನೆಗಳನ್ನು ನಾವು ಅದರ ಬಾಹ್ಯ ಸ್ವರೂಪದಲ್ಲಿ ಮಾತ್ರ ನೋಡಿ ಮರೆತುಬಿಡುತ್ತೇವೆ. ಆದರೆ ಪ್ರತಿಯೊಂದು ಘಟನೆಗೂ ವರ್ತಮಾನ ಕಾಲದ ಚರಿತ್ರೆ ಮಾತ್ರ ಇರುವದಿಲ್ಲ. ಅದರ ಬೇರು ಭೂತ ಕಾಲದಲ್ಲಿ ಇಳಿದಿರುವದನ್ನು ನಾವು ಗಮನಿಸುವದಿಲ್ಲ. ಅದರ ಫಲವು ಭವಿಷ್ಯತ್ತಿನಲ್ಲಿ ಬಿಡಲಿರುವದನ್ನೂ ನಾವು ನೋಡಲು ಹೋಗುವದಿಲ್ಲ. ವರ್ತಮಾನದ ಘಟನೆ ಎಷ್ಟು ಪ್ರಬಲವಾಗಿರುತ್ತದೋ ಅದರ ಭೂತ, ಭವಿಷ್ಯತ್ತುಗಳ ಚರಿತ್ರೆಯೂ ಅಷ್ಟೇ ಮಹತ್ತರವಾದುದಾಗಿರುತ್ತದೆ. ದ್ರೌಪದಿ ಎದುರಿಸುತ್ತಿರುವ ಈ ದುಃಖದ ಘಟನೆ ಅಂತಹ ಒಂದು ಮಹತ್ವದ್ದು. ಸಾವಿರಾರು ಮಂದಿ ಆರ್ಯರು ತುಂಬಿದ್ದ ಸಭೆಯಲ್ಲಿ ಒಬ್ಬಳು ಕುಲೀನ ಸ್ತ್ರೀಯು ಉಟ್ಟಿದ್ದ ಬಟ್ಟೆಯನ್ನು ಬಲಾತ್ಕಾರವಾಗಿ ಬಿಚ್ಚುತ್ತಿರುವಾಗ ಎಲ್ಲರೂ ಅದನ್ನು ಮೂಕರಾಗಿ ನೋಡುತ್ತಿದ್ದರು ಎಂಬದು ನಿಜ ಜೀವನದಲ್ಲಿ ನಡೆಯಲು ಸಾಧ್ಯವಾಗದಂತಹ ಘಟನೆ ಎಂದು ನಮಗೆ ಅನಿಸೀತು. ಆದರೆ ಹೀಗೆ ನಡೆಯುವದು ಈ ಸೃಷ್ಟಿಗೆ ತನ್ನ ಯೋಜನೆಗಳನ್ನು ನಡೆಸಲು ಇರುವ ಶಕ್ತಿಯಿಂದಾಗಿ. ಕೌರವರ ಪಾಂಡವರ ಹಲವು ಜನ್ಮಗಳ ದ್ವೇಷ ಈಗ ಹೀಗೆ ಬೆಳಕಿಗೆ ಬರುತ್ತಿದೆ. ಇನ್ನು 10–13 ವರ್ಷಗಳಲ್ಲಿ ಭಾರತದ ಹದಿನೆಂಟು ಅಕ್ಷೋಹಿಣೀ ಸೈನ್ಯವನ್ನು ನಾಶಗೊಳಿಸಬೇಕಾದ ಪ್ರಚಂಡ ಘಟನೆಗೆ ಇಂದು ನಾಂದಿ ಹಾಡಲಾಗುತ್ತಿದೆ. ಭಾರತ ಭೂಮಿಯಲ್ಲಿ ಅಧರ್ಮಿಗಳು ನಾಶವಾಗಿ ಧರ್ಮಿಷ್ಠರು ನೆಲೆಗೊಳ್ಳಬೇಕಾದ ಅಪಾರ ವ್ಯಾಪ್ತಿಯ ಯೋಜನೆಯನ್ನು ಪ್ರಕೃತಿಯು ಕಾರ್ಯಗತಗೊಳಿಸಲು ಪ್ರಾರಂಭಿಸಿದೆ. ಆದರ ಈ ಅದ್ವಿತೀಯ ಶಕ್ತಿಯು ಮುಂದೆ ಪಾಂಡವರು, ಭೀಷ್ಮ, ದ್ರೋಣಾದಿಗಳು ಎಲ್ಲರೂ ಮಂತ್ರದಿಂದ ಬಂಧಿಸಲ್ಪಟ್ಟವರಂತೆ ಮೂಕರಾಗಿರುವದು ಆಶ್ಚರ್ಯಕರವಾದರೂ ಅಸಂಭಾವ್ಯವೆನಿಸುವದಿಲ್ಲ. ಕೇಳು. ಹೀಗೆ ಎಲ್ಲರಲ್ಲಿಯೂ ಪ್ರಾರ್ಥಿಸಿಕೊಂಡರೂ ಯಾರೂ ತನ್ನ ಸಹಾಯಕ್ಕೆ ಬಾರದುದನ್ನು ಗಮನಿಸಿದ ದ್ರೌಪದಿಯು ಸಹಜವಾಗಿಯೇ ಕೃಷ್ಣನನ್ನು ಕುರಿತು ಆತ್ಮೀಯವಾಗಿ ಪ್ರಾರ್ಥಿಸಿದಳು.

ರಮೆ:– ಕೃಷ್ಣನೂ ಅಲ್ಲಿದ್ದನೇನು ?

ಮುರಳಿ:– ಇಲ್ಲ.

ರಮೆ:– ಮತ್ತೇಕೆ ಅವನನ್ನು ಪ್ರಾರ್ಥಿಸಿದಳು ?

ಮುರಳಿ:– ನಾವು ಒಬ್ಬೊಬ್ಬರೇ ಎಲ್ಲಿಯೋ ಹೋಗುತ್ತಿರುವಾಗ ಆಕಸ್ಮಿಕ ವಾಗಿ ನಾವು ಏನಾದರೊಂದು ಅಪಘಾತಕ್ಕೆ ಸಿಕ್ಕಿಬಿಟ್ಟರೆ "ಅಮ್ಮಾ, ಅಪ್ಪಾ" ಎಂದು ಕೂಗಿಕೊಳ್ಳುವದಿಲ್ಲವೆ ? ಆದರೆ ಅಮ್ಮ, ಅಪ್ಪ ಅಲ್ಲಿರುತ್ತಾರೆಯೆ ?

ರಮೆ:– ಆದರೆ ದ್ರೌಪದಿ ಅಮ್ಮ, ಅಪ್ಪನನ್ನು ಕೂಗಿದುದಲ್ಲ ತಾನೆ ?

ಮುರಳಿ:– ಅಲ್ಲ. ನಾವು ಅಮ್ಮ, ಅಪ್ಪ ಎಂದು ಕೂಗುವದೇಕೆ ? ಲೋಕ ವೆಲ್ಲವೂ ನಮ್ಮ ಕೈಬಿಟ್ಟರೂ ನಮ್ಮ ಕೊನೆಯ ರಕ್ಷಣೆಗಾಗಿ ಬರುವವರು ನಮ್ಮ ತಂದೆತಾಯಿಗಳೆಂಬ ನಮ್ಮ ಚಿಕ್ಕಂದಿನ ದೃಢ ನಿಶ್ಚಯ ನಮ್ಮ ಮನಸ್ಸಿನ ಮೇಲ್ಮೈ ಯಲ್ಲಿ ಸದಾ ಕಾಣಿಸಿಕೊಳ್ಳದಿದ್ದರೂ, ಆ ಭಾವನೆ ನಮ್ಮ ಮನಸ್ಸಿನಿಂದ ಎಂದಿಗೂ ಅಳಿಸಲಾರದಷ್ಟು ಆಳವಾಗಿ, ದೃಢವಾಗಿ ಬೇರೂರಿಬಿಟ್ಟಿರುತ್ತದೆ. ಆಕಸ್ಮಿಕವಾದ ಅಪಘಾತಕ್ಕೆ ಪರಿಹಾರವನ್ನು ಕಂಡುಕೊಳ್ಳಲು ನಮ್ಮ ಮೇಲ್ಮನಸ್ಸು ಸೋತಾಗ ಅದರ ಸುಪ್ತಾವಸ್ಥೆಯಲ್ಲಿರುವ ಪ್ರಬಲ ವಿಶ್ವಾಸ ಪ್ರಕಟಗೊಳ್ಳುತ್ತದೆ.

ದ್ರೌಪದಿಯ ಮನದಾಳದಲ್ಲಿ ಕೃಷ್ಣನ ಬಗೆಗೆ ಇಂತಹ ವಿಶ್ವಾಸ ಬೇರೂರಿತ್ತು ಎಂಬದು ಇದರಿಂದ ಗೋಚರವಾಗುತ್ತದೆ. ಅವಳು ದುಶ್ಶಾಸನನ ದೌರ್ಜನ್ಯಕ್ಕೆ ಈ ಸ್ವಲ್ಪ ಹಿಂದೆಯೇ ಒಳಗಾಗಿದ್ದರೂ, ಆ ಸಭೆಯಲ್ಲಿರುವ ಅಷ್ಟು ಮಂದಿಯಲ್ಲಿ ಯಾರಾದರೂ ಕೂಡ ತನ್ನ ನೆರವಿಗೆ ಬರಬಹುದೆಂಬ ಆಸೆಯನ್ನು ಸ್ವಲ್ಪ ಕಾಲ ಅವಳು ಹೊಂದಿರಲು ಸಾಧ್ಯವಿತ್ತು. ಆ ಆಸೆ ಇರುವ ವರೆಗೂ ಅವಳಿಗೆ ಇದೊಂದು ದುರ್ಘಟನೆ ಎನಿಸಿರಬಹುದಾದರೂ ಇದರ ಪರಿಣಾಮವಾಗಿ ತಾನು ನಿಜವಾಗಿಯೂ ರಾಜಸಭೆಯಲ್ಲಿ ನಿರ್ವಾಣವಾಗಿ ನಿಲ್ಲಬೇಕಾಗುತ್ತದೆ ಎಂಬ ಭೀತಿ ಆವರಿಸಿರಲು ಸಾಧ್ಯವಿರಲಿಲ್ಲ. ಆದರೆ ಯಾವ ನಿಮಿಷದಲ್ಲಿ ತನಗೆ ಯಾವ ಸಹಾಯವೂ ಒದಗುವ ದಿಲ್ಲ ಎಂಬ ಸ್ಪಷ್ಟ ಪರಿಸ್ಥಿತಿಯ ಅರಿವಾಯಿತೋ ಆ ನಿಮಿಷದಲ್ಲಿ ಅವಳಿಗೆ ಅದೊಂದು ಆಕಸ್ಮಿಕವಾದ ಅಪಘಾತವಾಗಿ ಪರಿಣಮಿಸಿತು. ಆಗಲೇ ಅವಳ ಅಂತರಾಳದ ವಿಶ್ವಾಸ ಪ್ರಕಟಗೊಳ್ಳಲು ಸಾಧ್ಯವಾದುದು. ಕೃಷ್ಣನ ಬಾಲ್ಯದ ಅತಿಮಾನುಷ ಲೀಲೆಗಳನ್ನು, ಅವನು ತನ್ನಮೇಲಿಟ್ಟಿದ್ದ ಪ್ರೀತಿಯನ್ನು ಕಂಡು ಕೊಂಡಿದ್ದ ಅವಳು ಕೃಷ್ಣನ ಸಾಮರ್ಥ್ಯದ ಬಗೆಗಾಗಲಿ, ಅವನು ತನ್ನ ನೆರವಿಗೆ ಬಂದಾನೆಂಬ ವಿಶ್ವಾಸದ ಬಗೆಗಾಗಲಿ ಸಂಶಯಪಟ್ಟಿರಲಿಲ್ಲ. ಆದರೆ ವ್ಯವಹಾರದಲ್ಲಿ ನಿರತರಾಗಿರುವಷ್ಟು ಕಾಲವೂ ನಾವು ನಮ್ಮ ತಂದೆ ತಾಯಿಗಳನ್ನು ಸದಾ ಕಾಲವೂ ನಮ್ಮ ಕೊನೆಯ ರಕ್ಷಕರೆಂದು ಬಗೆಯದಿರುವಂತೆ ಅವಳಾದರೂ ಕೃಷ್ಣನಲ್ಲಿ ಸಾಮಾನ್ಯ ರೀತಿಯ ವ್ಯವಹಾರವನ್ನೇ ಇಟ್ಟುಕೊಂಡಿದ್ದಳು. ನಮ್ಮ ಪ್ರಜ್ಞೆಗೆ ಗೋಚರವಾಗುವ ಮನಸ್ಸಿನ ಲೆಕ್ಕಾಚಾರಗಳು ಸೋಲುವಾಗ ನಾವು ಮೈ ಮರೆ ತಂತಾಗಿ ನಮ್ಮ ಸುಪ್ತ ಮನಸ್ಸು ಪರಿಸ್ಥಿತಿಯ ಹತೋಟಿಯನ್ನು ತನ್ನ ಕೈಗೆ ತೆಗೆದು ಕೊಳ್ಳುವಾಗಲೇ ಅತಿಮಾನುಷ ಪ್ರವೃತ್ತಿಗಳು ಗೋಚರವಾಗುವವು. ದ್ರೌಪದಿಯು

ಈಗ ಸಿಕ್ಕಿಕೊಂಡಿರುವ ಪರಿಸ್ಥಿತಿಯನ್ನು ನಾವು ನಮಗೆ ಅನ್ವಯಿಸಿಕೊಂಡು ನೋಡಿದರೆ ನಮಗೆ ಸ್ಪಷ್ಟವಾಗಿ ಕಾಣಿಸೀತು, ಅವಳು ಈ ಲೋಕದ ಪ್ರಜ್ಞೆಯನ್ನು ಕಳೆದುಕೊಂಡು, ಆದರೆ ಪ್ರಜ್ಞಾಶೂನ್ಯ ಸ್ಥಿತಿಯಲ್ಲಿಯೂ ಇಲ್ಲದೆ ಇರುವ ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಸಿಕ್ಕಿಕೊಂಡಿದ್ದಳು ಎಂಬದು. ಇಂತಹ ಪರಿಸ್ಥಿತಿಗೆ ಬರುವ ಮುನ್ನ ಮಾನವನು ತನಗೆ ಇಹದ ಪ್ರಜ್ಞೆ ಇದ್ದ ಕೊನೆಯ ಗಳಿಗೆಯಲ್ಲಿ ತಾನು ಮನಸ್ಸನ್ನು ಭಗವಂತನತ್ತ ಹರಿಸಿದರೆ ಅವನ ಲೌಕಿಕ ವ್ಯಾಪಾರಗಳ ಹೊಣೆಯನ್ನು ಭಗವಂತ ಹೊರುತ್ತಾನೆ ಎಂಬದು ಭಕ್ತರ ಅನುಭವ. ದ್ರೌಪದಿಯು............

ರಮೆ:– ಧ್ರೌಪದಿಯು ಕೃಷ್ಣನನ್ನು ಕೂಗಿಕೊಂಡಾಗ ಏನಾಯಿತು ಹೇಳಿ.

ಮುರಳಿ:– ಇಹಲೋಕದ ಪ್ರಜ್ಞೆ ಅವಳಿಗೆ ಅಲ್ಪಸ್ವಲ್ಪ ಇರುತ್ತಿದ್ದಷ್ಟು ಸಮಯವೂ ಅವಳು ಕೃಷ್ಣನ ಹಲವಾರು ಗುಣಗಳನ್ನು ನೆನೆಸಿಕೊಂಡು ಪ್ರಾರ್ಥಿಸಿದಳು. ಅವಳ ಪ್ರಜ್ಞೆ ಇಹದಿಂದ ದೂರ ದೂರ ಹೋಗುತ್ತಿದ್ದಂತೆ ಅವಳ ಮನದ ಏಕಾಗ್ರತೆ ಭಗವಂತನಲ್ಲಿ ಹೆಚ್ಚು ಹೆಚ್ಚಾಗಿ ಹರಿಯಿತು. ಇದು ಹೀಗೆಯೇ ಮುಂದುವರಿದು ಯಾವದೋ ಒಂದು ಕ್ಷಣದಲ್ಲಿ ಅವಳು ತನ್ನ ಮೈಮೇಲಿನ ಪರಿವೆಯನ್ನು ಸಂಪೂರ್ಣ ಕಳೆದುಕೊಂಡು, ಮಾನಾಪಮಾನಗಳ ಹೊಣೆಗಾರಿಕೆಯನ್ನೂ ಮರೆತು ಮನಸ್ಸನ್ನು ಭಗವಂತನಲ್ಲಿ ಸಂಪೂರ್ಣವಾಗಿ ಶರಣಾಗಿಸಿಧಾಗ ಅಲ್ಲಿ ಭಗವಂತನ ಕೃಪೆ ಪ್ರಕಟವಾಯಿತು. ಇದು ಪ್ರಕೃತಿಯ ಧರ್ಮ. ಧರ್ಮದ ರಹಸ್ಯ. ಅವಳು ಉಟ್ಟಿದ್ದ ಸೀರೆಯನ್ನು ದುಶ್ಯಾಸನ ಸೆಳೆದಷ್ಟೂ ಅದು ಅಕ್ಷಯವಾಗುತ್ತ ಹೋಯಿತು. ಯಾವದೇ ಪ್ರಾಣಿ, ಯಾರೇ ವ್ಯಕ್ತಿ ದುಃಖಕ್ಕೆ ಸಿಕ್ಕಿಕೊಂಡು ನಮ್ಮಲ್ಲಿ ಯಾರಲ್ಲಿಗಾದರೂ ಬಂದು "ನನಗೆ ನೀನೇ ದಿಕ್ಕು, ನನ್ನನ್ನು ರಕ್ಷಿಸು" ಎಂದು ಹೇಳಿದರೆ ನಾವು ಅಂತಹ ರಕ್ಷಣೆ ನೀಡುವದಕ್ಕಾಗಿ ನಮ್ಮ ಪೂರ್ಣ ಚೈತನ್ಯವನ್ನು ಪ್ರಯೋಗಿಸಲು ಸಿದ್ಧವಾಗುವದೇ ಸಹಜವಾಗಿರುವಾಗ ಸರ್ವಶಕ್ತನಾದ, ಸರ್ವಸ್ವಾಮಿಯಾದ, ನ್ಯಾಯ ಪಕ್ಷಪಾತಿಯಾದ ಆ ಒಂದು ವಿಶ್ವ ತತ್ತ್ವವು, ವಿಶ್ವಶಕ್ತಿಯು ತನ್ನಲ್ಲಿ ಪೂರ್ಣವಾಗಿ ಶರಣಾದ ಜೀವಿಯ ನೆರವಿಗೆ ಬರುವದು ಸಹಜವಾಗುತ್ತದೆಯೇ ಹೊರತು, ಹಾಗೆ ಬಾರದೆ ಹೋದರೇನೇ ಅದು ವಿಶ್ವ ಧರ್ಮಕ್ಕೆ ವ್ಯತಿರಿಕ್ತವಾದ ವಿಷಯವಾಗುತ್ತದೆ.

ರಮೆ:– ಅದೇನೋ ಸರಿ. ಹಾಗಾದರೆ ಕೃಷ್ಣ ಭಗವಂತನೇ ಎಂದಂತಾಯಿತು.

ಮುರಳಿ:– ಅದು ಇಲ್ಲಿ ನಮ್ಮ ಚರ್ಚೆಯ ವಿಷಯವಲ್ಲ. ಭಗವಂತ ಎಂಬವನು ನಿಜವಾಗಿ ಇದ್ದಾನೋ, ಕೃಷ್ಣನೇ ಆ ಭಗವಂತನೋ, ಅವನು ಭಕ್ತರ ಕರೆಗೆ ಓಗೊಟ್ಟು ಬರುತ್ತಾನೋ ಎಂಬದೆಲ್ಲ ಪ್ರತ್ಯೇಕ ವಿಷಯಗಳು. ದ್ರೌಪದಿಯ ಅಭಿಪ್ರಾಯದಲ್ಲಿ ಭಗವಂತ ಎಂಬವನು ಇದ್ದಾನೆ ಎಂಬದು

ಹಗಲಿನಷ್ಟು ಸತ್ಯವಾಗಿತ್ತು. ಕೃಷ್ಣನು ಭಗವಂತನ ಅವತಾರವೇ ಎಂಬದೂ ಅವಳ ದೃಢ ನಿಶ್ಚಯವಾಗಿತ್ತು. ಭಕ್ತರ ಕರೆಗೆ ಓಗೊಡುವ ಕರುಣಾಳು ಭಗವಂತ ಎಂಬದನ್ನು ಅವಳು ನಿಸ್ಸಂಶಯವಾಗಿ ನಂಬಿದ್ದಳು. ಅವಳ ಮನಸ್ಸಿನ ಅಂತಹ ಅಚಲವಾದ ನಿರ್ಧಾರವೂ, ಇಹದಲ್ಲಿ ಎಳ್ಳಷ್ಟೂ ಪ್ರಯೋಜನ, ರಕ್ಷಣೆ ಗಳನ್ನು ಕಾಣದೆ, ಇಹದಿಂದ ಸಂಪೂರ್ಣವಾಗಿ ವಿಮುಖವಾದ ಅವಳ ಮನಸ್ಸು ತನ್ನದೇ ಆದ ನಿರ್ಧಾರಗಳ ಆಶ್ರಯ ಪಡೆದು ನಡೆದಾಗ ಅದಕ್ಕೆ ದೊರೆತ ಪ್ರಚಂಡ ಬಲವೂ ಒಬ್ಬ ಭಗವಂತನನ್ನು ಸ್ವತಹ ಸೃಷ್ಟಿ ಮಾಡುವಷ್ಟು ಶಕ್ತಿಯುತವಾಗಿತ್ತು ಎಂಬದನ್ನಾದರೂ ನೀವು ಅಲ್ಲಗಳೆಯಲು ಸಾಧ್ಯವಿಲ್ಲ. ಕಾರಣ ಏನೇ ಇರಲಿ, ಸೀರೆ ಅಕ್ಷಯವಾದುದನ್ನು ಅಸಂಭಾವ್ಯವೆಂದು ನೀನು ಪರಿಗಣಿಸುತ್ತಿಲ್ಲವಷ್ಟೆ?

ರಮೆ:– ಅಸಂಭಾವ್ಯ ಎನಲಾರೆ. ಈಚೀಚೆಗೂ ಕೂಡ ಅನೇಕ ಯೋಗಿಗಳು, ಜ್ಞಾನಿಗಳು, ಪರಮಹಂಸರು ಮೊದಲಾದವರೇ ಏನೇನೋ ಅದ್ಭುತ ಗಳನ್ನು ಮಾಡಿರುವದು ಸತ್ಯ ತಾನೆ?

ಮುರಳಿ:– ಹಾಗಾದರೆ ಮುಂದಕ್ಕೆ ಕೇಳು– ಸೀರೆ ಅಕ್ಷಯವಾದುದರಿಂದ ರಾಜಸಭೆಯ ವಾತಾವರಣವೇ ಬದಲಾಯಿತು. ದ್ರೌಪದಿಯ ಎದುರಿನಲ್ಲಿ ದುಶ್ಶಾಸನನು ಸೋತಿದ್ದನು. ಅಂತಹ ಸೋಲನ್ನೆದುರಿಸುವ ಧಾಟಿಯಲ್ಲಿ ಕರ್ಣನು ದ್ರೌಪದಿಯನ್ನು ಕುರಿತು ಕಾಲ ಬದಲಾಗಿರುವದರಿಂದ ಅದಕ್ಕನುಸಾರವಾಗಿ ಅವಳು ಸ್ವಸಂತೋಷದಿಂದ ದುರ್ಯೋಧನನ ಮೊರೆ ಹೊಕ್ಕು ಬದುಕಬೇಕೆಂದು ಸೂಚಿಸಿದನು. ದ್ರೌಪದಿಯ ಪ್ರಜ್ಞೆ ಈ ವೇಳೆಗೆ ಮರಳಿ ಬಂದಿತ್ತು. ಅವಳೀಗ ಈ ಲೋಕದ ವ್ಯಾಪಾರದಲ್ಲಿ ಮತ್ತೊಮ್ಮೆ ನಿರತಳಾಗಿದ್ದಳು. ಸಾವನ್ನು ಗೆದ್ದಷ್ಟು ಧೀರೆಯಾಗಿದ್ದ ಅವಳು ಕರ್ಣನ ಮಾತಿಗೆ ಉತ್ತರ ಕೊಟ್ಟು "ಯಾರನ್ನು ಮುರಿದು ಅವನ ರಕ್ತಪಾತದಿಂದ ತೃಪ್ತಿಗೊಳ್ಳಬೇಕೆಂದು ಗಂಡುಗಲಿ ಭೀಮನು ಕಾತರಿಸು ತ್ತಿರುವನೋ ಅಂತಹ ಕೌರವ ನಾಯಿಯನ್ನು ನಾನು ಮೊರೆ ಹೊಗಬೇಕೆ?" ಎಂದು ಹೀಯಾಳಿಸಿದಳು.

ರಮೆ:– ಕೃಷ್ಣನ ಸ್ಮರಣೆ ಅವಳಲ್ಲೀಗ ಸಹಜವಾಗಿರಬೇಕಾದುದರ ಬದಲು ಭೀಮನ ಹೆಸರನ್ನೇಕೆ ಪ್ರಸ್ತಾಪಿಸಿದಳು?

ಮುರಳಿ:– ಕೃಷ್ಣ ಅವಳಿಗಿನ್ನೂ ಪಾರಮಾರ್ಥಿಕ ವ್ಯಕ್ತಿ. ಭೀಮ ಅವಳ ಇಹದ ರಕ್ಷಕ. ತನ್ನ ಮಾನ ಹರಣವಾಗುತ್ತಿದ್ದಾಗ ಇಡಿಯ ಸಭೆಯಲ್ಲಿ ಸ್ವಲ್ಪ ವಾದರೂ ಮಿಡುಕಿದವನು ಭೀಮನೇ ಎಂಬದನ್ನು ಅವಳು ಗಮನಿಸದಿರಲು ಸಾಧ್ಯ ವಿರಲಿಲ್ಲ. ತಾನು ಈಗ ನೈತಿಕವಾಗಿ ಕೌರವರ ಮೇಲೆ ವಿಜಯವನ್ನು ಸಾಧಿಸಿರು ವದರಿಂದ ಭೌತಿಕವಾಗಿಯೂ ಅವರನ್ನು ತೀರಿಸಲು ಇದು ತಕ್ಕ ಸಮಯವೆಂದು

ಅವಳು ಭಾವಿಸಿ ಭೀಮನು ಈಗಲೇ ಕೌರವರನ್ನು ತೀರಿಸಿಬಿಡಲಿ ಎಂಬದಕ್ಕಾಗಿ ಅವನನ್ನು ಪ್ರಚೋದಿಸಿದುದು. ಕೇಳು. ಹಾಳಾಗಲಿರುವವನು ಹೇಗೆ ಹಿತೈಷಿಗಳ ಉತ್ತಮ ಮಾರ್ಗದರ್ಶನವನ್ನೂ ಕೇಳಲು ಇಚ್ಛಿಸುವದಿಲ್ಲವೋ ಹಾಗೆಯೇ ದುರ್ಯೋಧನನು ದೈವಕೃಪೆಯು ತನಗೆ ವಿರೋಧವಾಗಿದೆಯೆಂಬದನ್ನು ಕಣ್ಣಾರೆ ಕಂಡರೂ ತನಗೆ ಪಾಂಡವರಲ್ಲಿ–ಮುಖ್ಯವಾಗಿ ಭೀಮನಲ್ಲಿ–ಇರುವ ದ್ವೇಷವನ್ನು ಹತ್ತಿಕ್ಕಿಕೊಳ್ಳದೆ ಕರ್ಣನನ್ನು ಕುರಿತು ವ್ಯಂಗ್ಯವಾಗಿ "ಏಕೆ ಕರ್ಣ ಈ ಭೀಮನನ್ನು ಕೆಣಕಿದೆ ? ಅಹಹಾ........ ಇವಳ ಭೀಮನು ನನ್ನನ್ನು ಕೊಲ್ಲುವವನು" ಎಂದು ಹೇಳಿ, ಈ ವರೆಗಿನ ಅವಮಾನವೆಲ್ಲವನ್ನೂ ಭೀಮನು ತನ್ನ ದಾಸ್ಯದ ಕಾರಣದಿಂದಾಗಿ ಸಹಿಸಿಕೊಂಡಂತೆಯೇ ಈಗಲೂ ಸಹಿಸಿಕೊಂಡಿರುವನೆಂದೂ, ಈ ಸಂದರ್ಭವನ್ನು ಉಪಯೋಗಿಸಿಕೊಂಡು ತಾನು ತನ್ನ ಮನಸ್ಸಿಗೆ ತೃಪ್ತಿಯಾಗುವಷ್ಟೂ ಭೀಮನ ಮನಸ್ಸನ್ನು ನೋಯಿಸಬಹುದೆಂದೂ ಬಗೆದು ತನ್ನ ತೊಡೆಗಳನ್ನು ಭೀಮನಿಗೆ ತೋರಿಸುತ್ತಾ ಅಪಹಾಸ್ಯ ಮಾಡಲು ಭೀಮನಿಗೆ ಮೈಯಲ್ಲಿ ಉರಿ ಎದ್ದಿತು. ಕೂದಲು ನಿಮಿರಿ ನಿಂತವು. ಕಣ್ಣುಗಳು ಕೆಂಪಾದವು. ಉಸಿರು ಬಿಸಿಯಾಯಿತು. ತನ್ನ ಗದೆಯ ಕಡೆಗೆ ನೋಡಿದನು. ಗಾಬರಿಯಿಂದ ಅರ್ಜುನನು ಭೀಮನತ್ತ ನೋಡಿದನು. ಅದೊಂದೇ ಸಣ್ಣ ಕಾರಣ ಸಾಕಾಗುವಷ್ಟರ ಮಟ್ಟಿಗೆ ಭೀಮನೂ ಆ ಸಭೆಯ ಶುದ್ಧ ನಿಷ್ಕ್ರಿಯ ವಾತಾವರಣಕ್ಕೆ ತನ್ನನ್ನು ಮಾರಿಕೊಂಡುಬಿಟ್ಟದ್ದು ಮತ್ತೊಮ್ಮೆ ಹೆಡೆ ಮುಚ್ಚುವ ಸರ್ಪದಂತೆ ತಲೆ ತಗ್ಗಿಸಿ ಕುಳಿತನು.

ತಾನು ಏನು ಮಾಡಿದರೂ, ಏನು ಹೇಳಿದರೂ ನಡೆಯುತ್ತದೆ ಎಂಬ ದುರ್ಯೋಧನನ ಭಾವನೆ ಇನ್ನೂ ಬಲವಾಯಿತು. ಪ್ರಕೃತಿಯು ದುಷ್ಟರ ನಾಶವನ್ನು ಸಾಧಿಸುವದೇ ಹೀಗೆ. ಇಷ್ಟೆಲ್ಲ ಮಾಡಿಯೂ ದುರ್ಯೋಧನ ಈಗಲಾದರೂ ತನ್ನ ನಡತೆಯನ್ನು ಬದಲಾಯಿಸಿದ್ದಿದ್ದರೆ ಮುಂದೆ ಅವನ ಸರ್ವನಾಶವಾಗಲಿದ್ದ ಕುರುಕ್ಷೇತ್ರ ಯುದ್ಧ ತಪ್ಪುತ್ತಿತ್ತೋ ಏನೋ. ಆದರೆ ಸಜ್ಜನರನ್ನು ಕೆಣಕುವ ದುರ್ಜನರಿಗೆ ಒದಗುವ ಪರಿಸ್ಥಿತಿಯೇ ಹೀಗೆ. ಸಜ್ಜನರ ತಾಳ್ಮೆಯೇ ದುರ್ಜನರ ನಾಶವನ್ನು ಹೆಚ್ಚು ಹೆಚ್ಚು ದೃಢಗೊಳಿಸುತ್ತದೆ. ದ್ರೌಪದಿಯನ್ನು ಬೇರೇನೂ ಮಾಡಲು ಸಾಧ್ಯವಾಗದೆ ಅವಳನ್ನು ತನ್ನ ಸೇವಕಿಯರ ಮನೆಗೆ ನೂಕುವಂತೆ ದುಶ್ಯಾಸನನಿಗೆ ಕೌರವನು ಆಜ್ಞಾಪಿಸಿದನು. ದುಶ್ಯಾಸನನು ಆಕೆಯನ್ನು ಹಿಡಿದು ಮುಂದೆ ನೂಕಲು ಪ್ರಾರಂಭಿಸಿದನು. ತಾನು ಮುಂದೆ ಪಡೆಯಬೇಕಾಗಿದ್ದ ಸರ್ವನಾಶಕ್ಕೆ ಸಾಕಷ್ಟು ಪ್ರಬಲವಾದ ಹಿನ್ನೆಲೆಯನ್ನು ದುರ್ಯೋಧನನು ನಿರ್ಮಿಸಿಕೊಳ್ಳಲೇ ಬೇಕಾಗಿತ್ತು. ಹಾಗಾಗಿ ಅವನು ದ್ರೌಪದಿಯನ್ನು ಕುರಿತು "ಎಲೌ, ನಿನ್ನವರು

ಒಲೆಯೊಳಗಿರುವ ಕೆಂಡದಂತಾಗಿದ್ದಾರೆ. ಇನ್ನು ಮುಂದೆ ಅವರನ್ನು ನಂಬಿ ಕೊಳ್ಳಬೇಡ" ಎಂದು, ತನ್ನನ್ನು ನಂಬು, ತನ್ನೊಂದಿಗೆ ಸುಖಿಸು ಎಂಬ ಅರ್ಥ ದಲ್ಲಿ ತನ್ನ ಮುಂಜೆರಗನ್ನೆತ್ತಿ ಅವಳಿಗೆ ತನ್ನ ತೊಡೆಯನ್ನು ತೋರಿಸುತ್ತಿರಲು ಮಿತಿಮೀರಿದ ದುಃಖಾವೇಶಗಳಿಂದ ಕೂಡಿದ ದ್ರೌಪದಿಯು "ನೀನು ತೊಡೆ ಮುರಿದೇ ಸಾಯಿ" ಎಂದು ಶಾಪಕೊಟ್ಟಳು.

ರಮೆ:- ಶಾಪ ಕೊಡಲು ಅವಳು ಋಷಿಯೇನು ?

ಮುರಳಿ:- ಋಷಿಯೇ ಶಾಪ ಕೊಡಬೇಕೆಂದಿಲ್ಲ. ಸದ್ಗುಣಗಳಲ್ಲಿ ಉತ್ತಮ ರಾದವರು ಮನಸ್ಸಿನಾಳದಿಂದ ನೊಂದು ತನಗೆ ಕೇಡು ಮಾಡಿದವರ ಬಗೆಗೆ ಕೆಡು ಕನ್ನು ಅಂತರಾಳದಿಂದ ಅಪೇಕ್ಷಿಸಿದರೆ ಅದೂ ಶಾಪವೆನಿಸುತ್ತದೆ, ಅದು ಫಲಿಸು ತ್ತದೆ. ಮನಸ್ಸಿನ ಶಕ್ತಿ ಅಷ್ಟಿದೆ. ಮನಸ್ಸು ಸದ್ಗುಣಗಳನ್ನು ಅಳವಡಿಸಿಕೊಳ್ಳು ವದರ ಮೂಲಕ ಪ್ರಕೃತಿಯ ಶಕ್ತಿಯನ್ನೂ ಪಡೆದುಕೊಂಡು ಬಲಿಷ್ಠವಾಗುತ್ತದೆ. ಅಥವಾ ಪ್ರಕೃತಿಯು ತನ್ನ ಧರ್ಮಕ್ಕೆ ಅನುಕೂಲರಾದ ಮಾನವರ ಮನಸ್ಸಿನ ಮೂಲಕ ಆ ಧರ್ಮಕ್ಕೆ ಪ್ರತಿಕೂಲವಾದ ಮಾನವರ ಮನಸ್ಸನ್ನು ಗೆದ್ದು ಅವರನ್ನು ಶಿಕ್ಷಿಸುತ್ತದೆ ಎಂದೂ ಹೇಳಬಹುದು.

ರಮೆ:- ಅದಿರಲಿ. ಆದರೆ ಈ ದರಿದ್ರ ಧರ್ಮ ಅದು ಎಂಥಾದ್ದೆಂದು ನನಗೇನೂ ಅರ್ಥವೇ ಆಗುವದಿಲ್ಲವಪ್ಪ. ದುರ್ಯೋಧನ ಪಾಂಡವರನ್ನು ಸ್ನೇಹದಲ್ಲಿ ಕರೆಸಿದ. ಕರೆಸಿದ ಮೇಲೆ ಮನೋರಂಜನೆಗಾಗಿ ಜೂಜಾಡೋಣವೆಂದ. ಜೂಜಿನ ನೆವದಲ್ಲಿ ಪಾಂಡವರ ರಾಜ್ಯವೆಲ್ಲವನ್ನೂ ಸುಲಭವಾಗಿ ಕಿತ್ತುಕೊಂಡ. ಅಷ್ಟೇ ಸಾಲದುದಕ್ಕೆ ಅವರೆಲ್ಲರನ್ನೂ ತನ್ನ ಊಳಿಗದವರನ್ನಾಗಿ ಗೆದ್ದುಕೊಂಡ. ದ್ರೌಪದಿಯನ್ನು ರಾಜಸಭೆಗೆ ಎಳೆದು ತರಿಸಿದ. ಒಂದೇ ಬಟ್ಟೆಯನ್ನುಟ್ಟಿದ್ದ ಅವಳ ಸೀರೆಯನ್ನು ಬಿಚ್ಚಿ ಅವಳನ್ನು ಬತ್ತಲೆಯಾಗಿ ನಿಲ್ಲಿಸಲು ಪ್ರಯತ್ನಿಸಿದ. ಅದು ಸಾಲದುದಕ್ಕೆ ಈಗ ಅವಳನ್ನು ತನ್ನ ಜೊತೆ ಸುಖಪಡುವದಕ್ಕಾಗಿ ಕರೆಯು ತ್ತಿದ್ದಾನೆ. ನಿಮ್ಮ ಪಾಂಡವರ ಧರ್ಮಕ್ಕೂ, ಆ ಧರ್ಮವನ್ನು ಮೆಚ್ಚುವ ಸಂಸ್ಕೃತಿಗೂ ಬೆಂಕಿ ಹಚ್ಚಿತು. ಇದುವೇ ಏನು ಧರ್ಮ? ಹೆಣ್ಣಿಗೆ ಒಂದು ಮನಸ್ಸು, ಆತ್ಮ, ಲಜ್ಜೆ, ಮಾನಾಪಮಾನಗಳ ಗಣನೆ ಇಲ್ಲದೆ ಕಟುಕರ ಅಂಗಡಿ ಯಲ್ಲಿ ಸಿಕ್ಕುವ ಮಾಂಸದ ಮುದ್ದೆ ಅದು ಎಂಬಂತೆ ವರ್ತಿಸುವದೇ ನಿಮ್ಮ ಈ ದರಿದ್ರ ಧರ್ಮವೇನು ? ಯುಧಿಷ್ಠಿರನಂತೂ ಗೊಡ್ಡು ಧರ್ಮಕ್ಕೆ ತನ್ನ ಪುರುಷತ್ವ ವನ್ನು ಮಾರಿದ ನಪುಂಸಕನಾಗಿ ಕುಳಿತಿದ್ದಿರಬಹುದು. ಆ ಅರ್ಜುನನಿಗೇನು ಬಂತು ಕೇಡು ? ಅಧರ್ಮವನ್ನು ಹತ್ತಿಕ್ಕುವದು ಧರ್ಮವೋ, ಅಧರ್ಮವನ್ನು ನೋಡುತ್ತಾ ಸುಮ್ಮನೆ ಕುಳಿತು ಪರೋಕ್ಷವಾಗಿ ಅದನ್ನು ಪ್ರೋತ್ಸಾಹಿಸುವದು ಧರ್ಮವೋ ? ಅಧರ್ಮವನ್ನು ಹತ್ತಿಕ್ಕಲು ಆಗಾಗ ಮಿಡುಕುತ್ತಿದ್ದ ಒಬ್ಬನೇ

ಒಬ್ಬ ಧರ್ಮನಿಷ್ಠನಾದ ಭೀಮನನ್ನು ಈ ಅರ್ಜುನ ಯಾವ ಶಿಖಂಡಿಯು ಮುಖ ಹೊತ್ತು ತಡೆಯುತ್ತಿದ್ದ? ಕೇವಲ ಬೀದಿ ಭಿಕಾರಿಯಾದ ಒಂದು ಹೆಂಗಸನ್ನಾದರೂ ಒಬ್ಬ ಗಂಡಸು ಈ ರೀತಿ ಅಶ್ಲೀಲವಾಗಿ ತೊಡೆ ತೋರಿಸಿ ತನ್ನ ಬಳಿಗೆ ಕರೆಯುವದು ಪಶುಪ್ರವೃತ್ತಿ ಎಂದು ನಮ್ಮಂತಹ ಸಾಮಾನ್ಯರೇ ನಂಬಿರುವಾಗ, ಆ ನೀಚ ದುರ್ಯೋಧನ – ಹಸ್ತಿನಾವತಿಯ ಸಾರ್ವಭೌಮ, ದ್ರೌಪದಿಯನ್ನು – ಒಬ್ಬಳು ಮಹಾರಾಣಿಯನ್ನು, ಐವರು ವೀರ ಗಂಡಂದಿರನ್ನು ಪಡೆದು ನಿಶ್ಚಿಂತಳಾಗಿ ಬದುಕಲು ಸಾಧ್ಯವಿದ್ದ ಗೃಹಿಣಿಯನ್ನು, ನಿರಪರಾಧಿಯನ್ನು, ತನ್ನ ಅತ್ತಿಗೆಯನ್ನು ತನ್ನೊಡನೆ ಸುಖಿಸಲು ಬರುವಂತೆ ಕರೆಯಬೇಕಾದರೆ– ಅದೂ ಎಲ್ಲಿ? ಗುಪ್ತವಾಗಿಯೇನು? ರಾಜಸಭೆಯಲ್ಲಿ! ರಾಜ ಮಹಾರಾಜರುಗಳ, ಮಂತ್ರಿ, ಮಹಾನುಭಾವರುಗಳ, ಅರಸಿಯರು, ಸಖೀಜನಗಳ– ಅಷ್ಟೇಕೆ, ಅವಳ ಗಂಡಂದಿರುಗಳ ಸಮ್ಮುಖದಲ್ಲಿ! ಇದನ್ನು ನೋಡಿಕೊಂಡು ಗಂಡಂದಿರಾದವರು ಸುಮ್ಮನಿರುವದೇ ನಿಮ್ಮ ಧರ್ಮವೇನು? ನಿಜವಾಗಿ ಹೇಳಿ. ನೀವು ಸ್ವಲ್ಪ ವಿಚಾರವಂತರು. ನಮ್ಮ ಸಂಸ್ಕೃತಿ, ಧರ್ಮಗಳ ಬಗೆಗೆ ಅಪಾರವಾದ ಗೌರವ ಉಳ್ಳವರು. ಇಟ್ಟುಕೊಳ್ಳಿ. ಆದರೆ ಗೌರವವು ಕುರುಡಾಗಬಾರದು. ಪಾಂಡವರು ಕೌರವರ ದಾಸರು ಎಂಬದಕ್ಕಾಗಿ ದುರ್ಯೋಧನನು ಮಾಡಿದುದು ಯಾವದನ್ನೂ ಪ್ರತಿಭಟಿಸದೆ ಸುಮ್ಮನಿದ್ದರು ಎಂದು ನೀವು ಹೇಳಬಹುದು. ಯಾವದನ್ನೂ ಎಂದರೆ ಏನನ್ನೆಲ್ಲ? ಅವನು ಮುಂದುವರಿದು ಆ ತುಂಬಿದ ಸಭೆಯಲ್ಲಿ ದ್ರೌಪದಿಯನ್ನು ಆಲಿಂಗಿಸಿದ, ಅಥವಾ ಅದಕ್ಕೂ ಮುಂದುವರಿದ ಎನ್ನೋಣ. ಅದನ್ನೂ ಅವಳ ಗಂಡಂದಿರು ಪ್ರತಿಭಟಿಸದೆ ತಲೆ ತಗ್ಗಿಸಿಕೊಂಡು ಕೂರುವದು ಧರ್ಮ ಎಂದು ನೀವು ನಂಬುತ್ತೀರಾ? ನಿಜವಾಗಿ ಹೇಳಿ.

ಮುರಳಿ:– ಅದು ಧರ್ಮ ಎಂದು ನಾನು ಹೇಳಲಿಲ್ಲ, ನಮ್ಮ ಹಿಂದಿನವರೂ ಹೇಳಲಿಲ್ಲ ರಮಾ. ದುರ್ಯೋಧನನ ಈ ಅಧರ್ಮಗಳಿಂದಾಗಿಯೇ ಅಲ್ಲವೇ ಅವನು ನಾಶ ಹೊಂದಿದುದು?

ರಮೆ:– ದುರ್ಯೋಧನನ ವಿಚಾರ ನಾನು ಕೇಳಲಿಲ್ಲ. ಪಾಂಡವರು ದುರ್ಯೋಧನನ ಅಧರ್ಮಕ್ಕೆ ಮುಖ ತೋರಿಸಿ, ಧರ್ಮಕ್ಕೆ ಬೆನ್ನು ಹಾಕಿ ಕುಳಿತುದು ಧರ್ಮವೇ ಎಂದು ಕೇಳಿದೆ.

ಮುರಳಿ:– ಧರ್ಮ ಎಂದು ನಾನು ನಂಬುವದಿಲ್ಲ.

ರಮೆ:– ಮತ್ತೆ ಯುಧಿಷ್ಠಿರನನ್ನು ಧರ್ಮರಾಯ ಎಂದು ನಮ್ಮ ಜನ ಹೇಗೆ ಕರೆದರು?

ಮುರಳಿ:– ಕೆಲವೊಮ್ಮೆ ಧರ್ಮವು ಬಹಳ ಸೂಕ್ಷ್ಮವಾಗಿರುತ್ತದೆ. ಅದರ ನ್ಯಾಯಾನ್ಯಾಯಗಳನ್ನು ತಿಳಿಯಲು ನಮಗೆ ಕಷ್ಟವಾಗುತ್ತದೆ.

ರಮೆ:– ನ್ಯಾಯಾನ್ಯಾಯಗಳನ್ನು ತಿಳಿಯಲು ಸಾಧ್ಯವಾಗದ ಒಂದು ಧರ್ಮವು ಅನುಷ್ಠಾನ ಯೋಗ್ಯ ಹೇಗಾದೀತು ? ಧರ್ಮ ಇರುವದು ಪಂಡಿತರ ಮೆದುಳಿನ ವ್ಯಾಯಾಮಕ್ಕಾಗಿಯೋ ಸಾಮಾನ್ಯ ಮಾನವನ ಅನುಷ್ಠಾನಕ್ಕಾಗಿಯೋ?

ಮುರಳಿ:– ಯುಧಿಷ್ಠಿರನು ಈ ಸಂದರ್ಭದಲ್ಲಿ ಮಾಡಿದುದು ತಪ್ಪೇ ಎಂದಾದರೂ ಕೂಡ ಅವನು ಧರ್ಮನಿಷ್ಠನಲ್ಲ ಎಂದು ಹೇಳಲು ಸಾಧ್ಯವಾಗುವದಿಲ್ಲವಲ್ಲ ! ಒಬ್ಬ ಮಹಾ ವಿದ್ವಾಂಸನು ಒಮ್ಮೆ ಉಚ್ಚರಿಸಿದ ಮಂತ್ರದ ಒಂದು ಶಬ್ದ ತಪ್ಪಿಹೋಯಿತೆಂಬದಕ್ಕಾಗಿ ಅವನು ವಿದ್ವಾಂಸನೇ ಅಲ್ಲ ಎನ್ನಬಹುದೆ ?

ರಮೆ:– ಆದರೆ ಇಲ್ಲಿ ಯುಧಿಷ್ಠಿರನ ಉಚ್ಚಾರಣೆ ತಪ್ಪಿರುವದು ಬಾಯಿ ತಪ್ಪಿನಿಂದಲ್ಲ. ಅವನಿಗೆ ಆ ಶಬ್ದ ನಿಜವಾಗಿಯೂ ಗೊತ್ತಿಲ್ಲದೆ ಎಂಬದನ್ನು ಮರೆಯಬೇಡಿ.

ಮುರಳಿ:– ಅಂದರೆ ?

ರಮೆ:– ಯುಧಿಷ್ಠಿರನು ಇಲ್ಲಿ ಕರ್ತವ್ಯಭ್ರಷ್ಟನಾಗಿದ್ದಾನೆ ಎಂದೆ.

ಮುರಳಿ:– ಹಾಗೆ.

ರಮೆ:– ಇನ್ನು ನಿಮ್ಮ ಅರ್ಜುನ ಬಿಡಿ. ಅವನಲ್ಲಿ ಹಿರಿಯ ವ್ಯಕ್ತಿತ್ವವನ್ನು ನಿರೀಕ್ಷಿಸುವದು ಸರಿ ಎಂದು ನನಗಂತೂ ಅನಿಸುವದಿಲ್ಲ. ನಕುಲ ಸಹದೇವರೂ ಅಷ್ಟೆ. ಆದರೆ ಯುಧಿಷ್ಠಿರನು ತನ್ನ ಪತ್ನಿಗೆ ಇಂತಹ ಘೋರ ಅಪಚಾರ ಮಾಡಿಯೂ ಅವನನ್ನು ಧರ್ಮರಾಯ ಎನ್ನುತ್ತೀರಲ್ಲ, ಅದೇ ನನ್ನ ಆತಂಕ.

ಮುರಳಿ:– ಆಗಲಿ. ನಾನು ಆಗಲೇ ಹೇಳಿದಂತೆ ಒಬ್ಬ ವಿದ್ವಾಂಸನು ತನಗೆ ನಿಜವಾಗಿಯೂ ತಿಳಿಯದೆಯೇ ಒಂದು ಮಂತ್ರವನ್ನು ತಪ್ಪಾಗಿ ಉಚ್ಚರಿಸಿದನೆಂದು ಇಟ್ಟುಕೊಂಡರೂ ಅವನ ಅಷ್ಟೆಲ್ಲ ವಿದ್ವತ್ತನ್ನೂ ಅಲ್ಲಗಳೆಯಬಹುದೇ ಹೇಳು.

ರಮೆ:– ಇಲ್ಲ. ಆದರೆ ಅವನ ತಪ್ಪನ್ನು ಜನ ಆಡಿಕೊಳ್ಳುತ್ತಾರೆ ತಾನೆ ?

ಮುರಳಿ:– ಯುಧಿಷ್ಠಿರನ ಈ ಒಂದು ತಪ್ಪನ್ನು ಈ ಸಾವಿರಾರು ವರ್ಷಗಳಾದ ಮೇಲೂ ನಿನ್ನಂತಹವರು ಆಡಿಕೊಳ್ಳುತ್ತಲೇ ಇದ್ದೀರಷ್ಟೆ ?

ರಮೆ:– ಹಾಗೆ ಒಪ್ಪಿಕೊಳ್ಳಿ. ಇನ್ನು ಭೀಷ್ಮ, ದ್ರೋಣ ಮೊದಲಾದವರು ಧರ್ಮಿಷ್ಟರೆಂಬದೂ ಇಲ್ಲಿ ಹಾರಿಹೋಯಿತು.

ಮುರಳಿ:– ಇಲ್ಲ. ಅವರದೂ ಯುಧಿಷ್ಠಿರನ ಕತೆಯೇ. ಅವರು ಧರ್ಮಿಷ್ಟ

ರಾದರೂ ಕೂಡ ಯುದ್ಧದಲ್ಲಿ ತಾವು ಸತ್ತ ರೀತಿಯಲ್ಲಿ ಸಾಯಬಾರದಾಗಿದ್ದವರಾದರೂ ಕೂಡ ಅವರು ಸತ್ತ ರೀತಿಯನ್ನು ನೋಡಿದರೆ........

ರಮೆ:– ಹಾಗೆ ಹೇಳಿ. ಹಾಗಾದರೆ ಮಹಾಭಾರತ ಕಾಲದಲ್ಲಿ ಧರ್ಮವನ್ನು ಎತ್ತಿಹಿಡಿದ ಗಂಡು ಒಬ್ಬನೇ ಒಬ್ಬ. ಆ ಗಂಡು ನಿಮ್ಮ ಭೀಮ. ಬೇರೆಯವರಿಗೆ ಧರ್ಮ ಎಂಬದು ಸೂಕ್ಷ್ಮವಾಗಿ ಬಿಡುತ್ತದೆ, ಪಂಡಿತರ ಚರ್ಚೆಗೆ ಒಳಪಡುವ ವಿಷಯವಾಗುತ್ತದೆ. ಭೀಮನ ಧರ್ಮ ಅವನ ದಯಾರ್ದ್ರ ಹೃದಯ. ಬಹುಶಃ ಕೌರವರ ಮೇಲೆ ಕೈಮಾಡಲು ಧೈರ್ಯ ಸಾಲದಿದ್ದ ಇತರ ನಾಲ್ವರು ಪಾಂಡವರು ತಲೆ ತಗ್ಗಿಸಿ ಕುಳಿತು ಅದನ್ನೇ ಧರ್ಮ ಎಂದು ಕರೆದುಕೊಂಡು ತಮ್ಮ ಮಾನ ಉಳಿಸಿಕೊಳ್ಳಲು ಪ್ರಯತ್ನಿಸಿರಬಹುದು. ಆದರೆ ಕೌರವರನ್ನು ಆಮೂಲಾಗ್ರವಾಗಿ ನಾಶಗೊಳಿಸಲು ಸಾಧ್ಯವಿದ್ದ ಭೀಮನು ಅಣ್ಣನ ಮೇಲಿನ ಗೌರವಕ್ಕೆ, ತನ್ನ ತಮ್ಮನ ಅಸಮಾಧಾನಕ್ಕೆ, ಆ ಸಭೆಯ ನಿರ್ವೀರ್ಯತನಕ್ಕೆ–ಹೀಗೆ ತನ್ನ ಸುತ್ತಲಿದ್ದ ನಿರುತ್ಸಾಹಕರ ವಾತಾವರಣದಿಂದ ಒತ್ತಲ್ಪಟ್ಟಿದ್ದರೂ ಪರಿಸ್ಥಿತಿಯನ್ನು ಸಹಿಸಲಾರದೆ ಆಗಾಗ ಸಿಡಿದೇಳುತ್ತಿದ್ದುದು ಅವನ ವ್ಯಕ್ತಿತ್ವಕ್ಕೆ ಇಡಿಯ ಮಹಾಭಾರತ ಕಾಲದಲ್ಲಿಯೇ ಸರಿಸಾಟಿ ಇಲ್ಲದಿದ್ದುದನ್ನು ಚಿತ್ರ ಬಿಡಿಸಿದಂತೆ ತೋರಿಸುತ್ತದೆ.

ಮುರಳಿ:– ಕೃಷ್ಣನನ್ನು ಮರೆಯಬೇಡ.

ರಮೆ:– ಇರಬಹುದೇನೋ. ಆದರೆ ಅಂತಹ ಭೀಮ ಕೂಡ ದುರ್ಯೋಧನನು ತನ್ನ ಹೆಂಡತಿಗೆ ತೊಡೆ ತೋರಿಸಿ ಅವಳನ್ನು ತನ್ನೊಡನೆ ಸುಖಪಡಲು ಕರೆದಾಗಲೂ ಸುಮ್ಮನಿದ್ದನೆಂಬದು ಅವನ ವ್ಯಕ್ತಿತ್ವವನ್ನು ಕಿರಿದುಮಾಡಿಬಿಡುತ್ತದೆ.

ಮುರಳಿ:– ತೀರ್ಮಾನಕ್ಕೆ ಬರಬೇಡ. ಮುಂದಕ್ಕೆ ಕೇಳು. ಭೀಮನ ಸಹನೆ ಇಲ್ಲಿಗೆ ತೀರಿಹೋಯಿತು. ಜೂಜು ಧರ್ಮ ಸಮ್ಮತವೊ, ಧರ್ಮ ಬಾಹಿರವೊ, ಅಂತೂ ತನ್ನ ಅಣ್ಣನು ಜೂಜಾಡಿ ತಮ್ಮೆಲ್ಲರನ್ನೂ ಕೌರವರ ಅಡಿಯಾಳುಗಳನ್ನಾಗಿ ಮಾಡಿದುದನ್ನು ಅವನು ಒಪ್ಪಿಕೊಂಡಿದ್ದನು. ತಮ್ಮ ಪತ್ನಿಯನ್ನೂ ಕೌರವರ ಸೇವಕಿಯನ್ನಾಗಿ ಮಾಡಿದ್ದುದನ್ನೂ ಅವನು ಒಪ್ಪಿಕೊಂಡಿದ್ದನು. ಅವಳನ್ನು ಎಳೆದುತಂದು ಸಭಾ ಮಧ್ಯದಲ್ಲಿ ಅವಳನ್ನು ವಿವಸ್ತ್ರಳನ್ನಾಗಿ ಮಾಡಲು ಪ್ರಯತ್ನಪಟ್ಟುದನ್ನು ಅವನು ಒಪ್ಪಿಕೊಳ್ಳಲಿಲ್ಲ. ಆದರೆ ಸಹಿಸಿಕೊಂಡಿದ್ದನು. ಆದರೆ ಈಗ ದುರ್ಯೋಧನನು ಕೇವಲ ಅನಾಗರಿಕನಂತೆ ತನ್ನ ಪತ್ನಿಗೆ ಆತನ ಜೋಳುತೊಡೆ ತೋರಿಸಿ ಕರೆಯುವದನ್ನು ಅವನು ಸಹಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಅನಾಗರಿಕತೆ, ಅಸಭ್ಯತೆ, ದುರಹಂಕಾರ, ದೌರ್ಜನ್ಯಗಳನ್ನು ಸಹಿಸಿಕೊಂಡು ಅವುಗಳ ಪೋಷಣೆಗೆ ಅವಕಾಶ ಕೊಡುವ ವ್ಯಕ್ತಿತ್ವ ಭೀಮನದಾಗಿರಲಿಲ್ಲ. ಈ ವರೆಗೆ ಅದುಮಿ ಅದುಮಿ ತಡೆಹಿಡಿಯಲ್ಪಟ್ಟಿದ್ದ ಅವನ ಆಂತರ್ಯದ ಜ್ವಾಲಾ

ಮುಖಿ ಸಿಡಿದು ಪ್ರವಹಿಸಲು ಪ್ರಾರಂಭವಾಯಿತು. ಪ್ರಕೃತಿಯ ಅಶಿಕ್ಷಿತ ಜ್ವಾಲಾ ಮುಖಿಯಂತೆ ಅದು ದಿಕ್ಕು ದೆಸೆಗಳ ಗಣನೆಯಿಲ್ಲದೆ ಸಿಡಿಯಲಿಲ್ಲ. ಆ ಜ್ವಾಲಾ ಮುಖಿಯನ್ನೂ ನಿಯಂತ್ರಿಸಬಲ್ಲ ಮನೋಬಲವನ್ನು ಪಡೆದ ಒಬ್ಬ ಪ್ರಚಂಡ ಮಾನ ವನ ಹತೋಟಿಗೆ ಒಳಪಟ್ಟು ಅದು ಹೊರಹೊಮ್ಮಿತು. ಭೀಮನ ಒಂದೊಂದು ರಕ್ತಕಣವೂ ಕುದಿಯಲು ಆರಂಭವಾಯಿತು. ಒತ್ತೊತ್ತಾಗಿ ಸೇರಿದ ಕಾರ್ಮೋಡ ಗಳನ್ನು ಸೀಳಿ ಹೊರಸೂಸುವ ಬರಸಿಡಿಲಿನಂತೆ ಮಂಕು ಹಿಡಿದು ಕುಳಿತ ಆ ಸಭೆಯ ನಡುವೆ ಅವನು ಮೇಲೆದ್ದು ಮುಂದೆ ನಡೆದು ಗುಡುಗಿದನು – "ಎಲೈ ಸಭಾಸದರೆ. ನಮ್ಮ ಪುಣ್ಯಕ್ಕೂ, ಪ್ರಾಣಗಳಿಗೂ, ತಪಸ್ಸಿಗೂ ಪ್ರಭುವಾದ ಈ ಯುಧಿಷ್ಠಿರನು ತಡೆಯದಿರುತ್ತಿದ್ದರೆ ನಾನು ಈ ಕುರುವಂಶದ ಬೇರನ್ನು ಈಗಲೇ ಕಿತ್ತು ಎಸೆಯುತ್ತಿದ್ದೆ. ಆದರೆ ಈಗ ಅಣ್ಣನೇ ಪರತಂತ್ರನಾಗಿರುವದರಿಂದ ನಾವೂ ಅಸ್ವತಂತ್ರರೇ ಆಗಿದ್ದೇವೆ...." ಕತೆಯ ಗುಂಗಿನಲ್ಲಿ ಭೀಮನ ಮಾತುಗಳ ಆಳ ವನ್ನು ಅಳೆಯಲು ಮರೆಯಬೇಡ ರಮಾ. ಭೀಮನ ಸಿಟ್ಟಿನ ಪ್ರಮಾಣವನ್ನು ನೀನು ಚೆನ್ನಾಗಿ ಊಹಿಸಿಕೊಂಡಿರಬಹುದು. ಸಿಟ್ಟು ಬಂದಾಗ ಮನುಷ್ಯನು ವಿವೇಕವನ್ನು ಕಳೆದುಕೊಂಡು ನ್ಯಾಯಾನ್ಯಾಯಗಳ ವಿವೇಚನೆಯನ್ನು ಕೈಬಿಡುವ ಲೋಕದ ಸಾರ್ವತ್ರಿಕ ಕ್ರಮವೂ ನಿನಗೆ ತಿಳಿದಿದೆ. ಆದರೆ ಭೀಮನು ತನ್ನ ಇಂತಹ ಪ್ರಚಂಡ ಸಿಟ್ಟಿನ ಭರದಲ್ಲಿಯೂ ತಮ್ಮ ಈ ದುರ್ದೆಸೆಗೆ ಕಾರಣನಾದ ತನ್ನ ಅಣ್ಣನನ್ನು ಬಹಿರಂಗವಾಗಿ ಅವಮಾನಗೊಳಿಸಿ ತಾನು ಅವನನ್ನು ಮೀರಿ ನಿಂತಿದ್ದೇವೆ ಎಂದು ಹೇಳಿಕೊಳ್ಳದೆ ತಾನು ಅವನಿಗೆ ಶರಣಾಗಿರುವವನೇ ಹೌದು ಎಂದು ಹೇಳಿಕೊಳ್ಳಬೇಕಾದರೆ ಅವನಲ್ಲಿ ಇರಬಹುದಾದ ಸಂಯಮ ಶಕ್ತಿಯ ಪ್ರಮಾಣವನ್ನು ನಾವು ಊಹಿಸಿಕೊಳ್ಳಲು ಕೂಡ ಸಾಧ್ಯ ವಾಗುವದಿಲ್ಲ. ಮುಂದಕ್ಕೆ ಕೇಳು. ಮೊದಲು ತಾನು ಅಣ್ಣನಿಗೆ ಅಧೀನನಾಗಿ ರುವ ತನ್ನ ಸಂಯಮದ ಪರಿಚಯವನ್ನೇ ಸಭಿಕರಿಗೆ ಮಾಡಿಕೊಟ್ಟ ಭೀಮನು ಅನಂತರ ತನ್ನ ಸಿಟ್ಟಿನ ಪ್ರಮಾಣವನ್ನು ಅವರಿಗೆ ವಿವರಿಸುತ್ತಾ "........ನಾವು ಅಸ್ವತಂತ್ರರಾಗಿಲ್ಲದೆ ಇರುತ್ತಿದ್ದರೆ ಈ ಪಾಂಚಾಲಿಯ ತುರುಬಿಗೆ ಕೈ ಇಕ್ಕಿದ ಮನುಷ್ಯನು ಜೀವಿಸಿರುವದು ದೇವರಾಣೆಗೂ ಸಾಧ್ಯವಿರುತ್ತಿರಲಿಲ್ಲ. ಆದರೂ, ಎಲವೋ, ದುರಾತ್ಮ, ದುರ್ಯೋಧನಾ, ನಾನು ನಿನ್ನ ಈ ಪಾಪಪೂರಿತ ತೊಡೆ ಗಳನ್ನು ಯುದ್ಧದಲ್ಲಿ ಗದೆಯಿಂದ ಮುರಿಯದಿದ್ದರೆ ನನಗೆ ದುರ್ಗತಿ ಬರಲಿ. ಇದೋ ಸಾರಿ ಸಾರಿ ಹೇಳುತ್ತೇನೆ. ಈ ದುರ್ಯೋಧನನನ್ನು, ಈ ದುಶ್ಯಾಸನ ನನ್ನು, ಈ ಅನರ್ಥಕ್ಕೆ ಕಾರಣರಾದ ಇವರನ್ನು, ಇವರ ಎಲ್ಲ ತಮ್ಮಂದಿರನ್ನು, ನಾನೇ ಕೊಲ್ಲುವೆನು" ಎಂದು ಶಪಥ ಮಾಡುವದರ ಮೂಲಕ ತನ್ನ ಸಿಟ್ಟನ್ನು ಪ್ರದರ್ಶಿಸಿದ ಭೀಮನು ಕೊನೆಯಲ್ಲಿಯೂ ತನ್ನ ಸಂಯಮವನ್ನು ಆದರಿಸುವಂತೆ

"ಇದರಿಂದಾಗಿ ಯುಧಿಷ್ಠಿರನು ಬೇಕಿದ್ದರೆ ಕೋಪಿಸಿಕೊಳ್ಳಲಿ" ಎಂದು ಹೇಳುತ್ತಾ ದ್ರೌಪದಿಯಿದ್ದ ಕಡೆಗೆ ಮುಂದುವರಿದು ಹೋದನು.

ರಮೆ:– ಏನೋ ಹೇಳಬೇಕೆಂದಾಗುತ್ತದೆ. ಆದರೆ ಹೇಳಲು ಗೊತ್ತಾಗುವದಿಲ್ಲ. ಅಂತೂ ಯಾವದೋ ಉದಾತ್ತ ಭಾವನೆಯಿಂದ ನನ್ನ ಹೃದಯ ತುಂಬಿ ಹೋಗಿ ಅದು ಗಗನವನ್ನೆಲ್ಲ ವ್ಯಾಪಿಸಿದೆಯೆಂಬ ಒಂದು ಅವರ್ಣನೀಯ ಸುಖ ಮಾತ್ರ ಆಗುತ್ತಿದೆ.

ಮುರಳಿ:– ಏನದು ?

ರಮೆ:– ಅದೇ, ಈ ಭೀಮನ ಕುರಿತು ನನ್ನಲ್ಲಿ ಉಂಟಾಗಿರುವ ಭಾವನೆ.

ಮುರಳಿ:– ಹಾಗೆ. ಅದು ಸರಿ. ಮಹಾಭಾರತದಲ್ಲಿ ಕೃಷ್ಣನೊಬ್ಬನನ್ನು ಬಿಟ್ಟರೆ ಭೀಮನ ವ್ಯಕ್ತಿತ್ವ ಮಾತ್ರವೇ ಒಂದು ಮಹಾನದಿಯಾಗಿ ಹರಿಯುವದನ್ನು ನಾವು ಕಾಣುತ್ತೇವೆ. ಅವನಿಗೆ ಹೋಲಿಸಿದರೆ ಇತರರು ಎಲ್ಲ ಸಣ್ಣ ಪುಟ್ಟ ತೋಡು, ಕಾಲುವೆಗಳಂತೆ. ಅವು ದಡ ಮೀರಿ ಉಕ್ಕುವದೂ ಇಲ್ಲ, ಅವುಗಳ ಪ್ರವಾಹವು ನಮ್ಮ ಗಮನ ಸೆಳೆಯುವದೂ ಇಲ್ಲ. ಆದರೆ ಭೀಮನು ಎಷ್ಟು ದೊಡ್ಡ ಮಹಾನದಿಯೋ, ಅದರ ದಡಗಳೂ ಅಷ್ಟೇ ಬಲವಾಗಿ, ಉನ್ನತವಾಗಿ ನಿಂತಿವೆ. ಹಾಗಾಗಿ ಅದರ ಒಂದೊಂದು ತೊಟ್ಟು ನೀರೂ ಪ್ರಯೋಜನಕ್ಕೆ ಬರುತ್ತದೆ. ಇರಲಿ, ಕೇಳು. ಭೀಮನ ಭೀಷಣ ಕೋಪವನ್ನು ಕಂಡು ದುರ್ಯೋಧನನ ಎದೆ ನಡುಗಿತು. ಆಸ್ಥಾನವು ಕಲಕಲ್ಪಟ್ಟ ಸರೋವರದಂತಾಯಿತು. ಧೃತರಾಷ್ಟ್ರನು ರಕ್ತವಿಹೀನನಂತೆ ಬಿಳುಪೇರಿ ಪೆಚ್ಚಾಗಿ ಕುಳಿತನು. ದುಶ್ಶಾಸನನು ಒಂದೇ ನೆಗೆತದಲ್ಲಿ ಹಾರಿ ತನ್ನ ಅಣ್ಣನ ಬೆನ್ನ ಹಿಂದೆ ಸೇರಿಕೊಂಡು ಬಿಟ್ಟನು. ಭೀಷ್ಮಾದಿಗಳು ಭೀಮನ ಕೃತ್ಯವನ್ನು ಮೆಚ್ಚಿಕೊಂಡು ಒಂದು ನಿಟ್ಟುಸಿರುಬಿಟ್ಟರು. ಆಕ್ರೋಶದಿಂದ ಮೈ ಮರೆತಿದ್ದ ಕೆದರಿದ ಮುಡಿಯ ಕರಾಳ ಸುಂದರಿ ದ್ರೌಪದಿ ಆನಂದಾಧಿಕ್ಯದಿಂದ ಮೈ ಮರೆಯುವಂತಾದಳು. ಕೋಪಾವಿಷ್ಟನಾದ ಭೀಮನು ದ್ರೌಪದಿಗೆ ಅಭಯವನ್ನು ಕೊಡುತ್ತ "ಯುವತಿ, ಹೆದರಬೇಡ. ಅಣ್ಣನ ಆಜ್ಞೆ ಎಂಬ ಪ್ರಬಲ ಬಲೆ ಇಲ್ಲಿಗೆ ಹರಿಯಿತು. ಇದೋ ಈ ಕರ್ಣನ ಕಪಾಲದಲ್ಲಿ ದುಶ್ಶಾಸನನ ನೊರೆ ರಕ್ತವನ್ನೂ ದುರ್ಯೋಧನನ ಕೊಬ್ಬಿದ ನೆಣವನ್ನೂ ಶಕುನಿಯ ಕರುಳನ್ನೂ ತುಂಬಿ ಭೂತ ಕೋಟಿಗೆ ಉಣಬಡಿಸುವೆನು. ನಿನ್ನ ಈ ದುರವಸ್ಥೆಗಾಗಿ ನಮ್ಮನ್ನು ಕ್ಷಮಿಸು" ಎಂದೆಂದು ಅವಳ ಮುಂಗೂದಲನ್ನು ಪ್ರೀತಿಯಿಂದ ತಿದ್ದುತ್ತಾ "ಇನ್ನು ನಾನು ಯುಧಿಷ್ಠಿರನ ಮಾತಿಗೂ ಬೆಲೆ ಕೊಡಲಾರೆ. ಈ ಮುದಿ ಕುರುಡನು ಲೇಪಿಸಿದ ವಿಷವು ನಮ್ಮಣ್ಣನ ನೆತ್ತಿಗೇರಿದೆ. ಅವನು ವಿಷಾಲಿಂಗಿತನಾಗಿರಲಿ. ನಾನು ಈ ಕೌರವರನ್ನು ಸವರಿ ಹಾಕುತ್ತೇನೆ"

ಎಂದು ಹೇಳುತ್ತ ಕೌರವರ ನೆನಪಿನಿಂದ ರೋಷವು ಉಕ್ಕಿಬರಲು ಒಮ್ಮೆ ಹೂಂಕರಿಸಿದನು. ಸಂದರ್ಭವು ವಿಪರೀತಕ್ಕೇರುವದೆಂದು ಭಾವಿಸಿದ ಅರ್ಜುನನು ಭೀಮನನ್ನು ಸಮೀಪಿಸುತ್ತಾ "ಭೀಮಾ, ಏಕೆ ಹೀಗೆ ಕಳವಳಿಸುತ್ತಿರುವೆ?....

ರಮೆ:– ....ಆಹಾ, ದ್ರೌಪದಿಯನ್ನು ದುರ್ಯೋಧನನು ತೊಡೆಯ ಮೇಲೆ ಕೂರಿಸಿಕೊಳ್ಳಲಿ ಬಿಡು ಎನ್ನಲಿಲ್ಲವೆ?.... ಆಹಾ ಗಂಡನೇ....

ಮುರಳಿ:– ಇರಲಿ, ಕೇಳು. ವೈರಿನಾಶಕ್ಕೆ ಇದು ಸರಿಯಾದ ಸಮಯ ವಲ್ಲವೆಂದೂ....

ರಮೆ:– ....ಪಂಚಾಂಗ ನೋಡಿ ಬಂದಿದ್ದನೊ?....

ಮುರಳಿ:– ಸುಮ್ಮನೆ ಕೇಳುತ್ತೀಯೋ ಇಲ್ಲವೊ?........ಮಾತಿಗೆ ತಪ್ಪಿದರೆ ಅಣ್ಣನು ಉಳಿಯಲಾರನೆಂದೂ, ಸದ್ಗುಣವು ಹೆಸರನ್ನು ಕಳೆದುಕೊಳ್ಳುವದೆಂದೂ....

ರಮೆ:– ....ತಮ್ಮ ಹೆಂಡತಿ ಶೀಲವನ್ನು ಕಳೆದುಕೊಂಡಾದರೂ ತಾವು ಆ ಸದ್ಗುಣವನ್ನು ಉಳಿಸಿಕೊಳ್ಳಬೇಕೆಂದೂ....

ಮುರಳಿ:– ನಿನಗೇನು ತಲೆ ಕೆಟ್ಟುಹೋಗಿದೆಯೋ ಹೇಗೆ ರಮಾ?

ರಮೆ:– ........ಸದ್ಗುಣವಂತೆ, ಸದ್ಗುಣ! ಶಿಖಂಡಿಗಳಿಗೆ ಪುಕ್ಕಲುತನವೇ ಸದ್ಗುಣದಂತೆ ಕಾಣಿಸುವದರಲ್ಲಿ ತಪ್ಪೇನು? ಹೋಗಲಿ, ಹೇಳಿ.

ಮುರಳಿ:– ಅರ್ಜುನನ ಮಾತಿನಿಂದ ವಿಮುಖನಾಗದ ಭೀಮನು ಅವನಿಗೆ ಉತ್ತರವಾಗಿ "ಅದೆಲ್ಲ ಇರಲಿ" ಎಂದಷ್ಟೇ ಹೇಳಿ ಭೂಮಿ, ವರುಣ, ಅಗ್ನಿ, ವಾಯು ಮೊದಲಾದ ಅಷ್ಟದಿಕ್ಪಾಲಕರನ್ನು ಸಾಕ್ಷೀಭೂತರನ್ನಾಗಿಟ್ಟುಕೊಂಡು "ನೂರ್ವರು ಕೌರವರನ್ನೂ ನಾನೇ ಕೊಲ್ಲುತ್ತೇನೆ. ಈ ದುಷ್ಟ ಕರ್ಣನನ್ನು ಅರ್ಜುನನು ಕೊಲ್ಲುತ್ತಾನೆ. ಠಕ್ಕುಗಾರನಾದ ಈ ಪಾಪಿ ಶಕುನಿಯನ್ನು ಸಹದೇವನು ಕೊಲ್ಲುತ್ತಾನೆ. ಈ ನೀಚ ದುರ್ಯೋಧನನ ತೊಡೆಗಳನ್ನು ಮುರಿದೇ ನಾನು ಅವನನ್ನು ಕೊಲ್ಲುತ್ತೇನೆ. ಇವರೆಲ್ಲರ ಮುಂದೆ ಇವನ ಗರ್ವಿತ ತಲೆಯನ್ನು ನನ್ನ ಕಾಲಿನಿಂದ ಮೆಟ್ಟಿಯೇ ಮೆಟ್ಟುತ್ತೇನೆ. ದುಶ್ಯಾಸನನ ರಕ್ತವನ್ನು ಕುಡಿದು ಅದನ್ನು ದ್ರೌಪದಿಯ ಕೆದರುಕೇಶಕ್ಕೆ ಸವರಿ ಅವನ ದಂತಪಂಕ್ತಿಯಿಂದ ಅವಳ ಮುಡಿಯನ್ನು ಬಾಚಿ ಮುಡಿಗಟ್ಟಿ ಅದಕ್ಕೆ ಅವನ ಕರುಳನ್ನು ಮುಡಿಸುವೆನು. ಅರ್ಜುನಾ, ನಿನ್ನಾಣೆಗೂ ಇದಿಷ್ಟನ್ನು ಮಾಡಿಯೇ ತೀರುತ್ತೇನೆ. ಇದಕ್ಕೆ ದಿಕ್ಪಾಲಕಾದಿ ಸಮಸ್ತ ದೇವತೆಗಳೇ ಸಾಕ್ಷಿ. ಇಷ್ಟರವರೆಗೆ ನಾವು ಸೈರಿಸಿದುದರ ಫಲವೇ ಇದು" ಎಂದು ಭೀಷಣವಾದ ಪ್ರತಿಜ್ಞೆಯನ್ನು ಮಾಡಿದನು. ಇಲ್ಲಿಂದ ಹದಿಮೂರು ವರ್ಷಗಳ ಅನಂತರ ನಡೆಯಲಿದ್ದ ಹದಿನೆಂಟು ಅಕ್ಷೋಹಿಣೀ ಜನಸಂಖ್ಯೆಯ ಒಂದು ಹತ್ಯಾಕಾಂಡಕ್ಕೆ ಈಗ ಸ್ಪಷ್ಟವಾದ ತಳಪಾಯ ಹಾಕಿದಂತಾಯಿತು. ಚಿಕ್ಕಂದಿನಿಂದಲೂ ಕೌರವರು

ಪಾಂಡವರನ್ನು—ಅದರಲ್ಲಿಯೂ ಮುಖ್ಯವಾಗಿ ಭೀಮಸನ್ನು—ಕೊಲ್ಲಬೇಕೆಂದು ಹಲವು ಪ್ರಯತ್ನಗಳನ್ನು ಮಾಡಿದರೂ ಅವು ಯಾವವೂ ಫಲಕಾರಿಯಾಗಿರಲಿಲ್ಲ. ಅಷ್ಟೇ ಅಲ್ಲದೆ ಅದಕ್ಕೆ ಪ್ರತಿಯಾಗಿ ಪಾಂಡವರು ಕೌರವರನ್ನು ಕೊಲ್ಲಬೇಕೆಂದು ಈ ತನಕ ಒಮ್ಮೆಯಾದರೂ ಪ್ರಯತ್ನ ಮಾಡಿರಲಿಲ್ಲ. ಇದೀಗ ಕೌರವರ ದೌರ್ಜನ್ಯವು ಪಾಂಡವರನ್ನು ಬಾಧಿಸುವದಕ್ಕಿಂತಲೂ ಒಬ್ಬಳು ಗೌರವಾನ್ವಿತಳಾದ ಮಹಿಳೆಯ ಅವಮಾನಕ್ಕೆ ಕಾರಣವಾದಾಗ ಅವರ ನಾಶವೂ ನಿಶ್ಚಯವಾಯಿತು. ಭಾರತ ದೇಶ ದಲ್ಲಿ, ಹಿಂದೂ ಸಂಪ್ರದಾಯದಲ್ಲಿ, ಸ್ತ್ರೀಯರಿಗೆ ಪ್ರಾಧಾನ್ಯವಿಲ್ಲವೆಂಬ ಪಾಶ್ಚಾತ್ಯರಿಗೆ ಮತ್ತು ಅವರ ಭಾರತೀಯ ಶಿಷ್ಯರಿಗೆ ಈ ಕತೆಯನ್ನು ಹೇಳಿಕೊಡಬೇಕು. ಹೆಣ್ಣಿನ ಬಾಹ್ಯ ಸ್ವರೂಪದಲ್ಲಿ ಅವಳಿಗೆ ಗೌರವ ತೋರುವಂತೆ ನಟಿಸಿ ಅವಳ ಅಂತಸ್ಸತ್ವ ವಾದ ಅವಳ ಶೀಲಕ್ಕೆ ಏನೂ ಬೆಲೆ ಕೊಡದಿರುವ ಇವರು, ಭಾರತದ ನಾರಿಯ ಶೀಲಹರಣ ಯತ್ನವು ಕೋಟ್ಯಂತರ ಪುರುಷರನ್ನು ನಾಶಮಾಡಲು ಸಮರ್ಥ ವಾದುದೆಂಬದನ್ನು ಅರಿಯದಿದ್ದರೆ, ಅವರ ಕಿವಿ ಹಿಂಡಿ ಅವರಿಗೆ ಅದನ್ನು ಹೇಳಿಕೊಡ ದಿರುವ ಇತರರ ತಪ್ಪು ಅದು. ಹೋಗಲಿ, ಕೇಳು. ಭೀಮನ ಪ್ರತಿಜ್ಞೆಯನ್ನು ಕೇಳಿದ ಸಮಸ್ತ ಕೌರವ ಬಲವೂ ನಿಶ್ಚೇಷ್ಟಿತವಾಯಿತು. ಭೀಮನನ್ನು ಹಿಂತಿರು ಗಿಸಲೆಂದು ಹೋದ ಅರ್ಜುನನು ಅಣ್ಣನ ಕ್ಷತ್ರಿಯೋಚಿತವಾದ ಪ್ರತಿಜ್ಞೆಯಿಂದ ತಾನೂ ಪ್ರಚೋದಿತನಾಗಿ ಅವನನ್ನು ಕುರಿತು "ಅಣ್ಣಾ, ನಿನ್ನ ಕೋಪೋತ್ಪನ್ನಕ್ಕೆ ಕಾರಣರಾದವರು ಎಷ್ಟು ಸಮಯ ಬದುಕಿಯಾರು ? ಸತ್ಪುರುಷರ ಪ್ರತಿಜ್ಞೆಗಳು ಬರೀ ಆಡಂಬರದ ವಾಕ್ಯಗಳಲ್ಲ. ಅವುಗಳ ಫಲ, ಅವರು ಕ್ಷಾತ್ರಧರ್ಮದಿಂದ ಯುದ್ಧ ಮಾಡುವಾಗ ತಿಳಿಯುವದು ಎಂದು ಹೇಳಿ ದೇವಾದಿಗಳ ಸಾಕ್ಷಿಯಲ್ಲಿ ತನಗೆ ಭೀಮನು ನಿಯಮಿಸಿದಂತೆ ತಾನು ಕರ್ಣನನ್ನು ಕೊಲ್ಲುವದಾಗಿ ಶಪಥ ಮಾಡಿ ದನು. ಸಹದೇವನೂ ಭೀಮನ ಇಚ್ಛೆಯಂತೆ ಶಕುನಿಯ ಪ್ರಾಣ ಹರಣಕ್ಕೆ ಫಣ ತೊಟ್ಟನು ............

ರಮೆ:– ....ಆಹಾ, ದ್ರೌಪದಿಯ ಪರವಾಗಿ ನಿಮ್ಮ ಭೀಮನಿಗೆ ನನ್ನ ಕೋಟಿ ನಮಸ್ಕಾರಗಳಿವೆ. ಅವನು ಅವಳ ಗಂಡನಲ್ಲ. ಅವಳ ಸರ್ವಸ್ವ; ಅವಳ ಭಗವಂತ. ಮುಂದೆ ಹೇಳಿ.

ಮುರಳಿ:– ಈ ಸಮಯಕ್ಕೆ ಸರಿಯಾಗಿ ಅನೇಕ ಉತ್ಪಾತಗಳು ಕಾಣಿಸಿ ಕೊಂಡವು. ಭೀಮಾದಿಗಳು ತಮ್ಮ ಪ್ರತಿಜ್ಞೆಗಳಲ್ಲಿ ಸಾಕ್ಷಿಯಾಗಿಟ್ಟುಕೊಂಡ ದೈವಿಕ ಶಕ್ತಿಗಳು ಈ ಉತ್ಪಾತಗಳ ಮೂಲಕ ಕೌರವರ ನಾಶವನ್ನೂ, ಪಾಂಡವರ ಏಳಿಗೆಯನ್ನೂ ಕೋರುತ್ತಿದ್ದಾರೆಂದೂ, ಆದುದರಿಂದ ಧೃತರಾಷ್ಟ್ರನು ಸಾಧ್ವೀಮಣಿ ಯಾದ ದ್ರೌಪದಿಯನ್ನು ಸಮಾಧಾನಿಸಬೇಕೆಂದೂ ಭೀಷ್ಮಾದಿಗಳು ಅವನನ್ನು ಬಲವಂತಪಡಿಸಿದರು. ಭೀಮನ ಕೆರಳುವಿಕೆಯಿಂದ ಈಗಾಗಲೇ ಹೆದರಿ

ಬಿಳುಪೇರಿದ್ದ ಧೃತರಾಷ್ಟ್ರನು ತನ್ನ ಮಕ್ಕಳ ನಾಶವಾಗುವದೆಂಬದನ್ನು ಭೀಷ್ಮ ನಿಂದ ಕೇಳಿ ಇನ್ನಷ್ಟೂ ಹೆದರಿ ದ್ರೌಪದಿಯನ್ನು ಕುರಿತು "ಅಮ್ಮಾ, ನನ್ನ ಮಕ್ಕಳು ನೀಚರು. ನೀವು ಸಜ್ಜನರು, ಧರ್ಮಾತ್ಮರು. ನನ್ನ ಮಕ್ಕಳ ಅಪರಾಧವನ್ನು ಮರೆತುಬಿಡು. ನಿನ್ನ ಇಚ್ಛೆ ಏನಿದೆಯೋ ಅದನ್ನು ತಿಳಿಸು" ಎಂದು ಕೇಳಿ ಕೊಂಡನು. ದ್ರೌಪದಿಯು ಯುಧಿಷ್ಠಿರನು ದ್ಯೂತದಲ್ಲಿ ಸೋತಿದ್ದ ಸಮಸ್ತವನ್ನೂ ಹಿಂದೆ ಪಡೆಯಲು ಇಚ್ಛಿಸಿ ತನ್ನ ಗಂಡಂದಿರ ದಾಸ್ಯವನ್ನೂ ತೆಗೆಸಿದಳು. ಆಗ ಕರ್ಣನು "ಭಲೆ, ದ್ರೌಪದಿ. ನಿನ್ನ ಗಂಡಂದಿರು ಅಡವಿಟ್ಟ ಆಭರಣವನ್ನು ನೀನು ಬಿಡಿಸದೆ ಗೊಡ್ಡು ಮರವು ಫಲಭರಿತವಾದಂತಾಯಿತು. ಇರುಬಿನ ಮಧ್ಯದಿಂದ ಹಂದಿಗಳನ್ನು ಬಿಡಿಸಿದಂತೆ, ಮೀನುಗಳ ಗಂಟಲಲ್ಲಿ ಸಿಕ್ಕಿಕೊಂಡಿದ್ದ ಗಾಳವನ್ನು ಕಿತ್ತಂತೆ ನೀನು ಅವರನ್ನು ಕಾಪಾಡಿರುವೆ" ಎಂದು ಪಾಂಡವರ ನಿಷ್ಕ್ರಿಯತೆ ಯನ್ನು ಕುರಿತು ಅಪಹಾಸ್ಯ ಮಾಡಿದನು. ಭೀಮನಿಗೆ ನೆತ್ತಿಗೇರಿದ ಸಿಟ್ಟು ಕ್ರಮ ವಾಗಿ ಇಳಿಯುತ್ತಿತ್ತು. ಕರ್ಣನ ಈ ಮಾತುಗಳಿಂದ ಅದು ಪುನಃ ಒಮ್ಮೆಗೇ ಭುಗಿಲ್ ಎಂದು ಹೊತ್ತಿಕೊಂಡಿತು. ಸಿಂಹದಂತೆ ಹಿಂತಿರುಗಿ ರಾಜದ್ವಾರದ ಲಾಳಮುಂಡಿಗೆಯನ್ನು ನೋಡಿದನು. ಅಷ್ಟರಲ್ಲಿಯೇ ಅವನನ್ನು ಯುಧಿಷ್ಠಿರನು ತಡೆದನು. ಭೀಮನು ತನ್ನ ಸಿಟ್ಟನ್ನು ತಾನೇ ನುಂಗಿಕೊಳ್ಳಬೇಕಾಯಿತು. ಧೃತರಾಷ್ಟ್ರನು, ಪಾಂಡವರಿಂದ ಗೆದ್ದುಕೊಂಡಿದ್ದ ಸಮಸ್ತ ಐಶ್ವರ್ಯವನ್ನೂ ಅವರಿಗೊಪ್ಪಿಸಿ ಅವರನ್ನು ಸಮಾಧಾನಿಸಿ ಕಳುಹಿಸಿಕೊಟ್ಟನು. ಪಾಂಡವರು ತಮ್ಮ ಸಮಸ್ತ ಬಲದೊಂದಿಗೆ ತಮ್ಮ ರಾಜಧಾನಿಗೆ ತೆರಳಿದರು.

ಮಾರನೆಯ ದಿವಸ ಶಕುನಿ, ಕರ್ಣ, ದುಶ್ಶಾಸನರು ದುರ್ಯೋಧನನಲ್ಲಿಗೆ ಬಂದು ಅವನು ಪಾಂಡವರನ್ನು ಅವರ ರಾಜ್ಯಸಹಿತ ಹೋಗಲು ಬಿಟ್ಟದು ಅವನ ಪರಾಭವವೆಂದೂ ಭೀಮನು ಹೋಗುತ್ತಿದ್ದಾಗ ಜಾಡು ಕಚ್ಚಿ ಆಗಾಗ ತಿರುಗಿ ನೋಡುತ್ತಾ ಹೋಗುತ್ತಿದ್ದನೆಂದೂ ತಿಳಿಸಿ ದುರ್ಯೋಧನನ ಮನಸ್ಸನ್ನು ಕಲಕಿ ದರು. ಇದರಿಂದ ಉದ್ರಿಕ್ತನಾದ ದುರ್ಯೋಧನನು ಅವರೊಂದಿಗೆ ಧೃತರಾಷ್ಟ್ರ ಗಾಂಧಾರಿಯರನ್ನು ಕಂಡು ಬೇಕಷ್ಟು ರೀತಿಯಲ್ಲಿ ಅವರ ಮನವೊಲಿಯುವಂತೆ ಮಾತನಾಡಿ, ಅವರು ತನ್ನ ಸೂಚನೆಗಳನ್ನು ವಿರೋಧಿಸಿದರೆ ತಾನು ರಾಜ್ಯವನ್ನೇ ಬಿಟ್ಟು ಹೋಗಿಬಿಡುವದಾಗಿ ಆ ವೃದ್ಧರನ್ನು ಬೆದರಿಸಿ ಶಕುನಿಯ ಪ್ರೇರಣೆಯಿಂದಾಗಿ ಪಾಂಡವರನ್ನು ಮತ್ತೊಂದು ಅವಘಡಕ್ಕೊಡ್ಡಲು ಅವರ ಅನುಮತಿ ಬೇಡಿದನು. ಮಗನ ಮೇಲಿನ ವ್ಯಾಮೋಹದಿಂದಾಗಿ ಅಂತರ್ಯದಲ್ಲಿಯೂ ಕುರುಡನಂತಾಗಿದ್ದ ಧೃತರಾಷ್ಟ್ರನು ದುಶ್ಚಿಂತೆಗೆ ಮನಸ್ಸಿನಲ್ಲಿ ಇಂಬುಗೊಟ್ಟು ಪಾಂಡವರನ್ನು ಹಿಂದಕ್ಕೆ ಕರೆತರಲು ಪ್ರತಿಕಾಮಿಕನನ್ನು ಕಳುಹಿಸಿದನು. ಅವನು ಪಾಂಡವರನ್ನು ಅರ್ಧ ದಾರಿಯಲ್ಲಿಯೇ ಸಂಧಿಸಿ ಅವರಲ್ಲಿ "ಈ ಕಳೆದ ಜೂಜಿನಲ್ಲಿ ವೈಮನಸ್ಯವು ತಲೆ

ದೋರಿತು. ಅದನ್ನು ಪರಿಹರಿಸಲು ಇಬ್ಬರು ರಾಜರೂ ಸೇರಿ ವಿನೋದಕ್ಕೆಂದು ಪಗಡೆಯಾಡಲಿ ಎಂದು ಧೃತರಾಷ್ಟ್ರನು ಹೇಳಿ ಕಳುಹಿಸಿದ್ದಾನೆ" ಎಂದನು. ಧರ್ಮ ಎಂಬ ಹೆಸರಿನಲ್ಲಿ ಕುಟಿಲತೆಯನ್ನು ಕಾಣಲಾರದ ದೌರ್ಬಲ್ಯದಿಂದ ಯುಧಿಷ್ಠಿರನ ಬುದ್ಧಿಯೂ, ಧರ್ಮ ಎಂಬ ಹೆಸರಿನಲ್ಲಿ ಅಣ್ಣನು ಹೇಳಿದುದಕ್ಕೆಲ್ಲ ತಲೆಬಾಗುವ ದೌರ್ಬಲ್ಯದಿಂದ ಅರ್ಜುನಾದಿಗಳ ಬುದ್ಧಿಯೂ ಜಡ್ಡು ಹಿಡಿದಂತಿದ್ದರೂ ಕೂಡ, ಯಾವನು ಅನ್ಯಾಯವನ್ನು ಸಹಿಸದೆ ತಕ್ಷಣ ಕಾರ್ಯಪ್ರವೃತ್ತನಾಗುತ್ತಿದ್ದ ಚಟುವಟಿಕೆಯಿಂದ ಕೂಡಿದ್ದನೋ, ಅದರಿಂದಾಗಿಯೇ ಮುಂದಾಲೋಚನೆ ಮಾಡುವ ಅವನ ಬುದ್ಧಿ ಜಡ್ಡು ಹಿಡಿದಿದ್ದಿತು ಎಂದು ಮಂಕಾಗಿ ಭಾರತವನ್ನು ವಿಮರ್ಶಿಸಿದ ಈ "ವಿದ್ವಾಂಸರು"ಗಳು ಲೋಕಕ್ಕೆ ಏನನ್ನು ಸಾರಿದ್ದಾರೋ ಅಂತಹ "ಜಡ್ಡು ಬುದ್ಧಿ"ಯ ಭೀಮನು ತಕ್ಷಣವೇ ಪ್ರತಿಕಾಮಿಕನಿಗೆ "ದುರ್ಯೋಧನನು ನಮ್ಮನ್ನು ಹಿಂದಕ್ಕೆ ಕರೆಸಿ, ಪುನಃ ಜೂಜಾಡಿಸಿ, ಪುನಃ ಎಲ್ಲವನ್ನೂ ಕಿತ್ತಿಟ್ಟುಕೊಳ್ಳಬೇಕೆಂದು ಉದ್ದೇಶಿಸಿ ಮೊರೆಯಿಟ್ಟು ಕುರುಡನಲ್ಲಿ ಬೇಡಿಕೊಂಡುದರ ಫಲವಾಗಿ ಧೃತರಾಷ್ಟ್ರ ಮಹಾರಾಜನು ನಿನ್ನನ್ನು ಅಟ್ಟಿದನೋ ಅಥವಾ ಗಾಂಧಾರಿ ಅಟ್ಟಿದಳೊ? ಕರೆಸುವವರು ಹುಚ್ಚರಾಗಿರಬಹುದಾದರೆ ಪುನಃ ನಿಮ್ಮ ಗಾಳಕ್ಕೆ ಸಿಕ್ಕಲು ನಮಗಾದರೂ ಹುಚ್ಚು ಹಿಡಿದಿಲ್ಲ" ಎಂದು ಹೇಳಿದನು.

ಅಷ್ಟರಲ್ಲಿಯೇ ಯುಧಿಷ್ಠಿರನು "ಶಿವ ಶಿವಾ. ತಂದೆ ಬರಹೇಳಿದನೆ? ಭೀಮಾ, ತಪ್ಪು ಭಾವಿಸಿದೆ. ಪಾಂಡು, ಕುಂತಿಯರು ತಪ್ಪಿ ನಡೆಯಬಹುದು. ಆದರೆ ಧೃತರಾಷ್ಟ್ರನು ತಪ್ಪು ಹೆಜ್ಜೆ ಇಡಲಾರ" ಎಂದು ಯುವರಾಜನಾದ ಭೀಮನ ಮನಸ್ಸನ್ನು ತಿದ್ದಲು ಪ್ರಯತ್ನಿಸಿದನು.

ಭೀಮನ ಮನಸ್ಸು ಸಿಕ್ಕುಗಳ ಮುದ್ದೆಯಾಗಿದ್ದುದಲ್ಲ. ಅವನದು ತಿಳಿಯಾದ, ಆದುದರಿಂದಲೇ ಸ್ಪಷ್ಟವಾದ, ಭದ್ರವಾದ ಅಭಿಪ್ರಾಯಗಳನ್ನು ಹೊರಸೂಸಬಲ್ಲುದಾದ ಮನಸ್ಸಾಗಿತ್ತು. ಅವನು ಯುಧಿಷ್ಠಿರನಿಗೆ ಪುನಃ ಸಲಹೆ ಕೊಡುತ್ತಾ "ಅಣ್ಣಾ, ಕೌರವರು ನಮ್ಮನ್ನು ಬಾಲ್ಯದಿಂದಲೂ ದ್ವೇಷಿಸುತ್ತಿದ್ದಾರೆ. ಅವರ ಮನಸ್ಸನ್ನು ಮತ್ತಷ್ಟು ಕೆಡಿಸಲು ಕುವಿದ್ಯಾವಿಶಾರದರಾದ ಕರ್ಣ, ಶಕುನಿಗಳು ಸದಾ ಸಿದ್ಧರಾಗಿರುತ್ತಾರೆ. ಇಷ್ಟು ಜನರ ಕುಹಕದ ಬಲೆಗೆ ಧೃತರಾಷ್ಟ್ರನು ಸಹಜವಾಗಿ ಬಿದ್ದಿರುತ್ತಾನೆ. ಅವನು ಸ್ವತಃ ಸಜ್ಜನನಿರಬಹುದು. ಆದರೆ ಈ ನಾಲ್ವರ ಸಂಗವು ಅವನ ಸೌಜನ್ಯವನ್ನು ಕೆಡಿಸುವದು ಅಸಂಭವವೇನಲ್ಲ. ಹೀಗಿರುವಾಗ ನಾವು ಈಗ ಪುನಃ ಹಿಂತಿರುಗಿ ಹೋಗುವ ಕುರಿತು ತುಂಬ ಯೋಚನೆ ಮಾಡಿದರೆ ಮಾತ್ರ ನಮಗೆ ಕ್ಷೇಮವಾದೀತು" ಎಂದನು. ಅವನ ಮಾತನ್ನೇ ಧೌಮ್ಯಾದಿಗಳೂ ಸಮರ್ಥಿಸಿದರು. ಆದರೆ ಯುಧಿಷ್ಠಿರನು ತನ್ನ ಅಭಿಪ್ರಾಯವನ್ನು ಬದಲಾಯಿಸಲಿಲ್ಲ. ಭೀಮನು ಅಣ್ಣನಾಜ್ಞೆಗೆ ತಲೆಬಾಗಲೇಬೇಕಾಯಿತು.

ಸರಿ. ಹಸ್ತಿನಾವತಿಯಲ್ಲಿ ಪುನಃ ಪಗಡೆಯಾಟಕ್ಕೆ ಪ್ರಾರಂಭವಾಯಿತು.

ರಮೆ:– ನೀವು ಗೆಲ್ಲುತ್ತಿದ್ದೀರ.

ಮುರಳಿ:– ನಾನಲ್ಲ, ಹಸ್ತಿನಾವತಿಯಲ್ಲಿ ಪಗಡೆಯಾಡಿದುದು !

ರಮೆ:– ಪಗಡೆಯಲ್ಲಲ್ಲ, ನಾನು ಹೇಳಿದುದು !

ಮುರಳಿ:– ಮತ್ತೆ ಎಂಥದರಲ್ಲಿ ?

ರಮೆ:– ಭೀಮನ ಕತೆ ಹೇಳುವದರ ಉದ್ದೇಶದಲ್ಲಿ.

ಮುರಳಿ:– ಇದರಲ್ಲಿ ಸೋಲು–ಗೆಲವುಗಳೇನುಂಟು ?

ರಮೆ:– ಹಾಗಲ್ಲ. ಭೀಮನೆಂದರೆ ರಾಕ್ಷಸಬಲ ಇರುವದರಲ್ಲಿ ಮಾತ್ರ ವಿಶಿಷ್ಟತೆ ಪಡೆದಿದ್ದ ವ್ಯಕ್ತಿ ಎಂದು ತಿಳಿದಿದ್ದ ನನ್ನನ್ನು ಪರಿವರ್ತಿಸಿ ಮಾಡುವದರಲ್ಲಿ ಸಫಲರಾಗಿದ್ದೀರಿ, ಎಂದೆ.

ಮುರಳಿ:– ಅದರಲ್ಲಿ ನನ್ನ ಪಾತ್ರ ಏನೂ ಇಲ್ಲ. ಇದ್ದುದನ್ನು ಇದ್ದಂತೆ ಹೇಳುವದರಲ್ಲಿ ಏನು ಹೆಚ್ಚುಗಾರಿಕೆ ಇದೆ ! ಅಂತೂ ಸಂತೋಷ. ಹಾಗಾದರೆ ಭೀಮನ ವ್ಯಕ್ತಿತ್ವವನ್ನು ಅದರ ಸರ್ವ ಸ್ವರೂಪದಲ್ಲಿಯೂ ಮೆಚ್ಚಿಕೊಂಡಿದ್ದಿ ?

ರಮೆ:– ಮೆಚ್ಚಿಕೊಂಡಿದ್ದೇನೆ. ಆದರೆ ಇನ್ನೂ ಸ್ವಲ್ಪ ಕತೆ ಮುಂದುವರಿಯ ಬೇಕು. ಅವನ ನ್ಯಾಯ ನಿಷ್ಠುರತೆ, ನಿರಾಡಂಬರತೆ, ಅನುಕಂಪ ಮೊದಲಾದ ಸದ್ಗುಣಗಳ ಬಗೆಗೆ ಇನ್ನು ಯಾವ ವಿವರಣೆಯೂ ನಿಮ್ಮಿಂದ ಬೇಕಿಲ್ಲ. ಮಹಾ ಭಾರತದಲ್ಲಿ ಸದ್ಗುಣಗಳಿಗೆ ಹೆಸರಾದವರೆಂದು ನಾನು ಈ ವರೆಗೆ ತಿಳಿದಿದ್ದ ಯುಧಿಷ್ಠಿರ, ಅರ್ಜುನ, ಭೀಷ್ಮಾಚಾರ್ಯ, ದ್ರೋಣಾಚಾರ್ಯ, ವಿದುರ ಮೊದಲಾದವರ ನಡುವೆಯೂ ಕೂಡ ಭೀಮನ ಚಾರಿತ್ರ್ಯ ಮುಗಿಲೆತ್ತರಕ್ಕೆ ನಿಂತಿರುವದನ್ನು ದ್ರೌಪದೀ ವಸ್ತ್ರಾಪಹರಣ ಸಂದರ್ಭದಲ್ಲಿ ಕಂಡುಕೊಂಡಿದ್ದೇನೆ. ದೇಹಬಲದಲ್ಲಿ, ಸಚ್ಚಾರಿತ್ರ್ಯದಲ್ಲಿ ಹೀಗೆ– ಅವನು ಅದ್ವಿತೀಯನಾದವನೆಂದು ಸಿದ್ಧವಾಗಿದೆ. ಆದರೆ ಬುದ್ಧಿಯ ಸೂಕ್ಷ್ಮತೆಯಲ್ಲಿ ಅವನು, ಅವನ ದೇಹದ ಪ್ರಮಾಣಕ್ಕೆ ಸಹಜವಾದಷ್ಟು ಬಹಳ ಹಿಂದುಳಿದಿದ್ದಾನೆ ಎಂಬ ಕಲ್ಪನೆ ಸಾಮಾನ್ಯ ವಾಗಿ ಎಲ್ಲರಲ್ಲಿಯೂ ಇರುವಂತೆ ನನ್ನಲ್ಲಿಯೂ ಇತ್ತು. ಆ ಕಲ್ಪನೆ ಕೂಡ ಕುಸಿಯುತ್ತಿದೆ.

ಮುರಳಿ:– ಪೂರ್ತಿಯಾಗಿ ಕುಸಿದಿಲ್ಲ ?

ರಮೆ:– ಇನ್ನೂ ಇಲ್ಲ.

ಮುರಳಿ:– ಕೌರವರು ಎರಡನೆಯ ಬಾರಿ ದ್ಯೂತಕ್ಕೆ ಹೇಳಿ ಕಳುಹಿಸಿದಾಗ

ಅವನು ಅವರ ಉದ್ದೇಶವನ್ನು ಸರಿಯಾಗಿ ಕಂಡುಕೊಂಡುದು ಏನನ್ನು ತೋರಿಸುತ್ತದೆ ?

ರಮೆ:– ನಿಜ. ಅಲ್ಲಿ ಅವನು ಯುಧಿಷ್ಠಿರಾದಿಗಳಿಗಿಂತ ಹೆಚ್ಚು ಬುದ್ಧಿವಂತಿಕೆಯನ್ನು ತೋರಿಸಿದ್ದಾನೆ. ಆದರೆ ಅದಕ್ಕೆ ಕಾರಣ ಅವನ ಬುದ್ಧಿಯ ಸೂಕ್ಷ್ಮತೆಯೂ ಆಗಬಹುದು, ಅವನಿಗೆ ಕೌರವರ ಮೇಲಿದ್ದ ದ್ವೇಷವೂ ಆಗಬಹುದು.

ಮುರಳಿ:– ಹೇಗೆ ?

ರಮೆ:– ತಾನು ಒಬ್ಬನನ್ನು ಕೆಟ್ಟವನೆಂದು ಭಾವಿಸಿದರೆ ಅವನು ತನ್ನ ಕುರಿತು ಒಳ್ಳೆಯದನ್ನು ಮಾಡಲೆಳಸಿದರೂ ಅದರಲ್ಲಿ ಕೆಡುಕನ್ನೇ ಕಾಣಲೆತ್ನಿಸುವದು ಸ್ವಾಭಾವಿಕವಾದಂತೆ.

ಮುರಳಿ:– ಆದರೆ, ಪ್ರತಿಕಾಮಿಕನ ಮಾತಿನಿಂದ ಯುಧಿಷ್ಠಿರಾದಿಗಳಿಗೆ ಧೃತರಾಷ್ಟ್ರನ ಕುರಿತು ಎಳ್ಳಷ್ಟೂ ಸಂಶಯು ಬಾರದಿರಬೇಕಾದರೆ, ಅವನು ಎಷ್ಟು ನಯು, ವಿನಯು, ಆದರ, ಅಭಿಮಾನಗಳನ್ನು ವ್ಯಕ್ತಪಡಿಸಿ ಹೇಳಿ ಕಳುಹಿಸಿರಬಹುದೆಂಬದನ್ನು ನೀನು ಊಹಿಸಿಕೊಳ್ಳಬೇಕು. ಅಂತಹದರಲ್ಲಿಯೂ ಭೀಮನು ಅಷ್ಟೂ ಆಕರ್ಷಕವಾದ ಇರುಬಿಗೆ ಸಿಕ್ಕಿಕೊಳ್ಳದಷ್ಟು ಬುದ್ಧಿವಂತನಾಗಿದ್ದನು ಎಂಬದನ್ನೇಕೆ ನೀನು ಒಪ್ಪುವದಿಲ್ಲ ?

ರಮೆ:– ಒಪ್ಪುವದಿಲ್ಲ ಎಂದೇನೂ ಇಲ್ಲ. ಆದರೂ ಇಲ್ಲಿ ಭೀಮನ ನಿಲವು ಬುದ್ಧಿ ಸೂಕ್ಷ್ಮತೆಯಿಂದಲೂ ಪ್ರಚೋದಿತವಾಗಿರಬಹುದು, ಅವನಿಗೆ ಕೌರವರ ಮೇಲಿದ್ದ ದ್ವೇಷದಿಂದಲೂ ಪ್ರಭಾವಿತವಾಗಿರಬಹುದು ಎಂಬ ಸಂಶಯುಕ್ಕೆ ಎಡೆಯನ್ನುಂಟುಮಾಡುತ್ತದೆ. ಹೀಗಾಗಿ ಅವನು ಅಸಾಧಾರಣ ಬುದ್ಧಿವಂತ ಎಂಬದು ನಿಸ್ಸಂಶಯುವೆಂಬಂತೆ ಇಲ್ಲಿ ಸ್ಥಾಪಿತವಾಗುವದಿಲ್ಲ. ಯಾವದನ್ನೇ ನಾವು ಸಿದ್ಧಗೊಳಿಸಬೇಕಾದರೂ ಅದು ನಿಸ್ಸಂಶಯುವಾದುದಾಗಿರಬೇಕು ತಾನೆ ?

ಮುರಳಿ:– ಭೀಮನ ಬುದ್ಧಿ ಇರಲಿ. ನೀನಂತೂ ನಿಸ್ಸಂಶಯುವಾಗಿ ಬುದ್ಧಿವಂತಳಾಗುತ್ತ ಇದ್ದೀಯೆ ! ಸಂತೋಷ. ಭೀಮನ ಬುದ್ಧಿ ಸೂಕ್ಷ್ಮತೆಗೆ ಮುಂದಕ್ಕೂ ಉದಾಹರಣೆಗಳು ಸಿಕ್ಕುತ್ತವೆ. ಆಗ ಏನನ್ನುವೆಯೋ ನೋಡೋಣ. ಈಗ ಕತೆ ಕೇಳು.

ರಮೆ:– ಹೇಳಿ.

ಮುರಳಿ:– ಪುನಃ ಪಗಡೆಯಾಟ ಪ್ರಾರಂಭವಾಯಿತು. ಈ ಬಾರಿ ಕೌರವ ಪಕ್ಷದವರು ಹೆಚ್ಚು ಜಾಗರೂಕರಾಗಿದ್ದರು. ಮುಂಬರುವ ಆಪತ್ತನ್ನು ಪರಿಹರಿಸಿಕೊಳ್ಳುವ ಬುದ್ಧಿಯು ಹುಟ್ಟಿಕೊಳ್ಳುವ ಮೊದಲೇ ಆಪತ್ತು ಎರಗುವಂತಾಗಿ ಪಾಂಡವರನ್ನು ದಿಙ್ಮೂಢರನ್ನಾಗಿಸಿ ಇತರರು "ಏನು ? ಏಕೆ ? ಹೇಗೆ ?"

ಎಂದು ಚಿಂತಿಸುವದರೊಳಗೇ ಪಾಂಡವರು ಸರ್ವನಾಶವನ್ನು ಕಂಡಿರಬೇಕು ಎಂದು ಅವರು ಬುದ್ಧಿವಂತಿಕೆಯಿಂದ ಹಂಚಿಕೆ ಹೂಡಿದ್ದರು. ಹಾಗಾಗಿ ಆಟದ ಪ್ರಾರಂಭದಲ್ಲಿಯೇ ಶಕುನಿಯು "ಯುಧಿಷ್ಠಿರ ರಾಜಾ, ಇಂದು ಹೆಚ್ಚು ಆಟಗಳೇನೂ ಬೇಡ. ಒಂದೇ ಒಂದು ಆಟವಾಡಿದರೆ ಸಾಕು. ಸೋತವನು – ಅವನು ನೀನೇ ಆಗಲಿ, ದುರ್ಯೋಧನನೇ ಆಗಲಿ–ತನ್ನ ಸಮಸ್ತ ಐಶ್ವರ್ಯವನ್ನೂ ಗೆದ್ದವನಿಗೆ ಒಪ್ಪಿಸಿ ತಾನು ಹನ್ನೆರಡು ವರ್ಷಗಳ ಕಾಲ ಅರಣ್ಯ ವಾಸವನ್ನೂ, ಅನಂತರದ ಒಂದು ವರ್ಷ ಗುಪ್ತವಾಸವನ್ನೂ ಮಾಡಬೇಕು. ಈ ಅಜ್ಞಾತ ಕಾಲಾವಧಿಯಲ್ಲಿ ಅವರು ಗುರುತಿಸಲ್ಪಟ್ಟರೆಂದರೆ, ಅವರು ಪುನಃ ಹನ್ನೆರಡು ವರ್ಷಗಳ ವನವಾಸವನ್ನೂ ಒಂದು ವರ್ಷದ ಅಜ್ಞಾತ ವಾಸವನ್ನೂ ಅನುಭವಿಸಬೇಕು. ಅಷ್ಟೆ" ಎಂದು ಹೇಳಿ "ಧೈರ್ಯವಿದ್ದರೆ ಒಪ್ಪಿಕೊ" ಎಂದು ಅವನ ಕ್ಷಾತ್ರತನವನ್ನು ಚುಚ್ಚಿದನು. ಯುಧಿಷ್ಠಿರನೇ ಆಗಲಿ, ಅವನ ತಂದೆ ಯಮರಾಯನೇ ಆಗಲಿ – ಎಲ್ಲರೂ ವಿಧಿಯ ಕೈವಾಡಕ್ಕೆ ಸಿಕ್ಕಿ ಕುಣಿಯುವ ಗೊಂಬೆಗಳು. ಯುಧಿಷ್ಠಿರನು ಪಂಥಕ್ಕೆ ಒಪ್ಪಿ ಆಡಿದನು. ಪಾಂಡವರು ಎಲ್ಲವನ್ನೂ ಕಳೆದುಕೊಂಡು ನಿರ್ಗತಿಕರಾದರು. ಭೀಮನ ಕರುಳು ಕಿವುಚಿದಂತಾಗುತ್ತಿತ್ತು. ಅವನ ಸಹನಾಶಕ್ತಿಯನ್ನು ಅತ್ಯಂತ ಕ್ರೂರ ರೀತಿಯಲ್ಲಿ ಯುಧಿಷ್ಠಿರನು ಪರೀಕ್ಷಿಸಿದಂತೆ ಆಗಿತ್ತು. ಪುನಃ ಒಮ್ಮೆ ಪಾಂಡವರು ತಮ್ಮ ಮೈಮೇಲಿನ ಸಮಸ್ತ ಆಭರಣಗಳನ್ನೂ ಕಳಚಿಟ್ಟರು. ಭೀಮನು ಅಣ್ಣನನ್ನು ಕುರಿತು "ಅಣ್ಣಾ, ನಿನಗೆ ಏನು ಮನ್ನಣೆ ಸಿಕ್ಕಿತೆಂಬದನ್ನು ಕಂಡುಕೊಂಡೆಯಾ ? ಕೌರವರ ಓಲಗದ ಮಹತ್ವದ ಅರಿವು ಪೂರ್ಣವಾಗಿ ಈಗಲಾದರೂ ಆಯಿತೆ ? ವನಮಾಲೆಯ ಆಭರಣ ಧರಿಸಬೇಕಾದ ನೀನು ವನಮಾಲೆಯನ್ನೇ ಆಶ್ರಯಿಸುವಂತೆ ಅನುಗ್ರಹಿಸಿರುವನಲ್ಲವೇ ತಂದೆ ಧೃತರಾಷ್ಟ್ರ ! ಮೋಹದ ಮಾತೆ ಗಾಂಧಾರಿ ದೇವಿಯ ಕರುಣೆಯ ಫಲವೂ ಬಹಳ ದೊಡ್ಡದಾಗಿದೆ. ಏಳು, ಹೊರಡೋಣ. ವನವಾಸವು ನಮ್ಮ ಹುಟ್ಟಿಗೇ ಅಂಟಿಕೊಂಡು ಬಂದುದು" ಎಂದು ಹೇಳಿದನು.

ಪಾಂಡವರೂ ದ್ರೌಪದಿಯೂ ಹಿರಿಯರಿಗೆಲ್ಲ ನಮಸ್ಕರಿಸಿ ಮುಂದೆ ಅರ್ಜುನ, ಅವನ ಹಿಂದೆ ಯುಧಿಷ್ಠಿರ, ಅವನ ಹಿಂದೆ ನಕುಲ, ಸಹದೇವ, ಅನಂತರ ದ್ರೌಪದಿ; ಕೊನೆಯಲ್ಲಿ ಭೀಮ – ಹೀಗೆ ನಾಡನ್ನು ಬಿಟ್ಟು ಕಾಡಿಗೆ ನಡೆಯುತ್ತಿರಲು ಹಸ್ತಿನಾವತಿ ಕಂಬನಿದುಂಬಿತು. ತನ್ನ ಪಾತಿವ್ರತ್ಯ ಬಲದಿಂದ ರಾವಣನನ್ನು ಸುಟ್ಟು ಬೂದಿಮಾಡುವ ಶಕ್ತಿ ತನಗಿದ್ದರೂ ಹಾಗೆ ಮಾಡದೆ ಸ್ತ್ರೀತ್ವಕ್ಕೆ ಕಟ್ಟುಬಿದ್ದು ಘೋರ ಶೋಕವನ್ನನುಭವಿಸುವ ತ್ಯಾಗ ಗುಣದಿಂದಾಗಿ ಲೋಕಮಾನ್ಯಳಾದ ಸೀತಾಮಾತೆಯಂತೆ ಭೀಮನೂ ಅಣ್ಣನ ಹಿಂದೆ ಮೂಕ ಪಶುವಿನಂತೆ ಹೋಗುತ್ತಿದ್ದನು. ದುಶ್ಶಾಸನನು ಅವರ ಹಿಂದೆ ಬರುತ್ತಾ ಬೆರಳಾಡಿಸಿ ಅಪಹಾಸ್ಯ ಮಾಡುತ್ತಾ

"ಎತ್ತುಗಳು ಕಾಡಿಗೆ ಹೋಗುತ್ತಿವೆ, ನೋಡಿ" ಎಂದು ಹೀಯಾಳಿಸುತ್ತಾ ನಗುತ್ತಿದ್ದನು. ಇದನ್ನು ಗಮನಿಸಿದ ಭೀಮನು ಸಿಂಹದಂತೆ ಒಮ್ಮೆ ಹಿಂತಿರುಗಿ ನೋಡಿ ಗದೆಯನ್ನು ಮುಷ್ಟಿಯಲ್ಲಿ ಬಿಗಿ ಹಿಡಿದು ಒಮ್ಮೆ ಅಣ್ಣನತ್ತ ನೋಡಿದನು. ಯುಧಿಷ್ಠಿರನ ಕಣ್ಣು ಸನ್ನೆಯು ಮಯದತ್ತವಾದ ಗದೆಯನ್ನು ಗೆದ್ದಿತು. ಹಿಂದಿನಿಂದ ಕೂಗಿಡುವ ನರಿಗಳನ್ನು ಲೆಕ್ಕಿಸದೆ ಮುನ್ನಡೆವ ಮದಗಜದಂತೆ ಗದೆಯನ್ನು ಹೆಗಲ ಮೇಲಿರಿಸಿ ಮಾನಾಪಮಾನಗಳೆಲ್ಲವನ್ನೂ ಅಣ್ಣನಿಗೆ ಅರ್ಪಿಸಿ, ಮುಗ್ಧ ಮಗುವಿನಂತೆ ಭೀಮನು ಅಣ್ಣನನ್ನು ಹಿಂಬಾಲಿಸಿ ಕಾಡಿಗೆ ನಡೆದನು. ಪಾಂಡವರು ಬೇಡವೆನ್ನುತ್ತಿದ್ದರೂ ಸಾವಿರಾರು ಬ್ರಾಹ್ಮಣರು ಅವರನ್ನು ಅನುಸರಿಸಿ ಕಾಡಿಗೆ ಹೊರಟರು. ಅವರೆಲ್ಲರ ಪೋಷಣೆಯ ಹೊರೆ ಯುಧಿಷ್ಠಿರನ ಮೇಲೆ ಬಿತ್ತು. ಇದಕ್ಕಾಗಿ ಅವನು ಧೌಮ್ಯನ ಸಲಹೆಯಂತೆ ಸೂರ್ಯನನ್ನು ಮೆಚ್ಚಿಸಿ ಒಂದು ಅಕ್ಷಯ ಪಾತ್ರೆಯನ್ನು ಪಡೆದು ಅದರ ಮೂಲಕ ದಿನಕ್ಕೊಮ್ಮೆ ತಮಗೆ ಬೇಕಾಗುವಷ್ಟು ಆಹಾರವನ್ನು ಪಡೆಯುತ್ತಿದ್ದನು.

ರಮೆ:– ಸೂರ್ಯ ಗೋಲವು ಭೂಮಿಗುರುಳಿ ಪಾತ್ರೆಯನ್ನು ಕೊಡವಿ ಪುನಃ ಮೇಲೆ ಹಾರಿ ತನ್ನ ಅಕ್ಷದಲ್ಲಿ ನಿಲ್ಲುವ ತನಕ ಭೂಮಿಯು ತನ್ನ ಸುತ್ತುವಿಕೆಯನ್ನು ನಿಲ್ಲಿಸಿಯೇಬಿಟ್ಟಿತ್ತಂತೊ, ಸುತ್ತುತ್ತಿತ್ತಂತೊ ?

ಮುರಳಿ:– ಭೇಷೊ ! ಭೂಗೋಳದಲ್ಲಿ ನಿನಗೆ ಅಸಾಮಾನ್ಯ ಜ್ಞಾನವಿದೆ. ಆಕಾಶದಲ್ಲಿ ನಿಂತು ಭೂಮಿ ಸುತ್ತುವದನ್ನು ನೀನು ನೋಡಿದಾಗ ಅದು ಹೇಗೆ ಕಾಣಿಸುತ್ತಿತ್ತು ರಮಾ ?

ರಮೆ:– ನಾನು ನೋಡಿದರೆ ಮಾತ್ರ ಭೂಮಿ ಸುತ್ತುವದೇನು ? ತಿಳಿದವರು ಹೇಳಿದರೆ ಗೊತ್ತಾಗುವದಿಲ್ಲವೇನೊ !

ಮುರಳಿ:– ನಾನೂ ಅದನ್ನೇ ನಿನ್ನನ್ನು ಕೇಳಬೇಕೆಂದಿದ್ದು.

ರಮೆ:– ಏನನ್ನು ?

ಮುರಳಿ:– ಸೂರ್ಯನಿಂದ ಯುಧಿಷ್ಠಿರನಿಗೆ ಅಕ್ಷಯ ಪಾತ್ರೆ ಸಿಕ್ಕಿತು ಎಂದು ತಿಳಿದವರು ಹೇಳಿದರೆ ನೀನು ಕೇಳಬಾರದೋ ಏನೋ, ಏಕೆ, ಎಂದು.

ರಮೆ:– ಇದು ಒರಟು ವಾದ. ಬುದ್ಧಿವಂತಿಕೆಯ ದುರುಪಯೋಗ.

ಮುರಳಿ:– ಏಕೆ ?

ರಮೆ:– ವೈಜ್ಞಾನಿಕ ಸತ್ಯವನ್ನು ಒಪ್ಪುವದಾದರೆ ಪುರಾಣದ ಅಜ್ಜಿಕತೆಗಳನ್ನೂ ಒಪ್ಪಲೇಬೇಕೆಂಬದು ಒಂದು ಸಾಧುವಾದ ತರ್ಕವೇ ? ನೀವೇ ಹೇಳಿ.

ಮುರಳಿ:– ವೈಜ್ಞಾನಿಕ ಸತ್ಯವನ್ನು ನೀನು ಏಕೆ ಒಪ್ಪಿದ್ದೀ ?

ರಮೆ:– ಅದು ಸತ್ಯವಾದುದರಿಂದ.

ಮುರಳಿ:– ಅದು ಸತ್ಯ ಎಂದು ಹೇಗೆ ಒಪ್ಪಿದ್ದೀ?

ರಮೆ:– ಒಳ್ಳೆ ತಮಾಷೆ ! ಲೋಕವೆಲ್ಲ ಒಪ್ಪಿರುವಾಗ ನಾನು ಯಾವ ಆಧಾರದಿಂದ ಒಪ್ಪದಿರಬೇಕು ?

ಮುರಳಿ:– ಅಕ್ಷಯಪಾತ್ರೆ ದೊರಕಿದುದನ್ನೂ ಅಂದಿನ ಲೋಕ ಒಪ್ಪಿದ್ದಾಗ ನಾನು ಯಾವ ಆಧಾರದಿಂದ ಅದನ್ನು ಒಪ್ಪದಿರಬೇಕು ?

ರಮೆ:– ಸೂರ್ಯಬಿಂಬ ಯುಧಿಷ್ಠಿರನ ಮುಂದೆ ನಿಂತು ಅಕ್ಷಯ ಪಾತ್ರೆ ನೀಡಿದುದನ್ನು ನಿಮ್ಮ ಅಂದಿನ ಲೋಕ ಒಪ್ಪಿಬಿಟ್ಟಿತ್ತು ?

ಮುರಳಿ:– ಸೂರ್ಯಬಿಂಬ ಏಕೆ ಬರುತ್ತದೆ ! ಇರಲಿ. ನೀನು ಕಳೆದ ವರ್ಷ ನಿಮ್ಮ ಅಮ್ಮನಿಗೆ ಸೌಖ್ಯವಿಲ್ಲವೆಂದು ತವರಿಗೆ ಹೋಗಿ ಮೂರು ತಿಂಗಳಿದ್ದೆಯಲ್ಲಾ. ಆಗ ನನ್ನನ್ನು ಅಷ್ಟು ದಿನವೂ ನೋಡದೆ ಕೊರಗಿ ಕೃಶಳಾಗಲಿಲ್ಲ ಏಕೆ ?

ರಮೆ:– ಅಂತಹ ಕೊರಗೇನು ? ಬರೆಯುತ್ತಿದ್ದಿರಲ್ಲಾ, ಮೂರು ದಿನಕ್ಕೊಂದು ಕಾಗದ !

ಮುರಳಿ:– ಕಾಗದ ಬಂದರೆ ?

ರಮೆ:– ಕಾಗದ ಬಂದರೆ ಎಂದರೆ ?. ನಿಮ್ಮ ಯೋಗಕ್ಷೇಮ ಗೊತ್ತಾಗುತ್ತಿತ್ತು, ಹಾಗಾಗಿ ಯೋಚನೆ ಆಗಲಿಲ್ಲ.

ಮುರಳಿ:– ಆದರೂ ಮೂರು ತಿಂಗಳು ನನ್ನನ್ನು ನೀನು ನೋಡಲೇ ಇಲ್ಲವಲ್ಲಾ !

ರಮೆ:– ಕಾಗದ ಬರುತ್ತಿತ್ತು ಎಂದರೆ ನಿಮಗೆ ಅರ್ಥವಾಗುವದಿಲ್ಲವೇನು ?

ಮುರಳಿ:– ಅಂದರೆ, ನನ್ನಿಂದ ಬಂದ ಒಂದು ಕಾಗದದ ಚೂರನ್ನು ಕಂಡು ನಾನು ಬಂದಷ್ಟೇ ಸಂತೋಷಪಡುತ್ತಿದ್ದೆ. ಅಲ್ಲವೆ ?

ರಮೆ:– ಒಳ್ಳೇ ತಮಾಷೆ ! ನನಗೇ ಏನು ? ಎಲ್ಲರಿಗೂ ಹಾಗೇ ತಾನೆ ?

ಮುರಳಿ:– ಎಲ್ಲರಿಗೂ ಹಾಗೇ, ನಿಜ. ಅದೇ ರೀತಿ ಸೂರ್ಯ ಅನುಗ್ರಹಿಸಿದನೆಂದರೆ ಸೂರ್ಯಬಿಂಬವೇ ಯುಧಿಷ್ಠಿರನ ಮೇಲೆ ದಡಾರನೆ ಉರುಳಿತು ಎಂದರ್ಥವಲ್ಲ. ಇಂದಿನ ಅಂಚೆ ವ್ಯವಸ್ಥೆ ಭೂಮಂಡಲವನ್ನು ಆವರಿಸಿದ್ದರೆ ಅಂದಿನ ಮಂತ್ರಶಕ್ತಿ ಸೂರ್ಯ ಮಂಡಲವನ್ನೇ ಆವರಿಸಿತ್ತು ಎಂದು ನಂಬಿಕೊಂಡರೆ ಈ ವಿಚಾರಗಳು ಅರ್ಥವಾಗುತ್ತವಷ್ಟೆ.

ರಮೆ:– ಅರ್ಥವೋ, ಅನರ್ಥವೋ, ಮುಂದಕ್ಕೆ ಹೇಳಿ.

ಮುರಳಿ:– ಅದು ನಿಜ. ಸಾಮಾನ್ಯವಾದ ಬೆಳಕಿನ ಕಿರಣಗಳಲ್ಲಿ ನೋಡುವವನಿಗೆ ಅರ್ಥವಾಗುವದು ಹೊಟ್ಟೆ ಎಂದು ಅವನು ಕರೆಯುವ ಭಾಗದ ಚರ್ಮ ಮಾತ್ರ. ಅದರೊಳಗಿರುವ ಹುಣ್ಣು ಅವನಿಗೆ ಅನರ್ಥವೇ. ಕ್ಷ ಕಿರಣ ಹರಿಸಿ ನೋಡುವವನಿಗೆ ಹುಣ್ಣು ಅರ್ಥವಾಗುತ್ತದೆ. ಕ್ಷ ಕಿರಣದ ಪರಿಚಯವಿಲ್ಲದವನಿಗೆ ಹುಣ್ಣನ್ನು ಹೇಗೆ ತೋರಿಸುವದು ಹೇಳು !

ರವೆ:– ಒಪ್ಪಿಕೊಂಡೆನಲ್ಲಾ ! ಕ್ಷ ಕಿರಣದಲ್ಲಿ ನೋಡಿ ನಿಮಗೆ ಕಂಡುದನ್ನೆಲ್ಲ ಹೇಳಿ. ಒಪ್ಪಿಕೊಂಡೆನಲ್ಲಾ !

ಮುರಳಿ:–ಹುಚ್ಚಿ. ಕೇಳು. ಈ ಕಡೆ ಮೈತ್ರೇಯ ಎಂಬ ಒಬ್ಬ ತಪಸ್ವಿ ದುರ್ಯೋಧನನಲ್ಲಿಗೆ ಬಂದು ಅವನು ಪಾಂಡವರ ವಿಷಯದಲ್ಲಿ ವರ್ತಿಸಿದುದು ತಪ್ಪೆಂದು ತಿಳಿಯಹೇಳಲು ಅಹಂಕಾರದಲ್ಲಿ ಬೀಗಿದ್ದ ದುರ್ಯೋಧನ ತನ್ನ ತೊಡೆ ತಟ್ಟುತ್ತಾ ಆತನನ್ನು ಅಪಹಾಸ್ಯ ಮಾಡಿದನು. ಇದರಿಂದ ಸಿಟ್ಟುಗೊಂಡ ಆ ತಪಸ್ವಿಯು ದುರ್ಯೋಧನನ ತೊಡೆಯನ್ನು ಭೀಮನು ಮುರಿದು ಅವನನ್ನು ಕೊಲ್ಲುವದು ನಿಶ್ಚಯವೆಂದು ಶಪಿಸಿ ಹೊರಟುಹೋದನು. ಹೀಗೆಯೇ ದುರ್ಯೋಧನನಿಗೆ ನೀತಿಯನ್ನು ಹೇಳಿದ ವಿದುರನೂ ಅವನಿಂದ ತಿರಸ್ಕರಿಸಲ್ಪಟ್ಟುದರಿಂದ ಅವನು ಜಿಗುಪ್ಸೆಗೊಂಡು ಪಾಂಡವರಲ್ಲಿಗೆ ಹೋದನು. ಧೃತರಾಷ್ಟ್ರನ ಇಚ್ಛೆಯಂತೆ ಹಿಂತಿರುಗಿ ಬಂದ ಅವನು ಅರಣ್ಯದಲ್ಲಿ ಭೀಮನ ಒಂದು ಸಾಹಸದ ಕುರಿತು ಹೀಗೆಂದು ವಿವರಿಸಿದನು. "ಪಾಂಡವರು ಗಂಗೆಯನ್ನು ದಾಟಿ ಕಾಮ್ಯಕ ವನದಲ್ಲಿ ಹೋಗುತ್ತಿದ್ದಾಗ ಬಕಾಸುರನ ಅಣ್ಣನೂ ಹಿಡಿಂಬನ ನೆಂಟನೂ ಆದ ಕಿಮ್ಮೀರನೆಂಬ ಘೋರ ರಾಕ್ಷಸನು ಅವರನ್ನು ಎದುರಿಸಿದನು. ಮಹಾ ಬಲಾಢ್ಯನೂ, ಮಾಯಾವಿಯೂ, ವಿಕೃತಾಕಾರನೂ ಆದ ಅವನನ್ನು ಕಂಡು ಬ್ರಾಹ್ಮಣರು ಭಯದಿಂದ ತತ್ತರಿಸಿಹೋದರು. ಎದುರಿನಲ್ಲಿ ಬರುತ್ತಿರುವವರು ತನ್ನ ವೈರಿಗಳೇ ಆದ ಪಾಂಡವರೆಂಬದನ್ನು ವಿಚಾರಿಸಿ ತಿಳಿದುಕೊಂಡು ಮೇಲೇರಿ ಬರುತ್ತಿದ್ದ ಆ ರಾಕ್ಷಸನನ್ನು ನೋಡಿ ಅರ್ಜುನನು ತನ್ನ ಧನುಸ್ಸನ್ನು ಸರಿಪಡಿಸಿಕೊಳ್ಳುತ್ತಿದ್ದನು. ಅವನನ್ನು ಹಿಂದಿರಿಸಿ, ಕಿಮ್ಮೀರನು ತನ್ನ ಬೇಟೆಯ ಮೃಗವೆಂದು ಹೇಳುತ್ತಾ ಭೀಮನು ಮುಂದುವರಿದನು. ಅನೇಕ ದಿನಗಳಿಂದ ತಾನು ಕಾಯುತ್ತಿದ್ದ ತನ್ನ ವೈರಿಯು ತನ್ನೆದುರಿನಲ್ಲೇ ಬರುತ್ತಿರುವದನ್ನು ಕಂಡ ಕಿಮ್ಮೀರನು ಮೇರೆದಪ್ಪಿದ ಕೋಪಾಟೋಪಗಳನ್ನು ತೋರಿಸುತ್ತಾ, ಬರಸಿಡಿಲಿನಂತೆ ಗರ್ಜಿಸುತ್ತಾ ಹೆಮ್ಮರಗಳನ್ನು ಕಿತ್ತುತಂದು ಭೀಮನನ್ನು ಕುರಿತು "ಬಕ, ಹಿಡಿಂಬರನ್ನು ಕೊಂದ ನೀನು, ನಾನು ನಂಬಿದ ದೈವದ ಅನುಗ್ರಹದಿಂದ ನನಗೆ ಕಾಣಲು ಸಿಕ್ಕಿದ್ದೀಯೆ" ಎಂದೆನ್ನುತ್ತಾ

ಅವನ ಮೇಲೆ ಎರಗಿದನು. ಭೀಮನು ಒಮ್ಮೆ ಗಹಗಹಿಸಿ ನಕ್ಕು ತನ್ನ ಎರಡೂ ಮುಷ್ಟಿಗಳನ್ನು ಬಿಗಿದು ಕಿರ್ಮ್ಮೀರನ ನೆತ್ತಿ ಬಾಯಿ ಬಿಡುವಂತೆ ಹೊಡೆಯಲು, ಅಂಗಾಂಗಗಳೆಲ್ಲ ಕದಲಿ ಹೋದಂತಾಗಿ ರಾಕ್ಷಸನು ಭೂಮಿಗೆ ಬಿದ್ದನು.

ರಮೆ:– ಪಾಪ, ಎಲ್ಲೋ ಬಡಪಾಯಿರಾಕ್ಷಸನಾಗಿರಬೇಕು, ಒಂದೇ ಪೆಟ್ಟಿಗೆ ಸಾಯಲು !

ಮುರಳಿ:– ಅನುಕ್ರಮವಾಗಿ ಸಹದೇವ, ನಕುಲ, ಅರ್ಜುನರನ್ನು ತೀರಿಸಿ ಭೀಮನ ಕೈಯಿಂದ ಸತ್ತಿದ್ದರೆ ಈ ಬಡಪಾಯಿಯೇ ಮಹಾಭಾರತದ ಒಬ್ಬ ಪ್ರಖ್ಯಾತ ವೀರನಾಗಿ ಕಾಣಿಸಿಕೊಳ್ಳುತ್ತಿದ್ದ. ಆದರೆ ಒಮ್ಮೆಗೇ ಭೀಮನನ್ನೆದುರಿಸಿ ಬಿಟ್ಟು ಬಡಪಾಯಿಯಲ್ಲದಿದ್ದರೂ ಮೂರ್ಖನಾದ.

ವಿದುರನ ಈ ವಿವರಣೆಗಳನ್ನೆಲ್ಲ ಕೇಳಿ ಧೃತರಾಷ್ಟ್ರನಿಗೆ ಹೇಗಾಗಿರಬಹುದು, ಯೋಚಿಸು !

ಪಾಂಡವರು ವನವಾಸಕ್ಕೆ ಹೋದರೆಂಬ ವಾರ್ತೆಯನ್ನು ಕೇಳಿ ಕೃಷ್ಣನೂ ತನ್ನ ಪರಿವಾರದೊಡನೆ ಬಂದು ಅವರನ್ನು ಸಂತೈಸಿ ಹೊರಟುಹೋದನು.

ಹೀಗೆಯೇ ಇರಲು ಒಂದು ದಿನ ಭೀಮನು ಎಂದಿನಂತೆ ಬೇಟೆಗೆ ಹೊರಟು ಕಾಡಿನ ಕ್ರೂರ ಮೃಗಗಳನ್ನು ಆಟದ ಗೊಂಬೆಗಳಂತೆ ಆಡಿಸುತ್ತಾ ಹೋಗುತ್ತಿರಲು ಮುಂದುಗಡೆ ಒಂದು ಗಗನ ಚುಂಬಿತವಾದ ದೊಡ್ಡನೇರಳೆಯ ಮರವನ್ನೂ ಅದರಲ್ಲಿ ಒಂದೇ ಒಂದು ಆನೆಯ ಗಾತ್ರದ ನೇರಳೆ ಹಣ್ಣನ್ನೂ ಕಂಡನು.

ರಮೆ:– ದೊಡ್ಡ ನೇರಳೆ ಹಣ್ಣು ಅನ್ನಿ. ಆನೆಗಾತ್ರ ಅಂತ ಎಲ್ಲ ಏಕೆ ಸೇರಿಸುತ್ತೀರಿ ?

ಮುರಳಿ:– ಮರದ ಗಾತ್ರಕ್ಕೆ, ತಪಃಫಲಕ್ಕೆ ತಕ್ಕುದಾಗಿ ಹಣ್ಣು ಆನೆಯ ಗಾತ್ರವಿದ್ದರೆ ಆನೆಯ ಗಾತ್ರ ಎಂದು ಹೇಳುವದೇ ಸರಿಯಾದ ವಿವರಣೆಯಾಗುತ್ತದೆ ಹೊರತು ದೊಡ್ಡದು ಎಂದರೆ ಸರಿಯಾಗುತ್ತದೆಯೆ ? ಐದಡಿ ಭೀಮಕಾಯರುಗಳಾದ ನಮ್ಮ ಕಾಲದಲ್ಲೇ ಚಿಕ್ಕ ಗುಡಾಣ ಗಾತ್ರದ ಸೋರೆಕಾಯಿ ಬೆಳೆಯುವದು ನಿಜವಾದರೆ ಆಗಲೇ ಅಪೂರ್ವವೆನಿಸಿದ್ದ ಒಂದು ನೇರಳೆ ಹಣ್ಣು ಆನೆಯಗಾತ್ರ ವಿದ್ದುದು ಸುಳ್ಳೆಂದು ನಿನಗೇಕೆ ಅನಿಸಬೇಕು ? ಉದ್ದೇಶಪೂರ್ವಕವಾಗಿ ಸುಳ್ಳನ್ನು ಬರೆಯಬೇಕೆಂದಿದ್ದರೆ ವ್ಯಾಸರು ಎತ್ತಿನ ಗಾತ್ರದ ಹಲಸಿನ ಕಾಯಿ ಎಂದಾದರೂ ಬರೆಯಬಹುದಿತ್ತಲ್ಲ ! ಹರಟೆ ಬಿಟ್ಟು ಕೇಳು. ಈ ಅಪೂರ್ವ ಫಲವನ್ನು ಅಣ್ಣನಿಗೆ ಒಪ್ಪಿಸಬೇಕೆಂಬ ಆಸೆಯಿಂದ ಭೀಮನು ಗದೆಯನ್ನು ಕಂಕುಳಲ್ಲಿರಿಸಿ ಮರವನ್ನು ಹತ್ತಿ ಅದನ್ನು ಕೊಯ್ದು ತಂದು ಅಣ್ಣನ ಮುಂದಿಟ್ಟನು. ದಿವ್ಯ ಜ್ಞಾನಿಯಾದ ಸಹದೇವನು ಆ ಫಲವು ಕಣ್ವ ಋಷಿಗೆ ಸೇರಬೇಕಾದುದೆಂದೂ ವರುಷ

ಕ್ಕೊಂದರಂತೆ ಮಾತ್ರ ಆ ಫಲವುಂಟಾಗುವದೆಂದೂ, ಅದನ್ನು ತಂದುದರಿಂದ ತಮಗೆ ಶಾಪಭಯವಿರುವದೆಂದೂ ತಿಳಿಸಿದನು.

ರಮೆ:– ಅದೇನು ಅವನಿಗೆ ದಿವ್ಯಜ್ಞಾನ ?

ಮುರಳಿ:– ಅದೊಂದು ಅವನ ಹೆಚ್ಚುಗಾರಿಕೆ. ಯಾವದೋ ಒಂದು ಸಾಧನೆಯ ಫಲವಾಗಿ ಅವನಿಗೆ ಭವಿಷ್ಯತ್ತಿನ ಕೆಲವು ವಿವರಗಳನ್ನು ತಿಳಿಯಲು ಸಾಧ್ಯವಿತ್ತು. ಕೇಳು. ಪಾಂಡವರಿಗೆ ಕಳವಳವಾಯಿತು. ಅವರ ಕಳವಳದ ಪ್ರಾರ್ಥನೆಯನ್ನು ಮನ್ನಿಸಿ ಅಲ್ಲಿಗೆ ಬಂದ ಕೃಷ್ಣನು........

ರಮೆ:– ಪ್ರಾರ್ಥನೆಗೇ ಬಂದುಬಿಟ್ಟನು ಎಂದರೇನು ?

ಮುರಳಿ:– ಪ್ರಾರ್ಥನೆಗೇ ಬಂದಿರಲೂ ಸಾಧ್ಯ, ಅಥವಾ ಪಾಂಡವರು ಯಾರನ್ನಾದರೂ ತ್ವರೆಯಿಂದ ಕಳುಹಿಸಿ ಕರೆಸಿರಲೂ ಸಾಕು. ಇವೆಲ್ಲ ವಿವರಗಳು ಅನಗತ್ಯ. ಸುಮ್ಮನೆ ಕೇಳು. ಪಾಂಡವರು ಮತ್ತು ದ್ರೌಪದಿ ಈ ಆರು ಮಂದಿಯೂ ತಮ್ಮ ಮನೋನಿಶ್ಚಯಗಳನ್ನು ಮುಚ್ಚುಮರೆಯಿಲ್ಲದೆ ತಿಳಿಸಿದರೆ ಆ ಫಲವು ತಾನಾಗಿ ಮೇಲೇರಿ ಮರದಲ್ಲಿ ಸೇರಿಕೊಳ್ಳುವದೆಂದು ಕೃಷ್ಣನು ತಿಳಿಸಿದನು. ಯುಧಿಷ್ಠಿರನು ಧರ್ಮದ ಸ್ವರೂಪವನ್ನೂ, ಭೀಮನು ಪ್ರಾಣಕ್ಕಿಂತಲೂ ಸ್ವಾಭಿಮಾನವೇ ಮೇಲೆಂಬದನ್ನೂ, ಅರ್ಜುನನು ಯುದ್ಧೋತ್ಸಾಹವನ್ನೂ, ಹೀಗೆಯೇ ಉಳಿದವರೂ ಬೇರೆ ಬೇರೆಯಾಗಿ ತಮ್ಮ ಮನೋನಿಶ್ಚಯಗಳನ್ನು ತಿಳಿಸಿದಂತೆಲ್ಲ ಆ ಹಣ್ಣು ಮೇಲೆ ಮೇಲೇರಿ ಕೊನೆಗೆ ತನ್ನ ಸ್ಥಾನದಲ್ಲಿಯೇ ಸೇರಿಕೊಂಡಿತು.

ರಮೆ:– ಯಾಕೋ, ಏನೋ. ನೀವು ಆಗಾಗ ಅದೆಷ್ಟೇ ಹೇಳಿದರೂ ನನಗೆ ಈ ಅತಿಪ್ರಕೃತಿ ಘಟನೆಗಳನ್ನು ಹೊಸತಾಗಿ ಕೇಳುವಾಗ ಅದೆಲ್ಲ ಬರೀ ಸುಳ್ಳು ಎಂದೇ ಎನಿಸುತ್ತದಪ್ಪ. ಏನು ಮಾಡುವದು ?

ಮುರಳಿ:– ಪ್ರಾರಬ್ಧವನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ.

ರಮೆ:– ಆ ಮಾತು ನಿಮಗೂ ಅನ್ವಯಿಸಬಹುದಷ್ಟೆ ?

ಮುರಳಿ:– ಖಂಡಿತ.

ರಮೆ:– ವೈಜ್ಞಾನಿಕ ದೃಷ್ಟಿ ಇಲ್ಲದಿರುವದು ನಿಮ್ಮ ಪ್ರಾರಬ್ಧ ಅಂತಲೊ ?

ಮುರಳಿ:– ನಿನ್ನ ಕಣ್ಣಿಗೆ ಕಾಣಿಸದಿರುವ ಯಾವದೂ ಇಲ್ಲವೇ ಇಲ್ಲ ಎಂದು ನೀನು ವಾದಿಸುವದು ನಿನ್ನ ಪ್ರಾರಬ್ಧವಾದಂತೆಯೇ.

ರಮೆ:– ಚರ್ಚೆ ಇರಲಿ. ಅಷ್ಟು ದೊಡ್ಡ ಮೇಧಾವಿಯಾದ ವೇದವ್ಯಾಸರು ಇಂತಹ ಈ ವಿಚಿತ್ರ ಕತೆಗಳನ್ನೆಲ್ಲ ಹೇಗೆ ಸೇರಿಸಿದರು ಅಂತ ?

ಮುರಳಿ:– ಹೀಗೆಂದು ನಾವು ಶಂಕಿಸುತ್ತೇವೆಂಬದನ್ನು ತನ್ನ ಮೇಧಾಶಕ್ತಿ

ಯಿಂದ ಸುಲಭವಾಗಿ ಊಹಿಸಬಲ್ಲವರಾಗಿದ್ದ ವ್ಯಾಸರು ನಮ್ಮಗಳ ಈ ಶಂಕೆ ಯಿಂದಾಗಿ ಒಂದು ಮಹದ್ಗ್ರಂಥವೇ ನಮ್ಮಿಂದ ತಿರಸ್ಕೃತವಾಗಬಹುದೆಂಬುದನ್ನು ಸುಲಭವಾಗಿ ಊಹಿಸಲು ಸಮರ್ಥರಾಗಿದ್ದು ಹಾಗಾಗುವದನ್ನು ತಪ್ಪಿಸುವ ಸದಿಚ್ಛೆಯನ್ನು ವ್ಯಕ್ತಪಡಿಸುವಷ್ಟು ಬುದ್ಧಿವಂತರಾಗಿರಲಿಲ್ಲ ಎಂದು ನೀನು ವಾದಿಸ ಲಾರೆ. ಹಾಗಿರುವಾಗ ಈ ಘಟನೆಗಳೆಲ್ಲ ಕಲ್ಪಿತವಾದವುಗಳಾಗಿದ್ದಿದ್ದರೆ ಒಂದೋ ಅವುಗಳನ್ನು ಅವರು ಸೇರಿಸುತ್ತಲೇ ಇರಲಿಲ್ಲ, ಇಲ್ಲವೇ ಅವುಗಳ ಅತಿಪ್ರಕೃತಿ ಲಕ್ಷಣಗಳನ್ನಾದರೂ ತೆಗೆದುಹಾಕಿ ನಮ್ಮ ವಿಶ್ವಾಸಕ್ಕೆ ಅರ್ಹವಾಗುವ ರೀತಿ ಯಲ್ಲಿಯೇ ಕತೆಯನ್ನು ಹೆಣೆದು ಆ ಕತೆಯ ಮೂಲಕ ತಾನು ಏನು ಹೇಳ ಬೇಕೆಂದು ಬಯಸಿದ್ದರೋ ಅದನ್ನು ಅಷ್ಟೇ ಪ್ರಭಾವಯುತವಾಗಿ ಹೇಳಲು ಸಾಧ್ಯ ವಿತ್ತು. ಹಾಗಿಲ್ಲದೆ, ಅರ್ಥಾತ್, ಇವೆಲ್ಲ ಕಾಲ್ಪನಿಕ ವಿಷಯುಗಳಾಗಿದ್ದರೆ, ಇಂತಹ ಅತಿಪ್ರಕೃತಿಯ ನಿರೂಪಣೆಗಳನ್ನು ಕೈ ಬಿಡುವದರಿಂದಲೇ ಅವರ ಗ್ರಂಥರಚನೆಯ ಗುರಿಯು ಹೆಚ್ಚು ಯಶಸ್ವಿಯಾಗುತ್ತಿತ್ತು ಎಂಬದನ್ನು ಅವರು ಸುಲಭವಾಗಿ ತಿಳಿಯುವಷ್ಟು ಬುದ್ಧಿವಂತರಾಗಿದ್ದರೆನ್ನುವಾಗ, ತಮ್ಮ ಗ್ರಂಥ ರಚನೆಯ ಉದ್ದೇಶಕ್ಕೆ ಕೆಡುಕಾಗುವಂತಹ ಈ ವಿಚಿತ್ರ ವಿಷಯುಗಳನ್ನು ಅವರು ಸೇರಿಸುವಲ್ಲಿ ಅವರ ಉದ್ದೇಶ ಬೇರೇನಿದ್ದಿರಲು ಸಾಧ್ಯ ? ಸತ್ಯ ನಿರೂಪಣೆ ಒಂದಲ್ಲದೆ ಬೇರೇನಿದ್ದಿರಲು ಸಾಧ್ಯ ಹೇಳು ?

ರಮೆ:– ಆದರೆ ಒಂದು ವಿಷಯ. ನೀವು ಹಿಂದೆ ಒಮ್ಮೆ ಹೇಳಿದ್ದಿರಲ್ಲ ? ಮಹಾಭಾರತದ ಮೂಲ ಕತೆಗೆ ಸಂಬಂಧಿಸಿದ ಕೆಲವು ಉಪಾಖ್ಯಾನಗಳು ಬೇಕಿ ದ್ದರೆ ಪ್ರಕ್ಷಿಪ್ತ ಎನ್ನಬಹುದು ಎಂದು ಈ ನೇರಳೆ ಹಣ್ಣಿನ ಕತೆ ಅಂತಹುದೇ ಒಂದು ಪ್ರಕ್ಷಿಪ್ತ ಭಾಗವೆಂದೂ, ಇದನ್ನು ಬೇರೆ ಯಾರೋ ಬರೆದು ಅನಂತರ ಸೇರಿಸಿರ ಬೇಕೆಂದೂ ಏಕೆ ಹೇಳಬಾರದು ?

ಮುರಳಿ:– ವೇದವ್ಯಾಸರ ಕುರಿತಾಗಿ ನಾವು ಈಗ ಏನನ್ನು ಚರ್ಚಿಸಿದೆವೋ ಅದೇ ವಾದವು ಈ ಪ್ರಕ್ಷಿಪ್ತ ಭಾಗವನ್ನು ಸೇರಿಸಿದ್ದಾರೆಂದು ನೀನು ಶಂಕಿಸುವ ಲೇಖಕರಿಗೂ ಅನ್ವಯಿಸುತ್ತದೆ. ಅವರು ಹಾಗೆ ಸೇರಿಸಿದ್ದಾರೆಂದು ಭಾವಿಸಿದರೂ ಹಾಗೆ ಸೇರಿಸುವದರ ಮೂಲಕ ಮೂಲ ಮಹಾಭಾರತ ಗ್ರಂಥದ ತೂಕ ಕಡಿಮೆ ಯಾಗಬೇಕೆಂದು ಅವರು ಎಂದಿಗೂ ಬಯಸಿರಲಿಕ್ಕಿಲ್ಲ. ಅಥವಾ ತಮ್ಮ ಈ ಜೋಡಣೆಯಿಂದಾಗಿ ತಾವು ವೇದವ್ಯಾಸರಿಗೆ ಅಪಚಾರ ಮಾಡುತ್ತಿದ್ದೇವೆಂದು ಅವರಿಗೆ ಅನಿಸಿದ್ದರೂ ಅವರು ಹಾಗೆ ಖಂಡಿತ ಮಾಡುತ್ತಿರಲಿಲ್ಲ. ತಮ್ಮ ಜೋಡ ಣೆಯು ಮೂಲಗ್ರಂಥದ ಶೋಭೆಯನ್ನು ಇನ್ನೂ ಹೆಚ್ಚಿಸುತ್ತದೆಂದೇ ಬಗೆದು ಅವರು ಹಾಗೆ ಮಾಡಿದುದು. ಅಂದರೆ ಅವರ ಜೋಡಣೆಯ ಕಾಲದಲ್ಲಾದರೂ ಈ ಅತಿ ಪ್ರಕೃತಿ ಘಟನೆಗಳು ಸಾಧ್ಯ ಮತ್ತು ಸಹಜ ಎಂದು ಓದುಗರು, ಶ್ರೋತೃಗಳು

ಪರಿಗಣಿಸುವ ಸಾಧ್ಯತೆ ಇದ್ದಿರಲೇಬೇಕು. ನಮ್ಮ ಈ ಕಾಲದಂತೆಯೇ ಈ ಪ್ರಕ್ಷಿಪ್ತ ಭಾಗಗಳ ಜೋಡಣೆಯ ಕಾಲದಲ್ಲಿಯೂ ಈ ಅತಿಪ್ರಕೃತಿ ವಿಚಾರಗಳನ್ನು ಹುಚ್ಚು ಕಲ್ಪನೆಗಳೆಂದು ಭಾವಿಸುವ ಪರಿಸ್ಥಿತಿ ಇದ್ದಿದ್ದರೆ, ತಮ್ಮ ಜೋಡಣೆಯಿಂದಾಗಿ ತಾವು ವೇದವ್ಯಾಸರ ಮೇಲೆ ಈ ಹುಚ್ಚು ಕಲ್ಪನೆಗೆ ಕಾರಣರಾದ ಆಪಾದನೆ ಯನ್ನು ಹೊರಿಸುತ್ತಿದ್ದೇವೆಂದು ಭಾವಿಸದಿರುವಷ್ಟು ಈ ಜೋಡಣೆಕಾರರು ಮೂರ್ಖರಾಗಿದ್ದರು ಎಂಬದನ್ನು ನೀನೂ ಒಪ್ಪಲಾರೆ. ಹೀಗೆ, ಈ ಅತಿಪ್ರಕೃತಿ ಘಟನೆಗಳು ಅಸಹಜ, ಕೃತಕ, ಕಾಲ್ಪನಿಕ ಎಂಬ ಶಂಕೆ ಇರಬೇಕಾದ ಪರಿಸ್ಥಿತಿ ಹಿಂದೆ ಇರಲಿಲ್ಲವೆಂದಾದರೆ ಅದನ್ನು ವ್ಯಾಸರು ಬರೆದಿರಲಿಕ್ಕಿಲ್ಲ, ಬೇರೆ ಯಾರೋ ಬರೆದಿರಬೇಕು ಎಂಬ ನಿನ್ನ ಸಂಶಯದ ಮೂಲ ಕಾರಣವೇ ಮಾಯವಾಗಿ ಬಿಡುತ್ತದೆ. ಆದುದರಿಂದಲೇ ನಾನು ಮೇಲಿಂದಮೇಲೆ ಹೇಳುತ್ತಿರುವದು – ಒಪ್ಪುವ ಮನಸ್ಸಿದ್ದರೆ ಇಂದು ಸಾಕಷ್ಟು ಅಧಿಕೃತವಾಗಿ ನಮಗೆ ದೊರಕಿರುವ ಮಹಾಭಾರತವನ್ನು ಪೂರ್ತಿಯಾಗಿ ವ್ಯಾಸಕೃತ ಮತ್ತು ಅದು ಒಬ್ಬ ನಿಷ್ಪಕ್ಷಪಾತೀ ಚರಿತ್ರಕಾರ ರಚಿಸಿದ ಶುದ್ಧ ಚರಿತ್ರೆ ಎಂದು ಒಪ್ಪಬೇಕು. ಇಲ್ಲವೇ ಅದಷ್ಟೂ ಕೇವಲ ಒಂದು ಕಾದಂಬರಿ ಎಂದು ಪರಿಗಣಿಸ ಬೇಕು–ಎಂದು. ಮಹಾಭಾರತದಂತಹ ನಮ್ಮ ಹಿಂದಿನ ಗ್ರಂಥಗಳನ್ನು ವಿಮರ್ಶೆ ಮಾಡಿದ್ದೇನೆನ್ನುವ ಈಗಿನ ಸಾಮಾನ್ಯ ಪ್ರತಿಯೊಬ್ಬ ವಿದ್ವಾಂಸನೂ ಈ ಎಲ್ಲ ಗ್ರಂಥಗಳಿಗೆ, ಸುಲಭವಾಗಿ ಅಳಿಸಲಾಗದ ದ್ರೋಹ ಮಾಡಿದ್ದಾನೆ. ಯಾವ ಯಾವ ಕಥಾಭಾಗಗಳನ್ನು ತಾನು ಒಪ್ಪುತ್ತಾನೋ ಅಷ್ಟು ಮಾತ್ರ ಚಾರಿತ್ರಿಕ ಅಂಶಗಳೆಂದೂ, ಯಾವದನ್ನು ತಾನು ಒಪ್ಪಲಾರನೋ, ಯಾವದನ್ನು ತನ್ನ ವಿದ್ವತ್ತಿನ ಪ್ರಮಾಣದಿಂದ ಅಳೆದು ಸ್ಥಿರೀಕರಿಸಲಾರನೋ ಅಂಥವೆಲ್ಲ ಕಟ್ಟುಕತೆ ಗಳೆಂದೋ, ಯಾವನೋ ಋಷಿ, ತನ್ನ ಮನೋರಂಜನೆಗಾಗಿ ರಚಿಸಿದ ಕಾವ್ಯದ ಸಾಲುಗಳೆಂದೋ ತಿರಸ್ಕರಿಸಿ ತನ್ನ ಬುದ್ಧಿ ಮತ್ತು ಹೃದಯದ ಕೊಂಕಿನ ಹೊಲೆ ಯಿಂದ, ಅವನಿಗಿಂತ ಎಷ್ಟೋ ಪಾವನತರರಾದ ಈ ಗ್ರಂಥಕರ್ತರ ಚಾರಿತ್ರ್ಯವನ್ನೂ ಅಪವಿತ್ರಗೊಳಿಸುವ ಪಾಪಕಾರ್ಯ ಮಾಡಿದ್ದಾನೆ. ನಮ್ಮ ಹಿಂದಿನ ಇಂತಹ ಗ್ರಂಥಗಳು ವಿದ್ವತ್ತನ್ನಾಶ್ರಯಿಸಿ ನಡೆಯಿಸುವ ಸರ್ಕಸ್ಸಿಗಾಗಿ ರಚಿತವಾದವುಗಳಲ್ಲ ಎಂಬದನ್ನು ನಾವು ತಿಳಿದುಕೊಳ್ಳಬೇಕು. ಈ ಗ್ರಂಥಗಳ ಮೇಲೆ ವಿದ್ವಾಂಸರು ಗಳು ಮಾಡಲಿಕ್ಕಿರುವ ಕೆಲಸ ಏನೂ ಇಲ್ಲ. ಅವರು ಬಲಾತ್ಕಾರವಾಗಿ ಏನಾದರೂ ಮಾಡಲು ಹೊರಟರೆ ತಮ್ಮ ವಿದ್ವತ್ತಿನ ಕೊರತೆಯಿಂದಾಗಿ ಅದನ್ನು ಅಪವಿತ್ರ ಗೊಳಿಸುವದಷ್ಟೇ ಅವರಿಂದ ಸಾಧ್ಯ. ಈ ವಿದ್ವಾಂಸರೆನಿಸಿಕೊಂಡವರ ವಿವಿಧ ವಾದಗಳಲ್ಲಿ ಒಂದೊಂದನ್ನೂ ಬೇರೆ ಬೇರೆಯಾಗಿ ಉದಾಹರಣೆ ತೆಗೆದುಕೊಂಡು ಚರ್ಚಿಸಿದರೆ ನಿನಗೆ ಈ ವಿಷಯ ಸುಲಭವಾಗಿ ಅರ್ಥವಾಗಬಹುದು. ಆದರೆ,

ಅದಕ್ಕೆ ಕೈ ಹಾಕಿದರೆ ಭೀಮನ ಕತೆಗೆ ಪೂರ್ಣ ವಿರಾಮ ಹಾಕಬೇಕಾದೀತು. ನೀರಿನಲ್ಲಿದ್ದ ಒಂದು ಹಾವನ್ನು ಕೃಷ್ಣನು ಕೊಂದುದಕ್ಕಾಗಿ ಅವನನ್ನು ಕಾಳೀಯ ಮರ್ದನ ಕೃಷ್ಣ ಎಂದು ದೀರ್ಘವಾಗಿ, ಕಾವ್ಯಮಯವಾಗಿ ಹಾಡಿ ಹೊಗಳಲಾಗಿದೆ ಎಂದು ಬಹಳ ದೊಡ್ಡ ವಿದ್ವಾಂಸರು ಹೇಳುತ್ತಾರೆ. ಇವರು ಇಂದು ಹೇಳುವ ಮಾತನ್ನೇ ಕೃಷ್ಣನ ಕಾಲದಲ್ಲಿ ಶಿಶುಪಾಲ ಹೇಳಿದ್ದಾನೆ. ವ್ಯತ್ಯಾಸ ಇಷ್ಟೇ. ಶಿಶುಪಾಲ ದ್ವೇಷದಿಂದ ಹಾಗೆ ಹೇಳಿದ ; ಈ ವಿದ್ವಾಂಸರುಗಳು ಬುದ್ಧಿ ಇಲ್ಲದೆ ಹಾಗೆ ಹೇಳುತ್ತಿದ್ದಾರೆ. ಒಂದು ಸಾಮಾನ್ಯ ಹಾವನ್ನು ಕೊಂದ ಕೃಷ್ಣನನ್ನು ಕಾಳೀಯ ಮರ್ದನ ಎಂದು ಸ್ತುತಿಸಬೇಕಾಗಿ ಬಂದ ಕೃಷ್ಣ ಚರಿತ್ರಕಾರ, ಅದೇ ಕೃಷ್ಣನು ಜರಾಸಂಧನಿಗೆ ಹೆದರಿ ಊರನ್ನೇ ಬಿಟ್ಟುಹೋದ ಎಂದು ಅದೇಕೆ ಬರೆದನೊ ! ಒಂದು ಹಾವನ್ನು ಕೊಂದವನನ್ನು ಆ ಕಾರಣದಿಂದಲೂ ಭಗವಂತ ಎಂದು ಹೇಳುವಷ್ಟು ಭಾಗವತದ ಕರ್ತೃವು ಮೂರ್ಖನೆಂದು ಭಾವಿಸುವ ಈ ವಿದ್ವಾಂಸರುಗಳು ತಮ್ಮ ಬುದ್ಧಿಯ ಪ್ರಮಾಣವನ್ನು ತಿಳಿದುಕೊಳ್ಳಲಾರದವರು ಎಂಬದು ಸ್ಪಷ್ಟವಾಗಿದೆ. ಅಥವಾ ಕಾಳೀಯನ ಐದು ಹೆಡೆ ಎಂದರೆ ಪಂಚೇಂದ್ರಿಯಗಳೆಂದೂ, ಕೃಷ್ಣನು ಹೆಡೆಗಳನ್ನು ಮೆಟ್ಟಿದನೆಂದರೆ ತನ್ನ ಇಂದ್ರಿಯಗಳನ್ನು ಗೆದ್ದನೆಂದು ಅರ್ಥವೆಂದೂ ಮುಂತಾಗಿ ತಮ್ಮ ಹುಚ್ಚು ಮನಸ್ಸಿನ ವಿಕಾರಗಳನ್ನು ಬರೆದಿಟ್ಟಿರುವ ವಿದ್ವಾಂಸರೂ ಇದ್ದಾರೆ. ಇದನ್ನೆಲ್ಲ ಓದುವಾಗ ಮನಸ್ಸಿಗೆ ತೀವ್ರ ವೇದನೆಯಾಗುತ್ತದೆ. ಈ ವಿದ್ವಾಂಸರ ಒಂದೊಂದು ವಿಮರ್ಶಾ ಗ್ರಂಥವನ್ನೂ ಎತ್ತಿಕೊಂಡು ಅವರ ಒಂದೊಂದೇ ವಾದವನ್ನು ಖಂಡಿಸಬೇಕು ಎನಿಸುತ್ತದೆ. ಆದರೆ ಕೇವಲ ನಿಷ್ಪ್ರಯೋಜಕವಾದ ಈ ಕೆಲಸಮಾಡಲಿಕ್ಕೇ ಒಬ್ಬನ ಆಯುಷ್ಯ ಬೇಕಾಗಬಹುದು. ವಿಮರ್ಶೆಗಳ ಈ ಹುಚ್ಚು ಬೆಳೆ ಅಷ್ಟಿದೆ. ಇರಲಿ. ಶಿಶುಪಾಲ ಒಮ್ಮೆಗೇ ಆ ಮಹಾಸಭೆಯನ್ನು ಅಧೀರಗೊಳಿಸಿ ಕೃಷ್ಣನ ಚಾರಿತ್ರ್ಯವನ್ನು ಪಾತಾಳಕ್ಕೆ ತಳ್ಳಿದಂತಾದುದು ನಿಜ. ಆಮೇಲೆ ಏನಾಯಿತೆಂಬದೇ ನಿಜವಾಗಿ ನಮ್ಮ ಈ ದೇಶದ ಧರ್ಮದ ತಿರುಳು. ಅದರಲ್ಲಿ ವಿಶ್ವಾಸವಿಡುವದಷ್ಟೇ ಸದ್ಯಕ್ಕೆ ನಮಗೆ ದೊರಕುವ ಸಮಾಧಾನ...............

ರಮೆ:– ಛೇ. ಏಕೆ ? ಏನೋ ಬಹಳ ಮನಸ್ಸಿಗೆ ಹಚ್ಚಿಕೊಂಡಿದ್ದೀರಲ್ಲ. ನನಗೇಕೋ...............

ಮುರಳಿ:– ಏನಿಲ್ಲ. ಏಳು. ನಾಳೆ ಕತೆ ಮುಂದುವರಿಸೋಣ.

††††††

# ಐದನೆಯ ಸಂಜೆ

**ಮು**ರಳಿ:– ಅಂತೂ ಆಶ್ಚರ್ಯ– ನಾವು ಐದನೇ ಸಂಜೆಗೆ ತಲಪಿರುವದು!

ರಮೆ:– ಏಕೆ?

ಮುರಳಿ:– ಹೌದು. ನಾನು ಕೈ ಹಾಕಿದ ಕಾರ್ಯ ಯಾವದು ಪೂರ್ತಿಯಾಗಿದೆ ಹೇಳು? ಷಟ್ಪದೀ ಕಾವ್ಯ ರಚನೆ, ಚಿತ್ರಕಲೆ, ಸಂಗೀತ, ಕಾವ್ಯವಾಚನ, ಯೋಗಾಸನ, ಕೊಳಲುವಾದನ, ನಾಟಕಾಭಿನಯ, ರಾಜಕೀಯ, ಯೋಗಾಭ್ಯಾಸ, ಉಪನ್ಯಾಸ, ಕಾದಂಬರೀ ರಚನೆ, ಜ್ಯೋತಿಷ್ಯ–ಒಂದೇ, ಎರಡೆ! ಪ್ರತಿಯೊಂದರಲ್ಲಿಯೂ ಏನೋ ಅದ್ಭುತ ಸಾಧಿಸುತ್ತೇನೆನ್ನುವ ವೇಳೆಗೆ ಅದು ಹೇಗೆ ನನ್ನ ಕೈಬಿಟ್ಟು ಹೋಗುತ್ತದೆಂಬದೇ ಗೊತ್ತಿಲ್ಲದಂತೆ ನಾನು ಪ್ರತಿಯೊಂದರಲ್ಲಿಯೂ ಹೊಸದರಲ್ಲಿ ಉತ್ಸಾಹಿತನಾಗಿರುತ್ತಿದ್ದುದೇ ನನ್ನ ಜೀವನದ ಮಹಾ ಸಾಧನೆ ಎನಿಸಿಲ್ಲವೆ. ಈ ಭೀಮನ ಕತೆಯಾದರೂ ಅಷ್ಟೆ. ಈಗ ಸುಮಾರು 18–20 ವರ್ಷಗಳ ಹಿಂದೆಯೇ, ನಾನಿದನ್ನು ಇದರ ಈ ಸ್ವರೂಪದಲ್ಲಿಯೇ ಕಂಡುಕೊಂಡಿದ್ದರೂ, ಅಂದಿನಿಂದಲೂ ಇದನ್ನು ಇನ್ನೊಬ್ಬರ ಕಿವಿಗೆ ಹಾಕಬೇಕೆಂದು ಬಯಸಿದ್ದರೂ ಅದು ಈವರೆಗೆ ಸಾಧ್ಯವಾಗದುದನ್ನು ನೋಡುವಾಗ ನನ್ನ ಮುನ್ನಡೆಯ ಮಾರ್ಗದಲ್ಲಿ ಯಾವದೋ ಒಂದು ಬಲವಾದ ಗ್ರಹ ಭದ್ರವಾಗಿ ಕುಳಿತುಬಿಟ್ಟಿರಬೇಕು ಅನಿಸುತ್ತದೆ.

ರಮೆ:– ಭೀಮನ ಕತೆಯ ಮಟ್ಟಿಗಂತೂ ಆ ಗ್ರಹವನ್ನು ನಾನು ಅಲ್ಲಿಂದ ಉಚ್ಚಾಟನೆ ಮಾಡುತ್ತೇನೆ. ಹೇದರಬೇಡಿ.

ಮುರಳಿ:– ಸಂತೋಷ. ಅಪೂರ್ವವಾದ ನೇರಳೆ ಹಣ್ಣು ಮರದಲ್ಲಿ ಸೇರಿಕೊಂಡಿತು ಎನ್ನುವವರೆಗೆ ನಿನ್ನೆ ಆಯಿತಲ್ಲವೆ? ಕೇಳು.

ರಮೆ:– ನಿಮ್ಮ ಮುನ್ನಡೆಯ ಮಾರ್ಗದಲ್ಲಿ ಬಲವಾದ ಗ್ರಹ ಕುಳಿತಿದೆ ಎಂದಿರಲ್ಲಾ! ನೀವು ನಡೆದು ಬಂದ ಮಾರ್ಗದಲ್ಲಿಯೂ, ನೀವು ನಡೆದು ನಡೆದು ಬಂದಂತೆಯೇ ಅದಕ್ಕಿಂತಲೂ ಬಲವಾದ ಯಾವದೋ ಒಂದು ಗ್ರಹ ಬಂದು ಬಂದು ನಿಮ್ಮ ಹಿಂದಿನ ಮಾರ್ಗದಲ್ಲಿ ಇನ್ನೂ ಹೆಚ್ಚು ಭದ್ರವಾಗಿ ಕುಳಿತುಬಿಡುತ್ತದೆ ಎಂಬದು ನನಗೆ ಚೆನ್ನಾಗಿ ಕಾಣಿಸುತ್ತಿದೆ.

ಮುರಳಿ:- ವಿವರಿಸೋಣಾಗಲಿ.

ರಮೆ:- ನೀವು ಒಂದು ಹೆಜ್ಜೆ ಮುಂದಿಟ್ಟಂತೆ, ನಿಮ್ಮ ಹಿಂದಿನ ಹೆಜ್ಜೆಯ ಮೇಲೆ ಆ ಗ್ರಹ ಭೂತಾಕಾರವಾಗಿ ಕುಳಿತುಬಿಡುತ್ತದೆ.

ಮುರಳಿ:- ಹೀಗೆ ಕಂಡುಕೊಂಡೆ ?

ರಮೆ:- ಆದುದರಿಂದಲೇ ನಿಮಗೆ, ಈ ಹಿಂದೆ ಏನು ನಡೆಯಿತು ಎಂಬದು ಕಾಣಿಸುವದಿಲ್ಲ !

ಮುರಳಿ:- ನನ್ನ ಹಿಂದೆ ಏನು ನಡೆಯುತ್ತಿದೆ ?

ರಮೆ:- ಈಗ ನಡೆಯುತ್ತಿರುವದಲ್ಲ. ಈ ಹಿಂದೆ ಏನು ನಡೆಯಿತು ಎಂಬದು ನಿಮಗೆ ಕಾಣಿಸುವದಿಲ್ಲ ಎಂದೆ.

ಮುರಳಿ:- ಸರಿಯಾಗಿ ಅರ್ಥವಾಗಲಿಲ್ಲ.

ರಮೆ:- ನಿನ್ನೆ ನಡೆದುದಾದರೂ ಏನು ಎಂಬ ನೆನಪು ನಿಮಗೆ ಇರುವದಿಲ್ಲ ಎಂದೆ. ಇನ್ನು ಅದರ ಹಿಂದಿನ ವಿಚಾರಗಳ ನೆನಪು ಹೇಗೂ ಇಲ್ಲವಲ್ಲ !

ಮುರಳಿ:- ಅದನ್ನು ಹೇಳುತ್ತಿದ್ದೀಯೊ ? ಸರಿ, ಸರಿ. ಅದು ನನ್ನ ಸೌಭಾಗ್ಯದ ಗ್ರಹ.

ರಮೆ:- ಒಳ್ಳೇ ಸೌಭಾಗ್ಯ. ಸಣ್ಣ ಪುಟ್ಟ ವಿಷಯಗಳು ಹೋಗಲಿ. ನಿಮಗೆ ಯಾರಾದರೂ ಬಲವಾದ ಕೆಡುಕು ಮಾಡಿದ್ದರೆ ಕೂಡ ಆ ಕೆಡುಕು ಏನು ಎಂಬ ದನ್ನೂ ಮರೆಯುತ್ತೀರಲ್ಲಾ, ಅದು ಸೌಭಾಗ್ಯದ ಬದುಕಿಗೆ ಸಹಾಯಕವೆ ?

ಮುರಳಿ:- ಖಂಡಿತ. ಇತರರು ಮಾಡಿದ ಕೆಡುಕನ್ನು ಮರೆಯುತ್ತೇನೆ. ಹಾಗಾಗಿ ದ್ವೇಷಕ್ಕೆ ನನ್ನ ಮನಸ್ಸಿನಲ್ಲಿ ಸ್ಥಳ ಸಿಕ್ಕುವದಿಲ್ಲ. ಇತರರು ನನಗೆ ಮಾಡಿದ ಒಳ್ಳೆಯದನ್ನೂ ಮರೆತುಬಿಡುತ್ತೇನೆ. ಹಾಗಾಗಿ ವ್ಯಾಮೋಹಕ್ಕೆ ನನ್ನಲ್ಲಿ ಸ್ಥಳ ಸಿಕ್ಕುವದಿಲ್ಲ. ನಾನು ಇತರರಿಗೆ ಮಾಡಿದ ಒಳ್ಳೆಯದನ್ನೂ ಮರೆತುಬಿಡು ತ್ತೇನೆ. ಹಾಗಾಗಿ ಅಹಂಕಾರಕ್ಕೆ ನನ್ನಲ್ಲಿ ಅವಕಾಶ ಸಿಕ್ಕುವದಿಲ್ಲ. ನಾನು ಮನಸಾ ಇತರರಿಗೆ ಕೇಡು ಮಾಡಲು ಅಸಮರ್ಥನಾದರೂ, ಇತರರಿಗೆ ಸಿಟ್ಟಿನಲ್ಲಿ ಕೆಡೆನುಡಿದು ದನ್ನೂ ಮರೆತುಬಿಡುತ್ತೇನೆ. ಹಾಗಾಗಿ ತಿರಸ್ಕಾರಕ್ಕೆ ನನ್ನಲ್ಲಿ ಪುರಸ್ಕಾರ ಸಿಕ್ಕು ವದಿಲ್ಲ. ಅಂದರೆ, ಆಯಾ ಸಂದರ್ಭಗಳಲ್ಲಿ ನಾನು ರೋಷ, ಪ್ರೀತಿ, ಅಹಂಭಾವ, ತಿರಸ್ಕಾರ ಮೊದಲಾದ ಭಾವೋದ್ವೇಗಗಳಿಗೆ ಸಿಕ್ಕಿ ಮನಸ್ಸಿನ ಸಮತೋಲನವನ್ನು ಕಳೆದುಕೊಳ್ಳುವಂತಾಗಬೇಕಾಗುವದನ್ನು ತಪ್ಪಿಸಲು ಸಾಧ್ಯವಾಗಲಾರದಾದರೂ ಕೂಡ, ನೀನು ವಿವರಿಸಿದ ಆ ಶುಭಗ್ರಹದ ಕೃಪೆಯಿಂದಾಗಿ, ಹಿಂತಿರುಗಿ ನೋಡಿ

ದರೂ ಆ ಉದ್ವೇಗಗಳೊಂದೂ ಕಾಣಿಸದೆ ಪ್ರತಿ ದಿನವೂ ನಾನು ಹೊಚ್ಚ ಹೊಸ ದಾದ ಜೀವನವನ್ನೇ ಪ್ರಾರಂಭಿಸುತ್ತಿರುವಂತೆ ನನಗನಿಸುತ್ತದೆ.

ರಮೆ:– ನೀವು ಪುಣ್ಯಾತ್ಮರಪ್ಪಾ.

ಮುರಳಿ:– ನಿಜವಾಗಿ ಹೌದು. ಪುಣ್ಯತರವಾದ ಆತ್ಮವನ್ನು ಪಡೆದಿರುವ ವನು ನಾನು. ಅರ್ಥಾತ್, ನನಗೆ ಭಾವೋದ್ವೇಗಗಳ ದೀರ್ಘ ಪೀಡನೆ ಇಲ್ಲದಿರುವ ದರಲ್ಲಿ ನನ್ನ ಸಾಧನೆಯ ಫಲವೇನೂ ಇಲ್ಲ. ಹಾಗಾಗಿ ಅದರ ಕೀರ್ತಿಗೆ ನಾನು ಭಾಗಿಯೂ ಅಲ್ಲ. ಅದು ನನ್ನ ಆತ್ಮಕ್ಕೆ–ಅರ್ಥಾತ್–ಮೂಲ ಸ್ವಭಾವಕ್ಕೆ ಸೇರಿದ ಗುಣ. ನಾನು ಹಾಗೆ ಹುಟ್ಟಿಬಿಟ್ಟಿದ್ದೇನೆ, ಅಷ್ಟೆ. ಇದು ಭಗವಂತನ ಸಂಕಲ್ಪವೇ ಹೊರತು ನನ್ನ ಸಾಧನೆಯ ಫಲವಲ್ಲ. ಈ ಜನ್ಮದ್ದಂತೂ ಖಂಡಿತ ಅಲ್ಲ. ಹಿಂದೆ ಬಯಸಿದ್ದೆನೇನೊ ! ಅದಕ್ಕಾಗಿ ಪ್ರಯತ್ನಿಸಿದ್ದೇನೇನೊ ! ಇಲ್ಲವಾಗಿದ್ದರೆ, ನಾನು ಮೇಲೆ ಹೇಳಿದಂತೆ, ನಾನು ಕೈಗೊಂಡ ಯಾವದೇ ಕಾರ್ಯದಲ್ಲಿ, ಆ ಕ್ಷೇತ್ರದಲ್ಲಿ ಅತ್ಯಂತ ಪರಿಣತರೆಂದೆನಿಸುವವರ ಸರಿದೊರೆಯಾಗಿ ಹೋಗಬಲ್ಲೆ ಎಂಬ ಮಟ್ಟಕ್ಕೆ ಏರುತ್ತಿರುವಾಗಲೇ, ನಾನು ಹೊರಗಿನ ಯಾವ ಒತ್ತಡವೂ ಇಲ್ಲದೆ, ಪ್ರತಿಬಾರಿಯೂ ನಾನು ಆ ಕಾರ್ಯಕ್ಷೇತ್ರದಿಂದ ನನಗರಿವಿಲ್ಲದಂತೆಯೇ ದೂರ ಹೋಗಿ ಬೇರೊಂದನ್ನು ಕೈಗೆತ್ತಿಕೊಳ್ಳಬೇಕಾದಾಗಲೂ–ಮೇಲಿಂದ ಮೇಲೆ ಹೀಗಾದುದನ್ನು ನಾನು ಗಮನಿಸಿಯೂ–ನನಗೆ ಆ ಕುರಿತು ಇಂದು ಎಳ್ಳಷ್ಟೂ ಪಶ್ಚಾತ್ತಾಪವಿಲ್ಲದಿರ ಬೇಕಾದರೆ ಆ ಸಾಧನೆಗಳಿಗೆಲ್ಲ ನಾನು ಹೇಗೆ ಬಾಧ್ಯಸ್ಥನಲ್ಲವೋ, ಅವುಗಳ ವಿಫಲ ತೆಗೂ ನಾನು ಅಷ್ಟೇ ಮಟ್ಟಿಗೆ ಬಾಧ್ಯಸ್ಥನಲ್ಲ ಎಂಬ ಅರಿವು ನಾನು ಹುಟ್ಟುವಾಗಲೇ ನನ್ನ ಗುಣದಲ್ಲಿ ಬೆರೆತಿರಬೇಕೇ ಹೊರತು ಅದನ್ನು ನಾನು ಸಾಧನೆಯಿಂದ ಗಳಿಸಿ ಕೊಂಡೆ ಎಂದು ಹೇಳುವದು ಶುದ್ಧ ತಪ್ಪಾಗುತ್ತದೆ ........ ಅದೆಲ್ಲ ಸರಿ, ಈ ಹಾಳು ಆತ್ಮ ಪ್ರಶಂಸೆ ಇಲ್ಲೇಕೆ ಬಂತು ?

ರಮೆ:– ಆತ್ಮ ಪ್ರಶಂಸೆ ಏನು ? ನಿಮ್ಮ ಸ್ವಭಾವದ ಒಂದು ಮುಖ, ಅಷ್ಟೆ.

ಮುರಳಿ:– ಅದೂ ಹೌದೆನ್ನು.

ರಮೆ:– ಹುಲಿಗೆ ತನ್ನ ಕಾಡೇನು, ಪರರ ಕಾಡೇನು ?

ಮುರಳಿ:– ಅಂದರೆ ?

ರಮೆ:– ಭೀಮನಾದರೇನು, ನಾನಾದರೇನು ! ಯಾರ ವ್ಯಕ್ತಿತ್ವ ಹೇಗೆ ಎಂಬದನ್ನು ಕಂಡುಕೊಳ್ಳುವ ಆಸ್ಥೆ ನನ್ನದು.

ಮುರಳಿ:– ನಿನ್ನದೆ ?

ರಮೆ:– ನನ್ನದು ಎಂದು ನೀವು ಭಾವಿಸಿದ್ದೀರಿ ಅಂತ.

ಮುರಳಿ:– ಹಾಗೆ. ಅದಿರಲಿ, ಈ ಮಾತು ಏಕೆ ಬಂತು ಹೇಳು ?

ರಮೆ:– ಮಗುವಿಗೆ ಹೇಳಿಕೊಟ್ಟಂತೆ ನಿಮಗೆ ಹೇಳಿಕೊಡಬೇಕಲ್ಲ ! ನಿನ್ನೆ ಸಂಜೆಯ ಪ್ರಾರಂಭದಲ್ಲಿ ಆತ್ಮನ ವಿಚಾರ ಬಂದಾಗ "ನಾನು" ಎಂದರೆ ಯಾರು ಎಂಬ ಜಿಜ್ಞಾಸೆ ಬಂತು. ನಾನು ಹೇಳಿದೆ, ನಾನು ಎಂದರೆ ನಾನು – ರಮೆ – ಈ ದೇಹ ಅಂತ ಎಲ್ಲ. ನೀವು ನಕ್ಕು ಅದರ ಕುರಿತು ನಾಳೆ ಚರ್ಚಿಸೋಣ ಎಂದಿರಿ. ಈಗ ಹೇಳಿ. ನಾನು ಮತ್ತೆ ಯಾರು ಅಂತ ?

ಮುರಳಿ:– ನಿಜ, ನಿಜ. ಆದರೆ ಈ ಮುಂದಿನ ವಿವರಣೆಗಳೆಲ್ಲ ನಿನಗೆ ಎಷ್ಟರ ಮಟ್ಟಿಗೆ ಅರ್ಥವಾಗುತ್ತವೋ ಕಾಣೆ. ಅಂತೂ ಅರ್ಥವಾದಷ್ಟು ಗ್ರಹಿಸಿಕೊ. ಈಗ ನಾನು ಹೇಳಲಿರುವ ವಿಚಾರವೇ ಸನಾತನ ಮತದ ಸಾರಸರ್ವಸ್ವ. ವೇದಗಳ ಗುರಿಯಾಗಲಿ, ಉಪನಿಷತ್ತುಗಳ ಗುರಿಯಾಗಲಿ, ಭಗವದ್ಗೀತೆ, ಸಾಂಖ್ಯ, ಯೋಗ ಮೊದಲಾದ ದರ್ಶನಗಳು – ಇವೆಲ್ಲವುಗಳ ತಿರುಳೂ ಇದೇ. ಈ ನೆಲದಲ್ಲಿ ಆಗಿ ಹೋದ ಸಾವಿರಾರು ಆತ್ಮಜ್ಞಾನಿಗಳೆಲ್ಲರ ಅನುಭವವೂ ಇದೇ. ಯಾವ ಜ್ಞಾನವು ಲೋಕದ ಇತರ ಯಾವದೇ ಜ್ಞಾನಗಳಿಗೆಲ್ಲ ಮೂಲವಾದುದೋ ಆ ಜ್ಞಾನವೇ ಇದು. ಇದ್ಯಾವದೂ ನನ್ನ ಮಾತುಗಳಲ್ಲ. ತಿಳಿದವರು ಹಿಂದೆ ಹೇಳಿ ದುದನ್ನು ಅವರ ಹೇಳಿಕೆಗಿರುವ ಪ್ರಭಾವವಿಲ್ಲದೆ ನಾನು ಹೇಳುತ್ತಿದ್ದೇನೆ, ಅಷ್ಟೆ.

"ನಾನು" ಎಂದರೆ ಈ ದೇಹ ಎಂದು ನಾವು ಸಾಮಾನ್ಯವಾಗಿ ಗ್ರಹಿಸಿ ಕೊಂಡುಬಿಡುತ್ತೇವೆ. "ನಾನು" ಎಂದರೆ ಯಾರು ಎಂಬದನ್ನು ಸುಲಭವಾಗಿ ತಿಳಿದುಕೊಳ್ಳಲೂ ಸಾಧ್ಯವಿಲ್ಲ, ಇತರರಿಗೆ ವಿವರಿಸಲೂ ಸಾಧ್ಯವಿಲ್ಲ. ಏಕೆಂದರೆ "ನಾನು" ಈ ಯಾವದೂ ಅಲ್ಲ, ಆದರೆ ಇದೆಲ್ಲವೂ ಹೌದು. ನನ್ನನ್ನು ಯಾವದಕ್ಕೂ ಹೋಲಿಸಿ ವಿವರಿಸಲು ಸಾಧ್ಯವಿಲ್ಲ. ವಿವರಿಸುವ ದೇನು ? ಮೌನವೇ "ನನ್ನ" ನಿಜವಾದ ಭಾಷೆ. ನಾನು ಬುದ್ಧಿಯಿಂದ ಇತರ ಎಲ್ಲವನ್ನೂ ತಿಳಿದುಕೊಳ್ಳಬಲ್ಲೆನಾದರೆ, ಆ ಬುದ್ಧಿ ಹುಟ್ಟಿರುವದೇ ನನ್ನಿಂದ, ಅದು ತಿಳಿದುಕೊಳ್ಳುವ ಶಕ್ತಿಯನ್ನು ಪಡೆದಿರುವದೇ ನನ್ನಿಂದ ಆಗಿರುವದರಿಂದ ಆ ಬುದ್ಧಿಯ ಮೂಲಕವೂ ನನ್ನನ್ನು ತಿಳಿದುಕೊಳ್ಳಲಾರೆ. ನಾನು ಈ ದೇಹದೊಳಗಿದ್ದೇನೆಂದು ಹೇಳಿಕೊಳ್ಳುತ್ತೇನಾದರೂ ನಾನು ಇರುತ್ತೇನೆನ್ನುವ ಸ್ಥಳವೇ ಇಲ್ಲ. ಅಥವಾ ಈ ಲೋಕದ ಭಾಷೆಯಲ್ಲಿ ಹೇಳುವದಾದರೆ ನಾನು ಎಲ್ಲೆಲ್ಲಿಯೂ ಇದ್ದೇನೆ. ನಾನು ಹಿಂದೆಯೂ ಇದ್ದೆ, ಈಗಲೂ ಇದ್ದೇನೆ, ಮುಂದೆಯೂ ಇರುತ್ತೇನೆ ಎಂದು ಹೇಳುವದು ಈ ಲೋಕದ ಭಾಷೆಯಲ್ಲಿ ಇತರರು ಅರ್ಥಮಾಡಿಕೊಳ್ಳಲಿ ಎಂಬದಕ್ಕೇ ಹೊರತು "ನಾನು ಸದಾ ಇದ್ದೇನೆ" ಎನ್ನುವಷ್ಟೇ ಹೊರತು ನಾನು ಭೂತ, ವರ್ತ ಮಾನ, ಭವಿಷ್ಯತ್ತುಗಳ ಅಳತೆಯನ್ನು ಮೀರಿದವನಾಗಿದ್ದೇನೆ. ಸುಖ, ದುಃಖ,

ಆಸೆ, ನಿರಾಸೆ, ತೃಪ್ತಿ, ವೈರಾಗ್ಯ–ಇವೆಲ್ಲವೂ ನನ್ನಲ್ಲಿ ಹುಟ್ಟಿ, ನನ್ನಿಂದ ಚೈತನ್ಯವನ್ನು ಪಡೆದು ನನ್ನ ಹೊರತಾಗಿ ಅಸ್ತಿತ್ವವನ್ನೇ ಪಡೆಯದಿರುವ ನನ್ನ ಮನಸ್ಸಿನ ವಿಕೃತಿಗಳೇ ಹೊರತು ಅವು ಯಾವವೂ ನನ್ನನ್ನು ವಿಕೃತಗೊಳಿಸಲಾರವು. ನಾನು ಅವುಗಳಿಂದ ಅಬಾಧಿತನಾಗಿದ್ದೇನೆ........

ರಮೆ:– ನೀವು ಏನು ಹೇಳುತ್ತಿದ್ದೀರೋ ಏನೋ. ಹಾಗೆಲ್ಲ ಆದರೆ ನಾನು ಯಾರು ಅಂತ ಹೇಳಿ ಮತ್ತೆ !

ಮುರಳಿ:– ನಾನು ಇಂತಹವನೇ ಎಂದು ಈ ಲೋಕದ ಭಾಷೆಯಲ್ಲಿ ಹೇಳಲು ಸಾಧ್ಯವಿಲ್ಲ ರಮಾ.

ರಮೆ:–ನಿಮ್ಮನ್ನಲ್ಲ ನಾನು ಕೇಳಿದುದು. ನನ್ನನ್ನು. ನಾನು ಯಾರು ಅಂತ ಹೇಳಿ ಎಂದೆ.

ಮುರಳಿ:– ನೀನು ಯಾವದನ್ನು "ನಾನು" ಎಂದುಕೊಳ್ಳುತ್ತೀಯೋ, ನಾನು "ನಾನು" ಎಂದುಕೊಳ್ಳುವದೂ ಅದೇ. ಎಲ್ಲ ಜೀವಿಗಳ "ನಾನು" ಎಂಬದು ಒಂದೇ ಆಗಿದೆ.

ರಮೆ:– ನನ್ನ ತಲೆ ಕೆಟ್ಟುಹೋದರೆ ನೀವೇ ಜವಾಬ್ದಾರರು. ಇರಲಿ. ಹಾಗಾದರೆ ನಿಮ್ಮ "ನಾನೇ" ಆಗಲಿ, ನನ್ನ "ನಾನೇ" ಆಗಲಿ ಅದೆಲ್ಲವೂ ಒಂದೇ ಆಗಲಿ, ಆ "ನಾನು" ಎನ್ನುವದು ಯಾರು, ಅಥವಾ ಏನು ಎಂದು ಹೇಳದೆ ನೀವು ಏನೇನೋ ಹೇಳುತ್ತಿದ್ದೀರಲ್ಲ !

ಮುರಳಿ:– ಅದನ್ನೇ ನಾನು ಹಿಂದೆ ಹೇಳಿದುದು ರಮಾ. "ನನ್ನ" ಭಾಷೆ ಲೋಕದ ವಿವರಣೆಯಲ್ಲಿ ಮೌನ ಎನಿಸುವದರಿಂದ "ನಾನು" ಯಾರು ಎಂಬದನ್ನು ಈ ಲೋಕದ ಭಾಷೆಯಲ್ಲಿ ಹೇಳಲು ಸಾಧ್ಯವಿಲ್ಲ.

ರಮೆ:– ಆದರೆ ನಾನು ಈ ದೇಹವಲ್ಲ ಎಂದು ಯಾಕೆ ಹೇಳುತ್ತೀರೋ ನನಗೆ ಅರ್ಥವಾಗುವದಿಲ್ಲ.

ಮುರಳಿ:– "ನಾನು" ಈ ದೇಹವಲ್ಲ ಎಂಬದನ್ನು ವಿವರಿಸಬಹುದು. ಹಾಗಾದರೆ ಆ "ನಾನು" ಯಾರು ಎಂಬದನ್ನು ಮಾತ್ರ ವಿವರಿಸಲು ಸಾಧ್ಯವಿಲ್ಲ.

ರಮೆ:– ಆಗಲಿ. "ನಾನು" ಈ ದೇಹ ಯಾಕಲ್ಲ ಹೇಳಿ.

ಮುರಳಿ:– ಮೊದಲನೆಯದಾಗಿ ನೀನು ಈ ದೇಹವನ್ನು "ನನ್ನ ದೇಹ" ಎನ್ನುತ್ತೀಯ. ನನ್ನ ಪುಸ್ತಕ ಎಂದಾಗ ನೀನು ಆ ಪುಸ್ತಕಕ್ಕಿಂತ ಬೇರೆಯಾಗಿದ್ದೀ ಎಂದು ಅರ್ಥವಾಗುವಂತೆ, ನನ್ನ ದೇಹ ಎಂದಾಗ ನೀನು ಈ ದೇಹಕ್ಕಿಂತ ಪ್ರತ್ಯೇಕವಾಗಿದ್ದೀ ಎಂದು ಹೇಳಿದಂತಾಯಿತು.

ಅಷ್ಟೇ ಅಲ್ಲ. ಈ ಲೋಕದಲ್ಲಿನ ನಿನ್ನ ಅನುಭವ ಮೂರು ಅವಸ್ಥೆಗಳನ್ನು ಹೊಂದಿದೆ. ಎಚ್ಚರವಾಗಿರುವದು ಎಂದು ನಾವು ಏನನ್ನು ಕರೆಯುತ್ತೇವೆಯೋ ಅದು ಒಂದು ಅವಸ್ಥೆ ; ಸ್ವಪ್ನ ಎಂಬದು ಇನ್ನೊಂದು ; ಗಾಢ ನಿದ್ರೆ ಎಂಬದು ಮೂರನೆಯದು. ಎಚ್ಚರವಾದಾಗಿನ ನಮ್ಮ ಅನುಭವ ಉಳಿದ ಅನುಭವಗಳಿಗಿಂತ ಹೆಚ್ಚು ದೀರ್ಘಕಾಲ ಇರುವಂತೆ ಕಾಣಿಸುವದರಿಂದಲೂ, ನಮ್ಮ ಜೀವನದುದ್ದಕ್ಕೂ ಇದು ದಿನದಿಂದ ದಿನಕ್ಕೆ ಪರಸ್ಪರ ಸಂಬಂಧವನ್ನು ಹೊಂದಿಕೊಂಡು ಮುಂದುವರಿ ಯುವಂತೆ ಕಾಣಿಸುವದರಿಂದಲೂ ನಮ್ಮ ಈ ಜಾಗೃತಾವಸ್ಥೆಯ ಜೀವನವು ಉಳಿದ ಎರಡು ಅವಸ್ಥೆಗಳ ಜೀವನಕ್ಕಿಂತಲೂ ಹೆಚ್ಚು ನಿಜವಾದುದು, ಅರ್ಥವತ್ತಾದುದು ಎಂದು ನಾವು ಭಾವಿಸುತ್ತೇವೆ.

ರಮೆ:– ಅಂದರೆ, ಈ ಜೀವನ ಹೀಗೇ ಎಂದು ನಾವು ಭಾವಿಸುವದು ಮಾತ್ರ ಎನ್ನುತ್ತೀದ್ದಿರೇನು? ಇದು ನಿಜವಾಗಿ ಹೀಗಿಲ್ಲ ಎನ್ನುತ್ತೀರೇನು ?

ಮುರಳಿ:– ಅದನ್ನು ಆಮೇಲೆ ನೋಡೋಣ. ಹೀಗಾಗಿ, ನಮ್ಮ ಮೂರು ಅವಸ್ಥೆಗಳ ಪೈಕಿ ನಮಗೆ ಹೆಚ್ಚು ನಿಜವಾಗಿ ಕಾಣಿಸುವ ಈ ಜಾಗ್ರತಾವಸ್ಥೆಯಲ್ಲಿ ನಾವು ಪಡುವ ಎಲ್ಲ ಅನುಭವಗಳೂ ನಮ್ಮ ಈ ದೇಹದ ಮೂಲಕ ನಮಗಾಗುವ ದರಿಂದ ಈ ದೇಹವೇ ನಾನು ಎಂಬ ಭ್ರಮೆ ನಮಗೆ ಉಂಟಾಗುತ್ತದೆ. ದೈಹಿಕ ವಲ್ಲದ ಮಾನಸಿಕ ಅನುಭವಗಳೆನ್ನುವವುಗಳು ಕೂಡ ಈ ದೇಹವನ್ನೇ ಅವಲಂಬಿ ಸಿರುತ್ತವೆ. ಬೌದ್ಧಿಕ ಅನುಭವಗಳು, ಭಾವನೆಗಳು, ಚಿಂತನೆ – ಇವುಗಳು ಕೂಡ ದೇಹದ ಆರೋಗ್ಯ, ರಚನೆ – ಇವುಗಳನ್ನೇ ಅವಲಂಬಿಸಿರುತ್ತವೆ.

ಈಗ ಸ್ವಪ್ನಾವಸ್ಥೆಯನ್ನು ನೋಡೋಣ. ಸ್ವಪ್ನಕಾಲದಲ್ಲಿ ನಾವು ಏನೋ ಅನುಭವವನ್ನು ಪಡೆಯುತ್ತೇವೆ. ಸ್ವಪ್ನದ ಲೋಕವನ್ನು ನಾವು ಈ ದೇಹದ ಕಣ್ಣುಗಳಿಂದ ನೋಡುವದಿಲ್ಲ; ಈ ದೇಹದ ಬಾಯಿ, ಮೂಗು, ನಾಲಿಗೆ, ಚರ್ಮ ಗಳಿಂದ ಅನುಭವಿಸುವದಿಲ್ಲ. ಆದರೂ ಆ ಲೋಕವನ್ನು ನೋಡುತ್ತಿರುತ್ತೇವೆ, ಅಲ್ಲಿಯೂ ಮಾತನಾಡುತ್ತೇವೆ, ಎಲ್ಲ ಮಾಡುತ್ತೇವೆ. ಇಂದ್ರಿಯಗಳ ಯಾವ ಕೊರತೆಯನ್ನೂ ಕಾಣದೆ ಅಲ್ಲಿ ವ್ಯವಹರಿಸುತ್ತಿರುತ್ತೇವೆ. ಈ ದೇಹವನ್ನು ಸ್ವಪ್ನ ಲೋಕದಲ್ಲಿ ನಾವು ಉಪಯೋಗಿಸುವದಿಲ್ಲ ಎಂಬದನ್ನು ಮರೆಯಬೇಡ.

ರಮೆ:– ಆದರೆ ಅದು ಬರೇ ಸ್ವಪ್ನ!

ಮುರಳಿ:– ಹೌದು, ಸ್ವಪ್ನವೇ. ಈಗ ಎಚ್ಚರಗೊಂಡಿರುವಾಗ, ನೀನು ಅದನ್ನು "ಬರೇ ಸ್ವಪ್ನ" ಎಂದು ಹೇಳುತ್ತಿದ್ದೀ. ಆದರೆ ಈಗ ನಿನಗೆ ಈ ದೇಹ, ಈ ಲೋಕಗಳು ಎಷ್ಟು ನಿಜ ಎಂದು ಕಾಣಿಸುತ್ತಿವೆಯೋ, ಆ ಸ್ವಪ್ನ ಕಾಲದಲ್ಲಿ ಆಗಿನ

ನಿನ್ನ ಆ ದೇಹವೇ, ಆ ಲೋಕವೇ ಅಷ್ಟು ನಿಜ ಎಂದು ಅನಿಸುತ್ತದೆ ಎಂಬದನ್ನು ಮರೆಯಬೇಡ.

ರಮೆ:– ಆದರೆ ಅದೆಲ್ಲ ಸುಳ್ಳು ಎಂದು ಎಚ್ಚರವಾದ ಮೇಲೆ ಗೊತ್ತಾಗುತ್ತದಲ್ಲ !

ಮುರಳಿ:– ಆದರೆ ಸ್ವಪ್ನ ಕಾಲದಲ್ಲಿ ನಿನ್ನ ಈಗಿನ ಈ ದೇಹ, ಈ ಲೋಕಗಳು ಸುಳ್ಳು ಎಂಬದೇ ನಿಜವಾದಂತೆ ನೀನು ಬೇರೆ ದೇಹದ ಮೂಲಕ, ಬೇರೆ ಲೋಕದಲ್ಲಿ ವ್ಯವಹರಿಸುತ್ತಿರುವದಿಲ್ಲವೆ ?

ರಮೆ:– ಅದು ಮನಸ್ಸಿನ ಕಲ್ಪನೆ.

ಮುರಳಿ:– ಅದು ಎಷ್ಟರ ಮಟ್ಟಿಗೆ ಮನಸ್ಸಿನ ಕಲ್ಪನೆಯೋ, ಈ ದೇಹ, ಈ ಲೋಕಗಳೂ ಅಷ್ಟೇ ಪ್ರಮಾಣದಲ್ಲಿ ಮನಸ್ಸಿನ ಕಲ್ಪನೆಗಳು.

ರಮೆ:– ಏನು ಮಾತನಾಡುತ್ತಿದ್ದೀರಿ ನೀವು ?

ಮುರಳಿ:– ನಿಜ ಮಾತನಾಡುತ್ತಿದ್ದೇನೆ. ಇದನ್ನು ಆ ಮೇಲೆ ಚರ್ಚಿಸೋಣ.

ಈಗ ನಮ್ಮ ಮೂರನೆಯ ಅವಸ್ಥೆಯನ್ನು ನೋಡೋಣ. ಅದಕ್ಕೆ ಗಾಢ ನಿದ್ರೆ ಅಥವಾ ಸುಷುಪ್ತಿ ಎಂದು ಹೆಸರು. ಗಾಢ ನಿದ್ರೆಯ ಕಾಲದಲ್ಲಿ ನಿನಗೆ ಈ ದೇಹವಾಗಲಿ, ಈ ಲೋಕವಾಗಲಿ, ಸ್ವಪ್ನಲೋಕವಾಗಲಿ ಯಾವದೂ ಇರುವದಿಲ್ಲ.

ರಮೆ:– ನಿದ್ರೆಯಲ್ಲಿ ಮತ್ತೆ ಹೇಗೆ ಇರುತ್ತದೆ ?

ಮುರಳಿ:– ಹೌದು. ನಿನಗೆ ಈ ಅವಸ್ಥೆಗಳೆಲ್ಲ ಎಷ್ಟು ಒಗ್ಗಿಹೋಗಿವೆ ಎಂದರೆ ಅವುಗಳಿಗೆ ಮೂಕಳಾಗಿ ಶರಣಾಗುವದು ಹೊರತು ಅವುಗಳಲ್ಲಿ ತಿಳಿದುಕೊಳ್ಳುವಂತಹದು ಏನೂ ಇಲ್ಲ ಎನಿಸಿಬಿಟ್ಟಿದೆ. ಸೂರ್ಯ ಹುಟ್ಟುತ್ತಾನೆ, ಮುಳುಗುತ್ತಾನೆ. ಚಂದ್ರ ವೃದ್ಧಿಸುತ್ತಾನೆ, ಕ್ಷೀಣಿಸುತ್ತಾನೆ. ಲಕ್ಷಗಟ್ಟಲೆ ನಕ್ಷತ್ರಗಳು ಕಾಣಿಸಿಕೊಳ್ಳುತ್ತವೆ, ಮರೆಯಾಗುತ್ತವೆ. ಗಂಡು ಹೆಣ್ಣುಗಳು ಸೇರುತ್ತವೆ, ಮಗುವಾಗುತ್ತದೆ. ಮನುಷ್ಯ ಹುಟ್ಟುತ್ತಾನೆ, ಸಾಯುತ್ತಾನೆ. ನಾವು ಮಲಗುತ್ತೇವೆ, ಏಳುತ್ತೇವೆ. ಇವೆಲ್ಲ ನಡೆಯುವಂತಹವುಗಳೇ. ಅವುಗಳಲ್ಲಿ ಕಂಡುಕೊಳ್ಳಲು ಏನೂ ಇಲ್ಲ ಎಂಬದು ಸಾಮಾನ್ಯ ಭಾವನೆ. ನಮ್ಮ ಮೂರು ವಿಧದ ಅವಸ್ಥೆಗಳ ಕುರಿತೂ ಅಷ್ಟೇ. ನಿದ್ರೆಯ ಕಾಲದಲ್ಲಿ ಅದು "ನಿದ್ರೆ." ಆದುದರಿಂದ ಈ ದೇಹ, ಈ ಲೋಕಗಳು ಕಾಣಿಸುವದಿಲ್ಲ ಎಂದುಕೊಂಡು ಆ ಕುರಿತು ಹೆಚ್ಚಿಗೆ ವಿಚಾರಿಸಲಿಕ್ಕೇ ನಾವು ಹೋಗುವದಿಲ್ಲ. ಆದರೆ ನಿದ್ರೆಯ ಕಾಲದಲ್ಲಿ ನಮ್ಮ ದೇಹ, ಈ ಲೋಕ ಏಕೆ ಕಾಣಿಸುವದಿಲ್ಲ ಎಂದು ಚಿಂತಿಸುತ್ತೀಯೆ ?

ರಮೆ:– ಇದೆಂಥಾ ಮಾತು ಅಂತ? ಕಣ್ಣು ಮುಚ್ಚಿಕೊಂಡು ನಿದ್ರೆ ಮಾಡುವಾಗ ಇದೆಲ್ಲ ಹೇಗೆ ಕಾಣಿಸಬೇಕು ?

ಮುರಳಿ:– ಆದರೆ ಕಣ್ಣು ಮುಚ್ಚಿಕೊಂಡಾಗಲೇ ಸ್ವಪ್ನ ಲೋಕವನ್ನು ನೀನು ಕಾಣುತ್ತಿರುವದಿಲ್ಲವೆ ?

ರಮೆ:– ಇರಲಿ, ಹೇಳಿ.

ಮುರಳಿ:– ಗಾಢ ನಿದ್ರೆಯ ಕಾಲದಲ್ಲಿ ನಿನಗೆ ಯಾವ ಅನುಭವವೂ ಇರುವದಿಲ್ಲ. ಈ ದೇಹ, ಈ ಲೋಕಗಳಾಗಲಿ, ಸ್ವಪ್ನ ಲೋಕವಾಗಲಿ, ಯಾವದರ ಅನುಭವವೂ ಇರುವದಿಲ್ಲ. ಆದರೆ ಅಂತಹ ಗಾಢ ನಿದ್ರೆಯಿಂದ ಎಚ್ಚೆತ್ತ ಮೇಲೆ ನಿನಗೆ ಅನಿಸುತ್ತದೆ, "ನಾನು ಸುಖವಾಗಿ ನಿದ್ರೆ ಮಾಡಿದೆ" ಎಂದು. ಅಂದರೆ, ಗಾಢ ನಿದ್ರೆಯ ಕಾಲದಲ್ಲಿಯೇ ಆ ನಿದ್ರಾವಸ್ಥೆಯನ್ನೂ ನೀನು ಸಾಕ್ಷಿಯಂತೆ ನೋಡಿಕೊಂಡಿದ್ದೆ ಎಂದು ಅರ್ಥವಾಗುವದಿಲ್ಲವೆ ?

ರಮೆ:– ಏನೋ, ನನಗೆ ಗೊತ್ತಾಗಲಿಲ್ಲ.

ಮುರಳಿ:– ಅಂದರೆ ಹೀಗೆ. ಗಾಢ ನಿದ್ರೆಯ ಕಾಲದಲ್ಲಿ ನಿನಗೆ ಯಾವದರ ಜ್ಞಾನವೂ ಇರುವದಿಲ್ಲ. ನಿನ್ನ ದೇಹವಾಗಲಿ, ಈ ಲೋಕವಾಗಲಿ, ಇತರ ಲೋಕಗಳಾಗಲಿ ಯಾವದೂ ನಿನಗೆ ಕಾಣಿಸುವದಿಲ್ಲ. ಅಂದರೆ ಆ ಅವಧಿಯಲ್ಲಿ ನೀನು ಸತ್ತು ಹೋಗಿದ್ದೆ ಎಂದರ್ಥವೆ ?

ರಮೆ:– ಒಂದು ರೀತಿಯಲ್ಲಿ ಸತ್ತಂತೆಯೇ.

ಮುರಳಿ:– ಒಂದು ರೀತಿಯಲ್ಲಿ ಎಂದರೆ ಸಾಲದು. ಹಾಗೆ ಹೇಳುವದಾದರೆ ಸಾವು ಕೂಡ ಒಂದು ರೀತಿಯ ಗಾಢ ನಿದ್ರೆ ಎನ್ನಬಹುದು. ಆದರೆ ಗಾಢ ನಿದ್ರೆಯಲ್ಲಿ ನೀನು ಆ ನಿದ್ರೆಯನ್ನು ಸಾಕ್ಷಿಯಾಗಿ ನೋಡುತ್ತಿದ್ದೆ ಎಂಬದು ನಿಜ. ಏಕೆಂದರೆ, ನಿದ್ರೆಯಿಂದ ಎಚ್ಚೆತ್ತ ಮೇಲೆ ನಿನಗೆ "ನಾನು ಸುಖವಾಗಿ ನಿದ್ರೆ ಮಾಡಿದೆ" ಎಂದು ಅನಿಸುತ್ತದೆ. ನಿದ್ರೆ ಮಾಡುವಾಗ ನೀನು ಇಲ್ಲದಿರುತ್ತಿದ್ದರೆ ಎಚ್ಚೆತ್ತ ಅನಂತರ ಇಂತಹ ಅನುಭವವಾಗುತ್ತಿರಲಿಲ್ಲ.

ಇದರಿಂದ ನಿನಗೆ ಏನು ತಿಳಿಯುತ್ತದೆ ? ನೀನು ಎಚ್ಚರದಲ್ಲಿರುವಾಗ ನಿನಗೆ ಈ ದೇಹ ಇರುತ್ತದೆ. ಈ ದೇಹದ ಕಣ್ಣು, ಮೂಗು, ಕಿವಿ ಮೊದಲಾದ ಇಂದ್ರಿಯಗಳ ಮೂಲಕ ನೀನು ಈ ಲೋಕವನ್ನು ಕಾಣುತ್ತಿರುವೆ. ಸ್ವಪ್ನ ಕಾಲ ದಲ್ಲಿ ನಿನಗೆ ಈ ದೇಹ ಇರುವದಿಲ್ಲ.

ರಮೆ:– ಇರುವದಿಲ್ಲ ಎಂದು ಹೇಗೆ ಹೇಳುತ್ತೀರಿ ? ನಾನು ಸ್ವಪ್ನ ನೋಡು

ತ್ತಿರುವಾಗ ನನಗೆ ನನ್ನ ದೇಹ ಕಾಣಿಸದೆ ಇರಬಹುದು. ಆದರೆ ನೀವು ನೋಡಿದರೆ ನಿಮಗೆ ನನ್ನ ದೇಹ ಮಲಗಿರುವದು ಕಾಣಿಸುತ್ತದಲ್ಲಾ !

ಮುರಳಿ:– ಆದರೆ ಆಗ ನನಗೆ ಜಾಗ್ರತಾವಸ್ಥೆ. ಸ್ವಪ್ನಾವಸ್ಥೆಯಲ್ಲ. ನಿನ್ನ ದೇಹವೂ ಸೇರಿದಂತೆ ಈ ಲೋಕ ನನಗೆ ಕಾಣಿಸುತ್ತಿರುತ್ತದೆ. ಆದರೆ ನಾನು ಸ್ವಪ್ನಾವಸ್ಥೆಯಲ್ಲಿರುವಾಗ ನನಗೆ ನನ್ನ ದೇಹವೂ ಕಾಣಿಸುವದಿಲ್ಲ. ನಿನ್ನದೂ ಕಾಣಿಸುವದಿಲ್ಲ. ಹೀಗೆ, ಸ್ವಪ್ನ ಕಾಲದಲ್ಲಿ ನೀನು ಬೇರೆ ದೇಹವನ್ನು ಧರಿಸಿ ಬೇರೆ ಲೋಕವನ್ನು ಕಾಣುತ್ತಿರುವೆ. ಗಾಢ ನಿದ್ರೆಯಲ್ಲಿ ಯಾವ ದೇಹವೂ ಇಲ್ಲದೆ, ಯಾವ ಲೋಕವೂ ಇಲ್ಲದೆ – ಆದರೂ, ಯಾವದೂ ಇಲ್ಲದಿರುವದನ್ನೇ ಸಾಕ್ಷಿಯಾಗಿ ನೋಡುತ್ತಿರುವೆ. ಇದರಿಂದಾಗಿ ಏನು ಗೊತ್ತಾಗುತ್ತದೆ? ನಿಜವಾದ "ನೀನು" ಈ ಲೋಕವನ್ನು ನೋಡುವ ಈ ದೇಹವಲ್ಲ, ಸ್ವಪ್ನ ಲೋಕವನ್ನು ನೋಡುವ ಮನಸ್ಸಲ್ಲ, ಇದೆಲ್ಲಕ್ಕಿಂತಲೂ ಪ್ರತ್ಯೇಕವಾದ ಬೇರೆ ಏನೋ ಎಂದು ಈಗ ನಿನಗನಿಸುವದಿಲ್ಲವೆ ?

ರಮೆ:– ಏನೋ ತಲೆ ಕೆಟ್ಟಂತೆ ಆಗುತ್ತಿದೆ. ಹಾಗಾದರೆ ಈ ದೇಹ, ಈ ಲೋಕ ಇವೆಲ್ಲ ಸುಳ್ಳು ಎನ್ನುತ್ತೀರಾ ? ಇದೆಂತಹ ಮಾತು ಅಂತ ? ಚೆನ್ನಾಗಿ ಮಾತಾಡಲು ಬರುತ್ತದೆ ಅಂತ ಹೀಗೆಲ್ಲ ವಾದ ಮಾಡುವದು ಎಷ್ಟು ಸರಿಯೋ ಕಾಣೆ.

ಮುರಳಿ:– ಛೆ, ಛೆ. ವಾದಕ್ಕೋಸ್ಕರ ನಾನು ಇದನ್ನೆಲ್ಲ ಹೇಳುತ್ತಿಲ್ಲ ರಮಾ. ಹೀಗೆ ವಾದ ಮಾಡಿ ನಾನು ನಿನ್ನಿಂದ ಬಯಸುವದಾದರೂ ಏನು ?

ರಮೆ:– ತುಂಬ ಬುದ್ಧಿವಂತರು ಎಂದು ಕರೆಸಿಕೊಳ್ಳಲಿಕ್ಕೆ !

ಮುರಳಿ:– ಛೆ, ಸುಳ್ಳು. ಇಷ್ಟಾಗಿ ಇದು ಯಾವದೂ ನನ್ನ ಸಂಶೋಧನೆಯಲ್ಲ. ನಮ್ಮ ಹಿಂದಿನವರು ಸ್ವಾನುಭವದಿಂದ ಹೇಳಿದುದನ್ನು ಸುಮಾರಾಗಿ ಅರ್ಥ ಮಾಡಿಕೊಂಡು ನನಗೆ ತಿಳಿದಷ್ಟನ್ನು ನಿನಗೆ ಹೇಳುತ್ತಿದ್ದೇನೆ, ಅಷ್ಟೆ.

ರಮೆ:– ಮತ್ತೆ ಈ ದೇಹವೇ ನಾನಲ್ಲ, ಈ ಲೋಕವೇ ಇಲ್ಲ ಎಂದೆಲ್ಲ ಅವರು ಹೇಳಿದರೆ ಅದನ್ನು ನಾವು ನಂಬುವದು ಹೇಗೆ ? ನಂಬುವದು ಏಕೆ ? ಅಂತ.

ಮುರಳಿ:– ಏಕೆ, ಹೇಗೆಗಳು ದೊಡ್ಡ ಪ್ರಶ್ನೆಗಳು. ಅವನ್ನೆಲ್ಲ ಸ್ವಲ್ಪ ಸ್ವಲ್ಪ ಈ ಹಿಂದೆ ಹೇಳಿದ್ದೇನೆ. ಈ ಲೋಕ ನಮ್ಮನ್ನು ದಿಗ್ಭ್ರಮೆಗೊಳಿಸುತ್ತದೆ. ಇದು ಏಕೆ ಹೀಗಿದೆ ? ಹೇಗೆ ಹೀಗಾಗಿದೆ ? ಎಂಬದರ ಕುರಿತು ಮಾನವ ಸದಾ ಚಿಂತಿಸಿಕೊಂಡು ಬಂದಿದ್ದಾನೆ. ಮಾನವನಿಗೆ ಏಕೆ ಕಷ್ಟ ಬರುತ್ತದೆ, ಅವನು ಸುಖ ಹೆಚ್ಚಿಸಿಕೊಳ್ಳುವದು ಹೇಗೆ ಎಂಬದಕ್ಕೆ ಉತ್ತರ ಹುಡುಕಲು ಮಾನವನು ತಲೆತಲಾಂತರಗಳಿಂದ ಪ್ರಯತ್ನಿಸುತ್ತಾ ಬಂದಿದ್ದಾನೆ. ಕಲೆಗಳು, ವಿಜ್ಞಾನ,

ವೃತ್ತಿ ಮೊದಲಾದ ನೂರು ವಿಧಗಳಲ್ಲಿ ಅವನು ಆಳವಾದ ಸಂಶೋಧನೆ ಮಾಡಿ ಸುಖವನ್ನು ಹುಡುಕಿದ್ದಾನೆ. ಆದರೆ, ಇದನ್ನೆಲ್ಲ ಮಾಡುವದು ಯಾರಿಗಾಗಿಯೋ, ಆ ನಾನು ಯಾರು ಎಂಬದನ್ನು ತಿಳಿದುಕೊಳ್ಳಲು ಮರೆತಿರುವದರಿಂದಾಗಿ, ಸುಖ ಹುಡುಕುವ ಅವನ ಈ ವಿಶಿಷ್ಟ ಪ್ರಯತ್ನಗಳ ತಳಪಾಯವೇ ಇಲ್ಲದಂತಾಗಿದ್ದು ಅವನು ಆದಿ ಮಾನವನಷ್ಟೇ ಇಂದಿಗೂ ದುಃಖಿಯಾಗಿದ್ದಾನೆ.

ಇದಕ್ಕೆಲ್ಲ ಸರಿಯಾದ ಉತ್ತರವನ್ನು ಕಂಡು ಹಿಡಿದವರು, ಹಾಗೆ ಬದುಕಿ ತೋರಿಸಿದವರು ಭಾರತದ ಋಷಿಗಳು ಮತ್ತು ಅವರ ಪರಂಪರೆಯಲ್ಲಿ ಈ ವರೆಗೂ ನಡೆದು ಬಂದಿರುವ ಸಾವಿರಾರು ಆತ್ಮಜ್ಞಾನಿಗಳು. ನಿಜವಾದ ನಾನು ಯಾರೋ, ನಾನು ಅದಾಗಿ ಬದುಕಿದರೆ ನನಗೆ ದುಃಖವಿಲ್ಲ, ತಾಪವಿಲ್ಲ, ಹುಟ್ಟಿಲ್ಲ, ಸಾವಿಲ್ಲ ಎಂಬದನ್ನು ಅವರು ಕಂಡುಕೊಂಡು ಬದುಕಿ ತೋರಿಸಿದ್ದಾರೆ. ಈ ದೇಹವೇ ನಾನು ಎಂಬ ಭ್ರಮೆಗೆ ನಾವು ಸಿಕ್ಕಿಕೊಂಡಾಗ, ಈ ಮನಸ್ಸಿನ ವಿಕಾರಗಳೆಲ್ಲವೂ ನನ್ನದೇ ವಿಕಾರಗಳು ಎಂದು ನಾವು ಭ್ರಮಿಸಬೇಕಾಗಿ ಬಂದು ನಾವು ಈ ದುಃಖಗಳೂ ನಮಗೇ ಬಂದಿರುವದು ಎಂದು ಅನಿವಾರ್ಯವಾಗಿ ಭಾವಿಸಿಕೊಂಡು ಆ ದುಃಖದ ನಿವಾರಣೆಗಾಗಿ, ಸುಖದ ಸಾಧನೆಗಾಗಿ, ಜೀವನವಿಡೀ ತೊಳಲುತ್ತೇವೆ. ಹಲವು ಜೀವನಗಳನ್ನೆತ್ತಿ ತೊಳಲುತ್ತೇವೆ. ನಾನು ಈ ದೇಹವೂ ಅಲ್ಲ, ಈ ಮನಸ್ಸೂ ಅಲ್ಲ. ಈ ದೇಹವಂತೂ ಕೇವಲ ಜಡ ವಸ್ತು. ಮನಸ್ಸು ಸ್ವತಂತ್ರವಾದ ಅಸ್ತಿತ್ವವನ್ನು ಪಡೆದಿಲ್ಲ. ಆತ್ಮನ ಮೇಲೆ ಮಾಯೆ ಬೀರಿರುವ ಒಂದು ಛಾಯೆ ಮಾತ್ರ ಅದು. ಮಾಯೆ ಅಥವಾ ಪ್ರಕೃತಿಯ ನಿಯಮಕ್ಕನುಗುಣವಾಗಿ ಮನಸ್ಸಿನ ಬೀಜವಾದ ಅಹಂ (ನಾನು) ಎಂಬ ತತ್ವವು ತಾನು ಏನೂ ಅಲ್ಲದಿದ್ದರೂ ಆತ್ಮನಿಂದ ಚೈತನ್ಯವನ್ನು ಪಡೆದು ತಾನೊಂದು ಪ್ರತ್ಯೇಕವಾದ ಅಸ್ತಿತ್ವ ಪಡೆದಿರುವಂತೆ ಭಾವಿಸಿಕೊಂಡು ಈ ದೇಹವನ್ನೂ ಈ ಲೋಕವನ್ನೂ ಸೃಷ್ಟಿಸಿಕೊಂಡು ........

ರಮೆ:– ಈ ಲೋಕವನ್ನೂ ಸೃಷ್ಟಿಸುವದೆ ? ಅಂದರೆ ನಮ್ಮ ಮನಸ್ಸು ಈ ಲೋಕವನ್ನು ಸೃಷ್ಟಿಸಿರುವದೆ ?

ಮುರಳಿ:– ಒಂದು ವಿಧದಲ್ಲಿ ಹೌದು. ಈ ಲೋಕವು ನನಗೆ ಹೇಗೆ ಹೇಗೆ ಇದೆಯೆಂದು ಕಾಣಿಸುತ್ತಿದೆಯೋ ಅದನ್ನು ಹಾಗೆ ಹಾಗೆ ಸೃಷ್ಟಿಸಿಕೊಂಡಿರುವದು ನನ್ನ ಮನಸ್ಸು.

ರಮೆ:– ಛೀ. ಇದೇನು ಹೇಳುತ್ತಿದ್ದೀರಿ ಅಂತ ?

ಮುರಳಿ:– ಸ್ವಲ್ಪ ಯೋಚನೆ ಮಾಡಿ ನೋಡು. ನೀನೂ ಹಾಗೆಯೇ ಹೇಳುವೆ.

ರಮೆ:– ಯೋಚನೆ ಮಾಡಿಸಿ, ನೋಡೋಣ.

ಮುರಳಿ:– ಈಗ ನೋಡು. ನೀನು ಈ ಲೋಕವನ್ನು ಕಾಣುತ್ತಿರುವದು ನಿನ್ನ ಕಣ್ಣುಗಳ ಮೂಲಕ. ಅಲ್ಲವೆ ?

ರಮೆ:– ಹೌದು.

ಮುರಳಿ:– ಆ ಕಣ್ಣುಗಳನ್ನು ಮುಚ್ಚಿಕೊಂಡರೆ ನಿನಗೆ ಈ ಲೋಕ ಕಾಣಿಸುತ್ತದೆಯೆ ?

ರಮೆ:– ಇಲ್ಲ.

ಮುರಳಿ:– ಹಾಗಿದ್ದರೆ ಈ ಲೋಕ ಹೀಗೆಯೇ ಇದೆ ಎಂದು ಕುರುಡ ಹೇಗೆ ಹೇಳಬಲ್ಲ ?

ರಮೆ:– ಅವನು ಕುರುಡನಾದರೆ, ಕಣ್ಣಿರುವ ಇತರರು ಹೇಳುತ್ತಾರಲ್ಲ ?

ಮುರಳಿ:– ಆ ಇತರರೂ ಅವನ ಕಲ್ಪನಾ ಲೋಕದ ಭಾಗಗಳು. ಅವರನ್ನೂ ಅವನು ನೋಡಿಲ್ಲವಷ್ಟೆ ?

ರಮೆ:– ನೋಡದೆ ಹೋದರೂ ಅವರ ಮಾತಿನಿಂದ, ಮುಟ್ಟುವದರಿಂದ ಅವರಿದ್ದಾರೆಂದು ಅವನಿಗೆ ತಿಳಿಯುತ್ತದೆ ತಾನೆ ?

ಮುರಳಿ:– ಅಂದರೆ ನಾನು ಈ ಲೋಕವನ್ನು ನನ್ನ ಕಣ್ಣುಗಳಿಂದ ನೋಡುವದರ ಮೂಲಕ, ಕಿವಿಯಿಂದ ಕೇಳುವದರ ಮೂಲಕ, ಮೂಗಿನಿಂದ ಮೂಸಿ, ನಾಲಗೆಯಿಂದ ರುಚಿ ನೋಡಿ, ಚರ್ಮದಿಂದ ಸ್ಪರ್ಶಿಸಿ ತಿಳಿದುಕೊಂಡಿದ್ದೇನೆ. ನನ್ನಲ್ಲಿ ಈ ಐದು ಇಂದ್ರಿಯಗಳೂ ಕೆಲಸ ಮಾಡುವದಿಲ್ಲ ಎಂದಿಟ್ಟುಕೊ. ಆಗ ನನಗೆ ಈ ಲೋಕದ ಯಾವದೇ ಅನುಭವವಾಗಲು ಸಾಧ್ಯವಿಲ್ಲ. ಆಗ ನಾನು ಹೇಗೆ ನಂಬಬೇಕು, ಈ ಲೋಕ ಹೀಗೆಯೇ ಇದೆ ಎಂದು ? ಅಂದರೆ, ನನ್ನ ಮನಸ್ಸು ಈ ದೇಹದಲ್ಲಿ ಸೃಷ್ಟಿಸಿಕೊಂಡಿರುವ ಈ ಇಂದ್ರಿಯಗಳ ಮೂಲಕ ನೋಡಿದರೆ ಈ ಲೋಕ ಹೀಗೆ ಕಾಣಿಸುತ್ತದೆ ಎಂದಷ್ಟೇ ಹೇಳಬಹುದು. ಭೂತಗನ್ನಡಿಯಲ್ಲಿ ನೋಡಿದರೆ ವಸ್ತುಗಳು ದೊಡ್ಡದಾಗಿ ಕಾಣಿಸುತ್ತವೆ. ಬಣ್ಣದ ಕನ್ನಡಕದ ಮೂಲಕ ನೋಡಿದರೆ ಬೇರೆ ಬಣ್ಣದ್ದಾಗಿ ಕಾಣಿಸುತ್ತವೆ. ನಮ್ಮ ಕಣ್ಣಿಗೆ ಏಳು ಬಣ್ಣ ಕಾಣಿಸುತ್ತದೆ. ಕೆಲವು ಪ್ರಾಣಿಗಳ ಕಣ್ಣಿಗೆ ಎರಡೇ ಬಣ್ಣ ಕಾಣಿಸುವದಂತೆ. ಆಗ ಈ ಲೋಕದಲ್ಲಿ ನಿಜವಾಗಿ ಇರುವ ಬಣ್ಣ ಎಷ್ಟು ? ಏಳೊ, ಎರಡೊ ? ನಮ್ಮ ಕಣ್ಣುಗಳೇ ಸತ್ಯಕ್ಕೆ ಪ್ರಮಾಣ ಎಂದು ನಾವು ಭ್ರಮಿಸಿಕೊಂಡಿದ್ದೇವೆ, ಅಷ್ಟೆ. ಮದ್ಯಪಾನ ಮಾಡಿದವನಿಗೆ ಈ ಲೋಕ ಕಾಣುವ ರೀತಿಯೇ ಬೇರೆ. ನಾವು ಹುಚ್ಚ ಎಂದು ಯಾರನ್ನು ಕರೆಯುತ್ತೇವೋ ಅವನಿಗೆ ಇದು ಕಾಣಿಸುವ ರೂಪವೇ ಬೇರೆ. ಇದರಲ್ಲಿ ಯಾವದು ಪ್ರಮಾಣ ?

ರಮೆ:– ಹೆಚ್ಚಿನವರಿಗೆ ಕಾಣಿಸುವದೇ ಪ್ರಮಾಣ.

ಮುರಳಿ:– ಹುಚ್ಚರ ಆಸ್ಪತ್ರೆಯಲ್ಲಿ ಯಾವದು ಪ್ರಮಾಣ ? ಹೆಚ್ಚಿನವರು ಎನ್ನುವದು ಕೂಡ ನನ್ನ ಕಣ್ಣುಗಳ ಮತ್ತು ಇತರ ಇಂದ್ರಿಯಗಳ ಹೇಳಿಕೆ, ಅಷ್ಟೆ. ಇಲ್ಲವಾಗಿದ್ದರೆ, ನಾನು ಸ್ವಪ್ನ ನೋಡುತ್ತಿರುವಾಗ ನಾನಂತೂ ಇದ್ದೆ. ಈ "ಹೆಚ್ಚಿನವರು" ಆಗ ಎಲ್ಲಿ ಹೋಗಿದ್ದರು ? ನಾನು ನಿದ್ರೆ ಮಾಡುವಾಗಲೂ ನಾನು ಇದ್ದೆ. ಇವರೆಲ್ಲ ಎಲ್ಲಿ ಹೋಗಿದ್ದರು ?

ರಮೆ:– ಅವರೆಲ್ಲ ಇದ್ದರು, ನಿಮಗೆ ನಿದ್ರೆಯಿಂದಾಗಿ ಕಾಣಿಸಲಿಲ್ಲ, ಅಷ್ಟೆ.

ಮುರಳಿ:– ನಿದ್ರೆಯಿಂದಾಗಿ ಎಂದರೆ, ನಾನು ಈ ಕಣ್ಣುಗಳನ್ನು ಬಳಸಲಿಲ್ಲವಾದುದರಿಂದ ಎಂದರ್ಥ. ಇದರಿಂದ, ಈ ಕಣ್ಣುಗಳ ಮೂಲಕ ನಾನು ನೋಡಿದರೆ ಮಾತ್ರ ಇವರೆಲ್ಲ ಕಾಣಿಸುತ್ತಾರೆ, ಇಲ್ಲವಾದರೆ ಇವರು ನನಗೆ ಕಾಣಿಸುವದಿಲ್ಲ ಎಂದರ್ಥ. ಅಂದರೆ ನಿಜವಾದ ನಾನು ಯಾರೋ ಆ ನಾನು ಈ ಮನಸ್ಸಿನ ಮೂಲಕ ಈ ದೇಹದ ಕಣ್ಣುಗಳನ್ನು ಉಂಟುಮಾಡಿಕೊಂಡು ನೋಡಿದರೆ ಇವರೆಲ್ಲ, ಇದೆಲ್ಲ ಕಾಣಿಸುತ್ತದೆ ; ಈ ಮನಸ್ಸು, ಈ ದೇಹದ ಕಣ್ಣುಗಳನ್ನು ಬಳಸದಿದ್ದರೆ ನಾನು ಇರುತ್ತೇನೆಯೋ ಹೊರತು, ಈ ಯಾರೂ, ಈ ಯಾವದೂ ಇರುವದಿಲ್ಲ ಎಂದಂತಾಯಿತು.

ರಮೆ:– ಏನು ಹೇಳುತ್ತಿದ್ದೀರೋ ಏನೋ. ಇದೆಲ್ಲ ಇಲ್ಲವೇ ಇಲ್ಲವೊ ? ಇದೆಲ್ಲ ಭೂತಗಳು ಕುಣಿಯುವದೊ ಹಾಗಾದರೆ ?

ಮುರಳಿ:– ಇಲ್ಲ ಎಂದರೆ ಹೀಗೆ. ನಮ್ಮವರು ಇದನ್ನು ಹೀಗೆ ವಿವರಿಸಿದ್ದಾರೆ. ಕತ್ತಲು ಮೂಲೆಯಲ್ಲಿ ಒಂದು ಹಗ್ಗ ಬಿದ್ದಿದೆ. ನನಗದು ಹಾವಿನಂತೆ ಕಾಣಿಸುತ್ತದೆ. ಆದರೆ ನಿಜವಾಗಿ ಅದು ಹಗ್ಗ. ನನ್ನ ಅಜ್ಞಾನದಿಂದ ನಾನದನ್ನು ಹಾವು ಎಂದು ತಿಳಿದುಕೊಂಡಿದ್ದೇನೆ. ಇನ್ನೊಂದು ಉದಾಹರಣೆ. ಚಲನಚಿತ್ರ ನಡೆಯುತ್ತಿರುತ್ತದೆ. ನಾವು ಅದರಲ್ಲಿ ತನ್ಮಯರಾಗಿದ್ದೇವೆ. ಆದರೆ ಆ ಚಲನಚಿತ್ರಕ್ಕೆ ಮೂಲ ಆಧಾರವಾದ, ಚಿತ್ರ ರಹಿತವಾದ ಆ ಶುಭ್ರ ಬಟ್ಟೆಯ ಪಟವನ್ನು ನಾವು ಗುರುತಿಸುವದೇ ಇಲ್ಲ. ಆ ಬಿಳಿ ಬಟ್ಟೆಯ ಪಟ ಇಲ್ಲದಿದ್ದರೆ ಚಲನಚಿತ್ರವೇ ಇಲ್ಲ. ಆದರೂ ನಾವು ಅನುಭವಿಸುವದು ಬದಲಾಗುತ್ತಿರುವ ಚಿತ್ರಗಳನ್ನೇ ಹೊರತು, ಅದರ ಮೂಲವಾದ ಪಟವನ್ನಲ್ಲ. ಚಿನ್ನದ ವಿವಿಧ ಆಭರಣಗಳಲ್ಲೆಲ್ಲ ಮೂಲ ಹೇಗೆ ಚಿನ್ನ ಮಾತ್ರವೋ, ಈ ಲೋಕದ ವಿವಿಧ ಆಕೃತಿಗಳ ಮೂಲವೆಲ್ಲ ಒಂದೇ ಬ್ರಹ್ಮವಸ್ತು ಎಂದರು. ನಿಜವಾದ ನಾನು ಯಾವ ಬ್ರಹ್ಮವಸ್ತುವೋ, ಈ ಲೋಕವೆಲ್ಲವೂ ನಿಜವಾಗಿ ಅದೇ ಬ್ರಹ್ಮವಸ್ತು. ಆದರೆ ನಾನು ನನ್ನನ್ನು ಅಂತಹ ಬ್ರಹ್ಮವಸ್ತು ಎಂದು ತಿಳಿದುಕೊಳ್ಳದೆ ಈ ಬದಲಾಗುತ್ತಿರುವ ಮನಸ್ಸಿನ ಲಕ್ಷಣವೇ

ನನ್ನ ಲಕ್ಷಣ ಎಂದೂ, ಬದಲಾಗುವ ಈ ದೇಹವೇ ನಾನೆಂದೂ ಭ್ರಮಿಸಿರುವದರಿಂದ ಈ ಲೋಕವೂ ಬದಲಾಗುತ್ತಿರುವದನ್ನು, ಈ ದೇಹವು ಲೋಕದಿಂದ ಪ್ರತ್ಯೇಕವಾಗಿರುವದನ್ನು ಅನುಭವಿಸುತ್ತಿರುವದು.

ರಮೆ:– ಹಾಗಿದ್ದರೆ ಅಹಂ ಬ್ರಹ್ಮಾಸ್ಮಿ, ಅಥವಾ ನಾನೇ ಪರಬ್ರಹ್ಮ ಎನ್ನುವ ಅಹಂಕಾರ ಭರಿತ ಹೇಳಿಕೆಯನ್ನು ಒಪ್ಪುತ್ತೀರಿ?

ಮುರಳಿ:– ಅದರ ಕುರಿತಾಗಿ ಎಲ್ಲ ಅಷ್ಟು ಲಘುವಾಗಿ ಮಾತನಾಡುವದು ಸರಿಯಲ್ಲ ರಮಾ. ಆ ಸ್ಥಿತಿಯನ್ನು ಅನುಭವಿಸುವದು ಹಾಗಿರಲಿ, ಆ ವಾಕ್ಯಗಳ ಅರ್ಥವೇನೆಂದು ತಿಳಿದುಕೊಳ್ಳಲಿಕ್ಕೇ ಸಾಕಷ್ಟು ಅರ್ಹತೆ ಬೇಕಾಗುತ್ತದೆ. ಅಹಂ ಬ್ರಹ್ಮಾಸ್ಮಿ ಎಂಬದು ಅಹಂಕಾರ ಭರಿತವಾದ ಘೋಷಣೆಯಲ್ಲ, ಅಹಂಕಾರ ನಾಶವಾಗಿರುವದರ ದ್ಯೋತಕ. ನಾನೇ ಬ್ರಹ್ಮವಸ್ತು ಎಂದರೆ, ಯಾರನ್ನು ನಾನು, ನಾನು ಎಂದು ಕರೆದುಕೊಂಡು ನಾನು ಪ್ರತ್ಯೇಕತೆಯನ್ನು ಅನುಭವಿಸುತ್ತಿದ್ದೆನೋ ಅಂತಹ ನಾನು ಎಂಬ ಪ್ರತ್ಯೇಕ ವಸ್ತು ಇಲ್ಲದೆ ಈ ನಾನು ಎಂಬದು ಕೂಡ ಬ್ರಹ್ಮವಸ್ತುವೇ ಆಗಿದೆ ಎಂಬ ಅರ್ಥ. ಹೀಗೆ ಪ್ರತ್ಯೇಕವಾದ ನಾನು ಯಾವಾಗ ಇಲ್ಲವೋ, ಆ "ನಾನು"ವಿಗೆ ಸಂಬಂಧಿಸಿದಂತೆ ಮಾತ್ರ ಇರಬಹುದಾದ ನೀನು, ಅವನು, ಅದು ಎಂಬ ಬೇರೆ ಯಾವದು ಕೂಡ ಇಲ್ಲದೆ ನಾನೂ ಸೇರಿದಂತೆ ಇರುವದೆಲ್ಲವೂ ಬ್ರಹ್ಮವಸ್ತುವೇ ಆಗಿದೆ ಎಂಬ ಅರ್ಥ ಇದೆಲ್ಲವೂ ಬ್ರಹ್ಮವಸ್ತುವೇ ಎಂದು ಹೇಳುವಾಗ, ಹಾಗೆಂದು ಹೇಳುವ ನಾನು ಕೂಡ ಬ್ರಹ್ಮವಸ್ತುವಾಗಿರಬಹುದೇ ಹೊರತು, ಬ್ರಹ್ಮದಿಂದ ಹೊರತಾದ ನಾನು ಒಂದು ಪ್ರತ್ಯೇಕ ಅಸ್ತಿತ್ವವನ್ನು ಪಡೆದಿಲ್ಲ ಎಂಬ ಅರ್ಥ. ಇದು ಅಹಂಕಾರದ ಮಾತಲ್ಲ, ನಾನು ಎಂಬ ಅಹಂಕಾರ ಸಂಪೂರ್ಣವಾಗಿ ನಾಶವಾಗಿರುವದರ ದ್ಯೋತಕ.

ರಮೆ:– ಹಾಗಾದರೆ ನಾನು ಬೇರೆ, ದೇವರು ಬೇರೆ; ನಾನು ದೇವರಲ್ಲಿ ಭಕ್ತಿಯನ್ನಿಡಬೇಕು; ದೇವರು ನನಗೆ ಮುಕ್ತಿಯನ್ನು ಅನುಗ್ರಹಿಸುತ್ತಾನೆ ಎಂಬದೆಲ್ಲ ಸುಳ್ಳು.

ಮುರಳಿ:– ಸುಳ್ಳಲ್ಲ, ನಾನು ಬೇರೆ, ದೇವರು ಬೇರೆ ಎಂದು ತಿಳಿದು ದೇವರಲ್ಲಿ ಭಕ್ತಿಯನ್ನಿಡುವದರ ಅಂತಿಮ ಗುರಿ ಏನು? ದೇವರು ಸರ್ವೋತ್ತಮ. ನಾನು ಅವನ ಕಿಂಕರ. ನನ್ನ ಸುಖ, ದುಃಖಗಳೆಲ್ಲವೂ ದೇವರಿಗೆ ಸೇರಿದುದು ಎಂಬ ಅನನ್ಯ ಶರಣಾಗತಿ ಎಂದರೇನು? ಏನನ್ನು ಶರಣುಗೊಳಿಸುವದು? ನಾನು ಎಂಬ ಪ್ರತ್ಯೇಕತಾಭಾವವನ್ನು ಭಗವಂತನಿಗೆ ಅರ್ಪಿಸುವದು. ಅಂದರೆ ನಮ್ಮ ಅಹಂಕಾರಕ್ಕೆ ಮಾನ್ಯತೆ ಕೊಡದೆ ಅದನ್ನು ಭಗವಂತನಿಗೆ ಅರ್ಪಿಸುವದು ಅಥವಾ ಅವನಲ್ಲಿ ಲಯಗೊಳಿಸುವದು. ಪರಿಣಾಮ ಎರಡೂ ಒಂದೇ ಅಲ್ಲವೆ? ಅಹಂ

ಕಾರದ ನಾಶವೇ ಮುಕ್ತಿ. ಅದೇ ಜ್ಞಾನ. ನಾನೆಂಬ ಪ್ರತ್ಯೇಕ ವಸ್ತುವೇ ಇಲ್ಲ. ನಾನೂ ಸೇರಿದಂತೆ ಎಲ್ಲವೂ ಬ್ರಹ್ಮವಸ್ತುವೇ ಎಂಬದು ವಿಚಾರ ಮಾರ್ಗ. ಅದರ ಗುರಿ ಆತ್ಮಜ್ಞಾನ ಅಥವಾ ಬ್ರಹ್ಮಜ್ಞಾನ. ನಾನು ಎಂಬ ಪ್ರತ್ಯೇಕ ವಸ್ತುವನ್ನು ಭಗವಂತ ಎಂಬ ಪರಬ್ರಹ್ಮದಲ್ಲಿ ಸಂಪೂರ್ಣವಾಗಿ ಲಯಗೊಳಿಸಿ ನಾನು ನನ್ನೊಳಗೆ ಪರಿಪೂರ್ಣವಾಗಿ ಭಗವಂತನ ಧ್ಯಾನವನ್ನು – ಅರ್ಥಾತ್ ಭಗವತ್ಸ್ವರೂಪವನ್ನು ತುಂಬಿಕೊಳ್ಳುವದು. ಅರ್ಥಾತ್ ಪ್ರತ್ಯೇಕವಾದ ಈ "ನಾನು" ಎಲ್ಲವೂ ಭಗವತ್ ಸ್ವರೂಪವಾಗಿ ಮಾರ್ಪಡುವದು ಎಂಬದು ಭಕ್ತಿ ಮಾರ್ಗ. ಭಗವತ್ ಸಾಕ್ಷಾತ್ಕಾರ ಅಥವಾ ಮುಕ್ತಿ ಇದರ ಗುರಿ. ಮಾರ್ಗಗಳು ಬೇರೆ ಬೇರೆ. ಗುರಿ ಎರಡರದೂ ಒಂದೆ ಇಲ್ಲವೆ ?

ರಮೆ:– ತಲೆ ಎಲ್ಲ ಚಿಟ್ಟುಹಿಡಿದುಹೋದಂತಾಗಿದೆ. ಈ ವಿಚಾರದಲ್ಲಿ ಇನ್ನು ಏನಾದರೂ ಇದ್ದರೆ ನಾಳೆ ಮಾತನಾಡೋಣ. ಈಗ ದಯವಿಟ್ಟು ಕತೆ ಮುಂದುವರಿಸಿ. ಈ ವಿಚಾರದ ಒಂದು ಶಬ್ದ ಕೂಡ ಈಗ ಬೇಡ. ತಲೆ ಎಲ್ಲ ಕೆಟ್ಟುಹೋಗಿದೆ. ದಯವಿಟ್ಟು.

ಮುರಳಿ:– ಹುಚ್ಚನು ಒಮ್ಮಿಂದೊಮ್ಮೆಗೇ ಸರಿಬುದ್ಧಿಯವನಾಗಿಬಿಟ್ಟರೆ ಹೀಗೆ ಈ ಲೋಕವನ್ನೆಲ್ಲ ನೋಡಿ ದಿಙ್ಮೂಢನಾಗಿ ತಲೆ ಚಿಟ್ಟು ಹಿಡಿದಂತೆ ನಿಲ್ಲುವ ಸಾಧ್ಯತೆ ಇದೆ. ಈ ದೇಹವೇ ನಾನು; ಈ ಲೋಕವೆಲ್ಲ ಹೀಗೆ ಕಾಣಿಸುತ್ತಿರುವದೇ ಸತ್ಯ ಎಂದು ಜನ್ಮಾಂತರಗಳಿಂದ ನಾವು ನಂಬಿಕೊಂಡು ಬಂದಿರುವ ದೃಢ ಭಾವನೆಯು ಬುಡದಿಂದಲೇ ಅಲ್ಲಾಡಿಸಲ್ಪಟ್ಟು ನಾನು ಈ ದೇಹವಲ್ಲ; ಈ ಲೋಕ ನಮಗೆ ಕಾಣಿಸುತ್ತಿರುವಂತೆ ಇರುವದು ನಿಜವಲ್ಲ; ನಾನು ಇದೆಲ್ಲವೂ ಹೌದು; ಎಂದು ಮುಂತಾಗಿ ಹೇಳಲ್ಪಟ್ಟಾಗ ದಿಗ್ಭ್ರಮೆಯಾದಂತಾಗುವದು ಸಹಜವೇ.

ರಮೆ:– ಅಯ್ಯೋ ನಿಮ್ಮ ದಮ್ಮಯ್ಯ. ದಯವಿಟ್ಟು ಕತೆ ಮುಂದುವರಿಸಿ.

ಮುರಳಿ:– ಆಗಲಿ. ದಿಗ್ಭ್ರಮೆಯನ್ನು ಇಲ್ಲಿಯೇ ಬಿಟ್ಟು ನನ್ನೊಡನೆ ದ್ವಾಪರಕ್ಕೆ ಬಾ. ಏಳು. ಪಾಂಡವರು ಕಾಡಿನಲ್ಲಿ ಕಾಲಕಳೆಯುತ್ತಿದ್ದರು. ಲೋಕೋತ್ತರರಾದ ವೀರರು ತಮಗೆ ನ್ಯಾಯಬದ್ಧವಾಗಿ ಸಲ್ಲಬೇಕಾಗಿದ್ದ ರಾಜ್ಯವನ್ನು ವಂಚನೆಗೆ ಗುರಿಯಾಗಿ ಕಳೆದುಕೊಂಡು, ಬಂಧು ಬಾಂಧವರು ಸ್ನೇಹಿತರು, ಆಶ್ರಿತರು – ಇವರ ಸಮಕ್ಷಮದಲ್ಲಿ ಕ್ರೂರವಾಗಿ ಅವಮಾನಿಸಲ್ಪಟ್ಟು ಈಗ ನಿರ್ಗತಿಕರಂತೆ ಕಾಡಿನಲ್ಲಿ ಅಲೆಯುತ್ತಿದ್ದರು. ಒಮ್ಮೆ ದ್ರೌಪದಿಗೆ ಹಳೆಯ ನೆನಪುಗಳೆಲ್ಲ ಬಂದು ಅವಳು ತನ್ನ ಗಂಡಂದಿರಲ್ಲಿ ತಮ್ಮ ಈ ದುರವಸ್ಥೆಯ ಮೂಲವನ್ನೂ, ತಮ್ಮ ಈಗಿನ ಸ್ಥಿತಿಯನ್ನೂ, ಮುಂದಿನ ಭವಿಷ್ಯವನ್ನೂ ಕುರಿತು ತನ್ನ ಮನದ ಅಳಲನ್ನು ತೋಡಿಕೊಂಡಳು. ಯುಧಿಷ್ಠಿರನು ತನ್ನ ಸ್ವಭಾವಕ್ಕೆ ತಕ್ಕಂತೆ ಸಮಾಧಾನದ

ಮಾತನ್ನಾಡಿದನು. ಭೀಮನು ಈ ಸಂದರ್ಭದಲ್ಲಿ ಆಡಿದ ಮಾತು ಅವನ ವ್ಯಕ್ತಿತ್ವಕ್ಕೆ ಹಿಡಿದ ಶುದ್ಧವಾದ ಕನ್ನಡಿಯಂತಿದೆ. ಅವನು ಅಣ್ಣನಿಗೆ ಹೀಗೆ ಹೇಳಿದನು:–

"ಅಣ್ಣಾ, ಪುರುಷನು ಕ್ರಮವಾಗಿ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಅನುಭವಿಸಬೇಕು. ಅರ್ಥ, ಕಾಮಗಳನ್ನು ಅನುಭವಿಸಲು ರಾಜ್ಯ ಸಂಪತ್ತು ಅವಶ್ಯ. ಇಂತಹ ನಮ್ಮ ಹಕ್ಕಾದ ಸಂಪತ್ತನ್ನು ದುರ್ಯೋಧನನು ಕುಹಕದಿಂದ ಕಸಿದುಕೊಂಡನೇ ಹೊರತು, ಪರಾಕ್ರಮದಿಂದ ಪಡೆದುಕೊಳ್ಳಲಿಲ್ಲ. ಅವನ ಕುಹಕಕ್ಕೆ ಬಲಿಯಾಗಿ ಕಾಡನ್ನು ಸೇರಿರುವದರಿಂದ ನಾವು ಪೌರುಷ ಹೀನರಾದ ಕ್ಷತ್ರಿಯರೆಂದು ಹಳಿಯಲ್ಪಡುವದು ಖಂಡಿತ. ಕ್ಷತ್ರಿಯನಿಗೆ ಪರಾಕ್ರಮವೇ ಸಂಪತ್ತು. ಈ ಸಂಪತ್ತಿನಿಂದ ನಾವು ಸ್ವಭಾವಸಹಜವಾಗಿ ಏನೂ ವಂಚಿತರಾಗಿಲ್ಲ. ನಾನು ಮತ್ತು ಅರ್ಜುನನು ಬದುಕಿರುವಾಗಲೇ ಆ ದುಷ್ಟರು ನಿನ್ನಿಂದ, ರಾಜ್ಯವನ್ನು ಕಸಿದುಕೊಂಡಿರುವಾಗ ನಮ್ಮ ಈ ಬದುಕು ಒಂದು ಬದುಕೆನಿಸುತ್ತದೆಯೆ ?

"ಅಣ್ಣಾ, ನ್ಯಾಯಬದ್ಧವಲ್ಲದ ಈ ವನವಾಸವನ್ನು ನಾನು ಖಂಡಿತ ಒಪ್ಪಲಾರೆ. ಕಾರ್ಯೋನ್ಮುಖನಾಗಲು ಅಸಮರ್ಥನಾದ ರಾಜನು ಇಂತಹ ವೈರಾಗ್ಯ ಜೀವನವನ್ನು ಅವಲಂಬಿಸುವದು ಸಹಜ. ನ್ಯಾಯಬದ್ಧವಾಗಿ ಹೋರಾಡುವದು ನಿಂದ್ಯವೆನಿಸುತ್ತದೆಯೆ ?...............

ರಮೆ:– ವನವಾಸವು ನ್ಯಾಯಬದ್ಧವಲ್ಲವೆಂದೂ, ಕೌರವರೊಂದಿಗೆ ಯುದ್ಧ ಮಾಡಿ ರಾಜ್ಯವನ್ನು ಪಡೆಯುವದು ನ್ಯಾಯಯುತವಾದುದೆಂದೂ ಭೀಮ ಹೇಗೆ ಹೇಳುತ್ತಾನೆ? ಜೂಜಿನಲ್ಲಿ ತಾವು ಸೋತಿರುವದು ನಿಜವಾಗಿರುವಾಗ ಅವರ ವನವಾಸವು ಅವರಿಗೆ ನ್ಯಾಯವಾಗಿಯೇ ಒದಗಿರುವದು ತಾನೆ ?

ಮುರಳಿ:– ದುರ್ಯೋಧನ ದುಷ್ಟ. ಅವನು ದುರ್ಮಾರ್ಗಾವಲಂಬಿ. ಸೋದರರ ಸ್ವತ್ತನ್ನು ಕಪಟದಿಂದ ಅಪಹರಿಸಿದ ಅಯೋಗ್ಯ. ದುಷ್ಟರನ್ನು ಶಿಕ್ಷಿಸುವದು ಕ್ಷತ್ರಿಯರ ಧರ್ಮ. ಅದು ಅವರ ಕರ್ತವ್ಯ. ಅದನ್ನು ಅವರು ಮಾಡದಿದ್ದರೆ ಅವರು ಕರ್ತವ್ಯ ಭ್ರಷ್ಟರಾಗುತ್ತಾರೆ. ಅಲ್ಲದೆ, ಪಾಂಡವರು ತಮ್ಮ ರಾಜ್ಯವನ್ನು ಜೂಜಿನಲ್ಲಿ ಸೋತಿದ್ದಾರೆ, ನಿಜ. ಹಾಗೆ ಒಬ್ಬ ರಾಜನು ತನ್ನ ರಾಜ್ಯವನ್ನು ಇನ್ನೊಬ್ಬ ರಾಜನಿಗೆ ಯುದ್ಧದಲ್ಲಿಯೂ ಸೋಲುತ್ತಾನೆ. ಹಾಗೆಂದ ಮಾತ್ರಕ್ಕೆ ಪುನಃ ಒಮ್ಮೆ ಯುದ್ಧ ಮಾಡಿ ತನ್ನ ರಾಜ್ಯವನ್ನು ಹಿಂದಕ್ಕೆ ಪಡೆಯಬಾರದು ಎಂಬ ನಿಯಮವಿಲ್ಲವಷ್ಟೆ ? ಪರಾಕ್ರಮದ ಮೂಲಕ ಇನ್ನೊಬ್ಬನು ಗಳಿಸಿಕೊಂಡ ತನ್ನ ಸ್ವತ್ತನ್ನೇ ತಾನು ಪುನಃ ಹಿಂದಕ್ಕೆ ಪಡೆಯುವದು ಅಧರ್ಮವಲ್ಲ ಎಂದಾದರೆ, ಮೋಸದಿಂದ ಇನ್ನೊಬ್ಬನು ಅಪಹರಿಸಿದ ತನ್ನ ಸ್ವತ್ತನ್ನು ಪರಾಕ್ರಮ

ದಿಂದ ಹಿಂದೆ ಪಡೆಯುವದು ಹೇಗೆ ಅಧರ್ಮವಾಗುತ್ತದೆ? ಹಾಗೆ ಪಡೆಯದಿರುವದೇ ಕ್ಷತ್ರಿಯನಿಗೆ ಅವಮಾನಕರ ಎನಿಸುತ್ತದೆ. ಭೀಮ ಅದನ್ನೇ ಅಣ್ಣನಿಗೆ ಹೇಳುತ್ತಿದ್ದಾನೆ. ಅವನು ಮುಂದುವರಿದು ಹೇಳುತ್ತಾನೆ:–

"ಅಣ್ಣಾ, ಜೀವನಕ್ಕೆ ಕರ್ಮವೇ ಲಕ್ಷಣ. ಹಾಗಿರುವಾಗ ಅಪಹೃತವಾದ ರಾಜ್ಯವನ್ನು ವೀರತನದಿಂದ ಯುದ್ಧ ಮಾಡಿ ಹಿಂದಕ್ಕೆ ಪಡೆಯುವದು ಕೀರ್ತಿದಾಯಕವೇ ಹೊರತು ನಿಂದ್ಯ ಕಾರ್ಯ ಎನಿಸಲಾರದು. ಧರ್ಮವು ಅರ್ಥವನ್ನೂ, ಅರ್ಥವು ಧರ್ಮವನ್ನೂ ಮೇಘ ಮತ್ತು ಸಮುದ್ರಗಳು ಪರಸ್ಪರರನ್ನು ಆಶ್ರಯಿಸಿರುವಂತೆ ಆಶ್ರಯಿಸಿರುತ್ತವೆ. ನೀನೀಗ ನಡೆಸುತ್ತಿರುವ ಈ ಧರ್ಮವು ಪರೋಪಕಾರಕ್ಕಾಗಿಯೂ ಅಲ್ಲ.

ರಮೆ:– ಭೇಷ್, ಭೇಷ್.

ಮುರಳಿ:– "ಪ್ರಯತ್ನಪೂರ್ವಕವಾಗಿ ರಾಜ್ಯವನ್ನು ಪಡೆಯಲು ಪ್ರಯತ್ನಿಸು. ಇಲ್ಲವೇ ಸರ್ವತ್ಯಾಗರೂಪವಾದ ಮೋಕ್ಷಕ್ಕಾದರೂ ಪ್ರಯತ್ನಿಸು."

ರಮೆ:– ಭೇಷ್, ಭೇಷ್, ಭೇಷ್.

ಮುರಳಿ:– "ನಾವು ಈ ಕಾಡಿನಲ್ಲಿ ಏಕೆ ಹೀಗೆ ನವೆಯುತ್ತಿದ್ದೇವೆ? ಪುನಃ ರಾಜ್ಯವನ್ನು ಪಡೆದೇವು ಎಂಬ ಆಸೆಯಿಂದಾಗಿ ತಾನೆ? ಹಾಗಿದ್ದ ಮೇಲೆ ಈಗಿಂದೀಗಲೇ ರಾಜ್ಯವನ್ನು ಪಡೆಯುವ ಕ್ರಮವನ್ನೇಕೆ ಕೈಗೊಳ್ಳಬಾರದು? ಅಥವಾ ಮೋಕ್ಷವನ್ನೇ ಬಯಸುತ್ತೀಯಾ? ಅದಕ್ಕಾಗಿ ತಪಸ್ಸು ಮಾಡಲಿಕ್ಕಾದರೂ ಈಗಿಂದೀಗಲೇ ಸಂಕಲ್ಪಿಸೋಣ.

ರಮೆ:– ಅದೇ, ಅದೇ. ಅವನೇ ಈಗ ಗಂಡಸು. ಗಂಡಸಾಗಿ ಹುಟ್ಟಿ ಯಾವ ಉದ್ಯೋಗವೂ ಇಲ್ಲದೆ ಕೇವಲ ದನಗಳಂತೆ ಕಾಡಿನಲ್ಲಿ ತಿರುಗುವದನ್ನೇ ಧರ್ಮ, ಕರ್ತವ್ಯ ಎಂದು ಅವನು ಹೇಗೆ ತಾನೆ ಒಪ್ಪಿಯಾನು? ಉದ್ಯೋಗವೇ ಪುರುಷನ ಲಕ್ಷಣ. ಯುದ್ಧ ಮಾಡುವ ಉದ್ಯೋಗಕ್ಕೆ ಮನಸ್ಸು ಒಪ್ಪದಿದ್ದರೆ ತಪಸ್ಸು ಮಾಡುವ ಉದ್ಯೋಗವನ್ನಾದರೂ ಕೈಕೊಳ್ಳೋಣ....ಗಂಡು, ಗಂಡು, ಗಂಡು ನಿಮ್ಮ ಭೀಮ.

ಮುರಳಿ:– ಮತ್ತೂ ಅವನು ಮುಂದುವರಿದು ಹೇಳುತ್ತಾನೆ. "ನಮ್ಮ ಈ ಜೀವನ ಮಾತ್ರ ಹೇಯವಾದುದು. ರಾಜಾ, ಪ್ರಜಾಪಾಲನೆಯೇ ಕ್ಷತ್ರಿಯನ ಧರ್ಮವೆಂದು ಪರಿಗಣಿಸಲ್ಪಟ್ಟಿರುವಾಗ ನೀನು ಆ ಧರ್ಮವನ್ನು ಇಂದು ಕಡೆಗಣಿಸಿದಂತಾಗಿಲ್ಲವೆ? ಇದರಿಂದಾಗಿ ನಿನಗೆ ಅಪಕೀರ್ತಿ ಬರುವದಿಲ್ಲವೆ?

ರಮೆ:– ಆ ಬ್ರಾಹ್ಮಣನಿಗೆ ಇದೆಲ್ಲ ಎಲ್ಲಿ ಮನಸ್ಸಿಗೆ ಹೋಗುತ್ತದೆ?

ಮುರಳಿ:– ಯಾರಿಗೆ ?

ರಮೆ:– ನಿಮ್ಮ ಯುಧಿಷ್ಠಿರನಿಗೆ !

ಮುರಳಿ:– ಹೌದು. ಗುಣದಲ್ಲಿ ಅವನು ಬ್ರಾಹ್ಮಣ ಇರಬೇಕಾದಂತೆಯೇ ಇದ್ದ. ಅವನು ಭೀಮನ ಮಾತುಗಳನ್ನು ಒಪ್ಪದಿರಲು ಸಾಧ್ಯವಿಲ್ಲದಿದ್ದರೂ ತಾನು ತನ್ನ ಮಾತುಗಳಿಗೆ ಕಟ್ಟು ಬಿದ್ದಿರುವದಾಗಿಯೂ ಅದನ್ನು ಮೀರಲು ತನಗೆ ಸಾಧ್ಯವಿಲ್ಲವೆಂದೂ ತಿಳಿಸಿದನು.

ರಮೆ:– ಎಂಥಾ ಮನುಷ್ಯ ಅವನು ಅಂತ ?

ಮುರಳಿ:– ಹಾಗೆನ್ನಬೇಡ. ಅವನ ವ್ಯಕ್ತಿತ್ವದ ದೃಷ್ಟಿಯಿಂದ ಅವನ ನಿಲುವೂ ಸರಿಯೇ. ಇದಕ್ಕೆ ವಿರುದ್ಧವಾಗಿ ಭೀಮ ಹೇಳುವದೂ ಸರಿಯೇ. ಕೇಳು. ಯುಧಿಷ್ಠಿರನ ವರ್ತನೆಯು ತನಗೆ ಎಳ್ಳಷ್ಟೂ ಸರಿದೋರದಿದ್ದರೂ ಕೂಡ ಭೀಮನು ಅಣ್ಣನಿಗೆ ವಿಧೇಯತೆಯನ್ನು ಸಲ್ಲಿಸಿ ಸುಮ್ಮನಿದ್ದನು.

ಹೀಗೆಯೇ ಇರುವಾಗ ಪಾಂಡವರನ್ನು ಕಾಣಲು ಬಂದ ವೇದವ್ಯಾಸರಿಂದ ಉಪದೇಶಿಸಲ್ಪಟ್ಟ ಅರ್ಜುನನು ಇಂದ್ರಕೀಲ ಪರ್ವತಕ್ಕೆ ಹೋಗಿ ಶಿವನನ್ನು ಆರಾಧಿಸಿ ಅವನಿಂದ ಪಾಶುಪತಾಸ್ತ್ರವೇ ಮೊದಲಾದ ಅತ್ಯಮೂಲ್ಯವಾದ ಅಸ್ತ್ರಗಳನ್ನು ಪಡೆದು, ಅಲ್ಲಿಂದ ತನ್ನ ತಂದೆಯಾದ ದೇವೇಂದ್ರನಿಂದ ಆಹ್ವಾನಿಸಲ್ಪಟ್ಟು ದೇವ ಲೋಕಕ್ಕೆ ಹೋಗಿ.......

ರಮೆ:– ರೈಲಿನಲ್ಲಿಯೋ, ಬಸ್ಸಿನಲ್ಲಿಯೊ ?

ಮುರಳಿ:– ವಿಮಾನದಲ್ಲಿ. ದೇವಲೋಕದಲ್ಲಿ ಅವನು ಒಂದು ಧರ್ಮ ಸಂಕಟಕ್ಕೆ ಸಿಕ್ಕಿ ಒಂದು ವರ್ಷ ಕಾಲ ತಾನು ಶಿಖಂಡಿಯಾಗಿ ಮಾರ್ಪಡುವಂತೆ ಊರ್ವಶಿಯಿಂದ ಶಾಪ ಪಡೆದನು. ಹೇಗೂ ಅವನು ಅಲ್ಲಿ ಅಮರಾವತಿಯ ಭೋಗ ಗಳನ್ನು ಅನುಭವಿಸುತ್ತ ಐದು ವರ್ಷಗಳ ಕಾಲವನ್ನು ಕಳೆದನು.

ರಮೆ:– ಯಾಕೆ ? ಆವರ ವನವಾಸ, ಅಜ್ಞಾತವಾಸ ಮುಗಿಯುವವರೆಗೂ ಅವನು ಅಲ್ಲಿಯೇ ಇರಬಹುದಿತ್ತಲ್ಲ ?

ಮುರಳಿ:– ಚೆನ್ನಾಗಿ ಹೇಳಿದೆ. ಅಣ್ಣ ತಮ್ಮಂದಿರನ್ನು, ಪತ್ನಿಯನ್ನು ಕಾಡಿನಲ್ಲಿ ಪರದೇಸಿಗಳಂತೆ ತಿರುಗಲು ಬಿಟ್ಟು ತಾನು ಇಂದ್ರಭೋಗವನ್ನನುಭವಿ ಸುತ್ತ ಇರಲು ಅವನಲ್ಲಿ ಮಾನವೀಯತೆ ಇಲ್ಲವೇನು ?

ರಮೆ:– ಐದು ವರ್ಷಗಳಿಲ್ಲದ ಮಾನವೀಯತೆ ಇನ್ನೊಂದು ಕೆಲವು ವರ್ಷ ಇರದಿದ್ದರೂ ಏನಾಗುತ್ತಿತ್ತು ? ಮಾನವೀಯತೆಯು ವಾಯುದೆ ಜ್ವರದಂತೇನು, ಒಮ್ಮೆ ಇರುವದು, ಒಮ್ಮೆ ಇಲ್ಲದಿರುವದು ಎಲ್ಲ ಆಗುವದಕ್ಕೆ ?

ಮುರಳಿ:- ನಾನು ಭೀಮನ ಕತೆ ಹೇಳುತ್ತಿರುವದು. ಮುಂದೆ ಕೇಳು. ಪಾರ್ಥನ ಈ ದೀರ್ಘ ವಿರಹದಿಂದ ಉಳಿದ ಪಾಂಡವರು ಬಹಳವಾಗಿ ಗಾಬರಿಗೊಂಡರು.

ಒಂದು ದಿನ ದ್ರೌಪದಿಯು ಅಪೂರ್ವವಾದ ಸುಗಂಧವನ್ನು ಆಘ್ರಾಣಿಸಿದಳು. ಅದು ಯಾವದೋ ಅತ್ಯಂತ ವಿಶಿಷ್ಟವಾದ ಕಮಲ ಪುಷ್ಪದ್ದೇ ಇರಬೇಕೆಂದು ಊಹಿಸಿದ ಅವಳು ಆ ಪುಷ್ಪವನ್ನು ಪಡೆಯಲು ಬಯಸಿ ಭೀಮನನ್ನು ಕೇಳಿಕೊಂಡಳು. ಕಾಡಿನಲ್ಲಿ ತಿರುಗುವದು ಮತ್ತು ಪತ್ನಿಯ ಮನೋಭಿಲಾಷೆಯ ಪೂರೈಕೆ. ಉದ್ಯೋಗವಿಲ್ಲದಿದ್ದ ಭೀಮ ಉತ್ಸುಕತೆಯಿಂದ ಬೇಟೆಗಾರನ ಉಡುಪು ಧರಿಸಿ ಶ್ರೀಕೃಷ್ಣನನ್ನು ನೆನೆದು ಗದೆಯನ್ನು ಹೆಗಲಿಗೆ ಏರಿಸಿ ಹೊರಟನು. ಭೀಮಕಾಯನಾದ ಭೀಮನ ಉತ್ಸಾಹಭರಿತವಾದ ನಡಿಗೆಯೇ ವಿಶಿಷ್ಟವಾದುದಾಗಿತ್ತು. ಅವನ ರಭಸದ ನಡಿಗೆಯ ಗಾಳಿಗೆ ಚಿಕ್ಕ ಚಿಕ್ಕ ಗಿಡಮರಗಳು ಬಗ್ಗಿ ಮುರಿದುಬಿದ್ದವು. ಅವನ ಸಿಂಹನಾದ ಧ್ವನಿಗೆ ಅಡವಿಯ ಕ್ರೂರ ಜಂತುಗಳು ಹಿಂತಿರುಗಿ ನೋಡುತ್ತ ಜೀವಭಯದಿಂದ ಓಡಿದವು. ಅವನು ಹೋದೆಡೆ ದೃಷ್ಟಿ ಹರಿಯುವಷ್ಟು ಸುತ್ತಳತೆಯಲ್ಲಿ ಒಂದು ಮೃಗದ ಸುಳಿವಾದರೂ ಇರುತ್ತಿರಲಿಲ್ಲ. ಇಂತಹ ನಿರ್ಜನ ಪ್ರದೇಶದಲ್ಲಿ ಈ ಸಿಂಹ ವಿಕ್ರಮಿಯು ಮಾಡುತ್ತಿದ್ದ ಸಿಂಹನಾದಕ್ಕೆ ಗಿರಿ ಗುಹೆಗಳು ಮಾತ್ರವೇ ಮರುದನಿ ಕೊಡುತ್ತ ಭೀಮನೊಂದಿಗೆ ಸೆಣಸಲು ನಿಂತಂತೆ ಕಂಡುಬಂದವು. ಆಗ, ಅಲ್ಲಿಯೇ ಸಮೀಪದಲ್ಲಿದ್ದ ಒಂದು ಬಾಳೆಯ ವನದಲ್ಲಿ ಶ್ರೀ ರಾಮನಾಮಕಾಮಿಯಾದ ವೀರಾಂಜನೇಯನು ಭೀಮನ ಧ್ವನಿಗೆ ಎಚ್ಚೆತ್ತು ಸುತ್ತಲೂ ಆಲಿಸುತ್ತ "ಇಂತಹ ಅಮಾನುಷ ವಿಹಾರ ಸ್ಥಾನದಲ್ಲಿ ನಿರ್ಭೀತಿಯಿಂದ ಬರುತ್ತಿರುವ ಇವನ್ಯಾರೋ ಪ್ರಚಂಡ ಪರಾಕ್ರಮಿಯಾಗಿರಬೇಕು. ಇವನ ಸಿಂಹನಾದವು ನಮ್ಮ ಅಂದಿನ ತ್ರೇತಾಯುಗದ ರಾಮಭಕ್ತರಾದ ವಾನರ ಶ್ರೇಷ್ಠರ ಗರ್ಜನೆಗೆ ಸರಿ ಹೋಲುತ್ತಿದೆ" ಎಂದುಕೊಂಡು ಒಂದು ಹೆಮ್ಮರವನ್ನು, ಅದು ಮುರಿಯದಂತೆ, ಹತ್ತಿ ಕುಳಿತು........

ರಮೆ:- ಹೆಮ್ಮರ ಮುರಿಯುವದೆ ?

ಮುರಳಿ:- ಹೌದು. ಈ ಭೂಮಂಡಲವು ಕಂಡ ಮೊದಲನೆಯ ಮತ್ತು ಕೊನೆಯ ವೀರಾಗ್ರಣಿ ಆಂಜನೇಯ. ಅವನು ಬೆಟ್ಟವನ್ನು ಕೀಳಬಲ್ಲವನು, ಸಮುದ್ರವನ್ನು ಹಾರಿ ದಾಟಬಲ್ಲವನು, ಭೂಮಂಡಲವನ್ನೇ ಬೂದಿಮಾಡಬಲ್ಲ ಸಾಮರ್ಥ್ಯವಿದ್ದ ಬ್ರಹ್ಮಾಸ್ತ್ರಕ್ಕೆ ಸ್ವಲ್ಪ ಸಮಯ ಮಾತ್ರವೇ ಕಟ್ಟುಬೀಳುತ್ತಿದ್ದವನು. ಮಹಾಭಕ್ತ. ಶ್ರೇಷ್ಠನಾದ ಕರ್ಮಯೋಗಿ. ಮುಂದಿನ ಬ್ರಹ್ಮಪಟ್ಟವನ್ನು ಪಡೆದ ಮಹಾತ್ಮ. ಶುದ್ಧ ಬ್ರಹ್ಮಚಾರಿ. ಮಹಾ ಪಂಡಿತ. ಅತ್ಯಂತ ವಿನಯವಂತ. ಶರೀರವನ್ನು ಅಣುವಿನಂತೆಯಾಗಲಿ, ಪರ್ವತದಂತಾಗಲಿ ಮಾಡಲು ತಿಳಿದಿದ್ದ ಸಿದ್ಧ

ಪುರುಷ. ಅವನು ಹತ್ತಿದರೆ ಮರ ಮುರಿಯುವದಲ್ಲ. ಅವನು ಕುಳಿತಲ್ಲಿಂದಲೇ ಆ ಹೆಮ್ಮರವನ್ನು ಒಂದು ಕೈಯಿಂದ ಕೀಳಬಲ್ಲ ಸಮರ್ಥ........

ರಮೆ:– ಮಕ್ಕಳ ಕತೆ.

ಮುರಳಿ:– ಅದು ನಿಜ.

ರಮೆ:– ಮತ್ತೇಕೆ ನನಗೆ ಹೇಳುತ್ತಿದ್ದೀರಿ ?

ಮುರಳಿ:– ನೀನು ಹೆಂಗಸಿನ ಶರೀರವನ್ನು ಹೊತ್ತ ಮಗುವಾಗಿರುವದರಿಂದ.

ರಮೆ:– ನೀವು ಹೇಳುವ ಅದ್ಭುತಗಳನ್ನೆಲ್ಲ ಒಪ್ಪಿಕೊಂಡುಬಿಟ್ಟರೆ ಅವರು ಪ್ರೌಢರು. ಇಲ್ಲವಾದರೆ ಅವರು ಮಕ್ಕಳು !

ಮುರಳಿ:– ನಾನು ಹೇಳುವ ಅದ್ಭುತಗಳನ್ನು ಎಂದಲ್ಲ. ಲೋಕ ನಮ್ಮ ಊಹೆಗೂ ಮೀರಿದ ಅದ್ಭುತಗಳನ್ನು ಒಳಗೊಂಡಿದೆ ಎಂದು ತಿಳಿಯಲು ಶಕ್ತಿ ಇಲ್ಲದಿರುವವರ ದೇಹ ದೊಡ್ಡದಾಗಿರುವದನ್ನು ನೋಡಿದ ಮಾತ್ರಕ್ಕೇ ನಾನು ಅವರನ್ನು ಹೇಗೆ ಪ್ರೌಢರೆಂದು ಕರೆಯಲಿ ಹೇಳು ?

ರಮೆ:– ಹಾಗಾದರೆ ಯಾವದರ ಕುರಿತಾಗಿಯೂ ವೈಜ್ಞಾನಿಕವಾಗಿ ಚರ್ಚಿಸಲೇಬಾರದು !

ಮುರಳಿ:– ಯಾವದಮ್ಮಾ, ವೈಜ್ಞಾನಿಕ ? ನಮ್ಮ ಪುರಾಣ, ಇತಿಹಾಸ, ಸಂಸ್ಕೃತಿ, ಪರಂಪರೆಗಳ ಆಚಾರ, ವಿಚಾರಗಳೆಲ್ಲ ಅರ್ಥವಿಲ್ಲದವುಗಳು, ಅಸಂಭಾವ್ಯ ವಾದವುಗಳು ಎಂಬದನ್ನು ಸಿದ್ಧಗೊಳಿಸಲು ಪ್ರಯತ್ನಿಸುವದೇ ವೈಜ್ಞಾನಿಕ ವಿಚಾರ ಧಾರೆಯೇನಮ್ಮ ?

ರಮೆ:– ಅಯ್ಯೋ, ನಿಮಗೇಕಪ್ಪಾ ಇದಕ್ಕೇ ಸಿಟ್ಟು ? ವಿಜ್ಞಾನವೋ, ಪುರಾಣವೋ ಸುಡುಗಾಡೋ. ನನಗೇನಾಗಬೇಕು ? ನೀವು ಹೇಳಿದುದಕ್ಕೆ ಹ್ಞೂಂಗುಟ್ಟಿದರೆ ಮುಗಿಯಿತಲ್ಲ ! ಏನು ಹೇಗಿದ್ದರೆ ನನಗೇನು ! ಇನ್ನು ಒಂದು ಶಬ್ದ ಮಾತನಾಡಿದರೆ ಕೇಳಿ. ನೀವು ಹೇಳುತ್ತ ಹೋಗುವದು, ನಾನು ಕೇಳುವದು– ಇಷ್ಟೇ ಇನ್ನು.

ಮುರಳಿ:– ಹಾಗಲ್ಲ ರಮಾ. ಕಣ್ಣಿಗೆ ಕಂಡರೆ ಮಾತ್ರ ಅದು ಸತ್ಯ. ಅಥವಾ ನಮಗೆ ತಿಳಿದಿರುವದರೊಂದಿಗೆ ಹೋಲಿಸಲು ಸಾಧ್ಯವಾಗುವಂತಹದು ಮಾತ್ರ ಸತ್ಯ ಎಂದು ವಾದಿಸುವದೇ ವೈಜ್ಞಾನಿಕವಾದ ತರ್ಕ ಎಂಬ ಭ್ರಾಂತಿಯಿಂದ ನೀನು ಇನ್ನೂ ಹೊರತಾಗಿಲ್ಲವಲ್ಲ ಅದೇಕೆ ? ಈ ಲೋಕದಲ್ಲಿ ನಾವು ನಮ್ಮ ಇಂದ್ರಿಯಗಳ ಮೂಲಕ ತಿಳಿಯಲು ಸಾಧ್ಯವಾಗುವ ಅಂಶ ಲಕ್ಷದಲ್ಲಿ ಒಂದೊ, ಕೋಟಿಯಲ್ಲಿ ಒಂದೋ– ಅಷ್ಟೆ. ಹೊಗೆ ಇರುವಲ್ಲಿ ಬೆಂಕಿಯನ್ನು ಕಲ್ಪಿಸಿಕೊಳ್ಳ

ಲಾಗದೆ, ಬೆಂಕಿಯನ್ನು ಕಂಡರೆ ಮಾತ್ರ ನಂಬಬೇಕು ಎನ್ನುವದು ಎಂತಹ ವೈಜ್ಞಾನಿಕ ದೃಷ್ಟಿ? ತನ್ನನ್ನು ಹೆತ್ತವಳು ತಾಯಿ ಎಂಬದಕ್ಕೆ ಪ್ರಮಾಣ ಬೇಕೆ? ಇಂದು ಭಿಕ್ಷೆ ಬೇಡಿ ಬದುಕುತ್ತಿರುವ ಒಂದು ಕುಟುಂಬ ತನಗಿಂತ ಎರಡು ತಲೆಮಾರಿನ ಹಿಂದಿನ ತಮ್ಮ ಹಿರಿಯರು ರಾಜಭೋಗದಲ್ಲಿ ಬದುಕಿದ್ದರಂತೆ ಎನ್ನುವದನ್ನು ಆಧಾರವಿದ್ದರೆ ಮಾತ್ರ ನಂಬಲು ಸಾಧ್ಯ ಎಂದು ಹೇಳಬಹುದೆ?

ಈ ಲೋಕದಲ್ಲಿ ಏನೂ ನಡೆಯಲು ಸಾಧ್ಯ ಎಂದು ತೋರಿಸುವದಕ್ಕೇ ಸೃಷ್ಟಿಯಾದಂತಿಲ್ಲವೇ ಈ ಪ್ರಕೃತಿ? ಭೂಮಿಯಲ್ಲಿರುವ ನಾವು ನೀರಿನಲ್ಲಿ ಮುಳುಗಿ ಬದುಕಿರಲಾರೆವು. ಆದರೆ ನೀರಿನೊಳಗೇ ಬದುಕಿರುವ ಸಾವಿರಾರು ಜೀವಿಗಳಿವೆ. ನಾವು ಮರ ಹತ್ತಿದರೆ ಇಳಿಯುವ ವರೆಗೂ ಪ್ರಾಣಭೀತಿಯಿಂದ ಹೆದರಿರುತ್ತೇವೆ. ಆದರೆ ನಾವು ಭೂಮಿಯಲ್ಲಿ ತಿರುಗಾಡುವಷ್ಟೇ ಸರಾಗವಾಗಿ ಮರಗಳ ಮೇಲೆಯೇ ತಿರುಗಾಡಿ ವಾಸಿಸುವ ಜೀವಿಗಳಿವೆ. ಯಾವದೇ ಜೀವಿಗೆ ಏನಾದರೊಂದು ಆಶ್ರಯವಿದ್ದರೆ ಮಾತ್ರ ಅದು ಚಲಿಸಲು ಸಾಧ್ಯ. ಹಕ್ಕಿಗಳು ಆಶ್ರಯವಿಲ್ಲದೆಯೇ ಆಕಾಶದಲ್ಲಿ ಹಾರಾಡುತ್ತವೆ. ಜೀವಿಗಳು ಎಲ್ಲಿಲ್ಲಿ ಇರುವದಿಲ್ಲ! ಹಾಲಿನಲ್ಲಿರುತ್ತವೆ, ಹೊಲಸಿನಲ್ಲಿರುತ್ತವೆ. ಖಾರದಲ್ಲಿರುತ್ತವೆ, ಸಿಹಿಯಲ್ಲಿರುತ್ತವೆ, ಮಣ್ಣಿನ ಆಳದಲ್ಲಿರುತ್ತವೆ, ಬೆಟ್ಟದ ಅತ್ಯಂತ ಆಳವಾದ ಗುಹೆಯ ಕಗ್ಗತ್ತಲಿನಲ್ಲಿರುತ್ತವೆ.

ನಮ್ಮನ್ನು ಕೊಲ್ಲುವ ವಿಷವನ್ನು ತಮ್ಮ ಒಡಲೊಳಗೆ ಹಾವುಗಳು ಇಟ್ಟು ಕೊಂಡಿರಬಲ್ಲವು. ಕೆಲವು ಪ್ರಾಣಿಗಳು ಸಸ್ಯಗಳನ್ನೇ ತಿಂದರೆ ಇನ್ನು ಕೆಲವು ಬಿಸಿ ರಕ್ತ ಮಾಂಸಗಳನ್ನೇ ತಿನ್ನುತ್ತವೆ. ಮತ್ತೆ ಕೆಲವಕ್ಕೆ ಕೊಳೆತುದೇ ಆಗಬೇಕು. ದೊಡ್ಡ ದೇಹದ ಆನೆಯನ್ನು ಸಣ್ಣ ದೇಹದ ಸಿಂಹ ಕೊಲ್ಲುತ್ತದೆ........ಇದಕ್ಕೆ ಅಂತ್ಯವಿಲ್ಲ. ಆದರೆ ಇದೆಲ್ಲದರ ಅರ್ಥ ಇಷ್ಟು. ಪ್ರಕೃತಿಯು ಸ್ವತಂತ್ರವಾಗಿ ಏನೂ ಮಾಡಲಾರದೆ ಇದ್ದುದಿದ್ದಂತೆಯೇ ನಡೆಯುವದನ್ನು ಮೂಕವಾಗಿ ನೋಡುತ್ತಿರುವ ಜಡ ಪದಾರ್ಥವಲ್ಲ. ಅದು ಕ್ರಿಯಾತ್ಮಕವಾದ, ಸೃಷ್ಟ್ಯಾತ್ಮಕವಾದ ಒಂದು ಅತ್ಯದ್ಭುತ ಶಕ್ತಿ. ಅದರಲ್ಲಿ ಯಾವಾಗ ಏನು ಹುಟ್ಟಬಹುದು, ಏನು ಹುಟ್ಟಲಾರದು ಎಂದು ಹೇಳುವಂತಿಲ್ಲ. ಸೃಷ್ಟಿಕಾರ್ಯದಲ್ಲಿ ಅದಕ್ಕಿರುವ ಅಪಾರ ಶಕ್ತಿಗೆ ಸಮುದ್ರವನ್ನು ದಾಟಿದ, ಪರ್ವತಗಳನ್ನು ಎತ್ತಿದ ಆಂಜನೇಯನು ಕೂಡ ಒಂದು ಕ್ಷುಲ್ಲಕ ಉದಾಹರಣೆಯಾಗುತ್ತಾನೆ. ಇಂತಹ ವಿಚಾರಧಾರೆಯು ವೈಜ್ಞಾನಿಕವಾಗದೆ ಅದೇಕೆ ಗೊಡ್ಡು ನಂಬಿಕೆ ಎನಿಸಿಕೊಳ್ಳುತ್ತದೋ ಎಂಬದೇ ನನ್ನ ಕುತೂಹಲ. ಈ ಕಳೆದ ನಾಲ್ಕೈದು ದಿನಗಳಿಂದ ಇಂತಹ ಸಂದರ್ಭಗಳಲ್ಲಿ ನಿನಗೆ ಹಲವು ವಿಧದಲ್ಲಿ ನಾನು ತಿಳಿಸಿದರೂ ನೀನು ಸಧ್ಯಕ್ಕೆ ನನ್ನ ಅಭಿಪ್ರಾಯವನ್ನು ಒಪ್ಪಿಕೊಂಡಂತೆ ಕಂಡರೂ, ಪುನಃ ಒಮ್ಮೆ ಅಂತಹುದೇ ಸಂದರ್ಭ ಬರುವಾಗ ನೀನು ನಿನ್ನ ಹಳೆಯ ತರ್ಕವನ್ನೇ ಅವಲಂಬಿಸುವದನ್ನು ನೋಡುವಾಗ, ನಿನ್ನನ್ನು

ಈ ಕಾಲದ ಯುವ ಜನಾಂಗದ ಪ್ರತಿನಿಧಿ' ಎಂದು ಭಾವಿಸಿಕೊಳ್ಳುವ ನಾನು "ಅಯ್ಯೋ ನಮ್ಮ ದೇಶದ ದುರ್ಗತಿಯೇ" ಎಂದು ನೊಂದುಕೊಳ್ಳುವಂತಾಗುವದರಲ್ಲಿ ಆಶ್ಚರ್ಯವೇನು ?

ರಮೆ:– ಛೆ, ಛೆ. ಹಾಗೇನೂ ಅಲ್ಲವಪ್ಪ. ನಿಮ್ಮನ್ನು ಕೆಣಕಿದರೆ ಸ್ವಲ್ಪ ಹೊಸ ಹೊಸ ಸ್ವಾರಸ್ಯಗಳು ಹೊರಗೆ ಬಂದಾವು ಎನ್ನುವದಕ್ಕೋಸ್ಕರ ಹಾಗೆ ಮಾಡುತ್ತೇನೆಯೇ ಹೊರತು, ನೀವು ಹೇಳುವದರಲ್ಲಿ ನನಗೆ ನಂಬಿಕೆ ಇಲ್ಲದೆ ಹಾಗೆ ಮಾಡುತ್ತೇನೆಂದು ತಿಳಿಯಬೇಡಿ.

ಮುರಳಿ:– ಅದರಲ್ಲಿ ತಪ್ಪೂ ಇಲ್ಲ ಅನ್ನು. ಕಣ್ಣಿಲ್ಲದ ನಾವಿಬ್ಬರೂ ಆನೆಯನ್ನು ಮುಟ್ಟಿಕೊಂಡು, ಅದರ ವರ್ಣನೆ ಮಾಡುತ್ತಿದ್ದೇವೆ. ನಾನು ಸರಿಯೋ ನೀನು ಸರಿಯೋ ! ನಿನ್ನ ಅಭಿಪ್ರಾಯಗಳು ತಪ್ಪು ಎಂದು ಹೇಳಲು ನಾನು ಯಾವ ಕಾರಣಗಳನ್ನು ಬಳಸುತ್ತೇನೋ ನನ್ನ ಅಭಿಪ್ರಾಯ ತಪ್ಪು ಎಂದು ಹೇಳಲೂ ಅದೇ ಕಾರಣಗಳನ್ನು ಬಳಸಬಹುದು ಎನ್ನು. ಇರಲಿ. ನಮ್ಮ ನಮ್ಮ ಕರ್ತವ್ಯ ಮಾಡೋಣ. ಆದರೆ ಮಹಾಭಾರತದಂತಹ ಗ್ರಂಥವನ್ನು ವಿಮರ್ಶೆ ಮಾಡುವಾಗ ಕೇವಲ ಸೀಮಿತ ಬುದ್ಧಿವಂತಿಕೆಯನ್ನು ಬಳಸುವದು ತಪ್ಪಾಗುತ್ತದೆ ಎಂಬದನ್ನು ನಾವು ಮರೆಯಬಾರದು. ಆ ಗ್ರಂಥವು ಈ ದೇಶದಲ್ಲಿ ಸಾವಿರಾರು ವರ್ಷಗಳ ಕಾಲ ಪಂಡಿತರ ವಿಮರ್ಶೆಗೆ ಅನುಗುಣವಾದ ಗ್ರಂಥವಾಗಿ ಉಳಿದು ಬಂದಿರುವದಲ್ಲ ; ಕೋಟ್ಯಂತರ ವಿದ್ವಾಂಸರಲ್ಲದವರ ಹೃದಯದ ಹಸಿವನ್ನೂ ತಣಿಸುವ ಸಂಜೀವನಿಗಾಗಿ ಬೆಳೆದುಬಂದಿದೆ. ನಮ್ಮ ವಿದ್ವತ್ತಿನ ಪ್ರದರ್ಶನದ ಉತ್ಸಾಹದಲ್ಲಿ ಈ ಸಂಜೀವನಿಯ ಒರತೆಯನ್ನು ಬತ್ತಿಸುವದು ಬಹುದೊಡ್ಡ ದೇಶದ್ರೋಹವಾಗುತ್ತದೆ. ಸತ್ಯದ ಅನ್ವೇಷಣೆಗಾಗಿ ಸಾವಿರಾರು ವರ್ಷ ನಮ್ಮನ್ನು ಪೋಷಿಸಿದ ಸಂಜೀವನಿಯ ಒರತೆ ಯನ್ನು ಬತ್ತಿಸುವದು ಅವಶ್ಯವೆಂದು ವಾದಿಸಬಹುದಾದರೂ, ಈ ವಿದ್ವಾಂ ಸರುಗಳು ಅವಿದ್ಯಾವಂತರಾದ ಭಾವುಕ ಜನರಷ್ಟೇ ಕತ್ತಲೆಯಲ್ಲಿ ತಡವರಿಸು ತ್ತಿದ್ದಾರೆ ಎಂಬದನ್ನು ನೋಡುವಾಗ, ಈ ಕ್ಷೇತ್ರದಿಂದ ವಿದ್ವಾಂಸರನ್ನು ದೂರವಿಟ್ಟು ಅದನ್ನು ಭಾವುಕರಿಗೇ ಬಿಟ್ಟುಕೊಡುವದು ಬಹಳ ಪರೋಪಕಾರಿಯಾದ ಕೆಲಸ ವಾಗುತ್ತದೆ ಎಂದೆನಿಸುತ್ತದೆ................

ರಮೆ:– ನೀವು ಹೀಗೆ ಹೇಳುವಾಗಲೆಲ್ಲ ನಾನು ತೀರ್ಮಾನಿಸಿಕೊಳ್ಳುತ್ತೇನೆ, ಇನ್ನು ಆ ರೀತಿ ಚುಚ್ಚು ಪ್ರಶ್ನೆಗಳನ್ನು ಕೇಳಬಾರದು, ಅಂತ. ಆದರೂ ಆ ಸಂದರ್ಭ ಬರುವಾಗ ಇದೆಲ್ಲ ಮರೆತು ಹೋಗಿ ಹುಟ್ಟಿಗಂಟಿ ಬಂದ ಆ ಸ್ವಭಾವ ತಲೆಹಾಕಿಬಿಡುತ್ತದೆ.

ಮುರಳಿ:– ಕೇಳು, ಕೇಳು. ಪ್ರಶ್ನೆ ಕೇಳುವದರಲ್ಲಿ ಅಲ್ಲ ಕೇಡಿರುವದು.

ಮಹಾಭಾರತದ ಮತ್ತು ನಮ್ಮ ಪ್ರಾಚೀನ ಪರಂಪರೆಯ ಚಾರಿತ್ರಿಕತೆಯ ಕುರಿತು ವಿವಿಧ ಅಭಿಪ್ರಾಯುಗಳನ್ನು ತಿಳಿದುಕೊಳ್ಳಬೇಕೆಂಬ ಬಯಕೆಯು ಆ ಪ್ರಶ್ನೆಗಳ ಹಿಂದಿದ್ದರೆ ಅವುಗಳಲ್ಲಿ ತಪ್ಪೇನೂ ಇಲ್ಲ. ಆದರ ಬದಲು ಆ ಪರಂಪರೆಯೆಲ್ಲ ಗೊಡ್ಡು ಪುರಾಣ; ಅವುಗಳನ್ನು ನಂಬಿರುವವರೆಲ್ಲ ಮೂಢರು ಎಂಬಂತಹ ತಿರಸ್ಕಾರ ದಿಂದ ನಿನ್ನ ಪ್ರಶ್ನೆಗಳು ಹುಟ್ಟಿಕೊಂಡಿದ್ದರೆ ಅದು ತಪ್ಪಾಗುತ್ತದೆ.

ರಮೆ:– ತಿರಸ್ಕಾರವೇನೂ ಇಲ್ಲವಪ್ಪ. ಹಾಗಿದ್ದರೆ ಭೀಮನ ಕತೆಯನ್ನು ಇಷ್ಟು ಆಸ್ಥೆಯಿಂದ ಕೇಳುತ್ತಿದ್ದೆನೇ ನಾನು ?

ಮುರಳಿ:– ಇರಲಿ. ಮುಂದಕ್ಕೆ ಕೇಳು. ಆಂಜನೇಯನು ಭೀಮನನ್ನು ಮಾತನಾಡಿಸುತ್ತ, "ಅಯ್ಯಾ, ನೀನೇನು ಮನುಷ್ಯನೋ, ಖೇಚರನೋ, ರಾಕ್ಷಸನೋ, ದೇವತೆಯೊ, ಕಿನ್ನರನೊ ? ಎಲ್ಲಿಗೆ ಹೊರಟಿರುವೆ ? ಎಂದು ಕೇಳಲು ಭೀಮನು ತನ್ನ ಸ್ಥೂಲ ಪರಿಚಯ ಮಾಡಿಕೊಟ್ಟು ಸಿಂಹಗಮನದಿಂದ ಮುಂದೆ ನಡೆಯಲು ಹನುಮನ ಬಾಲವು ಅವನಿಗೆ ಅಡ್ಡಲಾಗಿ ಸಿಕ್ಕಿತು.

ರಮೆ:– ಭೀಮನಿಗೆ ಗೊತ್ತಾಯಿತೇನು, ಅವನು ಹನುಮಂತ ಎಂದು ?

ಮುರಳಿ:– ಇಲ್ಲ, ಇಲ್ಲ. ಒಂದು ಮುದಿ ಕಪಿ ಎಂದು ಮಾತ್ರ ಗೊತ್ತಾಗಲು ಸಾಧ್ಯವಿತ್ತು. ಅಡ್ಡಲಾಗಿ ಬಿದ್ದಿದ್ದ ಬಾಲವನ್ನು ನಿಕೃಷ್ಟವಾಗಿ ಕಂಡ ಭೀಮನು ಅದನ್ನು ತನ್ನ ಗದೆಯಿಂದ ಆಚೆ ತಳ್ಳಿದನು. ಆದರೆ ಅದು ಮಿಸುಕಾಡಲಿಲ್ಲ. ಅದನ್ನು ಆಚೆಗೆ ಎತ್ತಿಕೊಳ್ಳುವಂತೆ ಹನುಮಂತನನ್ನು ಗದರಿಸಿದನು. ಆಂಜನೇಯನು ಸಮಾಧಾನದಲ್ಲಿಯೇ "ಅಯ್ಯಾ, ನೀನು ಅಸಮ ಸಾಹಸಿ. ಇಲ್ಲದಿದ್ದರೆ ಈ ಪ್ರದೇಶದ ಸಮಸ್ತ ಮೃಗ ಪಕ್ಷಿಗಳೂ ನಿನ್ನ ಬರುವಿಕೆಯಿಂದಲೇ ಮಾಯವಾಗುತ್ತಿರ ಲಿಲ್ಲ. ನಾನು ಮುದುಕ. ಆದುದರಿಂದ ಈ ಬಾಲವನ್ನು ನೀನೇ ಆಚೆಗೆ ತಳ್ಳಿ ಮುಂದೆ ಹೋಗು" ಎನ್ನಲು "ಅಷ್ಟೇ ತಾನೆ !" ಎನ್ನುತ್ತಾ ಭೀಮನು ತನ್ನ ಕೈಗಳಿಂದ ಆ ಬಾಲವನ್ನೆತ್ತಲು ಪ್ರಯತ್ನಿಸಿದನು· ಅದು ಎಳ್ಳಷ್ಟೂ ಅಲುಗಾಡಲಿಲ್ಲ. ಭೀಮನು ಮೋಲುಸಿರೆಳೆಯುತ್ತಾ ಸ್ವಲ್ಪ ತಡೆದು. ವೀಳೆಯವನ್ನು ಹಾಕಿ ಪುನಃ ಒಮ್ಮೆ ಔಡು ಕಚ್ಚಿ ತನ್ನ ಶಕ್ತಿಯನ್ನೆಲ್ಲ ಪ್ರಯೋಗಿಸಿ ಬಾಲವನ್ನು ಎತ್ತಲು ಪ್ರಯತ್ನಿಸಿದನು. ಆದರೆ ಆ ಬಾಲದ ಕೂದಲು ಕೂಡ ಕಂಪಿಸಲಿಲ್ಲ.

ರಮೆ:– ಇಂದ್ರಜಾಲ !

ಮುರಳಿ:– ಅಲ್ಲ, ಬ್ರಹ್ಮಚರ್ಯ ಸಿದ್ಧಿ. ಕೇವಲ ಒಂದು ಕಾಡು ಕಪಿಯ ಎದುರಿನಲ್ಲಿ ತನ್ನ ಅದ್ವಿತೀಯ ಸಾಹಸವೆಲ್ಲವೂ ನಿಷ್ಪ್ರಯೋಜಕವಾದುದನ್ನು ಕಂಡು ಭೀಮನಿಗೆ ದುಃಖ ಉಕ್ಕಿ ಬಂತು. ದೇಹದಾರ್ಢ್ಯದಲ್ಲಿ ಅಂದಿನ ಕಾಲದಲ್ಲಿ

ಇಡಿಯ ಭಾರತದಲ್ಲೇ ಪ್ರಖ್ಯಾತರಾಗಿದ್ದವರ ಪೈಕಿ ಭೀಮನು ಎರಡನೆಯ ಸ್ಥಾನವನ್ನು ಪಡೆದಿದ್ದವನು.

ರಮೆ:– ಹಾಗಾದರೆ ಮೊದಲನೆಯವನು ಯಾರು?

ಮುರಳಿ:– ಬಲರಾಮ. ಬಲರಾಮ, ಭೀಮ, ಶಲ್ಯ, ಕೀಚಕ– ಈ ನಾಲ್ವರು ಇದೇ ಅನುಕ್ರಮದಲ್ಲಿ ಆಗಿನ ಕಾಲದ ಅತ್ಯಂತ ಬಲಾಢ್ಯರೆಂದು ಪ್ರಖ್ಯಾತರಾಗಿದ್ದವರು. ಅಂತಹ ತನ್ನ ಬಲವು ಒಂದು ಕಾಡು ಕಪಿಯ ಬಾಲವನ್ನೆತ್ತಲೂ ಅಸಮರ್ಥವಾಯಿತೆಂಬದನ್ನು ನೋಡಿದಾಗ ಭೀಮನಿಗೆ ಹೇಗಾಗಿರಲಿಕ್ಕಿಲ್ಲ!

ರಮೆ:– ಇಲ್ಲಿ ಒಂದು ವಿಷಯ ನನ್ನ ಜ್ಞಾಪಕಕ್ಕೆ ಬರುತ್ತದೆ. ಎಲ್ಲಿಯೋ ನಾನು ಓದಿದ ನೆನಪು. ನಮ್ಮ ಹಿಂದಿನ ಗ್ರಂಥಗಳಲ್ಲಿ ಗ್ರಂಥಕರ್ತರು ಯಾವ ದೇವತೆಯನ್ನು ಸ್ತೋತ್ರ ಮಾಡಲು ಪ್ರಾರಂಭಿಸಿದರೂ ಆ ದೇವತೆಯೇ ಪರಮ ಶ್ರೇಷ್ಠವೆಂದು ವರ್ಣಿಸುತ್ತಿದ್ದರು ಎಂದು. ಇಲ್ಲಿಯೂ ಹಾಗೆಯೇ ಇರಬಹುದೆ? ಭೀಮನನ್ನು ಕುರಿತು ಹೇಳುವಾಗ ಅವನೇ ಬಲಾಢ್ಯ. ಆಂಜನೇಯನನ್ನು ಹೇಳಬೇಕಾದರೆ ಅವನ ಬಾಲದ ಕೂದಲು ಕೂಡ ಭೀಮನಿಗಿಂತ ಶ್ರೇಷ್ಠ– ಇತ್ಯಾದಿ.

ಮುರಳಿ:– ದುರದೃಷ್ಟವಶಾತ್ ನೀನು ಓದಿದುದೆಲ್ಲ ಅಂತಹುದೇ ಆಗಿ ಹೋಗಿದೆ! ದೇವತೆಗಳ ಬಗೆಗೆ ಈ ರೀತಿ ಅನೇಕ ಕಡೆ ಸ್ತೋತ್ರ ಮಾಡಿರುವದು ನಿಜ. ಅದಕ್ಕೆ ಕಾರಣವನ್ನು ಹುಡುಕುತ್ತಾ ನಾವು ಆಯಾ ಗ್ರಂಥಕರ್ತರು ಮೂರ್ಖರು ಎಂಬಲ್ಲಿಗೆ ನಿಂತುಬಿಡುವದು ತಪ್ಪು. ಎಲ್ಲ ದೇವತೆಗಳೂ ಒಬ್ಬನೇ ದೇವನ ವಿವಿಧ ರೂಪ ಎಂಬ ಸತ್ಯಾಂಶವನ್ನು ಎಲ್ಲ ಗ್ರಂಥಕರ್ತರೂ ಸ್ವೀಕರಿಸಿರುವದನ್ನು ನಾವು ಈ ಮೂಲಕ ಕಾಣಬಹುದು.

ರಮೆ:– ಹಾಗಾದರೆ ಆಂಜನೇಯ– ಭೀಮರೂ ಸಮಬಲರು ಎಂದು ಹೇಳಬಹುದಿತ್ತಲ್ಲ?

ಮುರಳಿ:– ಇವರು ದೇವತೆಗಳಲ್ಲ. ಚರಿತ್ರೆಯ ನಾಯಕರು. ಮಹಾಭಾರತವು ಚರಿತ್ರೆಯ ಗ್ರಂಥವಲ್ಲದೆ ಕಟ್ಟುಕತೆಯಾಗಿದ್ದಿದ್ದರೆ ನಿನ್ನ ಇಂದಿನ ಕಾದಂಬರಿಕಾರರಂತೆ ವ್ಯಾಸರು ಕೂಡ ತನ್ನ ಕತೆಯ ನಾಯಕರುಗಳನ್ನೇ ಲೋಕೋತ್ತರವಾದ ಶೌರ್ಯವಂತರೆಂದು ಚಿತ್ರಿಸಬೇಕಾಗಿತ್ತು. ತನ್ನ ಕತೆಯೊಳಗೆ ಈ ರೀತಿ ತನ್ನ ಕಥಾನಾಯಕನಾದ ಭೀಮನು ತನ್ನ "ಪ್ರತಿಸ್ಪರ್ಧಿ ಕಾದಂಬರಿಕಾರ"ನಾದ ವಾಲ್ಮೀಕಿಯ ವೀರನಾದ ಆಂಜನೇಯನನ್ನು ಸಂಧಿಸಿ ಆಂಜನೇಯನ ಮೂಳೆ ಮುರಿದು ಮೆರೆದನು ಎಂದು ಬರೆದಿದ್ದರೆ ವಾಲ್ಮೀಕಿಯೂ ನ್ಯಾಯಾಲಯಕ್ಕೆ

ದೂರು ಕೊಂಡೊಯ್ಯುತ್ತಿರಲಿಲ್ಲ, ನಾವು ಕೂಡ ಬಹಿರಂಗ ಸಭೆಯಲ್ಲಿ ವ್ಯಾಸರ ವಿರುದ್ಧ ನಿರ್ಣಯ ಕೈಗೊಂಡು ಅವರನ್ನು ಖಂಡಿಸುತ್ತಿರಲಿಲ್ಲ. ಕೃತಯುಗದ ಪರಶುರಾಮನನ್ನು ತ್ರೇತೆಯ ಶ್ರೀರಾಮನು ಸೋಲಿಸಿದಂತೆ ವ್ಯಾಸರೂ ಮಾಡ ಬಹುದಿತ್ತು. ಅದಕ್ಕೇ ನಾನು ಆಗಾಗ ಹೇಳುವದು. ಇಂದಿನ ಗ್ರಂಥಕರ್ತರ ಸಾಲಿಗೆ ವ್ಯಾಸ, ವಾಲ್ಮೀಕಿಯರನ್ನು ಎಳೆದು ತಂದು ನಿಲ್ಲಿಸಿ ತುಲನೆ ಮಾಡುವ ಈ ವಿದ್ವಾಂಸರುಗಳು ತಾವು ಒಂದು ವಿಧದಲ್ಲಿ ಅವಿದ್ಯಾವಂತರೆಂಬದನ್ನು ಏಕೆ ತೋರಿಸಿಕೊಳ್ಳುತ್ತಿದ್ದಾರೆ ಎಂದು. ಇಂದಿನ ಈ ಕಾದಂಬರಿಕಾರರನ್ನು ಬಿಡೋಣ. ಈ ಚರಿತ್ರಕಾರರೆಂದು ಹೇಳಿಕೊಂಡವರು ಕೂಡ ಸತ್ಯಕ್ಕೆ ಏನೇನು ಅಪಚಾರ ಮಾಡಿದ್ದಾರೆಂಬದು ಈಗೀಗ ಬೆಳಕಿಗೆ ಬರುತ್ತಿದೆ. ಹಾಗಿರುವಾಗ ನಿರ್ಮಮತೆಯೇ ವ್ಯವಹಾರ ಧರ್ಮವಾಗಿದ್ದ ಹಿಂದಿನ ಋಷಿಗಳು ತಮ್ಮ ಗ್ರಂಥಗಳಲ್ಲಿಯೇ ತಮಗಿರುವ ಆ ನಿರ್ಮಮತೆಯನ್ನು ಪುನಃ ಪುನಃ ವ್ಯಕ್ತಪಡಿಸಿರುವಾಗ ಅವರು ಏತಕ್ಕಾಗಿಯೋ ಏನೇನನ್ನೋ ಕಲ್ಪಿಸಿಕೊಂಡು ಹೇಗೆ ಹೇಗೋ ಬರೆದಿದ್ದಾರೆ ಎಂದು ಕರೆಯಲು ಸಾಹಸಪಡುವ ನಾವು ನಮ್ಮ ಯೋಗ್ಯತೆಯನ್ನು ಮೊದಲು ತಿಳಿದುಕೊಳ್ಳಬೇಡವೆ ?

ಹೋಗಲಿ, ಕೇಳು. ಭೀಮನಿಗೆ ತುಂಬ ದುಃಖವಾಯಿತು. ಆದರೆ ತನಗೆ ಯಾರಿಂದ ಈ ದುಃಖ ಉಂಟಾಯಿತೋ ಅವನ ಮೇಲೆ ತನಗೆ ಕೈ ಮಾಡಲು ಶಕ್ತಿ ಇರಲಿ, ಇಲ್ಲದಿರಲಿ, ಅವನು ತನಗೆ ದುಃಖವನ್ನು ಒಡ್ಡಿದನಲ್ಲ ಎಂಬದಕ್ಕಾಗಿ ಅವನ ಮೇಲೆ ಏರಿ ಹೋಗುವಂತಹ ಮೂರ್ಖನಾಗಿರಲಿಲ್ಲ. ಯಾರನ್ನು ವಿಮರ್ಶಕರು ಸುಶಿಕ್ಷಿತ, ಬುದ್ಧಿವಂತ, ಚತುರ ಎಂದೆಲ್ಲ ಹೊಗಳುತ್ತಾರೋ ಅಂತಹ ಅರ್ಜುನನಿ ಗಿಂತಲೂ ಯಾರನ್ನು ಇವರು ಒರಟ, ಮೂಢ, ಶಠ ಎಂದು ಕರೆಯುತ್ತಾರೋ ಅಂತಹ ಭೀಮನು ಈ ವಿಷಯದಲ್ಲಿ ಅದೆಷ್ಟು ಸುಶಿಕ್ಷಿತನಾಗಿದ್ದನು ಎಂಬದನ್ನು ತುಲನೆ ಮಾಡಲು ಈ ಘಟನೆ ಒಂದು ಉತ್ತಮ ಉದಾಹರಣೆಯಾಗಿದೆ.

ರಮೆ:– ಅದು ಹೇಗೆ ?

ಮುರಳಿ:– ಹಿಂದೆ ಅರ್ಜುನನು ಶಿವನನ್ನು ಒಲಿಸಿಕೊಂಡು ಪಾಶುಪತಾಸ್ತ್ರ ವನ್ನು ಪಡೆದ ವಿಚಾರ ಹೇಳಿದೆನಷ್ಟೆ ? ಅಲ್ಲಿಯೂ ಹೀಗೆಯೇ ನಡೆಯುತ್ತದೆ.

ಅರ್ಜುನನು ಹೋಗಿದ್ದುದು ಶಿವನನ್ನು ಕುರಿತು ತಪಸ್ಸು ಮಾಡಲಿಕ್ಕೆಂದು. ಅಂದರೆ, ಅವನು ಭಕ್ತಿ, ಶರಣಾಗತಿ, ಅಥವಾ ಅಹಂಕಾರದ ನಾಶ – ಇವುಗಳ ಸಂಬಂಧವಾದ ಸಾತ್ವಿಕ ಮನೋಭಾವವನ್ನು ಆಗ ಪಡೆದಿರಬೇಕಾಗಿದ್ದವನು. ಅದೇ ರೀತಿ ಅವನು ಹಲವು ತಿಂಗಳ ಕಾಲ ತಪಸ್ಸು ಮಾಡುತ್ತಲೂ ಇರುತ್ತಾನೆ. ಆದರೆ ಇಲ್ಲಿ ಭೀಮ ಹೊರಟಿರುವದೇ ಕಮಲ ಪುಷ್ಪವನ್ನು ತರುವ ಸಾಹಸಕ್ಕಾಗಿ.

ಅಹಂಕಾರ ಪ್ರಧಾನವಾಗಿರುವ ರಜೋಗುಣದ ಕೆಚ್ಚಿನಿಂದ ಅವನು ಈಗ ಕೂಡಿರ ಬೇಕಾದುದು ಸಹಜ.

ಶಿವನು ಕಿರಾತ ರೂಪದಲ್ಲಿ ಕಾಣಿಸಿಕೊಂಡು ಅರ್ಜುನನೊಂದಿಗೆ ಜಗಳ ತೆಗೆದು ಇಬ್ಬರಿಗೂ ಯುದ್ಧವಾಗುತ್ತದೆ. ತಾನು ಯಾವದೇ ಕ್ರೂರವಾದ ಅಸ್ತ್ರ ಗಳಿಂದ ಹೊಡೆದರೂ ಕಿರಾತನಿಗೆ ಏನೂ ಆಗದಿರುವದನ್ನು ಅರ್ಜುನ ಗಮನಿಸು ತ್ತಾನೆ. ಕೊನೆಗೆ ತನಗೆ ಅಗ್ನಿಯಿಂದ ಕೊಡಲ್ಪಟ್ಟಿದ್ದ ಅಕ್ಷಯವಾಗುವ ಬತ್ತಳಿಕೆಯೂ ಬರಿದಾಗಿ ಬಿಡುತ್ತದೆ. ಆಗಲಾದರೂ ಅವನಿಗೆ ತನ್ನ ಎದುರಾಳಿಯು ಯಾವನೋ ಅಮಾನುಷ ವ್ಯಕ್ತಿಯೆಂದು ಹೊಳೆಯಬೇಕಾಗಿತ್ತು. ಅದಾದ ಮೇಲೆ ತನ್ನ ಗಾಂಢೀವ ಧನುಸ್ಸಿನಲ್ಲಿಯೇ ಕಿರಾತನನ್ನು ಹೊಡೆಯುತ್ತಾನೆ. ಕಿರಾತ ಅದನ್ನು ಸುಲಭವಾಗಿ ಕಸಿದುಕೊಳ್ಳುತ್ತಾನೆ. ಆಗಲೂ ಅರ್ಜುನನಿಗೆ ಕಿರಾತನ ಮಹತ್ವ ತಿಳಿಯುವದಿಲ್ಲ. ಕತ್ತಿಯಿಂದ ಹೊಡೆಯುತ್ತಾನೆ. ಕತ್ತಿಯ ಹಿಡಿ ಮಾತ್ರ ಅವನ ಕೈಯಲ್ಲಿ ಉಳಿಯುವಂತೆ ಕಿರಾತ ಅದನ್ನೂ ಮುರಿದಿಟ್ಟುಕೊಳ್ಳುತ್ತಾನೆ. ಕಿರಾತನಿಗೆ ಏನೂ ಅಪಾಯವಾಗುವದಿಲ್ಲ. ಆಗಲೂ ಅರ್ಜುನನಿಗೆ ಗೊತ್ತಾಗುವ ದಿಲ್ಲ. ಕೊನೆಯಲ್ಲಿ ಅರ್ಜುನನು ಅವನೊಂದಿಗೆ ಮಲ್ಲಯುದ್ಧಕ್ಕೆ ಇಳಿಯುತ್ತಾನೆ. ಅದರಲ್ಲಿಯೂ ಇವನ ಆಟ ಏನೂ ಸಾಗದೆ – ಕಿರಾತನ ಒಂದು ಒದೆತದಿಂದ ಮೂಗು, ಬಾಯಿಗಳಲ್ಲಿ ರಕ್ತ ಸುರಿದು ಅರ್ಜುನ ಅರೆಜೀವವಾಗುತ್ತಾನೆ. ಇಷ್ಟಾದರೂ ಅವನಿಗೆ ಕಿರಾತನ ಹಿರಿತನ ಗೊತ್ತಾಗುವದಿಲ್ಲ. ಅನಂತರ ಶಿವಲಿಂಗವನ್ನು ಪೂಜಿಸಿ ಪುನಃ ಜಗಳಕ್ಕೆ ಬರುತ್ತಾನೆ. ಶಿವಲಿಂಗದ ಮೇಲೆ ತಾನಿಟ್ಟಿದ್ದ ಹೂವುಗಳೆಲ್ಲವೂ ಕಿರಾತನ ತಲೆಯಲ್ಲಿರುತ್ತವೆ. ಆಗಲೂ ಅವನಿಗೆ ಕಿರಾತನ ದೈವತ್ವದ ಅರಿವಾಗುವದಿಲ್ಲ. ಮತ್ತೊಮ್ಮೆ ಲಿಂಗಪೂಜೆಯನ್ನು ಮಾಡಿ ಹಿಂತಿರುಗಿ ಬಂದಾಗಲೂ ಲಿಂಗಕ್ಕೆ ಅರ್ಪಿಸಿದ ಹೂವುಗಳು ಕಿರಾತನ ತಲೆ ಯಲ್ಲಿ ಇರುತ್ತವೆ. ಆಗ ಅವನಿಗೆ ಗೊತ್ತಾಗುತ್ತದೆ – ಲಿಂಗಕ್ಕೂ ಕಿರಾತನಿಗೂ ಸಂಬಂಧವಿದೆ, ಇವನು ಶಿವನೇ ಇರಬೇಕು ಎಂದು.

ಭೀಮನ ಪರಿಸ್ಥಿತಿಯನ್ನು ನೋಡು. ಇವನು ಎದುರಿಸಿದುದು ಮನುಷ್ಯ ನನ್ನು ಕೂಡ ಅಲ್ಲ, ಒಂದು ಕಾಡು ಕಪಿಯನ್ನು. ಬಾಲವನ್ನು ಒಮ್ಮೆ ಗದೆ ಯಿಂದ ನೂಕುತ್ತಾನೆ. ಅದು ಅಲುಗಾಡುವದಿಲ್ಲ. ಮತ್ತೊಮ್ಮೆ ತನ್ನ ಬಲ ವನ್ನೆಲ್ಲ ಪ್ರಯೋಗಿಸಿ ಎರಡೂ ಕೈಗಳಿಂದ ಅಲುಗಾಡಿಸುತ್ತಾನೆ. ಅದು ಕದಲುವ ದಿಲ್ಲ. ಅವನು ತಕ್ಷಣ ಯೋಚಿಸುತ್ತಾನೆ – ಇದು ಸಾಮಾನ್ಯವಾದ ಕಪಿಯಲ್ಲ. ದೇವೇಂದ್ರನೋ, ರುದ್ರನೋ, ತ್ರೇತೆಯ ಅದ್ವಿತೀಯ ಸಾಹಸಿ ಹನುಮನೋ ಆಗಿರಬೇಕೆಂದು ಅವನು ನಿಶ್ಚಯಿಸುತ್ತಾನೆ...........

ರಮೆ:– ಅದೇನೋ ಸರಿ. ಆದರೆ ಹೆಚ್ಚು ಕಡಿಮೆ ಒಂದೇ ಬಗೆಯ ಪರಿಸ್ಥಿತಿ

ಯಲ್ಲಿ ಅರ್ಜುನನು ಆ ರೀತಿಯೂ ಭೀಮನು ಈ ರೀತಿಯೂ ವರ್ತಿಸಿದುದಕ್ಕೆ ಏನು ಕಾರಣ ಎನ್ನುತ್ತೀರಿ ?

ಮುರಳಿ:– ಬೇರೇನು ಕಾರಣ ? ತನ್ನ ಬಲ ಮತ್ತು ದೌರ್ಬಲ್ಯಗಳನ್ನು ಸರಿಯಾಗಿ ತಿಳಿದುಕೊಂಡಿರುವವನು ಭೀಮನಂತೆ ವರ್ತಿಸುತ್ತಾನೆ. ಅಹಂಕಾರದ ಮಬ್ಬು ಕವಿದಾಗ ವ್ಯಕ್ತಿಗೆ ತನ್ನ ದೌರ್ಬಲ್ಯವಾಗಲಿ, ಇತರರಲ್ಲಿರುವ ಮಹತ್ವವಾಗಲಿ ಗೊತ್ತಾಗುವದಿಲ್ಲ ಎಂಬದಕ್ಕೆ ಅರ್ಜುನನ ವರ್ತನೆ ಸಾಕ್ಷಿ. ಭೀಮನು ಮೂಢ, ಮುಂಗೋಪಿ, ಪೂರ್ವಾಪರಗಳನ್ನು ತಿಳಿಯದೆ ದುಸ್ಸಾಹಸಕ್ಕೆ ಎಳಿಸುವವನು, ಅವಿವೇಕಿ ಎಂಬಂತೆಲ್ಲ ವ್ಯಾಖ್ಯಾನ ಮಾಡುವ ಮಹಾಭಾರತದ ವಿಮರ್ಶಕರು ಅರ್ಜುನನನ್ನು ಅವನು ನರ ಋಷಿಯ ಅಪರಾವತಾರಿಯಾದುದರಿಂದ ಮಹಾಸಾತ್ತ್ವಿಕ, ವಿವೇಕಿ, ಅಸಮ ಸಾಹಸಿ, ಮಹಾವೀರ ಎಂದು ಚಿತ್ರಿಸಿರುವದು ಈ ಘಟನೆಗಳಲ್ಲಿ ಹೇಗೆ ಸಿದ್ಧಗೊಳ್ಳುತ್ತದೋ ಕಾಣೆ. ಅರ್ಜುನನ ಅವಿವೇಕ ಮತ್ತು ದುರಹಂಕಾರಗಳಿಗೆ ಇತರ ಅನೇಕ ಘಟನೆಗಳೂ ಉದಾಹರಣೆಗೆ ಸಿಕ್ಕುತ್ತವೆ. ಭೀಮ ತನ್ನ ಜೀವನದಲ್ಲಿ ಒಮ್ಮೆಯಾದರೂ ಇಂತಹ ಘಟನೆಗೆ ಕಾರಣನಾದುದು ನಮ್ಮ ಗಮನಕ್ಕೆ ಬರುವದಿಲ್ಲ. ಅರ್ಹತೆಯನ್ನು ತಿರಸ್ಕರಿಸುವದು ಎಷ್ಟು ದೊಡ್ಡ ತಪ್ಪೋ, ಅನರ್ಹತೆಯನ್ನು ಪುರಸ್ಕರಿಸುವದೂ ಅಷ್ಟೇ ತಪ್ಪಾಗುತ್ತದೆ. ಮಹಾಭಾರತದ ಆದರ್ಶವನ್ನು ವಿವರವಾಗಿ ವಿಮರ್ಶಿಸುವಲ್ಲಿ ವಿಮರ್ಶಕರು ಭೀಮಾರ್ಜುನರ ಬಗೆಗೆ ಇಂತಹ ಅಕ್ಷಮ್ಯವಾದ ಅಪಚಾರ ಮಾಡಿದ್ದಾರೆ ಎಂದೆನಿಸುತ್ತದೆ.

ರಮೆ:– ಭೀಮನ ವೀರತನವನ್ನು ಯಾರೂ ಅಲ್ಲಗಳೆದಿಲ್ಲವಲ್ಲ ?

ಮುರಳಿ:– ವೀರತನ ಎನ್ನುವದು ಅಷ್ಟರಿಂದಲೇ ಒಂದು ಆದರ್ಶ ಗುಣ ಎನಿಸುವದಿಲ್ಲ. ವೀರತನದಲ್ಲಿ ದುರ್ಯೋಧನ, ಜರಾಸಂಧ, ಕೀಚಕ ಮೊದಲಾದವರೂ ಹೆಸರುವಾಸಿಯಾಗಿದ್ದರು. ಕ್ಷತ್ರಿಯೋಚಿತವಾದ ವೀರತನ ಭೀಮನಲ್ಲಿದ್ದರೆ ಅದೊಂದು ಸ್ತುತಿಯೋಗ್ಯವಾದ ಗುಣವೇನೂ ಆಗುವದಿಲ್ಲ. ಅವನ ಮನಸ್ಸು ಎಂತಹದು, ಅವನು ಎಷ್ಟು ವಿಕಾಸಗೊಂಡ ವ್ಯಕ್ತಿಯಾಗಿದ್ದನು, ಅವನು ಪ್ರತಿಯೊಂದು ಸಂದರ್ಭದಲ್ಲಿಯೂ ಹೇಗೆ ನಡೆದುಕೊಳ್ಳುತ್ತಿದ್ದನು ಎಂಬದರಿಂದೆಲ್ಲ ನಾವು ಅವನ ಒಟ್ಟು ವ್ಯಕ್ತಿತ್ವವನ್ನು ಅಳೆಯಬೇಕು. ಸರಿಯಾಗಿ ವಿಮರ್ಶಿಸಿ ನೋಡಿದರೆ ಲೋಕೋತ್ತರವಾದ ಮಹಾಭಾರತ ಗ್ರಂಥದಲ್ಲಿ, ನಾವು ಭಗವಂತನೆಂದು ಸ್ವೀಕರಿಸಿರುವ ಶ್ರೀಕೃಷ್ಣನನ್ನು ಬಿಟ್ಟರೆ ಭೀಮನ ವ್ಯಕ್ತಿತ್ವವೇ ಸರ್ವಮಾನ್ಯವಾಗಿ ಕಾಣಿಸುವಾಗ ನಾವು ಅದನ್ನು ತಿಳಿದುಕೊಳ್ಳದೆ ಮೌಲಿಕವಲ್ಲದುದನ್ನು ಅಮೂಲ್ಯವಾದುದೆಂದೂ ಅಮೂಲ್ಯವಾದುದನ್ನು ಏನೂ ಮೌಲ್ಯವಿಲ್ಲದುದೆಂದೂ ಪರಿಗಣಿಸಿಕೊಂಡು, ಆ ಮೂಲಕ ಮಹಾನ್ ಗ್ರಂಥಕ್ಕೆ ಅಪಚಾರವನ್ನೂ, ನಮನಮಗೇ ಅಪಕಾರವನ್ನೂ ಮಾಡಿಕೊಳ್ಳುತ್ತಿದ್ದೇವಲ್ಲಾ ಎಂಬದಕ್ಕಾಗಿ ಇದನ್ನೆಲ್ಲ

ಇಷ್ಟು ವಿವರಿಸುತ್ತಿದ್ದೇನೆ, ಅಷ್ಟೆ. ಹೇಗೂ ಇರಲಿ. ಕೇಳು. ದುರ್ಗುಣಿಯು ಇನ್ನೊಬ್ಬರಲ್ಲಿ ದುರ್ಗುಣವನ್ನೇ ಹುಡುಕುವದು, ಸುಗುಣಿಯು ಇತರರ ಸುಗುಣ ವನ್ನು ತಕ್ಷಣ ಗುರುತಿಸುವದು ಸಹಜವಾದಂತೆ ಭೀಮನು ಕಪಿಯನ್ನೇ ಆದರೂ ಅದನ್ನು ಕುರಿತು "ಅಯ್ಯಾ, ಈ ನನ್ನ ಶರೀರವು ಇಲ್ಲಿಯ ತನಕ ಅಪಜಯವನ್ನು ಕಂಡಿಲ್ಲ. ಆದರೆ ಇಂದು ಕೇವಲ ನಿನ್ನ ಬಾಲವು ನನ್ನನ್ನು ಗೆದ್ದಿದೆ. ನಿಸ್ಸೀಮ ವೀರಾಗ್ರೇಸರನಾದ ನೀನು ಯಾರು ?" ಎಂದು ಕೇಳಿದನು. ಭೀಮನ ಬಲವನ್ನೂ, ವಿವೇಕವನ್ನೂ, ಗುಣವನ್ನೂ ಕಂಡು ಮೆಚ್ಚಿದ ಅಂಜನೇಯನು ಅವನನ್ನು ಇನ್ನೂ ಪರೀಕ್ಷಿಸುವದಕ್ಕಾಗಿ ತನ್ನ ವಿಷಯವನ್ನು ಮೊದಲು ತಿಳಿಸದೆ "ಅಯ್ಯಾ, ನಿನಗೆ ಕಾಣಿಸುತ್ತಿರುವಂತೆಯೇ ನಾನೊಬ್ಬ ಕಪಿ. ನಿಸ್ಸತ್ವನಾಗಿದ್ದೇನೆ. ನೀನು ಮಹಾ ಬಲಶಾಲಿಯಾಗಿ ಕಾಣಿಸುತ್ತೀಯೆ. ನೀನು ಯಾರು ?" ಎಂದು ಪ್ರಶ್ನಿಸಿದನು. ಭೀಮನು ತನ್ನ ಎಲ್ಲ ವಿಷಯುಗಳನ್ನೂ ವಿವರವಾಗಿ ತಿಳಿಸಿ ಆಂಜನೇಯನ ಕುರಿತಾಗಿ ಕೇಳಲು ಅವನು ಅತ್ಯಾನಂದದಿಂದ ತಾವಿಬ್ಬರೂ ಒಬ್ಬನೇ ತಂದೆಯ ಮಕ್ಕಳು ಎಂಬದನ್ನು ತಿಳಿಸಿದನು. ಭೀಮನಿಗೆ ಮಹಾಸಂಗ್ರಾಮವೊಂದನ್ನು ಜಯಿಸಿದಷ್ಟು ಆನಂದವಾಯಿತು. ಅಣ್ಣನಿಗೆ ದೀರ್ಘದಂಡ ಪ್ರಣಾಮ ಮಾಡಿದನು.

ರಮೆ:– ಮಹಾಭಾರತ ಒಂದು ಶ್ರೇಷ್ಠವಾದ ಗ್ರಂಥವೆಂಬದೇನೋ ನಿಜವೇ.

ಮುರಳಿ:– ಏನು ನಿನ್ನ ಸಂಶೋಧನೆ ?

ರಮೆ:– ಸಂಶೋಧನೆಯಲ್ಲ. ಭೀಮನಿಗೆ ಅತ್ಯಂತ ಆನಂದವಾಗುವದೆಂದರೆ ದೊಡ್ಡ ಸಂಗ್ರಾಮದಲ್ಲಿ ಗೆಲ್ಲುವದು ಎಂಬ ಹೇಳಿಕೆಯಲ್ಲಿ ಎಷ್ಟು ಅರ್ಥ, ಎಂತಹ ಸತ್ಯ ಅಡಗಿದೆ ಎಂಬದು ಏಕೋ ಗಮನಕ್ಕೆ ಬಂದಿತು. ಸಾವಿರ ಜನರಿಗೆ ಸಾವಿರ ವಿಧದಲ್ಲಿ ಆನಂದವಾಗಲು ಸಾಧ್ಯವಿರುವಾಗ ಆಗಿನ ಕಾಲದ ವೀರ ಕ್ಷತ್ರಿಯ ನೊಬ್ಬನಿಗೆ ಸಂಗ್ರಾಮವನ್ನು ಗೆಲ್ಲುವದೇ ನಿಜವಾಗಿ ಆನಂದದಾಯಕ ವಿಷಯ ಎನ್ನುವದು ಎಷ್ಟು ಸಮಂಜಸ ಅನಿಸಿತು. ಸಾಮಾನ್ಯವಾಗಿ ಅಗಣ್ಯವೆನಿಸುವ ವಿಷಯ ಕೂಡ ತೂಕ ಮಾಡಿ ಪರೀಕ್ಷಿಸಲ್ಪಟ್ಟು ಇಟ್ಟಂತೆ ಉಲ್ಲೇಖಗೊಂಡಿರುವ ಈ ಗ್ರಂಥವನ್ನು, ಕಾದಂಬರಿಯನ್ನು ಓದಿದಂತೆ ಓದಬಾರದು ಎಂದು ನೀವು ಹೇಳುವದು ಈಗೀಗ ನನಗೆ ಅರ್ಥವಾಗುತ್ತಿದೆ. ಮುಂದಕ್ಕೆ ಹೇಳಿ.

ಮುರಳಿ:– ಆಗಬಹುದು. ಕೇಳು. ಹಿಮಾಲಯವು ಹಿಮವಲ್ಲದೆ ಅನ್ಯಾಯ, ವಿದ್ರೋಹಗಳ ರಾಶಿಯಾಗಿದ್ದರೆ ಅದನ್ನೇ ಒಡೆದೊಡೆದು ಚೂರು ಮಾಡುತ್ತೇನೆನ್ನುವಷ್ಟು ಸಾಹಸವೂ, ದೇಹಬಲವೂ, ವೀರತನದ ಕೆಚ್ಚೂ ಇರುವ ಬಲ ಭೀಮನು ತನ್ನ ಮುಂದಿದ್ದ ಕಪಿಯು ಆಂಜನೇಯನೆಂಬದನ್ನು ತಿಳಿದೊಡನೆ

ಆತನಿಗೆ ದೀರ್ಘದಂಡ ಪ್ರಣಾಮವನ್ನು ಮಾಡಿ "ಶಿವ ಶಿವಾ, ಸರೋವರವೆಲ್ಲಿ, ಅದರ ಪದ್ಮದ ಸುಗಂಧವೆಲ್ಲಿ, ನಾನು ಬಂದುದೆಲ್ಲಿಗೆ, ನನಗೆ ದೊರಕಿದ ಪರಮ ನಿಧಿಯಾದರೂ ಎಂತಹದು ? ತಂದೇ, ನಿನ್ನನ್ನು ಕಂಡು ಕೃತಾರ್ಥನಾದೆ. ಕೌರವರಿಂದ ವಂಚಿಸಲ್ಪಟ್ಟು, ಅರ್ಜುನನಿಂದ ಅಗಲಲ್ಪಟ್ಟು ನೊಂದಿರುವ ಮನಸ್ಸು ಇದೀಗ ಹಿಗ್ಗಿನಿಂದ ಉಬ್ಬಿದೆ. ನಾನು ಚರಿತಾರ್ಥನಾದೆ. ನನಗೆ ಹಿರಿಯರು ಇಬ್ಬರು–ಯುಧಿಷ್ಠಿರನೂ, ನೀನೂ; ಪಿತೃಗಳಿಬ್ಬರು– ವಾಯುವೂ, ನೀನೂ; ಗುರುಗಳಿಬ್ಬರು– ವ್ಯಾಸರೂ, ನೀನೂ" ಎಂದು ಆಂಜನೇಯನನ್ನು ಸ್ತುತಿಸಿದನು. ತನ್ನ ಖ್ಯಾತಿಯನ್ನು ಉಳಿಸಬಲ್ಲ ಸಮರ್ಥನಾದ ತನ್ನ ತಮ್ಮನನ್ನು ಕಂಡು ಹಿಗ್ಗಿದ ಹನುಮಂತನೂ ಕೂಡ ಅವನನ್ನು ಕುರಿತು "ನಿನ್ನ ಮನೋ ನೈರ್ಮಲ್ಯಕ್ಕೂ ಭುಜಬಲಕ್ಕೂ ನನ್ನ ಮೆಚ್ಚಿಗೆಯಿದೆ.

ರಮೆ:– ........ಮನೋ ನೈರ್ಮಲ್ಯ !

ಮುರಳಿ:– ಹಾಗೆ ಗಮನಿಸಬೇಕು. ಸತ್ಯವ್ರತನಾದ ಆಂಜನೇಯನು ಭೀಮನನ್ನು ಕುರಿತು ಬಳಸಿದ ಗುಣವಾಚಕ ಇದು. ನಿರ್ಮಲವಾದ ಮನಸ್ಸು ಯೋಗಿಗಳಿಗೆ, ತಪಸ್ವಿಗಳಿಗೆ ಕೂಡ ಸುಲಭವಾಗಿ ದಕ್ಕದಂತಹದು. ದೈವತ್ವದ ಆವಿಷ್ಕಾರಕ್ಕೆ ಅವಶ್ಯವಾದ ಭೂಮಿಕೆ ನಿರ್ಮಲವಾದ ಮನಸ್ಸು. ಆ ಒಂದು ಶಬ್ದದಲ್ಲಿ ಭೀಮನ ಸಂಪೂರ್ಣ ವ್ಯಕ್ತಿತ್ವದ ಚಿತ್ರ ಅಡಗಿದೆ. ಈ ನಿರ್ಮಲ ಮನಸ್ಸಿನ ಸರ್ವಾಂಗ ಸೌಂದರ್ಯವನ್ನು ಕೃಷ್ಣನಲ್ಲಿ ಸ್ಪಷ್ಟವಾಗಿ ಕಾಣುತ್ತೇವೆ. ಸ್ಪಷ್ಟವಾಗಿ ಕಾಣಿಸಿಕೊಳ್ಳದೆ ಅದು ಶೋಭಿಸುತ್ತಿರುವದನ್ನು ಅನಂತರ ಭೀಮನಲ್ಲಿ ಮಾತ್ರ ನಾವು ಕಾಣಲು ಸಾಧ್ಯ. ಯುಧಿಷ್ಠಿರನದೂ ನಿರ್ಮಲಾಂತಃಕರಣವೇ. ಆದರೆ ಅದಕ್ಕೆ ನಿಷ್ಕ್ರಿಯತೆಯ ಮಬ್ಬು ಕವಿದಿದೆ. ಕೃಷ್ಣನದು ಇದಕ್ಕೆ ವಿರುದ್ಧವಾಗಿ ಕ್ರಿಯೆಯ ಪರಾಕಾಷ್ಠತೆಯನ್ನು ತಲಸಿದೆ. ಈ ಎರಡರ ನಡುವೆ ಭೀಮ ಬರುತ್ತಾನೆ. ನಿರ್ಮಲ ಮನಸ್ಸು; ಕರ್ಮದಲ್ಲಿ ಉತ್ಸಾಹ; ಅದನ್ನು ಸಾಧಿಸುವದಕ್ಕೆ ಬೇಕಾದ ದೇಹಬಲ. ಹೀಗೆ, ಅವನು ಕೃಷ್ಣನನ್ನು ಬಿಟ್ಟರೆ ಅತ್ಯಂತ ಆದರ್ಶವಾದ ವ್ಯಕ್ತಿತ್ವ ಪಡೆದಿದ್ದ ಎಂಬದನ್ನೇ ನಾನು ಆಗಾಗ ಹೇಳುವದು. ಕೇಳು. ಆಂಜನೇಯನು ಮುಂದುವರಿದು "ನಿಮಗೆ ಶ್ರೇಯಸ್ಸಾಗುವದು. ನಿನ್ನನ್ನು ಕಾಣಬೇಕೆಂದಿದ್ದ ನನ್ನ ಬಯಕೆ ಇಂದು ಈಡೇರಿತು" ಎಂದನು. ಹನುಮಂತ ನೊಡನೆ ಉಂಟಾದ ಬಂಧುತ್ವದ ಸಲಿಗೆಯಿಂದಾಗಿ, ಅವನು ಸಮುದ್ರ ಲಂಘನ ಕಾಲದಲ್ಲಿ ಧರಿಸಿದ ಅವನ ಮಹೋನ್ನತ ರೂಪವನ್ನು ತೋರಿಸಬೇಕೆಂದು ಭೀಮನು ಪ್ರಾರ್ಥಿಸಿಕೊಳ್ಳಲು ಅವನ ಒತ್ತಾಯಕ್ಕಾಗಿ ಮಾರುತಿಯು ಆ ಮಹದ್ರೂಪವನ್ನು ಧರಿಸಿದನು. ಭೂಮ್ಯಾಕಾಶಗಳನ್ನು ಒಂದುಗೂಡಿಸುವಂತಹ ಪ್ರಚಂಡ ದೇಹವನ್ನು ಧರಿಸಿ ಭಯಂಕರನಾಗಿ ತನ್ನ ಮುಂದೆ ನಿಂತ ಮರುತ್ಪುತ್ರನನ್ನು ನೋಡಲಾರದೆ

ಭೀಮನು ಅವನು ತನ್ನ ಮುಂಚಿನ ರೂಪವನ್ನೇ ಧರಿಸಬೇಕೆಂದು ಪ್ರಾರ್ಥಿಸಿಕೊಂಡನು. ತನ್ನ ಎಂದಿನ ರೂಪಿನಲ್ಲಿ ಕಾಣಿಸಿಕೊಂಡ ಹನುಮಂತನು ಭೀಮನ ಕೋರಿಕೆಯಂತೆ ತಾನು ಅರ್ಜುನನ ಪತಾಕೆಯಲ್ಲಿ ನೆಲಸುವದಾಗಿ ಅನುಗ್ರಹಿಸಿ ಎತ್ತಲೋ ತೆರಳಿದನು.

ರಮೆ:– ಪತಾಕೆಯಲ್ಲಿ ನೆಲಸುವದೆಂದರೆ ?

ಮುರಳಿ:– ಧ್ವಜದಲ್ಲಿ ಕುಳಿತಿರುವದು ಎಂದು.

ರಮೆ:– ಆಗ ಮಕರ ಧ್ವಜ, ಮತ್ಸ್ಯ ಧ್ವಜ, ಉರಗ ಧ್ವಜ ಎಂದರೆ ರಥದ ಪತಾಕೆಗಳಲ್ಲಿ ಮೊಸಳೆ, ಮೀನು, ಹಾವುಗಳನ್ನು ತೂಗಿಡುತ್ತಿದ್ದರು ಎಂದರ್ಥವೊ ?

ಮುರಳಿ:– ಅಲ್ಲ. ಅದು ಕೇವಲ ಲಾಂಛನ ಮಾತ್ರ. ಆದರೆ ಇಲ್ಲಿ ಹನುಮಂತನ ಚೈತನ್ಯವು ಸ್ವತಃ ಅರ್ಜುನನ ಧ್ವಜದಲ್ಲಿ ನೆಲಸಬೇಕೆಂಬದು ಭೀಮನ ಪ್ರಾರ್ಥನೆ.

ರಮೆ:– ಕಾರಣ ?

ಮುರಳಿ:– ಮುಂದೆ ತಮಗೂ ಕೌರವರಿಗೂ ಯುದ್ಧವು ಆಗಿಯೇ ತೀರುವದೆಂಬದನ್ನು ಭೀಮನು ಊಹಿಸಿದ್ದನೆಂದೇ ಹೇಳಬಹುದು. ಆ ಕಾಲದಲ್ಲಿ ಅರ್ಜುನನ ರಥವು ಅಸಾಧಾರಣವಾದ ದೈವಿಕ ಶಕ್ತಿಯಿಂದ ಕೂಡಿರಲಿ ಎಂದು ಅವನು ಬಯಸಿದನೆಂದು ಹೇಳಿದಂತಾಯಿತು.

ರಮೆ:– ಅಂತಹ ದೈವೀ ಸಂಪತ್ತನ್ನು ತಾನು ಕೇಳಿಕೊಳ್ಳದೆ ಅರ್ಜುನನಿಗಾಗಿ ಕೇಳಿದುದೇಕೆ ?

ಮುರಳಿ:– ಅವನು ಕುಶಲಮತಿಯಾದುದರಿಂದ. ಅವನಿಗೆ ಗೊತ್ತು–ತಾನು ರಥಿಕನಾಗಿ ಮಾಡುವ ಯುದ್ಧಕ್ಕಿಂತ ಗದಾಧಾರಿಯಾಗಿ ಮಾಡಬೇಕಾಗುವ ಯುದ್ಧವೇ ಹೆಚ್ಚು ಎಂಬದು. ಆದರೆ ಭೀಷ್ಮ, ದ್ರೋಣ, ಕರ್ಣ ಮೊದಲಾದ ಬಿಲ್ಗಾರರನ್ನೆಲ್ಲ ತಮ್ಮ ಪಕ್ಷದಿಂದ ಎದುರಿಸಬೇಕಾಗುವದು ಅರ್ಜುನನ ಪಾಲಿಗೆ ಸೇರುತ್ತದೆ ಎಂಬದನ್ನೂ ಅವನು ಸಹಜವಾಗಿ ತರ್ಕಿಸಿರಬೇಕು. ಅಂತಹ ಪ್ರಚಂಡ ಬಿಲ್ಗಾರರ ಎದುರಿನಲ್ಲಿ ನಿಲ್ಲಲು ಅರ್ಜುನನು ಅರ್ಹತೆ ಪಡೆಯಬೇಕಾದರೆ ಅವನ ಉಪಕರಣಗಳು ಎಷ್ಟು ಬಲಗೊಂಡರೆ ಅಷ್ಟೂ ಒಳ್ಳೆಯದು ಎಂಬದನ್ನೂ ಅವನು ಆಲೋಚಿಸಿದ್ದಿರಬೇಕು. ಅನಿರೀಕ್ಷಿತವಾಗಿ ಆಂಜನೇಯನು ಕಾಣಲು ಸಿಕ್ಕಿದಾಗ ಆ ಅಪೂರ್ವತೆಯಲ್ಲಿ ತಾನು ಮೈ ಮರೆತು ತನ್ನ ಪ್ರಜ್ಞೆಯನ್ನು ಕಳೆದುಕೊಳ್ಳದೆ ಆ ಕ್ಷಿಪ್ರ ಅವಧಿಯಲ್ಲಿಯೇ ಆದರೂ ಅದನ್ನು ಅಮಿತ ಲಾಭಕ್ಕಾಗಿ ಬಳಸಿಕೊಳ್ಳುವ

ಅವನ ಬುದ್ಧಿ ಸಾಮರ್ಥ್ಯವನ್ನು ನಾವು ಕೃಷ್ಣನಲ್ಲಿ ಬಿಟ್ಟರೆ ಇತರರಲ್ಲಿ ಕಾಣಲಾರೆವು.

ರಮೆ:– ಕೃಷ್ಣನೋ, ಇತರರೋ ನನಗೆ ಗೊತ್ತಿಲ್ಲ. ಆದರೆ ಭೀಮನು ಈ ಸಂದರ್ಭದಲ್ಲಿ ತೋರಿದ ಬುದ್ಧಿಯ ತೀಕ್ಷ್ಣತೆ ಅಸಾಧಾರಣವಾದದ್ದು ಎಂಬದನ್ನು ಒಪ್ಪಿಕೊಳ್ಳುತ್ತೇನೆ. ಮುಂದುವರಿಸಿ.

ಮುರಳಿ:– ಆಂಜನೇಯನು ಕಣ್ಮರೆಯಾದ ಮೇಲೆ ಭೀಮನು ಸುಗಂಧಯುಕ್ತ ತಾವರೆಯನ್ನು ಕುರಿತು ಚಿಂತಿಸುತ್ತಾ ತಾನು ಈ ರೀತಿ ಸಮಯವನ್ನು ಕಳೆದು ತಡವಾದುದರಿಂದ ದ್ರೌಪದಿಯು ತನ್ನಲ್ಲಿ ಎಷ್ಟು ಕೋಪಿಸಿಕೊಳ್ಳುವಳೋ ಎಂದುಕೊಂಡು ಮುಂದೆ ನಡೆದು ಸಹಸ್ರದಳ ಪದ್ಮವಿರುವ ಕೊಳವನ್ನು ಪ್ರವೇಶಿಸಿದನು. ಲಕ್ಷೋಪಲಕ್ಷ ಯಕ್ಷರು ಆ ಕೊಳಕ್ಕೆ ಕಾವಲಿದ್ದರು. ನೂರಾರು ವಿಧದ ಆಯುಧಗಳನ್ನು ಧರಿಸಿದ್ದ ಅವರು ಭೀಮನನ್ನು ಕೆಣಕಿ ತಡೆದು ಅವನು ಬಂದ ಕಾರಣವನ್ನು ಪ್ರಶ್ನಿಸಲು ಭೀಮನು ಅವರಿಗೆ ಸ್ಥೂಲವಾಗಿ ಎಲ್ಲವನ್ನೂ ತಿಳಿಸಿದನು. ಅವರು ಅವನನ್ನು ತಾತ್ಸಾರದಿಂದ ಕಂಡು, ಪದ್ಮವು ಬೇಕಾದರೆ ಅವನು ತಮ್ಮ ಯಜಮಾನನಾದ ಕುಬೇರನಲ್ಲಿಗೆ ಹೋಗಿ ಬೇಡಿಕೊಳ್ಳಬೇಕೆಂದು ತಿಳಿಸಿದರು. ಅಪರಿಚಿತರನ್ನು ತಾತ್ಸಾರದಿಂದ ಕಾಣುವ ಅವರ ದುರಹಂಕಾರವನ್ನು ಸಹಿಸದ ಭೀಮನು "ಅಯ್ಯಾ, ಬೇಡಲು ನನಗೆ ತಿಳಿದಿಲ್ಲ. ಭಿಕ್ಷುಕರ ಸಂಗವೂ ನನಗೆ ವರ್ಜ್ಯವೇ. ನಾನು ಬೇಡಲಿಚ್ಛಿಸುವ ಒಂದೇ ಒಂದು ವಿಷಯವೆಂದರೆ ಯುದ್ಧ. ನಿಮ್ಮ ಯಜಮಾನನು ಅದನ್ನು ಕೊಡುವಷ್ಟು ಉದಾರಿಯಾಗಿದ್ದರೆ ಅವನನ್ನು ಕರೆಯಿರಿ. ನನ್ನ ಗದೆಯೂ ಒಂದು ವಸ್ತುವನ್ನು ಬೇಡುತ್ತಿದೆ. ಆ ವಸ್ತು ನಿಮ್ಮ ವಕ್ಷಸ್ಥಳ, ಅಲ್ಲಿರುವ ಬಿಸಿ ರಕ್ತ" ಎನ್ನುತ್ತಾ ತನ್ನ ಗದಾದಂಡವನ್ನು ಬೀಸಿದನು. ಅಷ್ಟೊಂದು ಸಂಖ್ಯೆಯಲ್ಲಿರುವ ಯಕ್ಷರಾದ ತಮ್ಮೆದುರಿನಲ್ಲಿ ಕೇವಲ ಮಾನವನಾದ ಭೀಮನು ವರ್ತಿಸಿದ ರೀತಿಯನ್ನು ನೋಡಿದ ಆ ಯಕ್ಷರು ಅವನನ್ನು ಬಹಳ ಲಘುವಾಗಿ ಕಂಡು ಹೆಬ್ಬುಲಿಗಳ ಹಿಂಡಿಗೆ ಆಡು ನುಗ್ಗಿದಂತಾಯಿತೆನ್ನುತ್ತಾ ವಿವಿಧಾಯುಧಗಳಿಂದ ಅವನನ್ನು ಹೊಡೆದರು. ಎಳೆಯ ಮುಳ್ಳುಗಳಿಂದ ಮದದಾನೆಯನ್ನು ಹೊಡೆದಂತಾಯಿತು. ಯಕ್ಷರನ್ನು ಹಾಸ್ಯಮಾಡುತ್ತಾ ಅವರಲ್ಲಿ ಅನೇಕರನ್ನು ಭೀಮನು ಸುಲಭವಾಗಿ ಕೊಂದನು. ಅವನ ಪರಾಕ್ರಮವನ್ನು ಕಂಡು ದಿಗ್ಭ್ರಾಂತರಾದ ರಾಕ್ಷಸರು ಎಲ್ಲಿಯೋ ಮಾಯವಾದರು ; ಯಕ್ಷರು ಶಸ್ತ್ರತ್ಯಾಗ ಮಾಡಿ ಓಡಿದರು. ಗುಹ್ಯಕರು ನಿಂತಲ್ಲಿ ನಿಲ್ಲಲಾರದೆ ಓಡುತ್ತಿದ್ದರು. ಕಿನ್ನರರ ಸದ್ದೇ ಕೇಳಿಸದಾಯಿತು. ಕೇವಲ ಮನುಷ್ಯನಿಂದ ಪರಾಭವಗೊಂಡ ಆ ದೂತರು ತಮ್ಮ ಕಿರೀಟ ಹಾರಿ ಹೋಗಿ ಮುಡಿ ಕೆದರಿರಲು ಕುಬೇರನಲ್ಲಿಗೆ ಹೋಗಿ ದೂರಿಕೊಂಡರು.

ಈ ಕಡೆ ಭೀಮನು ಗದೆಯನ್ನೂ, ಕೈ ಕಾಲು ಮುಖವನ್ನೂ ತೊಳೆದು ಕೊಳದ ನಡು ಮಧ್ಯದಲ್ಲಿ ನಿಂತು ಆಗಾಗ ಮುಕ್ಕಳಿಸಿ ದಡಕ್ಕೆ ಉಗುಳಿ, ಆಪ್ಯಾಯ ಮಾನವಾದ ಕೊಳದ ನೀರನ್ನು ಯಥೇಚ್ಛವಾಗಿ ಕುಡಿದು ಗಜರಾಜನು ತನ್ನ ಸೊಂಡಿಲನ್ನು ಚಾಚುವಂತೆ ಪುಷ್ಟವಾದ ತನ್ನ ತೋಳನ್ನು ಚಾಚಿ ಅನೇಕ ಕಮಲ ಗಳನ್ನು ಕಿತ್ತುಕೊಂಡು ಗದೆಯನ್ನು ಕಂಕುಳಲ್ಲಿರಿಸಿ ಕೊಳದಿಂದ ಮೇಲೆ ಬಂದನು. ಅಲ್ಲಿಂದ ಹೊರಡುತ್ತ ಅವನು, ಸುಳಿವೇ ಇಲ್ಲದಂತೆ ಮಾಯವಾಗಿ ಹೋಗಿದ್ದ ಕಾವಲಿನವರನ್ನು ಕೂಗಿ ಕರೆದು "ನಿಮ್ಮ ಕೊಳವು ಇಲ್ಲಿಯೇ ಇದೆ. ಅದನ್ನು ನಾನು ಕೊಂಡೊಯ್ಯುತ್ತಿಲ್ಲ. ನನ್ನನ್ನು ಸುಮ್ಮನೆ ದೂರಬೇಡಿ" ಎನ್ನುತ್ತಾ ಅಲ್ಲಿಂದ ಹಿಂದಿರುಗಿದನು.

ರಮೆ:– ಯಾರೂ ಇರಲಿಲ್ಲವೆಂದು ತಿಳಿದ ಮೇಲೆ ಭೀಮನು ಯಾರಿಗೆ ಕೂಗಿ ಹೇಳಿದುದು ?

ಮುರಳಿ:– ನಿಷ್ಕಳಂಕ ಮನಸ್ಸಿನ ರೂಪು, ಸದಾ ಚಿಂತೆಯಿಂದ ಮೆತ್ತಲ್ಪಟ್ಟಿರುವ ಮನಸ್ಸಿನ ನಮಗೆ ಅರ್ಥವಾಗುವದು ಕಷ್ಟ. ಹಾಸ್ಯದ ಮೂಲಕ ನಮ್ಮ ಮನಸ್ಸು ನಗಬೇಕಾದರೆ ನಮಗೆ ಏನಾದರೊಂದು ಪ್ರಚೋ ದನೆ ಬೇಕು. ಆದರೆ ಹಸನಾದ ಮನಸ್ಸು ಸದಾ ಹಸಿತವಾಗಿಯೇ ಇರ ಬಲ್ಲದು. ರೋಷ, ದುಃಖ ಮೊದಲಾದ ಇತರ ಭಾವೋದ್ವೇಗಗಳು ವಿವಿಧ ಸಂದರ್ಭಗಳಿಂದ ಪ್ರಚೋದಿಸಲ್ಪಟ್ಟು ಮನಸ್ಸನ್ನು ಆವರಿಸುವಾಗ ಹೊರತು ಇತರ ಎಲ್ಲ ಸಂದರ್ಭಗಳಲ್ಲಿಯೂ ನಿರ್ಮಲವಾದ ಮನಸ್ಸು ತನ್ನ ಮೂಲ ಸ್ವಭಾವಕ್ಕೆ ಸಹಜವಾಗಿ ಸದಾ ಹಸಿತಗೊಂಡೇ ಇರುತ್ತದೆ. ಯಾವದೇ ಬಾಹ್ಯ ಪ್ರಚೋದನೆಗಳು ಇಲ್ಲದಿರುವಾಗ ಬೇರೆ ಯಾವ ಚಿಂತೆಯಿಂದಲೂ ಪೀಡಿತವಾಗದೆ ಮನಸ್ಸು ಪ್ರಸನ್ನವಾಗಿಯೇ ಇರಬೇಕಾದರೆ ಅಂತಹ ವ್ಯಕ್ತಿಯು ಅತ್ಯಂತ ಉಚ್ಚ ಮಟ್ಟದ ಆತ್ಮವಿಕಾಸವನ್ನು ಪಡೆದಿದೆ ಎಂದು ಹೇಳಬೇಕಾಗು ತ್ತದೆ. ಕೃಷ್ಣನು ಗೀತೆಯಲ್ಲಿ ಯಾವ ನಿರ್ಲಿಪ್ತ ಮನೋಭಾವವನ್ನು ಆದರ್ಶ ವೆಂದು ಹೇಳಿದನೋ ಅಂತಹ ಮನೋಭಾವಕ್ಕೆ ಭೀಮನು ಬಹಳ ಉತ್ತಮ ಉದಾಹರಣೆಯಾಗುತ್ತಾನೆ. ಎಂತಹ ಲಕ್ಷಣಗಳಿರುವವನನ್ನು ಗೀತೆಯಲ್ಲಿ ಯೋಗಿ ಎಂದು ಕೃಷ್ಣನು ಕರೆಯುತ್ತಾನೋ, ಭೀಮನಲ್ಲಿ ಅಂತಹ ಲಕ್ಷಣ ಗಳೆಲ್ಲ ಇವೆ ಎಂದು ಹೇಳಿದರೆ ನಿನಗೂ ಆಶ್ಚರ್ಯವಾಗಬಹುದು.

ಕರ್ಮಗಳನ್ನು ಮಾಡುವದರಲ್ಲಿ ಭೀಮನು ಎಂದೂ ಹಿಂಜರಿದವನಲ್ಲ. ಯಾವ ಕರ್ಮವನ್ನೂ ಅವನು ಬಹಳ ಬಯಸಿ, ಉದ್ದೇಶಿಸಿ, ಯೋಜನೆ ಗಳನ್ನು ಹಾಕಿಕೊಂಡು ಮಾಡಿದಂತೆ ಕಂಡುಬರುವದಿಲ್ಲ. ಜೀವನದಲ್ಲಿ ತನಗೆ ಆಗಾಗ ಎದುರಾದ ಕರ್ಮಗಳನ್ನು ಅವನು ಬಹಳ ನಿಷ್ಠೆಯಿಂದ ಮಾಡುವ

ದನ್ನು ನೋಡುತ್ತೇವೆ. ಆ ಕರ್ಮದ ಫಲದಲ್ಲಿ ಬಹಳ ಆಸೆಯನ್ನಿಟ್ಟು ಕೊಂಡು ಅದಕ್ಕಾಗಿ ಅವನು ಹಂಬಲಿಸುವದನ್ನೂ ನಾವು ಕಾಣುವದಿಲ್ಲ. ದ್ರೌಪದಿಯ ವಸ್ತ್ರಾಪಹಾರ ಕಾಲದಲ್ಲಿ ಅವನು ತನ್ನ ಅಣ್ಣನ ನಿಲುವನ್ನು ವಿರೋಧಿಸಿದುದನ್ನು ನಾವು ಕಾಣುತ್ತೇವೆ. ಆದರೆ ಅವನ ವಿರೋಧವು ಗಣನೆಗೆ ಬಾರದೆ ಅವರು ಕಾಡಿಗೆ ಹೋಗಲೇಬೇಕೆಂದು ತೀರ್ಮಾನವಾದಾಗ ಅವನು ಯಾವದೇ ಮನೋವಿಕಾರಗಳಿಲ್ಲದೆ ಅಣ್ಣನನ್ನು ಹಿಂಬಾಲಿಸುತ್ತಾನೆ. ಅವನ ಈ ನಿರ್ವ್ಯಾಮೋಹದ ದೃಷ್ಟಿಯನ್ನು ಅವನ ಪ್ರತಿಯೊಂದು ಕರ್ಮದಲ್ಲಿಯೂ ನಾವು ಕಾಣುತ್ತೇವೆ. ಕರ್ಮಗಳಲ್ಲಿ ಇಂತಹ ದೃಷ್ಟಿ ಇರುವದನ್ನೇ ಕೃಷ್ಣನು ಗೀತೆಯಲ್ಲಿ ಕರ್ಮಯೋಗ ಎಂದು ಹೇಳಿದುದು.

ಭಕ್ತಿಯೋಗದಲ್ಲಾದರೂ ಭೀಮನು ಅದರಿಂದ ಹೊರತಾಗಿರಲಿಲ್ಲ. ಅವನ ಭಕ್ತಿಯು ಆಡಂಬರದ್ದಲ್ಲ. ಭಕ್ತಿಯ ಉನ್ಮಾದಕ್ಕೆ ಸಿಕ್ಕಿದವನು ಸಾಮಾನ್ಯವಾಗಿ ಜೀವನದ ವ್ಯಾವಹಾರಿಕ ಕರ್ಮಗಳನ್ನು ಮಾಡಲು ಅಸಮರ್ಥನಾಗುವದರಿಂದ ಮತ್ತು ಭೀಮನು ಜೀವನದಲ್ಲಿ ಹೇರಳ ಕರ್ಮಗಳನ್ನು ಮಾಡಲಿಕ್ಕಿದ್ದುದರಿಂದ ಅವನ ಭಕ್ತಿಯು ಯಾವ ಉದ್ರೇಕಕ್ಕೂ ತಲಪದೆ ಅವನ ಆಂತರ್ಯದ ಸ್ವಭಾವ ವಾಗಿ ಮಾತ್ರ ಉಳಿಯಬೇಕಾಯಿತು.

ಇನ್ನು ಜ್ಞಾನವನ್ನು ಭೀಮನು ಸಾಧಿಸಿ ಪಡೆಯಲಿಲ್ಲ. ಅವನು ಬಹುಶಃ ತಾನೊಬ್ಬ ಜ್ಞಾನಿ ಎಂದು ತನ್ನನ್ನು ತಿಳಿದುಕೊಳ್ಳುವ ಪ್ರಯತ್ನಕ್ಕೇ ಹೋಗಿರಲಿಕ್ಕಿಲ್ಲ. ಆದರೂ ಒಬ್ಬ ಜ್ಞಾನಿಯು ಜೀವನದಲ್ಲಿ ಅವಿರತವಾಗಿ ಕರ್ಮಗಳನ್ನು ಮಾಡ ಬೇಕಾದಾಗ ಅವನು ಹೇಗಿರಬೇಕೋ ಭೀಮನು ಹಾಗಿದ್ದನು.

ರಮೆ:– ಕೃಷ್ಣನಿಗೆ ಹೇಳಬೇಕಾದ ಮಾತುಗಳನ್ನು ಭೀಮನಿಗೆ ಹೇಳು ತ್ತಿದ್ದೀರಿ ?

ಮುರಳಿ:– ತಾತ್ತ್ವಿಕವಾಗಿ ಅವರಿಬ್ಬರಲ್ಲಿ ಈ ಹೋಲಿಕೆ ಬರುವದು ಸಹಜ ವಾದರೂ ವ್ಯಕ್ತಿತ್ವದಲ್ಲಿ ಅವರಿಬ್ಬರಿಗೆ ಬಹಳವಾದ ಅಂತರವಿದೆ. ಭೀಮನ ವ್ಯಕ್ತಿತ್ವ ನಮ್ಮ ವಿಮರ್ಶೆಗೆ ಸಿಕ್ಕುತ್ತದೆ. ಕೃಷ್ಣನದು ಮಾನವನ ಕಲ್ಪನೆಗೆ ಮೀರಿದಂತಹ ವ್ಯಕ್ತಿತ್ವ. ಭೀಮ ವಿಧಿಯ ನಿರ್ಮಾಣ. ಕೃಷ್ಣ ವಿಧಿಯ ನಿರ್ಮಾತೃ. ಭೀಮ ಬಿಸಿಲಿನಂತೆ. ಕೃಷ್ಣ ಸ್ವತಃ ಸೂರ್ಯ. ಆದರೂ ತಾತ್ತ್ವಿಕವಾಗಿ ಅವರಿಬ್ಬರಲ್ಲಿ ತುಂಬ ಹೋಲಿಕೆಯಿದೆ.

ರಮೆ:– ತಾವರೆಯನ್ನು ದ್ರೌಪದಿಗೆ ತಂದುಕೊಟ್ಟನೊ ?

ಮುರಳಿ:– ಭೀಮನು ಸಹಸ್ರ ದಳ ಪದ್ಮವನ್ನು ತರಲು ಹೋಗಿದ್ದಾನೆಂಬದು ಯುಧಿಷ್ಠಿರನಿಗೆ ತಿಳಿಯಿತು. ಅದನ್ನು ತರುವ ಸಂದರ್ಭದಲ್ಲಿ ಅವನು ದೇವತೆ

ಗಳನ್ನು ಕೂಡ ಎದುರಿಸಬೇಕಾಗುವದೆಂಬಧನ್ನು ತಿಳಿದಿದ್ದ ಯುಧಿಷ್ಠಿರನು ಭೀಮನು ಹಿಂತಿರುಗುವದು ತಡವಾದುದರಿಂದ ಬಹಳ ಕಳವಳಪಟ್ಟನು. ಶಾಂತತೆಗೆ ಹೆಸರಾದ ಅವನ ಮನಸ್ಸಿನ ಸ್ಥಿರತೆಯೇ ತಪ್ಪಿಹೋಯಿತು. ಅವನು ಕುಳಿತಲ್ಲಿ ಕೂರಲಾರದ ಮಟ್ಟಿಗೂ ಭೀಮನಿಗಾಗಿ ಕಳವಳಿಸಿದನು. ಕೊನೆಗೂ ಆಶ್ರಮದಲ್ಲಿ ಕೂರಲಾರದೆ ಭೀಮನು ಹೋದ ಜಾಡನ್ನು ಸುಲಭವಾಗಿ ಗುರುತಿಸುತ್ತಾ ತನ್ನ ಪರಿವಾರದೊಂದಿಗೆ ಆ ಮಾರ್ಗದಲ್ಲಿ ಹೊರಟನು. ಅವನು ಸ್ವಲ್ಪ ದೂರ ಹೋಗಿದ್ದನಷ್ಟೆ. ತಾವರೆಯ ವನವನ್ನೇ ತೋಳತೆಕ್ಕೆಯಲ್ಲಿ ಸೆರೆ ಹಿಡಿದು, ಪುಷ್ಪದ ಸೌರಭಕ್ಕೆ ಎರಗುತ್ತಿದ್ದ ಮರಿದುಂಬಿಗಳನ್ನು ನಿವಾರಿಸುತ್ತ, ಕೆಂಪೇರಿದ್ದ ಕಣ್ಣುಗಳೂ, ಹೊಳೆಯುವ ವದನವೂ ಶೋಭಿಸುತ್ತಿದ್ದ ಅಸಹಾಯ ಶೂರ ಭೀಮನು ಬರುತ್ತಿರುವದನ್ನು ಅವನು ಕಂಡನು. ಆನಂದದಿಂದ ಯುಧಿಷ್ಠಿರನು ಒಡನೆಯೇ ಮುನ್ನುಗ್ಗಿ ತಮ್ಮನನ್ನು ಆಲಿಂಗಿಸಿದನು.

ಹೀಗೆಯೇ ಕೆಲವು ದಿನಗಳು ಉರುಳಿದವು. ಒಂದು ದಿನ ಭೀಮನು ಎಂದಿನಂತೆ ಬೇಟೆಗೆ ಹೋಗಿದ್ದಾಗ ಜಟಾಸುರನೆಂಬ ಪ್ರಬಲ ರಾಕ್ಷಸನೊಬ್ಬ ಯುಧಿಷ್ಠಿರಾದಿಗಳನ್ನು ಬೆದರಿಸಿ ದ್ರೌಪದಿಯನ್ನು ಹೊತ್ತುಕೊಂಡು ಹೋಗಲು ಉಪಕ್ರಮಿಸಿದನು. ಪರಿವಾರದವರು ಓಡಿಹೋಗಿ ಭೀಮನಿಗೆ ವಿಷಯವನ್ನು ತಿಳಿಸಿದರು. ಇದನ್ನು ಕೇಳಿ ಭೀಮನು ಆನಂದದಿಂದ........

ರಮೆ:– ನಿದ್ದೆ ಮಾಡುತ್ತಿದ್ದೀರೇನು?

ಮುರಳಿ:– ತೆರೆದಿರುವ ನಿನ್ನ ಕಣ್ಣಿಗೂ ಹಾಗೆ ಕಾಣಿಸಲು ಪ್ರಾರಂಭವಾಗಿ ಬಿಟ್ಟಿದೆಯೇನು?

ರಮೆ:– ಮತ್ತೆ ಏನೇನೋ ಹೇಳುತ್ತೀರಿ?

ಮುರಳಿ:– ನಿನಗೆ ಹೇಗೆ ಹೇಗೋ ಕೇಳಿಸಲೂ ಪ್ರಾರಂಭವಾಗಿಬಿಟ್ಟಿದೆಯೇನು?

ರಮೆ:– ಆನಂದ ಎಂದು ಹೇಳಿದುದು ದುಃಖ ಎಂದು ಕೇಳಿಸಿದರೆ ಮಾತ್ರ ಕೇಳುವವರ ಕಿವಿ ಸರಿಯಾಗಿದೆ ಎಂಬದು ನಿಮ್ಮ ಹೊಸ ಸಿದ್ಧಾಂತವೊ?

ಮುರಳಿ:– ನಿನ್ನ ಶಬ್ದ ಬ್ರಹ್ಮನ ವ್ಯಾಖ್ಯೆ ನನಗೆ ಅರ್ಥವಾಗಲಿಲ್ಲ.

ರಮೆ:– ದ್ರೌಪದಿಯನ್ನು ರಾಕ್ಷಸ ಹೊತ್ತುಕೊಂಡು ಹೋಗುತ್ತಿದ್ದಾನೆ ಎಂದು ಪರಿವಾರದವರು ಭೀಮನಿಗೆ ಹೇಳಿದರು. ಅಲ್ಲವೆ?

ಮುರಳಿ:– ಹೌದು, ಹೇಳಿದರು.

ರಮೆ:– ಆಗ ಭೀಮನಿಗೇನಾಯಿತು?

ಮುರಳಿ:– ಏನಾಯಿತು ? ಕೆಮ್ಮಲು ಪ್ರಾರಂಭವಾಯಿತೇನು ?

ರಮೆ:– ಅದೇ. ಅದನ್ನೇ ನಾನು ಕೇಳಿದ್ದು. ಈಗ ಸರಿಹೋಯಿತು. ಭೀಮನಿಗೆ ಉಬ್ಬಸ ಬಂತೋ ಎಂದುಕೊಂಡಿದ್ದೆ. ಕೆಮ್ಮಲು ತಾನೆ? ಸರಿ, ಮುಂದಕ್ಕೆ ಹೇಳಿ.

ಮುರಳಿ:– ಉಬ್ಬಸ ಏಕೆ ಬರುತ್ತದೆ, ಕೆಮ್ಮಲು ಏಕೆ ಬರುತ್ತದೆ ? ಜಟಾಸುರನು ದ್ರೌಪದಿಯನ್ನು ಹೊತ್ತುಕೊಂಡು ಹೋಗುತ್ತಿದ್ದಾನೆ ಎನ್ನುವದನ್ನು ಕೇಳಿದ ತಕ್ಷಣ ಅವನಿಗೆ ಆನಂದವಾಯಿತು.

ರಮೆ:– ಏನಾಯಿತು ?

ಮುರಳಿ:– ಆನಂದವಾಯಿತು ಎಂದೆ.

ರಮೆ:– ಕೆಮ್ಮಲಿಗೆ ಆನಂದ ಎಂಬ ಶಬ್ದವೂ ಇದೆಯೊ ?

ಮುರಳಿ:– ಇಲ್ಲ. ಸಂತೋಷಕ್ಕೆ ಆನಂದ ಎಂದೂ ಹೇಳಬಹುದು.

ರಮೆ:– ಹಾಗಾದರೆ ಭೀಮನಿಗೆ ಆದುದು ಸಂತೋಷ ಅಥವಾ ಆನಂದ ?

ಮುರಳಿ:– ಹೌದು ಅಂತ.

ರಮೆ:– ಸರಿ ಹಾಗಾದರೆ. ನಿಮ್ಮಲ್ಲೇ ಏನಾದರೂ ಹೆಚ್ಚು ಕಡಿಮೆ ಆಗಿ ದೆಯೋ ಎಂದುಕೊಂಡಿದ್ದೆ. ಸಧ್ಯ. ನಿಮಗೇನೂ ಆಗಿಲ್ಲ. ಭೀಮನಿಗೆ ಸ್ವಲ್ಪ ಹೆಚ್ಚು ಕಡಿಮೆ ಆದುದನ್ನು ನೀವು ಹೇಳಿದುದಷ್ಟೆ. ಸರಿ. ಮುಂದುವರಿಸಿ.

ಮುರಳಿ:– ಭೀಮನಲ್ಲೇನು ಹೆಚ್ಚು ಕಡಿಮೆ ಆದದ್ದು ?

ರಮೆ:– ಏನೋ ತಾತ್ಕಾಲಿಕ ಇರಬೇಕು ಅನ್ನಿ. ಈ ಘಟನೆಯ ಅನಂತರ ಮುಂದಕ್ಕೆ ಅವನ ಬುದ್ಧಿ ಸದಾಕಾಲ ಸರಿಯಾಗಿಯೇ ಇತ್ತು ತಾನೆ ?

ಮುರಳಿ:– ನೀನೇನು ಹೇಳುತ್ತಿದ್ದೀ ಅಂತ ? ಯಾರಿಗಾದರೂ ಆನಂದ ವಾಯಿತೆಂದರೆ ಅವರ ಬುದ್ಧಿ ಕೆಟ್ಟುಹೋಗಿದೆ ಎಂಬದು ನಿನ್ನ ಸಿದ್ಧಾಂತವೊ ?

ರಮೆ:– ಆನಂದವಾದರೆ ಅಲ್ಲ. ಗಾಬರಿಯಾಗಬೇಕಾದಾಗ, ದುಃಖವಾಗ ಬೇಕಾದಾಗ ಆನಂದವಾಗಿಬಿಟ್ಟರೆ ಅವನಿಗೆ ಏನೋ ಹೆಚ್ಚುಕಡಿಮೆ ಆಗಿದೆ ಯೆಂಬದು ನನ್ನ ಸಿದ್ಧಾಂತವಲ್ಲ, ವೈದ್ಯಕೀಯ ಸಿದ್ಧಾಂತ.

ಮುರಳಿ:– ಓಹೊ, ಹಾಗೆ. ಬೆಕ್ಕನ್ನು ಕಾಣುವಾಗ ತಮಗೆ ಏನಾಗುತ್ತದೆ ಎಂಬ ಇಲಿಗಳ ವೈದ್ಯರ ಸಿದ್ಧಾಂತವು ನಾಯಿಗಳ ವೈದ್ಯರ ಸಿದ್ಧಾಂತಕ್ಕೆ ಸರಿ ವಿರುದ್ಧ ವಾಗಿರುವದು ಸಹಜವೇ.

ರಮೆ:– ಹಾಗಾದರೆ ಭೀಮನು ನಮ್ಮಂತೆಯೇ ಮನುಷ್ಯ ಎಂದು ಗ್ರಹಿಸಿ ನಾವು ಅವನನ್ನು ನಮ್ಮ ಸಿದ್ಧಾಂತಗಳಿಂದ ಅಳೆಯಬಾರದು ಎನ್ನುತ್ತೀರಿ.

ಮುರಳಿ:– ಪುಕ್ಕಲು ಮನುಷ್ಯರ ಸಿದ್ಧಾಂತದಿಂದ ವೀರಾಗ್ರೇಸರರನ್ನು ಅಳೆಯುವದು ಸರಿ ಎಂದು ಹೇಗೆ ಹೇಳಲಿ ?

ರಮೆ:– ಆಗಲಿ, ಹೇಳಿ. ದ್ರೌಪದಿಯನ್ನು ಯಾರೋ ಹೊತ್ತುಕೊಂಡು ಹೋದುದನ್ನು ಕೇಳಿ ಒಂದು ಶನಿ ತೊಲಗಿತಲ್ಲಾ ಎಂದು ಭೀಮನಿಗೆ ಆನಂದ ವಾಯಿತು – ಮುಂದೆ ಹೇಳಿ.

ಮುರಳಿ:– ಶನಿ ತೊಲಗಿತಲ್ಲಾ ಎಂದು ಆನಂದವಾದುದಲ್ಲ. ಶನಿ ಹಿಡಿದವನೊಬ್ಬನು ಸಿಕ್ಕಿದನಲ್ಲಾ ಎಂದು ಆನಂದವಾದುದು. ಇತರರ ವ್ಯಕ್ತಿತ್ವವನ್ನು ಅಳೆಯುವಾಗ ನಾವು ಬಹಳ ಜಾಗರೂಕರಾಗಿರಬೇಕು ರಮಾ. ಉದ್ದಕ್ಕೆ ಅಳೆಯುವದನ್ನು ಹಾಗೆ ಅಳೆಯಬೇಕು. ಕೆಲವನ್ನು ತೂಕಮಾಡಿ ಅಳೆಯಬೇಕು. ಕೆಲವನ್ನು ಒರೆಗೆ ಹಚ್ಚಿ ಅಳೆಯಬೇಕು. ಕೆಲವನ್ನು ಪಾತ್ರೆಯಲ್ಲಿ ಹಾಕಿ ಅಳೆಯಬೇಕು. ನನ್ನಲ್ಲಿ ಅಳತೆಯ ಕೋಲಿದೆ ಎಂದುಕೊಂಡು ಎಲ್ಲವನ್ನೂ ಅದರಿಂದ ಅಳೆಯುವದು ಸರಿಯಾಗುವದಿಲ್ಲ. ಹಾಗೆಯೇ ಮಾನವರಲ್ಲಿ ಕೂಡ. ಸಂಸ್ಕೃತ ಪಂಡಿತನು ಸಂಗೀತಗಾರನನ್ನು ವಿಮರ್ಶೆ ಮಾಡಲು ತಕ್ಕವನಲ್ಲ. ಸಂಗೀತಗಾರನು ಕ್ರೀಡಾಪಟುವನ್ನು ವಿಮರ್ಶೆ ಮಾಡಲಾರ. ಬುದ್ಧಿ ವಿಶೇಷ ಉಳ್ಳವನು ಭಕ್ತನು ಮಾಡುವ ಭಜನೆಯನ್ನು ಸರಿಯಾಗಿ ಅಳೆಯಲಾರ. ದೇಹವನ್ನು ಮೃದುವಾದ ಕುಸುಮದಂತೆ ಕಾಣುವವರು ಪರಾಕ್ರಮಿಗಳ ಮನೋಭಾವವನ್ನು ಗ್ರಹಿಸಲಾರರು ಕೂಡ. ಭೀಮನ ಅಸಾಮಾನ್ಯವಾದ ದೇಹದಾರ್ಢ್ಯ, ಅದಕ್ಕೆ ಅನುಗುಣವಾದ ಅವನ ಮನಸ್ಸಿನ ನಿರ್ಭೀತ ಸ್ಥಿತಿ ಇವುಗಳನ್ನು ನನ್ನ–ನಿನ್ನಂತಹ ಪುಕ್ಕಲು ಮಾನವರು ಕಲ್ಪಿಸಿಕೊಳ್ಳಲು ಕಷ್ಟವಾಗುತ್ತದೆ. ಬೌದ್ಧಿಕ ಚಟುವಟಿಕೆಯೇ ವ್ಯಕ್ತಿತ್ವದ ಪ್ರಧಾನ ಅಂಶವಾಗಿರುವ ಒಬ್ಬನನ್ನು, ಅವನು ಯಾವದೇ ಬೌದ್ಧಿಕ ಚಿಂತನೆ ಮಾಡದೆ ಇರಬೇಕೆಂದು ಎಷ್ಟು ದಿನ ನಿರ್ಬಂಧದಲ್ಲಿಡಬಹುದು ? ಭಕ್ತನು ಎಷ್ಟು ದಿನ ದೇವರನ್ನು ಭಜಿಸದೆ ಕುಳಿತಾನು ? ಆಡುವ ಮಕ್ಕಳನ್ನು ಎಷ್ಟು ದಿನ ಕಟ್ಟಿ ಹಾಕಿಡಲು ಸಾಧ್ಯ ? ಅಮಿತವಾದ ಪರಾಕ್ರಮ, ದೇಹಬಲ, ಉತ್ಸಾಹಗಳು ತುಳುಕಿ ಹರಿಯುತ್ತಿರುವ ಭೀಮನಿಗೆ, ಅವನಿಗಿದ್ದಷ್ಟು ಇಂದ್ರಿಯ ನಿಗ್ರಹ ಇಲ್ಲದೆ ಹೋಗಿದ್ದರೆ, ಅವನು ನಿರಪರಾಧಿ ಜೀವಿಗಳನ್ನೂ ಹಿಂಸಿಸುವ ಲೋಕಕಂಟಕನಾಗಬೇಕಿತ್ತು. ರಾಕ್ಷಸರು ಮತ್ತೇಕೆ ಹಾಗಾಗುತ್ತಿದ್ದುದು ? ಇತರರನ್ನು ಮರ್ದಿಸುವದರಿಂದ ಮಾತ್ರವೇ ತಣಿಯಬೇಕಾಗಿದ್ದ ಭೀಮನ ಅದಮ್ಯ ಉತ್ಸಾಹ, ವೀರಪ್ರವೃತ್ತಿ, ದೇಹಬಲಗಳಿಗೆ ಹಾಗೆ ಮರ್ದಿಸುವ ಅವಕಾಶ ಸಿಕ್ಕದೆ ಅವನು ಅದಕ್ಕಾಗಿ ತವಕಿಸುತ್ತಿದ್ದ ಎಂಬದನ್ನು ನಾವು ಗ್ರಹಿಸಿಕೊಳ್ಳಬೇಕು. ಮರ್ದಿಸಬೇಕು, ನಿಜ.

ಯಾರನ್ನು ? ನಿರಪರಾಧಿಗಳನ್ನು ಮರ್ದಿಸಲೊಲ್ಲ. ಅವರು ರಾಕ್ಷಸರೇ ಆದರೂ, ಅವರನ್ನು ಹುಡುಕಿ ಕೊಲ್ಲುವ ಪ್ರವೃತ್ತಿ ಭೀಮನದಲ್ಲ. ಅವರು ತಪ್ಪು ಮಾಡಿ ಅವನಿಗೆ ಸಿಕ್ಕಬೇಕು. ಇತರರನ್ನು ಹಣಿಯಬೇಕೆಂಬದು ಅವನ ದೇಹದ ಬಯಕೆ. ಅನ್ಯಾಯವನ್ನು ಹಣಿಯಬೇಕೆಂಬದು ಅವನ ಮನಸ್ಸಿನ ಬಯಕೆ. ಇವೆರಡೂ ಕೂಡುವ ಸಂದರ್ಭ ಬಂದಾಗ ಅವನಿಗೆ ದುಃಖವಾಗಬೇಕೋ ಆನಂದವಾಗಬೇಕೊ ?

ರಮೆ:– ಆನಂದವಾಗಬೇಕು ಮಹಾಪರಾಧವನ್ನು ಕ್ಷಮಿಸಿ ಕತೆ ಮುಂದು ವರಿಸಬೇಕು.

ಮುರಳಿ:– ಹುಚ್ಚು ಹುಡುಗಿ. ಕೇಳು. ಭೀಮನು ತಕ್ಷಣವೇ ಜಟಾ ಸುರನ ಬೆನ್ನುಹತ್ತಿ ಅವನನ್ನೂ ಅವನ ಪರಿವಾರವನ್ನೂ ನಿರ್ನಾಮ ಮಾಡಿ ದ್ರೌಪದಿಯೊಡನೆ ಹಿಂದಿರುಗಿದನು.

ರಮೆ:– ಎಲ್ಲಿಯೋ ಚಿಲ್ಲರೆ ರಾಕ್ಷಸರಿರಬೇಕು.

ಮುರಳಿ:– ಹೌದು. ದೌಪದಿಯ ಕಾವಲಿಗೆ ಯುಧಿಷ್ಠಿರ, ನಕುಲ, ಸಹದೇವರಂಥವರಲ್ಲದೆ ನೀನಿದ್ದರೂ ಕೂಡ ಈ ರಾಕ್ಷಸನನ್ನು ಓಡಿಸಲು ಸಾಧ್ಯ ವಾಗುವಷ್ಟು ಚಿಲ್ಲರೆಯವನು ಅವನು.

ರಮೆ:– ಹೌದಲ್ಲ ! ಯುಧಿಷ್ಠಿರ, ನಕುಲ, ಸಹದೇವರನ್ನು ನಿವಾರಿಸಿ ದ್ರೌಪದಿಯನ್ನು ಒಯ್ದಿದ್ದ ಎಂಬದನ್ನು ಮರೆತೇಬಿಟ್ಟಿದ್ದೆ.

ಮುರಳಿ:– ಅದಕ್ಕೇ ಹೇಳುವದು. ಅಳೆಯುವ ಸಾಧನದ ಮೇಲೆ ಅಳೆಯಲ್ಪಡುವದರ ಮೌಲ್ಯ ಅವಲಂಬಿಸಿದೆ ಎಂದು. ನಿನ್ನ ನೆನಪು–ಮರೆವುಗಳ ಮೇಲೆ ಭೀಮನ ಪರಾಕ್ರಮದ ಮೌಲ್ಯ ನಿಂತಿತ್ತು, ನೋಡು ! ಹೋಗಲಿ, ಕೇಳು. ಜಟಾಸುರ ಮತ್ತು ಅವನ ಪರಿವಾರದವರ ಹೆಣಗಳು ಕೊಳೆತು ವನದಲ್ಲಿ ದುರ್ಗಂಧ ತುಂಬಿದುದರಿಂದ ಪಾಂಡವರು ಆ ವನವನ್ನು ಬಿಟ್ಟು ವೃಷಪರ್ವತಾಶ್ರಮಕ್ಕೆ ಹೋಗಿ ಅಲ್ಲಿ ತಂಗಿದರು. ಆ ಪರ್ವತದ ರಮಣೀ ಯತೆಯನ್ನು ನೋಡುವ ಉದ್ದೇಶದಿಂದ ಒಮ್ಮೆ ಭೀಮನು ಏಕಾಂಗಿಯಾಗಿ ಅದರ ತುದಿಯನ್ನೇರಿ ಪ್ರಕೃತಿಯ ಸೊಬಗನ್ನು ಸವಿಯುತ್ತಿರುವಾಗ ಅಲ್ಲಿಗೆ ಮಣಿಮಾನನೆಂಬ ರಾಕ್ಷಸನು ಅನಿರೀಕ್ಷಿತವಾಗಿ ಬಂದು ಭೀಮನನ್ನು ಹಿಡಿದನು.

ರಮೆ:– ಕಾರಣ ?

ಮುರಳಿ:– ಕೆಟ್ಟವರಿಗೆ ಕೆಟ್ಟದ್ದನ್ನು ಮಾಡಲು ಸರಿಯಾದ ಕಾರಣ ಇರಲೇಬೇಕೆಂದಿದೆಯೇನು ? ಈಗ ನೀನು ನನ್ನಲ್ಲಿ ಆಗಾಗ ಕೋಪಿಸಿಕೊಳ್ಳು ತ್ತೀಯಲ್ಲ, ಅದಕ್ಕೆಲ್ಲ ಕಾರಣಗಳೇ ಬೇಕೆಂದು ಕಾಯುತ್ತೀಯೇನು ?

ರಮೆ:– ನಾನು ಈಗ ಕೋಪಿಸಿಕೊಳ್ಳಲು ನಿಮ್ಮ ಈ ಮಾತಾದರೂ ಸರಿಯಾದ ಕಾರಣವಾದೀತೋ, ಅದೂ ಇಲ್ಲವೊ?

ಮುರಳಿ:– ಕೋಪಿಸಿಕೊಳ್ಳಲಿಕ್ಕೆ ಮಾತ್ರವೆ? ಪಾಶ್ಚಾತ್ಯ ದೇಶಗಳಲ್ಲಾದರೆ ವಿವಾಹ ವಿಚ್ಛೇದನ ಪಡೆಯುವದಕ್ಕೂ ಈ ಕಾರಣ ಸಾಕು.

ರಮೆ:– ಅವರು ಹಾಳಾದರು. ತನ್ನನ್ನು ಬಂದು ಹಿಡಿದ ಮಾಣಿಮಾನನನ್ನು ಭೀಮ ಕೊಂದುಹಾಕಿದ ತಾನೆ? ಮುಂದಕ್ಕೆ ಹೇಳಿ.

ಮುರಳಿ:– ಬಂದು ಹಿಡಿದ ಎಂದಷ್ಟೇ ನಾನು ಹೇಳಿದುದು. ಅವನನ್ನು ಭೀಮ ಕೊಂದ ಎಂಬದು ನಿನಗೆ ಹೇಗೆ ಗೊತ್ತಾಯಿತು?

ರಮೆ:– ಸರಿಯಾಯಿತು. ಅಲ್ಲದೆ ಭೀಮನನ್ನು ಹೀಗೆಲ್ಲ ಕೊಲ್ಲಿಸಿಯಾರೇ ವ್ಯಾಸರು? ಕಥಾನಾಯಕನಾದ ಭೀಮನು ಹೆಜ್ಜೆಗೊಂದರಂತೆ ರಾಕ್ಷಸರನ್ನು ಕೊಂದ ಎಂದು ಬರೆದು ಆ ಮೂಲಕ ಅವನನ್ನು ವೀರಾಗ್ರಣಿಯನ್ನಾಗಿ ಮಾಡಿ ತೋರಿಸಿದರಲ್ಲವೇ ಕತೆಗೆ ಸ್ವಾರಸ್ಯ ಬರುವದು!

ಮುರಳಿ:– ಎಂತಹ ವಿಪರ್ಯಾಸ!

ರಮೆ:– ಏನು?

ಮುರಳಿ:– ನಿನ್ನ ಮಾತು?

ರಮೆ:– ನನ್ನ ಮಾತು ಏನು ವಿಪರ್ಯಾಸ?

ಮುರಳಿ:– ಭೀಮನು ಹೆಜ್ಜೆಗೊಂದರಂತೆ ರಾಕ್ಷಸರನ್ನು ಕೊಂದರೇ ಕತೆಗೆ ಸ್ವಾರಸ್ಯ ಬರುವದು ಎಂದು ಹೇಳುತ್ತೀ?

ರಮೆ:– ಹೌದು.

ಮುರಳಿ:– ಆದರೆ ಅವನು ಹೆಜ್ಜೆಗೊಂದರಂತೆ ರಾಕ್ಷಸರನ್ನು ಕೊಂದ ಎನ್ನುವದನ್ನು ಕೇಳಿದುದರಿಂದಲೇ ನಿನಗೆ ಅದು ನೀರಸವೆನಿಸಿ ನೀನು ಈ ಮಾತು ಹೇಳಿರುವದು ಎಂಬದನ್ನು ಗಮನಿಸಲೊಲ್ಲೆಯೇಕೆ?

ರಮೆ:– ಅಂದರೆ?

ಮುರಳಿ:– ಅಂದರೆ, ಯಾವದರಿಂದ ನಿನಗೇ ಬೇಸರ ಬಂದಿದೆಯೋ, ಅದನ್ನು ಸ್ವಾರಸ್ಯಕ್ಕಾಗಿ ವ್ಯಾಸರು ಬರೆದರು ಎಂದು ನೀನೇ ಆಪಾದಿಸುತ್ತಿದ್ದೀ?

ರಮೆ:– ಅಂದರೆ?

ಮುರಳಿ:– ನೀನು ಯಾವ ಕಾರಣಕ್ಕಾಗಿ ಆಪಾದನೆ ಮಾಡುತ್ತಿದ್ದೀಯೋ ಆ ಕಾರಣವೇ ನಿನ್ನ ಆಪಾದನೆಯನ್ನು ಅಲ್ಲಗಳೆಯುತ್ತದೆ.

ರಮೆ:– ಥತ್. ತಲೆ ಚಿಟ್ಟು ಹಿಡಿಸುವ ಈ ಮಾತುಗಳನ್ನೆಲ್ಲ ನಿಲ್ಲಿಸಿ ಅರ್ಥವಾಗುವಂತೆ ಮಾತನಾಡಿ, ದಯವಿಟ್ಟು.

ಮುರಳಿ:– ನೀನು ಸುಳ್ಳು ಹೇಳುವವಳು, ನಿಷ್ಠಾವಂತಳಲ್ಲ ಎಂದೆ.

ರಮೆ:– ಬಹಳ ಸಂತೋಷ. ಕತೆ ಮುಂದುವರಿಸಿ.

ಮುರಳಿ:– ತನ್ನನ್ನು ಬಂದು ಹಿಡಿದ ಮಣಿಮಾನನನ್ನು........

ರಮೆ:– ........ಪುರಾಣ ಹೇಳುವವರು ಮಾತ್ರ ಸತ್ಯವಂತರು, ನಿಷ್ಠಾವಂತರು. ಆ ವೇದವ್ಯಾಸನನ್ನು ಯಾರಾದರೂ ಒಂದು ಮಾತು ಹೇಳಿಬಿಟ್ಟರೆ ಅವರು ಸುಳ್ಳು ಹೇಳುವವರು, ನಿಷ್ಠೆ ಇಲ್ಲದವರು, ಅಯೋಗ್ಯರು, ಪಾಪಿಗಳು ಎಲ್ಲ.

ಮುರಳಿ:– ನೋಡು. ವಿಶ್ಲೇಷಿಸಿ ಹೇಳಿದರೆ ತಲೆ ಚಿಟ್ಟು ಹಿಡಿಯುವ ಮಾತು ಬೇಡ, ಅರ್ಥವಾಗುವಂತೆ ಹೇಳಿ ಅನ್ನುತ್ತಿ. ಅರ್ಥವಾಗುವಂತೆ ಹೇಳಿದರೆ ಕೋಪಿಸಿಕೊಳ್ಳುತ್ತಿ. ನಾನು ಇನ್ನು ಹೇಗೆ ಮಾತನಾಡಲಿ?

ರಮೆ:– ಹ್ಯಾಗೆ ಬೇಕಾದರೂ ಮಾತನಾಡಬಹುದು. ನೀವು ಪುರಾಣ ತಿಳಿದವರು ತಾನೆ? ನೀವು ಆಡಿದುದೇ ಮಾತು, ಹೇಳಿದುದೇ ಸತ್ಯ. ಇತರರು ಆಡುವದೆಲ್ಲ ಸುಳ್ಳು.

ಮುರಳಿ:– ಆಡುವದೆಲ್ಲ ಎಂದೆನೆ? ಭೀಮನ ಕೈಯಲ್ಲಿ ವ್ಯಾಸರು ಹೆಜ್ಜೆ ಹೆಜ್ಜೆಗೂ ರಾಕ್ಷಸರನ್ನು ಕೊಲ್ಲಿಸಿ ಕತೆಯ ಸ್ವಾರಸ್ಯವನ್ನು ಹೆಚ್ಚಿಸಲು ಪ್ರಯತ್ನಿಸಿದರು ಎನ್ನುವದು ಸುಳ್ಳು ಎಂದೆ.

ರಮೆ:– ಇಲ್ಲ, ಇಲ್ಲ. ಹಾಗೆ ಮಾಡಿ ಕತೆ ಕೇಳುವವರಿಗೆ ಬೇಸರ ಬರಲಿ ಎಂದು ಬರೆದಿಟ್ಟರು!

ಮುರಳಿ:– ಈಗ ನಿನಗೆ ನಿಜವಾಗಿ ಬೇಸರ ಬಂದುದರಿಂದ ತಾನೆ ನೀನು ಈ ಅಪಾದನೆಯನ್ನು ಮಾಡಿದುದು?

ರಮೆ:– ಹಾಗಾದರೆ ಕತೆ ಕೇಳುವವರಿಗೆ ಬೇಸರ ಬರಲಿ ಎಂಬದಕ್ಕಾಗಿಯೋ ಅವರು ಭೀಮನ ಕೈಯಲ್ಲಿ ಆಗಾಗ ರಾಕ್ಷಸರನ್ನು ಕೊಲ್ಲಿಸಿದುದೊ?

ಮುರಳಿ:– ಅಲ್ಲ.

ರಮೆ:– ಮತ್ತೆ ಕತೆಗೆ ಸ್ವಾರಸ್ಯ ಬರಲು ಹಾಗೆ ಮಾಡಿದರು ಎಂದರೆ ನಾನೇ ಸುಳ್ಳುಗಾರಳು, ಕೆಟ್ಟವಳು, ಅಯೋಗ್ಯಳು ಎಂದೆಲ್ಲ ಬಯ್ಯುತ್ತೀರಿ?

ಮುರಳಿ:– ಸ್ವಾರಸ್ಯ ಬರಲು ಹಾಗೆ ಮಾಡಲಿಲ್ಲ ಎಂದಾದಮೇಲೆ ಇನ್ನೇನು ಹೇಳಲಿ?

ರಮೆ:– ನಿಮಗೆ ಈ ದಿನ ಏನೋ ಆಗಿಬಿಟ್ಟಿದೆ.

ಮುರಳಿ:– ಆದರೆ ನೀನು ಮಾತ್ರ ಎಂದಿನಂತೆಯೇ ಇದ್ದೀಯ. ಸ್ವಲ್ಪವೂ ಹೆಚ್ಚು ತಿಳಿವಳಿಕೆ ಪಡೆದಿಲ್ಲ!

ರಮೆ:– ಆಗಲಿ. ನಾನು ಹೆಡ್ಡಿ. ಸುಳ್ಳು ಹೇಳುವವಳು. ಕೆಟ್ಟವಳು. ಇಂಥವಳಿಗೆ ನಿಮ್ಮ ಕಥೆಯೂ ಬೇಡ, ಪುರಾಣವೂ ಬೇಡ.

ಮುರಳಿ:– ಯಾವ ಕತೆ, ಯಾವ ಪುರಾಣ ಬೇಡ?

ರಮೆ:– ಯಾವದೂ ಬೇಡ.

ಮುರಳಿ:– ಯಾವದೂ ಅಂದರೆ ಯಾವದು ಹೇಳು.

ರಮೆ:– ಯಾವದೂ ಬೇಡ ಎಂದೆ.

ಮುರಳಿ:– ಭೀಮನ ಕತೆ? ಮಹಾಭಾರತ ಪುರಾಣ?

ರಮೆ:– ಹೇಳಿದೆನಲ್ಲ? ಕತೆ, ಪುರಾಣ ಎಲ್ಲ ಸಾಕು ಅಂತ.

ಮುರಳಿ:– ಸಾಕು ಅಂತ ಹೇಳುವದಕ್ಕೆ ನಿನಗೆ ಕತೆ, ಪುರಾಣಗಳನ್ನು ಈ ವರೆಗೆ ಹೇಳಿದವರು ಯಾರು?

ರಮೆ:– ನೋಡಿ. ನಾನು ಹೇಳಿದುದು ಸುಳ್ಳೇನು?

ಮುರಳಿ:– ಏನು?

ರಮೆ:– ನಿಮಗೆ ಈ ದಿನ ಏನೋ ಆಗಿದೆ ಅಂತ.

ಮುರಳಿ:– ಯಾಕೆ?

ರಮೆ:– ಮತ್ತೆ ಕತೆ, ಪುರಾಣ ಯಾವದನ್ನೂ ಹೇಳಲೇ ಇಲ್ಲ ಅನ್ನುತ್ತೀರಿ?

ಮುರಳಿ:– ಹೌದು. ನಾನು ಹೇಳುತ್ತಿದ್ದುದು ಭಾರತ ಇತಿಹಾಸ.

ರಮೆ:– ಇತಿಹಾಸವೋ, ಪುರಾಣವೋ, ಕತೆಯೊ. ಅಂತೂ ಹೇಳುತ್ತಿದ್ದುದು ಹೌದು ತಾನೆ?

ಮುರಳಿ:– ಕತೆ ಹೇಳುವದಕ್ಕೂ, ಪುರಾಣ ಹೇಳುವದಕ್ಕೂ, ಇತಿಹಾಸ ಹೇಳುವದಕ್ಕೂ ವ್ಯತ್ಯಾಸವಿದೆ. ನಾನು ಇತಿಹಾಸ ಹೇಳುತ್ತಿದ್ದೇನೆ. ನೀನು ಕತೆ ಕೇಳುತ್ತಿದ್ದೀಯ. ಆದುದರಿಂದಲೇ ನನಗೂ ನಿನಗೂ ಆಗಾಗ ಭಿನ್ನಾಭಿಪ್ರಾಯ ಬರುವದು.

ರಮೆ:– ಭಿನ್ನಾಭಿಪ್ರಾಯ ಬರುತ್ತದೆ.

ಮುರಳಿ:– ಇಲ್ಲವೇ, ನೋಡು. ಭೀಮನು ಮೇಲಿಂದ ಮೇಲೆ ರಾಕ್ಷಸರನ್ನು ಕೊಂದ ಎಂಬದು ನಾನು ಹೇಳಿದ ವಿಷಯ. ಅದು ಇತಿಹಾಸ ಎಂದು

ನೀನು ಗ್ರಹಿಸಿದ್ದರೆ ಅವನು ಹಾಗೆ ಆಗಾಗ ಕೊಲ್ಲುವದರಿಂದ ಬೇಸರವನ್ನೂ ಪಡದೆ, ಸ್ವಾರಸ್ಯವನ್ನೂ ಪಡೆಯದೆ ಸುಮ್ಮನೆ ಕೇಳುತ್ತಿದ್ದೆ. ಆದರೆ ನಿನ್ನ ದೃಷ್ಟಿಯಲ್ಲಿ ಇದಃ ವ್ಯಾಸ ಕಲ್ಪಿತ ಕತೆ ಎಂದಿರುವದರಿಂದ ನೀನು ವ್ಯಾಸರಲ್ಲಿ ತಪ್ಪು ಹುಡುಕಲು ಹೊರಡುತ್ತೀ. ಕೃಷ್ಣನನ್ನೇ ಹೆದರಿಸಿ ಓಡಿಸಿದ ಹಾಗೂ ಭಾರತದ ಸಾರ್ವಭೌಮನೆನಿಸಿದ್ದ ಜರಾಸಂಧನನ್ನು ಕೊಂದ ಭೀಮನು ಈ ಚಿಲ್ಲರೆ ಜಟಾಸುರನನ್ನು, ಮಣಿಮಾನನನ್ನು ಕೊಂದ ಎಂದು ಬರೆಯುವದರ ಮೂಲಕ ಯಾವ ಗ್ರಂಥಕರ್ತನೂ ಗ್ರಂಥಕ್ಕೆ ಹೆಚ್ಚಿನ ಮೆರುಗು ಕೊಡಲು ಬಯಸುವಂತಿಲ್ಲ, ಅಲ್ಲವೆ? ಹಾಗಿದ್ದ ಮೇಲೆ ಆ ಘಟನೆಗಳನ್ನು ಸೇರಿಸುವಲ್ಲಿ, ಘಟನೆಗಳ ನಿರೂಪಣೆಯನ್ನು ಕೈಬಿಟ್ಟು ಇತಿಹಾಸಕ್ಕೆ ಅಪಚಾರ ಮಾಡಬಾರದೆಂಬದಷ್ಟೇ ಗ್ರಂಥಕರ್ತನ ಉದ್ದೇಶವಾಗಿರಬಹುದು ಹೊರತು ಬೇರೇನೂ ಆಗಿದ್ದಿರಲು ಸಾಧ್ಯವಿಲ್ಲ. ಅದಕ್ಕೇ ಆಗ ನಾನಂದದ್ದು. ಭೀಮ ಜಟಾಸುರನನ್ನು ಕೊಂದ. ಸ್ವಲ್ಪ ದಿನ ಬಿಟ್ಟು ಮಣಿಮಾನನನ್ನು ಕೊಂದ ಎಂಬ ನಿರೂಪಣೆಗಳು ನಿನಗೆ ಸಹಜವಾಗಿ ಸ್ವಾರಸ್ಯವನ್ನು ತರಲು ಸಾಧ್ಯವಿಲ್ಲ ಎಂಬದನ್ನು ನೀನೇ ಅಸಮಾಧಾನ ವ್ಯಕ್ತಪಡಿಸಿ ತೋರಿಸಿದೆ. ಆದರೆ ಕತೆಯ ಸ್ವಾರಸ್ಯಕ್ಕೋಸ್ಕರ ಆ ಘಟನೆಗಳನ್ನು ವ್ಯಾಸರು ಸೇರಿಸಿದರು ಎನ್ನುವ ನಿನ್ನ ಮಾತು ಎಷ್ಟು ತಪ್ಪು ಎಂಬದನ್ನು ತಮಾಷೆಯಾಗಿ ಹೇಳಿದೆ, ಅಷ್ಟೆ.

ರಮೆ:- ಮತ್ತೆ, ನಿನಗೆ ನಿಷ್ಠೆ ಇಲ್ಲ, ನೀನು ಸುಳ್ಳು ಹೇಳುವವಳು, ನಿನಗೆ ತಿಳಿವಳಿಕೆ ಇಲ್ಲ ಎಂದು ಹೇಳುತ್ತೀರಿ?

ಮುರಳಿ:- ಅವೆಲ್ಲ ನಿನ್ನ ಅಭಿಪ್ರಾಯವನ್ನು ಚುಚ್ಚಲು ಉಪಯೋಗಿಸಿದ ಶಬ್ದಗಳು, ಗುಣವನ್ನಲ್ಲ. ಪ್ರಸನ್ನಳಾದೆಯಾ?

ರಮೆ:- ನೀವು? ಅಬ್ಬ! ಹೋಗಲಿ ಮುಂದುವರಿಸಿ.

ಮುರಳಿ:- ಮಣಿಮಾನನು ಅಗಸ್ತ್ಯರ ಶಾಪದಿಂದ ರಾಕ್ಷಸನಾಗಿದ್ದವನು. ಶಾಪ ವಿಮೋಚನೆಯಾಗಿ ತನ್ನ ನಿಜ ರೂಪವಾದ ಯಕ್ಷನಾದನು. ಅಲ್ಲಿಗೆ ಯಕ್ಷರ ಅಧಿಪತಿಯಾದ ಕುಬೇರನೂ ಬಂದು ಯುಧಿಷ್ಠಿರಾದಿಗಳಲ್ಲಿ ಭೀಮನ ಪರಾಕ್ರಮವನ್ನು ಹೊಗಳಿ ಹಿಂತಿರುಗಿದನು. ಈ ವರೆಗೆ ಅಮರಾವತಿಯ ಭೋಗಗಳನ್ನು ಅನುಭವಿಸುತ್ತಿದ್ದ ಅರ್ಜುನನೂ ಬಂದು ತನ್ನ ಸೋದರರನ್ನು ಸೇರಿಕೊಂಡನು. ಒಂದು ದಿನ ಭೀಮನು ಕೆಲವು ಬೇಟೆಗಾರರನ್ನು ಕೂಡಿಕೊಂಡು ಬೇಟೆಗೆ ಹೊರಟನು. ಭೀಮನ ಬೇಟೆ ಇತರರ ಬೇಟೆಯಂತಲ್ಲ. ಅವನು ಮೃಗಗಳನ್ನು ಬೆನ್ನಟ್ಟಿ, ಹಿಡಿದು, ಹೊಡೆದು, ಮೆಟ್ಟಿ, ಗುದ್ದಿ, ಅದುಮಿ ಕೊಲ್ಲುತ್ತಿದ್ದನು. ಇವನ ಗಲಭೆಗೆ ಹೆದರಿದ ಕಾಡುಹಂದಿಯೊಂದು ಪ್ರಾಣಭಯದಿಂದ ಓಡಿತು. ಭೀಮನೂ ಆ ಹಂದಿಯನ್ನು ಬೆನ್ನಟ್ಟಿದನು. ಅವನ ಓಟಕ್ಕೆ ನೆಲ

ಆದುರಿತು. ಅವನು ಓಡಿಡೆಡೆಯುಲ್ಲಿಲ್ಲ ಒಂದು ರೀತಿಯ ಗಲಭೆ ಉಂಟಾಯಿತು. ಎಷ್ಟೋ ಕಾಲದಿಂದ ನಿದ್ದೆ ಮಾಡುತ್ತಾ ಬಿದ್ದಿದ್ದ ಒಂದು ಹೆಬ್ಬಾವು ಈ ಗಲಭೆಯಿಂದ ಎಚ್ಚೆತ್ತು ತನ್ನ ತೆಕ್ಕೆಯನ್ನು ನಿಧಾನವಾಗಿ ಸಡಿಲಿಸಿತು. ಆ ಹಾವಿನ ಮೇಲೆಲ್ಲ ತರಗೆಲೆಯು ಮುಚ್ಚಿದ್ದರಿಂದ ಅದನ್ನು ತಿಳಿಯದೆ ಭೀಮನು ಅದರ ತೆಕ್ಕೆಯೊಳಗೆ ಕಾಲಿಟ್ಟನು. ಸರ್ಪವು ತಕ್ಷಣವೇ ತನ್ನ ತೆಕ್ಕೆಯನ್ನು ಬಿಗಿಗೊಳಿಸಿತು. ಭೀಮನು ತನ್ನ ಕಾಲನ್ನು ಬಿಡಿಸಲು ಪ್ರಯತ್ನಿಸಿದಷ್ಟೂ ತೆಕ್ಕೆಯ ಬಿಗಿತ ಹೆಚ್ಚಾಯಿತು. ಭೀಮನಿಗೆ ಆಶ್ಚರ್ಯವಾಯಿತು. ಅವನು ಹೆಚ್ಚು ಹೆಚ್ಚು ಶ್ರಮಿಸಿದಂತೆಲ್ಲ ಅವನ ಬಲವು ಕುಗ್ಗುತ್ತಾ ಹೋಯಿತು. ತನ್ನ ಸಹೋದರರನ್ನು ಕುರಿತು ಅವನು ಬಹಳ ದುಃಖಿಸಿದನು.

ಈ ಕಡೆ ಯುಧಿಷ್ಠಿರನಿಗೆ ಅನಿಮಿತ್ತವೆಂಬಂತೆ ಕೆಲವು ದುಶ್ಶಕುನಗಳು ತೋರಿಬಂದವು. ಧೌಮ್ಯರನ್ನು ಕೇಳಿ ಆ ಶಕುನಗಳು ಅನಿಷ್ಟ ಸೂಚಕಗಳೆಂದು ತಿಳಿದುಕೊಂಡನು. ಅವನು ಮರುಕ್ಷಣದಲ್ಲಿ ಕೇಳಿದ ಪ್ರಶ್ನೆ ಭೀಮ ಎಲ್ಲಿದ್ದಾನೆ ಎಂದು.

ರಮೆ:– ಅಂದರೆ?

ಮುರಳಿ:– ತನಗೆ ಅನಿಷ್ಟ ಎಂದರೆ ಭೀಮನಿಗೇ ಏನೋ ಆಗಿರಬೇಕೆಂದು ಅವನಿಗೆ ಅನಿಸಬೇಕಾದರೆ ಅವನು ಭೀಮನ ಬಗೆಗೆ ಎಷ್ಟು ದೊಡ್ಡ ಮಮತೆ, ಆಸೆ, ಭರವಸೆಗಳನ್ನಿಟ್ಟುಕೊಂಡಿದ್ದನೆಂಬುದು ಗೊತ್ತಾಗುತ್ತದೆ. ಭೀಮನು ಬೇಟೆಗೆ ಹೋಗಿದ್ದಾನೆಂದು ಗೊತ್ತಾದ ತಕ್ಷಣ ಅವನು ಭೀಮನು ಹೋದತ್ತಲೇ ಹೊರಟನು. ಪರಿವಾರವೂ ಅವನನ್ನು ಹಿಂಬಾಲಿಸಿತು. ಹೀಗೆ ಹೋದಾಗ ದೂರದಲ್ಲಿ, ಶ್ರೇಷ್ಠವಾದ ತನ್ನ ಸತ್ವವು ಉಡುಗಿ, ಸಾಹಸವು ಕುಂದಿ, ಅಪಜಯದಿಂದ ಮುಖವು ಬಾಡಿರಲು, ಮುಡಿಗೆದರಿ, ತನ್ನ ಹಿಡಿತದಿಂದ ತಪ್ಪಿಹೋದ ಗದೆಯು ಕೆಳಗುರುಳಿ ಬಿದ್ದಿರಲು ನಿರ್ವೀರ್ಯನಂತಾಗಿದ್ದ ಭೀಮನನ್ನು ನೋಡಿ ಯುಧಿಷ್ಠಿರನಿಗೆ ಸಿಡಿಲು ಬಡಿದಂತಾಯಿತು. "ಶಿವ, ಶಿವಾ. ಹಿಂದೆ ಎಷ್ಟೆಷ್ಟೋ ಸಂಕಷ್ಟಗಳನ್ನು ಅನುಭವಿಸಿದ್ದರೂ ನಮಗೆ ಇಂತಹ ದುಸ್ಥಿತಿ ಒದಗಿರಲಿಲ್ಲ. ನಮ್ಮೆಲ್ಲರ ಪ್ರಾಣಕ್ಕೇ ಸಂಚಕಾರ ತರುವ ಈ ದುರವಸ್ಥೆಗೆ ವಿಧಿ ನಮ್ಮನ್ನು ನೂಕಿತೇ........

ರಮೆ:– ನಮ್ಮೆಲ್ಲರ........

ಮುರಳಿ:– ಹೌದು. ಪಾಂಡವರ ಬದುಕಿಗೆ ಭೀಮನ ಇರವಿನ ಅವಶ್ಯಕತೆಗೆ ಯುಧಿಷ್ಠಿರ ಹಿಡಿದ ಕನ್ನಡಿ ಇದು. ಹೀಗೆ ಪರಿತಪಿಸಿದ ಯುಧಿಷ್ಠಿರನು ಭೀಮನನ್ನು ಕುರಿತು "ಭೀಮಾ, ಇದೇನು ನಿನ್ನ ಸ್ಥಿತಿ ಹೀಗಿದೆ? ವಿನೋದಕ್ಕೆಂದು

ನೀನು ಈ ರೀತಿ ಇರುವದಲ್ಲಪಷ್ಟೆ?" ಎಂದು ಕೇಳಿದನು. ಇಷ್ಟರಲ್ಲಿ ಆ ಹೆಬ್ಬಾವು ಭೀಮನ ಮೈಯನ್ನೆಲ್ಲ ಸುತ್ತಿಕೊಂಡು ಅವನ ತಲೆಯ ಮೇಲೆ ತನ್ನ ಹೆಡೆ ಬಿಟ್ಟದ್ದಿತು. ಹಾಗಾಗಿ ಚೈತನ್ಯ ಹೀನನಾಗಿದ್ದ ಭೀಮನು ಮೆಲ್ಲನೆ ಕಣ್ತೆರೆದು ಗಂಟಲು ಬಿಗಿದಿದ್ದುದರಿಂದ ಮಾತನಾಡಲು ಸಾಧ್ಯವಾಗದೆ ಚಿರಳುಸನ್ನೆ ಮಾಡಿದನು. ಇದರಿಂದ ಮತ್ತೂ ಅವಾಕ್ಕಾದ ಯುಧಿಷ್ಠಿರನು ಆ ಹಾವನ್ನೇ ಮಾತನಾಡಿಸಲು ಅದು ಭಯಂಕರವಾಗಿ ಬಾಯಿ ಬಿಡುತ್ತಾ–ಮನುಷ್ಯ ಭಾಷೆಯಲ್ಲಿ ಮಾತನಾಡಿಸಿತು......

ರಮೆ:– ಏನು ಪ್ರಯೋಜನ? ಕೊನೆಯಲ್ಲಿ ಹಾವಿನ ಬಾಯಿಯಿಂದ ನೀವು ಮಾತನಾಡಿಸಿಯೇ ಆಡುತ್ತೀರಿ. ಅದರ ಮಾತು ನಮಗೂ ಕೇಳುತ್ತಿದೆಯೇನೋ ಎಂದು ಅನಿಸಲೂ ಅನಿಸುತ್ತೀರಿ. ಹೋಗಲಿ. ಮುಂದಕ್ಕೆ ಹೇಳಿ.

ಮುರಳಿ:– ಅಂದರೆ?

ರಮೆ:– ಅಂದರೆ ಏನೂ ಇಲ್ಲ. ಹಾವು ಮಾತನಾಡಲು ಸಾಧ್ಯವೇ ಎಂದು ನಾನೇನಾದರೂ ಕೇಳಿಬಿಟ್ಟರೆ, ಹೇಳಿದೆ. ಇಲ್ಲದ ವಾದ ಮಾಡಿ ನನಗಷ್ಟು ಬಯ್ದು ಸುಸ್ತುಪಡಿಸಿ ಕೊನೆಗೆ ನನ್ನ ಬಾಯಿಂದಲೇ "ಹೌದಪ್ಪಾ, ಹಾವು ಮಾತನಾಡಲು ಸಾಧ್ಯವಿದೆ" ಎಂದು ಹೇಳಿಸಿ ಮುಗಿಸುತ್ತೀರಿ. ಒಂದು ಅರ್ಧಗಂಟೆ ಸಮಯ ವ್ಯರ್ಥ ಅಷ್ಟೆ. ಏನಾದೀತು ಎಂದು ಗೊತ್ತಿರುವದರ ಕುರಿತು ಚರ್ಚೆ ಯಾಕೆ ಪ್ರಾರಂಭಿಸಬೇಕು? ಮುಂದಕ್ಕೆ ಹೇಳಿ.

ಮುರಳಿ:– ನನ್ನ ನಿನ್ನಂತಹ ಪ್ರೌಢರು ಹತ್ತಾರು ವರ್ಷ ಕಲಿತರೂ ಸಾಧಿಸಲು ಸಾಧ್ಯವಾಗದಷ್ಟು ಸಂಗೀತದ ವಿದ್ವತ್ತನ್ನು ಏಳು ವರ್ಷದ ಒಂದು ಮಗು ಕರಗತ ಮಾಡಿಕೊಂಡು ಕಛೇರಿ ಕೊಡಬಲ್ಲದೆಂದಾದರೆ, ಹೆಚ್ಚು ಕಡಿಮೆ ಅಷ್ಟೇ ಪ್ರಾಯದ ಇನ್ನೊಂದು ಮಗು ವೇದಮಂತ್ರ ಹೇಳಬಲ್ಲದೆಂದಾದರೆ, ಅನೇಕ ಸಾಕು ಪ್ರಾಣಿಗಳು ಭಾಷೆಯ ಮೂಲಕ ಅಲ್ಲವಾದರೂ ಚೇಷ್ಟೆಗಳ ಮೂಲಕ ಮನುಷ್ಯ ಗ್ರಹಿಸಲಾಗದ ವಿಷಯಗಳನ್ನು ಗ್ರಹಿಸಿಕೊಂಡು ಅದನ್ನು ನಮಗೆ ಯಶಸ್ವಿಯಾಗಿ ತಿಳಿಸಬಲ್ಲವೆಂದಾದರೆ........

ರಮೆ:– ........ನಾನು ಅಷ್ಟು ಹೇಳಿದುದೂ ತಪ್ಪಾಯಿತು. ನಾನು ಹೇಳಲಿಲ್ಲವೆ?.... ಹಾಗಾದರೆ, ಹೀಗಾದರೆ, ಹಾವು ಮಾತನಾಡುವದು ಹೇಗೆ ಸುಳ್ಳಾಗುತ್ತದೆ ಎಂದೆಲ್ಲ ಸಾಕುಮಾಡಿ ಬಿಡುತ್ತೀರಿ, ಎನ್ನಲಿಲ್ಲವೆ? ಹೋಗಲಿ. ಅದು ಏನು ಮಾತನಾಡಿತು ಹೇಳಿ, ಸಾಕು.

ಮುರಳಿ:– ಧರ್ಮಾತ್ಮನಂತೆ ಕಾಣಿಸಿದ ಯುಧಿಷ್ಠಿರನಲ್ಲಿ ಅದು ಅನೇಕ ಧಾರ್ಮಿಕ ವಿಷಯಗಳನ್ನು ಪ್ರಸ್ತಾಪಿಸಿ ಅವುಗಳಿಗೆಲ್ಲ ಅವನಿಂದ ಸಮರ್ಪಕವಾದ ಉತ್ತರವನ್ನು ಪಡೆದು ಅವನ ಕೋರಿಕೆಯಂತೆ ತನ್ನ ಪೂರ್ವ ವೃತ್ತಾಂತವನ್ನು

ತಿಳಿಸುತ್ತಾ ತಾನು ಇದೇ ಪಾಂಡವರ ಪೂರ್ವಜನಾದ ನಹುಷನೆಂಬವನೆಂದೂ, ಇಂದ್ರನಾಗಿ ಮೆರೆದು ಪರಸ್ತ್ರೀ ವ್ಯಾಮೋಹದ ನಿಮಿತ್ತವಾಗಿ ಅಗಸ್ತ್ಯರಿಂದ ಶಾಪ ಪಡೆದ ತಾನು ಹೀಗೆ ಹಾವಿನ ರೂಪದಲ್ಲಿ ಬಿದ್ದಿರುವದಾಗಿಯೂ, ಆ ಅಗಸ್ತ್ಯರ ಅನುಗ್ರಹದಿಂದಾಗಿಯೇ ತಾನು ಯಾವದೇ ಜೀವಿಯನ್ನು – ಅದು ಎಷ್ಟು ಬಲ ವುಳ್ಳದಾಗಿದ್ದರೂ – ಬಂಧಿಸಲು ಸಮರ್ಥನಾಗಿರುವದಾಗಿಯೂ ತಿಳಿಸಿ ತನ್ನ ಶಾಪ ವಿಮೋಚನೆಯ ಸಮಯವು ಈಗ ಒದಗಿದುದರಿಂದ ಭೀಮನನ್ನು ಬಿಟ್ಟು ತನ್ನ ನಿಜರೂಪವನ್ನು ಪಡೆದು ಕಣ್ಮರೆಯಾದನು.

ಈ ಕಡೆ ಅಪಜಯದ ದುಃಖದಿಂದ ತಪ್ತನಾದ ಭೀಮನನ್ನು ಯುಧಿಷ್ಠಿರ, ದ್ರೌಪದಿ, ಧೌಮ್ಯ ಮೊದಲಾದವರೆಲ್ಲರೂ ಬಹಳ ಸಮಾಧಾನಪಡಿಸಬೇಕಾಯಿತು. ಋಷಿಯ ವರಬಲದ ಮುಂದೆ ಮಾನವನ ದೇಹಬಲವು ಸೋಲುವದೇ ಪ್ರಕೃತಿ ಧರ್ಮವೆಂದು ಅವರು ಅವನನ್ನು ಸಂತೈಸಿದರು.

ಸ್ವಲ್ಪ ಸಮಯ ಕಳೆದ ಮೇಲೆ ದುರ್ಯೋಧನನಿಂದ ಪ್ರೇರಿತನಾದ ದೂರ್ವಾಸನು ಪಾಂಡವರನ್ನು ಕುಹಕದಿಂದ ನಾಶ ಮಾಡಲು ಬಂದು, ಧರ್ಮದ ಎದುರಿನಲ್ಲಿ, ಭಗವಂತನ ಅನುಗ್ರಹ ಪಡೆದವರ ಎದುರಿನಲ್ಲಿ ಅನ್ಯಾಯವು ಎಷ್ಟೇ ಪ್ರಬಲವಾದುದಾಗಿದ್ದರೂ ಹೇಗೆ ಸೋಲುತ್ತದೆಂಬದನ್ನು ತೋರಿಸುವಂತೆ ವಿಫಲನಾಗಿ ಮರಳಿದನು. ದ್ರೌಪದಿಯ ಭಕ್ತಿಗೆ ಮೆಚ್ಚಿದ ಕೃಷ್ಣನು ಬಂದು ಪಾಂಡವರನ್ನು ಪಾರುಮಾಡಿದನು.

ಹೀಗೆಯೇ ಇರುವಾಗ ಈ ಕಡೆ ದುರ್ಯೋಧನನ ದೌರ್ಜನ್ಯವು ಅವನ ಮನಸ್ಸಿಗೆ ಶಾಂತಿ ದೊರಕಲು ಬಿಡಲಿಲ್ಲ. ಪಾಂಡವರ ಸಮಸ್ತ ಸಂಪತ್ತನ್ನೂ ಕಿತ್ತುಕೊಂಡು ಅವರನ್ನು ಕಾಡಿಗಟ್ಟಿದರೂ ಕೂಡ ಅವನಿಗೆ ತೃಪ್ತಿ ಸಿಕ್ಕುವಂತಿರಲಿಲ್ಲ. ಕೆಲವರು ಮನಶ್ಶಾಂತಿ ಪಡೆಯಲು ಇತರರಿಗೆ ಉಪಕಾರ ಮಾಡುತ್ತಾರೆ. ಇನ್ನು ಕೆಲವರು ಮನಸ್ಸಿನ ಅಶಾಂತಿಯನ್ನು ಹೋಗಲಾಡಿಸಿ ಶಾಂತಿ ಪಡೆಯಲಿಕ್ಕೆಂದು ಇತರರಿಗೆ ಕೇಡು ಮಾಡಲು ತೊಡಗುತ್ತಾರೆ. ಕೇವಲ ಹಣ್ಣು ಹಂಪಲುಗಳನ್ನು ತಿಂದುಕೊಂಡು ದಿಕ್ಕಿಲ್ಲದವರಂತೆ ಕಾಡಿನಲ್ಲಿ ತಿರುಗುತ್ತಿರುವ ಪಾಂಡವರೆದುರಿಗೆ ತನ್ನ ರಾಜವೈಭವವನ್ನು ಪ್ರದರ್ಶಿಸಿಬಿಡಬೇಕೆಂದು ದುರ್ಯೋಧನನಿಗೆ ಮನಸ್ಸಾಯಿತು. ಈ ಸೂಚನೆಯನ್ನು ಧೃತರಾಷ್ಟ್ರನು ಮೊದಲು ವಿರೋಧಿಸಿದರೂ ಪುತ್ರವ್ಯಾಮೋಹದಿಂದಾಗಿ ಕೊನೆಗೆ ಒಪ್ಪಿಕೊಂಡನು. ಭೀಷ್ಮ, ದ್ರೋಣ, ವಿದುರ ಮೊದಲಾದವರು ಇದರಿಂದ ಕೌರವರಿಗೆ ಅನಿಷ್ಟ ಒದಗುವದೆಂದೂ ದುರ್ಯೋಧನನ ಕೆಣಕು ಸ್ವಭಾವವು ಅವನನ್ನು ಸುಮ್ಮನಿರಲು ಬಿಡದೆ ಭೀಮನನ್ನು ಕೆರಳಿಸಬಹುದೆಂದೂ ಎಚ್ಚರಿಸಿದರು. ತಾವೆಲ್ಲರೂ ಸಭ್ಯತೆಯಿಂದ ವರ್ತಿಸುವದಾಗಿ ಭರವಸೆ ಕೊಟ್ಟು

ದುರ್ಯೋಧನನು ಹೇರಳ ಬಲ, ಪರಿವಾರ, ವಾರನಾರಿಯರೊಡಗೂಡಿ ದ್ವೈತ ವನಕ್ಕೆ ಘೋಷಯಾತ್ರೆಯ ನೆವದಿಂದ ಹೊರಟನು. ಅಲ್ಲಿಗೆ ತಲಪಿದ ಮೇಲೆ ಆ ವಾರಾಂಗನೆಯರಿಗೆ ಯಾರ ಅಂಕೆಯೂ ಇಲ್ಲದುದರಿಂದ ಅವರು ಆ ತಪೋವನದ ಋಷಿಗಳಿಗೆ ಉಪಟಳ ಕೊಡುತ್ತಾ ಅವರನ್ನು ಹಳಿಯುತ್ತಾ, ಕುಣಿಯುತ್ತಾ, ಅಶ್ಲೀಲವಾಗಿ ವರ್ತಿಸುತ್ತಾ ವನದ ಶಾಂತಿಗೆ ಭಂಗ ತಂದರು. ಈ ವೇಶ್ಯೆಯರ ಉಪಟಳವನ್ನು ತಾಳಲಾರದೆ ತಪಸ್ವಿಗಳೆಲ್ಲರೂ ಯುಧಿಷ್ಠಿರನಲ್ಲಿ ಹೋಗಿ ಮೊರೆ ಯಿಟ್ಟರು. ಆದರೆ ತಾನು ರಾಜನ ವರ್ತನೆಯನ್ನು ವಿರೋಧಿಸುವದು ಅನುಚಿತ ವಾಗುತ್ತದೆಂದು ಅವನು ತಿಳಿಸಿದನು. ಆದರೆ ಶಾಸ್ತ್ರದ ಈ ನೀತಿಗೂ ಸಂದರ್ಭದ ನೀತಿಗೂ ಸಾಮರಸ್ಯವನ್ನು ಕಾಣಲಾರದ ಭೀಮನು ಈ ಉಪಟಳದ ವಿಷಯ ಕೇಳಿ ತುಂಬ ಸಿಟ್ಟುಗೊಂಡು ಔಡು ಕಚ್ಚಿ ಕೈಗಳನ್ನು ಹಿಸುಕುತ್ತಾ ತನ್ನ ಗದಾಯುಧದ ಕಡೆಗೆ ನೋಡಿದನು. ಆದರೇನು ಮಾಡುವದು ? ಅವನು ಅವನ ತಾಯಿಯ ಮೊದಲನೆಯ ಮಗನಾಗಿರಲಿಲ್ಲ. ಹಾಗಾಗಿ ತನ್ನ ಸಿಟ್ಟನ್ನು ಅಣ್ಣನಿಗೆ ಮತ್ತೊಮ್ಮೆ ಧಾರೆ ಎರೆದು ಕೊಡಬೇಕಾಯಿತು. ಅಷ್ಟರಲ್ಲಿ ದುರ್ಯೋಧನನ ಪರಿವಾರದ ವೇಶ್ಯೆ ಯರು ನೀರಾಟಕ್ಕೆಂದು ಒಂದು ಕೊಳಕ್ಕೆ ಹೋಗಲು, ಆ ವನದ ಕಾವಲುಗಾರ ರಾದ ಗಂಧರ್ವರು ಇವರೆಲ್ಲರನ್ನೂ ಓಡಿಸಿದರು.

ರಮೆ:– ಈ ಗಂಧರ್ವರು, ಯಕ್ಷರು, ಕಿನ್ನರರು ಅಂತ ಎಲ್ಲ ಆಗಾಗ ಬರು ತ್ತದಲ್ಲಾ, ಇವರೆಲ್ಲ ಯಾರು ?

ಮುರಳಿ:– ಒಂದೊಂದು ವಿಶಿಷ್ಟ ಜನಾಂಗದವರಿರಬಹುದು. ಸಂಗೀತ, ಇತರ ಲಲಿತಕಲೆಗಳು ಮೊದಲಾದುವಲ್ಲಿ ನಿಪುಣತೆಯನ್ನು ಪಡೆದ ಜನಾಂಗವು ಗಂಧರ್ವ ರೆಂದು ಹೇಳಿಸಿಕೊಂಡಿರಲೂಬಹುದು.

ರಮೆ:– ಹಾಗಿದ್ದರೆ ಈ ಗಂಧರ್ವ ಲೋಕ ಎಂದು ಮುಂತಾಗಿ ಆ ಲೋಕ ಗಳು ಭೂಲೋಕದಿಂದ ಹೊರತಾಗಿವೆ ಎಂಬ ಅರ್ಥದಲ್ಲಿಯೂ ಹೇಳುತ್ತಾರಲ್ಲ ?

ಮುರಳಿ:– ಅದು ಬೇರೆ ಬೇರೆ ವಿಧದಲ್ಲಿ ಸಾಧ್ಯ. ಭೂಲೋಕದಲ್ಲಿಯೇ ಯಾವದೋ ಒಂದು ಭಾಗದಲ್ಲಿ ಈ ಜನಾಂಗವು ನೆಲಸಿದ ಪ್ರದೇಶವನ್ನೂ ಹಾಗೆ ಹೇಳಿರಬಹುದು. ಅಥವಾ ಆಯಾ ಜನಾಂಗದ ವಿಶಿಷ್ಟ ಗುಣಗಳ ಅಮೂರ್ತ ಸ್ವರೂಪಕ್ಕೆ ಕೊಟ್ಟ ಹೆಸರೂ ಇರಬಹುದು. ಉದಾಹರಣೆಗೆ ನಾವು ಸಂಗೀತ ಲೋಕ, ಸಾಹಿತ್ಯ ಲೋಕ ಎನ್ನುವದಿಲ್ಲವೇ, ಹಾಗೆ. ಇಲ್ಲವೇ, ಭೂಮಿಯಿಂದ ಹೊರತಾಗಿ ದೇಹದ ಈ ಇಂದ್ರಿಯಗಳಿಗೆ ಗೋಚರವಾಗದೆ, ಮನಸ್ಸಿನ ಯಾವದಾದರೊಂದು ಸ್ತರದ ಅನುಭವಕ್ಕೆ ಮಾತ್ರ ಬರುವ ಪ್ರತ್ಯೇಕ ಒಂದು ಲೋಕವೂ ಇರ ಬಹುದು.

ರಮೆ:– ಹಾಗಿದ್ದ ಮೇಲೆ ಈ ಗಂಧರ್ವರು ಎಂದರೆ ಇಲ್ಲಿ ಯಾರು ಎನ್ನುತ್ತೀರಿ ?

ಮುರಳಿ:– ನಾನು ಹಿಂದೆ ಹೇಳಿದಂತೆ ಇಂದ್ರಿಯಾತೀತವಾದ ಒಂದು ಲೋಕದಲ್ಲಿ ವಾಸಿಸುವ ಜೀವಿಗಳೂ ಅವರಾಗಿರಬಹುದು. ಭೂಮಿಯಲ್ಲಿನ ಯಾವದೇ ಒಂದು ಜನಾಂಗ ಈ ಇಂದ್ರಿಯಾತೀತ ಲೋಕದ ಜನಾಂಗದ ವಿಶಿಷ್ಟತೆಗಳನ್ನೇ ತಮ್ಮಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಿ ತಾವೂ ಆ ಹೆಸರನ್ನೇ ಇಟ್ಟುಕೊಂಡವರೂ ಇರಬಹುದು. ಉದಾಹರಣೆಗೆ ಗಂಧರ್ವರು ಎನ್ನು. ಗಾನಕ್ಕೆ ಹೆಸರಾದವರು ಇವರು. ಗಂಧರ್ವಲೋಕ ಎಂಬ ಅದೃಶ್ಯ ಲೋಕವಿದ್ದು ಅಲ್ಲಿನ ನಿವಾಸಿಗಳು ಗಂಧರ್ವರೆನಿಸಿಕೊಂಡಿರಲೂಬಹುದು. ಭೂಮಿಯಲ್ಲಿನ ಒಂದು ಜನಾಂಗವು ಈ ಗಂಧರ್ವರನ್ನು ಆದರ್ಶವಾಗಿ ಪಡೆದು ಅವರ ಸಂಗೀತ ಕಲೆಯನ್ನು ಆರಾಧಿಸುತ್ತಾ ತಾವೂ ಗಂಧರ್ವರೆಂದು ಕರೆದುಕೊಂಡಿರಲೂ ಸಾಧ್ಯವಿದೆ.

ಉದಾಹರಣೆಗೆ ನೋಡು. ಇಂದು ಅಮೆರಿಕಾದಲ್ಲಿ ಹರೇಕೃಷ್ಣ ಪಂಥ ಎನ್ನುವದಿದೆ. ಅದಕ್ಕೆ ಸೇರಿದವರು ತಲೆ ಬೋಳಿಸಿಕೊಂಡು, ಕಾಷಾಯ ಧರಿಸಿ, ತಂಬೂರಿ, ತಾಳ ಹಿಡಿದು ಅಲ್ಲಿ ಭಜನೆ ಮಾಡುತ್ತಾರೆ. ಇಂಥವರ ಸಂಖ್ಯೆ ಅಲ್ಲಿ ಶೀರಾ ಕಡಿಮೆ. ಅಮೆರಿಕದ ಸಾರ್ವತ್ರಿಕ ಜನಜೀವನಕ್ಕೆ ಹೋಲಿಸಿದಾಗ ಈ ಪಂಥದವರು ವಿಚಿತ್ರವಾಗಿ ಕಾಣಿಸುತ್ತಾರೆ. ಅಲ್ಲಿನ ಆ ಪಂಥದವರು ಭಾರತಕ್ಕೆ ಬರುವದು ಎನ್ನುವದಕ್ಕೆ ತಾವು ಕೃಷ್ಣನ ಲೋಕಕ್ಕೆ ಹೋಗಿ ಬರುತ್ತೇವೆ ಎನ್ನುವದು ಸಹಜವಾಗುತ್ತದೆ. ಏಕೆಂದರೆ ಭಾರತದಲ್ಲಿ ಕೃಷ್ಣ ಹುಟ್ಟಿದ್ದಾನೆ, ಓಡಾಡಿದ್ದಾನೆ. ದಕ್ಷಿಣ ಭಾರತದ ನಾವು ಬೃಂದಾವನವನ್ನು ಕೃಷ್ಣನ ಭೂಮಿ, ಅರ್ಥಾತ್ ಲೋಕ ಎಂದು ಕರೆಯುವದಿಲ್ಲವೆ ?

ರಮೆ:– ಹಾಗಿದ್ದರೆ ಅರ್ಜುನ ಇಂದ್ರಲೋಕಕ್ಕೆ ಹೋದುದು ಹೀಗೇ ಏನು ?

ಮುರಳಿ:– ಇರಬಹುದು. ಈ ಭಾರತದಲ್ಲಿಯೇ ಸಾಮಾನ್ಯರು ಹೋಗಲು ಶೀರಾ ದುರ್ಗಮವಾದ ಯಾವದೇ ಒಂದು ಪ್ರದೇಶವು ಕೈಲಾಸ, ಇಂದ್ರಲೋಕ ಎಂದು ಇದ್ದಿರಬಹುದು. ಅಥವಾ ಅದು ಇಂದ್ರಿಯಾತೀತವಾದ ಪ್ರದೇಶವೂ ಆಗಿದ್ದಿರಬಹುದು.

ರಮೆ:– ಆಗಲಿ. ಗಂಧರ್ವರು ನಿಮ್ಮ ಆ ವೇಶ್ಯೆಯರನ್ನು ಓಡಿಸಿದರು. ಆಮೇಲೆ ?

ಮುರಳಿ:– ಹೌದು. ಆ ವೇಶ್ಯೆಯರನ್ನು ನಿನ್ನ ಆ ಗಂಧರ್ವರು ಓಡಿಸಿದರು. ಇದರಿಂದ........

ರಮೆ:– ಅವರೇಕೆ ನನ್ನವರಾದಾರು !

ಮುರಳಿ:- ಇಲ್ಲ. ನನ್ನ ವೇಶ್ಯೆಯರನ್ನು ನಿನ್ನವರಲ್ಲದ ಗಂಧರ್ವರು ಓಡಿಸಿದರು. ಹೀಗೆ ಅಟ್ಟಲ್ಪಟ್ಟ ಹೆಂಗಸರ ದೂರನ್ನು ಕೇಳಿ ದುರ್ಯೋಧನನು ಒಂದು ಸೈನ್ಯವನ್ನು ಕಳುಹಿಸಲು ಅದು ಆ ಕಾವಲುಗಾರರನ್ನು ಸದೆ ಬಡಿಯಿತು. ಅದರಲ್ಲಿ ಕೆಲವರು ತಮ್ಮ ರಾಜನಾದ ಚಿತ್ರರಥನೆಂಬ ಗಂಧರ್ವನಲ್ಲಿ ಮೊರೆಯಿಟ್ಟರು. ಅವನು ಕ್ರುದ್ಧನಾಗಿ ಬಲಿಷ್ಠವಾದೊಂದು ಸೈನ್ಯವನ್ನು ಕಳುಹಿಸಿದನು. ದುರ್ಯೋಧನನೂ ತನ್ನ ಕಡೆಯ ಕೆಲವು ಅತಿರಥರನ್ನು ಕಳುಹಿಸಿದನು. ಯುದ್ಧವು ಬಿಗಿಯಾಯಿತು. ಕೊನೆಯಲ್ಲಿ ಗಂಧರ್ವ ರಾಜನೇ ಬಂದನು. ಈ ಕಡೆಯಿಂದಲೂ ದುರ್ಯೋಧನ, ಕರ್ಣ, ದುಶ್ಶಾಸನ ಮೊದಲಾದ ಮಹಾವೀರರೂ ಸಿದ್ಧರಾದರು. ಕೊನೆಯಲ್ಲಿ ದುರ್ಯೋಧನನೂ ಸೇರಿದಂತೆ ಅವನ ನೂರ್ವರು ಸಹೋದರರೂ ಗಂಧರ್ವನಿಂದ ಸೆರೆ ಹಿಡಿಯಲ್ಪಟ್ಟು ಒಯ್ಯಲ್ಪಟ್ಟರು.

ರಮೆ:- ಆಗ ಕರ್ಣ, ದುರ್ಯೋಧನ ಮೊದಲಾದವರೆಲ್ಲ ಯುದ್ಧ ಮಾಡಿದುದೊ, ಆಟವಾಡಿದುದೊ ?

ಮುರಳಿ:- ಯುದ್ಧ ಎಂದು ಕರೆಯಲ್ಪಡುವ ಆಟವಾಡಿರಬೇಕು. ಕೊನೆಗದು ಇಷ್ಟಕ್ಕೆ ತಲಪಿತು. ಇದರಿಂದ ಗಾಬರಿಯಾದ ದುರ್ಯೋಧನನ ಪತ್ನಿ ಭಾನುಮತಿಯು ಗೋಳಿಡುತ್ತಾ ಯುಧಿಷ್ಠಿರನ ಮೊರೆಹೊಕ್ಕಳು.

ರಮೆ:- ಗೋಳಾಡಿಸಬೇಕೆಂದು ಬಂದವರು ತಾವೇ ಗೋಳಿಡುತ್ತಾ ಅವರ ಕಾಲು ಹಿಡಿಯಬೇಕಾಯಿತು.

ಮುರಳಿ:- ಹೌದು. ದುರ್ಯೋಧನನ ಕತೆಯನ್ನು ಕೇಳಿ ಮನ ಕರಗಿದ ಯುಧಿಷ್ಠಿರನು ಅವನನ್ನು ಬಿಡಿಸಿಕೊಂಡು ಬರುವಂತೆ ಭೀಮನಿಗೆ ತಿಳಿಸುತ್ತಾ ಅಪಕಾರಿಗಳಿಗೆ ಕೂಡ ಉಪಕಾರ ಮಾಡುವದು ಉತ್ತಮವೆಂದೂ, ದುರ್ಯೋಧನನು ತಮ್ಮ ಅನುಜನೇ ಆದುದರಿಂದಲೂ, ಸಂಕಟದ ಸಮಯದಲ್ಲಿ ತಾವು ಯಾರನ್ನೇ ಆದರೂ ಸ್ನೇಹದಿಂದ ಕಾಣಬೇಕಾದುದರಿಂದಲೂ, ದುರ್ಯೋಧನನನ್ನು ಯಾರಾದರೂ ಸೆರೆ ಹಿಡಿದು ಒಯ್ದರೆ ಅದರ ಅಪಕೀರ್ತಿ ತಮ್ಮ ಇಡಿಯ ವಂಶಕ್ಕೇ ಬರುವದರಿಂದಲೂ ಅವನನ್ನು ಬಿಡಿಸಿಕೊಂಡು ಬರಬೇಕಾದುದು ಅವಶ್ಯವೆಂದೂ ತಿಳಿಸಿದನು. ಭೀಮನ ಅಭಿಪ್ರಾಯ ಬೇರೆಯೇ ಆಗಿತ್ತು. ಅವನು ಹೇಳಿದನು— "ಅಣ್ಣಾ, ರಾಜನಾದವನು ಆಜ್ಞೆ ಕೊಡುವ ಮುಂಚೆ ಅದು ನೀತಿ ಶಾಸ್ತ್ರಕ್ಕೆ, ರಾಜಧರ್ಮಕ್ಕೆ ವಿರೋಧವಾಗಿದೆಯೇ ಎಂಬದನ್ನು ವಿಮರ್ಶಿಸಿಕೊಳ್ಳಬೇಕು. ನಾವೇ ಮಾಡಬೇಕೆಂದಿದ್ದ ಕೆಲಸವನ್ನು ಮತ್ತೊಬ್ಬನು ಮಾಡಿದರೆ ನಮಗೇನು ನಷ್ಟ? ಭಾನುಮತಿ ತನಗೆ ಸಂಕಟ ಒದಗಿದಾಗ ಮಾತ್ರ ನಿಮ್ಮನ್ನು ಜ್ಞಾಪಿಸಿಕೊಂಡು ನಿಮ್ಮಲ್ಲಿಗೆ ಬಂದು ಗೋಳಿಟ್ಟು ತನ್ನ ಕಾರ್ಯ ಸಾಧಿಸಿಕೊಳ್ಳಲು

ಹವಣಿಸುತ್ತಾಳೆ. ಅವರ ಪೂರ್ವಾರ್ಜಿತ ದುಷ್ಕೃತವು ಇಂದು ಈ ರೀತಿ ಫಲಿಸಿದರೆ ಅದರ ಹೊಣೆ ನಮಗೇಕೆ ?"

ರಮೆ:– ವಿಧಿ ಅದಕ್ಕೇ ಯುಧಿಷ್ಠಿರನನ್ನು ಪಾಂಡವರ ಜ್ಯೇಷ್ಠನನ್ನಾಗಿ ಮಾಡಿದುದು.

ಮುರಳಿ:– ಯಾವದಕ್ಕೇ ?

ರಮೆ:– ಸಂದಿಗ್ಧ ಸಂದರ್ಭಗಳಲ್ಲಿ ಏನು ಮಾಡುವದು ಸರಿ ಎಂಬ ನ್ಯಾಯೋಚಿತ ಮಾರ್ಗದರ್ಶನ ಕೊಡುವದಕ್ಕೆ. ತನ್ನ ಬಂಧು ಸ್ತ್ರೀಯೊಬ್ಬಳು ಬಂದು ಕಣ್ಣೀರಿಡುತ್ತಾ ಪತಿ ಭಿಕ್ಷೆ ಬೇಡಿದಾಗ ಅದನ್ನು ಕೊಡುವ ಸಾಮರ್ಥ್ಯವಿದ್ದೂ ಕೂಡ ಕೊಡಲು ನಿರಾಕರಿಸುವದು ಹಿಂದೂ ಸಂಸ್ಕೃತಿಗೇ ಅಪಚಾರ ಮಾಡುವ ಮನೋಧರ್ಮ.

ಮುರಳಿ:– ಅದು ಕೇವಲ ಅಭಿಪ್ರಾಯ.

ರಮೆ:– ಏನು ಮಣ್ಣು ಅಭಿಪ್ರಾಯ ? ಯುಧಿಷ್ಠಿರನ ಮಾತನ್ನೇ ಭೀಮ ಹೇಳಿದ್ದರೆ ಅದೇ ಸರಿ ಎಂದು ಅಕ್ಷರ ಅಕ್ಷರವನ್ನೂ ವಿಶ್ಲೇಷಿಸಿ ಅರ್ಥ ಹೇಳುತ್ತಿದ್ದಿರಿ. ವಿಮರ್ಶೆ ಮಾಡುವಾಗ ನಾವು ನಿಷ್ಪಕ್ಷಪಾತ ದೃಷ್ಟಿ ಇಟ್ಟುಕೊಳ್ಳಬೇಕು. ಈ ಒಂದು ಕಡೆ ಭೀಮ ತಪ್ಪು ಮಾತನಾಡಿಬಿಟ್ಟ ಎಂದಾಕ್ಷಣ ಅವನ ವ್ಯಕ್ತಿತ್ವ ಸಣ್ಣದು ಎಂದೇನೂ ಆಗಬೇಕಾಗಿಲ್ಲ. ಬದಲು ಒಬ್ಬನ ಸಣ್ಣತನವನ್ನೂ ಹಿರಿತನವೆಂದು ತೋರಿಸಿ ರಚಿಸಿದ ವ್ಯಕ್ತಿತ್ವ ಆರೋಗ್ಯದಲ್ಲಿ ಬೆಳೆದ ಮೈಯಂತೆ ಇರುವದಿಲ್ಲ; ರೋಗದಿಂದ ಊದಿದ ಮೈಯಂತೆ ಇದ್ದೀತು, ಅಷ್ಟೆ.

ಮುರಳಿ:– ಯುಧಿಷ್ಠಿರ ಹೇಳಿದುದು ತಪ್ಪು ಎಂದು ನಾನು ಹೇಳಲಿಲ್ಲ.

ರಮೆ:– ಹಾಗಾದರೆ ಭೀಮ ಹೇಳಿದುದು ತಪ್ಪು ಎಂದು ಒಪ್ಪಿಕೊಳ್ಳುತ್ತೀರಿ ?

ಮುರಳಿ:– ಅದೂ ತಪ್ಪಲ್ಲ.

ರಮೆ:– ಇದೊಂದು ತರಹ ಸರ್ಕಸ್ಸು, ಬೀಳುವದೂ ಒಂದು ಪಟ್ಟು ಎಂಬಂತೆ.

ಮುರಳಿ:– ನೀನೇಕೆ ಯುಧಿಷ್ಠಿರನನ್ನು ಹಿಡಿದುಕೊಂಡು ಹೀಗೆ ಒದ್ದಾಡುತ್ತೀ ? ಹಿಡಿತವನ್ನು ಸಡಿಲಿಸಿ ಹಿಂತಿರುಗಿ ನೋಡಬಾರದೆ ?

ರಮೆ:– ಏನು ಕಾಣಿಸುತ್ತದೆ ?

ಮುರಳಿ:– ಬಂಧುಗಳು ಕಷ್ಟದಲ್ಲಿದ್ದಾಗ ಅವರ ಸಹಾಯಕ್ಕೆ ಒದಗುವದು ಧರ್ಮ ಎನ್ನುವದು ನಿನ್ನ ವಾದ.

ರಮೆ:– ಹೌದು.

ಮುರಳಿ:– ಆದರೆ ಕೌರವರು ಪಾಂಡವರ ಬಂಧುಗಳಲ್ಲ, ಶತ್ರುಗಳು. ಏಕೆಂದರೆ, ಹಾಗೆ ಮಾಡಲು ಸಾಧ್ಯವಿದ್ದಿದ್ದರೆ ದುರ್ಯೋಧನ ಪಾಂಡವರ ನಾಶ ಮಾಡಲಿಕ್ಕೆಂದೇ ಬಯಸುತ್ತಿದ್ದವನು. ತನ್ನನ್ನು ಕೊಲ್ಲಲು ಸದಾ ಹವಣಿಸುತ್ತಿರುವ ಒಬ್ಬನನ್ನು ಅವನ ದೌರ್ಜನ್ಯದಿಂದಾಗಿಯೇ ಮೂರನೆಯವನೊಬ್ಬ ಸೆರೆ ಹಿಡಿದಾಗ ನಾವೇಕೆ ಬಿಡಿಸಲು ಹೋಗಬೇಕು ?

ರಮೆ:– ಅವನ ಪತ್ನಿ ಬಂದು ಕಣ್ಣೀರಿಡುವದರಿಂದ.

ಮುರಳಿ:– ಆದರೆ ಇಂದಲ್ಲ, ನಾಳೆ ಆ ಪತ್ನಿ ಇತರ ಲಕ್ಷಗಟ್ಟಲೆ ಪತ್ನಿಯರೊಂದಿಗೆ ಕಣ್ಣೀರಿಡುವ ಪ್ರಸಂಗ ಬಂದೇ ಬರುತ್ತದೆ–ಅಥವಾ ಅಂತಹ ಸಂದರ್ಭ ತಮ್ಮಿಂದ ಉಂಟಾಗಲೇಬೇಕಾದರೂ ತಾವು ಅದನ್ನು ತಪ್ಪಿಸುವಂತಿಲ್ಲ ಎನ್ನುವದು ತಿಳಿದಿರುವಾಗ, ನಾಲ್ಕು ದಿನ ಅನಂತರ ತಮ್ಮಿಂದ ಆಗುವದು ಇಂದು ತನ್ನಷ್ಟಕ್ಕೇ ಆಗುವಂತಿದ್ದರೆ ತಾವೇಕೆ ಕಳವಳ ಪಡಬೇಕು ? ಹದಿನೆಂಟು ಅಕ್ಷೌಹಿಣೀ ಜನರ ಕಗ್ಗೊಲೆ ನಡೆದ ಭೀಕರ ಯಜ್ಞದ ಯಾಜಮಾನ್ಯವನ್ನು ತಪ್ಪಿಸಿಕೊಳ್ಳಲಾರದಂತಹ ಕ್ಷತ್ರಿಯ ಕುಲದಲ್ಲಿ ಪಾಂಡವರು ಹುಟ್ಟಿಬಿಟ್ಟಿದ್ದಾರೆ. ದುಷ್ಟರನ್ನು ಶಿಕ್ಷಿಸುವದೇ ಆ ಕುಲದ ಕರ್ತವ್ಯ ಅಥವಾ ಧರ್ಮ. ದುಷ್ಟರು ತನ್ನ ಬಂಧುಗಳಾದರೆ ಅವರನ್ನು ಕ್ಷಮಿಸಬೇಕು ಎನ್ನುವದು ರಾಜತ್ವಕ್ಕೆ ವಿರೋಧವಾದುದು ಅಥವಾ ಅದು ಅಧರ್ಮ. ಧರ್ಮ ಇಂಥದೇ ಎಂದು ನಿರ್ಧರಿಸುವದು ಕಷ್ಟ. ಪ್ರಾಣಿ ಹಿಂಸೆಯನ್ನು ಪೂರ್ಣವಾಗಿ ವರ್ಜಿಸುವದು ತಪಸ್ವಿಗಳ ಧರ್ಮ. ದೌರ್ಜನ್ಯವನ್ನು ಹತ್ತಿಕ್ಕುವದು ಕ್ಷತ್ರಿಯರ ಧರ್ಮ. ಯುಧಿಷ್ಠಿರ ತಪಸ್ವಿಯಂತೆ ಮಾತನಾಡುತ್ತಿದ್ದಾನೆ. ಆದರೆ ಅವನು ಒಂದು ಕ್ಷತ್ರಿಯ ಕುಲದ ಹಿರಿಯ. ಭೀಮ ಕ್ಷತ್ರಿಯನಂತೆ ಮಾತನಾಡುತ್ತಿದ್ದಾನೆ. ಆದರೆ ಅವನು ತಪಸ್ವಿಯಂತಹ ಅಣ್ಣನ ತಮ್ಮ. ಹೀಗಾಗಿ ಅವರಿಬ್ಬರ ಅಭಿಪ್ರಾಯಗಳಲ್ಲಿ ಆಗಾಗ ಇಂತಹ ಅಸಮಂಜಸತೆ ಕಾಣಿಸುವದು.

ರಮೆ:– ವಾದದ ಜಾಲ. ಮಾತಿನ ವೈಖರಿ. ಬುದ್ಧಿಯ ತೀಕ್ಷ್ಣತೆ. ಮೊಲಕ್ಕೆ ಕೊಂಬಿದೆ ಎಂದು ಒಪ್ಪಿಕೊಳ್ಳುವದೇನು, ಇದೇ ಮೊಲದ ಕೊಂಬು ಎಂದೂ ನಾವು ಹಿಡಿದು ತೋರಿಸಬೇಕಾಗುತ್ತದೆ. ಗಟ್ಟಿಗರಪ್ಪಾ ! ಕತೆ ಮುಂದುವರಿಸಿ.

ಮುರಳಿ:– ಹುಚ್ಚಿ. ಕೇಳು. ವಾದ ಮಾಡಿ ಭೀಮನ ಅಭಿಪ್ರಾಯವನ್ನು ಬದಲಾಯಿಸಲು ಯುಧಿಷ್ಠಿರನಿಗೆ ಸಾಧ್ಯವಾಗಲಿಲ್ಲ. ದುರ್ಯೋಧನನು ಬಿಡಿಸಲ್ಪಡದೆ ತಾನು ಅಂದಿನ ಊಟವನ್ನೇ ಮಾಡುವದಿಲ್ಲವೆಂದು ಪಟ್ಟು ಹಿಡಿದು ಕುಳಿತುಬಿಟ್ಟನು. ಆಗ ಅರ್ಜುನನು ತಾನು ಹೋಗುವದಾಗಿ ತಿಳಿಸಿ ಶಸ್ತ್ರಧಾರಿಯಾಗಿ

ಹೊರಟು ದುರ್ಯೋಧನನ ಅಳಿದುಳಿದ ಸೈನ್ಯವನ್ನು ಶೇಖರಿಸಿ ಚಿತ್ರರಥನನ್ನು ಅಟ್ಟಿದನು.

ರಮೆ:— ಯುಧಿಷ್ಠಿರನು ತಾನು ಊಟಮಾಡುವದಿಲ್ಲವೆಂದು ಹಟ ಹಿಡಿಯುವ ಬದಲು ದುರ್ಯೋಧನನ ಸೆರೆ ಬಿಡಿಸುವದಕ್ಕೆ ಭೀಮನಿಗೆ ಹೇಳಿದಂತೆಯೇ ಅರ್ಜುನನಿಗೆ ಹೇಳಬಹುದಿತ್ತಲ್ಲ ?

ಮುರಳಿ:— ಚಿತ್ರರಥನನ್ನು ಗೆಲ್ಲಲು ಅರ್ಜುನನಿಂದ ಸಾಧ್ಯ ಎಂಬದರ ಬಗೆಗೆ ಯುಧಿಷ್ಠಿರನಿಗೆ ಸಂಶಯು ಇದ್ದಿರಲೇಬೇಕು. ಹೇಗೂ ಅರ್ಜುನನನ್ನು ಅನುಸರಿಸಿ ಭೀಮ, ನಕುಲ, ಸಹದೇವರೂ ಹೊರಟರು.

ರಮೆ:— ಭೀಮನೇಕೆ ಹೊರಟ ?

ಮುರಳಿ:— ಮುಖ ಊದಿಸಿಕೊಂಡು ಮಾತನಾಡದೆ ಕೂರುವ ಮಕ್ಕಳ ಹಟ ಅವನದಲ್ಲ. ಅರ್ಜುನನಿಗೆ ಆಪತ್ತೊದಗದಂತೆ ನೋಡಿಕೊಳ್ಳಬೇಕಾದ ಕರ್ತವ್ಯದ ಪರಿಜ್ಞಾನವೂ ಅವನಿಗಿತ್ತು. ಹಾಗಾಗಿ ಅವನು ಅರ್ಜುನನನ್ನು ಅನುಸರಿಸಿ ಹೊರಟನು. ಯೋಗಿಗಳ ಮಟ್ಟಕ್ಕೇರಿ ಅಹಂಕಾರವನ್ನು ಕಳೆದುಕೊಂಡವರು ತಮ್ಮ ಇಚ್ಛೆಯೇ ನಡೆಯಬೇಕೆಂದು ಪಟ್ಟು ಹಿಡಿದು ಕೂರುವದಿಲ್ಲ ; ಭಗವದಿಚ್ಛೆಯನ್ನು ಅಸಂಕಲ್ಪಿತರಾಗಿ ಅನುಸರಿಸುತ್ತಾರೆ.

ಗಂಧರ್ವನಾದರೂ ಪಾಂಡವರ ಮಹಿಮೆ ಮತ್ತು ಪರಾಕ್ರಮಗಳನ್ನು ಕೇಳಿ ತಿಳಿದವನಾಗಿದ್ದುದರಿಂದ ಅವನು ದೊಡ್ಡ ಯುದ್ಧವನ್ನೇನೂ ಮಾಡದೆ ದುರ್ಯೋಧನನನ್ನು ಯುಧಿಷ್ಠಿರನಿಗೆ ಒಪ್ಪಿಸಿ ಹೊರಟು ಹೋದನು. ಯುಧಿಷ್ಠಿರನು ದುರ್ಯೋಧನನನ್ನು ಸಂತೈಸಿ ಕಳುಹಿಸಿಕೊಟ್ಟನು. ಅವಮಾನದಿಂದ ಕುಗ್ಗಿ ಹೋಗಿದ್ದ ದುರ್ಯೋಧನನು ತನ್ನ ಪಟ್ಟಣವನ್ನು ಪ್ರವೇಶಿಸದೆ ಗಂಗಾತೀರದಲ್ಲಿ ಪ್ರಾಯೋಪವೇಶ ಮಾಡುವದಾಗಿ ಹಟ ಹಿಡಿದು ಕುಳಿತನು. ಭಾನುಮತಿ, ಗಾಂಧಾರಿ, ಧೃತರಾಷ್ಟ್ರ, ಭೀಷ್ಮ, ದ್ರೋಣ, ಕರ್ಣ, ದುಶ್ಯಾಸನ ಮೊದಲಾದ ಎಲ್ಲರೂ ಅವನಿಗೆ ಬುದ್ಧಿ ಹೇಳಿದರು. ಆದರೆ ಹಟ, ದ್ವೇಷಗಳೇ ಮೂರ್ತೀಭವಿಸಿದಂತಿದ್ದ ಅವನು ಭೀಮ ದ್ರೌಪದಿಯರು ತನ್ನನ್ನು ಸದಾ ಇರಿಯುತ್ತಿರುವದರಿಂದ ತಾನು ಸಾಯುವದೇ ನಿಶ್ಚಯವೆಂದು ತಿಳಿಸಿದನು.

ರಮೆ:— ಅಂತೂ ಅವನಿಗೆ ಭೀಮನದೊಂದು ದೊಡ್ಡ ಹುಚ್ಚೇ !

ಮುರಳಿ:— ನಾವು ಸಾಮಾನ್ಯವಾಗಿ ಇಂಥವುಗಳನ್ನೆಲ್ಲ ಹುಚ್ಚು ಎಂದು ಲಘುವಾಗಿ ಹೇಳಿಬಿಡುತ್ತೇವಾದರೂ ಇದಕ್ಕೆಲ್ಲ ಒಂದು ನಿಸ್ಪಷ್ಟವಾದ ಅರ್ಥವಿದೆ ರಮಾ. ಪ್ರೀತಿ ಮತ್ತು ದ್ವೇಷ ಎಂಬ ಎರಡು ಭಾವಗಳು ಪ್ರಕೃತಿಯ ಅತ್ಯಂತ ಬಲಿಷ್ಠವಾದ ಎರಡು ಉಪಕರಣಗಳು. ಅವೆರಡರ ಸಹಾಯದಿಂದಲೇ ಈ

ಪ್ರಪಂಚದ ವ್ಯಾಪಾರಗಳೆಲ್ಲವೂ ಹೆಚ್ಚುಪಾಲು ನಡೆಯುವದು. ಇಷ್ಟೇ ಅಲ್ಲದೆ ಈ ಪ್ರೀತಿ ದ್ವೇಷಗಳು ಯಾರಿಗೋ ಯಾವಾಗಲೋ ಏಕೋ ಬರುತ್ತವೆ, ಯಾವಾಗಲೋ, ಏಕೋ ಹೊರಟುಹೋಗುತ್ತವೆ ಎನ್ನುವಂತಿಲ್ಲದೆ ಅವುಗಳು ಬಹಳ ಸ್ಪಷ್ಟವಾದ, ಕಟ್ಟುನಿಟ್ಟಾದ ಲೆಕ್ಕಾಚಾರಗಳನ್ನು ಆಧರಿಸಿಯೇ ಬರುತ್ತವೆ, ಹೋಗುತ್ತವೆ. ಈ ನಿಯಮವನ್ನೇ ಕರ್ಮಫಲ, ಪೂರ್ವಾರ್ಜಿತ ಫಲ ಎಂದು ಕರೆಯುವದು. ಇದನ್ನು ವಿವರಿಸುವದಕ್ಕೆ ದುರ್ಯೋಧನ ಉತ್ತಮ ಉದಾಹರಣೆ. ಚಿಕ್ಕಂದಿನಿಂದಲೂ ಅವನು ಭೀಮನನ್ನು ಹೇಗೆ ತನ್ನ ಅಂತರಾಳದಿಂದ ದ್ವೇಷಿಸು ತ್ತಿದ್ದಾನೆ ಎಂಬದನ್ನು ನಾವು ನೋಡುತ್ತಿದ್ದೇವೆ. ಭೀಮನು ಈ ಲೋಕದಿಂದ ಕಣ್ಮರೆಯಾಗಿಬಿಡಬೇಕೆಂಬಂತಹ ತೀವ್ರವಾದ ಅವನ ದ್ವೇಷ ಭಾವನೆಗೆ ಕಾರಣವನ್ನು ಅವರಿಬ್ಬರ ಈ ಜನ್ಮದಲ್ಲಿ ಹುಡುಕುವದು ವ್ಯರ್ಥವಾಗುತ್ತದೆ. ಈಗಲಾದರೂ ನೋಡು. ಪಾಂಡವರು ಕಾಡಿನಲ್ಲಿ ತಮ್ಮ ಪಾಡಿಗೆ ತಾವಿದ್ದರೂ ಅವರನ್ನು ಅಲ್ಲಿಯೂ ಶಾಂತಿಯಿಂದಿರಲು ಬಿಡದೆ ಅವರೆದುರಿನಲ್ಲಿ ತನ್ನ ದರ್ಪವನ್ನು ತೋರಿಸಲು ಬಂದ ದುರ್ಯೋಧನನು ತನ್ನ ಕಡೆಯವರ ಅನೀತಿ ಮತ್ತು ತನ್ನ ಅಸಾಮರ್ಥ್ಯ ಗಳಿಂದಾಗಿ ಗಂಧರ್ವನಿಗೆ ಸೆರೆಯಾಗಿಹೋಗಬೇಕಾಗಿ ಬಂದು ಪಾಂಡವರಿಂದ ಜೀವದಾನ ಪಡೆದು ಬಂದಿದ್ದಾನೆ. ಅವನ ಈ ಅವಮಾನಕ್ಕೆ ಭೀಮನು ಯಾವ ವಿಧದಿಂದಲೂ ಕಾರಣನಲ್ಲ. ಆದರೂ ಅವನ ಈ ದುಃಖದ ಸಂದರ್ಭದಲ್ಲಿಯೂ ಅವನ ಮನಸ್ಸನ್ನು ಇರಿಯುವ ಚಿಂತೆ ಎಂದರೆ ಭೀಮ ದ್ರೌಪದಿಯರ ಕುರಿತಾ ದುದು. ಇದರಿಂದ ಒಂದು ವಿಷಯ ನಮಗೆ ಗೊತ್ತಾಗುತ್ತದೆ. ಭೀಮ ದುರ್ಯೋಧನರ ದ್ವೇಷವು ಹಲವು ಜನ್ಮಗಳಿಂದ ನಡೆದು ಬಂದಿದ್ದು, ಹಲವು ಕ್ರಿಯೆ, ಪ್ರತಿಕ್ರಿಯೆಗಳ ಜಾಲದಿಂದ ಕೂಡಿದ್ದು ಈ ಜನ್ಮದಲ್ಲಿ ಅದು ತನ್ನ ಪರಮಾ ವಧಿಯನ್ನು ಮುಟ್ಟಿ ಮುಕ್ತಾಯದ ಹಂತಕ್ಕೆ ತಲಪಿದೆ ಎಂದು ನಾವು ಊಹಿಸ ಬಹುದು. ವಿನಾಕಾರಣವಾಗಿಯಾದರೂ ಭೀಮನನ್ನು ದುರ್ಯೋಧನ ದ್ವೇಷಿಸುವದೇಕೆಂಬದನ್ನು ನಾವು ಈ ರೀತಿ ಹಿಂದಿನ ಜನ್ಮಗಳಲ್ಲಿ ಕಂಡುಕೊಳ್ಳ ಬಹುದಾದರೆ ಅದರ ಪರಿಣಾಮವನ್ನು ಮಾತ್ರ ಈಗ ಸ್ಪಷ್ಟವಾಗಿಯೇ ಕಾಣುತ್ತೇವೆ. ದುರ್ಯೋಧನ ಭೀಮನಿಂದ ಮರಣ ಪಡೆಯಬೇಕೆಂಬದೇ ಆ ಪರಿಣಾಮ. ಅಂತಹ ಮರಣ ಪಡೆಯಲು ಭೀಮನನ್ನು ಅವನು ಎಷ್ಟೆಲ್ಲ ದ್ವೇಷದಿಂದ ಕಾಣ ಬೇಕೋ ಅಷ್ಟರಮಟ್ಟಿಗೆ ಕಾಣುತ್ತಿದ್ದಾನೆ– ಆ ದ್ವೇಷಕ್ಕೆ ಕಾರಣವಿರಲಿ, ಇಲ್ಲದೆ ಹೋಗಲಿ, ತನ್ನ ಆ ಮರಣವು ದ್ರೌಪದಿಯ ನಿಮಿತ್ತವಾಗಿ ಬರಬೇಕಾಗಿರುವದ ರಿಂದ ಅವನು ದ್ರೌಪದಿಯನ್ನು ನೆನಸಿಕೊಂಡೂ ರೊಚ್ಚಿಗೇಳುತ್ತಿದ್ದಾನೆ.

ನಮ್ಮ ಜೀವನದಲ್ಲಾದರೂ ಪ್ರೀತಿ, ದ್ವೇಷಗಳು – ಅವುಗಳು ಯಾರ್‍ಯಾರ ಬಗೆಗೆ ಎಷ್ಟೆಷ್ಟು ಪ್ರಬಲವಾಗಿರುತ್ತವೋ ಅಷ್ಟಷ್ಟರ ಮಟ್ಟಿಗೆ – ಹಿಂದಿನ ಜನ್ಮದ

ಕರ್ಮ ಸಂಬಂಧವನ್ನು ಹೊತ್ತು ಈ ಜನ್ಮದಲ್ಲಿ ಫಲ ಬಿಡಲು ಮೂಡಿ ಬಂದವುಗಳೇ ಆಗಿರುತ್ತವೆ........

ರಮೆ:– ಆಗಲಿ, ಆಮೇಲೆ ದುರ್ಯೋಧನ ಏನು ಮಾಡಿದ ?

ಮುರಳಿ:– ಆ ದಿನ ರಾತ್ರಿ ರಸಾತಳದಿಂದ ಕೆಲವು ರಾಕ್ಷಸರು ಬಂದು ಯುದ್ಧಕಾಲದಲ್ಲಿ ತಾವು ಕೌರವನಿಗೆ ಸಹಾಯ ಮಾಡುವದಾಗಿ ಭರವಸೆ ಕೊಟ್ಟು ಅವನು ಪುರಪ್ರವೇಶ ಮಾಡುವಂತೆ ಒಡಂಬಡಿಸಿದರು. ಅದೇ ಪ್ರಕಾರ ದುರ್ಯೋಧನನು ಪುರಪ್ರವೇಶ ಮಾಡಿದನು.

ಅವನ ಈ ದುರವಸ್ಥೆಯನ್ನು ಕೇಳಿದ ಅವನ ಭಾವನಾದ ಜಯದ್ರಥನು ಪ್ರತೀಕಾರ ಭಾವನೆಯಿಂದ ಭಾರೀ ಸೈನ್ಯವನ್ನು ತೆಗೆದುಕೊಂಡು ಪಾಂಡವರಿದ್ದ ವನಕ್ಕೆ ಹೋದನು. ಆದರೆ ಅವನು ಅಲ್ಲಿಗೆ ತಲಪಿದ ಮೇಲೆ ಅವನ ಮನಸ್ಸಿಗೆ ಬೇರೇನೋ ಹೊಳೆಯಿತು. ಅವನು ಅನೇಕ ಶೃಂಗಾರಭರಿತ ವಸ್ತುಗಳನ್ನು ತನ್ನ ದೂತನ ಕೈಯಲ್ಲಿ ಕೊಟ್ಟು ಅವುಗಳನ್ನು ದ್ರೌಪದಿಗೆ ಏಕಾಂತದಲ್ಲಿ ಕೊಡುವಂತೆ ಹೇಳಿ ಕಳುಹಿಸಿದನು. ಆ ಸಮಯಕ್ಕೆ ಸರಿಯಾಗಿ ಪಾಂಡವರೂ ಐದು ಮಂದಿ ಬೇಟೆಗೆ ಹೋಗಿದ್ದರು. ದ್ರೌಪದಿಯು ಧೌಮ್ಯಾದಿಗಳ ರಕ್ಷಣೆಯಲ್ಲಿದ್ದಳು. ಆಭರಣ ಮೊದಲಾದವನ್ನು ನೋಡಿದ ಅವಳು ಜಯದ್ರಥ ಮೊದಲಾದವರ ಕುಶಲ ಕ್ಷೇಮಗಳನ್ನು ವಿಚಾರಿಸಿದಳು. ಅವರುಗಳು ಪಕ್ಕದ ವನದಲ್ಲಿ ಬೀಡು ಬಿಡುವಂತೆ ತಿಳಿಸಿದಳಲ್ಲದೆ ಸ್ತ್ರೀಯು ಸ್ವತಂತ್ರವಾಗಿ ಯಾವದೇ ವಸ್ತುವನ್ನು ಸ್ವೀಕರಿಸಬಾರದಾದ್ದರಿಂದ ಜಯದ್ರಥನು ಕೊಟ್ಟು ಕಳುಹಿಸಿದ ವಸ್ತುವನ್ನು ಪಡೆದುಕೊಳ್ಳಲು ನಿರಾಕರಿಸಿದಳು. ದೂತರು ಜಯದ್ರಥನಲ್ಲಿಗೆ ಬಂದು ನಡೆದುದೆಲ್ಲವನ್ನೂ ತಿಳಿಸಿದರು. ಅವನು ಯೋಧನ ಉಡುಪನ್ನು ಧರಿಸಿ ಪರಿಮಳ ದ್ರವ್ಯಗಳಿಂದ ಶೃಂಗರಿಸಿಕೊಂಡು ದ್ರೌಪದಿಯಿದ್ದ ಪರ್ಣಶಾಲೆಗೆ ತಾನೇ ಬಂದನು. ಪತಿಶೂನ್ಯವಾದ ಮನೆಗೆ ಪರ ಪುರುಷನು ಬರಬಾರದೆಂದು ತಿಳಿಸುತ್ತಾ ದ್ರೌಪದಿಯು ಒಳಗೆ ಹೋಗುತ್ತಿದ್ದಾಗ ಕಾಮಾಂಧನಾಗಿದ್ದ ಜಯದ್ರಥನು ಒಮ್ಮೆಗೇ ಹಾರಿ ಅವಳ ತುರುಬನ್ನು ಎಳೆಯಲು ಅವಳು ವಿಹ್ವಲಳಾಗಿ ಭೀಮಾರ್ಜುನರನ್ನು ಕರೆಯಲು ಮೊದಲು ಮಾಡಿದಳು. ಅವಳ ಸಹಾಯಕ್ಕೆಂದು ಬಂದ ಋಷಿಗಳನ್ನು ಸೈಂಧವನು ಕತ್ತಿಯನ್ನು ಬೀಸಿ ಭಯಪಡಿಸುತ್ತಾ ದ್ರೌಪದಿಯನ್ನೆತ್ತಿಕೊಂಡು ಆಶ್ರಮದಿಂದ ಹೊರಬಿದ್ದನು. ಧೌಮ್ಯನು ರಕ್ಷೋಘ್ನ ಸೂತ್ರವನ್ನು ಜಪಿಸುತ್ತಾ ಹೆದರದೆ ಸೈಂಧವನನ್ನೇ ಹಿಂಬಾಲಿಸಿದನು. ಇಷ್ಟರಲ್ಲಿ ಪಾಂಡವರಿಗೆ ವರ್ತಮಾನ ಹೋಯಿತು. ಭೀಮಾರ್ಜುನರು ಮಿಂಚಿನ ವೇಗದಲ್ಲಿ ಸೈಂಧವನನ್ನು ಸಮೀಪಿಸಿದರು. ಆ ವೇಳೆಗೆ ಸೈಂಧವನು ದ್ರೌಪದಿ, ಧೌಮ್ಯರುಗಳೊಂದಿಗೆ ರಥವೇರಿದ್ದನು. ಭೀಮಾರ್ಜುನರು ಬಂದುದನ್ನು ನೋಡಿ ಭಯಪಟ್ಟು ತಾನು ದ್ರೌಪದಿಯೊಂದಿಗೆ ಓಡಿಹೋಗುವ

ದಾಗಿಯೂ ತನ್ನ ಸೈನ್ಯವು ಭೀಮಾರ್ಜುನರನ್ನು ಎದುರಿಸಬೇಕೆಂದೂ ತಿಳಿಸಿ ರಥವನ್ನು ಬಿರುಸಾಗಿ ಓಡಿಸಿದನು. ಭೀಮಾರ್ಜುನರಲ್ಲಿ ಯುದ್ಧಾವಶ್ಯಕವಾದ ಆಯುಧಗಳಿರಲಿಲ್ಲ. ಆದರೆ ಭೀಮನಿಗೆ ಅಂತಹವುಗಳ ಅವಶ್ಯಕತೆಯೂ ಇರಲಿಲ್ಲ. ಮರಗಳ ಕೊಂಬೆಗಳನ್ನೇ ಕಿತ್ತು ಸೈಂಧವನ ಚತುರಂಗ ಬಲವನ್ನು ಮನಸ್ವೀಯಾಗಿ ಕೊಂದನು. ಸೈನ್ಯವನ್ನು ಈ ರೀತಿ ಕಲಕಿ ದಾರಿ ಬಿಡಿಸಿಕೊಂಡು ವೇಗವಾಗಿ ಮುನ್ನಡೆದ ಭೀಮನು ಜಯದ್ರಥನನ್ನು ಸಮೀಪಿಸಿ ತಡೆದನು. ಜಯದ್ರಥನು ವಿಧಿಯಿಲ್ಲದೆ ಧನುರ್ಬಾಣಗಳನ್ನು ಹಿಡಿದು ಅರ್ಜುನನ ಬಾಣಗಳನ್ನು ಕತ್ತರಿಸಿ ಭೀಮನನ್ನೆದುರಿಸಿದನು. ಇನ್ನೊಬ್ಬನ ಹೆಂಡತಿಯನ್ನು ಕಳ್ಳತನದಿಂದ ಅಪಹರಿಸಿದ ಜಯದ್ರಥನನ್ನು ಕಂಡೊಡನೆ ಭೀಮನಿಗೆ ಶರೀರದಾದ್ಯಂತ ಸಿಟ್ಟಿನ ಮಿಂಚು ಹೊಗರೆದ್ದಿತು. ದೂರ ದೂರದಲ್ಲಿ ನಿಂತು ಗಂಟೆಗಟ್ಟಲೆ ಯುದ್ಧ ಮಾಡಿ ಶತ್ರುವಿನ ಶ್ವಾಸಕ್ರಿಯೆ ನಿಂತಮೇಲೆ ಅವನ ಬಳಿಸಾರುವ ಯುದ್ಧ ಕ್ರಮದ ವೀರತ್ವ ಭೀಮನದಾಗಿರಲಿಲ್ಲ. ದ್ರೌಪದಿ ಮತ್ತು ಧೌಮ್ಯರಿಗೆ ಅಭಯವನ್ನು ಕೊಡುತ್ತಾ ಅವನು ಮುನ್ನುಗ್ಗಿದನು. ಮುಂದೆ ಒಂದೇ ನೆಗೆತದಲ್ಲಿ ಅವನು ಸೈಂಧವನ ರಥದಲ್ಲಿದ್ದನು. ಯಮಸ್ವರೂಪಿಯಾಗಿ ತನ್ನ ಪಕ್ಕದಲ್ಲಿಯೇ ಪ್ರತ್ಯಕ್ಷಗೊಂಡ ಭೀಮ ಪರಾಕ್ರಮಿಯನ್ನು ಕಂಡ ಜಯದ್ರಥನು ಹೆದರಿ ಬಿಳುಪೇರಿದನು. ಆದರೂ ಕ್ಷತ್ರಿಯನಾದುದರಿಂದ ಒರೆಯಿಂದ ಕತ್ತಿಯನ್ನೆಳೆದು ಭೀಮನನ್ನು ಹೊಡೆದು ಕೊಲ್ಲಲು ಪ್ರಯತ್ನಿಸಿದನು. ಭೀಮನು ಆ ಕತ್ತಿಯನ್ನೇ ಕಿತ್ತುಕೊಂಡು ಸೈಂಧವನ ತುರುಬನ್ನು ಹಿಡಿದು ಅವನನ್ನು ಕುಸುಬಿ ಆ ಕತ್ತಿಯಿಂದಲೇ ಅವನ ಕುತ್ತಿಗೆಯನ್ನು ತುಂಡರಿಸಬೇಕೆನ್ನುವಷ್ಟರಲ್ಲಿ ಅರ್ಜುನನು ಅವನನ್ನು ತಡೆದು ಸೈಂಧವನನ್ನು ಕೊಲ್ಲುವದು ಉಚಿತವಲ್ಲವೆಂದೂ, ಅದರ ಬದಲು ಅವನನ್ನು ಹಿಡಿದುಕೊಂಡು ಹೋಗಿ ಯುಧಿಷ್ಠಿರನಿಗೆ ಒಪ್ಪಿಸಿದರೆ, ಯುಧಿಷ್ಠಿರನು ಅವನನ್ನು ಏನು ಮಾಡಬೇಕೆಂದು ತಿಳಿಸುವನೋ ಹಾಗೆ ಮಾಡುವದು ಒಳ್ಳೆಯದೆಂದೂ ತಿಳಿಸಿದನು. ಅದೇ ಪ್ರಕಾರ ಸೈಂಧವನ ತೋಳುಗಳೆರಡನ್ನೂ ಬಿಗಿದು ಅವನನ್ನು ಬಿಲ್ಲಿನ ತುದಿಯಿಂದ ತಿವಿಯುತ್ತಾ "ಹೆಂಗಳ್ಳಾ, ನಡೆ" ಎಂದು ಮೂದಲಿಸುತ್ತಾ ಯುಧಿಷ್ಠಿರನಲ್ಲಿಗೆ ಕರೆತರಲಾಯಿತು. ಧೌಮ್ಯನು ದ್ರೌಪದಿಯನ್ನು ರಥದಲ್ಲಿ ಕರೆದುಕೊಂಡು ಬಂದನು.

ಭೀಮನು ಯುಧಿಷ್ಠಿರನಲ್ಲಿ ನಡೆದ ವಿಷಯಗಳನ್ನೆಲ್ಲ ತಿಳಿಸಿ ತಾನು ಸೈಂಧವನನ್ನು ಕೊಲ್ಲುವದಾಗಿ ಪ್ರತಿಜ್ಞೆ ಮಾಡಿದ್ದೇನೆಂದು ಹೇಳಿದನು. ಆದರೆ ತಮಗೂ ತಂಗಿಯಾಗಬೇಕಾದ ದುಶ್ಶಳೆಯ ವೈಧವ್ಯಕ್ಕೆ ತಾವು ಕಾರಣರಾಗುವದು ತಪ್ಪೆಂದು ಯುಧಿಷ್ಠಿರನು ಅಭಿಪ್ರಾಯ ಪಟ್ಟನು. ಭೀಮನ ಪ್ರತಿಜ್ಞೆ ನೆರವೇರಿದರೆ ಸೈಂಧವನಾಗಲಿ, ಇಲ್ಲವಾದರೆ ಭೀಮನಾಗಲಿ ಈಗ ಸಾಯಬೇಕಿತ್ತು. ಆದರೆ ಅಲ್ಲಿದ್ದ

ಋಷಿಗಳು ಮಾನಧನನಿಗೆ ಅವಮಾನವು ಸಾವಿಗೆ ಸಮನಾದುದರಿಂದ ಅಭಿಮಾನಿಯಾದ ಸೈಂಧವನನ್ನು ಅವಮಾನಿಸಿದರೆ ಭೀಮನ ಪ್ರತಿಜ್ಞೆ ಪೂರೈಸಲ್ಪಟ್ಟಂತಾಗುವದೆಂದು ತಿಳಿಸಿದರು. ಇಷ್ಟರಿಂದಲೇ ತೃಪ್ತನಾದ ರಸಿಕ ಭೀಮನು ಒಂದು ಹರಿತವಾದ ಕತ್ತಿಯಿಂದ ಜಯದ್ರಥನ ತಲೆಯನ್ನು "ಇದು ಅಹಿತಕರವಾದ ತಲೆ" ಎನ್ನುತ್ತಾ ಸಂಪೂರ್ಣವಾಗಿ ಬೋಳಿಸಿ ಅವನ ಕಟ್ಟುಗಳನ್ನು ಬಿಡಿಸಿ "ನಾಯಿಯೇ, ಹೋಗಿ ಸುಖವಾಗಿರು" ಎಂದು ಮೂದಲಿಸಿ ಕಳುಹಿಸಿದನು.

ಸೈಂಧವನು ಕೂಡ ದುರ್ಯೋಧನನಂತೆಯೇ ಬಹಳ ಅವಮಾನಪಟ್ಟು ತನ್ನ ಪಟ್ಟಣವನ್ನು ಸೇರದೆ ರುದ್ರನನ್ನು ಕುರಿತು ತಪಸ್ಸುಮಾಡಿ ಅವನನು ಪ್ರತ್ಯಕ್ಷಗೊಳಿಸಿಕೊಂಡು ತಾನು ಐವರು ಪಾಂಡವರನ್ನೂ ಒಂದು ದಿನದ ಮಟ್ಟಿಗಾದರೂ ಗೆಲ್ಲುವಂತೆ ತನಗೆ ಅನುಗ್ರಹಿಸಬೇಕೆಂದು ಪ್ರಾರ್ಥಿಸಿಕೊಂಡನು. ಅರ್ಜುನನೊಬ್ಬನನ್ನುಳಿದು ಇತರ ನಾಲ್ವರನ್ನೂ ಒಂದು ದಿನದ ಮಟ್ಟಿಗೆ ಸೈಂಧವನ್ನು ಸೋಲಿಸಲು ಸಾಧ್ಯವಾಗುವಂತೆ ಈಶ್ವರನು ಅವನಿಗೆ ವರಪ್ರದಾನ ಮಾಡಿದನು.

ರಮೆ:– ಇದರ ಮೇಲೆ ನಿಮ್ಮ ಟೀಕೆ ಏನೂ ಇಲ್ಲವೊ ?

ಮುರಳಿ:– ಏನು ಟೀಕೆ ? ಯಾವದರ ಮೇಲೆ ?

ರಮೆ:– ಪಾಪ. ನಿಮ್ಮನ್ನು ನೆನಸಿಕೊಂಡರೆ ಒಮ್ಮೊಮ್ಮೆ ಅಯ್ಯೋ ಎನಿಸುತ್ತದೆ.

ಮುರಳಿ:– ಅಯ್ಯಯ್ಯೋ. ಇದೇನಿದು ? ದ್ರೌಪದಿಯನ್ನು ಬಯ್ಯಲು ಹೋಗಿ ತಲೆ ಬೋಳು ಮಾಡಿಸಿಕೊಂಡವನು ನಾನೆಂದು ತಿಳಿದೆಯೇನು ?

ರಮೆ:– ಇಲ್ಲ. ಅವನ ತಲೆ ಬೋಳಿಸಿದವನನ್ನು ಎತ್ತಲು ಹೋಗಿ ಕೈ ಮುರಿದುಕೊಂಡವರು ಎಂದು ತಿಳಿದಿದ್ದೇನೆ.

ಮುರಳಿ:– ಏನಮ್ಮ, ರವಿ ಕಾಣದುದನ್ನು ಕಂಡ ಕವೀ, ಕವಯಿತ್ರೀ, ಸ್ವಲ್ಪ ವಿವರಿಸಬಾರದೇ ಶಾರದೇ................!

ರಮೆ:– ಅಲ್ಲ ? ಪಾಪ, ಭೀಮನನ್ನು ಬಿಟ್ಟರೆ ಇನ್ನಿಲ್ಲ ಅಂತ ಅಷ್ಟಪುಷ್ಟುದ್ದ ಮಾತನಾಡುತ್ತಿದ್ದಿರಲ್ಲ, ಅದನ್ನು ನೆನಸಿಕೊಂಡು ಅಯ್ಯೋ ಎನಿಸಿತು ಅಷ್ಟೆ.

ಮುರಳಿ:– ಅಯ್ಯೋ ಎನಿಸಿತೆ ? ಪಾಪ. ಅಯ್ಯೋ, ಯಾಕೆ ಹಾಗೆ ಅನಿಸಿತಮ್ಮ ?

ರಮೆ:– ಈಶ್ವರ ಏನು ವರ ಕೊಟ್ಟನಪ್ಪ ?

ಮುರಳಿ:– ಏನು ಕೊಟ್ಟನಮ್ಮ ?

ರಮೆ:– ಏನು ಕೊಟ್ಟನಪ್ಪ ?

ಮುರಳಿ:– ಅರ್ಜುನನನ್ನು ಬಿಟ್ಟು ಇತರ ನಾಲ್ವರು ಪಾಂಡವರನ್ನು ಸೈಂಧವ ಒಂದು ದಿನದ ಮಟ್ಟಿಗೆ ಯುದ್ಧದಲ್ಲಿ ಗೆಲ್ಲುವಂತಾಗಲಿ ಅಂತ.

ರಮೆ:– ಆ ಇತರ ನಾಲ್ವರು ಎಂದರೆ ಯಾರ್ಯಾರಪ್ಪ ?

ಮುರಳಿ:– ಯುಧಿಷ್ಠಿರ, ಭೀಮ, ನಕುಲ, ಸಹದೇವ.

ರಮೆ:– ಅಲ್ಲಿಗೆ ಏನಾಯಿತಪ್ಪ ?

ಮುರಳಿ:– ನಾಲ್ಕಾಯಿತು.

ರಮೆ:– ನಾಲ್ಕಾಯಿತು, ಸರಿ. ಭೀಮ ಮತ್ತು ಅರ್ಜುನ – ಈ ಇಬ್ಬರಲ್ಲಿ ಯಾರು ಹೆಚ್ಚು ಪರಾಕ್ರಮಿ ಎಂದು ಹೇಳಿದಂತಾಯಿತಪ್ಪ ?

ಮುರಳಿ:– ಯಾರನ್ನೂ ಏನೂ ಹೇಳಿದಂತಾಗಲಿಲ್ಲ.

ರಮೆ:– ನಿಮಗೆ ಕೆಲವೊಮ್ಮೆ ಇದ್ದಕ್ಕಿದ್ದಂತೆ ತಲೆಯೊಳಗಿನದೆಲ್ಲ ಪೂರ್ತಿ ಖಾಲಿಯಾಗಿಬಿಟ್ಟಿರುತ್ತದೋ ಅಂತ.

ಮುರಳಿ:– ನನ್ನ ಅನುಭವಕ್ಕೆ ಅಂಥಾದ್ದೇನೂ ಬಂದಿಲ್ಲ. ಯಾಕೆ ಹೇಳು ?

ರಮೆ:– ಅಲ್ಲ, ಮತ್ತೆ ? ಸೈಂಧವ ಕೇಳಿಕೊಂಡ, ಐದು ಮಂದಿಯನ್ನು ತಾನು ಗೆಲ್ಲಬೇಕು ಅಂತ. ಈಶ್ವರ ಹೇಳಿದ ನಾಲ್ಕು ಮಂದಿಯನ್ನು ಗೆಲ್ಲಬಲ್ಲೆ ಅಂತ. ಹಾಗಾದರೆ ಏನು ಹೇಳಿದಂತಾಯಿತು?

ಮುರಳಿ:– ನೀನು ಅರ್ಜುನನನ್ನು ಗೆಲ್ಲಲಾರೆ ಎಂದು ಹೇಳಿದಂತಾಯಿತು.

ರಮೆ:– ಹಾಗೆ ದಾರಿಗೆ ಬನ್ನಿ. ಅದು ಯಾಕೆ ಈಶ್ವರ ಹಾಗೆ ಹೇಳಿದ ?

ಮುರಳಿ:– ತಾನು ಈ ಹಿಂದೆ ಅರ್ಜುನನಿಗೆ ಪಾಶುಪತಾಸ್ತ್ರ ಕೊಟ್ಟಿರುವದರಿಂದಲೂ, ಆ ಅಸ್ತ್ರವು ಅಜೇಯವಾಗಿರುವದರಿಂದಲೂ, ಈಗ ಅಂತಹ ಅಸ್ತ್ರವನ್ನು ಗೆಲ್ಲುವಂತೆ ಸೈಂಧವನಿಗೆ ವರ ಕೊಟ್ಟರೆ ತನ್ನ ಎರಡು ವರಗಳಲ್ಲಿ ಯಾವದಾದರೂ ಒಂದು ಸುಳ್ಳಾಗಬೇಕಾಗುವದರಿಂದಲೂ ಹಾಗೆ ಮಾಡದೆ ಈಶ್ವರ, ಸೈಂಧವನು ಅರ್ಜುನನನ್ನು – ಅರ್ಥಾತ್ ಅಜೇಯವಾದ ತನ್ನ ಪಾಶುಪತಾಸ್ತ್ರವನ್ನು ಗೆಲ್ಲುವಂತೆ ವರ ಕೊಡಲು ಸಾಧ್ಯವಾಗುವದಿಲ್ಲವೆಂದು ತಿಳಿಸಿದ.

ರಮೆ:– ಇಷ್ಟೇನಾ ? ನಾನು ಏನೋ ಅಂತ ತಿಳಿದುಕೊಂಡಿದ್ದೆ.

ಮುರಳಿ:– ಏನು ಅಂತ ?

ರಮೆ:– ಭೀಮನಿಗಿಂತ ಅರ್ಜುನ ಶೂರ ಅಂತ. ಭೀಮನಿಗಿಂತ ಈಶ್ವರನ ಪಾಶುಪತಾಸ್ತ್ರ ದೊಡ್ಡದು ಎಂಬದು ನನಗೆ ಗೋಚರವಾಗಲಿಲ್ಲ. ಹೋಗಲಿ. ಮುಂದಕ್ಕೆ ಹೇಳಿ.

ಮುರಳಿ:– ಪಾಪ. ಸೈಂಧವನಿಗೂ ಹೀಗೇ ಆಗಿಬಿಟ್ಟಿತು ನೋಡು. ಏನೋ ಮಾಡುವದಕ್ಕೆ ಹೋಗಿ ಏನೋ ಆಗಿಬಿಟ್ಟಿತು !

ರಮೆ:– ಇನ್ನು ಸುಮ್ಮನೆ ಅದನ್ನೇ ಚೇಷ್ಟೆ ಮಾಡುತ್ತಾ ಕೂರಬೇಡಿ. ಏನೋ ತಿಳಿದುಬಿಟ್ಟೆ. ಅಷ್ಟೆ. ದಯವಿಟ್ಟು ಕತೆ ಮುಂದುವರಿಸಿ.

ಮುರಳಿ:– ದಯೆ ಇಟ್ಟು ಅಂತ ಹೇಳಿದ್ದು ಹೌದು ತಾನೆ ?

ರಮೆ:– ಹೌದು.

ಮುರಳಿ:– ದಯೆ ಇಟ್ಟದ್ದೇನೆ. ಕೇಳು. ಪಾಂಡವರು ವನವಾಸದಲ್ಲಿ ಹನ್ನೊಂದೂವರೆ ವರ್ಷಗಳನ್ನು ಕಳೆದಿದ್ದರು. ಅಷ್ಟರಲ್ಲಿ ಮತ್ತೊಂದು ಗಂಡಾಂತರ ಸಂಭವಿಸಿತು. ಒಂದು ದಿನ ಆ ವನದ ಋಷಿಗಳ ಯಜ್ಞಸಾಧನವಾದ ಅರಣಿಯನ್ನು ಒಂದು ಸಾರಂಗ ಮೃಗವು ಹೊತ್ತುಕೊಂಡು ಓಡಿತು. ನೊಂದ ಋಷಿಗಳು ಯುಧಿಷ್ಠಿರನಲ್ಲಿ ಹೇಳಿಕೊಂಡರು. ಐದು ಜನ ಪಾಂಡವರೂ ಮೃಗವನ್ನು ಬೆನ್ನಟ್ಟಿ ಹೋದರು. ಆ ಮೃಗವೂ ಇವರನ್ನು ಬಹಳ ಬಳಲಿಸಿತು. ಎಲ್ಲರೂ ನೀರಡಿಕೆಯಿಂದ ತಪ್ತರಾಗಿದ್ದುದರಿಂದ ನೀರನ್ನು ಎಲ್ಲಿಂದಾದರೂ ತರುವಂತೆ ಯುಧಿಷ್ಠಿರನು ನಕುಲನನ್ನು ಕಳುಹಿಸಿದನು. ಹೀಗೆ ಹೊರಟ ನಕುಲನು ಸ್ವಲ್ಪ ದೂರದಲ್ಲಿ ಒಂದು ಕೊಳವನ್ನು ಕಂಡು ತಾನು ಮೊದಲು ನೀರು ಕುಡಿಯಲೆಂದು ನೀರನ್ನು ಬೊಗಸೆಯಲ್ಲಿ ಎತ್ತಿದನು. ಅಷ್ಟರಲ್ಲಿ ಅಶರೀರವಾಣಿಯೊಂದು "ನಕುಲಾ, ಮೊದಲು ನನ್ನ ಕೆಲವು ಪ್ರಶ್ನೆಗಳಿಗೆ ಉತ್ತರ ಕೊಟ್ಟು ಅನಂತರ ನೀರನ್ನು ಕುಡಿ" ಎನ್ನಲು ನಕುಲನು ನೀರಡಿಕೆಯಿಂದ ಆ ಮಾತನ್ನು ಅಲಕ್ಷಿಸಿ ನೀರು ಕುಡಿದು ಮೇಲೇರುತ್ತಾ ಮೈ ಮರೆತಂತಾಗಿ ಭೂಮಿಗೆ ಬಿದ್ದನು. ದಾಹದಿಂದ ಚಡಪಡಿಸುತ್ತಿದ್ದ ಯುಧಿಷ್ಠಿರನು ಅನಂತರ ಕ್ರಮವಾಗಿ ಸಹದೇವ, ಅರ್ಜುನರನ್ನು ಕಳಹಿಸಲು ಅವರೂ ಅದೇ ಕೊಳದ ಬಳಿಗೆ ಬಂದು ನಕುಲನಂತೆಯೇ ಅಶರೀರವಾಣಿಯನ್ನು ಕಡೆಗಣಿಸಿ ನೀರು ಕುಡಿದು ಭೂಮಿಯಲ್ಲಿ ಒರಗಿದರು. ಈಗ ಭೀಮನೇ ಬರಬೇಕಾಯಿತು.

ರಮೆ:– ಅವನು ಬಂದು ಅಶರೀರವಾಣಿಯನ್ನು ಕೊಂದು, ಯಮಲೋಕಕ್ಕೆ ಹೋಗಿ ಯಮನನ್ನು ಎಳೆದು ತಂದು ಅವನ ಮೂಲಕ ತನ್ನ ತಮ್ಮಂದಿರನ್ನು ಬದುಕಿಸಿಕೊಂಡು ಅವರ ಜೊತೆಯಲ್ಲಿ ಬಂದು ಅಣ್ಣನಿಗೆ ನೀರನ್ನೂ ಕೊಟ್ಟು, ನಡೆದುದನ್ನೂ ಎಲ್ಲ ಹೇಳಿ ನಮಸ್ಕರಿಸಿದನು. ಮುಂದಕ್ಕೆ ಹೇಳಿ.

ಮುರಳಿ:– ಹೌದು. ನಮಸ್ಕರಿಸಿದನು. ಅಲ್ಲಿಂದ ಮುಂದೆ ಪಾಂಡವರು ಸುಖವಾಗಿದ್ದರು.

ರಮೆ:– ಆಮೇಲೆ ?

ಮುರಳಿ:– ಆಮೇಲೂ ಸುಖವಾಗಿದ್ದರು.

ರಮೆ:– ಸುಖವಾಗಿದ್ದರು, ಸರಿ. ಆಮೇಲೇನಾಯಿತು ಹೇಳಿ?

ಮುರಳಿ:– ಆಮೇಲೂ ಏನೂ ಇಲ್ಲ. ಅವರು ಸುಖವಾಗಿದ್ದರು, ಅಷ್ಟೆ.

ರಮೆ:– ಅವರು ಕೌರವರನ್ನೆಲ್ಲ ಕೊಂದು ತಮ್ಮ ರಾಜ್ಯವನ್ನು ಹಿಂದಕ್ಕೆ ಪಡೆದುದು?

ಮುರಳಿ:– ಥತ್. ಅದೆಲ್ಲ ಕಟ್ಟು ಕತೆ. ನಿಜವಾದ ಭಾರತ ನೀನು ಹೇಳಿದಲ್ಲಿಗೇ ಮುಗಿಯಿತು.

ರಮೆ:– ತಪ್ಪಾಯಿತು, ತಪ್ಪಾಯಿತು, ಕ್ಷಮಿಸಬೇಕು. ಚೇಷ್ಟೆ ಮಾಡಿದೆ, ಅಷ್ಟೆ. ತಪ್ಪಾಯಿತು, ಮುಂದೆ ಹೇಳಿ. ಭೀಮನೇ ಸ್ವತಃ ಆ ಕೊಳದ ಬಳಿ ಬಂದನು.

ಮುರಳಿ:– ಇರಲಿ. ಪ್ರತೀಕಾರಕ್ಕೂ ಸಮಯವಿದೆ. ಈಗೇಕೆ! ಕೇಳು. ಭೀಮನು ಬಂದು ತನ್ನ ಸಹೋದರರ ಶ್ವಾಸವನ್ನು ಪರೀಕ್ಷಿಸಿ ಕಿಡಿಕಿಡಿಯಾದನು.

ರಮೆ:– ಹಾಗೆಲ್ಲ ಮಾಡದೆ ಹೋದರೆ ಅವರು ನಮಗಿಂತ ಹೆಚ್ಚುಗಾರಿಕೆ ಹೇಗೆ ಪಡೆಯುತ್ತಾರೆ, ಅಲ್ಲವೆ?

ಮುರಳಿ:– ಹೇಗೆಲ್ಲ ಮಾಡದೆ ಹೋದರೆ? ಯಾರು? ಏನು ಹೆಚ್ಚುಗಾರಿಕೆ? ಏನು ಹೇಳುತ್ತಿದ್ದಿ?

ರಮೆ:– ಅಲ್ಲ! ಸತ್ತಾಗ ಅಳುವದು ಲೋಕದ ರೂಢಿ. ಭೀಮನೂ ಹಾಗೆ ಅತ್ತುಬಿಟ್ಟರೆ ನಮಗಿಂತ ಅವನದು ಏನು ಹೆಚ್ಚುಗಾರಿಕೆ ಆಗುತ್ತದೆ? ಹೆಚ್ಚುಗಾರಿಕೆ ಇಲ್ಲದೆ ಹೋದರೆ ಅವನ ಕತೆ ಏಕೆ ಬರೆಯಬೇಕು, ಅಲ್ಲವೆ?

ಮುರಳಿ:– ಒಬ್ಬರು ಸತ್ತಾಗ ವ್ಯಸನವಾಗುವದು ದುರ್ಬಲರಿಗೆ. ವೀರನಿಗೆ ಸಿಟ್ಟು ಬರುತ್ತದೆ.

ರಮೆ:– ಸತ್ತಾಗ ಸಿಟ್ಟು ಬರುವದು ವೀರನಿಗಲ್ಲ. ಮೂರ್ಖನಿಗೆ.

ಮುರಳಿ:– ಸತ್ತಾಗ ಸಿಟ್ಟು ಬರುವದು ಮೂರ್ಖನಿಗಲ್ಲ. ವೀರತನಕ್ಕೂ ಮೂರ್ಖತನಕ್ಕೂ ವ್ಯತ್ಯಾಸ ಗೊತ್ತಾಗದಿರುವದು ಮೂರ್ಖರಿಗೆ.

ರಮೆ:– ಮೂರ್ಖರಲ್ಲದವರನ್ನು ಮೂರ್ಖರೆಂದು ಹೇಳುವವರಾದರೂ ಮೂರ್ಖರಲ್ಲದೆ ಬುದ್ಧಿವಂತರಲ್ಲ. ಇರಲಿ. ತಮ್ಮಂದಿರು ಸತ್ತು ಬಿದ್ದುದನ್ನು ನೋಡಿದಾಗ ಅವರಿಗಾಗಿ ಕಣ್ಣೀರು ಬರದೆ ತಾನೊಬ್ಬ ಮಹಾಶೂರನೆಂಬ ಒಣ ಹೆಮ್ಮೆಯಿಂದ ಕೇವಲ ಶೂನ್ಯದೊಂದಿಗೆ ಸಿಟ್ಟುಗೊಳ್ಳುವ ಭೀಮ ಬುದ್ಧಿವಂತ;

ಅವನ ಈ ವಿಚಿತ್ರ ವರ್ತನೆಯನ್ನು ಗುರುತಿಸಿ ನಿಮಗೆ ಹೇಳಿಕೊಟ್ಟ ನಾನು ಮೂರ್ಖಳು. ಅಲ್ಲವೆ?

ಮುರಳಿ:– ಭೀಮನು ಏನನ್ನು ಉದ್ದೇಶಿಸಿ ಸಿಟ್ಟುಗೊಂಡಿದ್ದಿರಬಹುದೋ ಅಲ್ಲಿ ಕೇವಲ ಶೂನ್ಯವನ್ನು ಮಾತ್ರ ಕಾಣುವ ನೀನು ನಿನ್ನ ದೃಷ್ಟಿಯಲ್ಲಿ "ನಾನೊಬ್ಬಳು ಬುದ್ಧಿವಂತಳು" ಎನಿಸಿಕೊಳ್ಳಬಲ್ಲೆಯಾದರೂ, ತರ್ಕಕ್ಕೆ ಸಿಲುಕುವ ಕಲ್ಪನಾಶಕ್ತಿ ಪಡೆದವರ ದೃಷ್ಟಿಯಲ್ಲಿ ನೀನು ಮೂರ್ಖಳೇ ಆಗಿರುತ್ತೀ.

ರಮೆ:– ನೀವೇನು ಮಾತನಾಡುತ್ತೀರಿ ಅಂತ? ಭೀಮನು ಅಲ್ಲಿ ಏನನ್ನು ಉದ್ದೇಶಿಸಿ ಸಿಟ್ಟುಗೊಂಡದ್ದು? ಮರವನ್ನೊ, ಕಲ್ಲನ್ನೊ, ಬೆಟ್ಟವನ್ನೊ ಏನನ್ನು?

ಮುರಳಿ:– ಸಾವಿಗೆ ಕಾರಣವಾದ ಶಕ್ತಿಯನ್ನು.

ರಮೆ:– ಓಹೋಹೊ, ಗೊತ್ತಾಯಿತು. ನಿಮ್ಮ ಯಮನನ್ನು ಅನ್ನಿ.

ಮುರಳಿ:– ನನ್ನ ಯಮ ಅಲ್ಲ. ನಮ್ಮೆಲ್ಲರ ಯಮ. ಸಾವಿಗೆ ಕಾರಣವಾದ ಸತ್ಯಶಕ್ತಿಗೆ ವಿಚಾರವಂತರು ಹಾಗೆಂದು ಹೆಸರಿಟ್ಟಿರುವ ಆ ಯಮ.

ರಮೆ:– ಸರಿ, ಸರಿ, ಗೊತ್ತಾಯಿತು. ನನಗೆ ಮರೆತೇಹೋಗಿತ್ತು. ನಿಮ್ಮ ಯಮ ಎಂದೆಲ್ಲ ಮರೆತು ಹೇಳಿಬಿಟ್ಟೆ. ಹೌದು. ಹೌದು. ಯಮ. ನಾನು ಕಂಡಿರುವದನ್ನು ಮರೆತೇ ಬಿಟ್ಟದ್ದೆ. ಅದೇ, ಆ ಕಪ್ಪು ಕೋಣನ ಮೇಲೆ ಕುಳಿತು, ಕಪ್ಪು ಮೈಯವನಾಗಿ ಕೈಯಲ್ಲಿ ನಮ್ಮ ಕುತ್ತಿಗೆಗೆ ಹಾಕಿ ಎಳೆಯಲು ಬೇಕಾಗುವ ಹಗ್ಗ ಹಿಡಿದುಕೊಂಡು ತಿರುಗಾಡುತ್ತಾ ಇರುತ್ತಾನಲ್ಲಾ, ಆ ಯಮನೇ ಅಲ್ಲವೆ! ಸರಿ, ಸರಿ. ಮರೆತುಬಿಟ್ಟದ್ದೆ. ಹೇಳಿ.

ಮುರಳಿ:– ಮತ್ತೇನು ಹಾಗಾದರೆ! ನೀನು ಕಂಡೇ ಇದ್ದೀಯಲ್ಲಾ, ಮತ್ತೇನು?

ರಮೆ:– ಸರಿ, ಸರಿ. ಗೊತ್ತಾಯಿತು. ಆ ಯಮನ ಕೋಣದ ಹೆಜ್ಜೆಯ ಗುರುತು ಹಿಡಿದು ಅವನ ಬೆನ್ನಟ್ಟಬೇಕೆಂಬದಕ್ಕಾಗಿ ಭೀಮನಿಗೆ ಸಿಟ್ಟು ಬಂತು. ಸರಿ. ಮುಂದಕ್ಕೆ ಹೇಳಿ.

ಮುರಳಿ:– ಸಿಟ್ಟು ಬಂತು. ಆದರೆ ಭೀಮನಿಗೂ ಬಾಯಾರಿಕೆ ವಿಪರೀತವಾಗಿ ಬಾಧಿಸುತ್ತಿದ್ದುದರಿಂದ ಅವನು........

ರಮೆ:– ........ನನಗೆ ಕೆಲವೊಮ್ಮೆ ನಿಮ್ಮನ್ನು ನೆನಸಿಕೊಂಡರೆ ಬೇಸರವಾಗುತ್ತದೆ.

ಮುರಳಿ:– ಯಾಕೆ?

ರಮೆ:– ದೇವರು ನಿಮಗೆ ಸಾಕಷ್ಟು ಬುದ್ಧಿಶಕ್ತಿ ಕೊಟ್ಟಿದ್ದರೂ ಈ ಕೆಲವು ಗೊಡ್ಡು ವಿಚಾರಗಳನ್ನು ನಂಬಿಕೊಂಡು ನಿಮ್ಮ ವ್ಯಕ್ತಿತ್ವ ಪ್ರಕಾಶಕ್ಕೆ ಬರುವದಕ್ಕೆ ಅಡ್ಡಿಯಾಗುತ್ತಿದೆಯಲ್ಲಾ ಅಂತ.

ಮುರಳಿ:– ಛೆ, ಪಾಪ. ಅದನ್ನೆಲ್ಲ ಚಿಂತಿಸಿ ದುಃಖ ತಂದುಕೊಳ್ಳಬೇಡ. ಆ ವಿಷಯ ಮರೆತುಬಿಡು. ಕತೆ ಮುಂದುವರಿಸೋಣ.

ರಮೆ:– ಕತೆ ಮುಂದುವರಿಸೋಣ. ಆದರೆ ನಾನು ಹೇಳಿದುದು ಸರಿ ಹೌದೋ ಅಲ್ಲವೋ ?

ಮುರಳಿ:– ಸರಿಯಲ್ಲವೆಂದು ನಿನಗೇ ಅನಿಸಿದರೆ ಅದನ್ನು ಹೇಳಿದೆ ಏಕೆ ?

ರಮೆ:– ನಾನು ಸರಿ ಎಂದೇ ತಿಳಿದಿದ್ದೇನೆ. ನಿಮ್ಮ ಅಭಿಪ್ರಾಯ ಏನು ಎಂದು ಕೇಳಿದೆ.

ಮುರಳಿ:– ಗೊಡ್ಡು ವಿಚಾರಗಳಿಂದ ವ್ಯಕ್ತಿತ್ವ ಪ್ರಕಾಶಿಸದ ನನ್ನಲ್ಲೇಕೆ ಕೇಳುತ್ತಿ ?

ರಮೆ:– ಥತ್. ಏನು ಮಾತನಾಡಿದರೂ ಕಷ್ಟ. ಮಾತನಾಡಬಾರದೆಂದರೂ ಮಾತನಾಡಿಹೋಗುತ್ತದೆ. ಏನೋ ಒಳ್ಳೆಯದೆಂದು ಮಾತನಾಡಲು ಹೋಗುವದು, ಸಿಕ್ಕಿಕೊಳ್ಳುವದು, ಒದ್ದಾಡುವದು. ಸಾಕಪ್ಪಾ ಸಾಕು. ದೇವರು ನನಗೇಕೆ ಇಂಥಾ ಬುದ್ಧಿ ಕೊಟ್ಟನೊ !........ನೋಡಿ, ನನ್ನದು ಸರ್ವಾಪರಾಧವಾಯಿತು. ಇನ್ನು ಮುಂದೆ ನಾನು ನಿಜವಾಗಿ ಏನೂ ಮಾತನಾಡುವದಿಲ್ಲ. ಈಗ ತಪ್ಪಾಯಿತು. ಕ್ಷಮಿಸಿಬಿಡಿ. ದಯವಿಟ್ಟು.

ಮುರಳಿ:– ಆ ಹಾ ಹಾ. ಅರಳದ ಮನಸ್ಸೆ !

ರಮೆ:– ಏನು ಅರಳದ ಮನಸ್ಸು ?

ಮುರಳಿ:– ನಿನ್ನದು.

ರಮೆ:– ಅಂದರೇನು ?

ಮುರಳಿ:– ಅಂದರೆ ಇದೇ. ಎಣ್ಣೆಯೊಂದಿಗೆ ನೀರು ಬೆರಕೆಯಾಗಿ ಹೊತ್ತುತ್ತಿರುವ ದೀಪದಂತೆ. ಹೊತ್ತುತ್ತದೆ, ಕರಿಕಾಗುತ್ತದೆ, ಸಿಡಿಯುತ್ತದೆ, ಆದರೂ ಹೊತ್ತುತ್ತದೆ – ಹೀಗೆ.

ರಮೆ:– ಹಾಗಿದ್ದರೆ ಯಮುನಿಗೆ ನಿಮ್ಮ ಶುದ್ಧ ಎಣ್ಣೆಯ ದೀಪ ಹೊತ್ತಿಸಿ ನೋಡೋಣ.

ಮುರಳಿ:– ನೋಡು ರಮಾ, ಈ ಸೃಷ್ಟಿ ಎಂತಹದು, ಇದು ಎಷ್ಟೆಷ್ಟು ಅದ್ಭುತವಾದುದು ಎಂಬದರ ಬಗೆಗೆಲ್ಲ ನಮಗಿರುವ ತಿಳಿವಳಿಕೆ ತೀರಾ ಅಲ್ಪ. ಒಬ್ಬ

ವ್ಯಕ್ತಿ ಹುಟ್ಟುತ್ತಾನೆ. ಅವನು ಬರೇ ಯಃಕಶ್ಚಿತ್ ಮನುಷ್ಯನಾಗಿಯೇ ಬೆಳೆದು ಕೇವಲ ತನ್ನ ಸಂಸಾರದಲ್ಲಿಯೇ ಆದರೂ ತನ್ನ ಯಾವ ಒಂದು ಹೆಸರನ್ನೂ ಸ್ಥಾಪಿಸಲಾರದೆ ಅಗಣ್ಯನಾಗಿ ಸಾಯುತ್ತಾನೆ. ಅದೇ ಇನ್ನೊಬ್ಬ ವ್ಯಕ್ತಿ ಇಡಿಯ ಪ್ರಪಂಚದಲ್ಲಿಯೇ ಹೆಸರುವಾಸಿಯಾಗುವಷ್ಟು ವ್ಯಕ್ತಿತ್ವವನ್ನು ಗಳಿಸಿಕೊಂಡು ಬದುಕುತ್ತಾನೆ. ದೈವ ಸೃಷ್ಟಿಯಲ್ಲಿ ಈ ಮಾನವ ಎನ್ನುವದು ಒಂದು ಬಹು ಅದ್ಭುತ ವಾದ ರಚನೆ. ಅವನ ಶಕ್ತಿ ಎಷ್ಟು ಸಣ್ಣ ಕ್ಷೇತ್ರಕ್ಕೆ ಸೀಮಿತಗೊಂಡಿದೆಯೋ ಅಷ್ಟೇ ಅಪರಿಮಿತ ವೈಶಾಲ್ಯವನ್ನೂ ಪಡೆದಿದೆ. ಒಬ್ಬಾತನ ವ್ಯಕ್ತಿತ್ವಕ್ಕೆ ಏನೂ ಬೆಲೆ ಇಲ್ಲದೆ ಇರಬಹುದು. ಅವನ ಮಾತಿಗೆ ಯಾರೂ ಪುರಸ್ಕಾರ ಕೊಡದೆಯೇ ಇರ ಬಹುದು. ಇನ್ನೊಬ್ಬಾತ ರಾಜಕಾರಣಿಯೋ ಮತಾಚಾರ್ಯನೋ ಆಗಿ ಲಕ್ಷಾಂತರ ಮಂದಿಯ ಮನಸ್ಸನ್ನು ತನ್ನ ಮಾತುಗಳಿಂದ ಸೆರೆ ಹಿಡಿದಿಟ್ಟುಕೊಳ್ಳಬಹುದು. ಒಬ್ಬ ವ್ಯಕ್ತಿ ಹೀಗೆ ಕೋಟಿ ಕೋಟಿ ಜನಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸ ಬಲ್ಲನಾದರೆ, ತನ್ನ ವ್ಯಕ್ತಿತ್ವವನ್ನು ಬೇರೊಂದು ಕ್ಷೇತ್ರದಲ್ಲಿ ಹೆಚ್ಚಿಸಿಕೊಂಡ ಆಂಜ ನೇಯನಂತಹವನು ಹಿಮಾಲಯ ಪರ್ವತವನ್ನೇ ತನ್ನ ಬಲಪ್ರಯೋಗದ ಅಧೀನತೆಗೆ ಒಳಪಡಿಸಿಕೊಳ್ಳಬಲ್ಲವನಾಗಿದ್ದನು ಎಂಬದನ್ನು ಅಲ್ಲಗಳೆಯಲು ಸಾಧ್ಯವಾಗುವದಿಲ್ಲ. ಇಂದು ವಿಜ್ಞಾನಿಯು ಚಂದ್ರಲೋಕಕ್ಕೆ ಹೋಗಿ ಬಂದಿದ್ದಾನೆಂಬದು ನಿಜವಾದರೆ ಒಂದು ಕಾಲದ ಜನರು ಆ ಲೋಕಕ್ಕೂ, ಅದರ ಆಚೆಗೂ ಇಷ್ಟೇ ಸರಾಗವಾಗಿ, ಅಥವಾ ಇದಕ್ಕಿಂತಲೂ ಹೆಚ್ಚು ಸುಲಭವಾಗಿ ಹೋಗಿ ಬಂದಿದ್ದಿರಲು ಸಾಕು ಎಂಬದನ್ನು ಅಲ್ಲಗಳೆಯಲು ಸಾಧ್ಯವಿಲ್ಲ.

ಒಂದು ಚಿಕ್ಕ ಮಗುವಿನ ಕೈಯಲ್ಲಿರುವ ವಸ್ತುವನ್ನು ನಾವು ಅದರ ಕೈಯಿಂದ ಕಿತ್ತುಕೊಂಡು ಮೇಲಕ್ಕೆ ಹಾರಿಸಿದಂತೆ ಮಾಡಿ "ಕಾಗೆ ಬಂದು ಹೊತ್ತು ಕೊಂಡು ಹೋಗಿಬಿಟ್ಟಿತು" ಎಂದು ಸುಳ್ಳು ಹೇಳಿ ಅದನ್ನು ಒಪ್ಪಿಸಬಹುದು. ಮಗುವಿನ ಅರಿವು ಸೀಮಿತವಾದುದಾಗಿರುವದರಿಂದ ಆ ವಸ್ತು ತನಗೆ ಕಾಣಿಸದ, ತನಗೆ ಸಿಕ್ಕಲಾರದ, ತಾನು ಪ್ರಯತ್ನಪಟ್ಟರೆ ಪಡೆಯಲು ನಿಷ್ಫಲವಾಗುವ ಯಾವದೋ ಸ್ಥಳಕ್ಕೆ ಹೋಗಿಬಿಟ್ಟದೆ ಎಂದು ನಂಬಿಕೊಂಡು ಬಂದಷ್ಟು ಹೊತ್ತು ಆ ವಸ್ತು ಕಳೆದುಹೋದುದಕ್ಕಾಗಿ ಅತ್ತು, ಪರಿಸ್ಥಿತಿಗೆ ಶರಣಾಗಿ ಕ್ರಮೇಣ ಅದು ಸುಮ್ಮನಾಗಿಬಿಡುತ್ತದೆ. ಆದರೆ ಅದೇ ಮಗುವಿಗೆ ಸ್ವಲ್ಪ ಪ್ರಾಯವಾಗಿದ್ದು ಹೆಚ್ಚಿನ ತಿಳಿವಳಿಕೆ ಇದ್ದರೆ ಅದು ನಮ್ಮ ಮಾತನ್ನು ಸುಮ್ಮನೆ ಒಪ್ಪಿಕೊಳ್ಳದೆ ಆ ವಸ್ತುವನ್ನು ಹುಡುಕಲು ಪ್ರಯತ್ನಿಸುತ್ತದೆ. ಇನ್ನೂ ಹೆಚ್ಚಿನ ತಿಳಿವಳಿಕೆ ಇರುವ ಮಗುವಾದರೆ ಹುಡುಕುವ ಪ್ರಯತ್ನಕ್ಕೂ ಹೋಗದೆ ಅದರ ಆ ವಸ್ತುವನ್ನು ನಾವೇ ಅಪಹರಿ ಸಿದ್ದೇವೆಂದು ಕಂಡುಕೊಂಡು ನಮ್ಮೊಡನೆ ವ್ಯವಹರಿಸುತ್ತದೆ.

ಇದೇ ರೀತಿ ಸಾವಿನ ಕುರಿತು ನಮ್ಮ ಜ್ಞಾನ ಸೀಮಿತವಾದುದಾಗಿದೆ. ಒಂದು ವ್ಯಕ್ತಿ ಸತ್ತ ಮೇಲೆ ಆ ವ್ಯಕ್ತಿಯ ಜೀವ ಎಲ್ಲಿಗೆ ಹೋಯಿತು ಎಂಬದನ್ನು ಕಾಣಲಾರದೆ ಅದು ನಮಗೆ ಸಿಕ್ಕಲಾರದೆಂದೂ, ಅದನ್ನು ಕಾಣಲು ಪ್ರಯತ್ನ ಪಟ್ಟರೂ ಆ ಪ್ರಯತ್ನವು ನಿಷ್ಫಲವಾಗುವಂತಹ ಯಾವದೋ ಸ್ಥಳಕ್ಕೆ ಅದು ಹೋಗಿಬಿಟ್ಟದೆಯೆಂದೂ ನಂಬಿಕೊಂಡು ಒಂದಷ್ಟು ದಿನ ಆ ಜೀವ ಹೋದುದಕ್ಕಾಗಿ ಅತ್ತು, ಪರಿಸ್ಥಿತಿಗೆ ಶರಣಾಗಿ ಕ್ರಮೇಣ ಸುಮ್ಮನಾಗಿಬಿಡುತ್ತೇವೆ.

ಆದರೆ ನಮಗಿಂತ ಹೆಚ್ಚು ಪರೋಕ್ಷ ಜ್ಞಾನ ಇರುವವರು ಜೀವವು ಹೀಗೆ ಇಲ್ಲಿಂದ ಎಲ್ಲಿಗೋ ಹೋಗಬೇಕಾದರೆ, ಎಲ್ಲಿಂದಲೋ ಇಲ್ಲಿಗೆ ಬರಬೇಕಾದರೆ ಅದು ಏನೋ ಒಂದು ನಿಯಮವನ್ನು ಅನುಸರಿಸಬಹುದೆಂದು ತರ್ಕಿಸಿ ಪ್ರಕೃತಿಯ ಆ ನಿಯಮವನ್ನು ಕಂಡುಹಿಡಿಯಲು ಪ್ರಯತ್ನಿಸಿ ಸಫಲರಾದರು. ಈ ನಿಯಮ ವನ್ನನುಸರಿಸಿ ಪ್ರತಿಯೊಂದು ಜೀವಿಯ ಪ್ರಾಣವನ್ನೂ ತಪ್ಪದೆ ಕೊಂಡೊಯ್ಯುವ ಪ್ರಕೃತಿಯ ಆ ನಿಶ್ಚಿತ ಅಂಶಕ್ಕೆ ಅವರು ಯಮ ಎಂದು ಹೆಸರಿಟ್ಟರು. ಪ್ರಕೃತಿಯ ಆ ಅಂಶಕ್ಕೆ, ಆ ಶಕ್ತಿಗೆ, ಇವರು ಇಟ್ಟ ಯಮ ಎಂಬ ಹೆಸರು ದೇಶ, ಕಾಲಗಳ ಮಿತಿಗೆ ಒಳಪಟ್ಟಿರಬಹುದೇ ಹೊರತು, ಆ ತತ್ವವು ಸಾರ್ವತ್ರಿಕವಾದುದು, ಸಾರ್ವಕಾಲಿಕವಾದುದು ಎಂಬದು ಸುಳ್ಳಲ್ಲ.

ಇನ್ನು ಮನುಷ್ಯನ ಮನಶ್ಶಕ್ತಿ ಕೂಡ ಅತ್ಯಂತ ಅದ್ಭುತವಾದುದು ಎಂಬ ದನ್ನು ಹಿಂದೆ ನೋಡಿದ್ದೇವೆ. ವ್ಯಕ್ತಿತ್ವವನ್ನು ಹೆಚ್ಚಿಸಿಕೊಂಡ ಒಬ್ಬಾತ ಕೋಟಿ ಮಾನವರ ಮೇಲೆ ಪ್ರಭುತ್ವ ಸ್ಥಾಪಿಸಬಲ್ಲ, ಹಿಮಾಲಯವನ್ನು ತನ್ನ ಅಧೀನಕ್ಕೆ ಒಳಪಡಿಸಬಲ್ಲ ಎಂಬದರಷ್ಟೇ ಸತ್ಯವಾಗಿ ಬೇರೊಂದು ಅಂಶವೂ ಅಡಗಿದೆ. ನಿಷ್ಕ್ರಿಯರಾಗಿ, ನಿರುಪಯುಕ್ತರಾಗಿ ಇರುವ ಕೋಟಿ ಮಾನವರನ್ನು ಒಬ್ಬ ರಾಜಕಾರಣಿ, ಒಬ್ಬ ಮತಾಚಾರ್ಯ ಸಕ್ರಿಯರನ್ನಾಗಿ, ಚೈತನ್ಯದ ಮೂರ್ತಿಗಳ ನ್ನಾಗಿ ಮಾರ್ಪಡಿಸಿ ಅವರ ಸಂಘಟಿತ ಶಕ್ತಿಯಿಂದ ಚೈತನ್ಯದ ಒಂದು ಮಹಾಗಂಗೆ ಯನ್ನೇ ಸೃಷ್ಟಿಸಬಲ್ಲ. ಅಲ್ಲದೆ ಕೋಟಿ ಮನಸ್ಸುಗಳ ನಿರಂತರ ಹಾರೈಕೆ ಒಬ್ಬ ಶ್ರೀರಾಮನನ್ನು, ಒಬ್ಬ ಶ್ರೀಕೃಷ್ಣನನ್ನು ಸೃಷ್ಟಿಸುತ್ತದೆ ಎಂಬದು ಕೂಡ ಅಷ್ಟೇ ನಿಜ. ಯಾರಿಗೂ ಬೇಡವಾಗಿದ್ದರೂ ಕೂಡ ಭಗವಂತ ಅವತಾರ ಎತ್ತಿಬಿಡುವ ದಿಲ್ಲ. ಕೋಟಿ ಜನಕ್ಕೆ ಬೇಕೆನಿಸಿದಾಗಲೇ ಅವನು ಭೂಮಿಗಿಳಿದು ಬರುವದು. ಅರ್ಥಾತ್ ಕೋಟಿ ಜನತೆಯ ಮನೋಭಿಲಾಷೆ ಅವನನ್ನು ಹಾಗೆ ಇಳಿಸುತ್ತದೆ. ಕಲ್ಲಿನ ವಿಗ್ರಹವನ್ನೇ ಏಕಾಗ್ರತೆಯಿಂದ ದೇವರೆಂದು ಪೂಜಿಸಿದರೆ ಆ ಕಲ್ಲಿನಲ್ಲಿಯೇ ದೇವತ್ವ ಆವಿರ್ಭವಿಸುತ್ತದೆ ಎಂಬದಕ್ಕೆ ನಮ್ಮ ಕಾಲದಲ್ಲಿಯೇ ಇದ್ದ ಶ್ರೀ ರಾಮಕೃಷ್ಣ ಪರಮಹಂಸರ ವರೆಗೂ ಸಾವಿರ ನಿದರ್ಶನಗಳಿವೆ. ಅದು ಆ ಕಲ್ಲಿನ ಶಕ್ತಿ ಎನ್ನುವದಕ್ಕಿಂತ, ಭಕ್ತನ ಮನಶ್ಶಕ್ತಿ ಎಂಬದೇ ಹೆಚ್ಚು ಸರಿ.

ಹೀಗಿರುವಾಗ, ಸಾವಿರ, ಸಾವಿರ ಜನ, ಸಾವಿರ, ಸಾವಿರ ವರ್ಷಗಳ ಕಾಲ, ಜೀವಗಳನ್ನು ಒಯ್ಯುವ ಪ್ರಕೃತಿಯ ಶಕ್ತಿಗೆ ಯಮ ಎಂದು ಹೆಸರಿಟ್ಟು ನಂಬಿಕೊಂಡು ಬಂದಾಗ ಯಮನ ಆವಿರ್ಭಾವವಾಗುವದು, ಬಿತ್ತಿದ ಬೀಜ ಮೊಳೆಯುವಷ್ಟೇ ಸತ್ಯ. ನಾವು ಕಾಣುತ್ತಿರುವ ಪ್ರಕೃತಿ ನಿಯಮಕ್ಕೆ ಇದು ವಿರೋಧವೆನಿಸಿ ನಮಗೆ ಕಂಡುಬಂದರೂ, ಪ್ರಕೃತಿಯ ಸಹಜವಾದ ನಿಯಮಕ್ಕೆ ಇದು ಅನುಗುಣವೇ ಆಗಿರುತ್ತದೆ. ಪ್ರಕೃತಿಯ ಸಹಜ ನಿಯಮಗಳೆಲ್ಲವನ್ನೂ ನಾವು ಬರಿಗಣ್ಣಿನಿಂದ ಹಾಗೂ ಸಾಮಾನ್ಯ ಬುದ್ಧಿಯಿಂದ ಕಾಣಲಾಗದು ಎಂಬ ಪ್ರಕೃತಿಯ ನಿಯಮದಷ್ಟೇ ಇದು ಕೂಡ ಸಹಜವಾಗುತ್ತದೆ. ಯಮ ಎಂಬದು ಒಂದು ವ್ಯಕ್ತಿಯ ಹೆಸರು ಎಂದೇನೂ ವಾದಿಸಬೇಕಾಗಿಲ್ಲ. ಅದು ಒಂದು ತತ್ತ್ವದ ಹೆಸರು, ಶಕ್ತಿಯ ಹೆಸರು.

ಹೀಗೆ ಯಮನ ಇರವು ಸಾಧ್ಯವಾಗುವದಿದ್ದರೆ ಅಂತಹ ಯಮನನ್ನು ಜಯಿಸುವ ಪ್ರಯತ್ನ ಕೂಡ ಸಾಧ್ಯವಾದುದಾಗುತ್ತದೆ, ಅವನೊಂದಿಗೆ ಹೋರಾಟ ಕೂಡ ಸಾಧ್ಯವಾದುದಾಗುತ್ತದೆ. ಹೋರಾಟದ ವಿಧಗಳು ಹಲವು ಇರಬಹುದಾದರೂ ಭೀಮನು ತನಗೆ ಕಂಡ ಯಾವದೋ ಒಂದು ವಿಧದಿಂದ ಯಮನಲ್ಲಿ ಹೋರಾಡಬೇಕೆಂಬದಕ್ಕಾಗಿ ಸಿಟ್ಟುಗೊಂಡ ಎಂಬದು ಅವನ ಮೂರ್ಖತನವನ್ನು ತೋರಿಸಬೇಕಾಗಿಲ್ಲ, ಅವನ ಶೂರತನವನ್ನೇ ತೋರಿಸಬಲ್ಲದು.

ರಮೆ:– ಓ, ದೇವರೇ. ಇದಕ್ಕಾಗಿ ಇಷ್ಟೆಲ್ಲ ಉಪನ್ಯಾಸ ಬಿಗಿದದ್ದೇನು ನೀವು ? ಆಗಲೇ ಹೇಳಿದ್ದರೆ ಭೀಮ ಮೂರ್ಖ ಎಂಬ ನನ್ನ ಮಾತನ್ನು ಹಿಂತೆಗೆದುಕೊಂಡು ಅವನು ಶೂರ, ವೀರ, ಧೀರ ಎಂದೆಲ್ಲ ಹಾಡಿಬಿಡುತ್ತಿದ್ದೆನಲ್ಲ ! ಛೆ, ಛೆ, ಛೆ. ಭೀಮ ಮೂರ್ಖನಲ್ಲ, ನಾನೇ ಮೂರ್ಖಳು. ಸುಲಭವಾಗಿ ತಪ್ಪಿಸಿಕೊಳ್ಳಬಹುದಾಗಿದ್ದ ಈ ಯಮ ಭಯಂಕರ ಉಪನ್ಯಾಸವನ್ನು ಅನವಶ್ಯವಾಗಿ ತಲೆಯ ಮೇಲೆ ಹಾಕಿಕೊಂಡುಬಿಟ್ಟ ನಾನು ಮೂರ್ಖಳಲ್ಲದೆ ಬುದ್ಧಿವಂತಳು ಖಂಡಿತ ಅಲ್ಲ.

ಮುರಳಿ:– ಇನ್ನೊಬ್ಬರಿಗೆ ಚೆನ್ನಾಗಿ ಗೊತ್ತಿರುವ ವಿಷಯವನ್ನು ಎಷ್ಟು ಬಾರಿ ಪುನಃ ಪುನಃ ಹೇಳುತ್ತೀ ರಮಾ !

ರಮೆ:– ಏನು, ಇನ್ನೊಬ್ಬರಿಗೆ ಗೊತ್ತಿರುವದು ?

ಮುರಳಿ:– ಅಲ್ಲ, ನೀನು ಮೂರ್ಖಳು ಎಂಬದನ್ನು ನನ್ನಲ್ಲಿ ನೀನು ಅಷ್ಟು ಬಾರಿ ಹೇಳಿ ಯಾಕೆ ಗಂಟಲೊಣಗಿಸಿಕೊಳ್ಳುತ್ತಿ ಎಂದೆ !

ರಮೆ:– ಚಿಂತೆ ಇಲ್ಲ, ನೀವೂ !

ಮುರಳಿ:– ಇಲ್ಲ, ಇಲ್ಲ, ತಪ್ಪಾಯಿತು. ನೀನು ಮೂರ್ಖಳು ಎಂದರೆ ಏನರ್ಥ ?

ರಮೆ:— ಏನರ್ಥ ?

ಮುರಳಿ:— ಏನರ್ಥ? ನೀನು ಮೂರ್ಖಳು ಎಂದರೆ ಬುದ್ಧಿವಂತಳು ಎಂದರ್ಥ.

ರಮೆ:— ಇರಲಿ, ಇರಲಿ. ಸಮಯ ಬಂದಾಗ ತೋರಿಸುತ್ತೇನೆ, ನೋಡಿ, ನಾನು ಬುದ್ಧಿವಂತಳೋ, ಮೂರ್ಖಳೋ ಎಂದು. ಈಗಂತೂ ನಿಮ್ಮ ಯಮ ಹರಟೆ ಕೇಳೀ ಕೇಳೀ ತಲೆ ಚಿಟ್ಟುಹಿಡಿದುಹೋಗಿದೆ. ಕತೆ ಮುಂದುವರಿಸಿ, ಹೇಳುತ್ತೇನೆ.

ಮುರಳಿ:— ಮಹದಾಜ್ಞೆ. ಲಾಲಿಸಬೇಕು. ಭೀಮನಿಗೆ ಒಮ್ಮೆಗೇ ಸಿಟ್ಟು ಬಂದರೂ ಅವನಿಗೆ ತುಂಬ ಬಾಯಾರಿಕೆ ಆಗಿದ್ದುದರಿಂದ ಮೊದಲು ನೀರು ಕುಡಿಯಲೆಂದು ಬೊಗಸೆಯಲ್ಲಿ ನೀರನ್ನೆತ್ತಿದನು. ಅವನಿಗೂ ಹಿಂದಿನಂತೆ ಅಶರೀರ ವಾಣಿ ಕೇಳಿಸಿತು. ಆದರೆ ವಿಧಿಯ ಇಂದ್ರಜಾಲಕ್ಕೆ ಕಟ್ಟುಬಿದ್ದಿದ್ದ ಭೀಮನು ತಾನೂ ಆ ವಾಣಿಯನ್ನು ಉಪೇಕ್ಷಿಸಿ ನೀರನ್ನು ಕುಡಿದು ತನ್ನ ತಮ್ಮಂದಿರ ಗತಿಯನ್ನೇ ಪಡೆದನು.

ರಮೆ:— ಅಂದರೆ ಅವನೂ ಸತ್ತು ಬಿದ್ದನು ?

ಮುರಳಿ:— ಹೌದು. ಹೋದವರು ಯಾರೂ ಹಿಂದಿರುಗದೆಯೇ ಇದ್ದುದರಿಂದ ತೀವ್ರ ಗಾಬರಿಗೊಂಡ ಯುಧಿಷ್ಠಿರನು ಕೊನೆಗೆ ತಾನೇ ಹೊರಟು ಬಂದನು. ತನ್ನ ನಾಲ್ವರು ತಮ್ಮಂದಿರೂ ಒಂದೆಡೆಯಲ್ಲಿಯೇ ಬಿದ್ದಿರುವದನ್ನು ನೋಡಿ ಅವನಿಗೆ ಸಿಡಿಲು ಬಡಿದಂತಾಯಿತು. ಅಸಾಧ್ಯವಾದ ತೃಷೆಯಿಂದ ಅವನೂ ಬಳಲಿದ್ದನಾದುದರಿಂದ ನೀರು ಕುಡಿಯಲು ಅವನೂ ಪ್ರಯತ್ನಿಸಿದನು. ಅವನಿಗೂ ಅಶರೀರವಾಣಿ ಕೇಳಿಸಿತು. ಯುಧಿಷ್ಠಿರನು ಆ ವಾಣಿಯನ್ನು ಉಪೇಕ್ಷಿಸದೆ ಅದಕ್ಕೆ ಉತ್ತರ ಕೊಟ್ಟನು. ಅದು ಕೇಳಿದ ಪ್ರಶ್ನೆಗಳಿಗೆಲ್ಲ ಅವನು ಸಮರ್ಪಕವಾದ ಉತ್ತರವನ್ನು ಕೊಟ್ಟುದರಿಂದ ಅದು ಸಂತೃಪ್ತಿಹೊಂದಿ ಯುಧಿಷ್ಠಿರನು ತನ್ನ ನಾಲ್ವರು ತಮ್ಮಂದಿರಲ್ಲಿ ಯಾರಾದರೊಬ್ಬನ ಪ್ರಾಣ ಹಿಂದಿರುಗುವಂತೆ ಬೇಡಬಹುದೆಂದು ತಿಳಿಸಿತು. ಕುಂತಿಯ ಮಕ್ಕಳ ಪೈಕಿ ನಾನು ಉಳಿದಿರುವದರಿಂದ ಮಾದ್ರಿಯ ಮಗನಾದ ಸಹದೇವನು ಬದುಕುವಂತೆ ಅನುಗ್ರಹಿಸಬೇಕೆಂದು ಅವನು ಬೇಡಿಕೊಂಡನು. ಗುಪ್ತವೇಷದಿಂದಿದ್ದು ಇಷ್ಟೆಲ್ಲವನ್ನೂ ಮಾಡಿದ ಯಮನು ಯುಧಿಷ್ಠಿರನ ಧರ್ಮಬುದ್ಧಿಗೆ ಮೆಚ್ಚಿ ಅವನ ನಾಲ್ವರು ತಮ್ಮಂದಿರನ್ನೂ ಬದುಕಿಸಿ ಅವರಿಗೆ ಅಭ್ಯುದಯವನ್ನು ಕೋರಿ ಹೊರಟುಹೋದನು.

ಇಲ್ಲಿಗೆ ಪಾಂಡವರು ತಮ್ಮ ಹನ್ನೆರಡು ವರ್ಷಗಳ ವನವಾಸವನ್ನು ಪೂರೈಸಿದಂತಾಯಿತು.

ರಮೆ:— ವನವಾಸದ ಕೊನೆಯಲ್ಲಿ ಸತ್ತು ಬದುಕಿದರು.

ಮುರಳಿ:— ಹೌದು. ಮಹಾಭಾರತ ಕತೆಯು ನೈಜತೆಗೆ ಇದೊಂದು ಸಾಕ್ಷಿ. ನಮ್ಮ ನಮ್ಮದೇ ಜೀವನವನ್ನು ನಾವು ಸೂಕ್ಷ್ಮವಾಗಿ ಗಮನಿಸಿದರೆ ಒಂದು ಅಂಶ ನಮಗೆ ತಿಳಿಯುತ್ತದೆ. ಪ್ರತಿಯೊಬ್ಬ ಮನುಷ್ಯನ ಜೀವನದಲ್ಲಿಯೂ ಕೆಲವು ಸ್ಪಷ್ಟವಾದ ಅವಧಿಗಳಿರುತ್ತವೆ. ಒಂದು ಅವಧಿ ಕಷ್ಟ – ಸುಖಗಳ ಸಮಪಾಲು ಮಿಶ್ರಣವಾಗಿದ್ದು ಸಾಮಾನ್ಯ ಜೀವನ ಎನಿಸುತ್ತದೆ. ಇನ್ನೊಂದು ಅವಧಿ ಕಷ್ಟಾಧಿಕ್ಯವನ್ನೇ ಪಡೆದಿರುತ್ತದೆ. ಮತ್ತೊಂದು ಸುಖಾಧಿಕ್ಯವನ್ನು ಪಡೆದಿರುತ್ತದೆ. ಜೀವನದಲ್ಲಿ ಸಾರ್ಥಕ್ಯವನ್ನು ಕಾಣುವವರ ಜೀವನದಲ್ಲಿ ಕಷ್ಟಾಧಿಕ್ಯದ ಅವಧಿಯು ಮೊದಲಿಗೆ ಕಾಣಿಸಿಕೊಂಡು ಅದು ಸುಖಾಧಿಕ್ಯದ ಅವಧಿಗೆ ದಾರಿ ಮಾಡಿಕೊಡುತ್ತದೆ. ದುರದೃಷ್ಟಶಾಲಿಗಳೆನಿಸಿಕೊಳ್ಳುವವರ ಜೀವನದಲ್ಲಿ ಇದು ಹಿಂದು ಮುಂದಾಗಿ ಅವರು ಸುಖಾಧಿಕ್ಯದ ಅವಧಿಯನ್ನು ಮೊದಲು ಪಡೆದು ಅನಂತರ ಕಷ್ಟಾಧಿಕ್ಯದ ಅವಧಿಗೆ ಕಾಲಿಡುತ್ತಾರೆ.

ಒಂದು ಅವಧಿಯಿಂದ ಅದಕ್ಕೆ ಸರಿವಿರುದ್ಧ ಗುಣವುಳ್ಳ ಇನ್ನೊಂದು ಅವಧಿಗೆ ಪರಿವರ್ತನೆಯಾಗುವ ಸಂಧಿಕಾಲವು ಬಹಳ ಸೋಜಿಗವಾದುದೂ, ಯಾವದೋ ಒಂದು ಸ್ಪಷ್ಟ ನಿಯಮವನ್ನು ಅನುಸರಿಸುವಂತಹದೂ ಆಗಿರುತ್ತದೆ. ಸುಖದ ದಿನಗಳಿಂದ ಕಷ್ಟದ ದಿನಗಳಿಗೆ ದಾಟುವಾಗ ಸುಖದ ಪರಮಾಧಿಕ್ಯವನ್ನು ತಲಪಿ ಆಗಿದ್ದು ಆ ಸುಖವು ಮಂಜಿನಂತೆ ಕರಗುತ್ತಾ ಹೋಗುವದನ್ನು ನಾವು ನೋಡಬಹುದು. ನಮಗೆ ಸ್ಪಷ್ಟವಾದ ಸುಳಿವೇ ಸಿಕ್ಕದಂತೆ ಸುಖವು ಕರಗುತ್ತಾ ಬಂದೂ ಬಂದೂ ಕಷ್ಟ ಪರಂಪರೆಗೆ ಎಡೆಮಾಡಿಕೊಟ್ಟಿರುತ್ತದೆ.

ಕಷ್ಟದಿಂದ ಸುಖಕ್ಕೆ ಪರಿವರ್ತನೆಯಾಗುವ ಲಕ್ಷಣ ಹೀಗಿರುವದಿಲ್ಲ. ಕಷ್ಟಗಳು ಸಣ್ಣ ಪುಟ್ಟವಾಗಿ ಬರುತ್ತಾ ಬರುತ್ತಾ, ಅದರ ಪರಾಕಾಷ್ಠತೆಗೆ ತಲಪಿ, ಇನ್ನೇನು ಸರ್ವನಾಶವಾಯಿತು ಎನಿಸುವಾಗ ಕಷ್ಟಗಳು ಒಮ್ಮೆಗೇ ಮಾಯವಾಗಿ ಸುಖದ ಆವಿರ್ಭಾವವಾಗಿರುತ್ತದೆ.

ಇದರ ಸ್ಪಷ್ಟ ಮತ್ತು ಉತ್ತಮ ಉದಾಹರಣೆಯನ್ನು ಪ್ರಪಂಚದ ಚರಿತ್ರೆಯಲ್ಲೆಲ್ಲ ನಾವು ನೋಡಬಹುದು. ಈ ತತ್ವಕ್ಕೆ ಯಾವ ನಾಯಕನ ಜೀವನವು ಹೆಚ್ಚು ಸ್ಪಷ್ಟವಾಗಿ ಒಳಪಟ್ಟಿದೆಯೋ ಅವನು ಅಷ್ಟು ಹೆಚ್ಚು ಖ್ಯಾತಿವಂತನಾಗಿರುತ್ತಾನೆ. ಇದು ಸ್ಪಷ್ಟವಾಗಿ ಕಾಣಿಸದ ಜೀವನವು ಸಾಮಾನ್ಯವಾದುದೆನಿಸುತ್ತದೆ.

ಪಾಂಡವರ ಜೀವನದಲ್ಲಿಯೂ ಪ್ರಕೃತಿಯ ಈ ಗುಣವನ್ನು ಸ್ಪಷ್ಟವಾಗಿ ಕಾಣುತ್ತೇವೆ. ರಾಜ್ಯವನ್ನು ಕಳೆದುಕೊಂಡು ಕಾಡುಪಾಲಾದ ಅವರು ಕಷ್ಟದ ಜೀವನಕ್ಕೆ ಕಾಲಿಕ್ಕಿ ಈ ಹನ್ನೆರಡು ವರ್ಷಗಳ ಕಾಲವೂ ಒಂದರ ಮೇಲೆ ಒಂದರಂತೆ

ಕಷ್ಟಗಳನ್ನು ಅನುಭವಿಸಿದರು. ಈ ಕಷ್ಟದ ದಿನಗಳ ಬಿಡುಗಡೆಯೂ ಗೌಣವಾಗಿ ಆಗಿಬಿಡಲಿಲ್ಲ. ಯುಧಿಷ್ಠಿರನು ತನ್ನ ನಾಲ್ವರು ತಮ್ಮಂದಿರನ್ನೂ ಕಳೆದುಕೊಂಡ ದುಃಖದ ಪರಾಕಾಷ್ಠತೆಗೇರಿ ಸರ್ವನಾಶವಾಯಿತು ಎನ್ನುವ ಸ್ಥಿತಿಗೆ ತಲಪಿದ ಮೇಲೆಯೇ ಅವರು ಸುಖದ ದಿನಗಳಿಗೆ ಕಾಲಿಟ್ಟುದು.

ರಮೆ:– ಏನು ಸುಖದ ದಿನ ? ಮಾರನೆಯ ದಿನದಿಂದ ಅವರಿಗೆ ತಮ್ಮ ರಾಜ್ಯ ಸಿಕ್ಕಿಬಿಡಲಿಲ್ಲ ತಾನೆ ?

ಮುರಳಿ:– ಇಲ್ಲ. ಮುಂದಕ್ಕೆ ರಾಜ್ಯ ಸಿಕ್ಕುವಂತಹ ಪರಿಸ್ಥಿತಿಗೆ ಒಯ್ಯುವ ವಾತಾವರಣಕ್ಕೆ ಅವರು ಪ್ರವೇಶಿಸಿದಂತಾಯಿತು. ಅದೇ ಸುಖದ ಬೀಜ, ಶುಭದ ನಾಂದಿ. ಕೇಳು. ಮುಂದಿನ ಒಂದು ವರ್ಷದ ತಮ್ಮ ಅಜ್ಞಾತ ವಾಸವನ್ನು ಎಲ್ಲಿ ಕಳೆಯಬೇಕೆಂದು ಅವರು ಬಹಳ ಯೋಚಿಸಿ, ವಿರಾಟನೆಂಬವನು ಆಳುತ್ತಿದ್ದ ಮತ್ಸ್ಯದೇಶವು, ವಿರಾಟನ ಭಾವನಾದ ಕೀಚಕನೆಂಬ ಮಹಾ ಪ್ರಬಲನಿಂದಾಗಿ ಕೌರವರಿಂದ ಸುರಕ್ಷಿತವಾಗಿದೆಯೆಂದು ತರ್ಕಿಸಿ ಅಲ್ಲಿಯೇ ಒಂದು ವರ್ಷವನ್ನು ಕಳೆಯುವದು ಸೂಕ್ತವೆಂದು ತೀರ್ಮಾನಿಸಿಕೊಂಡರು. ಯುಧಿಷ್ಠಿರನು ವಿರಾಟನ ಬಳಿ ಕಂಕಭಟ್ಟನೆಂಬ ಹೆಸರು ತಳೆದು ಯತಿ ವೇಷದಲ್ಲಿರುವಂತೆಯೂ, ಭೀಮನು ವಲಲ ಎಂಬ ಹೆಸರನ್ನಿಟ್ಟುಕೊಂಡು ಅಲ್ಲಿ ಅಡುಗೆಯವನಾಗಿರುವಂತೆಯೂ, ಅರ್ಜುನನು ಶಿಖಂಡಿಯ ರೂಪು ಹೊತ್ತು ಬೃಹನ್ನಳೆ ಎಂಬ ಹೆಸರಿನಿಂದ ನಾಟ್ಯ ಗಾರನಾಗಿರುವಂತೆಯೂ, ನಕುಲ ಮತ್ತು ಸಹದೇವ–ಇವರು ದನ ಮತ್ತು ಕುದುರೆ ಗಳನ್ನು ಕಾಯುತ್ತಿರುವಂತೆಯೂ, ದ್ರೌಪದಿಯು ಸೈರಂಧ್ರಿ ಎಂಬ ಹೆಸರು ಹೊತ್ತು ವಿರಾಟನ ರಾಣಿಯ ಪರಿಚಾರಿಕೆಯಾಗಿರುವಂತೆಯೂ ಮಾತನಾಡಿಕೊಂಡರು. ಈ ಸಂದರ್ಭದಲ್ಲಿ ಇತರರಿಗಿಂತೆಲ್ಲ ಅಸಹಾಯ ಶೂರನೂ ಅದ್ವಿತೀಯ ಗುಣಾಢ್ಯನೂ ಆದ ಭೀಮನನ್ನು ನೆನದು ಯುಧಿಷ್ಠಿರನಿಗೆ ದುಃಖ ಉಕ್ಕಿ ಬಂದಿತು. ಜರಾಸಂಧ ನಂತಹ ಚಕ್ರೇಶ್ವರನನ್ನೇ ಕೊಂದ ಅಸಮ ಸಾಹಸಿಯಾದ ಅವನು ತನ್ನ ಅಣ್ಣನ ಧರ್ಮ ವ್ರತದ ಪೂರೈಕೆಗಾಗಿ ಪರರ ಕೈಂಕರ್ಯವನ್ನು ಮಾಡಬೇಕಾಯಿತಲ್ಲಾ ಎಂದು ಯುಧಿಷ್ಠಿರನ ಕಣ್ಣುಗಳಲ್ಲಿ ನೀರೂರಿತು. ಅಣ್ಣನಿಗೆ ವಿಧೇಯತೆ ಎಂಬ ಒಂದೇ ಒಂದು ತಡೆಯು ಇಲ್ಲದೆ ಹೋಗಿದ್ದರೆ ಭೀಮನು ನಿರಾಯಾಸವಾಗಿ ದುರ್ಯೋಧ ನನು ಕೂರುತ್ತಿದ್ದ ಸಿಂಹಾಸನದಲ್ಲಿ ರಾಜನಾಗಿ ಮೆರೆಯಬಹುದಿತ್ತು. ಅಣ್ಣನ ಒಂದು ವ್ರತಕ್ಕಾಗಿ ಈ ರೀತಿ ತನಗೆ ದೊರಕಬಹುದಾಗಿದ್ದ ಒಂದು ರಾಜ್ಯದ ಒಡೆತನವನ್ನು ಕನಸಿನಲ್ಲಿಯೂ ಕಲ್ಪಿಸಿಕೊಳ್ಳದಿದ್ದುದಷ್ಟೇ ಅಲ್ಲದೆ ಈಗ ಪರರ ಸೇವೆ ಮಾಡುವ ನಿಕೃಷ್ಟ ಜೀವನ ನಡೆಸಲೂ ಅವನು ಸಂತೋಷದಿಂದ ಸಿದ್ಧನಾದುದು ಅವನ ಹೃದಯ ವೈಶಾಲ್ಯವನ್ನು ತೋರಿಸುತ್ತದೆ. ಅವನು ಅಣ್ಣನಲ್ಲಿ "ಅಣ್ಣಾ, ನನಗೆ ಅಡುಗೆಯಲ್ಲಿ ವಿಶೇಷವಾದ ನೈಪುಣ್ಯವಿದೆ. ರುಚಿಕರವಾದ

ಭಕ್ಷ್ಯಗಳನ್ನು ತಯಾರಿಸಿಯೂ, ಆಸ್ಥಾನದ ಜಟ್ಟಿಗಳನ್ನು ಸೋಲಿಸಿಯೂ, ಸೌದೆಗಾಗಿ ಇಡಿಯ ಮರಗಳನ್ನೇ ಕಿತ್ತು ತರುವದರ ಮೂಲಕವೂ ನಾನು ವಿರಾಟನನ್ನು ಮೆಚ್ಚಿಸಿ ಅವನ ವಿಶ್ವಾಸವನ್ನು ಗಳಿಸಿಕೊಳ್ಳುತ್ತೇನೆ. ನೀನು ನನ್ನ ವಿಷಯದಲ್ಲಿ ಎಳ್ಳಷ್ಟೂ ಚಿಂತಿಸಬೇಡ" ಎಂದನು.

ರವಿ:– ಇದರಲ್ಲಿ ಬಹಳ ದೊಡ್ಡ ವಿಶೇಷವೇನಿದೆ? ಅರ್ಜುನ ಮೊದಲಾದವರೂ ತಮ್ಮ ತಮ್ಮ ಹೊಸ ಉದ್ಯೋಗಗಳನ್ನು ಸಂತೋಷದಿಂದಲೇ ಸ್ವೀಕರಿಸಲಿಲ್ಲವೆ? ಭೀಮನದೇನು ಹೆಚ್ಚುಗಾರಿಕೆ?

ಮುರಳಿ:– ನೀನು ಕತೆಯನ್ನು ಸಾಕಷ್ಟು ಸೂಕ್ಷ್ಮವಾಗಿ ಅನುಸರಿಸಿ ಬರಲಿಲ್ಲ ಎಂದು ಕಾಣುತ್ತದೆ. ಅರ್ಜುನ, ನಕುಲ, ಸಹದೇವರು ಸ್ವತಂತ್ರವಾದ ವ್ಯಕ್ತಿತ್ವವನ್ನು ಅಷ್ಟಾಗಿ ಪಡೆಯದವರು. ಅರ್ಜುನನು ಯುಧಿಷ್ಠಿರನಲ್ಲಿಯಾಗಲೀ, ಕೃಷ್ಣನಲ್ಲಿಯಾಗಲೀ ವಿಧೇಯತೆಯಿಂದ ಇರುವದರ ಮೂಲಕ ಮಾತ್ರವೇ ತನ್ನ ವ್ಯಕ್ತಿತ್ವವನ್ನು ಕಂಡುಕೊಳ್ಳುತ್ತಿದ್ದುದು. ಭೀಮ ಹಾಗಲ್ಲ. ಎರಡನೆಯ ಬಾರಿ ಜೂಜಾಡುವದನ್ನೇ ಅವನು ವಿರೋಧಿಸಿದ. ಕೌರವರು ದ್ರೌಪದಿಗೆ ಮಾಡಿದ ಅವಮಾನವನ್ನು ಅವನು ವಿರೋಧಿಸಿದ. ಅನಂತರ ಕಾಡಿನಲ್ಲಿರುವಾಗಲೂ ತಾವು ಈ ರೀತಿ ನಿರರ್ಥಕ ಜೀವನ ಮಾಡುವದರ ಬದಲು ತಮ್ಮ ರಾಜ್ಯವನ್ನು ಹಿಂದಕ್ಕೆ ಪಡೆಯಲು ಪ್ರಯತ್ನಿಸಬೇಕೆಂದು ವಾದಿಸಿದ. ಗಂಧರ್ವನು ದುರ್ಯೋಧನನನ್ನು ಹಿಡಿದು ಒಯ್ದಾಗ ಅವನನ್ನು ಬಿಡಿಸಿಕೊಂಡು ಬರಲು ನಿರಾಕರಿಸಿದ. ಅಂದರೆ, ಈ ಹಿಂದಿನ ಹನ್ನೆರಡು ವರ್ಷಗಳ ಅರಣ್ಯ ಜೀವನವನ್ನೂ, ಅದಕ್ಕೆ ಕಾರಣವಾದ ಜೂಜು ಮತ್ತು ಅದರ ಫಣಗಳನ್ನೂ, ಅದರ ಅಂಗವಾದ ಮುಂದಿನ ಅಜ್ಞಾತವಾಸವನ್ನೂ – ಯಾವದನ್ನೂ ಅವನು ಎಳ್ಳಷ್ಟೂ ಒಪ್ಪಿಲ್ಲ ಎಂಬದನ್ನು ಅನೇಕ ಬಾರಿ ವ್ಯಕ್ತಪಡಿಸಿದ್ದಾನೆ. ಅರ್ಜುನನು ಎಲ್ಲಿಯೂ ಹೀಗೆ ವ್ಯಕ್ತಪಡಿಸಿಲ್ಲ. ಯುಧಿಷ್ಠಿರನು ಹೇಗೋ ಅವನು ಹಾಗೆ. ಆದುದರಿಂದ ಮುಂದೆ ಅವನು ಶಿಖಂಡಿಯಾಗಿ ನಾಟ್ಯ ಮಾಡುತ್ತಿರಬೇಕೆಂದು ಸೂಚಿತವಾದಾಗಲೂ ಅವನಿಗೆ ಏನೂ ಬೇಸರವೆನಿಸುವಂತಿರಲಿಲ್ಲ. ಭೀಮನಿಗೆ ಹಾಗಲ್ಲ. ತಾನು ಯಾವದನ್ನು ವಿರೋಧಿಸಿದ್ದನೋ ಅದೆಲ್ಲವೂ ನಡೆಯುತ್ತಲೇ ಬಂದಿದೆ. ಹೇಗೋ ಅವುಗಳನ್ನೆಲ್ಲ ಅನುಭವಿಸಿಯಾಯಿತು. ಇನ್ನು ಮುಂದಿರುವದಂತೂ ಅತ್ಯಂತ ಹೇಯವಾದ ಕೆಲಸ. ವಿರಾಟನಂತಹ ರಾಜನನ್ನು ತಾನು ತನ್ನ ಸಾಮಂತನನ್ನಾಗಿ ಪಡೆಯಲು ಸಾಧ್ಯವಿರುವಾಗ ಈಗ ಅವನ ಸೇವೆಯನ್ನೇ ತಾನು ಮಾಡಬೇಕು ಎಂದರೆ ಎಂಥವನ ಮನಸ್ಸಿಗೂ ವೇದನೆಯಾಗುವದು ಸಹಜ. ಅದು ಕೂಡ ತನ್ನ ಕೃತ್ಯದಿಂದಾಗಿ ತಾನು ಇಂತಹ ದುರವಸ್ಥೆಯನ್ನು ತಲೆಯಮೇಲೆ ಹಾಕಿಕೊಂಡುದಾಗಿದ್ದರೆ ದುಃಖಪಟ್ಟುಕೊಂಡಾದರೂ ಅದನ್ನು ಅನುಭವಿಸಲೇಬೇಕಿತ್ತು. ಆದರೆ ಇಲ್ಲಿ ತನ್ನ

ಮಾತಿಗೆ ಮನ್ನಣೆ ದೊರಕದುದರಿಂದಾಗಿಯೇ ಇಂತಹ ದುರವಸ್ಥೆಯೊದಗಿದ್ದರೂ ಅವನು ಅದನ್ನು ನಗುನಗುತ್ತಾ ಸ್ವೀಕರಿಸಿದನೆಂದರೆ ಅವನ ನಿರ್ವ್ಯಾಮೋಹ ಗುಣ ಬ್ರಹ್ಮಜ್ಞಾನಿಯದರ ಮಟ್ಟಕ್ಕೇರುವಂತಹದು ಎಂಬದನ್ನು ನಾವು ನೋಡ ಬಹುದು........

ರಮೆ:– ಹೀಗೆ ವೇಷ ಮರೆಸಿಕೊಂಡು ಅವರು ಒಂದು ವರ್ಷವನ್ನು ವಿರಾಟ ರಾಜನಲ್ಲಿ ಕಳೆದರು. ಮತ್ತೆ ?

ಮುರಳಿ:– ಮತ್ತೆ ಕೌರವರೊಂದಿಗೆ ಯುದ್ಧಮಾಡಿ ರಾಜ್ಯವನ್ನು ಗೆದ್ದು ಕೊಂಡು ಸುಖವಾಗಿದ್ದರು.

ರಮೆ:– ಯಾಕೆ? ವಿವರಿಸಲು ಗಂಟಲು ನೋವಾಗುತ್ತದೊ ?

ಮುರಳಿ:– ಗಂಟಲಲ್ಲ. ಕಿವಿ ನೋವಾಗುತ್ತದೋ ಅಂತ !

ರಮೆ:– ಕಿವಿ ನೋವಾದರೆ ವಿವರಿಸಲಿಕ್ಕೇನು, ವಿವರಿಸಬಹುದಲ್ಲ !

ಮುರಳಿ:– ಕಿವಿ ನೋವು ಹೆಚ್ಚಾಗಿಬಿಟ್ಟರೆ ?

ರಮೆ:– ಅದೇನು ಇದ್ದಕ್ಕಿದ್ದಂತೆ ಕಿವಿನೋವು ಪ್ರಾರಂಭವಾಗಿಬಿಟ್ಟುದು ?

ಮುರಳಿ:– ನನಗೂ ಅದೇ ಆಶ್ಚರ್ಯ. ಚೆನ್ನಾಗಿದ್ದುದು ಒಮ್ಮೆಗೇ ಏನಾಗಿ ಬಿಟ್ಟಿತು ಅಂತ !

ರಮೆ:– ಶೀತ ಗಾಳಿಗಿರಬೇಕು.

ಮುರಳಿ:– ಇದ್ದರೂ ಇರಬಹುದು.

ರಮೆ:– ಹಾಗಾದರೆ ಈ ದಿನ ಇನ್ನು ಕತೆ ಹೇಳುವದು ಬೇಡ ಅನ್ನುತ್ತೀರಾ?

ಮುರಳಿ:– ಅದೇ, ಏನು ಮಾಡೋಣ ಅಂತ ನಾನೂ ನಿನ್ನನ್ನು ಕೇಳುವದು.

ರಮೆ:– ಕಿವಿಯನ್ನು ಸ್ವಲ್ಪ ಹೊತ್ತು ಕೈವಸ್ತ್ರದಿಂದ ಒತ್ತಿ ಹಿಡಿದರೆ ನೋವು ಕಡಿಮೆಯಾದೀತೋ ಏನೋ.

ಮುರಳಿ:– ಆಗಲೂಬಹುದು, ಅಲ್ಲ ?

ರಮೆ:– ಮಾಡಿ ನೋಡಿ, ಏನೀಗ ?

ಮುರಳಿ:– ಆಗಲಿ. ಎಲ್ಲಿ, ಕಿವಿ ತೋರಿಸು ಹಾಗಾದರೆ.

ರಮೆ:– ಅಯ್ಯೋ, ನನ್ನ ಕಿವಿಯನ್ನೇಕೆ ಒತ್ತುತ್ತೀರಿ ಸದ್ಯ ?

ಮುರಳಿ:– ನೀನಲ್ಲವೇ ಹೇಳಿದ್ದು ?

ರಮೆ:– ನನ್ನ ಕಿವಿಯನ್ನು ಒತ್ತಿ ಅಂತ ನಾನು ಹೇಳಿದೆನೇನು ?

ಮುರಳಿ:– ನಿನ್ನ ಕಿವಿ ಎಂದು ಹೇಳಲಿಲ್ಲ. ನೋವಿರುವ ಕಿವಿಯನ್ನು ಒತ್ತಿದರೆ ಒಳ್ಳೆಯದೆಂದು ನೀನು ಹೇಳಲಿಲ್ಲವೆ ?

ರಮೆ:– ಅದಕ್ಕೆ, ನನ್ನ ಕಿವಿ ನೋಯುತ್ತದೆ ಎಂದು ನಿಮಗೆ ನಾನು ಹೇಳಲಿಕ್ಕೆ ಬಂದೆನೇನು ?

ಮುರಳಿ:– ಎಲ್ಲವನ್ನೂ ಹೇಳಿ ಮಾತ್ರವೇ ಅರ್ಥವಾಗಬೇಕೇನು ? ಕುಂಟುತ್ತಾ ನಡೆದರೆ ಕಾಲು ನೋವು ಎಂದು ಅರ್ಥವಾಗುವದಿಲ್ಲವೆ ?

ರಮೆ:– ನನಗೆ ಕಿವಿನೋವು ಎಂದು ಕಾಣಿಸಲು ನಾನೀಗ ಕಿವಿ ಮುಚ್ಚಿಕೊಂಡಿದ್ದೇನೇನು ?

ಮುರಳಿ:– ಒಂದು ವಿಧದಲ್ಲಿ. ವಿರಾಟ ಪರ್ವದ ವಿವರ ಕೇಳುವದಿಲ್ಲ ಎಂದು ಹೇಳುವಾಗ ಆ ಮಟ್ಟಿಗಾದರೂ ಕಿವಿ ಮುಚ್ಚಿಕೊಂಡಂತಾಯಿತಲ್ಲ ?

ರಮೆ:– ನಿಮಗೆ ಹುಚ್ಚುಗಿಚ್ಚು ಹಿಡಿದಿದೆಯೋ ಅಂತ ? ನಾನು ವಿರಾಟ ಪರ್ವ ಕೇಳುವದಿಲ್ಲ ಅಂತ ನಿಮ್ಮಲ್ಲಿ ಹೇಳಿಕೊಂಡೆನೇನು ?

ಮುರಳಿ:– ಸಂಗೀತ ಪ್ರಾರಂಭವಾಗುವಾಗಲೇ "ಮಂಗಳ ಹಾಡಿ ಭಾಗವತರೇ" ಎಂದು ಹೇಳಿದರೆ ಅಂತಹವರಿಗೆ ಸಂಗೀತ ಕೇಳಲು ಆಸಕ್ತಿ ಇದೆಯೆಂದು ಅರ್ಥವಾಗುತ್ತದೋ ಇಲ್ಲವೆಂದಾಗುತ್ತದೊ ?

ರಮೆ:– ಅದು ನಿಮಗೇ ಅನ್ವಯಿಸಬೇಕು.

ಮುರಳಿ:– ಯಾಕೆ ?

ರಮೆ:– ಪಾಂಡವರು ರಾಜ್ಯ ಗೆದ್ದು ಸುಖವಾಗಿದ್ದರು ಎಂದು ಹೇಳಿ ವಿವರ ಯಾವದನ್ನೂ ಹೇಳದೆ ತಾನೇ ಮಂಗಳ ಹಾಡಿ ಇನ್ನೊಬ್ಬರ ಮೇಲೆ ತಪ್ಪು ಹಾಕುತ್ತೀರಲ್ಲಾ, ನೀವು ಎಂಥಾ ಮನುಷ್ಯ ಅಂತ ?

ಮುರಳಿ:– ನಾನು ಮಂಗಳ ಹಾಡಿದ್ದು ನಿಜ. ಆದರೆ "ಮಂಗಳ ಹಾಡಿ" ಎಂದುದಕ್ಕೆ ಹಾಡಿದೆ ಅಷ್ಟೆ.

ರಮೆ:– ನಿಮಗೆಲ್ಲೋ ತಲೆ ಕೆಟ್ಟುಹೋಗಿರಬೇಕು. ನಾನು "ಮಂಗಳ ಹಾಡಿ" ಎಂದೆನಂತೆ !

ಮುರಳಿ:– ಬಾಯಿಬಿಟ್ಟು ಹೇಳದಿದ್ದರೂ ಅರ್ಥವಾಗುವಂತೆ ಹೇಳಿದರೆ ಸಾಕಾಗುವದಿಲ್ಲವೆ ?

ರಮೆ:– ಅರ್ಥವಾಗುವಂತೆ ಏನು ಹೇಳಿದೆ ?

ಮುರಳಿ:– ಪಾಂಡವರು ಇನ್ನೂ ವಿರಾಟನ ರಾಜ್ಯವನ್ನು ಪ್ರವೇಶಿಸಲೇ ಇಲ್ಲ;

ಆ ವೇಳೆಗೇ ನೀನು "ಅವರು ವೇಷ ಮರೆಸಿಕೊಂಡು ವಿರಾಟನಲ್ಲಿ ಒಂದು ವರ್ಷ ಕಳೆದರು. ಮತ್ತೇನಾಯಿತು" ಎಂದು ಕೇಳಿದರೆ?

ರಮೆ:– ಓ, ಹಾಗೆ. ಹಾಗಾದರೆ ಅವರು ಅಲ್ಲಿ ಒಂದು ವರ್ಷವನ್ನು ಕಳೆಯಲಿಲ್ಲವೊ ?

ಮುರಳಿ:– ನಿನ್ನ ತಲೆ. ಒಂದು ವರ್ಷದ ಕತೆಯನ್ನು ಒಂದು ವಾಕ್ಯದಲ್ಲಿ ಮುಗಿಸುವಹಾದರೆ ಇಡಿಯ ಮಹಾಭಾರತದ ಕತೆಯೆಲ್ಲ ಒಂದು ಪುಟದೊಳಗೆ ಅಡಕವಾಗಬಹುದಷ್ಟೆ ?

ರಮೆ:– ಸರಿ, ಸರಿ. ಗೊತ್ತಾಯಿತು. ವಿರಾಟನ ರಾಜ್ಯದಲ್ಲಿರುವಾಗ ಏನೇನೋ ನಡೆದಿದೆ ಅಂತಲೊ ?

ಮುರಳಿ:– ನೀನು ಯೋಚಿಸಿದ್ದು, ಏನೂ ನಡೆದಿಲ್ಲ ಎಂತಲೊ ?

ರಮೆ:– ತಪ್ಪು, ತಪ್ಪು. ನಡೆದಿರಬಹುದು. ಪಾಂಡವರಲ್ಲವೇ ಎಷ್ಟಾದರೂ ! ಅದರಲ್ಲಿಯೂ ನಿಮ್ಮ ಭೀಮ ಇರುವ ಜಾಗವಲ್ಲವೆ ! ಏನಾದರೂ ನಡೆಯದೇ ಇರುತ್ತದೆಯೇ ! ಕ್ಷಮಿಸಬೇಕು. ವಿವರಿಸಿ ಹೇಳಿ.

ಮುರಳಿ:– ನೀನಿದ್ದೀಯಲ್ಲಾ ! ಇರಲಿ, ಕೇಳು. ಭೀಮನ ಉತ್ಸಾಹಭರಿತ ಮಾತುಗಳಿಂದ ಯುಧಿಷ್ಠಿರನಿಗೆ ಬಹಳ ಸಂತೋಷವಾಯಿತು. ಅತ್ಯಂತ ತೀವ್ರವಾದ ಧರ್ಮಸಂಕಟಕ್ಕೆ ತಾನು ಸಿಕ್ಕಿದ್ದು, ಬಹಳ ದಾರುಣವಾದ ಪರಿಣಾಮವನ್ನುಂಟು ಮಾಡಿರುವ ತನ್ನ ಒಂದು ಸಂಕಲ್ಪದ ಪೂರೈಕೆಗಾಗಿ ತಾನು ತನ್ನ ಶೂರರಾದ ತಮ್ಮಂದಿರನ್ನೂ ಪ್ರತಿಭಾಸಂಪನ್ನಳಾದ ಪತ್ನಿಯನ್ನೂ ಇತರರ ಸೇವಕರನ್ನಾಗಿ ಮಾಡಬೇಕಾಗಿ ಬಂದ ಅತ್ಯಂತ ಸಂಕೋಚಯುಕ್ತವಾದ ಪರಿಸ್ಥಿತಿಯಲ್ಲಿ ಅವರ ಪೈಕಿ ಪ್ರಧಾನನಾದ ಭೀಮನು ಆಡಿದ ಈ ಮಾತುಗಳು ಯುಧಿಷ್ಠಿರನಿಗೆ ಮೂರು ಲೋಕಗಳ ಒಡೆತನ ಸಿಕ್ಕಿದಷ್ಟು ಸಂತೋಷವನ್ನುಂಟುಮಾಡಿದವು ಎಂಬದನ್ನು ನಾವು ಸಹಜವಾಗಿ ಊಹಿಸಿಕೊಳ್ಳಬಹುದು.

ಈ ರೀತಿ ತಮ್ಮ ಭವಿಷ್ಯದ ಕಾರ್ಯಕ್ರಮವನ್ನು ನಿಶ್ಚಯಿಸಿದ ಪಾಂಡವರೈವರೂ ತಮ್ಮ ಆಯುಧಗಳೆಲ್ಲವನ್ನೂ ಒಂದು ಹೆಣದಾಕಾರದಲ್ಲಿ ಕಟ್ಟಿ ಒಂದು ಬನ್ನಿಯ ಮರಕ್ಕೆ ತೂಗು ಹಾಕಿದರು. ಯುಧಿಷ್ಠಿರನು ಏಕಾಗ್ರತೆಯಿಂದ ಅಷ್ಟದಿಕ್ಪಾಲಕರನ್ನು ಕುರಿತು "ಈ ಆಯುಧಗಳನ್ನು ಅರ್ಜುನನು ಮಾತ್ರ ತೆಗೆಯಲು ಅನುವು ಮಾಡಿ; ದುಡುಕು ಸ್ವಭಾವವುಳ್ಳ ಭೀಮನಿಗೆ ಕೊಡಬೇಡಿ" ಎಂದು ಪ್ರಾರ್ಥಿಸಿದನು.

ರಮೆ:– ಸಹನೆಯ ಬಗೆಗೆ ಭೀಮ ಮತ್ತು ಅರ್ಜುನರೊಳಗಿದ್ದ ವ್ಯತ್ಯಾಸಕ್ಕೆ ಯುಧಿಷ್ಠಿರನೇ ಸಾಕ್ಷಿ ಹೇಳಿದಂತಾಯಿತಲ್ಲ !

ಮುರಳಿ:– ಸಾಕ್ಷಿ ಸಿಕ್ಕಿದುದು ಆ ವಿಷಯಕ್ಕಲ್ಲ. ಯುಧಿಷ್ಠಿರನ ವಿವೇಚನಾ ಶಕ್ತಿಯ ಸಾಮರ್ಥ್ಯವನ್ನು ತಿಳಿಯುವದಕ್ಕೆ ಒಂದು ಸಾಕ್ಷಿ ಸಿಕ್ಕಿದಂತಾಯಿತು, ಅಷ್ಟೆ. ವ್ಯಕ್ತಿಗಳ ಗುಣ ವಿಮರ್ಶೆಯ ಬಗೆಗೆ ಅವನು ತಪ್ಪಿದ ಸಂದರ್ಭಗಳೇ ಹೆಚ್ಚು ಎನ್ನಬಹುದು. ತಮ್ಮನ್ನು ನಾಶ ಮಾಡಲು ಮೇಲಿಂದ ಮೇಲೆ ಪ್ರಯತ್ನಿಸಿದ ಧೃತರಾಷ್ಟ್ರನಲ್ಲಿ ಅವನು ತಾಳಿದ್ದ ನಿಸ್ಸಂಶಯ ಭಾವನೆ ಎಂತಹ ಅನಾಹುತಕ್ಕೆ ಕಾರಣವಾಯಿತು ಎಂಬದನ್ನು ನೋಡಿದ್ದೇವೆ. ಅಂತಹ ದುರ್ಯೋಧನನ ಸೆರೆಯನ್ನಾದರೂ ಬಿಡಿಸಬೇಕೆನ್ನುವಷ್ಟು ಇತರರ ದೋಷಗಳನ್ನು ಮರೆಯುವ ಸ್ವಭಾವದ ಯುಧಿಷ್ಠಿರನು, ತನ್ನ ಸ್ವಸಾಮರ್ಥ್ಯದಿಂದ ಕೌರವರನ್ನು ಗೆದ್ದು ಭಾರತದ ಚಕ್ರೇಶ್ವರನಾಗಲು ಸಾಧ್ಯವಿದ್ದ ಭೀಮನು ಕೇವಲ ಅವನ ಅಣ್ಣನಾದ ತನ್ನ ಸಂಕಲ್ಪದ ಪೂರೈಕೆಗಾಗಿ ಇತರರ ಸೇವೆ ಮಾಡಲು ಸಿದ್ಧನಾಗಿದ್ದಾನೆ ಎಂಬ ಅವನ ಸಹನೆಯ ಪ್ರಮಾಣಕ್ಕೆ ಅಪಚಾರವೆಂಬಂತೆ ಆಯುಧಗಳ ವಿಷಯವಾಗಿ ಹೀಗೆ ಹೇಳಿದುದು ಅವನ (ಯುಧಿಷ್ಠಿರನ) ಅಪಕ್ವ ವಿವೇಚನಾಶಕ್ತಿಗೆ ಮಾತ್ರ ಸಾಕ್ಷಿಯಾಗಲು ಸಾಧ್ಯ. ಅಲ್ಲದೆ ತಾವು ನಾಲ್ವರನ್ನೂ ಚಿಕ್ಕಂದಿನಿಂದಲೂ ಅನೇಕ ಅಪಘಾತಗಳಿಂದ, ಪ್ರಾಣಾಪಾಯಗಳಿಂದ, ಅಪಾಯಕಾರೀ ಶತ್ರುಗಳಿಂದ ರಕ್ಷಿಸಿರುವ ಜವಾಬ್ದಾರಿಕೆ ಹೊತ್ತಿದ್ದವನು ಭೀಮನೆಂಬ ನೆನಪು ಕೂಡ ಈ ಸಂದರ್ಭದಲ್ಲಿ ಯುಧಿಷ್ಠಿರನಿಗೆ ಬರದಿದ್ದುದೂ ಆಶ್ಚರ್ಯವೇ. ಇಷ್ಟಾಗಿ ಭೀಮನು ಅಸಹಾಯಶೂರನೆಂದೂ, ಅವನು ಶತ್ರುದಮನ ಮಾಡಲು ನಿಶ್ಚಯಿಸಿದರೆ ಈ ಅಷ್ಟದಿಕ್ಪಾಲಕರು ಬಚ್ಚಿಟ್ಟುಕೊಳ್ಳುವ ಆಯುಧಗಳ ಅವಶ್ಯಕತೆಯನ್ನು ಅವನು ನಿರೀಕ್ಷಿಸುವದಿಲ್ಲವೆಂದೂ, ಕೇವಲ ತನ್ನ ಬಾಹುಗಳ ಬಲದಿಂದಲೇ ಅವನು, ಇತರರು ಆಯುಧಗಳಿಂದ ಸಾಧಿಸಲಾರದುದನ್ನು ಕೂಡ ಸಾಧಿಸಬಲ್ಲವನೆಂದೂ ಯುಧಿಷ್ಠಿರನು ಜ್ಞಾಪಿಸಿಕೊಳ್ಳಬೇಕಾಗಿತ್ತು. ಯುಧಿಷ್ಠಿರನು ಧರ್ಮಪರಾಯಣನಾಗಿದ್ದುದು ಹೌದಾದರೂ ಅವನಲ್ಲಿ ಒಂದು ದೊಡ್ಡ ದೌರ್ಬಲ್ಯವಿತ್ತು ಎಂಬದನ್ನು ನಾವು ನೋಡುತ್ತೇವೆ. ಅವನ ಮನಸ್ಸಿಗೆ ಒಂದು ವಿಷಯ ಹಚ್ಚಿಕೊಂಡುಬಿಟ್ಟರೆ ಅದನ್ನು ಪೂರೈಸುವ ಭರದಲ್ಲಿ ಅವನಿಗೆ ಮಾತ್ರವೇ ಅಲ್ಲದೆ ಅವನಲ್ಲಿ ವಿಶ್ವಾಸವನ್ನಿರಿಸಿದ ಇತರ ವ್ಯಕ್ತಿಗಳಿಗೂ ಕೂಡ ಏನೇ ದುರವಸ್ಥೆ ಒದಗಿದರೂ ಅವನು ತನ್ನ ಮನಸ್ಸಿನ ನಿಲುವನ್ನು ಮಾತ್ರ ಬದಲಾಯಿಸಲು ಅಸಮರ್ಥನಾಗಿರುತ್ತಿದ್ದುದು ಅವನ ಒಂದು ದೊಡ್ಡ ದೌರ್ಬಲ್ಯ. ಜೂಜಾಟದ ಸಂದರ್ಭದಲ್ಲಿ ಇದರ ನಗ್ನಸ್ವರೂಪವನ್ನು ನಾವು ನೋಡುತ್ತೇವೆ. ಅನಂತರ ಈ ವನವಾಸ, ಅಜ್ಞಾತವಾಸಗಳು. ತನ್ನ ಜೂಜಿನಿಂದಾಗಿ ನಿರಪರಾಧಿಗಳಾದ ತನ್ನ ತಮ್ಮಂದಿರು ರಾಜ್ಯ ಸುಖವನ್ನು ಕಳೆದುಕೊಂಡರೂ, ಅಷ್ಟೇ ನಿರಪರಾಧಿಯಾದ ತನ್ನ ಪತ್ನಿಯು ತುಂಬಿದ ಸಭೆಯಲ್ಲಿ ತನ್ನ ಮಾನವನ್ನು ಕಳೆದುಕೊಳ್ಳಬೇಕಾಗಿ ಬಂದರೂ ಅವನು

ತನ್ನ ಹುಚ್ಚು ನಿರ್ಧಾರವನ್ನು ಬಿಟ್ಟು ಎಳ್ಳಷ್ಟೂ ಅಲುಗಲಿಲ್ಲ ಎಂಬದನ್ನು ನೋಡಿದ್ದೇವೆ. ಈಗ ಕೂಡ ತನ್ನ ಸಂಕಲ್ಪದ ವನವಾಸ, ಅಜ್ಞಾತ ವಾಸಗಳನ್ನು ಪೂರೈಸುವಲ್ಲಿಯೂ ಅದೇ ತಮ್ಮಂದಿರು, ಅದೇ ದ್ರೌಪದಿ ಪರರ ಸೇವಕರಾಗ ಬೇಕಾದಾಗಲೂ ಅವನ ನಿರ್ಧಾರ ಬದಲಾಗಲಿಲ್ಲ. ಅವನ ಈ ಸಂಕಲ್ಪವು ಧರ್ಮ ಸಮ್ಮತವಾದುದೋ ಅಲ್ಲವೋ ಎಂಬ ಜಿಜ್ಞಾಸೆ ನಮಗೆ ಬೇಕಾಗಿಲ್ಲ. ಆದರೆ ಅವನು ತನ್ನ ಸಂಕಲ್ಪದ ಪೂರೈಕೆಗಾಗಿ ಎಷ್ಟು ಕಲ್ಲುಮನಸ್ಸಿನವನಾಗುತ್ತಿದ್ದನು ಎಂಬದನ್ನು ಇಲ್ಲಿ ಚೆನ್ನಾಗಿ ತಿಳಿಯಬಹುದು. ಯಾವ ವಿರಾಟನನ್ನು ತನ್ನ ಆಶ್ರಿತನನ್ನಾಗಿ ಮಾಡಿಕೊಳ್ಳಲು ಭೀಮನು ಸಮರ್ಥನಾಗಿದ್ದನೋ ಅಂತಹವನ ಆಶ್ರಯವನ್ನು ತಾನೇ ಪಡೆಯುವದಕ್ಕೆ ಅವನು ಸಂತೋಷದಿಂದ ಸಮ್ಮತಿಸಿರುವದು ಕೇವಲ ತನ್ನ (ಯುಧಿಷ್ಠಿರನ) ಮೇಲಿನ ಗೌರವದಿಂದಾಗಿ ಎಂದು ಅವನು ತಿಳಿದಿದ್ದರೂ ಕೂಡ, ಅಂತಹ ತಮ್ಮನ ನಡತೆಯಲ್ಲೇ ಸಂಶಯ ತಾಳಿ ಅವನು ತನ್ನ ಸಂಕಲ್ಪ ಪೂರೈಕೆಗೆ ಎಲ್ಲಿ ಅಡ್ಡಿಮಾಡಿಬಿಟ್ಟಾನೋ ಎಂದು ಹೆದರುವಷ್ಟರ ಮಟ್ಟಿಗೂ ಅವನು ತನ್ನ ಸಂಕಲ್ಪಗಳ ಪೂರೈಕೆಯು ಹೊರತು ಇತರ ವಿಷಯಗಳಿಗೆ ಕುರುಡಾಗಿಬಿಡುತ್ತಿದ್ದನು.

ರಮೆ:– ಅದು ಸರಿ. ಭೀಮನ ಅಸಾಧಾರಣ ಸಹನಾಶಕ್ತಿಗೆ ನೂರು ಸ್ಪಷ್ಟವಾದ ನಿದರ್ಶನಗಳು ದೊರಕಿರುವಾಗ ಅವನ ಸಹನಾಶಕ್ತಿಯನ್ನು ಪ್ರಶ್ನಿಸುವ ಯುಧಿಷ್ಠಿರನ ಅಭಿಪ್ರಾಯವು ಅವನ (ಯುಧಿಷ್ಠಿರನ) ಮನೋಭಾವವನ್ನು ವ್ಯಕ್ತಪಡಿಸುತ್ತದೆಯೇ ಹೊರತು, ಭೀಮನದ್ದಲ್ಲ ಎಂಬದು ಸ್ಪಷ್ಟವಾಗುತ್ತದೆ, ಎನ್ನಿ. ಇರಲಿ. ಮುಂದೆ ಹೇಳಿ.

ಮುರಳಿ:– ಸರಿಯಾಗಿ ಹೇಳಿದೆ. ಕೇಳು. ಅಣ್ಣನ ಈ ಮಾತುಗಳಿಂದ ಭೀಮನು ಸಿಟ್ಟುಗೊಂಡರೂ ಪ್ರಧಾನವಾದ ಅವನ ಹಣೆಯ ಬರಹವೇ ಇದು ಎಂಬಂತೆ ಅವನು ಪುನಃ ಶಾಂತನಾಗಿ ಸಮಾಧಾನ ಪಡೆದನು. ಆರು ಜನರೂ ಬೇರೆ ಬೇರೆ ದಿನಗಳಲ್ಲಿ ತಮ್ಮ ವೇಷಗಳನ್ನು ಮರೆಸಿಕೊಂಡು ತಾವು ತೀರ್ಮಾನಿಸಿದ್ದಂತೆ ವಿರಾಟನಲ್ಲಿ ಆಶ್ರಯವನ್ನು ಪಡೆದರು........ಉದ್ಯೋಗ ಮಾಡುವಾಗ ಸಿಂಹದಂತಿರುವ ನಾನು ಸಂಜೆ ಮನೆಗೆ ಬಂದ ಮೇಲೆ ಕೇವಲ ನಿನ್ನ ಆಶ್ರಯ ಪಡೆಯುವಂತೆ.

ರಮೆ:– ಬಹಳ ಸಂತೋಷ. ಹೇಗೂ ಕತ್ತಲಾಯಿತು – ನೀವು ಭೀಮನಲ್ಲಿ ಆದರ್ಶವನ್ನು ಕಂಡುಕೊಂಡವರು ಕೂಡ. ಈ ರಾತ್ರಿಯಿಂದಲೇ ಪ್ರಾರಂಭವಾಗಲಿ – ನಾನು ಕೇವಲನಾದ ವಿರಾಟ, ನೀವು ನನ್ನ ಅಡುಗೆಯ ವಲಲ.

ಮುರಳಿ:– ವಿರಾಟ, ವಲಲನ ನಾಟಕ ಇರಲಿ. ಬೇಕಿದ್ದರೆ ಕೀಚಕ,

ಸೈರಂಧ್ರಿಯ ನಾಟಕವನ್ನೇ ಆಡೋಣವಂತೆ, ಏಳು. ಹೇಗೂ ಇಲ್ಲಿ ಭೀಮನಿಲ್ಲ ವಲ್ಲ !

ರಮೆ:– ಅದೇನು ಆ ನಾಟಕ ?

ಮುರಳಿ:– ನಾಳೆ ಹೇಳುತ್ತೇನೆ, ಏಳು. ಕತ್ತಲಾದರೂ ಅಡುಗೆಗೆ ಏಳದೆ ಕತೆ ಹೇಳಿದುದಕ್ಕೆ ಪ್ರಾಯಶ್ಚಿತ್ತ ಮಾಡುವದು ಬೇಡ. ಏಳು, ಏಳು.

††††††

# ಆರನೆಯ ಸಂಜೆ

ರಮೆ:– ಆತ್ಮ, ಗೀತ್ಮ ಅಂತ ಏನೂ ಪೀಠಿಕೆಯಲ್ಲಿ ಕಾಲ ಕಳೆಯದೆ ನೇರವಾಗಿ ಭೀಮನ ಕತೆ ಪ್ರಾರಂಭಿಸಿದರೆ ಏನಾಗುತ್ತದೆ ?

ಮುರಳಿ:– ಏನೂ ಆಗುವದಿಲ್ಲ. ಕತೆ ಮುಂದುವರಿಯುತ್ತದೆ.

ರಮೆ:– ಅಂದರೆ ಇತರ ವಿಚಾರಗಳನ್ನು ಕೇಳಲು ಬೇಸರವಾಗುತ್ತದೆ ಎಂದು ಅರ್ಥವಲ್ಲ...............ನೀವೇನಪ್ಪ, ಏನನ್ನು ಹೇಳಿದರೂ ಬಹಳ ಸ್ವಾರಸ್ಯವಾಗಿ ಹೇಳುತ್ತೀರಿ. ಮಾತಿನ ಚಮತ್ಕಾರ ಇದ್ದರೆ ಮೊಲದ ಕೊಂಬನ್ನೂ ಪ್ರತ್ಯಕ್ಷವಾಗಿ ತೋರಿಸಬಹುದು ಎನಿಸುತ್ತದೆ, ನಿಮ್ಮ ಮಾತು ನೋಡುವಾಗ........ಅಂದಹಾಗೆ ಇದನ್ನೆಲ್ಲ ಎಲ್ಲಿ ಕಲಿತಿರಿ ಅಂತ !

ಮುರಳಿ:– ಎಲ್ಲಿ ಕಲಿಯುವದು ? ಚಿಕ್ಕಂದಿನಲ್ಲಿ ಹಳ್ಳಿಯಲ್ಲಿ ಮನೆಯ ದನಗಳನ್ನು ಮೇಯಿಸುತ್ತಿದ್ದಾಗ ಕಲಿತೆ ಎನ್ನಲೇ ? ಅಲ್ಪಸ್ವಲ್ಪ ವಿದ್ಯಾಭ್ಯಾಸ ಮಾಡುವಾಗಲೂ ವರ್ಷಕ್ಕೆ ಒಬ್ಬೊಬ್ಬರಂತೆ ಯಾವ್ಯಾವದೋ ನೆಂಟರು ಎನಿಸಿಕೊಂಡವರ ಮನೆಗಳಲ್ಲಿ "ಇಲ್ಲಿಂದ ಬಿಡುಗಡೆ ಯಾವಾಗಲಪ್ಪಾ" ಎನಿಸುವಂತಹ ಜೀವನ ಮಾಡುತ್ತಿದ್ದಾಗ ಕಲಿತೆ ಎನ್ನಲೆ ? ಬಹಳ ಚಿಕ್ಕಂದಿನಲ್ಲಿಯೇ ಉದ್ಯೋಗಕ್ಕೆ ಸೇರಬೇಕಾಗಿ ಬಂದು, ಅಧಿಕಾರದ ದರ್ಪಕ್ಕೆ ಸಿಕ್ಕಿ ಪರಾಧೀನತೆಯ ದುಸ್ಥಿತಿಯಲ್ಲಿ ನಷ್ಟಗೊಳ್ಳುತ್ತಿದ್ದ ವ್ಯಕ್ತಿತ್ವಕ್ಕಾಗಿ ದಿನವಿಡೀ ಮರುಗುತ್ತಾ ಕಾಲ ಕಳೆಯಬೇಕಾಗಿದ್ದ ದಿನಗಳಲ್ಲಿ ಕಲಿತೆ ಎನ್ನಲೆ ? ಸ್ವತಂತ್ರವಾದ ಉದ್ಯೋಗ ಮಾಡಬೇಕೆಂದು ಹೊರಟು, ಸರಳವಾದುದೇ ಆದರೂ ಆ ಹಿಂದೆ ಎರಡು ಹೊತ್ತೂ ಮಾಡಬಹುದಾಗಿದ್ದ ಊಟವನ್ನು ಒಂದೇ ಹೊತ್ತಿಗೆ ಇಳಿಸಬೇಕಾಗಿ ಬಂದ ದುರ್ದೆಸೆಯಿಂದಾಗಿ ಮಾಡುತ್ತಿದ್ದ ಉದ್ಯೋಗದಲ್ಲಿ ಉತ್ತಮ ಭವಿಷ್ಯವನ್ನು ನಿರೀಕ್ಷಿಸಲಾರದೆ, ಆದರೆ ಅದನ್ನು ಬಿಟ್ಟು ಬೇರೇನನ್ನಾದರೂ ಮಾಡೋಣವೆಂದರೆ ಯಾರಿಂದಲೂ ಯಾವ ರೀತಿಯ ಬೆಂಬಲವೂ ಇಲ್ಲದಿದ್ದುದರಿಂದ ಯಾಂತ್ರಿಕವಾಗಿ ದಿನಗಳನ್ನು ಕಳೆಯುತ್ತಿದ್ದ ಅವಧಿಯಲ್ಲಿ ಕಲಿತೆ ಎನ್ನಲೆ ? ವಿದ್ವಾಂಸರ ಸಹವಾಸವೆ ? ಗುರುವಿನ ಮಾರ್ಗದರ್ಶನವೆ ? ಪ್ರೋತ್ಸಾಹದಾಯಕವಾದ ಮನೆಯ ವಾತಾವರಣವೆ ? ವಾಸ ಪ್ರದೇಶದಲ್ಲಿದ್ದ ಪ್ರಚೋದಕವಾದ ಸನ್ನಿವೇಶಗಳೆ ? ಎಲ್ಲಿ ಕಲಿತೆ ಎನ್ನಲಿ ? ಹೇಗೆ ಕಲಿತೆ ಎನ್ನಲಿ ? ಯಾರಿಂದ ಕಲಿತೆ ಎನ್ನಲಿ ? ಏಕೆ ಕಲಿತೆ ಎನ್ನಲಿ ?

ರಮೆ:– ಯಾವ ಪ್ರೋತ್ಸಾಹವೂ ಇಲ್ಲದೆ ಸ್ವಪ್ರಯತ್ನದಿಂದ ಕಲಿತೆ ಎಂದು ಕೊಚ್ಚಿಕೊಳ್ಳುತ್ತಿದ್ದೀರಿ.

ಮುರಳಿ:– ಕೊಚ್ಚಿಕೊಳ್ಳಲು ಏನೂ ಇಲ್ಲವಲ್ಲ ಎಂದು ಮರುಗುತ್ತಿದ್ದೇನೆ. ನನಗೆ ಅಲ್ಪ ಸ್ವಲ್ಪ ಏನಾದರೂ ತಿಳಿದಿರುವದು ನಿಜವಾದರೆ ಅದನ್ನು ಎಲ್ಲಿ, ಯಾರಿಂದ, ಯಾಕಾಗಿ ಹೇಗೆ ಕಲಿತೆ ಎಂಬ ವಿವರಗಳೇ ಸಿಕ್ಕುವದಿಲ್ಲ ಎನ್ನುವಾಗ ಇದರಲ್ಲಿ ಹೆಗ್ಗಳಿಕೆ ಏನಿದೆ? ಇಂತಹ ಗುರುವಿನಲ್ಲಿ ಇಷ್ಟು ಕಷ್ಟಪಟ್ಟು ಈ ವಿದ್ಯೆಯನ್ನು ಕರಗತ ಮಾಡಿಕೊಂಡಿದ್ದೇನೆ ಎನ್ನುವದರಲ್ಲಿ ಸ್ವಪ್ರಯತ್ನದ ಹೆಮ್ಮೆ ಬರಬಹುದೇ ಹೊರತು ನಾನು ಹೆಮ್ಮೆ ಪಡುವ ಅಂಶವೇ ಇಲ್ಲದಾಗಿದೆಯಲ್ಲ!

ರಮೆ:– ಅಂದರೆ ಬಹಳ ಓದಿಕೊಂಡಿರಬೇಕು.

ಮುರಳಿ:– ನಾಚಿಸಬೇಡ.

ರಮೆ:– ಏಕೆ?

ಮುರಳಿ:– ಬಹಳ ಎಂದು ಸೇರಿಸಬೇಡ. ಅಭಿರುಚಿ ಇರುವ ವಿಷಯಗಳಲ್ಲಿ ಕೈಗೆ ಸಿಕ್ಕಿದ ಅಲ್ಪ ಸ್ವಲ್ಪವನ್ನು ಓದಿಕೊಂಡಿದ್ದೇನೆ.

ರಮೆ:– ಅಂದರೆ ಭೀಮನ ಬಗೆಗೆ ಅದೇನು ಅಭಿರುಚಿ ನಿಮಗೆ ಬಂದುದು?

ಮುರಳಿ:– ಭೀಮನ ಬಗೆಗೆ ಅಭಿರುಚಿ ಇದ್ದುದರಿಂದ ಅವನ ಬಗೆಗೆ ನಾನು ಓದಿಕೊಳ್ಳಲು ಪ್ರಯತ್ನಿಸಿದುದಲ್ಲ. ಮಹಾಭಾರತವನ್ನು ಓದುವಾಗ ಭೀಮನ ಕತೆ ನನ್ನ ಅಭಿರುಚಿಯನ್ನು ಕೆರಳಿಸಿತು.

ರಮೆ:– ಹಾಗೆ ನೋಡಿದರೆ ನಾನೂ ಚಿಕ್ಕಂದಿನಲ್ಲಿ ಮಹಾಭಾರತ, ರಾಮಾಯಣ, ಭಾಗವತ ಮೊದಲಾದುವನ್ನೆಲ್ಲ ಓದಿಕೊಂಡಿದ್ದೇನೆ. ನಮ್ಮ ತಾಯಿ ಅವುಗಳನ್ನು ತರಿಸಿ ಓದಲು ಹೇಳಿದ್ದರು. ಆದರೆ ನನಗೆ ಅವುಗಳ ಸ್ಥೂಲ ರೂಪವಷ್ಟೇ ನೆನಪಿನಲ್ಲಿದೆ ಹೊರತು ನಿಮ್ಮ ರೀತಿಯ ವಿಶ್ಲೇಷಣೆಗಳೆಲ್ಲ ತಲೆಗೇ ಹೊಳೆದಿರಲಿಲ್ಲವಲ್ಲಾ?

ಮುರಳಿ:– ಬಹುಶಃ ನಿನಗೆ ಈ ಗ್ರಂಥಗಳ ಮೇಲೆ ಅಭಿರುಚಿ ಕಡಿಮೆ ಇದ್ದಿರಬೇಕು.

ರಮೆ:– ಹಾಗೇ ಇದ್ದಿರಬಹುದೆ?

ಮುರಳಿ:– ಯಾವ ವಿಷಯ ನಿನಗೆ ಆಸಕ್ತಿಯನ್ನು ವಿಶೇಷವಾಗಿ ಕೆರಳಿಸುತ್ತಿತ್ತು?

ರಮೆ:– ಯಾವ ವಿಷಯ? ಬಹುಶಃ ಯಾವದೂ ಇಲ್ಲವೇನೋ. ಹೊಸ ಹೊಸ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಆಸೆ ಇದೆಯೇ ವಿನಹ, ವಿಶೇಷ

ವಾದ ಆಸಕ್ತಿ – ಬಹುಶಃ – ಯಾವದೇ ಒಂದು ವಿಷಯದಲ್ಲಿಯೂ ಇಲ್ಲವೆಂದು ತೋರುತ್ತದೆ.

ಮುರಳಿ:– ಹಾಗಾಗಿಯೇ ಹೀಗಾದುದು.

ರಮೆ:– ಅದಕ್ಕೆಲ್ಲ ಕಾರಣ ಬಹುಶಃ ನೀವೇ.

ಮುರಳಿ:– ನಾನೆ ?

ರಮೆ:– ನೀವೇ ಎಂದರೆ ಗಂಡಸರು.

ಮುರಳಿ:– ಗಂಡಸರು ನಿನಗೇನು ಮಾಡಿದರು ?

ರಮೆ:– ಏನು ಮಾಡಿದರು ಅಂತ ಅಲ್ಲ. ಹೆಣ್ಣಿನ ಜೀವನ, ಮದುವೆಯಾಗಿ ನಾಲ್ಕು ಗೋಡೆಗಳ ನಡುವೆ ಬಂಧನದಲ್ಲಿ ಜೀವ ಸವೆಸಿ ಸಾಯಬೇಕೆನ್ನುವ ರೀತಿಯದು ಎಂದು ಮಾಡಿದವರು ಗಂಡಸರು ತಾನೆ? ಹೇಗೂ ಈ ರೀತಿ ಸಾಯಬೇಕಾದ ನಮಗೆ ಬೇರೆ ಯಾವದರ ಗೊಡವೆ ಏಕೆ ಎಂದು ಭಾವಿಸಿದ ಹೆಣ್ಣು ಇತರ ಎಲ್ಲದರಲ್ಲಿಯೂ ಆಸಕ್ತಿ ಕಳೆದುಕೊಂಡಿರುವದು ಸಹಜವೇ.

ಮುರಳಿ:– ಹಾಗಾದರೆ ನಾಲ್ಕು ಗೋಡೆಗಳ ನಡುವೆ ಬದುಕಬೇಕಾದ ವಿಷಯವನ್ನಾದರೂ ಎಲ್ಲ ಹೆಣ್ಣುಗಳೂ ಚೆನ್ನಾಗಿ ತಿಳಿದುಕೊಳ್ಳಬೇಕಾಗಿತ್ತು ತಾನೆ? ಅದನ್ನೂ ಕಾಣುವದಿಲ್ಲವಲ್ಲ ?

ರಮೆ:– ಸ್ವಪ್ರೇರಣೆಯಿಂದ ಆರಿಸಿಕೊಂಡ ಪರಿಸ್ಥಿತಿಯಾದರೆ ಅದರಲ್ಲಿ ಆಸಕ್ತಿ ಬರುತ್ತದೆಯೇ ಹೊರತು, ಬಲಾತ್ಕಾರಕ್ಕೆ ಒಳಗಾದ ಪರಿಸ್ಥಿತಿಯಲ್ಲಿ ಹೇಗೆ ಆಸಕ್ತಿ ಬರುತ್ತದೆ ?

ಮುರಳಿ:– ಅಂತೂ, ರಮಾ, ನೀವು– ಹೆಂಗಸರು– ಗಂಡಸರಿಗೆ ಎಷ್ಟು ಕೃತಜ್ಞರಾಗಿದ್ದರೂ ಸಾಲದು.

ರಮೆ:– ನೋಡಿ. ಅಂತೂ ನೀವೇ ಮೇಲು ಎಂಬಂತೆ ಹೇಗೆ ಮಾತನಾಡುತ್ತೀರಿ ! ಏಕೆ ನಾವು ನಿಮಗೆ ಕೃತಜ್ಞರಾಗಿರಬೇಕು ?

ಮುರಳಿ:– ಅನೇಕ ವಿಷಯಗಳಿಗಾಗಿ ಕೃತಜ್ಞರಾಗಿರಬೇಕು. ಆ ಪೈಕಿ ನೀನು ಹೇಳಿದ ವಿಷಯಕ್ಕೆ ಕೂಡ.

ರಮೆ:– ಏನು ನಾನು ಹೇಳಿದುದು ?

ಮುರಳಿ:– ಗಂಡಸರ ಬಲಾತ್ಕಾರಕ್ಕೆ ಒಳಗಾದ ಪರಿಸ್ಥಿತಿಯಲ್ಲಿ ಹೆಣ್ಣಿಗೆ ಯಾವದರಲ್ಲಿಯೂ ಆಸಕ್ತಿ ಬರುವಂತಿಲ್ಲ ಎಂದು ನೀನು ಹೇಳಲಿಲ್ಲವೆ ?

ರಮೆ:– ಹೇಳಿದೆ. ಅದಕ್ಕೆ ನಿಮಗೇಕೆ ಕೃತಜ್ಞಳಾಗಿರಬೇಕು ಅಂತ ?

ಮುರಳಿ:– ಏಳುವಾಗಲೇ ತಡವಾದುದರಿಂದ, ಹೇಗೂ ಆಫೀಸಿಗೆ ಬರುವದು ತಡವಾಗಬೇಕಾಗಿದ್ದವನಿಗೆ ಬಸ್ಸು ತಡವಾಗಿ ಬಂದಾಗ ತನ್ನ ಮೇಲಧಿಕಾರಿ ಯೊಂದಿಗೆ ಬಸ್ಸನ್ನು ಶಪಿಸಲು ಎಷ್ಟು ಆನಂದವಾಗಲಾರದು !

ರಮೆ:– ಹಾಗೆ ?

ಮುರಳಿ:– ಹಾಗೆಯೇ, ಪುರುಷ ಸಂಪರ್ಕ ಪಡೆಯುವದು ಮತ್ತು ಮಕ್ಕಳನ್ನು ಈಯುವದು– ಈ ಎರಡೇ ಜೀವನದ ಪರಮೋದ್ದೇಶವಾಗಿರುವ ಹೆಣ್ಣು, ತಾನು ಲೋಕದ ಇತರ ವಿಚಾರಗಳಲ್ಲಿ ಏಕೆ ಆಸಕ್ತಿ ವಹಿಸುತ್ತಿಲ್ಲ ಎಂದು ಹೇಳಿ ಕೊಳ್ಳಲು ತನ್ನನ್ನು ಬಲಾತ್ಕಾರಕ್ಕೆ ಒಳಪಡಿಸುತ್ತಾನೆಂದು ತಾನು ಹೇಳಿಕೊಳ್ಳ ಬಹುದಾದ ಗಂಡು ಅವಳಿಗೆ ಸಿಕ್ಕಿರುವದರಿಂದ ಅವಳು ಅಂತಹ ಗಂಡಿಗೆ ಕೃತಜ್ಞಳಾ ಗಿರುವದು ಅವಶ್ಯವಲ್ಲವೆ ?

ರಮೆ:– ಏನಂದಿರಿ ? ಹೆಣ್ಣಿನ ಜೀವನದ ಪರಮೋದ್ದೇಶ ಏನು ಎಂದು ಹೇಳಿದಿರಿ ?

ಮುರಳಿ:– ಆಗಲೇ ಹೇಳಿದೆನಲ್ಲ !

ರಮೆ:– ಅದೇ, ಏನೆಂದು ಹೇಳಿದಿರಿ ಎಂದು ಕೇಳಿದೆ.

ಮುರಳಿ:– ಪುರುಷ ಸಂಪರ್ಕ ಪಡೆಯುವದು ಮತ್ತು ಮಕ್ಕಳನ್ನು ಕೊಡುವದು.

ರಮೆ:– ಚಿಂತೆಯಿಲ್ಲ, ನೀವೂ !

ಮುರಳಿ:– ಯಾಕೆ ರಮಾ ?

ರಮೆ:– ಚಿಂತೆಯಿಲ್ಲ ಎಂದೆ.

ಮುರಳಿ:– ಹೌದು ಅಂದೆ. ಯಾಕೆ ಹಾಗಂದೆ ಅಂತ ?

ರಮೆ:– ನಾವು ಮಕ್ಕಳನ್ನು ಹೆರುವ ಯಂತ್ರಗಳು. ಅಲ್ಲವೆ ?

ಮುರಳಿ:– ಅಲ್ಲ ಎನ್ನುತ್ತೀಯ ?

ರಮೆ:– ಚಿಂತೆಯಿಲ್ಲ ನೀವು ? ನಾವು ಹಾಗಾದರೆ ಬರೆ ಮಕ್ಕಳನ್ನು ಹೆರುವ ಯಂತ್ರಗಳು ಎಂದು ತಿಳಿದುಕೊಂಡಿದ್ದೀರಿ.

ಮುರಳಿ:– ಬರೇ ಅಲ್ಲ. ಪ್ರಧಾನವಾಗಿ ಮಕ್ಕಳನ್ನು ಹೆರುವದು. ಹಾಗೂ ಅದಕ್ಕೆ ಬೇಕಾದ ಪುರುಷ ಸಂಪರ್ಕವನ್ನು ಪಡೆಯುವದು.

ರಮೆ:– ಅಷ್ಟೆ.

ಮುರಳಿ:– ಪ್ರಧಾನವಾಗಿ ಅಷ್ಟೆ.

ರಮೆ:– ನಮಗೆ ಬೇರೇನೂ ಆಸೆ, ಆಕಾಂಕ್ಷೆ, ಗೊತ್ತು, ಗುರಿಗಳೇ ಇಲ್ಲ?

ಮುರಳಿ:– ಇದ್ದರೂ ಅವೆಲ್ಲ ಈ ಪ್ರಧಾನ ಬಯಕೆಯ ಪೂರಕವಾಗಿ ಮಾತ್ರ ಇರುವದು.

ರಮೆ:– ಹಾಗಾದರೆ ನಮಗೆ ಕಲೆ, ವಿಜ್ಞಾನ, ರಾಜಕೀಯ, ಉದ್ಯೋಗ, ಆಡಳಿತ ಮೊದಲಾದ ಯಾವದರಲ್ಲಿಯೂ ಹಕ್ಕಿಲ್ಲ?

ಮುರಳಿ:– ಹಕ್ಕಿನ ಪ್ರಶ್ನೆ ಅಲ್ಲ. ಆತ್ಮಜ್ಞಾನ ಪಡೆಯಲು ನನಗೂ ಪೂರ್ಣ ಹಕ್ಕಿದೆ. ಆಸಕ್ತಿ ಹಾಗೂ ಆ ಮೂಲಕ ಜೀವನದ ಗುರಿ– ಇವುಗಳನ್ನು ಹೇಳಿದೆ.

ರಮೆ:– ಆಗಲಿ. ಅವುಗಳಲ್ಲಿ ಯಾವದರಲ್ಲಿಯೂ ನಾವು ಆಸಕ್ತಿ ತಳೆಯಬಾರದು? ಅದು ಯಾವದನ್ನೂ ನಾವು ಜೀವನದ ಗುರಿಯಾಗಿಟ್ಟು ಕೊಳ್ಳಬಾರದು?

ಮುರಳಿ:– ಬಾರದು ಎನ್ನಲಿಲ್ಲ. ಬೇಕು ಅಥವಾ ಬೇಡ ಎನ್ನುವದು ಪುನಃ ಹಕ್ಕಿನ ಪ್ರಶ್ನೆಯಾಗುತ್ತದೆ. ನಾನು ಸ್ವಾಭಾವಿಕವಾದ ಅಭಿರುಚಿಯನ್ನು ಕುರಿತು ಹೇಳುತ್ತಿದ್ದೇನೆ.

ರಮೆ:– ಹಾಗೇ ಆಗಲಿ. ನಿಮ್ಮ ಅಭಿಪ್ರಾಯವನ್ನು ಕೇಳಿ ನನಗೆ ತುಂಬ ಸಂತೋಷವಾಯಿತು. ನನ್ನ ಜೀವನದಲ್ಲಿ ಇದೊಂದು ಪಾಠ ಕಲಿತೆ.

ಮುರಳಿ:– ಏನು ಕಲಿತೆ?

ರಮೆ:– ಏನಾದರೂ ಆಗಲಿ. ಅದೆಲ್ಲ ನಿಮಗೆ ಯಾಕೆ? ನಾನು ಕಲಿತುದು ನನಗೆ.

ಮುರಳಿ:– ನೀನು ಕಲಿತುದನ್ನು ಕೇಳಿ ನನಗೂ ತುಂಬ ಸಂತೋಷ ವಾಯಿತು. ಅದನ್ನೇ ಕೇಳಿಬಿಡೋಣ ಅಂತ ಪ್ರಶ್ನಿಸಿದೆ.

ರಮೆ:– ನಾನು ಕಲಿತುದನ್ನು ಕಟ್ಟಿಕೊಂಡು ನಿಮಗೇನೂ ಆಗಬೇಕಾ ದ್ದಿಲ್ಲ. ಅಂತೂ ನೀವು ಇಂಥವರು ಎಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ.

ಮುರಳಿ:– ಎಂಥವನು ಎಂದು?

ರಮೆ:– ಎಂಥವರೇ ಆಗಲಿ. ಅದು ನನ್ನ ಅಭಿಪ್ರಾಯ. ನೀವು ನನ್ನನ್ನು ಒಂದು ಮಕ್ಕಳನ್ನು ಹೆರುವ ಯಂತ್ರ ಎಂದು ತಿಳಿದಿದ್ದೀರಲ್ಲ, ಅಷ್ಟೇ ಸಾಕು! ಒಟ್ಟಿನಲ್ಲಿ ನನ್ನ ಜೀವನ ಹಾಳಾಯಿತು. ಅಷ್ಟೆ.

ಮುರಳಿ:– ಏಕೆ ಹಾಳಾಯಿತು ?

ರಮೆ:– ಏಕಾದರೂ ಆಗಲಿ ಬಿಡಿ. ಈಗೇನು ? ನನ್ನ ಹಣೆಯ ಬರಹ.

ಮುರಳಿ:– ನೀನೊಬ್ಬಳಲ್ಲ ರಮಾ. ಎಲ್ಲ ಹೆಣ್ಣುಗಳೂ ಹೀಗೇ ಎಂದು ನಾನು ನಂಬಿರುವದು.

ರಮೆ:– ಅದೇ. ನಿಮ್ಮ ದೃಷ್ಟಿಯಲ್ಲಿ ತಾನೆ ? ಅಂತಹ ದೃಷ್ಟಿಕೋನ ಇರುವವರನ್ನು ಸೇರಿದವಳು ನಾನು ತಾನೆ ? ಅದು ನನ್ನ ಪ್ರಾರಬ್ಧವಲ್ಲದೆ ಮತ್ತೇನು ? ಮಾತು ಸಾಕು ಬಿಡಿ. ಮನುಷ್ಯನನ್ನು ಎಷ್ಟರಲ್ಲಿ ತಿಳಿಯಬೇಕು ? ತಿಳಿದ ಮೇಲೆ ಅದನ್ನೇ ಕೆದಕಿಕೊಂಡು ಕುಳಿತು ಏನು ಫಲ ! ನಿಮ್ಮ ಭೀಮು, ಗೀಮು ಯಾವದನ್ನೂ ಈ ಯಂತ್ರಕ್ಕೆ ನೀವು ಹೇಳುವದು ಬೇಡ. ಇದರೊಂದಿಗೆ ಸರಸ ಸಲ್ಲಾಪ ಹೋಗಲಿ, ಮಾತುಕತೆ ಕೂಡ ನಿಮಗೆ ಬೇಡ. ಹೇಗೂ ನನ್ನ ಜೀವನ ಹಾಳಾಗಿ ಆಯಿತು. ಇನ್ನು ಇದ್ದಷ್ಟು ದಿನ ಹೇಗೋ ಕಾಲ ತಳ್ಳುವದು.

ಮುರಳಿ:– ಏನು ಮಾಡುತ್ತ ?

ರಮೆ:– ಏನೂ ಮಾಡಲಿಕ್ಕಿಲ್ಲ. ಯಂತ್ರಗಳು ಏನು ಮಾಡುತ್ತವೆ ? ತುಕ್ಕು ಹಿಡಿದುಕೊಂಡು ಒಂದು ಮೂಲೆಯಲ್ಲಿ ಬಿದ್ದಿರುವದು. ಒಂದು ದಿನ ಆಚೆಗೆ ಎಸೆಯುತ್ತಾರೆ.

ಮುರಳಿ:– ಹಾಗಾದರೆ ಆ ಯಂತ್ರ ಏಕಾಗಿ ನಿರ್ಮಾಣವಾಗಿದೆಯೋ ಆ ಉದ್ದೇಶ ?

ರಮೆ:– ಉದ್ದೇಶ ಸಾಧನೆಗೆ ಪ್ರಯತ್ನಿಸಿ ನೋಡಿ. ನೀವು ಆಗ ಹೆಣ್ಣಿನ ಬಗೆಗೆ ನೀವಿಟ್ಟಿರುವ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳಬೇಕಾಗುತ್ತದೋ ಇಲ್ಲವೋ ನೋಡಿ. ಸಾಕು ನೀವು ನನ್ನನ್ನು ಇಷ್ಟು ಕೀಳಾಗಿ ಕಾಣುತ್ತಿರುವದು. ನನಗೆ ಹೆಚ್ಚಿಗೆ ಮಾತನಾಡಲು ಮನಸ್ಸಿಲ್ಲ. ನಾನು ಯಾವನೊಬ್ಬನ ಭೋಗವಸ್ತು ವಾಗಿಯೂ ಬಾಳಲು ಸಾಧ್ಯವಿಲ್ಲ ಎಂಬ ನನ್ನ ಖಚಿತ ಅಭಿಪ್ರಾಯವನ್ನು ಮಾತ್ರ ನೀವು ತಿಳಿದುಕೊಳ್ಳಬೇಕು. ಅದು ಹೊರತು ನಿಮಗೆ ನನ್ನಿಂದ ಏನೂ ಅಪಚಾರ ವಾಗಲಾರದು.

ಮುರಳಿ:– ಇರಲಿ. ಸಿಟ್ಟು ಮಾಡಬೇಕಾದರೆ ಮಾತೆಲ್ಲ ಆದಮೇಲೆ ಮಾಡಿಕೊ. ಸಿಟ್ಟು ಮಾಡಿಕೊಂಡು ತುಕ್ಕು ಹಿಡಿದಂತೆ ಮೂಲೆಯಲ್ಲಿ ಕೂರು ವದನ್ನೂ ಆಮೇಲೆ ನಿರ್ಧರಿಸು. ಸಧ್ಯಕ್ಕೆ, ಈಗ ಹಿಡಿದಿರುವ ತುಕ್ಕನ್ನು ಕೆರೆ ಯಲು ಪ್ರಯತ್ನಿಸೋಣ. ಒಂದೆರಡು ಮಾತು ಆಡೋಣವೇನು ?

ರಮೆ:– ಯಾಕೆ ಮಾತು ಅಂತ ? ಯಂತ್ರದೊಂದಿಗೆ ಏನು ಮಾತು ? ನನ

ಗೊಂದು ವ್ಯಕ್ತಿತ್ವವಿದೆಯೆ? ಸ್ವಾತಂತ್ರ್ಯವಿದೆಯೆ? ಹೃದಯವಿದೆಯೆ? ಏನಿದೆ? ಅಂಥವಳಲ್ಲಿ ನಿಮಗೆ ಮಾತೇಕೆ? ಏನೂ ಬೇಡ.

ಮುರಳಿ:– ಇಲ್ಲ, ಇಲ್ಲ. ನೀನು ಸಾಮಾನ್ಯವಾದ ಯಂತ್ರವಲ್ಲ. ಬಹಳ ಪ್ರಭಾವಶಾಲಿಯಾದ ಯಂತ್ರ ಕೂಡ. ಇಲ್ಲವಾದರೆ ಇಷ್ಟೊಂದು ಯಶಸ್ವಿಯಾಗಿ ನೀನು ನಿನ್ನ ಕೆಲಸವನ್ನು ನಿರ್ವಹಿಸುವದಿಲ್ಲ. ಇಷ್ಟಾಗಿ ನಿನ್ನನ್ನು ಯಂತ್ರ ಎಂದೋ, ಭೋಗವಸ್ತು ಎಂದೋ ಹೇಳಿದವನು ನಾನಲ್ಲ. ನೀನೇ ಹೇಳಿಕೊಂಡಿ ರುವದು.

ರಮೆ:– ಮತ್ತೆ ಇನ್ನೇನು? ಪುರುಷ ಸಂಪರ್ಕ ಪಡೆಯುವದು ಮತ್ತು ಮಕ್ಕಳನ್ನು ಕೊಡುವದು – ಇದೇ ನಮ್ಮ ಜೀವನದ ಗುರಿ ಎಂದು ಹೇಳಿದರೆ ಇನ್ನೇನು ಅರ್ಥ?

ಮುರಳಿ:– ಬಹಳ ದೊಡ್ಡ ಅರ್ಥವಿದೆ.

ರಮೆ:– ಅರ್ಥವಿದೆ. ಹೆಂಗಸರು ಗಂಡಸರನ್ನು ಹುಡುಕಿಕೊಂಡು ತಿರು ಗುತ್ತಲೇ ಇರುತ್ತಾರೆ, ನೋಡಿ! ಹೋದಲ್ಲೆಲ್ಲ ಮಕ್ಕಳನ್ನು ಹೆತ್ತು ಎಲ್ಲೆಲ್ಲಿಯೋ ಬಿಟ್ಟು ಸಾಯುತ್ತಾರೆ. ಅಲ್ಲವೆ? ಎಂಥಾ ನೀಚ ಮನೋಭಾವ ನಿಮ್ಮದು ಅಂತ!

ಮುರಳಿ:– ಅರ್ಥವಿದೆ ಎಂದು ನಾನಂದರೆ ಹೆಂಗಸರು ಯಂತ್ರಗಳು, ಭೋಗವಸ್ತುಗಳು ಎಂದರ್ಥ ಎನ್ನುತ್ತೀ. ದೊಡ್ಡ ಅರ್ಥವಿದೆ ಎಂದರೆ ಹೆಂಗಸರು ಗಂಡಸರನ್ನು ಹುಡುಕಿಕೊಂಡು ತಿರುಗುತ್ತಾ ಹೋದಲ್ಲೆಲ್ಲ ಮಕ್ಕಳನ್ನು ಹಡೆದು ಬಿಟ್ಟುಬರುತ್ತಾರೆ ಎಂದರ್ಥ ಎನ್ನುತ್ತೀಯ. ಒಂದು ನನ್ನ ಕೀಳು ಭಾವನೆ ಎನ್ನುತ್ತೀಯ. ಇನ್ನೊಂದು ನೀಚ ಭಾವನೆ ಎನ್ನುತ್ತೀಯ. ಇದ್ಯಾವದನ್ನಾದರೂ ನಾನು ಹೇಳಿದ್ದಿದೆಯೇ ಹೇಳು. ಎಲ್ಲವನ್ನೂ ನೀನೇ ಹೇಳಿಕೊಂಡು ಒಂದು ದುಸ್ಸಹವಾದ ವಾತಾವರಣವನ್ನು ಕಲ್ಪಿಸಿಕೊಳ್ಳುತ್ತಿದ್ದೀಯೇ ಹೊರತು ಅದನ್ನು ನಾನು ಮಾಡಿದೆನೆ?

ರಮೆ:– ಇಷ್ಟು ಸಣ್ಣ ಮಾತಿಗೆ ಅರ್ಥ ಮಾಡಲು ನನಗೆ ಗೊತ್ತಾಗುವದಿಲ್ಲ ವೇನು? ಇನ್ನು ಅದನ್ನು ನಿಮ್ಮ ಬಾಯಿಂದ ವಿವರಿಸಿಕೊಂಡು ಇನ್ನಷ್ಟು ಬೇಸರವನ್ನು ತಂದುಕೊಳ್ಳುವದೇಕೆ ಎಂಬದಕ್ಕಾಗಿ ನೀವು ಇಷ್ಟು ಹೇಳಿದಾಗಲೇ ನಾನದನ್ನು ತಿಳಿದುಕೊಂಡು ಅಲ್ಲಿಗೇ ಮುಕ್ತಾಯ ಮಾಡಲು ಪ್ರಯತ್ನಿಸಿದ್ದು.

ಮುರಳಿ:– ಅದು ಅಪಕ್ವವಾದ ತಿಳಿವಳಿಕೆ. ವಿಷಯವನ್ನು ಪೂರ್ತಿಯಾಗಿ ತಿಳಿದುಕೊಳ್ಳದೆ ತೀರ್ಮಾನಕ್ಕೆ ಬರುವದು ಅನಾಹುತಕ್ಕೆ ಎಡೆಕೊಡುತ್ತದೆ.

ರಮೆ:– ಆದರೆ ಇಲ್ಲಿ ವಿಷಯವನ್ನು ಪೂರ್ತಿಯಾಗಿ ತಿಳಿಯಲು ಬಯಸಿದರೆ ಅನಾಹುತಕ್ಕೆ ಕಾರಣವಾಗುತ್ತದೆಂದು ನಾನು ಭಾವಿಸಿದುದರಿಂದ ಹಾಗೆ ಮಾಡಿದೆ.

ಮುರಳಿ:– ಅಂದರೆ ನೀನು ತಪ್ಪು ಮಾಡಿದ್ದೀಯ ಎಂದಂತಾಯಿತು.

ರಮೆ:– ಹೇಗೆ ತಪ್ಪು?

ಮುರಳಿ:– ಅದಕ್ಕೇ ನಾನಂದದ್ದು. ನಿನ್ನ ತಪ್ಪು ತಿಳಿವಳಿಕೆಯಿಂದುಂಟಾಗಿರುವ ಸಿಟ್ಟನ್ನು ಬಿಟ್ಟು ಸ್ವಲ್ಪ ಮಾತಾಡುವೆಯಾದರೆ ಆ ತಪ್ಪು ಕಲ್ಪನೆ ಹೋದೀತು ಎಂದು.

ರಮೆ:– ಅದೇನು ಹೇಳುವದಕ್ಕಿದೆಯೋ ಹೇಳಿ. ಏನು ಹೇಳುತ್ತೀರಿ ಎನ್ನುವದು ಹೇಗೂ ಗೊತ್ತಿದೆ. ಆದರೂ ನಿಮ್ಮ ಬಾಯಿಂದಲೇ ಒಮ್ಮೆ ಕೇಳಿ ಬಿಡುತ್ತೇನೆ. ಏನು ಮಾಡುವದು, ನನ್ನ ಹಣೆಯ ಬರಹ.

ಮುರಳಿ:– ನೋಡಿದೆಯಾ! ತಪ್ಪು ಕಲ್ಪನೆಗಳು ಹೇಗೆ ಕೆಲಸ ಮಾಡುತ್ತವೆ ಅಂತ! ನಾನು ಏನು ಹೇಳುತ್ತೇನೆ ಎನ್ನುವದು ನಿನಗೆ ಹೇಗೆ ಗೊತ್ತಿರುವದು?

ರಮೆ:– ನಿಮ್ಮೊಂದಿಗೆ ಇಷ್ಟು ದಿನ ಬದುಕಿದ್ದು ನಿಮ್ಮನ್ನು ಅಷ್ಟು ತಿಳಿದು ಕೊಂಡಿಲ್ಲವೇನು ನಾನು?

ಮುರಳಿ:– ಏನೆಂದು?

ರಮೆ:– ಏನೆಂದು? ಹೇಳುತ್ತೀರಿ. ಹೇಳೀ, ಹೇಳೀ ಎಲ್ಲ ಮುಗಿಯುವಾಗ ಹೆಣ್ಣುಗಳು ಮಕ್ಕಳನ್ನು ಹೆರುವ ಯಂತ್ರಗಳು, ಗಂಡಸರ ಭೋಗವಸ್ತುಗಳು ಹೌದು ಎಂದು ನನ್ನ ಬಾಯಿಂದಲೇ ಹೇಳುವಂತೆ ಮಾಡುತ್ತೀರಿ. ನಿಮ್ಮ ಮಾತಿನ ಚಮತ್ಕಾರ ನನಗೆ ಗೊತ್ತಿಲ್ಲವೇನು?

ಮುರಳಿ:– ಹಾಗಿದ್ದರೆ ಪ್ರತಿಬಾರಿಯೂ ನನ್ನ ಚಮತ್ಕಾರಕ್ಕೆ ಮರುಳಾದವಳೇನು ನೀನು?

ರಮೆ:– ಹೌದೇ ಹೌದು. ಚಮತ್ಕಾರವಲ್ಲದೆ ಇನ್ನೇನು?

ಮುರಳಿ:– ಆದರೆ ಒಬ್ಬಳನ್ನು ಪ್ರತಿ ಬಾರಿಗೂ ಚಮತ್ಕಾರದಿಂದ ಮರುಳು ಮಾಡಲು ಸಾಧ್ಯವೇನು?

ರಮೆ:– ನನ್ನಂತಹ ಹೆಡ್ಡಿಯನ್ನು ಮರುಳು ಮಾಡುತ್ತೀರಿ!

ಮುರಳಿ:– ಹಾಗಿದ್ದರೆ ನನ್ನ ವಾದ ಸರಿ ಎಂದು ನೀನು ಒಮ್ಮೆಯೂ ಒಪ್ಪಿಕೊಂಡದ್ದಲ್ಲ?

ರಮೆ:– ಸರಿ ಎಂದು ಕಾಣಿಸುವಂತೆ ಮಾತನಾಡುವದೇ ನಿಮ್ಮ ಚಮತ್ಕಾರ ತಾನೆ?

ಮುರಳಿ:– ನನ್ನ ಮಾತಿನ ಭರದಲ್ಲಿ ಒಂದು ವಿಷಯ ಸರಿ ಎಂದು ನಿನಗೆ ಕಾಣಿಸಿದರೂ ಅನಂತರ ನೀನೇ ಅದನ್ನು ತರ್ಕಿಸುವಾಗ ಅದು ತಪ್ಪು ಎಂದು

ಕಾಣಿಸಿದರೆ ಮಾತ್ರ ನೀನು ಮೊದಲು ಒಪ್ಪಿದುದು ನನ್ನ ಚಮತ್ಕಾರದಿಂದಾಗಿ ಎಂದು ನಂಬಬೇಕು ತಾನೆ ? ಹಾಗೆ ಯಾವಾಗಲಾದರೂ ಆಗಿದೆಯೆ ?

ರಮೆ:– ಇಲ್ಲ.

ಮುರಳಿ:– ಮತ್ತೇಕೆ ನನ್ನ ಮಾತನ್ನು ಚಮತ್ಕಾರದ್ದು ಎಂದು ಹೇಳುತ್ತಿ ?

ರಮೆ:– ಹಾಗೆ ಕಾಣಿಸಿತು, ಹೇಳಿದೆ.

ಮುರಳಿ:–– ನಿನಗೆ ಏಕೆ ಹಾಗೆ ಕಾಣಿಸುವದು ಗೊತ್ತೆ ?

ರಮೆ:– ಇಲ್ಲ.

ಮುರಳಿ:– ಅನೇಕ ವಿಷಯಗಳಲ್ಲಿ ನೀನು ಕೆಲವು ತಪ್ಪುಗಳನ್ನೇ ಸರಿ ಎಂದು ಬಹಳ ಆಳವಾಗಿ ನಂಬಿಕೊಂಡು ಬಂದುಬಿಟ್ಟದ್ದೀಯೆ. ಆ ಕುರಿತು ಸತ್ಯವನ್ನು ಹೇಳುವಾಗ ನಿನಗೆ ಒಪ್ಪದಿರಲಿಕ್ಕೆ ಸಾಧ್ಯವಾಗುವದಿಲ್ಲವಾದರೂ, ನಿನ್ನ ತಪ್ಪು ಭಾವನೆ ಬಲವಾಗಿ ಬೇರೂರಿದ್ದು ಅದು ಹೇಗೆ ಬುಡಮೇಲಾಯಿತು ಎಂದು ನೀನು ನೋಡುವಾಗ ಏನೋ ಚಮತ್ಕಾರ ನಡೆದುಹೋಗಿದೆ ಎಂದು ನಿನಗನಿಸುತ್ತದೆ.

ರಮೆ:– ಹಿಂದಿನದು ಏನಾದರೂ ಆಗಲಿ. ಈ ವಿಷಯದಲ್ಲಿ ಮಾತ್ರ ನೀವು ಹೇಳುತ್ತಿರುವದು ಸತ್ಯ ಎಂದು ನಾನು ಒಪ್ಪಿಕೊಳ್ಳಲು ಹೋದರೆ ಹೆಂಗಸರೆಲ್ಲರೂ ಆತ್ಮಹತ್ಯೆ ಮಾಡಿಕೊಳ್ಳಬೇಕಾದೀತು, ಅಷ್ಟೆ.

ಮುರಳಿ:– ಯಾವ ವಿಷಯದಲ್ಲಿ ?

ರಮೆ:– ಯಾವ ವಿಷಯದಲ್ಲಿ, ಸ್ತ್ರೀಯರು ಗಂಡಸರ ಭೋಗ ವಸ್ತುಗಳು, ಮಕ್ಕಳನ್ನು ಹೆರುವ ಯಂತ್ರಗಳು ಎಂದು ನೀವು ಹೇಳುವ ವಿಷಯದಲ್ಲಿ.

ಮುರಳಿ:–– ಹಾಗೆಂದು ನಾನೆಲ್ಲಿ ಹೇಳಿದೆ ರಮಾ ?

ರಮೆ:– ಚೆನ್ನಾಯಿತು. ಸ್ತ್ರೀಯರನ್ನು ದೇವತೆಗಳೆಂದು ನೀವು ಹೇಳಿದ್ದೇನು, ಹಾಗಾದರೆ ?

ಮುರಳಿ:– ಅವರನ್ನು ದೇವತೆಗಳು ಎಂದೂ ಹೇಳಲಿಲ್ಲ, ಭೂತಗಳು ಎಂದೂ ಹೇಳಲಿಲ್ಲ. ಸೃಷ್ಟಿಯಲ್ಲಿ ಅವರ ಪಾತ್ರವನ್ನು ಕುರಿತು ನಾನು ಚಿಂತಿಸಿದುದನ್ನು ಹೇಳಿದೆ, ಅಷ್ಟೆ.

ರಮೆ:– ಅದೇ. ಅವರು ಯಂತ್ರಗಳು ಎಂದು ಮುಂತಾಗಿ.

ಮುರಳಿ:- ಆ ಶಬ್ದಗಳನ್ನು ನೀನೇ ಬಳಸುತ್ತಿರುವದು.

ರಮೆ:– ಥತ್. ನನಗೆ ನಿಮ್ಮೊಂದಿಗೆ ಮಾತನಾಡಲಿಕ್ಕಾಗುವದಿಲ್ಲವಪ್ಪ. ಮಾತು ಸಾಕು. ಏಳಿ.

ಮುರಳಿ:– ಸ್ತ್ರೀಯರ ಹುಟ್ಟಿನ ಮೂಲೋದ್ದೇಶವನ್ನು ನಾನು ಕಂಡು ಕೊಂಡ ಪ್ರಕಾರ, ಈ ಸೃಷ್ಟಿಯ ವಿಶಾಲವಾದ ವ್ಯವಸ್ಥೆಯಲ್ಲಿ ಗಂಡು ಮತ್ತು ಹೆಣ್ಣಿನ ಪಾತ್ರಗಳನ್ನು ವಿಮರ್ಶಿಸುತ್ತಾ ಹೆಣ್ಣಿನ ಪಾತ್ರವು ಪ್ರಧಾನವಾಗಿ ಪುರುಷ ಸಂಪರ್ಕವನ್ನು ಪಡೆಯುವದೆಂದೂ, ಮಕ್ಕಳನ್ನು ಕೊಡುವದೆಂದೂ ಹೇಳಿದೆ, ಅಷ್ಟೆ.

ರಮೆ:– ಆಗಲಿ, ಇರಲಿ. ಹಾಗಾದರೆ ಗಂಡಿನ ಪಾತ್ರವೇನು? ಹೆಣ್ಣಿನಲ್ಲಿ ಭೋಗ ಪಡೆಯುವದು, ಲೋಕವನ್ನು ಆಳುವದು ಇತ್ಯಾದಿ ತಾನೆ?

ಮುರಳಿ:– ನೀನೇ ಹೇಳುವದಾದರೆ ನನ್ನನ್ನೇಕೆ ಕೇಳುತ್ತಿ?

ರಮೆ:– ಹೇಳಿದೆ, ಅಷ್ಟೆ. ಆಗಲಿ. ನಿಮ್ಮ ಅಭಿಪ್ರಾಯದಲ್ಲಿ ಗಂಡಿನ ಪಾತ್ರವೇನು?

ಮುರಳಿ:– ಹೆಣ್ಣಿನ ಪಾತ್ರವನ್ನು ವಿವರವಾಗಿ ವಿಮರ್ಶಿಸಲು ನೀನು ಅವಕಾಶ ಕೊಟ್ಟಿದ್ದರೆ, ಗಂಡಿನ ಪಾತ್ರವೂ ಪ್ರಾಸಂಗಿಕವಾಗಿ ಬಂದೇ ಬರುತ್ತಿತ್ತು. ನಾನು ವಿವರಿಸಲು ನೀನು ಅವಕಾಶವನ್ನೇ ಕೊಡದೆ ನೀನೇ ಕೆಲವು ತೀರ್ಮಾನಗಳಿಗೆ ಬಂದುಕೊಂಡು, ಆ ತೀರ್ಮಾನಗಳ ರೂಪವಾದ ಪ್ರಾಯಶ್ಚಿತ್ತವನ್ನೂ ನೀನೇ ನಿನಗೆ ವಿಧಿಸಿಕೊಂಡು, ಅದರ ಫಲವಾದ ಶಿಕ್ಷೆಯನ್ನೂ ನನಗೆ ವಿಧಿಸಿ ಮಾತು ಸಾಕು ಎಂದು ಮುಕ್ತಾಯ ಮಾಡಿದರೆ ನಾನೇನು ಮಾಡಲಿ ಹೇಳು?

ರಮೆ:– ಹಾಳಾಗಿ ಹೋಗಲಿ, ಇದೊಂದು ಬಾರಿಗೆ ನೀವು ಅದೇನು ಹೇಳಲಿಕ್ಕಿದೆಯೋ ಕೇಳಿಬಿಡುತ್ತೇನೆ. ಹೇಳಿ.

ಮುರಳಿ:– ಆಗಲಿ. ಈಗ ನೋಡು. ಸ್ತ್ರೀ ಜೀವನದ ಮೂಲೋದ್ದೇಶ ಪುರುಷ ಸಂಪರ್ಕವನ್ನು ಪಡೆಯುವದು ಮತ್ತು ಮಕ್ಕಳನ್ನು ಕೊಡುವದು ಎಂದು ಹೇಳಿದೆ.

ರಮೆ:– ಅದು ಸರಿ. ಆದರೆ ನಿನ್ನೆ ಮೊನ್ನೆ ಎಲ್ಲ ಹೇಳುತ್ತಿದ್ದಿರಿ, ಜೀವಿಯ ಉದ್ದೇಶ ಆತ್ಮಜ್ಞಾನ ಪಡೆಯುವದು, ಅದಕ್ಕಿಂತ ದೊಡ್ಡದಾದ ಉದ್ದೇಶ ಇಲ್ಲವೇ ಇಲ್ಲ ಎಂದೆಲ್ಲ? ಹಾಗಾದರೆ ಸ್ತ್ರೀ ಒಂದು ಜೀವಿಯೋ ಅಲ್ಲವೇನು?

ಮುರಳಿ:– ನೀನು ಒಂದನ್ನೊಂದಕ್ಕೆ ಬೆರಕೆ ಮಾಡಿಕೊಳ್ಳಬೇಡ. ಜೀವಿಯ ಪರಮೋದ್ದೇಶ ಆತ್ಮಜ್ಞಾನ ಎನ್ನುವದು ನಿಜ. ಪಾರಮಾರ್ಥಿಕದ ವಿಚಾರ ಬಂದಾಗ ಗಂಡು, ಹೆಣ್ಣು, ಪಾಪಿ, ಪುಣ್ಯವಂತ, ಮಾನವ, ದಾನವ, ನೆನ್ನೆ,

ನಾಳೆ, ಜನ್ಮ, ಪುನರ್ಜನ್ಮ ಮೊದಲಾದ ಯಾವ ಪ್ರಭೇದಗಳೂ ಕಾಣಿಸಿ ಕೊಳ್ಳುವದಿಲ್ಲ. ಆತ್ಮನಿಗೆ ಜಾತಿಯೂ ಇಲ್ಲ, ಲಿಂಗಭೇದವೂ ಇಲ್ಲ. ತರತಮಗಳ ವ್ಯತ್ಯಾಸವೂ ಇಲ್ಲ. ಇಂದು ನಾನು ಹೇಳುತ್ತಿರುವದು ಭೌತಿಕ ವಿಚಾರ. ಇಲ್ಲಿ ನಾವು ಕಾಣುವ ಭೇದವನ್ನು ಇಲ್ಲ ಎಂದು ಹೇಳುವಂತಿಲ್ಲ. ಹೆಣ್ಣಿನ ಸ್ಥಾನವನ್ನು ಗಂಡೂ, ಗಂಡಿನದನ್ನು ಹೆಣ್ಣೂ ಆಕ್ರಮಿಸುವಂತೆಯೇ ಇಲ್ಲ. ಪ್ರಕೃತಿ ಕೆಲವು ಸ್ಪಷ್ಟವಾದ, ಬದಲಾಗದ ಕಟ್ಟುಪಾಡುಗಳನ್ನು ಹಾಕಿಕೊಂಡಿದೆ. ಅದನ್ನು ನಾವು ಮೀರುವಂತಿಲ್ಲ. ಮೀರಿದರೆ ನಮ್ಮ ನಾಶ ನಿಶ್ಚಯ. ಈ ಅಂಶ ಭೌತಿಕ ಹಾಗೂ ಪಾರಮಾರ್ಥಿಕ – ಎರಡು ಕ್ಷೇತ್ರಗಳಿಗೂ ಅನ್ವಯಿಸುತ್ತದೆ. ಪ್ರಕೃತಿಯ ನಿಯಂತ್ರಣಕ್ಕೆ ಒಳಪಟ್ಟಿರುವ ನಮ್ಮ ಮನಸ್ಸು, ಅಹಂಕಾರಗಳನ್ನು ನಾವು ಪ್ರಕೃತಿ ಗುಣಕ್ಕೆ ವಿರೋಧವಾಗಿ ನಿಯಂತ್ರಿಸಿದಾಗ ನಮ್ಮ, ಅಂದರೆ, ನಾನು ಎನ್ನುವ ಅಹಂಕಾರದ ನಾಶವಾಗಿ ಪ್ರಕೃತಿಯಿಂದ ಅತೀತವಾಗಿರುವ ಆತ್ಮನ ಸಾಕ್ಷಾತ್ಕಾರ ಪಡೆಯುತ್ತೇವೆ. ಭೌತಿಕ ಜೀವನದಲ್ಲಾದರೂ ಇದೇ ಪರಿಸ್ಥಿತಿ ಇರುತ್ತದೆ. ಉದಾಹರಣೆಗೆ ನಮ್ಮ ದೇಹ, ಪ್ರಕೃತಿಯ ಒಂದು ಅಂಗ. ಪ್ರಕೃತಿಯ ಗುಣಕ್ಕೆ ವಿರೋಧವಾಗಿ ನಾವು ಅದನ್ನು ಬಳಸಿದರೆ ಅಥವಾ ಅದನ್ನು ನಿರ್ಲಕ್ಷ್ಯದಿಂದ ಕಂಡರೆ ಅದು ನಾಶ ಹೊಂದುತ್ತದೆ. ಹೀಗೆ, ಪ್ರಕೃತಿಯಲ್ಲಿ ಕಾಣುವ ಕೋಟಿ ಕೋಟಿ ವಿಷಯುಗಳ ಕುರಿತು ಪ್ರಕೃತಿಯ ನಿಯಮವೇನು ಎಂದು ತಿಳಿದು ಕೊಳ್ಳುವ ಮನುಷ್ಯನ ಯುಗಾಂತರಗಳ ಪರಿಶ್ರಮದ ಫಲವೇ ಶಾಸ್ತ್ರ, ಸಿದ್ಧಾಂತ, ರೂಢಿ, ವ್ಯವಸ್ಥೆ, ವಿಜ್ಞಾನ – ಎಲ್ಲವೂ. ಪ್ರಕೃತಿಯ ಇಂತಹ ಕಟ್ಟುನಿಟ್ಟಾದ ವ್ಯವಸ್ಥೆಯಲ್ಲಿ ಸ್ತ್ರೀಯ ಪಾತ್ರವೇನು ಎಂದು ತಿಳಿದುಕೊಳ್ಳುವಲ್ಲಿ ಮನುಷ್ಯ ಬಹಳ ವಾಗಿ ಏನೂ ಸಫಲನಾಗಿಲ್ಲ. ಆ ಕುರಿತು ಜಿಜ್ಞಾಸೆ ನಡೆಸಿದ ಪರಿಣಾಮವಾಗಿಯೇ ನಾನು ಹೇಳಿದುದು, ಈ ಪ್ರಕೃತಿಯ ವ್ಯವಸ್ಥೆಯಲ್ಲಿ ಸ್ತ್ರೀಯ ಪ್ರಧಾನ ಪಾತ್ರ ಮಕ್ಕಳನ್ನು ಕೊಡುವದು ಹಾಗೂ ಅದಕ್ಕೆ ಸಲುವಾಗಿ ಪುರುಷ ಸಂಪರ್ಕವನ್ನು ಪಡೆಯುವದು ಎಂದು.

ರಮೆ:– ಏನೋ ಭಾರೀ ದೊಡ್ಡದಾಗಿ ಮಾತನಾಡುತ್ತಿದ್ಧೀರೆಂದು ಅನಿಸುತ್ತದೆ. ಹೇಳಿ ನೋಡೋಣ.

ಮುರಳಿ:– ಪ್ರಕೃತಿಯಲ್ಲಿ ಸ್ತ್ರೀಯ ಪಾತ್ರವನ್ನು ತಿಳಿಯುವದಕ್ಕೆ ಮುಂಚೆ ಈ ಪ್ರಕೃತಿಯ ಮೂಲ ಸ್ವರೂಪವನ್ನು ತಿಳಿದುಕೊಳ್ಳುವದು ಒಳ್ಳೆಯದು. ಹಾಗೆ ಮಾಡಿದರೆ ಈ ಪ್ರಕೃತಿಯು ತನ್ನ ಯಾವ ಉದ್ದೇಶದ ಪೂರೈಕೆಗಾಗಿ ಸ್ತ್ರೀಯನ್ನು ಸೃಷ್ಟಿಸಿತು ಎಂಬದನ್ನು ತಿಳಿದುಕೊಳ್ಳಲು ಅನುಕೂಲವಾಗುತ್ತದೆ.

ಈಗ ಈ ಪ್ರಕೃತಿ ಎನ್ನುವದು ಏನು ಎಂಬದನ್ನು ನೋಡೋಣ. ಶಿವ–ಶಕ್ತಿ, ವಿಷ್ಣು – ಮಾಯೆ, ಪುರುಷ – ಪ್ರಕೃತಿ ಎಂದು ಮುಂತಾಗಿ ಹೇಳುವಲ್ಲಿ ಶಕ್ತಿ,

ಮಾಯೆ, ಪ್ರಕೃತಿ ಎಂಬ ಶಬ್ದಗಳು ಈ ಸೃಷ್ಟಿಯನ್ನೇ ಕುರಿತು ಹೇಳುವದು. ಇದರಲ್ಲಿ ಮಾಯೆ ಎಂಬದು ಪಾರಮಾರ್ಥಿಕ ವಿಚಾರವನ್ನು ಕುರಿತು ಚರ್ಚಿಸುವಾಗ ಈ ಸೃಷ್ಟಿಯನ್ನು ಕಾಣಬೇಕಾದ ರೀತಿಯನ್ನು ಹೇಳುತ್ತದೆ. ಅಂದರೆ ಯಾವದು ವಿವೇಕವನ್ನು ಮರೆಮಾಡುವದರ ಮೂಲಕ ಇಲ್ಲದುದನ್ನು ಇರುವಂತೆ ತೋರಿಸುತ್ತದೋ ಅದು ಮಾಯೆ ಎಂದು ಆ ಸಂದರ್ಭದಲ್ಲಿ ತಿಳಿದುಕೊಳ್ಳಬೇಕಾಗುತ್ತದೆ. ಅದರ ಬದಲು ಶಕ್ತಿ, ಪ್ರಕೃತಿ ಎಂಬ ಶಬ್ದಗಳು ಈ ಸೃಷ್ಟಿಯ ಭೌತಿಕ ರೂಪವನ್ನೂ, ಅದಕ್ಕೆ ಪಾರಮಾರ್ಥಿಕದೊಂದಿಗೆ ಇರುವ ಸಂಬಂಧವನ್ನೂ ತಿಳಿಸುತ್ತದೆ.

ಈ ಪೈಕಿ ಶಕ್ತಿ ಎಂಬದರ ಔಚಿತ್ಯವನ್ನು ನೋಡೋಣ. ಶಕ್ತಿ ಎಂದರೆ ಚೈತನ್ಯದ ಒಂದು ಅಂಶ ಎಂದು ಹೇಳಬಹುದು. ಬಳಕೆಯಲ್ಲಿ ಕೂಡ ನಾವು ಇದೇ ಅರ್ಥದಲ್ಲಿ ಈ ಶಬ್ದವನ್ನು ಉಪಯೋಗಿಸುತ್ತೇವೆ. ಒಬ್ಬಾತನ ಮಾತಿನ ಶಕ್ತಿ, ಬರವಣಿಗೆಯ ಶಕ್ತಿ, ಆಲೋಚನಾ ಶಕ್ತಿ, ನೆನಪಿನ ಶಕ್ತಿ, ದೇಹದ ಶಕ್ತಿ ಎಂದು ಮುಂತಾಗಿ ಹೇಳುತ್ತೇವೆ. ಮಾತಿನ ಶಕ್ತಿ ಎಂದಾಗ ಅದು ಒಬ್ಬಾತನಿಗೆ ಸೇರಿದುದು ಎಂದು ಅರ್ಥವಾಗುತ್ತದೆ. ಅಂದರೆ ಆತನ ಚೈತನ್ಯದ ಒಂದು ಅಂಶವು ಅವನ ಮಾತಿನ ಮೂಲಕ ಪ್ರಕಟಗೊಂಡು ಮಾತಿನ ಶಕ್ತಿಯ ರೂಪದಲ್ಲಿ ಹೊರಗೆ ಕಾಣಿಸಿಕೊಳ್ಳುತ್ತದೆ. ಅವನ ಮಾತನ್ನು ನಾವು ಮೆಚ್ಚಿಕೊಳ್ಳಬಹುದು, ಅದನ್ನು ಹೊಗಳಬಹುದು, ಅದರ ಪ್ರಭಾವಕ್ಕೆ ಒಳಗಾಗಬಹುದು. ಇಲ್ಲಿ ಅವನ ಮಾತು ಎಂಬದು ಅವನಿಗಿಂತ ಒಂದು ಪ್ರತ್ಯೇಕವಾದ ಅಸ್ತಿತ್ವವನ್ನು ಪಡೆದಂತೆ ನಾವು ಭಾವಿಸಿರುತ್ತೇವೆ. ನಾವು ಅವನ ಕುರಿತು ಬೇರೆ ಏನನ್ನೂ ಹೇಳದೆ ಅವನ ಮಾತನ್ನು ಮಾತ್ರವೇ ಹೇಳುತ್ತಿರುತ್ತೇವೆ. ಇದನ್ನು ಇನ್ನೂ ಸ್ಪಷ್ಟವಾಗಿ ಹೀಗೆ ಹೇಳಬಹುದು. ಒಬ್ಬಾತನ ಪ್ರಭಾವಶಾಲೀ ಮಾತುಗಳನ್ನು ಪುಸ್ತಕ ರೂಪದಲ್ಲಿ ಅಥವಾ ಧ್ವನಿಮುದ್ರಿಕೆಯ ರೂಪದಲ್ಲಿ ಸಂಗ್ರಹಿಸಿಟ್ಟಿರುತ್ತಾರೆ ಎಂದಿಟ್ಟುಕೊ. ಆ ಪುಸ್ತಕವನ್ನು ಓದುವಾಗ ಅಥವಾ ಆ ಧ್ವನಿ ಮುದ್ರಿಕೆಯನ್ನು ಕೇಳುವಾಗ ನಮ್ಮ ಮೇಲೆ ಅದರ ಪ್ರಭಾವ ಉಂಟಾಗುತ್ತದೆ. ಆಗ ನಾವು ಅವನ ಮಾತುಗಳನ್ನು ಮಾತ್ರವೇ ಗಮನದಲ್ಲಿರಿಸುತ್ತೇವೆ. ಆ ವ್ಯಕ್ತಿಯನ್ನು ನಾವು ನೋಡಿರಬಹುದು ಅಥವಾ ನೋಡದಿರಬಹುದು. ಅವನ ಮಾತುಗಳೇ ನಮಗೆ ಪ್ರಧಾನ ಹೊರತು ಆ ವ್ಯಕ್ತಿಯತ್ತ ನಾವು ಗಮನ ಹರಿಸದೆಯೇ ಇರಬಹುದು. ಹೀಗೆ, ಆತನ ಮಾತುಗಳಿಗೆ ಒಂದು ಪ್ರತ್ಯೇಕವಾದ ಅಸ್ತಿತ್ವವನ್ನು– ಆತನಿಂದಲೂ ಬೇರೆಯಾದ ಒಂದು ಅಸ್ತಿತ್ವವನ್ನು – ನಾವು ಇಟ್ಟುಕೊಂಡಿರುತ್ತೇವೆ. ಒಂದು ವಿಧದಲ್ಲಿ ಇದು ನಿಜ ಕೂಡ ಆಗಿರುತ್ತದೆ. ಏಕೆಂದರೆ ಆ ಮಾತಿಗೆ ಕಾರಣನಾದ ವ್ಯಕ್ತಿ ಒಂದು ಸ್ಥಳದಲ್ಲಿ ಇಲ್ಲದೆ ಹೋದರೂ ಕೂಡ ಅವನ

ಮಾತುಗಳು ಇತರರನ್ನು ಪ್ರಚೋದಿಸಿರುತ್ತವೆ. ಆದರೆ, ಹಾಗೆಂದು, ಆ ಮಾತುಗಳಿಗೆ ಆತನಿಂದ ಹೊರತಾದ ಒಂದು ಪ್ರತ್ಯೇಕ ಅಸ್ತಿತ್ವ ಇದೆಯೆ, ಇರಲು ಸಾಧ್ಯವೆ, ಎಂದರೆ ಇಲ್ಲ ಎಂದೇ ಹೇಳಬೇಕಾಗುತ್ತದೆ. ಏನೇ ಆದರೂ ಅವು ಒಬ್ಬಾತನ ಮಾತುಗಳು. ಆತನಿಗೆ ಸೇರಿದವುಗಳು. ಆತನ ಚೈತನ್ಯದ ಒಂದು ಅಂಶ. ಅವುಗಳ ಮೂಲ ಆತನಲ್ಲಿ. ಆತನಿಲ್ಲದೆ ಅವುಗಳಿಲ್ಲ. ಆತ ಆ ಮಾತುಗಳನ್ನು, ಅಂತಹ ಇತರ ಮಾತುಗಳನ್ನು ಉಂಟುಮಾಡಬಲ್ಲ, ತಿದ್ದಬಲ್ಲ, ನಿಯಂತ್ರಿಸಬಲ್ಲ. ಅವುಗಳು ಆತನಿಗೆ ಅಧೀನ. ಆ ಮಾತುಗಳು ಅವನ ಶಕ್ತಿಯ ಒಂದು ರೂಪ. ಎಷ್ಟೇ ಆದರೂ ಅವುಗಳು ಅವನ ಶಕ್ತಿ. ಆತ ಒಮ್ಮೆ ತಾನಾಡಿದ ಪ್ರಭಾವಶಾಲೀ ಮಾತುಗಳನ್ನು ಅನಂತರ ಹಿಂದಕ್ಕೆ ತೆಗೆದುಕೊಳ್ಳುವ ಅಥವಾ ಅವುಗಳಲ್ಲಿ ತನಗೆ ಈಗ ವಿಶ್ವಾಸವಿಲ್ಲವೆಂದು ನಿರಾಕರಿಸುವ ಸಾಧ್ಯತೆಯೇನೋ ಇದೆ. ಆದರೆ ಹಾಗೆ ಮಾಡುವದು ವ್ಯಕ್ತಿತ್ವಕ್ಕೆ ಕುಂದು ತರುತ್ತದೆ. ತನ್ನ ಮಾತುಗಳ ಶಕ್ತಿಯಿಂದ ಏನು ಪ್ರಭಾವ ಉಂಟಾಗಬೇಕೋ ಆ ಪ್ರಭಾವಕ್ಕೆ ಚ್ಯುತಿ ತಂದು ಕೇಳುವವರಲ್ಲಿ ಗೊಂದಲವನ್ನು, ಅವ್ಯವಸ್ಥೆಯನ್ನು ಉಂಟುಮಾಡುತ್ತದೆ. ಆದುದರಿಂದ ಹಾಗೆ ಮಾಡುವದು ನಿಯಮಕ್ಕೆ ವಿರೋಧವಾದುದು. ಸಣ್ಣ ವ್ಯಕ್ತಿಗಳು ಹೀಗೆ ಮಾತು ಮುರಿಯುತ್ತಾರೆ. ವ್ಯಕ್ತಿತ್ವದ ತೂಕ ಹೆಚ್ಚಿದಷ್ಟೂ ಹೀಗೆ ತಮ್ಮ ಮಾತುಗಳನ್ನು ತಾವೇ ಅನಂತರ ನಿರಾಕರಿಸುವದು ನಿಷಿದ್ಧವಾಗುತ್ತದೆ. ಪೂರ್ಣವಾಗಿ ವಿಕಾಸಗೊಂಡ ವ್ಯಕ್ತಿತ್ವದ ಲಕ್ಷಣವೆಂದರೆ ಒಮ್ಮೆ ತಾವು ಆಡಿದ ಮಾತನ್ನು ಕೊನೆಯವರೆಗೂ ಪಾಲಿಸುವದು. ಇದು ವಿಶ್ವದ ಅಥವಾ ಸೃಷ್ಟಿಯ ನಿಯಮಕ್ಕೆ ಅನುಗುಣವಾದುದಾಗಿರುತ್ತದೆ. ಆ ಮಾತಿಗೆ ನಿಜವಾದ ಶಕ್ತಿ ಇರುತ್ತದೆ.

ಶಿವ–ಶಕ್ತಿ ಎಂಬಲ್ಲಿ ಈ ಸೃಷ್ಟಿಯನ್ನು ಶಕ್ತಿ ಎಂದು ಕರೆಯುವದೂ ಇದೇ ಅರ್ಥದಲ್ಲಿ. ಶಿವ ಪ್ರಕಟಗೊಂಡಿರುವದು ಅವನ ಶಕ್ತಿಯ ರೂಪವಾದ ಈ ಸೃಷ್ಟಿಯಲ್ಲಿ. ಒಬ್ಬಾತನ ಮಾತಿನ ಶಕ್ತಿಯನ್ನು ನಾವು ಅನುಭವಿಸುವಾಗ ಆ ಮಾತುಗಳಿಗೆ ಮೂಲ ಕಾರಣನಾದವನನ್ನು ನಾವು ಕಲ್ಪಿಸಿಕೊಳ್ಳುವದು ಹೇಗೆ ಸಹಜವೋ, ಈ ಸೃಷ್ಟಿಯನ್ನು ಕಾಣುವ ನಾವು ಇದರ ಮೂಲವನ್ನು ಕಲ್ಪಿಸಿಕೊಳ್ಳಬೇಕಾದುದೂ ಅಷ್ಟೇ ಸಹಜವಾಗಬೇಕಾಗುತ್ತದೆ. ಈ ಸೃಷ್ಟಿಗೆ, ಅದರ ಮೂಲ ಕಾರಣನಾದವನಿಂದ ಪ್ರತ್ಯೇಕವಾದ ಅಸ್ತಿತ್ವ ಇರುವಂತೆ ನಮಗೆ ಕಾಣಿಸುವದು ಸಹಜ–ಒಬ್ಬಾತನ ಪ್ರಭಾವಶಾಲೀ ಮಾತುಗಳ ಧ್ವನಿ ಮುದ್ರಿಕೆಗೆ ಪ್ರತ್ಯೇಕವಾದ ಅಸ್ತಿತ್ವ ಇರುವಂತೆ ಕಾಣಿಸುವ ಹಾಗೆ. ಏಕೆಂದರೆ ಈ ಸೃಷ್ಟಿಗೆ ಕಾರಣನಾದವನ ಇರವನ್ನು ನಾವು ಕಂಡುಕೊಳ್ಳದೆ ಹೋದಾಗಲೂ ಕೂಡ ಅವನ ಶಕ್ತಿಯ ಪ್ರಭಾವಕ್ಕೆ ಪೂರ್ಣ ಒಳಗಾಗಿರುತ್ತೇವೆ. ಆದರೆ, ಹಾಗೆಂದು ಈ ಸೃಷ್ಟಿಗೆ, ಅದರ ಮೂಲ ಕಾರಣ

ನಾದವನಿಗಿಂತಲೂ ಪ್ರತ್ಯೇಕವಾದ, ಸ್ವತಂತ್ರವಾದ ಅಸ್ತಿತ್ವ ಇದೆಯೆ, ಇರಲು ಸಾಧ್ಯವೆ ಎಂದರೆ ನಿಜವಾಗಿ ಇಲ್ಲ. ಆತನದೇ ಆದ ಚೈತನ್ಯವನ್ನು ನಾವು ಈ ಸೃಷ್ಟಿಯ ರೂಪದಲ್ಲಿ ಕಾಣುತ್ತಿದ್ದೇವೆ. ಇದರ ಮೂಲ ಆತನಲ್ಲಿ–ಆತನಿಲ್ಲದೆ ಇದಿಲ್ಲ. ಆತನು ಈ ಸೃಷ್ಟಿಯನ್ನು–ಬಹುಶಃ ಇಂತಹ ಇತರ ಅನೇಕ ಸೃಷ್ಟಿಗಳನ್ನು–ಉಂಟುಮಾಡಬಲ್ಲ, ತಿದ್ದಬಲ್ಲ, ನಿಯಂತ್ರಿಸಬಲ್ಲ. ಇವುಗಳೆಲ್ಲ ಅವನಿಗೆ ಅಧೀನ. ಆದರೆ ಒಮ್ಮೆ ತಾನು ಉಂಟುಮಾಡಿದ ಈ ಸೃಷ್ಟಿಯನ್ನು ಪೂರ್ಣವಾಗಿ ನಿರಾಕರಿಸಿಬಿಡುವ ಕೆಲಸವನ್ನು ಅವನು ಮಾಡಲಾರ. ಹಾಗೆ ಮಾಡುವದು ಅವ್ಯವಸ್ಥೆಗೆ ಎಡೆಕೊಡುತ್ತದೆ. ಆದರೆ ಅವನು ವ್ಯವಸ್ಥೆಯ ಪೂರ್ಣರೂಪ. ಪೂರ್ಣವಾದ ವ್ಯವಸ್ಥೆ ಎನ್ನುವದು ಕೂಡ ಈ ಸೃಷ್ಟಿಯ ಒಂದು ಗುಣ. ಅವನ ಶಕ್ತಿ ಪ್ರಕಟಗೊಂಡಿರುವದೇ ಈ ಸೃಷ್ಟಿ ವ್ಯವಸ್ಥೆಯ ರೂಪದಲ್ಲಿ. ಹಾಗಾಗಿ ಇಲ್ಲಿ ಅವ್ಯವಸ್ಥೆಗೆ ಎಡೆ ಇಲ್ಲ. ಹಾಗಾಗಿ ಈ ಸೃಷ್ಟಿ ಇದ್ದಕ್ಕಿದ್ದಂತೆ ಅವನಿಂದ ನಿರಾಕರಿಸಲ್ಪಡುವದಿಲ್ಲ.

ಇನ್ನು ಪುರುಷ–ಪ್ರಕೃತಿ ಎಂಬಲ್ಲಿ...........

ರಮಾ:– ಇದರಲ್ಲಿ ಸ್ತ್ರೀಯ ವಿಷಯ ಎಲ್ಲಿ ಬಂತು ಅಂತ ? ಏನೋ ನಮ್ಮಗಳ ವಿಚಾರ ಹೇಳುತ್ತೀನಿ ಅಂತ ಹೊರಟು ಶಿವ–ಶಕ್ತಿ, ಪ್ರಕೃತಿ ಅಂತ ಉಪನ್ಯಾಸ ಮಾಡುತ್ತಿದ್ದೀರಿ ? ನನಗೆ ಬೇಸರವಾಗಿದೆ ಎನ್ನುವದಕ್ಕಾಗಿ ಬುದ್ಧಿವಂತಿಕೆಯಿಂದ ಮಾತು ಹೊರಳಿಸುತ್ತಿದ್ದೀರಿ ! ಇರಲಿ. ಈ ಮಾತುಗಳೂ ಚೆನ್ನಾಗಿವೆ. ಆದರೆ ಸಧ್ಯಕ್ಕೆ ಹೆಂಗಸರ ಕತೆ ಏನು ಹೇಳಿ.

ಮುರಳಿ:– ಹೇಳುತ್ತೇನೆ ರಮಾ. ಮಾತು ಬದಲಾಯಿಸುತ್ತಿಲ್ಲ. ಅದನ್ನು ಹೇಳುವದಕ್ಕೇ ಪ್ರಯತ್ನಿಸುತ್ತಿದ್ದೇನೆ. ಈ ಹಿನ್ನೆಲೆಯೆಲ್ಲ ತಿಳಿದುಕೊಂಡರೆ ಅನಂತರ ನಾನು ಹೇಳುವದು ನಿನಗೆ ಸುಲಭವಾಗಿ ಅರ್ಥವಾಗಬಹುದೆಂಬದಕ್ಕಾಗಿ ಇದನ್ನೆಲ್ಲ ಹೇಳುತ್ತಿದ್ದೇನೆ.

ರಮಾ:– ಹಾಗಾದರೆ ಸರಿ. ನೀವು ನುಣುಚಿಕೊಳ್ಳುವ ಹವ್ಯಾಸದವರಲ್ಲ ಎನ್ನುವದು ನನಗೆ ಗೊತ್ತು. ಇನ್ನೂ ಬೇಕಿದ್ದರೆ ಜಿಗಳೆಯ ಹಾಗೆ ಅಂಟಿಕೊಳ್ಳುವವರು. ಇದೇನಪ್ಪಾ ಈಗ ಅಂತ ಆಶ್ಚರ್ಯವಾಗಿತ್ತು ! ಆಗಲಿ ಹೇಳಿ.

ಮುರಳಿ:– ಈಗ ಪುರುಷ– ಪ್ರಕೃತಿ ಎಂಬ ಪ್ರಯೋಗಗಳಲ್ಲಿ ನಮಗೆ ಎಷ್ಟು ಅರ್ಥವಾಗುತ್ತದೆ ಎಂಬದನ್ನು ನೋಡೋಣ. ಪ್ರಕೃತಿ ಎಂಬದನ್ನು ಸ್ವಭಾವ ಎಂಬ ಅರ್ಥದಲ್ಲಿಯೇ ಇಲ್ಲಿ ಬಳಸಲಾಗಿದೆ. ಅರ್ಥಾತ್, ನಿರ್ಗುಣ, ನಿರಾಕಾರವಾದ ಬ್ರಹ್ಮವಸ್ತುವು ಈ ಸೃಷ್ಟಿಯ ರೂಪದಲ್ಲಿ ಹೀಗೆ ಕಾಣಿಸಿಕೊಳ್ಳುವದು ಅದರ ಪ್ರಕೃತಿ ಅಥವಾ ಸ್ವಭಾವ. ಈ ಪ್ರಕೃತಿಯೇ ಆ ಪುರುಷನ ಶಕ್ತಿ ಎಂದು ಹೇಳಿದರೂ ಇದೇ ಅರ್ಥವಾಗುತ್ತದೆ. ಶಿವ– ಶಕ್ತಿಯರ ಕುರಿತಾಗಿ ನಾವು ಹಿಂದೆ

ಏನೆಲ್ಲ ಚರ್ಚಿಸಿದೆವೋ ಅವೆಲ್ಲ ಈ ಪುರುಷ–ಪ್ರಕೃತಿ ಸಂಬಂಧಕ್ಕೂ ಅನ್ವಯವಾಗುತ್ತದೆ. ಈ ಸೃಷ್ಟಿ, ಅದರ ಬದಲಾಗದ ನಿಯಮಗಳು ಇತ್ಯಾದಿಗಳೆಲ್ಲವೂ ಪುರುಷನ ಪ್ರಕೃತಿ ಅಥವಾ ಸಹಜ ಸ್ವಭಾವ ಎನಿಸುತ್ತದೆ. ಈ ಸೃಷ್ಟಿ ಹೇಗಾಯಿತೆಂಬದನ್ನು ವಿವರಿಸುತ್ತಾ ಉಪನಿಷತ್ತಿನಲ್ಲಿ ಆ ಸದ್ವಸ್ತುವು ತಾನು ಹಲವಾಗಬೇಕೆಂದು ಸಂಕಲ್ಪಿಸಿದುದರಿಂದ ಸೃಷ್ಟಿಯಾಯಿತು ಎಂದು ಹೇಳಲಾಗಿದೆ. ಹಾಗೆ ಸಂಕಲ್ಪಿಸುವದು, ಒಂದು ಹಲವಾಗುವದು, ಈ ಹಲವು ಆ ಒಂದರದೇ ಅವಿಭಾಜ್ಯ ಅಂಗವಾಗಿದ್ದರೂ, ಅದರಲ್ಲಿಯೇ ತಮ್ಮ ಮೂಲವನ್ನು ಪಡೆದಿದ್ದರೂ, ಅದಿಲ್ಲದ ಸ್ವಂತವಾದ ಅಸ್ತಿತ್ವವನ್ನು ಪಡೆಯದಿದ್ದರೂ ಅದನ್ನು ಮರೆಮಾಚಿ ತಾನೇ ಒಂದು ಸ್ವತಂತ್ರವಾದ ಅಸ್ತಿತ್ವವನ್ನು ಪಡೆದಂತೆ ಕಾಣಿಸಿಕೊಳ್ಳುವದು– ಇದೆಲ್ಲವೂ ಆ ಪುರುಷನ ಪ್ರಕೃತಿಗೇ ಸೇರಿದ ಅಂಶಗಳಾಗಿವೆ.

ಸೃಷ್ಟಿಯ ಕುರಿತು ಈಗ ಇಷ್ಟನ್ನು ನೋಡಿದ್ದೇವೆ. ಶಿವ ಅಥವಾ ಸದ್ವಸ್ತುವನ್ನು ಪುರುಷ ವಾಚಕದಿಂದಲೂ, ಶಕ್ತಿ ಅಥವಾ ಪ್ರಕೃತಿಯನ್ನು ಸ್ತ್ರೀ ವಾಚಕದಿಂದಲೂ ಕರೆದಿದ್ದಾರೆ. ನಾವು ಈಗ ಸ್ತ್ರೀಯ ಮೂಲೋದ್ದೇಶವನ್ನು ಕುರಿತು ಜಿಜ್ಞಾಸೆ ನಡೆಸುತ್ತಿದ್ದೇವೆ. ಆದುದರಿಂದ ಒಮ್ಮೆಗೆ ಈ ಪ್ರಕೃತಿಯ ಮೂಲಾಧಾರವಾದ ಬ್ರಹ್ಮವಸ್ತುವನ್ನು ಮರೆತು ಸ್ವತಂತ್ರ ರೂಪದಲ್ಲಿ ನಮಗೆ ಕಾಣಿಸಿಕೊಳ್ಳುತ್ತಿರುವ ಈ ಸೃಷ್ಟಿಯನ್ನಷ್ಟೇ ವಿಮರ್ಶಿಸೋಣ.

ಈ ಸೃಷ್ಟಿಯ ಉಗಮವೇನೋ ಮೇಲೆ ಹೇಳಿದಂತೆ ಆಯಿತು. ಇದರ ಮುಂದುವರಿಕೆ ಅಥವಾ ವ್ಯವಸ್ಥೆಯ ನಿಯಮ ಯಾವದು ? ಒಂದು ಹಲವಾರು ಆದಾಗ ಸೃಷ್ಟಿ ಹೇಗೆ ಪ್ರಾರಂಭವಾಯಿತೋ, ಅದೇ ಸಂಕಲ್ಪಕ್ಕನುಗುಣವಾಗಿಯೇ ಸೃಷ್ಟಿಯ ಮುಂದುವರಿಕೆ ಕೂಡ ನಡೆಯುತ್ತದೆ. ಇದರಲ್ಲಿ ಎರಡು ಪ್ರಧಾನ ಅಂಶಗಳು – ಬದಲಾವಣೆ ಇಲ್ಲದ ಆ ಒಂದು ವಸ್ತು ಹಲವು ಆಗುವಾಗ ಬದಲಾವಣೆ ಪ್ರಾರಂಭವಾದುದು ಮತ್ತು ಒಂದು ಇದ್ದದ್ದು ಹಲವು ಆದುದು. ಸೃಷ್ಟಿಯ ಪ್ರಾರಂಭದ ಈ ಸಂಕಲ್ಪವೇ ಸೃಷ್ಟಿಯ ಮುಂದುವರಿಕೆಯ ರಹಸ್ಯವೂ ಆಗಿದೆ. ಅಂದರೆ, ಪ್ರತಿಕ್ಷಣದಲ್ಲಿಯೂ ಬದಲಾವಣೆ, ಒಂದು ಹಲವಾಗುವದು – ಈ ಎರಡು ಗುಣಗಳು ಪ್ರಕೃತಿಯ ಮೂಲ ತತ್ವಗಳಂತಿವೆ. ಅದನ್ನು ನಾವು ಕಾಣಲೂ ಬಹುದಾಗಿದೆ. ನಮಗೆ ಈ ವಿಶ್ವದಲ್ಲಿ ಕಾಣಿಸುವ ಯಾವ ಒಂದೇ ವಸ್ತುವಾದರೂ ಬದಲಾಗದೆ ಇಲ್ಲ. ಪ್ರತಿ ಕ್ಷಣದಲ್ಲಿ ಅದು ಬೆಳೆಯುವದು, ಚಲಿಸುವದು ಅಥವಾ ನಾಶವಾಗುತ್ತಿರುವದನ್ನು ನಾವು ಊಹಿಸಬಹುದು. ಈ ಬದಲಾಗುವ ಗುಣದ ಅಂಗವಾಗಿಯೇ ಇಲ್ಲದುದು ಕಾಣಿಸಿಕೊಳ್ಳುವದು, ಇರುವದು ಕಣ್ಮರೆಯಾಗುವದೂ ಕೂಡ ಈ ಪ್ರಕೃತಿಯಲ್ಲಿ ನಡೆಯುತ್ತಿರುವದನ್ನು ಕಾಣುತ್ತಿದ್ದೇವೆ. ಜೀವಿಗಳಿಗೆ ಸಂಬಂಧಿಸಿ ಈ ಗುಣಗಳನ್ನು ಹೇಳುವಾಗ ಹುಟ್ಟು, ಬೆಳವಣಿಗೆ, ಸಾವು ಎಂದು

ಹೇಳುತ್ತೇವೆ. ಅಂದರೆ, ಪ್ರಕೃತಿಯ ಪರಮ ರಹಸ್ಯವು ಸದಾ ಬದಲಾಗುತ್ತಿರುವದೆಂದೂ, ಆ ಬದಲಾವಣೆಯ ಪರಿಣಾಮವಾಗಿ ಇಲ್ಲದುದು ಉಂಟಾಗುವದು, ಉಂಟಾದುದು ಪುನಃ ಬದಲಾಗುತ್ತಾ ಕಣ್ಮರೆಯಾಗುವವರೆಗೂ ಮುಂದುವರಿಯುವದೆಂದೂ ಹೇಳಿದಂತಾಯಿತು. ಹುಟ್ಟು, ಬೆಳವಣಿಗೆ, ಸಾವು – ಜೀವಿಗಳ ಕುರಿತಾಗಿ ಈ ಮೂರು ವಿಷಯಗಳು ಪ್ರಕೃತಿಯ ಮೂಲ ತತ್ವಕ್ಕೆ ಸೇರಿದವುಗಳು ಎಂದಂತಾಯಿತು.

ಈ ಪೈಕಿ ತನ್ನ ಮೂಲ ತತ್ವವಾದ ಹುಟ್ಟು ಮತ್ತು ಬೆಳವಣಿಗೆಗಳ ಹೊಣೆಗಾರಿಕೆಯನ್ನು ನಿರ್ವಹಿಸಲು ಪ್ರಕೃತಿಯು ಸೃಷ್ಟಿಸಿಕೊಂಡಿರುವ ಗುಣಾಂಶವೇ ಸ್ತ್ರೀ. ಹೊಸ ಹುಟ್ಟಿನಲ್ಲಿ ಪುರುಷನಿಗೂ ಸ್ತ್ರೀಯಷ್ಟೇ ಪ್ರಾಧಾನ್ಯವಿರುವಂತೆ ಕಂಡರೂ ಪುರುಷನು ಸ್ತ್ರೀಯ ಉದ್ದೇಶವನ್ನು ಪೂರೈಸಲು ನೆರವಾಗುವ ಉಪಕರಣವಾಗಿ ಮಾತ್ರ ಇರುತ್ತಾನೆ. ಸ್ತ್ರೀಯ ದೇಹ, ಮನಸ್ಸುಗಳೆರಡನ್ನೂ ಪ್ರಕೃತಿಯು ತನ್ನ ಉದ್ದೇಶ ಸಾಧನೆಗೆ ಅನುಕೂಲವಾಗಿರುವಂತೆಯೇ ರಚಿಸಿದೆ. ಹಾಗಾಗಿಯೇ ಅವಳು ಪುರುಷನಲ್ಲಿ ಮತ್ತು ತನ್ನ ಮಕ್ಕಳಲ್ಲಿ ತನ್ಮಯತೆ ಪಡೆಯಬಲ್ಲಳು. ಅವಳ ಜೀವನದ ಮೂಲೋದ್ದೇಶವೇ ಅದಾಗಿರುವದರಿಂದ ಅವಳು ಗಂಡನ್ನು ಆಕರ್ಷಿಸುವದರಲ್ಲಿ, ಗಂಡನ್ನು ಪಡೆಯುವದರಲ್ಲಿ, ಪಡೆದ ಗಂಡನ್ನು ಉಳಿಸಿಕೊಳ್ಳುವದರಲ್ಲಿ, ಅಥವಾ ಅನುಕೂಲನಾದ ಹೊಸ ಗಂಡನ್ನು ಹುಡುಕುವದರಲ್ಲಿ, ಮಕ್ಕಳನ್ನು ಪೋಷಿಸುವದರಲ್ಲಿ ತನ್ನ ಜೀವನದ ಸಂಪೂರ್ಣ ಸಾರ್ಥಕ್ಯವನ್ನು ಕಂಡುಕೊಳ್ಳಬಲ್ಲಳು. ಗಂಡಿಗೆ ಹೀಗಿಲ್ಲ. ಸೃಷ್ಟಿ ಕಾರ್ಯವನ್ನು ಮುಂದುವರಿಸುವ ಗುರುತರ ಜವಾಬ್ದಾರಿಕೆಯನ್ನು ಹೊತ್ತಿರುವ ಹೆಣ್ಣಿನ ಸೃಷ್ಟಿ ಕಾರ್ಯಕ್ಕೆ ದೂರದಲ್ಲೊಮ್ಮೆ ನೆರವಾಗುವದು ಹೊರತಾಗಿ ಗಂಡಿಗೆ ಈ ಸೃಷ್ಟಿಯಲ್ಲಿ ಬೇರೆ ಸ್ಪಷ್ಟವಾದ ಉದ್ದೇಶವೇ ಇಲ್ಲ. ಅವನಿಗೆ ಆ ರೀತಿ ಸ್ಪಷ್ಟವಾದ ಉದ್ದೇಶ ತಿಳಿಯದುದರಿಂದಲೇ ಅವನು ಇಲ್ಲಿ ಸಾವಿರ ಹವ್ಯಾಸಗಳನ್ನು ಬೆಳೆಸಿಕೊಂಡಿದ್ದಾನೆ. ಕಲೆ, ವಿದ್ಯೆ, ಸಮಾಜ, ಸರಕಾರ, ಸಂಘಟನೆ, ಶಾಸ್ತ್ರ, ಉದ್ಯೋಗ, ವಿಜ್ಞಾನ ಎಂದು ಮುಂತಾಗಿ ನಾವು ಯಾವದನ್ನೆಲ್ಲ ಜೀವನದ ಸೌಕರ್ಯಗಳೆಂದೋ, ನಾಗರಿಕತೆಯ ಲಕ್ಷಣಗಳೆಂದೋ, ಅಭಿವೃದ್ಧಿಯ ಲಕ್ಷಣಗಳೆಂದೋ ಕರೆಯುತ್ತೇವೋ, ಅವನ್ನೆಲ್ಲ ತನ್ನ ಜೀವನದ ಗುರಿ ಎಂದು ಗಂಡು ಸಾಧಿಸಿದುದಲ್ಲ; ಅವನಿಗೆ ಜೀವನದಲ್ಲಿ ಯಾವದೇ ಸ್ಪಷ್ಟ ಗುರಿ ಇಲ್ಲದುದರಿಂದ ಅವನು ಸಾಧಿಸಲು ಸಾಧ್ಯವಾದುದು. ಹಾಗಾಗಿಯೇ ಗಂಡಿನ ಹವ್ಯಾಸಗಳು ಸಾವಿರಾರು ಆಗಿರುವದು ಕೂಡ. ಈ ಅಂಶವನ್ನು ಪ್ರಾಣಿ ವರ್ಗದಲ್ಲಿ ಚೆನ್ನಾಗಿ ಕಂಡುಕೊಳ್ಳಬಹುದು. ಹೆಣ್ಣಿಗೆ ಗರ್ಭ ಧರಿಸುವದು, ಗರ್ಭ ಪೋಷಣೆ ಮಾಡುವದು, ಹೊಸ ಜೀವಿಯನ್ನು ಹೆರುವದು, ಅದು ಸ್ವತ್ಯಂತ್ರವಾಗಿ ಬದುಕಲು ಸಾಧ್ಯವಾಗುವವರೆಗೆ ತನ್ನ ಪ್ರಾಣವನ್ನಾದರೂ ಫಣವಿಟ್ಟು ಅದನ್ನು

ಪೋಷಿಸುವದು–ಹೀಗೆ ಗುರುತರವಾದ ಕೆಲಸಗಳಿವೆ. ಗಂಡಿಗೆ, ಹೆಣ್ಣಿನ ಬಯಕೆಗೆ ಅನುಗುಣವಾಗಿ ಹೆಣ್ಣಿಗೆ ಸಂಪರ್ಕವನ್ನು ಕೊಡುವದು ಹೊರತು ಬೇರೆ ಯಾವ ಹೊಣೆಗಾರಿಕೆಯೂ ಇಲ್ಲ. ಮಾನವ ಪ್ರಾಣಿಗಳಿಗಿಂತ ಹೆಚ್ಚು ಬುದ್ಧಿಶಾಲಿಯಾದುದರಿಂದ ಗಂಡಸು ತನಗೆ ಯಾವ ಹೊಣೆಗಾರಿಕೆಯೂ ಇಲ್ಲದ ತನ್ನ ವಿರಾಮವನ್ನು ಬಳಸಿಕೊಂಡು ಸಾವಿರ ಹವ್ಯಾಸಗಳನ್ನು ಸೃಷ್ಟಿಸಿಕೊಂಡಿದ್ದಾನೆ. ಅವನು ಈ ಮೂಲಕ ಪ್ರಕೃತಿಯ ಯಾವ ಉದ್ದೇಶವನ್ನೂ ಪೂರೈಸುತ್ತಿಲ್ಲ ಎಂಬದನ್ನು ನಾವು ಗಮನಿಸಬೇಕು. ಅವನು ವಿಜ್ಞಾನದ ಪ್ರಭಾವದಿಂದ ಚಂದ್ರಲೋಕಕ್ಕೆ ಹೋಗಲಿ, ಅದರಾಚೆಗೇ ಹೋಗಲಿ, ಅವನು, ತನಗೆ ಹೇರಳವಾಗಿರುವ ವಿರಾಮದ ವೇಳೆಯನ್ನು ಬಳಸಿಕೊಂಡು ಈ ವಿಶಾಲವಾದ ಪ್ರಕೃತಿಯೊಳಗೆ ಹರಿದಾಡಿದಂತಾಯಿತೇ ಹೊರತು ಬೇರೇನೂ ಮಾಡಿದಂತಾಗುವದಿಲ್ಲ. ಅವನು ಅದು ಏನನ್ನೇ ಸಾಧಿಸಿ ಅವನ್ನೆಲ್ಲ ಅದ್ಭುತ ಎಂದು ಕರೆದುಕೊಂಡು ಸಂತೋಷಪಟ್ಟರೂ ಕೂಡ, ಪ್ರಕೃತಿ ಅವನಿಗೆ ನಿಯಮಿಸಿರುವ, ಅವನ ದೃಷ್ಟಿಯಲ್ಲಿನ ಸಣ್ಣ ಕಾರ್ಯ ಏನಿದೆಯೋ–ಹೆಣ್ಣಿಗೆ ಸಂಪರ್ಕ ಕೊಡುವ–ಆ ಕಾರ್ಯದಿಂದ ಅವನು ಬಿಡುಗಡೆ ಪಡೆಯಲು ಅವನಿಂದ ಸಾಧ್ಯವಾಗಿಲ್ಲ.

ರಮೆ:– ಹಾಗಾದರೆ, ಪ್ರಕೃತಿಯ ಉದ್ದೇಶ ಪೂರೈಕೆಯಲ್ಲಿ ಗಂಡಿಗಿಂತ ಹೆಣ್ಣಿನದೇ ಪ್ರಧಾನ ಪಾತ್ರ ಎಂದಾದರೆ ಸಾರ್ವತ್ರಿಕವಾಗಿ ಗಂಡು ಹೆಣ್ಣಿನ ಮೇಲೆ ಪ್ರಭುತ್ವ ಪಡೆಯಲು ಹೇಗೆ ಸಾಧ್ಯವಾಯಿತು ? ಪ್ರಕೃತಿಯ ಉದ್ದೇಶದ ಪ್ರಕಾರ ಗಂಡಿಗೆ ವಿನೀತ ಸ್ವಭಾವವೂ, ಹೆಣ್ಣಿಗೆ ಪ್ರಭುತ್ವ ಮಾಡುವ ಸ್ವಭಾವವೂ ಇರಬೇಕಾಗುತ್ತದಲ್ಲ !

ಮುರಳಿ:– ಅದೂ ಒಂದು ಚಮತ್ಕಾರವೇ. ನಿಜವಾಗಿ ಇಂದಿಗೂ ಪ್ರಭುತ್ವ ನಡೆಸುತ್ತಿರುವವಳು ಸಾರ್ವತ್ರಿಕವಾಗಿ ಹೆಣ್ಣೇ. ಹೆಣ್ಣು ವಿನಯವನ್ನು ತೋರಿಸಿ, ಅಧೀನತೆಯನ್ನು ಒಪ್ಪಿಕೊಂಡ ಮನೋಭಾವವನ್ನು ತೋರಿಸಿ ತನಗೆ ಬೇಕಾದ ಗಂಡನ್ನು ತಾನು ಗೆದ್ದುಕೊಂಡು ಅವನಿಂದ ಗರ್ಭ ಧರಿಸುತ್ತಾಳೆ. ಮಾತ್ರವೇ ಅಲ್ಲದೆ, ಮುಂದೆ ಹುಟ್ಟುವ ಮಕ್ಕಳ ಪೋಷಣೆಯನ್ನೂ ಅವನ ತಲೆಗೆ ಕಟ್ಟುತ್ತಾಳೆ. ಗಂಡು ತಾನು ಯಜಮಾನನೆಂಬ ಒಣ ಅಹಂಕಾರಕ್ಕೆ ಬಲಿಯಾಗಿ ಆ ಅಹಂಕಾರದ ಫಲ ಎಂಬಂತೆ ತಾನು ಸಂಪರ್ಕ ಪಡೆದ ಹೆಣ್ಣಿನ ರಕ್ಷಣೆಯನ್ನೂ, ಅವಳ ಮಕ್ಕಳ ರಕ್ಷಣೆಯನ್ನೂ ಮೂಕ ಪಶುವಿನಂತೆ ಹೊತ್ತುಕೊಳ್ಳುತ್ತಾನೆ.

ರಮೆ:– ಹಾಗಾದರೆ ಈ ವಿವಾಹದ ವ್ಯವಸ್ಥೆ ಎನ್ನುವದು ಪ್ರಕೃತಿಯ ಉದ್ದೇಶಕ್ಕೆ ಅನುಗುಣವಾಗಿಯೇ ಇದೆ ಎಂದಂತಾಯಿತು.

ಮುರಳಿ:– ಇಲ್ಲ. ಇದು ಗಂಡು ಮಾಡಿಕೊಂಡಿರುವ, ಹೆಣ್ಣು ಒಪ್ಪಿ

ಕೊಂಡಿರುವ ವ್ಯವಸ್ಥೆ ಅಷ್ಟೆ. ಕೇವಲ ಪ್ರಕೃತಿಯ ಉದ್ದೇಶದ ಪೂರೈಕೆಗಷ್ಟೇ ಆದರೆ ಯಾವದೇ ಹೆಣ್ಣು ಯಾವಾಗ ಬೇಕಾದರೂ ತನಗೆ ಒಪ್ಪಿಗೆಯಾಗುವ ಯಾವದೇ ಗಂಡನ್ನು ಕೂಡಿಕೊಳ್ಳಲು ಸಾಧ್ಯತೆ ಇರುವದೇ ಸರಿಯಾಗುತ್ತದೆ.

ರಮೆ:– ಏನನ್ನುತ್ತೀರಿ ನೀವು? ಹಾಗಾದರೆ ಈ ವಿವಾಹ, ಪಾತಿವ್ರತ್ಯ ಇವುಗಳೆಲ್ಲ ಅರ್ಥವಿಲ್ಲದವುಗಳು ಎಂದು ಹೇಳುತ್ತೀರೇನು?

ಮುರಳಿ:– ಅರ್ಥವಿಲ್ಲದವುಗಳು ಎಂದು ಹೇಳುವದಿಲ್ಲ. ಅವುಗಳು ಪ್ರಕೃತಿಯ ಉದ್ದೇಶ ಸಾಧನೆಗೆ ಆವಶ್ಯಕವಾದ–ಹಾಗಾಗಿ ಅದಕ್ಕೆ ಅನುಗುಣವಾದ–ವ್ಯವಸ್ಥೆಗಳಲ್ಲ ಎಂದು ಹೇಳಿದೆ, ಅಷ್ಟೆ.

ರಮೆ:– ಹಾಗಾದರೆ ನಾವು ಈ ವ್ಯವಸ್ಥೆಗಳನ್ನೆಲ್ಲ ಬಿಟ್ಟು ಪ್ರಾಣಿಗಳಂತೆ ಬದುಕುವದೇ ಹೆಚ್ಚು ಅಪೇಕ್ಷಣೀಯ ಎನ್ನುತ್ತೀರೇನು?

ಮುರಳಿ:– ಇಲ್ಲ. ಅಪೇಕ್ಷಣೀಯ ಖಂಡಿತ ಅಲ್ಲ. ಮಾನವ ನಿರ್ಮಿಸಿ ಕೊಂಡಿರುವ ಗಂಡು–ಹೆಣ್ಣುಗಳ ಸಂಬಂಧದ ವ್ಯವಸ್ಥೆ ಇನ್ನು ಕೂಡ ಪರಿಪೂರ್ಣ ವಾದ ಸುವ್ಯವಸ್ಥೆ ಎನ್ನುವಂತಿಲ್ಲ. ಹಲವು ದೇಶಗಳಲ್ಲಿ ಹಲವು ಕಾಲಗಳಲ್ಲಿ ಮಾನವನ ಈ ಯುಗಾಂತರಗಳ ದೀರ್ಘ ಇತಿಹಾಸದಲ್ಲಿ ಈ ಗಂಡು–ಹೆಣ್ಣುಗಳ ಸಂಬಂಧವು ಯಾವದು ಸರಿ ಎಂಬದರ ಕುರಿತು ಬೇರೆ ಬೇರೆ ಪ್ರಯೋಗಗಳು ನಡೆದಿವೆ, ಇನ್ನೂ ನಡೆಯುತ್ತಿವೆ. ಒಮ್ಮೆ ಒಬ್ಬಳು ಸ್ತ್ರೀ ಒಬ್ಬನೇ ಪುರುಷನ ಸಂಪರ್ಕ ಪಡೆಯಬೇಕು ಎಂಬದು ಕಟ್ಟುನಿಟ್ಟಾದ ವಿಧಿ ಎನಿಸಿದರೆ ಇನ್ನೊಮ್ಮೆ ಹೆಣ್ಣು ತನಗೆ ಬೇಕಾದಾಗ ಯಾವದೇ ಗಂಡನ್ನು ಕೂಡುವ ಸಾಧ್ಯತೆ ಇರಬೇಕೆಂಬ ಅಭಿಪ್ರಾಯಕ್ಕೆ ಮೇಲುಗೈಯಾಗುತ್ತದೆ. ಪ್ರಕೃತಿಯ ಆಶೀರ್ವಾದ ಇರುವದು ಎರಡನೆಯ ಪರಿಸ್ಥಿತಿಗೇ ಆದುದರಿಂದ, ಅದನ್ನು ಮೀರಿ ಮಾನವ ತನ್ನ ಒಂದು ವ್ಯವಸ್ಥೆಯನ್ನು ಸ್ಥಾಪಿಸಬೇಕೆಂದು ಪಡುತ್ತಿರುವ ಪ್ರಯತ್ನವು ಈ ವರೆಗೂ ಪೂರ್ಣವಾಗಿ ಯಶಸ್ವಿಯಾಗಿಲ್ಲ.

ರಮೆ:– ಅದು ಸರಿ. ಹಾಗಿದ್ದರೆ ಪ್ರಕೃತಿಯ ಉದ್ದೇಶಕ್ಕೆ ವಿರೋಧವಾಗಿ ಮಾನವ ಇಂತಹ ವ್ಯವಸ್ಥೆಯನ್ನು ಏಕೆ ಮಾಡಿಕೊಂಡ?

ಮುರಳಿ:– ಅದನ್ನೇ ಹೇಳುತ್ತಿದ್ದೇನೆ. ವಿವಾಹದ ವ್ಯವಸ್ಥೆಯಲ್ಲಿ ಒಂದು ರಹಸ್ಯ ಅಡಗಿದೆ. ನಾನು ಹಿಂದೆ ಹೇಳಿದ ಪ್ರಕಾರ, ಬದಲಾವಣೆಯು ಪ್ರಕೃತಿಯ ಮೂಲ ಸ್ವಭಾವ. ಆ ಮೂಲ ಸ್ವಭಾವಕ್ಕೆ ಅನುಗುಣವಾಗಿ ನಮಗೆ ಕಾಣಿಸು ವಂತೆ ನಡೆಯುವ ಕ್ರಿಯೆಗಳು ಹುಟ್ಟು, ಬೆಳವಣಿಗೆ ಮತ್ತು ಸಾವು. ಈ ಪೈಕಿ ಹುಟ್ಟು, ಬೆಳವಣಿಗೆಗಳನ್ನು ಸಾಧಿಸಲು ಪ್ರಕೃತಿಯು ಹೆಣ್ಣನ್ನು ಪ್ರಧಾನ ಅಂಗ ವಾಗಿ ಸೃಷ್ಟಿಸಿತು. ಬದಲಾವಣೆ ಇಲ್ಲದ ಬ್ರಹ್ಮ ವಸ್ತುವು ಬದಲಾವಣೆಯೇ

ಸ್ವಭಾವವಾಗಿರುವ ಪ್ರಕೃತಿಯಾಗಿ ಪ್ರಕಟಗೊಂಡಾಗ ಅದರ ಆ ಶಕ್ತಿಯನ್ನು ಸ್ತ್ರೀ ರೂಪದಲ್ಲಿ ನಾವು ಕಾಣುವದಕ್ಕೆ ಅನುಗುಣವಾಗಿ ಆ ಬದಲಾವಣೆಯು ಮುಂದುವರಿಕೆಯು ವ್ಯವಸ್ಥೆ ಕೂಡ ಸ್ತ್ರೀ ರೂಪದಲ್ಲಿಯೇ ನಡೆಯುವಂತೆ ಆಗಿರುವದು ಕೇವಲ ಸಹಜ. ಹೀಗೆ ಪ್ರಕೃತಿಯು ಬದಲಾವಣೆಯ ಅಂಶಗಳಾದ ಹುಟ್ಟು ಮತ್ತು ಬೆಳವಣಿಗೆಗಳ ಜವಾಬ್ದಾರಿಕೆಗಳನ್ನು ಸ್ತ್ರೀ ವಹಿಸಿಕೊಂಡಳು. ಅದಕ್ಕೆ ಬೇಕಾದ ಬಲವನ್ನು ಅವಳು ಪ್ರಕೃತಿಯಿಂದ ಪಡೆದುಕೊಂಡಳು. ಆದರೆ ಬದಲಾವಣೆಯೇ ಗುಣವಾಗಿರುವ ಪ್ರಕೃತಿಯಲ್ಲಿ ಅವಳ ಈ ಬಲ ಕೂಡ ಬದಲಾವಣೆಗೆ ಒಳಗಾಗಲೇಬೇಕಾಯಿತು. ಅಂದರೆ ಹುಟ್ಟು ಮತ್ತು ಬೆಳವಣಿಗೆಗಳನ್ನು ನಿರ್ವಹಿಸುವ ಅವಳ ಬಲವು ಅವಳಲ್ಲಿ ಚೆನ್ನಾಗಿ ಇರುವಷ್ಟು ಕಾಲ ಅವಳು ಆ ವಿಚಾರದಲ್ಲಿ ಮಗ್ನಳಾಗಿರಬಹುದಾಗಿದ್ದರೂ ಆ ಬಲವನ್ನು ಅವಳು ಕಳೆದುಕೊಂಡ ಮೇಲೆ ಅವಳಿಗೆ ಈ ಪ್ರಕೃತಿಯಲ್ಲಿ ಮಾಡುವಂತಹ ಕಾರ್ಯವೇ ಯಾವದೂ ಇಲ್ಲದಂತಾಗುವದು ಸಹಜವೆನಿಸಿತು. ಅವಳು ಈ ಬಲವನ್ನು ಪಡೆದುಕೊಂಡಿರಬಹುದಾದ ಅವಳ ಯೌವನದಲ್ಲಿಯೇ ಆದರೂ ಅವಳ ರೋಗ, ಇತರರಿಂದ ಅಪಾಯ ಮೊದಲಾದವುಗಳನ್ನು ಮೀರಲೂ ಸಾಧ್ಯವಾಗುತ್ತಿರಲಿಲ್ಲ. ಹೀಗೆ, ಅವಳು ಪ್ರಕೃತಿಯ ಉದ್ದೇಶವನ್ನು ಸಾಧಿಸಲು ಅಸಮರ್ಥಳಾದಾಗ ಅವಳು ಶೂನ್ಯವಾದ ಬಾಳನ್ನು, ನಿರರ್ಥಕವಾದ ಬಾಳನ್ನು, ತಿರಸ್ಕೃತವಾದ ಬಾಳನ್ನು ನಡೆಸಬೇಕಾಗಿ ಬರುತ್ತಿತ್ತು.

ರಮೆ:– ಆದರೆ ತನ್ನ ಉದ್ದೇಶವನ್ನು ಪೂರೈಸಿದ ಹೆಣ್ಣು ಈಗ ಆ ಉದ್ದೇಶವನ್ನು ಪೂರೈಸಲಾಗದ ಪರಿಸ್ಥಿತಿಯಲ್ಲಿ ಸಿಕ್ಕಿದಾಗ ಪ್ರಕೃತಿಯೇಕೆ ಆಕೆಯಲ್ಲಿ ನಿರ್ದಯವಾಯಿತು ?

ಮುರಳಿ:– ಪ್ರಕೃತಿಗೆ ದಯವೂ ಇಲ್ಲ, ನಿರ್ದಯತೆಯೂ ಇಲ್ಲ. ಅದೊಂದು ವ್ಯವಸ್ಥೆ ಅಷ್ಟೆ. ಬದಲಾವಣೆ ಅದರ ಸ್ವಭಾವ. ಇಲ್ಲದ ಮಗು ಹುಟ್ಟುವಾಗ ನಾವು ಸಂತೋಷಪಡಬಹುದಾದರೂ ಪ್ರಕೃತಿಗೆ ಅದರಲ್ಲಿ ಸಂತೋಷವೂ ಇಲ್ಲ, ದುಃಖವೂ ಇಲ್ಲ. ಇರುವ ಜೀವಿ ಸಾಯುವಾಗಲೂ ಅಷ್ಟೆ. ನಮಗೆ ದುಃಖವಾಗಬಹುದಾದರೂ ಪ್ರಕೃತಿಗೆ ಏನೂ ಆಗುವದಿಲ್ಲ. ಇಂತಹ ಪರಿಸ್ಥಿತಿಯಲ್ಲಿ, ಅಂದರೆ, ಹೆಣ್ಣು ಪ್ರಕೃತಿಯ ಉದ್ದೇಶವನ್ನು ಪೂರೈಸುವವರೆಗೂ ಉತ್ಸಾಹ, ರೂಪ, ದೇಹಬಲ, ಗಂಡಿನ ಸಂಪರ್ಕ, ತನ್ನ ಮಕ್ಕಳ ಪೋಷಣೆಯಲ್ಲಿನ ಆನಂದ – ಇವುಗಳೆಲ್ಲವನ್ನೂ ಪಡೆದು ಚೆನ್ನಾಗಿ ಬಾಳಲು ಸಾಧ್ಯವಿದ್ದು, ಆ ಉದ್ದೇಶದ ಪೂರೈಕೆಗೆ ತಾನು, ರೋಗದಿಂದಾಗಲೀ, ಮುಪ್ಪಿನಿಂದಾಗಲೀ ಅಸಮರ್ಥಳಾದಾಗ ಉತ್ಸಾಹ, ದೇಹಬಲ, ಗಂಡಿನ ಸಂಪರ್ಕ, ಮಕ್ಕಳ ಸುಖ – ಯಾವದೂ ಇಲ್ಲದೆ ಕ್ಷುದ್ರ ಜೀವಿಯಾಗಿ

ತಿರಸ್ಕೃತ ಜೀವನ ನಡೆಸಬೇಕಾದುದು ಅನಿವಾರ್ಯವಾಗುತ್ತಿತ್ತು. ಇದರಿಂದ ಅವಳನ್ನು ಪಾರುಮಾಡುವದಕ್ಕಾಗಿ ಮಾನವ ರೂಪಿಸಿಕೊಂಡ ವ್ಯವಸ್ಥೆಯೇ ವಿವಾಹ. ಇದರಲ್ಲಿ ಗಂಡಿನ ಸುಖಕಿಂತಲೂ ಹೆಣ್ಣಿನ ಹಿತಸಾಧನೆಯೇ ಉದ್ದೇಶಿತ ವಾಗಿದೆ. ಅದಕ್ಕೇ ನಾನು ಆಗ ಅಂದದ್ದು, ಹೆಣ್ಣು ಗಂಡಿಗೆ ಎಷ್ಟು ಕೃತಜ್ಞ ಳಾಗಿದ್ದರೂ ಸಾಲದು ಎಂದು.

ರಮೆ:– ಗಂಡು ಇಷ್ಟು ಮಾಡಿದುದಕ್ಕಾಗಿ ಅವನು ಹೆಣ್ಣಿಗೆ ಪಾತಿವ್ರತ್ಯ ಮೊದಲಾದ ಕಟ್ಟು ನಿಟ್ಟಿನ ನಿರ್ಬಂಧಗಳನ್ನು ವಿಧಿಸಿದ್ದೇನು ?

ಮುರಳಿ:– ಪಾತಿವ್ರತ್ಯವನ್ನು ಹೆಣ್ಣಿಗೆ ವಿಧಿಸಲಾಗಿದೆ ಎನ್ನುವದು ತಪ್ಪು. ಪಾತಿವ್ರತ್ಯವನ್ನು ಅವಳು ಸಾಧಿಸುವದು ಅಪೇಕ್ಷಣೀಯ ಎನ್ನಲಾಗಿದೆ, ಅಷ್ಟೆ.

ರಮೆ:– ನೀವೇನು ಮಾತನಾಡುತ್ತಿದ್ದೀರಿ ? ಹೆಣ್ಣು ತನ್ನ ಗಂಡನನ್ನು ಹೊರತು ಪರಪುರುಷನನ್ನು ಬಯಸಬಾರದು ಎಂದು ಅಪೇಕ್ಷಿಸಲಾಗಿರುವದೊ, ವಿಧಿಸಿರುವದೊ ?

ಮುರಳಿ:– ಒಬ್ಬಳು ಹೆಣ್ಣು ಒಂದು ಗಂಡಿನೊಂದಿಗೆ ಮಾತ್ರ ಸಂಪರ್ಕವಿಟ್ಟು ಕೊಳ್ಳಬೇಕೆಂಬದನ್ನು ವಿಧಿಸಲಾಗಿದೆ. ಇದು ಸಾಮಾಜಿಕ ನಿರ್ಬಂಧ. ಹೆಣ್ಣು ಒಂದು ಗಂಡನ್ನು ತನ್ನ ಸರ್ವಸ್ವ ಎಂದು ತಿಳಿದು ಅದನ್ನು ಜೀವನದುದ್ದಕ್ಕೂ ಒಂದು ವ್ರತದಂತೆ ಪಾಲಿಸಿಕೊಂಡು ಬರಬೇಕೆನ್ನುವದು ಅಪೇಕ್ಷಣೀಯ ಎನ್ನ ಲಾಗಿದೆ. ಇದು ವಿಧಿಯಲ್ಲ.

ರಮೆ:– ಇವೆರಡಕ್ಕೂ ಏನು ವ್ಯತ್ಯಾಸ ?

ಮುರಳಿ:– ಸಮಾಜದ ಕಟ್ಟುಪಾಡು ಸರಿಯಾಗಿಯೇ ಇದೆ. ಯಾವ ಒಂದು ಉದ್ದೇಶಕ್ಕಾಗಿ ಸಮಾಜವು ವಿವಾಹದ ವ್ಯವಸ್ಥೆಯನ್ನು ರೂಪಿಸಿಕೊಂಡಿತೋ ಆ ಉದ್ದೇಶವು ಪೂರ್ಣವಾಗಿ ಸಫಲವಾಗಬೇಕಾದರೆ ಹೆಣ್ಣಿನ ಮೇಲೆ ಇಂತಹ ನಿರ್ಬಂಧ ಹೇರುವದೂ ಅವಶ್ಯ ಎನಿಸಿತು.

ರಮೆ:– ಸ್ವಲ್ಪ ವಿವರಿಸಿ, ನೋಡೋಣ.

ಮುರಳಿ:– ಪ್ರಕೃತಿಯ ಉದ್ದೇಶ ಸಾಧನೆಗಾಗಿ ಹುಟ್ಟು ಮತ್ತು ಪೋಷಣೆ ಗಳ ಹೊಣೆಗಾರಿಕೆಯನ್ನು ಹೊತ್ತು ಹೆಣ್ಣು ಹುಟ್ಟಿಕೊಂಡಳು. ಈ ಪೈಕಿ ಹುಟ್ಟನ್ನು ಸಾಧಿಸಲು ಅವಳು ಪುರುಷ ಸಂಪರ್ಕ ಪಡೆಯಬೇಕಾಗಿತ್ತು. ಯಾವ ಹೆಣ್ಣಿಗೆ ಯಾವ ಪುರುಷನ ಸಂಪರ್ಕ ಬೇಕು ಎಂಬದನ್ನೇನೂ ಪ್ರಕೃತಿ ವಿಧಿಸಿರಲಿಲ್ಲ. ಆದರೆ ಇದರಿಂದಾಗಿ ಪ್ರಕೃತಿಯ ಮೂಲ ಗುಣಗಳಾದ ಹುಟ್ಟು, ಬೆಳವಣಿಗೆ

ಗಳನ್ನು ಸಾಧಿಸಿದ ಸ್ತ್ರೀ, ಅದರ ಇನ್ನೊಂದು ಗುಣವಾದ ನಾಶಕ್ಕೆ ತಾನು ಅನಿವಾರ್ಯವಾಗಿ ಒಳಗಾಗುತ್ತಿದ್ದಳು. ಈ ನಾಶವಾದರೂ ಅವಳಿಗೆ ಬಹಳ ಹಿಂಸೆಯ ರೂಪದಲ್ಲಿ ಬರುವದು ಸಹಜವಾಗುತ್ತಿತ್ತು. ಪ್ರಕೃತಿಯ ಹುಟ್ಟು, ಬೆಳವಣಿಗೆ–ಈ ಎರಡು ಉದ್ದೇಶಗಳನ್ನು ಪೂರೈಸಲು ಅವಳು ಅಸಮರ್ಥಳಾದಾಗ ಅವಳು ಪ್ರಕೃತಿಯಿಂದ ತಿರಸ್ಕರಿಸಲ್ಪಟ್ಟು ಬಹಳ ಶೋಚನೀಯವಾದ ಸ್ಥಿತಿಯನ್ನು ಪಡೆಯುತ್ತಿದ್ದಳು. ಇದರಿಂದ ಅವಳನ್ನು ತಪ್ಪಿಸುವದಕ್ಕಾಗಿ ವಿವಾಹದ ವ್ಯವಸ್ಥೆಯು ಏರ್ಪಟ್ಟಿತು. ಪ್ರಕೃತಿಯು ಸ್ತ್ರೀಯನ್ನು ಏಕಾಗಿ ಸೃಷ್ಟಿಸಿತೋ ಆ ಉದ್ದೇಶವನ್ನು ಆಕೆ ಪೂರೈಸುವಂತೆಯೂ ಇದ್ದು, ಆದರೆ ಪ್ರಕೃತಿಯಿಂದ ಆಕೆ ತಿರಸ್ಕರಿಸಲ್ಪಟ್ಟು ನಾಶದ ದಾರಿ ಹಿಡಿದಾಗ ಅವಳ ಜೀವನ ದಾರುಣವಾಗದಂತೆಯೂ ಇರಬಲ್ಲ ವ್ಯವಸ್ಥೆಯೇ ವಿವಾಹವಾಯಿತು.

ಈ ವಿವಾಹದ ವ್ಯವಸ್ಥೆಯಲ್ಲಿ ಇನ್ನೊಂದು ಪ್ರಮುಖವಾದ ಅಂಶವೂ ಸೇರಿದೆ. ಪ್ರಕೃತಿ ಎನ್ನುವದು ಒಂದು ವ್ಯವಸ್ಥೆ ಅಷ್ಟೆ. ಮಾನವನೂ ಒಳಗೊಂಡಂತೆ ಈ ಪ್ರಕೃತಿ ಕೆಲವು ಮೂಲ ಲಕ್ಷಣಗಳ ಆಧಾರದಲ್ಲಿ ಮುಂದುವರಿಯುತ್ತದೆ. ಈ ಪೈಕಿ ಪ್ರಕೃತಿಯ ಅತ್ಯಂತ ವಿಕಸಿತ ರೂಪವಾಗಿ ವ್ಯಕ್ತಗೊಂಡಿರುವವನು ಮಾನವ. ತನ್ನ ವಿಕಾಸಕ್ಕೆ ಅನುಗುಣವಾಗಿ ಅವನು ತನ್ನ ಸುತ್ತಲಿನ ಈ ಪ್ರಕೃತಿಯ ಏಕೆ, ಹೇಗೆಗಳನ್ನು ವಿಶ್ಲೇಷಿಸುವ ಸಾಮರ್ಥ್ಯ ಪಡೆದಿದ್ದಾನೆ. ಈ ಸಾಮರ್ಥ್ಯ ಪ್ರಕೃತಿಯ ಇತರ ಅಂಗಗಳಾದ ಪ್ರಾಣಿ, ಪಕ್ಷಿ, ಸಸ್ಯ, ಶಿಲೆ– ಮೊದಲಾದ ಯಾವದಕ್ಕೂ ಇಲ್ಲ. ಅವುಗಳೆಲ್ಲವೂ ಪ್ರಕೃತಿಯ ಕೇವಲ ಮೂಲ ಸ್ವಭಾವಕ್ಕನು ಗುಣವಾಗಿಯಷ್ಟೇ ನಡೆದುಕೊಳ್ಳಲು ಸಾಧ್ಯವಾಗಿರುವದು. ಇದರಲ್ಲಿ ಮಾನವನು ಮಾತ್ರವೇ ಪ್ರಕೃತಿಯ ಅಂತಹ ಮೂಲ ಸ್ವಭಾವದ ಸ್ವರೂಪಗಳನ್ನೂ, ಅವುಗಳನ್ನು ತನಗೆ ಹಿತವಾಗುವಂತೆ ಬಳಸಿಕೊಳ್ಳಲು ಇರುವ ಸಾಧ್ಯತೆಯನ್ನೂ ಕಂಡುಕೊಂಡು ಆ ಮೂಲಕ ತನ್ನ ಜೀವನವನ್ನು ಹೆಚ್ಚು ಸುಖಮಯವನ್ನಾಗಿ ಮಾಡಿಕೊಳ್ಳಲು ಪ್ರಯತ್ನಿಸಿರುವದು. ಉದಾಹರಣೆಗೆ, ಅನಿರೀಕ್ಷಿತ ಬೆಂಕಿ ಹುಟ್ಟಿಕೊಂಡಾಗ ಸಸ್ಯಗಳು ಅದರಲ್ಲಿ ಸಿಕ್ಕಿ ಸಾಯುತ್ತವೆ; ಪ್ರಾಣಿಗಳು ದೂರ ಓಡಲು ಪ್ರಯತ್ನಿಸುತ್ತವೆ; ಮಾನವ ಆ ಬೆಂಕಿಯನ್ನು ನೀರಿನಿಂದ ತಣಿಸಲು ಪ್ರಯತ್ನಿಸುತ್ತಾನೆ. ಅಂದರೆ, ಮಾನವನು ಪ್ರಕೃತಿಯ ಬೇರೆ ಬೇರೆ ಅಂಶಗಳ ಗುಣ ಲಕ್ಷಣಗಳನ್ನು ತಿಳಿದುಕೊಂಡು ಅವುಗಳನ್ನೆಲ್ಲ ತನ್ನ ಸುಖ ಹೆಚ್ಚಲು ಹೇಗೆ ಹೇಗೆ ಬಳಸಬೇಕೆಂಬ ದನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾನೆ, ಪ್ರಯತ್ನಿಸುತ್ತಿದ್ದಾನೆ.

ಮಾನವನು ರೂಪಿಸಿಕೊಂಡಿರುವ ವಿವಾಹ ವ್ಯವಸ್ಥೆ ಇದಕ್ಕೆ ಅತ್ಯುತ್ತಮ ಉದಾಹರಣೆ. ಸಾಮಾನ್ಯವಾಗಿ ಯಾವದೇ ಹೆಣ್ಣು ಯಾವದೇ ಗಂಡನ್ನು ಕೂಡಿದರೂ ಸಂತಾನೋತ್ಪತ್ತಿಯಾಗುತ್ತದೆ ಎಂಬದು ಪ್ರಕೃತಿಯ ಮೂಲ

ನಿಯಮ. ಆದರೆ ಒಂದು ಹೆಣ್ಣು ಒಂದು ಗಂಡಿನಿಂದ ಮಾತ್ರವೇ ಸಂತಾನ ಪಡೆಯಬೇಕೆಂಬದು ಮಾನವನು ರೂಪಿಸಿಕೊಂಡಿರುವ ವ್ಯವಸ್ಥೆ. ಪ್ರಕೃತಿಯ ನಿಯಮವನ್ನೇ ಬಳಸಿಕೊಂಡು ಉತ್ತಮ ಫಲ ಪಡೆಯಬೇಕೆಂಬ ಮಾನವನ ಬಯಕೆ ಅವನಿಂದ ವಿವಾಹ ವ್ಯವಸ್ಥೆಯನ್ನು ಉಂಟುಮಾಡಿದೆ.

ತಂತು, ಕುಲ, ಗೋತ್ರ, ಪರಂಪರೆ ಎಂದು ನಮ್ಮವರು ಇದನ್ನು ಕರೆದರು. ತಂತುವಿನ ಮುಂದುವರಿಕೆ, ಗೋತ್ರ ಅಥವಾ ಕುಲವು ಸೂತ್ರದಂತೆ ಮುಂದುವರಿಯುವದನ್ನು ಸಾಧಿಸುವದು, ಗೀತೆಯಲ್ಲಿ ಹೇಳಿದ ಪ್ರಕಾರ ವರ್ಣ ಸಂಕರವಾಗದಂತೆ ತಡೆಯುವದು – ಇದೆಲ್ಲವೂ ವಿವಾಹ ವ್ಯವಸ್ಥೆಯ ಉದ್ದೇಶಗಳು. ವಿವಾಹದ ವ್ಯವಸ್ಥೆಯ ಕುರಿತಾಗಿ ಅಲ್ಲವಾದರೂ ಪರಂಪರೆಯ ಮಹತ್ವವನ್ನು ಕಂಡು ಹಿಡಿಯುವ ಭರದಲ್ಲಿ ಇಂದಿನ ವಿಜ್ಞಾನಿಗಳು ಕೂಡ ನಮ್ಮ ಹಿಂದಿನವರ ಅಭಿಪ್ರಾಯಕ್ಕೇ ತಲಪಿದ್ದಾರೆ. ಪುರುಷನ ಪ್ರತಿಯೊಂದು ವೀರ್ಯ ಕಣದಲ್ಲಿಯೂ ಅವನ ಹಿಂದಿನ ತಲೆಮಾರಿನವರೆಲ್ಲರ ಗುಣ ಲಕ್ಷಣಗಳು ಸೇರಿರುತ್ತವೆಂದೂ ಅಂತಹ ಯಾರದೋ ಒಬ್ಬನ ವಿಶಿಷ್ಟ ಲಕ್ಷಣಗಳು ಅವನ ಮುಂದಿನ ತಲೆಮಾರಿನ ಯಾವದೋ ಒಂದು ವ್ಯಕ್ತಿಯಲ್ಲಿ ಒಡಮೂಡಲು ಸಾಧ್ಯವಿದೆಯೆಂದೂ ವಿಜ್ಞಾನಿಗಳು ಹೇಳುತ್ತಾರೆ. ಅಂದರೆ ಹೀಗೆ. ನಾನು ನನ್ನನ್ನು ಆಂಗಿರಸ ಗೋತ್ರದವನು ಎಂದು ಹೇಳಿಕೊಳ್ಳುತ್ತೇನೆ ಎಂದಿಟ್ಟುಕೊ. ಆಂಗಿರಸದಿಂದ ಹಿಡಿದು ನನ್ನ ತಂದೆಯವರೆಗಿನ ಪ್ರತಿಯೊಬ್ಬ ಪುರುಷನ ಲಕ್ಷಣವೂ ನನ್ನ ಪ್ರತಿಯೊಂದು ವೀರ್ಯ ಕಣದಲ್ಲಿಯೂ ಸೇರಿದೆ ಎಂದು ಅರ್ಥ. ಆ ಪೈಕಿ ಒಬ್ಬರ ಅಥವಾ ಹೆಚ್ಚಿನವರ ಗುಣ–ದೋಷಗಳು ನನ್ನಲ್ಲಿ ಮೂಡಬಹುದು. ಹೀಗೆ ಒಂದು ಪರಂಪರೆಯ ಮುಂದುವರಿಕೆ ಆ ಪರಂಪರೆಯಲ್ಲಿ ಹುಟ್ಟುವ ವ್ಯಕ್ತಿಗಳ ಮಾನಸಿಕ ವಿಕಾಸಕ್ಕೆ ಅತ್ಯಂತ ಅವಶ್ಯಕ ಎಂಬದನ್ನು ವಿವರಿಸಲು ಹೊರಟರೆ ಅದೇ ಒಂದು ಪ್ರತ್ಯೇಕ ಶಾಸ್ತ್ರವಾಗುತ್ತದೆ. ರಕ್ತಸಂಬಂಧ ಎಂಬದು ದೈಹಿಕವಾಗಿ ಉಪಯುಕ್ತವಾಗಿರುವದಕ್ಕಿಂತ ಮಾನಸಿಕವಾಗಿ ಆಗಿರುವದು ಹೆಚ್ಚು ಅಪೇಕ್ಷಣೀಯ. ಪರಂಪರೆ ಇದನ್ನು ಸಾಧಿಸುತ್ತದೆ. ಅದರ ಬದಲು ಒಬ್ಬಳು ಸ್ತ್ರೀಯಲ್ಲಿ ನಾಲ್ಕಾರು ವಿವಿಧ ತಂತುಗಳ ಮಕ್ಕಳು ಹುಟ್ಟಿದಾಗ ಅವುಗಳೊಳಗೆ ದೇಹ ಸಂಬಂಧ ಮಾತ್ರ ಇದ್ದು ಮಾನಸಿಕ ಸಂಬಂಧ ತಪ್ಪಿಹೋಗಿ ಆ ಕುಟುಂಬದ ಮುಂದಿನ ವಿಕಾಸ ಆಘಾತಕ್ಕೊಳಗಾಗುತ್ತದೆ.

ಈ ವಿಚಾರಗಳನ್ನು ಈಗಿನವರು ಪ್ರಯೋಗ ಶಾಲೆಗಳೊಳಗೆ ಪರೀಕ್ಷಿಸಲು ಪ್ರಯತ್ನಿಸಿರುವದು ಬಹಳವಾಗಿ ಏನೂ ಸಫಲವಾಗಿಲ್ಲ. ಪ್ರಕೃತಿಯೇ ಪ್ರಯೋಗ ಶಾಲೆಯಾಗಿ ಹಲವಾರು ತಲೆಮಾರುಗಳ ಪರೀಕ್ಷೆ ನಡೆಸಿದ ಪರಿಣಾಮವಾಗಿ ನಮ್ಮ ಹಿಂದಿನವರು ಸ್ವಲ್ಪದರಲ್ಲಿ ಹೇಳಿದರು, ಒಂದು ಹೆಣ್ಣು ಒಂದು ಗಂಡಿನಿಂದ ಮಾತ್ರ

ಸಂತಾನ ಪಡೆಯಬೇಕು ಎಂದು. ಇದರ ಸ್ಥೂಲ ರೂಪವೇ ವಿವಾಹದ ವ್ಯವಸ್ಥೆ. ಇದರ ಪ್ರಕಾರ ಹೆಣ್ಣು, ಮಕ್ಕಳನ್ನು ಪಡೆಯುವದರಲ್ಲಿ ಒಬ್ಬನೇ ಗಂಡಸನ್ನು ಆಶ್ರಯಿಸಬೇಕು. ಅವನಿಗೆ ವಿಧೇಯಳಾಗಿದ್ದುಕೊಂಡು ಅವನ ಸುಖ ಹೆಚ್ಚುವದಕ್ಕಾಗಿ, ಅವನ ಹವ್ಯಾಸಗಳಲ್ಲಿ ಅವನಿಗೆ ಸಹಾಯಕಳಾಗಿ ಬದುಕಬೇಕು. ಇದಕ್ಕೆ ಪ್ರತಿಯಾಗಿ ಅವನು ಅವಳ ಮಕ್ಕಳ ಪೋಷಣೆಯಲ್ಲಿ ತಾನು ಸಹಕರಿಸುವದು ಮಾತ್ರವಲ್ಲದೆ ಅವಳು ತನಗೆ ಶರೀರ ಸುಖ ಕೊಡಲು ಅಸಮರ್ಥಳಾದಾಗ ಕೂಡ ಅವಳನ್ನು ಪೋಷಿಸುವ ಹೊಣೆಯನ್ನೂ ಹೊರಬೇಕು. ಇದು ವಿವಾಹದಲ್ಲಿ ಪರಸ್ಪರವಾಗಿ ಒಪ್ಪಿಕೊಂಡ ವ್ಯವಸ್ಥೆ. ಹಾಗಾಗಿ ಹೆಣ್ಣಿನ ಮೇಲೆ ನಿರ್ಬಂಧ – ಅವಳು ಪರಪುರುಷನ ಸಂಪರ್ಕ ಪಡೆಯಬಾರದು ಎಂದು. ಆದರೆ ಗಂಡು ಪರಸ್ತ್ರೀಯನ್ನು ಹೊಂದಬಾರದು ಎಂಬ ನಿರ್ಬಂಧ ಹೇರಬೇಕಾಗಿರಲಿಲ್ಲ. ಏಕೆಂದರೆ, ಅವನು ಎಲ್ಲಿಯ ತನಕ ತನ್ನನ್ನು ನಂಬಿದ ಹೆಣ್ಣಿನ ಪೋಷಣೆ, ರಕ್ಷಣೆಗಳನ್ನು ಕೊನೆಯ ತನಕ ಮಾಡಲು ಸಿದ್ಧನಾಗಿರುತ್ತಾನೋ ಅಲ್ಲಿಯ ತನಕವೂ ಅವನು ವಿವಾಹದ ವ್ಯವಸ್ಥೆಯನ್ನು ಮುರಿದಂತೆ ಆಗುವದಿಲ್ಲ. ಆದರೂ, ಅವನು ಪರಸ್ತ್ರೀಯ ಸಂಪರ್ಕ ಪಡೆಯದಿರುವದು ಒಳ್ಳೆಯದೆಂಬ ಸಲಹೆ ಏಕೆಂದರೆ, ಅವನು ಹೀಗೆ ಸಂಪರ್ಕ ಪಡೆಯುವ ಸ್ತ್ರೀಯು – ಅದರಲ್ಲಿಯೂ ಅವಳು ವಿವಾಹಿತಳಾಗಿದ್ದರೆ ಅವಳ – ವಿವಾಹದ ವ್ಯವಸ್ಥೆಯನ್ನು ಮುರಿಯುವದರಲ್ಲಿ ಇವನು ಸಹಕಾರಿಯಾಗುತ್ತಾನೆ ಎಂಬದರಿಂದಾಗಿ.

ರಮೆ:– ಹಾಗಾದರೆ ಪಾತಿವ್ರತ್ಯದ ಅರ್ಥವೇನು ?

ಮುರಳಿ:– ಅದಕ್ಕೂ ವಿವಾಹದ ವ್ಯವಸ್ಥೆಗೂ ಅವಶ್ಯವೆನಿಸುವ ಸಂಬಂಧವಿಲ್ಲ. ನಾನು ಹಿಂದೆ ಹೇಳಿದಂತೆ ಪಾತಿವ್ರತ್ಯ ಎಂಬದು ಒಂದು ವಿಧದ ವ್ರತ – ಪಾರಮಾರ್ಥಿಕವಾದ ಅರ್ಥ ಇರುವಂತಹದು. ವಿವಾಹದ ವ್ಯವಸ್ಥೆಯಲ್ಲಿಯೂ ಹೆಂಡತಿ ಗಂಡನನ್ನು ಬಿಟ್ಟು ಇತರ ಪುರುಷನ ಸಂಪರ್ಕ ಪಡೆಯಬಾರದೆಂದಿದ್ದರೂ, ಅದರ ವ್ಯಾಪ್ತಿ ಕಿರಿದು. ಅವಳ ದೈಹಿಕ ಚಟುವಟಿಕೆಯ ಮೇಲಷ್ಟೇ ನಿರ್ಬಂಧ ಹೇರಲು ಇಲ್ಲಿ ಸಾಧ್ಯ. ಆದರೆ ಪಾತಿವ್ರತ್ಯದಲ್ಲಿ ಆಕೆಯ ಮನಸ್ಸಿನ ಚಟುವಟಿಕೆಯನ್ನೇ ನಿಯಂತ್ರಿಸಲು ಬಯಸಲಾಗಿದೆ. ಪರಪುರುಷನನ್ನು ಮನಸ್ಸಿನಲ್ಲಿ ಕೂಡ ಸ್ಮರಿಸಬಾರದು. ತನ್ನ ದೇಹ, ಮನಸ್ಸುಗಳೆರಡನ್ನೂ ಗಂಡನಿಗೆ ಸಂಪೂರ್ಣವಾಗಿ ಶರಣಾಗಿಸಬೇಕು. ಗಂಡನಾದವನು ಎಂತಹವನೇ ಆಗಿರಲಿ ಅವನು ತನ್ನ ದೈವ ಎಂಬ ಭಾವವನ್ನು ತಂದುಕೊಂಡು ಬದುಕಬೇಕು. ಅವನ ಬಯಕೆ, ಭಾವನೆಗಳ ಹೊರತಾಗಿ ತನ್ನ ಸ್ವಂತ ಬಯಕೆ, ಭಾವನೆಗಳನ್ನು ಇಟ್ಟುಕೊಳ್ಳಬಾರದು. ಅವನ ಸುಖದಲ್ಲಿ – ಅದು ತನ್ನ ಸುಖಕ್ಕೆ ವಿರೋಧವಾಗಿದ್ದರೂ ಕೂಡ – ಮಾತ್ರವೇ ತನ್ನ ಸುಖವನ್ನು ಕಂಡುಕೊಳ್ಳಬೇಕು. ಒಬ್ಬಳು ಹೆಣ್ಣು ಹೀಗೆ

ಮಾಡುವದರಿಂದ ತನ್ನ ಮನಸ್ಸನ್ನೂ, ಪ್ರಕೃತಿ ಸಹಜವಾದ ಸ್ವಭಾವವನ್ನೂ ಗೆದ್ದವಳಾಗಿ ಮೋಕ್ಷಕ್ಕೆ ಅರ್ಹತೆಯನ್ನು ಪಡೆಯುತ್ತಾಳೆ ಎಂಬ ಪಾರಮಾರ್ಥಿಕ ರಹಸ್ಯ ಈ ಪಾತಿವ್ರತ್ಯದಲ್ಲಿ ಅಡಗಿರುವದು. ಅವಳು ಪತಿವ್ರತೆಯಾಗಿರುವದು ಗಂಡನಿಗಾಗಿ ಎನ್ನುವದಕ್ಕಿಂತ ತನ್ನ ಶ್ರೇಯಸ್ಸಿಗಾಗಿಯೇ ಎಂಬದನ್ನು ತಿಳಿಯದ ಸ್ತ್ರೀಯರು ಇದನ್ನೆಲ್ಲ ವಿರೋಧಿಸುತ್ತಾರೆ.

ರಮೆ:– ಆಗಲಿ. ಹೆಣ್ಣು ಮೋಕ್ಷವನ್ನು ಪಡೆಯಲು ಪತಿವ್ರತೆಯಾಗಿರ ಬೇಕೆಂದು ಹೇಳಿದಂತೆಯೇ ಗಂಡು ಕೂಡ ಮೋಕ್ಷವನ್ನು ಪಡೆಯಲು ಒಬ್ಬಳೇ ಹೆಣ್ಣಿನಲ್ಲಿ ಅನುರಕ್ತನಾಗಿರಬೇಕು ಎಂದೇಕೆ ಹೇಳಲಿಲ್ಲ ? ಎರಡರ ತತ್ವವೂ ಒಂದೇ ತಾನೇ ?

ಮುರಳಿ:– ಅದನ್ನೇ ನಾನು ಹೇಳುವದು. ಪ್ರಕೃತಿಯ ದೃಷ್ಟಿಯಲ್ಲಿ ಗಂಡು, ಹೆಣ್ಣು ಈ ಎರಡರ ಕಾರ್ಯಕ್ಷೇತ್ರ, ಮನಸ್ಸಿನ ರಚನೆ, ಜೀವನದ ಗುರಿ–ಎಲ್ಲವೂ ಬೇರೆ ಬೇರೆಯೇ. ಹೆಣ್ಣು ಪ್ರಕೃತಿಯ ಉದ್ದೇಶಗಳಾದ ಮಕ್ಕಳನ್ನು ಕೊಡು ವದು, ಅವರನ್ನು ಬೆಳೆಸುವದು – ಈ ಕಾರ್ಯಗಳಲ್ಲಿ ತನ್ನ ಜೀವನದ ಪ್ರಮುಖ ಭಾಗವನ್ನು ಕಳೆಯಬೇಕಾಗುತ್ತದೆ. ಅವಳು ಹಾಗೆ ಪ್ರಕೃತಿಯ ಉದ್ದೇಶವನ್ನು ಪೂರೈಸುತ್ತಲೇ ಮೋಕ್ಷವನ್ನು ಗಳಿಸುವ ಸಾಧ್ಯತೆ ಇರಬಹುದಾದರೆ ಅದು ಪಾತಿವ್ರತ್ಯದ ಮೂಲಕ ಎಂದರು. ಇಲ್ಲವಾದರೆ ಅವಳು ಪ್ರಕೃತಿಯ ಉದ್ದೇಶ ಗಳನ್ನು ತಾನು ಪೂರೈಸಲು ಒಲ್ಲದೆ ಬ್ರಹ್ಮಚಾರಿಣಿಯಾಗಿ ಉಳಿದು ಸ್ವತಂತ್ರ ವಾಗಿ ಮೋಕ್ಷ ಸಾಧನೆಯ ಮಾರ್ಗವನ್ನು ಕೈಗೊಳ್ಳಬೇಕಾಗುತ್ತದೆ. ಒಬ್ಬಳು ಹೆಣ್ಣಿಗೆ ಈ ರೀತಿ ಪುರುಷನ ಸಂಪರ್ಕ ಮತ್ತು ಅವನ ರಕ್ಷಣೆಗಳಿಲ್ಲದೆ ಉಳಿಯುವದು ಎಷ್ಟು ಕಷ್ಟ ಎಂಬದನ್ನು ನಾವು ಊಹಿಸಬಹುದು. ಅವಳು ತನ್ನ ಮನಸ್ಸಿನ ಕಾಮುಕ ಭಾವನೆಗಳಿಂದಲೇ ತನ್ನನ್ನು ರಕ್ಷಿಸಿಕೊಳ್ಳಬೇಕಾಗುವದಷ್ಟೇ .ಅಲ್ಲದೆ, ತಾನು ದೈಹಿಕವಾಗಿ ಪುರುಷನಿಗಿಂತ ದುರ್ಬಲಳಾಗಿದ್ದು ತನ್ನ ದೇಹ ರಕ್ಷಣೆ ಮಾಡಿ ಕೊಳ್ಳಲೂ ತನ್ನ ಮೋಕ್ಷಸಾಧನೆಯ ಅವಧಿಯನ್ನು ವಿನಿಯೋಗಿಸಬೇಕಾಗು ವದಲ್ಲದೆ ಕಾಮುಕ ಪುರುಷರಿಂದಲೂ ತನ್ನನ್ನು ರಕ್ಷಿಸಿಕೊಳ್ಳಲು ಆಕೆ ಪರಿಶ್ರಮ ಪಡ ಬೇಕಾಗುವದು. ಇದಕ್ಕಿಂತ ಹೆಚ್ಚು ಸುರಕ್ಷಿತವಾದ ಮಾರ್ಗ ಆಕೆ ಪತಿವ್ರತೆ ಯಾಗಿರುವದು ಎಂದು ಹಿಂದಿನವರು ಆಕೆಗೆ ಅದನ್ನು ಸೂಚಿಸಿದರು.

ಗಂಡಿಗೆ ಹೀಗಿಲ್ಲ. ಪ್ರಕೃತಿಯ ನಿಯಮದ ಪ್ರಕಾರವೇ ಅವನು ಸ್ತ್ರೀಗೆ ಸಂಪರ್ಕವನ್ನು ಕೊಡುವದು ಹೊರತು ಅವನಿಗೆ ಜೀವನದಲ್ಲಿ ಬೇರೇನೂ ಸ್ಪಷ್ಟ ಗುರಿ ಇಲ್ಲ. ಹಾಗಾಗಿ ಅವನು ತನ್ನ ಮುಂದಿರುವ ಹೇರಳವಾದ ವಿರಾಮದ ವೇಳೆ ಯನ್ನು ಮೋಕ್ಷ ಸಾಧನೆಗಾಗಿ ವಿನಿಯೋಗಿಸಬಹುದಾದ್ದರಿಂದ ಅವನು ಮೋಕ್ಷ ವನ್ನು ಸಾಧಿಸಲು ಹಲವು ಮಾರ್ಗಗಳನ್ನು ಕಂಡುಹಿಡಿದರು. ಇಷ್ಟಾಗಿ ಅವನು

ವಿವಾಹಿತನಾದರೆ ಅವನ ಜೀವನದ ಪ್ರಮುಖ ಭಾಗವು ಸಂಸಾರದ ನಿರ್ವಹಣೆಗೆ ವಿನಿಯೋಗವಾಗುವದರಿಂದ, ಮೋಕ್ಷಾಪೇಕ್ಷಿಯಾದ ಪುರುಷನು ಸನ್ಯಾಸ ಸ್ವೀಕರಿಸುವದು ಉತ್ತಮವೆಂದೂ ಸೂಚಿಸಲಾಯಿತು.

ಹೀಗೆ, ಹೆಣ್ಣು ವಿವಾಹಿತ ಜೀವನದಲ್ಲಿ ಮೋಕ್ಷವನ್ನು ಪಡೆಯುವದು ಸುಲಭ ಎಂದಾದರೆ, ಗಂಡು, ಸಾಂಸಾರಿಕ ಜೀವನವನ್ನು ಬಿಟ್ಟರೆ ಮೋಕ್ಷವನ್ನು ಪಡೆಯುವದು ಸುಲಭ ಎಂದು ಕಂಡುಕೊಳ್ಳಲಾಯಿತು.

ಈಗ ನಿನಗೆ ಅರ್ಥವಾಗಬಹುದು. ಗಂಡು ಹೆಣ್ಣಿನ ಸಂಬಂಧವಾಗಿ ಹಿಂದೂ ವ್ಯವಸ್ಥೆಯಷ್ಟು ಪರಿಪಕ್ವವೂ ಪರಿಪುಷ್ಟವೂ ಆದ ವ್ಯವಸ್ಥೆ ಪ್ರಪಂಚದ ಯಾವದೇ ಜನಾಂಗದಲ್ಲಿ ಯಾವದೇ ಕಾಲದಲ್ಲಿ ನಿರ್ಮಾಣಗೊಂಡಿಲ್ಲ ಎಂಬದು. ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗದವರು – ಅದರಲ್ಲಿಯೂ ವಿದ್ಯಾವಂತರೆಂದು ತಮ್ಮನ್ನು ತಿಳಿದುಕೊಂಡಿರುವ ಅನೇಕ ಸ್ತ್ರೀಯರು ಈ ವಿವಾಹದ ವ್ಯವಸ್ಥೆಯು ತಮಗೆ ಬಂಧನವೆಂದೂ, ತಾವು ಪುರುಷರಿಗೆ ಅಡಿಯಾಳುಗಳಾಗಿರಬೇಕೆಂಬದಕ್ಕಾಗಿ ಪುರುಷರು ನಿರ್ಮಿಸಿಕೊಂಡಿರುವ ಸ್ವಾರ್ಥದ ವ್ಯವಸ್ಥೆ ಇದೆಂದೂ, ತಮಗೂ ಪುರುಷರಿಗೂ ಯಾವದೇ ಭೇದ ಇರಕೂಡದೆಂದೂ ಏನೇನೋ ವಾದಿಸುತ್ತಾರೆ. ಇದನ್ನೆಲ್ಲ ವಾದಿಸುವ ಹೆಣ್ಣಿಗಾದರೂ ಒಬ್ಬ ಪುರುಷನ ಬಲವಾದ ಬೆಂಬಲವಿದ್ದರೆ ಮಾತ್ರ ಹಾಗೆ ವಾದಿಸಲು ಸಾಧ್ಯವಾಗುತ್ತದೆ ಎಂಬದನ್ನು ಅವರು ಮರೆತುಬಿಟ್ಟಿರುತ್ತಾರೆ. ವಿವಾಹದ ವ್ಯವಸ್ಥೆಯಲ್ಲಿ ಇಹ – ಪರಗಳ ಲಾಭ ಪಡೆಯುವವಳು ಸ್ತ್ರೀಯೇ ಹೊರತು, ಪುರುಷನು ಇಹದ ಲಾಭ ಮಾತ್ರ ಗಳಿಸಲು ಅನುಕೂಲ ಪಡೆಯುತ್ತಾನೆ ಎಂಬದನ್ನು ಇವರು ಮರೆಯುತ್ತಾರೆ. ಅಥವಾ ಹಿಂದೂ ವಿವಾಹ ಪದ್ಧತಿಯ ಪ್ರಕಾರ ಗಂಡನಾದವನು ಹೆಣ್ಣಿಗೆ ಸಂಪೂರ್ಣ ರಕ್ಷಣೆಯನ್ನು ಒದಗಿಸಿ, ಅವಳನ್ನು ನಿಶ್ಚಿಂತಳನ್ನಾಗಿ ಮಾಡಿ, ಅವಳನ್ನು ಗೃಹಲಕ್ಷ್ಮಿ ಎಂದು ಕರೆದು ಅವಳಿಗೆ ಸಮಾಜದಲ್ಲಿ ಎಲ್ಲರಿಂದಲೂ ಗೌರವ ದೊರಕುವಂತಹ ಪರಿಸ್ಥಿತಿಯನ್ನು ಒದಗಿಸುತ್ತಾನೆ ಎಂಬದನ್ನೂ ಅವರು ಮರೆಯುತ್ತಾರೆ. ಹಾಗೆಂದು ತನ್ನ ಹೆಂಡತಿಯ ಕುರಿತಾಗಿ ತನ್ನ ಜವಾಬ್ದಾರಿಕೆಯನ್ನು ನಿರ್ವಹಿಸದಿರುವ ಗಂಡಂದಿರು ಇರಬಹುದಾದರೂ ಅದು ವಿವಾಹ ವ್ಯವಸ್ಥೆಯ ದೌರ್ಬಲ್ಯದಿಂದಾಗುವದರ ಬದಲು ಮಾನವ ಸ್ವಭಾವದ ಕಾರಣದಿಂದಾಗಿರುತ್ತದೆ. ಹೀಗೆ, ಹೆಣ್ಣು ಗಂಡುಗಳ ಮೂಲೋದ್ದೇಶ, ಅನಂತರ ಏರ್ಪಟ್ಟ ವಿವಾಹದ ವ್ಯವಸ್ಥೆ – ಇಷ್ಟನ್ನು ನೋಡಿದ್ದೇವೆ. ಆದರೆ ಇಂದು ಅವರಿಬ್ಬರ ಸಂಬಂಧ ಹೇಗೆ ಹೇಗೆ ಮಾರ್ಪಡುತ್ತಾ ಮುಂದುವರಿದಿದೆ, ವಿವಾಹದ ವ್ಯವಸ್ಥೆ ಪೂರ್ಣವಾಗಿ ಮುರಿದು ಬೀಳಲು ಸಾಧ್ಯವೇ ಆಗದೆ, ಆದರೆ ಅದು ತನ್ನ ಉದ್ದೇಶವನ್ನು ಪೂರ್ಣವಾಗಿ ಸಾಧಿಸಲೂ ಆಗದೆ ಎಂತಹ ಬಿಕ್ಕಟ್ಟಿನ

ಪರಿಸ್ಥಿತಿಗೆ ಎಡೆಮಾಡಿದೆ, ಇದರ ಪರಿಣಾಮಗಳೇನು ಎಂದು ಮುಂತಾಗಿ ಬೇಕಷ್ಟು ಹೇಳಬಹುದು. ಆದರೆ ಇಂದು ಅದೆಲ್ಲ ಬೇಡ...........

ರಮೆ:– ದಯವಿಟ್ಟು ಹೇಳಿ. ನಿಮ್ಮ ಆಧ್ಯಾತ್ಮ, ಜೀವಾತ್ಮ, ಪರಮಾತ್ಮ ಎಲ್ಲಕ್ಕಿಂತ ಇದು ನನಗೆ ಬಹಳ ರುಚಿಯಾಗುತ್ತದೆ. ದಯವಿಟ್ಟು ಹೇಳಿ.

ಮುರಳಿ:– ಹಾಗಾದರೆ ಭೀಮನ ಕತೆ ಬೇಡವೆನ್ನುತ್ತೀಯಾ ?

ರಮೆ:– ಅದೂ ಬೇಕು. ಹೌದು. ಹೊತ್ತು ಸಾಕಷ್ಟಾಗುತ್ತಾ ಬಂತು. ಹಾಗಾದರೆ ಇದನ್ನೆಲ್ಲ ಯಾವಾಗ ಹೇಳುತ್ತೀರಿ ?

ಮುರಳಿ:– ಹೇಳೋಣ. ಈ ದಿನವಂತೂ ಬೇಡ.

ರಮೆ:– ಆಗಲಿ. ಮಾತ್ರ ಇದನ್ನು ಎಂದಾದರೂ ಒಂದು ದಿನ ಪೂರ್ತಿಯಾಗಿ ಹೇಳಬೇಕು. ದಯವಿಟ್ಟು.

ಮುರಳಿ:– ಇದನ್ನು ಹೇಳಲು ದಯೆಯೇನೂ ಬೇಕಾಗಿಲ್ಲ. ಕೇಳುವವರ ಆಸಕ್ತಿ, ಇನ್ನೂ ಬೇಕಿದ್ದರೆ ಅವರದೇ ದಯೆ ಬೇಕು.

ರಮೆ:– ಅಂದ ಹಾಗೆ ಪ್ರಾರಂಭದಲ್ಲಿ ನಾನು ಏನೇನೋ ಹೇಳಿಬಿಟ್ಟೆ. ನನ್ನ ಬುದ್ಧಿಯೇ ಹಾಗೆ. ಸರಿಯಾಗಿ ಅರ್ಥ ಮಾಡಿಕೊಳ್ಳದೆ ಹುಚ್ಚು ಹುಚ್ಚಾಗಿ ಏನೇನೋ ಹೇಳಿಬಿಡುವದು. ದಯವಿಟ್ಟು ಮನಸ್ಸಿಗೆ ಹಚ್ಚಿಕೊಳ್ಳಬೇಡಿ.

ಮುರಳಿ:– ಹುಚ್ಚು ಹುಡುಗಿ....ನಿನಗೂ ನಾನು ನಿನ್ನ ದೆವ್ವ ಗಿವ್ವ ಅಂತ ಕಾಣಿಸಿಕೊಳ್ಳಲು ಪ್ರಾರಂಭವಾಗಿಬಿಟ್ಟಿದೆಯೋ ಅಂತ !

ರಮೆ:– ಸುಮ್ಮನೆ ತಮಾಷೆ ಮಾಡಬೇಡೀಪ್ಪ. ದೇವರು ನನಗೆ ಅಂತಹ ಮನಸ್ಸು ಕೊಡಲಿ ಎಂದು ಹೇಳಿ ಆಶೀರ್ವದಿಸಿ. ಬಹಳ ಘನವಾದ ವಿಚಾರ ಹೇಳಿದ್ದೀರಿ. ತಮಾಷೆಯ ಮಾತನಾಡಿ ಆ ಗೌರವದ ವಾತಾವರಣವನ್ನು ಕೆಡಿಸುವದು ಬೇಡ. ದಯವಿಟ್ಟು ಭೀಮನ ಕತೆಯನ್ನು ಮುಂದುವರಿಸಿ.

ಮುರಳಿ:– ಅಪ್ಪಣೆ. ಪಾಂಡವರು ವಿರಾಟನಲ್ಲಿ ಆಶ್ರಯವನ್ನು ಪಡೆದರು. ಅಲ್ಲವೆ ? ಈ ಪೈಕಿ ಭೀಮನು ತನ್ನ ವಿಶಾಲವಾದ ಎದೆ, ಉಬ್ಬಿದ ಹೆಗಲು, ಸಿಂಹದಂತೆ ಗಂಭೀರವಾದ ನಡಿಗೆ ಮತ್ತು ಎದ್ದು ಕಾಣುವ ದೇಹಶಕ್ತಿ– ಇವುಗಳಿಂದೊಡಗೂಡಿ ವಿರಾಟನ ಆಸ್ಥಾನವನ್ನು ಪ್ರವೇಶಿಸಿ ಅವನಿಗೆ ನಮಸ್ಕಾರ ಮಾಡಿ ತಾನು ಶೂದ್ರನೆಂದೂ, ಪಾಕಶಾಸ್ತ್ರ ತಿಳಿದವನೆಂದೂ ಹೇಳಿಕೊಂಡು ರಾಜನಲ್ಲಿ ಆಶ್ರಯವನ್ನು ಕೋರಲು ಅವನು ಭೀಮನ ಆಕೃತಿಯನ್ನು ನೋಡಿ ವಿಸ್ಮಿತನಾಗಿ....

ರಮೆ:– ಭೀಮನು ದೇಹಬಲದಲ್ಲಷ್ಟೇ ಅಲ್ಲದೆ ದೇಹದ ಅಳತೆಯಲ್ಲಿ ಕೂಡ

ಆಗಿನ ಕಾಲದಲ್ಲಿಯೇ ವಿಶಿಷ್ಟತೆ ಪಡೆದಿದ್ದನು ಎನ್ನುವದಕ್ಕೆ ಇದು ಸ್ಪಷ್ಟ ಉದಾಹರಣೆ.

ಮುರಳಿ:— ಹೌದು. ವಿರಾಟನಂತಹ ರಾಜನೇ ತಾನು ಆ ವರೆಗೆ ನೋಡದಿದ್ದಷ್ಟು ದೊಡ್ಡ ಪ್ರಮಾಣದ ದೇಹವನ್ನು ಭೀಮನಲ್ಲಿ ಕಂಡನೆಂಬದು ಇದನ್ನು ಚೆನ್ನಾಗಿ ಸ್ಪಷ್ಟಪಡಿಸುತ್ತದೆ. ಇಷ್ಟಾಗಿ ಭೀಮನ ಸಮಬಲನೆಂದು ಹೇಳಿಸಿಕೊಂಡಿದ್ದ ಕೀಚಕನೇ ವಿರಾಟನ ಭಾವಮೈದುನನಾಗಿದ್ದರೂ ಕೂಡ ಅವನು ಕೀಚಕನಲ್ಲಿಯೂ ಕಾಣದ ದೇಹ ಪ್ರಮಾಣವನ್ನು ಭೀಮನಲ್ಲಿ ಕಂಡನೆಂದು ಹೇಳುವಾಗ ಭೀಮನ ದೇಹದ ಆಳತೆಯು ಅಸಾಮಾನ್ಯವಾಗಿ ದೊಡ್ಡದಾಗಿತ್ತು ಎಂದು ಹೇಳಬಹುದು. ಈ ರೀತಿ ಭೀಮನು ಅಡುಗೆಯ ಕೆಲಸವನ್ನು ಕೇಳುವಾಗ ಅವನ ದೇಹಾಕೃತಿಯಿಂದ ಪ್ರಚೋದಿತನಾದ ವಿರಾಟರಾಜನು ಅವನಿಗೆ ತನ್ನ ಸೈನ್ಯದಲ್ಲಿಯೇ ಅಧಿಪತಿ ಸ್ಥಾನವನ್ನು ಕೊಡುವದಾಗಿ ತಿಳಿಸಿದನು.

ರಮೆ:— ಇಲ್ಲಿ ಇನ್ನೂ ಸ್ಪಷ್ಟವಾಯಿತು.

ಮುರಳಿ:— ಹೌದು. ಆದರೆ ಭೀಮನು ಸೈನ್ಯದ ಕೆಲಸವನ್ನು ಒಲ್ಲದೆ ತಾನು ಶೂದ್ರನಾದುದರಿಂದ ತನಗೆ ಅಡುಗೆಯ ಕೆಲಸವೇ ಯೋಗ್ಯವಾದುದೆಂದು ತಿಳಿಸಲು ಮನಸ್ಸಿಲ್ಲದ ಮನಸ್ಸಿನಿಂದ ವಿರಾಟನು ಅವನನ್ನು ಅಡುಗೆಯ ವಿಭಾಗಕ್ಕೆ ಅಧಿಕಾರಿಯನ್ನಾಗಿ ನೇಮಿಸಿದನು.

ಈ ಸಮಯಕ್ಕೆ ಸರಿಯಾಗಿ ದುರ್ಯೋಧನನು ಪಾಂಡವರ ವನವಾಸದ ಲೆಕ್ಕ ಹಾಕಿ ಅವರ ವನವಾಸಾವಧಿ ತೀರಿದೆಯೆಂದೂ, ಈಗ ಅವರು ಅಜ್ಞಾತದಲ್ಲಿರಬೇಕೆಂದೂ, ಈ ಅವಧಿಯಲ್ಲಿ ಅವರನ್ನು ಹೇಗಾದರೂ ಪತ್ತೆ ಹಚ್ಚಿಬಿಟ್ಟರೆ ಅವರನ್ನು ಪುನಃ ವನವಾಸಕ್ಕೆ ಕಳುಹಿಸಿಬಿಟ್ಟು ತಾನು ಸೌಖ್ಯವಾಗಿರಬಹುದೆಂದೂ ತರ್ಕಿಸಿದನು. ಅವನು ತನ್ನಲ್ಲಿದ್ದ ಬಲಿಷ್ಠರಾದ ನೂರಾರು ಕುಸ್ತಿಯ ಮಲ್ಲರನ್ನು ಬರಮಾಡಿ ಅವರು ದೇಶದ ಎಲ್ಲ ಕಡೆಗಳಲ್ಲಿಯೂ ತಮ್ಮ ಪ್ರತಾಪವನ್ನು ಹೊಗಳುತ್ತಾ ಹೋಗಿ ಪಾಂಡವರ ಕುರುಹನ್ನು ಕಂಡುಹಿಡಿಯಲು ಪ್ರಯತ್ನಿಸಬೇಕೆಂದು ಆಜ್ಞಾಪಿಸಿದನು. ತಿಂದು ಕೊಬ್ಬಿದ್ದ ಆ ಮಲ್ಲರು ತಮ್ಮ ತಮ್ಮ ಪೌರುಷಗಳನ್ನು ಕೊಚ್ಚಿಕೊಳ್ಳುತ್ತಾ, ಒಬ್ಬನು ಏಕಕಾಲದಲ್ಲಿ ತಾನು ನಾಲ್ಕು ಸಾವಿರ ಜನರನ್ನು ಕೊಂದಿರುವವನೆಂದೂ, ಮತ್ತೊಬ್ಬನು ತಾನು ಒಮ್ಮೆಗೇ ಐದು ಸಿಂಹಗಳನ್ನು ಬಲಿ ಹಾಕಿದವನೆಂದೂ ಮುಂತಾಗಿ ಹೊಗಳಿಕೊಳ್ಳುತ್ತಾ, ಆಕಾರದಲ್ಲಿ ತಮ್ಮ ಆಸ್ಥಾನದಲ್ಲಿಯೇ ಬಲಿಷ್ಠನಾಗಿದ್ದ ಜೀಮೂತನೆಂಬವನ ಮುಂದಾಳ್ತನದಲ್ಲಿ ಹೊರಟರು. ಅವರು ತಾವು ಹೋದಲ್ಲೆಲ್ಲ ಪಾಂಡವರನ್ನು ಹುಡುಕುತ್ತಾ ವಿರಾಟನ ರಾಜ್ಯಕ್ಕೂ ಬಂದು ಅಲ್ಲಿಯೂ ತಮ್ಮ ಒಡೆಯ ದುರ್ಯೋಧನನ ಬಿರುದು,

ಪರಾಕ್ರಮಗಳನ್ನು ಹೊಗಳಿಕೊಂಡು ಕಾಳಗವನ್ನು ಬೇಡಿದರು. ಆ ಸಮಯಕ್ಕೆ ಸರಿಯಾಗಿ ಪ್ರಖ್ಯಾತ ಮಲ್ಲನಾಗಿದ್ದ ಕೀಚಕನು ಬೇರೆಲ್ಲಿಗೋ ಹೋಗಿದ್ದನು. ಕಾಳಗವನ್ನು ಬೇಡಿದ ಪರರಾಜನ ಮಲ್ಲರಿಗೆ ಕಾಳಗವನ್ನು ಕೊಟ್ಟು ಅವರನ್ನು ಸೋಲಿಸುವದರ ಮೂಲಕ ವಿರಾಟನು ತನ್ನ ಗೌರವವನ್ನು ಉಳಿಸಿಕೊಳ್ಳಬೇಕಾಗಿತ್ತು. ಮಾರನೆಯ ದಿನ ಅವನು ತನ್ನ ಆಸ್ಥಾನದ ಜಟ್ಟಿಗಳನ್ನೆಲ್ಲ ಕರೆಸಿದನು. ಆದರೆ ಈ ಎಲ್ಲರನ್ನೂ ದುರ್ಯೋಧನನ ಕಡೆಯ ಸಿಂಧು ಮಲ್ಲ ಎಂಬೊಬ್ಬನೇ ಹಣಿದು ಹಾಕಿದನು. ವಿರಾಟನು ಮಾರನೆಯ ದಿನ ಪುನಃ ಅವರಿಗೆ ಕಾಳಗವನ್ನು ಕೊಡಿಸುವದಾಗಿ ಹೇಳಿ ಆ ದಿನ ಅವರನ್ನು ಕಳುಹಿಸಿ ತನ್ನ ಪರಿಸ್ಥಿತಿಗಾಗಿ ತುಂಬ ಶೋಕಿಸಲು ಪ್ರಾರಂಭಿಸಿದನು. ಇದನ್ನು ಕಂಡ ಕಂಕಭಟ್ಟನು...........

ರಮೆ:– ಯಾರು ? ಯುಧಿಷ್ಠಿರ.

ಮುರಳಿ:– ಹೌದು. ಅವನು ವಿರಾಟನನ್ನು ಕುರಿತು ಅವನಲ್ಲಿ ಅಡುಗೆಗೆ ಹೊಸದಾಗಿ ಸೇರಿರುವ ವಲಲನು ಈ ಹಿಂದೆ ಭೀಮನ ಬಳಿ ಇದ್ದವನೆಂದೂ ಅಲ್ಲಿ ಅವನು ಜಟ್ಟಿ ಕಾಳಗವನ್ನು ಅಭ್ಯಾಸ ಮಾಡಿದ್ದಾನೆಂದೂ ಅವನನ್ನು ಈಗ ಪರೀಕ್ಷಿಸಬಹುದೆಂದೂ ತಿಳಿಸಿದನು. ಇದರಿಂದ ವಿರಾಟನು ವಿಶೇಷವಾದ ಭರವಸೆಯನ್ನು ಪಡೆಯಲಾಗದೆ ಹೋದರೂ ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ ವಲಲನನ್ನು ಕರೆಸಿದನು. ಭೀಮ ಬಂದ. ಹೇಗೆ ಗೊತ್ತೆ ರಮಾ ? ಮುರಿದಿದ್ದ ಮೀಸೆ. ಕೆದರಿದ್ದ ಗುಂಗುರು ಕೂದಲು. ಕೆಂಪಗಿದ್ದ ಕಣ್ಣುಗಳು. ನಿಷ್ಠುರವಾದ ಮುಖ. ಎದ್ದು ಕಾಣುವ ಮೈಗೂದಲು. ಗಂಟಿಕ್ಕಿದಂತಿದ್ದ ಹುಬ್ಬುಗಳು. ಅಚ್ಚುಕಟ್ಟಾದ ಬಲಿಷ್ಠ ದೇಹ...........

ರಮೆ:– ಸುಂದರಾಂಗನಾದ ರಾಕ್ಷಸನಂತೆ ಎನ್ನಿ ?

ಮುರಳಿ:– ಹಾಗೆಯೇ ಅನ್ನು. ರಾಕ್ಷಸ ಬಲದಿಂದ ಕೂಡಿದ ಸುಂದರ ಶರೀರ, ಯೋಗಿಯ ಮನಸ್ಸು, ಮಗುವಿನ ಹೃದಯ, ಜ್ಞಾನಿಯ ಬುದ್ಧಿ – ಇವುಗಳಿಂದ ಕೂಡಿದ ಮಲ್ಲರ ಮಲ್ಲನಾದ ಭೀಮನು ಆಸ್ಥಾನಕ್ಕೆ ಬರುತ್ತಿದ್ದಂತೆ ಅವನನ್ನು ನೋಡಿದ ವಿರಾಟನಿಗೆ "ಇವನು ಕೌರವರ ಮಲ್ಲರನ್ನು ಗೆದ್ದರೂ ಗೆಲ್ಲಬಹುದೇನೊ" ಅನಿಸಿತು. ಅವನು ತಾನು ವಲಲನನ್ನು ಬರಹೇಳಿದ ವಿಷಯವನ್ನು ಅವನಿಗೆ ತಿಳಿಸಿ ಅವನಿಂದ ಆ ಕಾರ್ಯ ಸಾಧ್ಯವಿದೆಯೆ ಎಂದು ಕೇಳಿದಾಗ ಕಿರುನಗೆಯಿಂದ ಕೂಡಿದ ವಲಲನು "ರಾಜಾ, ಮಲ್ಲ ಯುದ್ಧದಲ್ಲಿ ನಾನು ಒಂದು ವೇಳೆ ಸತ್ತುಹೋದರೆ ಸ್ವಾಮಿಕಾರ್ಯಕ್ಕಾಗಿ ತಾನೆ ? ಗೆದ್ದರೆ ನಿನ್ನ ಕೃಪೆ ಒದಗುತ್ತದೆ. ಮಲ್ಲರನ್ನು ಕರೆಸು" ಎಂದನು. ದುರ್ಯೋಧನನ ಕಡೆಯ ಮಲ್ಲರು ಬಂದರು. ಭೀಮನನ್ನು ನೋಡಿದೊಡನೆ ಅವರು ನಗಲಾರಂಭಿಸಿದರು.

ರಮೆ:– ಏಕೆ ?

ಮುರಳಿ:– ಆಸ್ಥಾನದ ಮಲ್ಲರೆಲ್ಲ ಹಿಂದಿನ ದಿನ ನಾಶವಾದ ಮೇಲೆ ಇಂದು ಅಡುಗೆಯವನೇ ಕಾಳಗಕ್ಕೆ ಬಂದಿದ್ದಾನೆಂಬದನ್ನು ತಿಳಿದು ಇರಬೇಕು. ಇಷ್ಟಾಗಿ ಈ ಜನ್ಮದ ಅವರ ನಗೆಯ ಋಣವನ್ನು ಅವರು ತೀರಿಸಬೇಕಷ್ಟೆ! ಕಾಳಗ ಪ್ರಾರಂಭವಾಯಿತು. ದೇಹಬಲದಲ್ಲಿ ಅಂತರವಿದ್ದುದಕ್ಕೆ ಅನುಗುಣವಾಗಿ ಕ್ರಮ ಕ್ರಮೇಣ ಹೆಚ್ಚು ಹೆಚ್ಚು ಬಲಾಢ್ಯರು ವಲಲನಲ್ಲಿ ಸೆಣಸಿದರು. ಮಲ್ಲರ ಸಂಖ್ಯೆ ಯೆಲ್ಲ ಕರಗುತ್ತಾ ಬಂದು ಅವರ ಮುಖಂಡನಾದ ಜೀಮೂತನೊಬ್ಬನೇ ಉಳಿ ದನು. ಜಟ್ಟಿವನ್ನು ಹಿಡಿದು ಅಲುಗಾಡಿಸಿಯೇನೆಂಬ ತೋಳ ತೀಟೆ ಇರುವ ಭೀಮನಿಗೆ, ಸೆಣಸಾಟಕ್ಕೆ ಒಬ್ಬ ಸಿಕ್ಕಿದುದು ಆನಂದಕರವಾಗಿತ್ತು. ರಾಜಾ ಸ್ಥಾನವು ನೀಡುತ್ತಿದ್ದ ಅನ್ನಕ್ಕಾಗಿ ಮೈ ಬೆಳೆಸಿಕೊಂಡ ಜೀಮೂತನಿಗೂ ಅಂತಹ ಹಲವು ಆಸ್ಥಾನಗಳನ್ನು ಉರುಳಿಸಿ ಹಲವನ್ನು ಕಟ್ಟಲು ಸಮರ್ಥನಾಗಿದ್ದ ಭೀಮ ನಿಗೂ ಸಾಟಿಯಾಗಲು ಸಾಧ್ಯವೆ ? ಜೀಮೂತನೂ ಸತ್ತು ಬಿದ್ದನು. ವಿರಾಟನು ಆನಂದದಿಂದ ವಲಲನನ್ನು ಕೊಂಡಾಡಿದನು.

ರಮೆ:– ಒಂದು ವಿಷಯ. ಭೀಮ ತನ್ನ ವೇಷವನ್ನೇನೂ ಮರೆಸಿಕೊಂಡು ಬಂದಿರಲಿಲ್ಲವಷ್ಟೆ ?

ಮುರಳಿ:– ಹಾಗೆ ಬಂದ ಉಲ್ಲೇಖವಿಲ್ಲ.

ರಮೆ:– ಹಾಗಿದ್ದರೆ,ದುರ್ಯೋಧನನ ಆಸ್ಥಾನದಲ್ಲಿ ಈ ಹಿಂದೆ ಭೀಮನನ್ನು ನೋಡಿರಬಹುದಾಗಿದ್ದ ದುರ್ಯೋಧನನ ಮಲ್ಲರಿಗಾದರೂ ಅವನು ಭೀಮನೆಂಬದು ತಿಳಿಯದಿರುತ್ತಿತ್ತೆ ?

ಮುರಳಿ:– ತಿಳಿದರೆ ತಾನೆ ಏನು ? ತಾವು ಹಾಗೆ ತಿಳಿದುದನ್ನು ತಮ್ಮ ಒಡೆಯನಿಗೆ ತಿಳಿಸಲು ಅವರ ಪೈಕಿ ಯಾರೂ ಉಳಿಯಲೇ ಇಲ್ಲವಲ್ಲ !

ರಮೆ:– ಇರಬಹುದು. ಆದರೂ ಅವರು ಭೀಮನನ್ನು ನೋಡಿದೊಡನೆ ಆಶ್ಚರ್ಯದಿಂದ, ಇತರರಿಗೂ ಕೇಳಿಸುವಷ್ಟು ಗಟ್ಟಿಯಾದ ಪಿಸುಮಾತಿನಲ್ಲಿಯೇ ಆದರೂ "ಇವನು ಭೀಮ, ಭೀಮ" ಎಂದು ಹೇಳಿದುದು ವಿರಾಟನ ರಾಜಸಭೆಗೂ ತಿಳಿದು ವಿಷಯವು ಬಹಿರಂಗವಾಗದೆ ಇರುತ್ತಿತ್ತೆ ?

ಮುರಳಿ:– ಅವರೆಲ್ಲ ಸತ್ತಮೇಲೆ ಕಂಕಭಟ್ಟನೂ ಭೀಮನೂ "ಅವರಿಗೆ ವಲಲನನ್ನು ಕಂಡಾಗಲೇ ಭೀಮನನ್ನು ಕಂಡಷ್ಟು ಹೆದರಿಕೆಯಾಗಿಬಿಟ್ಟಿತ್ತು – ಪಾಪ, ಪುಕ್ಕಲುಗಳು" ಎಂದಷ್ಟು ಹೇಳಿದ್ದರೆ ಎಲ್ಲರ ಸಂಶಯವೂ ಪರಿಹಾರ ವಾಗಲು ಸಾಧ್ಯವಿರುತ್ತಿರಲಿಲ್ಲವೆ ?

ರಮೆ:– ಸರಿ. ಮುಂದಕ್ಕೆ ಹೇಳಿ.

ಮುರಳಿ:– ಕೇಳು. ಹಾಗೂ ಹೀಗೂ ಪಾಂಡವರು ವಿರಾಟನ ರಾಜಧಾನಿಯಲ್ಲಿ ತಮ್ಮ ಅಜ್ಞಾತವಾಸದ ಹನ್ನೊಂದು ತಿಂಗಳನ್ನು ಕಳೆದರು. ಅಷ್ಟರಲ್ಲಿ ಅವರನ್ನು ಮತ್ತೊಂದು ಪ್ರಬಲವಾದ ವಿಪತ್ತು ಎದುರಿಸಿತು. ವಿರಾಟನ ಮೈದುನನಾದ ಕೀಚಕನು ಒಂದು ದಿನ ತನ್ನ ಅಕ್ಕನನ್ನು ನೋಡಲೆಂದು ಅವಳಲ್ಲಿಗೆ ಬಂದನು. ಅವಳನ್ನು ಓಲೈಸುತ್ತಿದ್ದ ಅತೀವ ಸುಂದರಿಯಾದ ಸೈರಂಧ್ರಿಯನ್ನು ಅವನು ಕಂಡು ಅವಳಲ್ಲಿ ಬಹಳವಾಗಿ ಮೋಹಗೊಂಡನು. ಇದೇ ಮೋಹವು ಮಾರನೆಯದಿನವೂ ಅವನನ್ನು ಅಕ್ಕನಲ್ಲಿಗೆ ಬರಮಾಡಿಸಿತು. ಅವನು ಹಾಗೆ ಬರುವಾಗ ಸೈರಂಧ್ರಿಯನ್ನು ಬಾಗಿಲಿನಲ್ಲಿಯೇ ಕಂಡು ಅವಳಿಗೆ ತನ್ನ ಮನಸ್ಸಿನ ಅನುತಾಪವನ್ನು ತಿಳಿಸಿ ಅವಳ ಕೃಪೆಗಾಗಿ ಅಂಗಲಾಚಿ ಬೇಡಿಕೊಂಡನು. ಇದರಿಂದ ಗಾಬರಿಗೊಂಡ ಸೈರಂಧ್ರಿಯು ತಾನು ಗಂಧರ್ವರ ಪತ್ನಿಯೆಂದೂ, ಆದುದರಿಂದ ಕೀಚಕನು ತನ್ನನ್ನು ಬಯಸಿದರೆ ಅವನು ಗಂಧರ್ವರಿಂದ ನಾಶವಾದಾನೆಂದೂ ಬೆದರಿಸಲು ಪ್ರಯತ್ನಿಸಿದಳು. ಆದರೆ ಕಾಮಾಂಧನಾಗಿದ್ದ ಕೀಚಕನಿಗೆ ಭಯವಾಗಲಿ, ಲಜ್ಜೆಯಾಗಲಿ ತೊಂದರೆ ಕೊಡುವಂತಿರಲಿಲ್ಲ. ಅವಳ ಮಾತುಗಳನ್ನು ಕಿವಿಗೇ ಹಾಕಿಕೊಳ್ಳದೆ ಅವನು ಅವಳಲ್ಲಿ ಹಲವು ವಿಧದಿಂದ ಬೇಡಿಕೊಂಡು ಪೀಡಿಸಲು ಪ್ರಾರಂಭಿಸಿದನು. ಸೈರಂಧ್ರಿಯು ಆ ಸ್ಥಳವನ್ನೇ ಬಿಟ್ಟು ಹೊರಟು ಹೋದಳು. ಕೀಚಕನು ತನ್ನ ಅಕ್ಕ ಸುಧೇಷ್ಣೆಯಲ್ಲಿಗೆ ಬಂದು ತನಗೆ ಸೈರಂಧ್ರಿಯು ದೊರಕುವಂತೆ ಮಾಡಿಕೊಡಬೇಕೆಂದು ಅಂಗಲಾಚಿ ಬೇಡಿದನು. ಮೊದಮೊದಲು ಸುಧೇಷ್ಣೆಯು ಅವನ ಸೂಚನೆಯನ್ನು ವಿರೋಧಿಸಿದರೂ ಕೊನೆಗೆ ತಮ್ಮನ ಮೇಲಿನ ವ್ಯಾಮೋಹದಿಂದ ಅವನಿಗಾಗಿ ಸಹಕರಿಸಲು ಒಪ್ಪಿಕೊಂಡಳು. ಇನ್ನೇನು, ಸೈರಂಧ್ರಿಯು ತನ್ನ ವಶಳಾದಳೆಂದೇ ನಂಬಿಕೊಂಡ ಕೀಚಕನು ಆನಂದದಿಂದ ತನ್ನ ಮನೆಗೆ ಹೊರಟುಹೋದನು.

ಮಾರನೆಯ ದಿನ ಸುಧೇಷ್ಣೆಯು ಸೈರಂಧ್ರಿಯನ್ನು ಕರೆದು ಒಂದು ಬಟ್ಟಲಿನಲ್ಲಿ ಮಧುವನ್ನು ತುಂಬಿ ಕೊಟ್ಟು ಅದನ್ನು ಕೀಚಕನ ಮನೆಗೆ ಹೋಗಿ ಅವನಿಗೆ ಕೊಟ್ಟು ಬರುವಂತೆ ತಿಳಿಸಿದಳು. ದ್ರೌಪದಿಯು ಒಡತಿಯ ಮಾತನ್ನು ಉಲ್ಲಂಘಿಸುವಂತಿರಲಿಲ್ಲ. ಅವಳು ಕೀಚಕನಲ್ಲಿಗೆ ಹೋಗಬೇಕಾಯಿತು. ಅವಳನ್ನು ತನ್ನ ಮನೆಯ ಬಾಗಿಲಿನಲ್ಲೇ ಸಂಧಿಸಿದ ಕೀಚಕನು ಒಮ್ಮೆಗೇ ಅವಳ ಕೈಹಿಡಿದನು. ಅವಳು ಕೈ ಕುಸುಕಿ ಕಷ್ಟದಿಂದ ತಪ್ಪಿಸಿಕೊಂಡು ಬಟ್ಟಲನ್ನು ಅಲ್ಲೇ ಬಿಸುಟು ವಿರಾಟನ ರಾಜಸಭೆಯ ಕಡೆಗೆ ಓಡಿದಳು. ಕೀಚಕನೂ ಅವಳನ್ನು ಬೆನ್ನಟ್ಟಿ ಹೋಗಿ ಅವಳ ತುರುಬನ್ನು ಹಿಡಿದೆಳೆದು ಅವಳನ್ನು ಕಾಲಿನಿಂದ ಒದೆದು ಕೆಡವಿದನು. ಅವನ ಒದೆತಕ್ಕೆ ರಕ್ತವನ್ನು ಕಾರಿದ ದ್ರೌಪದಿಯು ನೆಲದಲ್ಲಿ ಬಿದ್ದು

ಧೂಳಿನಲ್ಲಿ ಹೊರಳಿದಳು. ಕೀಚಕನು ನಿರಾಶೆಯಿಂದ ಹಿಂದಿರುಗಿದನು. ಸೈರಂಧ್ರಿಯು ಸಭೆಯಲ್ಲಿದ್ದ ಕಂಕಭಟ್ಟನನ್ನು ಕರೆದು "ಅಯ್ಯಾ ಸನ್ಯಾಸಿಯೇ, ಬಾಯಿಯಲ್ಲಿ ಬೇಕಷ್ಟು ಧರ್ಮ ವಿಚಾರಗಳನ್ನು ಹೇಳುತ್ತೀಯ. ಆದರೆ ಈಗ ಅಬಲೆಯೊಬ್ಬಳ ಪರವಾಗಿ ನ್ಯಾಯಸಮ್ಮತವಾದ ಸಹಾಯವನ್ನು ಮಾಡದೆ ಕುಳಿತಿರುವೆಯಲ್ಲಾ" ಎಂದು ಮೊರೆಯಿಟ್ಟಳು. ಆದರೆ ಕಂಕಮುನಿಯು ತಟಸ್ಥ ನಾಗಿ ಕುಳಿತಿದ್ದನು. ದ್ರೌಪದಿಗೆ ಒದಗಿದ ಈ ದುರವಸ್ಥೆಯನ್ನು ದೂರದ ಅಡುಗೆಯ ಮನೆಯಿಂದ ನೋಡುತ್ತಿದ್ದ ವಲಲನಿಗೆ ಕರುಳು ಕಿವಿಚಿದಂತಾಯಿತು. ಅವನು ತನ್ನ ಜನ್ಮವನ್ನು ತಾನೇ ಹಳಿದುಕೊಂಡನು. ಅವನ ಕಣ್ಣುಗಳಿಂದ ಪಳಪಳನೆ ನೀರುದುರಿತು. ಜೊತೆಯಲ್ಲಿಯೇ ಅಸಾಧ್ಯವಾದ ಸಿಟ್ಟೂ ಬಂದಿತು. ಅಂತಹ ಸಿಟ್ಟಿನ ಉದ್ವೇಗದಲ್ಲಿಯೂ ಕೂಡ ಮುಂದಾಲೋಚನೆಯನ್ನು ಕಳೆದು ಕೊಳ್ಳದ ಅವನು "ಮೊದಲು ಈ ನೀಚ ಕೀಚಕನನ್ನೂ ಅವನ ತಮ್ಮಂದಿರನ್ನೂ ಕೊಂದು, ಅದನ್ನು ಪ್ರತಿಭಟಿಸಿದರೆ ವಿರಾಟನನ್ನೂ ನಿರ್ಮೂಲ ಮಾಡಿ, ನಮ್ಮ ಗುಪ್ತ ವೇಷಗಳನ್ನು ಪತ್ತೆ ಹಚ್ಚುವ ಮೊದಲೇ ಕೌರವರನ್ನೂ ಆಹುತಿ ತೆಗೆದು ಕೊಂಡುಬಿಡುತ್ತೇನೆ" ಎಂದುಕೊಳ್ಳುತ್ತಾ ರಾಜಾಲಯದ ಮುಂದಿದ್ದ ಒಂದು ಹೆಮ್ಮರವನ್ನು ನೋಡಿದನು.

ರಮೆ:– ಇಂತಹ ಸಂದರ್ಭಗಳಲ್ಲೆಲ್ಲ ನೀವು ಭೀಮನ ಹಿರಿತನವನ್ನು ಅಳೆಯಲಾರಿರಿ.

ಮುರಳಿ:– ಯಾಕೆ ? ನಾನೇನು ಹೇಳಿದೆ ?

ರಮೆ:– ಹೇಳಿದಿರಿ ಅಂತ ಅಲ್ಲ. ವ್ಯಕ್ತಿಯ ಗುಣ, ಅವಗುಣ, ಹಿರಿತನ, ಸಣ್ಣತನ–ಇವುಗಳನ್ನು ಸರಿಯಾಗಿ ಅಳೆದು ತೋರಿಸುವ ಅಳತೆಗೋಲು ಲೋಕ ದಲ್ಲಿ ಇಲ್ಲದುದರಿಂದಲೇ ಈ ಕಾವ್ಯ ಎಂಬವು ಹುಟ್ಟಲು ಸಾಧ್ಯವಾಯಿತೋ ಏನೋ. ಶ್ರೀ ರಾಮನ ಹಿರಿತನವನ್ನು ಹೇಳಲು ಅಷ್ಟು ದೊಡ್ಡ ರಾಮಾಯಣ ವನ್ನೇ ಬರೆಯಬೇಕಾಯಿತು. ಕೃಷ್ಣನ ಪರಿಪೂರ್ಣತೆಯನ್ನು ಹೇಳಲು ಮಹಾ ಭಾರತವನ್ನೂ ಹಲವಾರು ಪುರಾಣಗಳನ್ನೂ ಬರೆದು ಕೂಡ ವಿಫಲಗೊಳ್ಳಬೇಕಾ ಯಿತು. ಒಂದು ವ್ಯಕ್ತಿಯ ಜೀವನದ ಕೆಲವು ಘಟನೆಗಳನ್ನಷ್ಟೇ ತೆಗೆದುಕೊಂಡು ಆ ವ್ಯಕ್ತಿಯ ಗುಣಗಳನ್ನು ತಿಳಿಸಲು ಪ್ರಯತ್ನಿಸುವದು ಮಾತ್ರವೇ ಸಾಧ್ಯ. ಆದರೆ ಆ ವ್ಯಕ್ತಿತ್ವವು ಉಂಟುಮಾಡಿದ ಆ ಘಟನೆಯು ಸೂರ್ಯನಿಂದ ಬಂದ ಒಂದು ಕಿರಣದಷ್ಟು ಮಾತ್ರ ಮೌಲಿಕವಾಗಿರಲು ಸಾಧ್ಯ. ಇಷ್ಟಾಗಿ ಕೆಲವೊಮ್ಮೆ ಅಂತಹ ಘಟನೆಗಳಿಂದ ಆ ವ್ಯಕ್ತಿಯ ವ್ಯಕ್ತಿತ್ವವನ್ನು ತಪ್ಪಾಗಿ ತಿಳಿಯಲು ಕೂಡ ಸಾಧ್ಯ ವಿದೆ. ಇದು ಅಳೆಯುವವನ ಪ್ರೌಢಿಮೆಯನ್ನು ಅನುಸರಿಸಿರುತ್ತದೆ. ಇಷ್ಟೇ ಅಲ್ಲ, ಕೆಲವರ ವ್ಯಕ್ತಿತ್ವಕ್ಕೆ ಆಳವಿಲ್ಲದೆ ಹರವು ದೊಡ್ಡದಾಗಿರುತ್ತದೆ. ಕೆಲವರ ವ್ಯಕ್ತಿತ್ವವು

ಹರಡಿಕೊಂಡು ಕಾಣಿಸದೆ ಬಹಳ ಆಳವಾಗಿರುತ್ತದೆ. ಭೀಮನದು ಹೆಚ್ಚಿನಂಶ ಎರಡನೆಯ ವರ್ಗಕ್ಕೆ ಸೇರುತ್ತದೆ. ಇಲ್ಲಿ ಅವನು ಮರವನ್ನು ನೋಡಿದನೆಂಬದಷ್ಟೇ ಘಟನೆ. ಆದರೆ ಅದರ ಹಿನ್ನೆಲೆಯಲ್ಲಿರುವ ಅವನ ಅನುಕಂಪ, ನ್ಯಾಯ ನಿಷ್ಠುರತೆ, ಪರೋಪಕಾರ ಬುದ್ಧಿ, ನಿರ್ಭೀತತನ, ಸ್ವಾವಲಂಬನೆ ಮೊದಲಾದ ಗುಣಗಳನ್ನು ಕಂಡುಕೊಳ್ಳಲು ನೀವು ಕತೆ ಹೇಳಬಾರದು, ಕತೆ ಹೇಳುವದನ್ನು ನಿಲ್ಲಿಸಬೇಕು.

ಮುರಳಿ:- ಎಲ ! ನಿಲ್ಲಿಸಿದರೆ ?

ರಮೆ:- ನಿಲ್ಲಿಸಿ ಕಲ್ಪನೆಯನ್ನು ಹರಿಯಬಿಡಬೇಕು. ಒಳಗಣ್ಣಿನಿಂದ ಅವನ ವ್ಯಕ್ತಿತ್ವ ಸಾಗರದ ಶ್ರೀಮದ್ಗಾಂಭೀರ್ಯವನ್ನು ರಸಿಸಬೇಕು.

ಮುರಳಿ:- ಸಂತೋಷ. ಆದರೆ ನಾನು ಇಲ್ಲಿ ಭೀಮನ ಹಿರಿತನವನ್ನು ಅಳೆಯಲಾರೆ ಎಂದೆಯಲ್ಲಾ, ಏಕೆ ?

ರಮೆ:- ನೀವು ಎಂದರೆ ಗಂಡಸರು ಎಂದು ಹೇಳಿದೆ. ಇಲ್ಲಿ ದ್ರೌಪದಿಯ ದೃಷ್ಟಿಯಿಂದ, ಒಬ್ಬಳು ಅಬಲೆಯ ದೃಷ್ಟಿಯಿಂದ, ಪತ್ನಿಯಾದವಳ ದೃಷ್ಟಿಯಿಂದ, ಭೀಮನ ಹಿರಿತನವನ್ನು ಅಳೆಯಬೇಕು ಎಂದು ಹೇಳಿದೆ. ದ್ರೌಪದಿಯ ಆಗಿನ ಸಂಕಟವು ಒಂದು ಹೆಣ್ಣಿಗೆ ಅರ್ಥವಾಗುವಷ್ಟು ಸುಲಭವಾಗಿ ಗಂಡಸರಿಗೆ ಅರ್ಥವಾಗಲಾರದು. ಭೀಮನು ತಮ್ಮನಾಗಿ, ಯುವರಾಜನಾಗಿ, ಗೆಳೆಯನಾಗಿ, ದಾಯಾದಿಯಾಗಿ, ವೀರನಾಗಿ ಏನು ಮಾಡಿದನೊ, ಏನು ಬಿಟ್ಟನೊ—ಅದನ್ನು ನಾನು ಹೇಳಲು ಹೋಗುತ್ತಿಲ್ಲ. ಆದರೆ ಅವನು ಒಂದು ಹೆಣ್ಣಿನ ಗಂಡನಾಗಿ, ಅವಳ ಒಡೆಯನಾಗಿ, ಅವಳಿಂದ ಸುಖ ಪಡೆದವನಾಗಿ, ಅವಳ ಸುಖ–ದುಃಖಗಳ ಜವಾಬ್ದಾರಿಕೆಯನ್ನು ಹೊತ್ತವನಾಗಿ, ಅವಳ ಕೈ ಹಿಡಿದವನಾಗಿ ಹೇಗೆ ನಡೆದುಕೊಂಡ ಎಂಬದನ್ನು ಹಲವು ಸಂದರ್ಭಗಳಲ್ಲಿ ನೋಡಿದ ಮೇಲೆ, ಆ ಹೆಂಡತಿಯ ಮೂಲಕ ಲೋಕದ ಇಡಿಯ ಹೆಣ್ಣು ಕುಲದ ದೃಷ್ಟಿಯಲ್ಲಿ—ಅಂತಹ ಇನ್ನೊಬ್ಬ ಗಂಡಸು—ಬಹುಶಃ ಶ್ರೀರಾಮನನ್ನು ಬಿಟ್ಟರೆ—ಲೋಕದ ಚರಿತ್ರೆಯಲ್ಲಿ ಸಿಕ್ಕಬಲ್ಲ ಎಂದು ಹೇಳಲು ಸಾಧ್ಯವಿಲ್ಲ. ತನ್ನ ವೈಯಕ್ತಿಕವಾದ ಸ್ಥಿತಿ, ಗತಿ, ಸಂರಕ್ಷಣೆ, ಜವಾಬ್ದಾರಿಕೆಗಳನ್ನು ಮರೆತು, ತನ್ನನ್ನು ನಂಬಿದ ಹೆಣ್ಣಿನ ಆಪತ್ತಿಗೆ ಒದಗುವ ಗಂಡು ಆ ಹೆಣ್ಣಿನ ದೃಷ್ಟಿಯಲ್ಲಿ ಆಕೆಯ ಭಾಗದ ಜೀವಂತ ಪರದೈವವಾಗಿರುತ್ತಾನೆ ಎಂದು ಹೇಳಿದರೆ ಅವನ ಮೌಲಿಕತೆಯನ್ನು ಸ್ವಲ್ಪವಾದರೂ ಹೇಳಿದಂತಾಗುತ್ತದೆ. ಭೀಮನು ದ್ರೌಪದಿಗೆ ಹಾಗಿದ್ದ ಎಂಬದು ಕತೆಯ ಅಂಶಕ್ಕಿಂತ ಹೆಚ್ಚಾಗಿ ಕಲ್ಪನೆಯ ಅಂಶವಾಗುತ್ತದೆ. ಇರಲಿ. ಮುಂದಕ್ಕೆ ಹೇಳಿ.

ಮುರಳಿ:- ಸದ್ಯ ಬದುಕಿದೆ. ನಾನು ಇಷ್ಟು ಹೇಳಿದ ಭೀಮನ ಕತೆ ವ್ಯರ್ಥವಾಗಲಿಲ್ಲವಲ್ಲ ! ಇರಲಿ, ಕೇಳು. ಭೀಮನು ಮರವನ್ನು ನೋಡಿದಾಗ

ಅವನ ಇಂಗಿತವನ್ನು ತಿಳಿಯಲು ಕಂಕಭಟ್ಟನಿಗೆ ಕಷ್ಟವಾಗಲಿಲ್ಲ. ಬಹುಶಃ ಅವನ ದೃಷ್ಟಿಯೆಲ್ಲ ಧೂಳಿನಲ್ಲಿ ಬಿದ್ದು ಹೊರಳುತ್ತಿದ್ದ ಅವನ ಪತ್ನಿಯ ಮೇಲಿದ್ದುದಕ್ಕಿಂತ ಹೆಚ್ಚಾಗಿ, ಅದನ್ನು ನೋಡಿದ ಭೀಮನು ಏನು ಮಾಡುತ್ತಾನೋ ಎಂದು ಕಂಡು ಹಿಡಿಯುವದರ ಮೇಲೆಯೇ ನೆಟ್ಟದ್ದಿರಬೇಕು. ಅವನು ಭೀಮನನ್ನು ಕುರಿತು ಆ ಹೆಮ್ಮರವು ಸುಜನರಿಗೆ ಆಶ್ರಯ ಕೊಡುವಂತಹದೆಂದೂ ಅವನು ಅಡುಗೆಯ ಸೌದೆಗಾಗಿ ಬೇರೆ ಮರವನ್ನು ನೋಡಬಹುದೆಂದೂ ಹೇಳಿ ಪರೋಕ್ಷವಾಗಿ ಭೀಮನು ಸುಮ್ಮನಿರಬೇಕೆಂಬದನ್ನು ಸೂಚಿಸಿದನು. ಭೀಮನು ಬೇಸರದಿಂದ ಆ ಸ್ಥಳದಲ್ಲಿಯೇ ನಿಲ್ಲದೆ ಹೊರಟುಹೋದನು.

ರಮೆ:– ನೋಡಿ. ಇದೇ ನಾನು ಆಗ ಹೇಳಿದುದು. ಇಲ್ಲಿ ಭೀಮನ ಕೃತ್ಯ ಸಣ್ಣದು. ಅದರ ಹಿಂದಿರುವ ಅವನ ಹೃದಯದ ಹಿರಿತನ ಸಮರ್ಥ ಕಲ್ಪನೆಗೆ ಮಾತ್ರ ಸಿಕ್ಕುವಂತಹದು. ಆದರೆ ನಿಮ್ಮ ಈ ಯುಧಿಷ್ಠಿರನ ಕತೆ ಏನು ? ತಮ್ಮ ಪತ್ನಿಯನ್ನು ತಮ್ಮ ಕಣ್ಣೆದುರಿನಲ್ಲಿಯೇ ಪರಪುರುಷನೊಬ್ಬನು ಅಟ್ಟಿಕೊಂಡು ಬಂದು ಅವಳ ಮುಡಿಯನ್ನು ಹಿಡಿದೆಳೆದು ತಾವು ನೋಡುತ್ತಿರುವಂತೆಯೇ ಬಹಿರಂಗವಾಗಿ ಅವಳನ್ನು ಒದೆದು ಬೀಳಿಸಿದರೂ ಕೂಡ ತಮ್ಮ ವೇಷದ ಗುಟ್ಟು ರಟ್ಟಾದೀತೋ ಏನೋ, ತಮ್ಮನ್ನು ಕೌರವರು ಕಂಡುಹಿಡಿದು ಪುನಃ ಕಾಡಿಗೆ ಕಳುಹಿಸಿಯಾರೋ ಏನೋ, ತಮಗೆ ಸುಲಭವಾಗಿ ಸಿಕ್ಕಬಹುದಾದ ರಾಜ್ಯವು ಸಿಕ್ಕದೆ ಹೋಗುತ್ತದೋ ಏನೋ ಎಂಬದಕ್ಕಾಗಿ ತಮ್ಮ ಪತ್ನಿಯನ್ನು ಪರಪುರುಷನ ಕೈಯಲ್ಲಿ ಅವಮಾನಪಡಿಸುವದಕ್ಕೆ ಅಂಜದ ಈ ಯುಧಿಷ್ಠಿರಾದಿಗಳ ಹಿರಿತನ ನನಗಂತೂ ನಿಜವಾಗಿ ಅರ್ಥವಾಗುವದಿಲ್ಲ. ಈ ಹಿಂದೆ ಆದರೂ ತುಂಬಿದ ಸಭೆಯಲ್ಲಿ ಕೌರವರು ದ್ರೌಪದಿಯ ಸೀರೆಯನ್ನು ಬಿಚ್ಚುತ್ತಿದ್ದಾಗ ತಾವು ದ್ಯೂತದಲ್ಲಿ ಸೋತವರು, ಪರಾಧೀನರಾಗಿದ್ದವರು ಎಂಬ ಎಲ್ಲ ಗೊಡ್ಡು ಧರ್ಮದ ವಾದವನ್ನು ಒಡ್ಡಿ ಯುಧಿಷ್ಠಿರನೂ, ಅರ್ಜುನನೂ ತಪ್ಪಿಸಿಕೊಂಡರು. ಇಲ್ಲಿ ಕಾಮುಕನಾದ ಕೀಚಕನು ಅಸಹಾಯಳಾದ ದ್ರೌಪದಿಯನ್ನು ಬಲಾತ್ಕಾರ ಕಾಮಕ್ಕೆ ಒಳಪಡಿಸುವದಕ್ಕಾಗಿ ಹೀಗೆಲ್ಲ ಹಿಂಸಿಸುತ್ತಿರುವಾಗ ನಿಮ್ಮ ಕಂಕಭಟ್ಟ ಅದನ್ನು ನೋಡುತ್ತಾ ಕುಳಿತಿದ್ದುದು, ಅದನ್ನು ತಡೆಯಲು ಪ್ರಯತ್ನಿಸಿದ ಭೀಮನನ್ನೇ ತಡೆದುದು, ಕೇವಲ ತನ್ನ ಸ್ವಾರ್ಥ ಸಾಧನೆಗಾಗಿ ಹೊರತು ಅದು ಬೇರೆ ಯಾವ ಧರ್ಮವನ್ನು ರಕ್ಷಿಸುವದಕ್ಕಾಗಿ? ನೀವು ಭೀಮನ ಜೀವನವನ್ನು ವಿಮರ್ಶೆ ಮಾಡುವಾಗ, ಯಾವದೇ ಒಂದು ಘಟನೆಯ ಸಂದರ್ಭದಲ್ಲಿ ಭೀಮನ ವರ್ತನೆಯನ್ನು ವಿರೋಧಿಸಿದ, ಅಥವಾ ಅವನ ವರ್ತನೆಗೆ ವಿರುದ್ಧವಾಗಿ ವರ್ತಿಸಿದ ಇತರರ ಮನೋಭಾವವನ್ನು ವಿಶ್ಲೇಷಣೆ ಮಾಡುವದಿಲ್ಲವೇಕೆ ? ಹೆಂಡತಿಯನ್ನು ಪರರಿಗೊಪ್ಪಿಸಿಯಾದರೂ ತಾವು ರಾಜ್ಯವಾಳಬೇಕೆಂಬ ಬಯಕೆ ಒಬ್ಬನನ್ನು ಮಹಾತ್ಮನನ್ನಾಗಿ ಹೇಗೆ ಮಾಡಲು ಸಾಧ್ಯ ?

ಮುರಳಿ:– ನೀನು ಮಾಡಿದ ಆಪಾದನೆಗಳು ಇತರರಿಗೆ ನೀನು ಹೇಳಿ ದಂತೆಯೇ ಅನ್ವಯಿಸಬಹುದಾದರೂ ಯುಧಿಷ್ಠಿರನ ವ್ಯಕ್ತಿತ್ವವನ್ನು ವಿಮರ್ಶಿಸಿ ನೋಡಿದರೆ ಅವನು ರಾಜ್ಯದ ಆಸೆಗಾಗಿ ತನ್ನ ಹೆಂಡತಿಯ ಅವಮಾನವನ್ನು ಸಹಿಸಿಕೊಂಡಿದ್ದ ಎನ್ನುವದಕ್ಕಿಂತಲೂ ಅವನ ಸಂಯಮವು ಅಷ್ಟೊಂದು ಶಕ್ತಿಶಾಲಿ ಯಾಗಿತ್ತು ಎನ್ನಬೇಕಾಗುತ್ತದೆ. ಜೀವನದಲ್ಲಿ ಒದಗಿಬಂದುದೆಲ್ಲವನ್ನೂ ಶಾಂತಿ ಯಿಂದ ಎದುರಿಸುವ ಗುಣ ಶೂರತನದ ಪರಮಾವಧಿ. ಪರಿಸ್ಥಿತಿಯನ್ನು ಸಹಿಸ ಲಾರದೆ ತಕ್ಷಣವೇ ಪ್ರಬಲವಾದ ಪ್ರತೀಕಾರ ಮಾಡಬೇಕೆಂಬ ತನ್ನ ತೀವ್ರವಾದ ಬಯಕೆಯನ್ನು ಭೀಮನು ಅಣ್ಣನ ಆಣತಿಗೆ ತಲೆಬಾಗಿ ಅದುಮಿಕೊಳ್ಳುವಲ್ಲಿ ಅವನು ತೋರುತ್ತಿದ್ದ ಅಸಾಮಾನ್ಯ ಸಂಯಮ ಶಕ್ತಿಯನ್ನು ನಾವು ಹೇಗೆ ದೊಡ್ಡ ಆದರ್ಶವೆಂದು ಕರೆಯುತ್ತೇವೋ, ಯುಧಿಷ್ಠಿರನ ಸಂಯಮ ಶಕ್ತಿ ಅದಕ್ಕಿಂತಲೂ ಹೆಚ್ಚು ಆದರ್ಶಯುತವಾದುದು. ಏಕೆಂದರೆ ಇಲ್ಲಿ ಯುಧಿಷ್ಠಿರನಿಗೆ, ಭೀಮನಿ ಗಿದ್ದಂತೆ ಅಣ್ಣನಾಜ್ಞೆಯೆಂಬ ಹೊರಗಿನ ಪ್ರೇರಣೆಯಿಲ್ಲದೆ, ಕೇವಲ ತನ್ನದೇ ವ್ಯಕ್ತಿತ್ವದ ಪ್ರೇರಣೆಯಿಂದ ಅಂತಹ ಸಂಯಮ ಒದಗಿ ಬರಬೇಕಾಗಿತ್ತು. ಭೀಮ ನದು ಆದರ್ಶವಾದ ಗುಣ ಎನ್ನಬಹುದಾದರೆ, ಯುಧಿಷ್ಠಿರನದು ಆದರ್ಶವಾದ ಸ್ವಭಾವ ಎನ್ನಬಹುದು.

ರಮೆ:– ಸ್ವಭಾವಕ್ಕೆ ಅನುಗುಣವಾಗಿ ವರ್ತಿಸುವದರಲ್ಲಿ ಏನು ಹೆಚ್ಚುಗಾರಿಕೆ ಇದೆ ? ಪ್ರಾಣಿಯೂ ಸ್ವಭಾವಕ್ಕೆ ಸರಿಯಾಗಿ ವರ್ತಿಸುತ್ತದೆ. ಸ್ವಭಾವವನ್ನು ಹತ್ತಿಕ್ಕಿ ಅದಕ್ಕೆ ವಿರುದ್ಧವಾಗಿ ವರ್ತಿಸುವದರಲ್ಲಿ ತಾನೆ ಮನುಷ್ಯನ ಹಿರಿಮೆ ವ್ಯಕ್ತವಾಗುವದು ? ಭೀಮ ಇಂತಹ ಹಿರಿತನವನ್ನು ಆಗಾಗ ತೋರಿಸಿದುದ ರಿಂದಲ್ಲವೇ ಅವನ ಗುಣವನ್ನು ನಾವು ಆದರ್ಶವಾದುದು ಎನ್ನುವದು ? ನಿಮ್ಮ ತತ್ವ ಎಲ್ಲ ನನಗೆ ಬೇಡ. ಕೇವಲ ಯುಧಿಷ್ಠಿರನೇ ಆಗಿದ್ದರೆ ದ್ರೌಪದಿಯ ಗತಿ ಯಾವಾಗಲೋ ಏನೋ ಆಗಿ ಹೋಗುತ್ತಿತ್ತು ಎಂಬ ವಸ್ತುಸ್ಥಿತಿಯನ್ನು ಕಡೆಗಣಿಸಿ ನೀವು ತತ್ವ ಹೇಳುವದು ಬೇಡ.

ಮುರಳಿ:– ಯುಧಿಷ್ಠಿರನ ವ್ಯಕ್ತಿತ್ವವನ್ನು ಅಳೆಯಬೇಕಾದ ಅಳತೆಗೋಲೇ ಬೇರೆ ರಮಾ. ಆ ಕುರಿತು ಸದ್ಯಕ್ಕೆ ನಮಗೆ ಜಿಜ್ಞಾಸೆ ಬೇಡ. ಆದರೆ, ಹಾಗೆಂದು, ಭೀಮ ತನ್ನ ಪತ್ನಿಗೋಸ್ಕರ, ಒಬ್ಬಳು ಹೆಣ್ಣಿಗೋಸ್ಕರ ತನ್ನ ಸುಖವನ್ನು ತೃಣವಾಗಿ ಎಣಿಸುವ ದೊಡ್ಡತನವನ್ನು ಪಡೆದಿದ್ದ ಎಂಬ ನಿನ್ನ ಅಭಿಪ್ರಾಯವನ್ನು ನಾನು ಪೂರ್ಣವಾಗಿ ಸಮರ್ಥಿಸುತ್ತೇನೆ. ಕೀಚಕನ ಕತೆ ಇಷ್ಟಕ್ಕೇ ಮುಗಿಯಲಿಲ್ಲ. ಇನ್ನೂ ಹೆಚ್ಚಿನ ಸ್ವಾರಸ್ಯಗಳಿವೆ. ಮುಂದಕ್ಕೆ ಕೇಳು.

ರಮೆ:– ಹೇಳಿ, ಹೇಳಿ.

ಮುರಳಿ:– ಸೈರಂಧ್ರಿಗೆ ಕಂಕಮುನಿಯ ವರ್ತನೆಯಿಂದಾಗಿ ಬಹಳ ದುಃಖ ವಾಯಿತು. ಅವಳು ತನ್ನ ಈ ದುಃಖವನ್ನು ಹೇಳಿಕೊಳ್ಳುವದಾದರೂ ಈಗ ಯಾರಲ್ಲಿ? ಹೇಗಾದರೂ ಕಷ್ಟಪಟ್ಟು ಹೇಳಿಕೊಂಡರೂ ಅದರಿಂದ ಏನು ಪ್ರಯೋಜನವಾಗಬಹುದಿತ್ತು? ಯುಧಿಷ್ಠಿರನಿಗೆ ಧರ್ಮದ ಆತಂಕ; ಅರ್ಜುನನಿಗೆ ಅಣ್ಣನ ಅಭಿಪ್ರಾಯದ ಆತಂಕ; ನಕುಲ ಸಹದೇವರು ಈ ಕುರಿತು ಸಾಕಷ್ಟು ಸಮರ್ಥರಲ್ಲ. ತಾನು ಹೇಳಿಕೊಳ್ಳಬೇಕಾದರೂ ಇರುವದು ಒಂದೇ ವ್ಯಕ್ತಿ. ಅದು ವಲಲ. ಅವನು ಏನಾದರೂ ತನ್ನ ನೆರವಿಗೆ ಬಂದರೆ ಮಾತ್ರ ತನ್ನ ಮಾನದ ರಕ್ಷಣೆ ಆಗಬಹುದು. ಅವನೂ ನಿರಾಕರಿಸಿದರೆ ವಿಷವನ್ನು ಕುಡಿದು ಸಾಯುವ ದೊಂದೇ ತನಗೆ ದಾರಿ ಎಂದು ಸೈರಂಧ್ರಿ ನಿಶ್ಚಯಿಸಿಕೊಂಡಳು.

ರಮೆ:– ಜಟಕಾಕ್ಕೆ ಕಟ್ಟಿದ ಕುದುರೆಯ ಹಾಗೆ ಒಂದೇ ದಿಕ್ಕಿಗೆ ಎಳೆದು ಕೊಂಡು ಹೋಗುವದು ಬಿಟ್ಟು ಸ್ವಲ್ಪ ಕಣ್ಣು ತಿರುಗಿಸಿ ನೋಡಿ. ಹೆಣ್ಣಿನ ಬಾಳಿನ ಈ ಅಸಹಾಯಕತನ ನಿಮ್ಮ ವಿಮರ್ಶಾವಸ್ತುವಾಗದಿರುವದು ಆಶ್ಚರ್ಯ. ನಿಮ್ಮ ಯುಧಿಷ್ಠಿರ ಮೊದಲಾದವರಿಗೆ ಈಗ ಬಂದಿರುವ ಆಪತ್ತೇನು? ರಾಜ್ಯವನ್ನು ಗಳಿಸಿ ಸಂಭ್ರಮದಿಂದ ಮೆರೆಯಬೇಕೆಂಬ ಹಂಬಲವೇ ಅವರು ತಮ್ಮದೆಂದು ತಿಳಿದುಕೊಂಡಿರುವ ಅವರ ಆಪತ್ತು. ಅವರ ಈಗಿನ ಪರಾವಲಂಬನ ಸ್ಥಿತಿಗಾದರೂ ಕಾರಣ ಇತರರಲ್ಲ. ಅವರ ದ್ಯೂತದ ಹುಚ್ಚೇ ಅವರನ್ನು ಈ ಸ್ಥಿತಿಗೆ ಒಯ್ದಿರುವದು. ಆದರೆ ದ್ರೌಪದಿಗೆ ಈಗ ಬಂದಿರುವ ಆಪತ್ತೇನು? ಮಹಾರಾಣಿಯಾಗಿ ಮೆರೆಯು ತ್ತಿಲ್ಲವಲ್ಲಾ ಎಂಬ ಕೊರತೆ ಅಲ್ಲ. ಅವಳ ಪ್ರಾಣಕ್ಕಿಂತಲೂ ಮಿಗಿಲಾದ ಮಾನದ ಹರಣವಾಗುತ್ತಿರುವ ಸ್ಥಿತಿ. ಅವಳ ಈ ಸ್ಥಿತಿಗೆ ಕಾರಣವಾದರೂ ಅವಳ ಯಾವ ವರ್ತನೆಯೂ ಅಲ್ಲ. ಅವಳು ಹೆಣ್ಣಾಗಿ ಹುಟ್ಟಿರುವದೇ ಕಾರಣ. ತಾನು ಕೈ ಹಿಡಿದ ಗಂಡನ್ನು ನಂಬಿಕೊಂಡು ಇತರ ಗಂಡನ್ನು ಅಸ್ಪೃಶ್ಯನಂತೆ ಕಾಣಬೇಕೆನ್ನುವ ಅವಳ ಒಳ್ಳೆಯತನವೇ ಕಾರಣ. ಅವಳನ್ನು ಇಂತಹ ಪರಾವಲಂಬನೆಗೆ ನೂಕಿರುವ ಅವಳ ಗಂಡಂದಿರ ಹುಚ್ಚು ವರ್ತನೆಯೇ ಅವಳ ದುರವಸ್ಥೆಗೆ ಕಾರಣ. ಹೀಗಿರುವಾಗಲೂ ಅವಳ ಸಹಾಯಕ್ಕೆ ಅವಳ ಗಂಡಂದಿರು ಬುದ್ಧಿಪೂರ್ವಕವಾಗಿಯೇ ಒದಗಿಬರುವದಿಲ್ಲ ವೆಂದಾದರೆ ಈ ಲೋಕದಲ್ಲಿ ಹೆಣ್ಣಿನ ಮೇಲೆ ಗಂಡು ನಡೆಸುವ ಕ್ರೂರತನವನ್ನು ಏನೆಂದು ಹೇಳಬೇಕು? ಹೆಣ್ಣಿನ ಕಷ್ಟವನ್ನು ಗ್ರಹಿಸುವವರು ಇನ್ನು ಯಾರು?

ಮುರಳಿ:– ಹೆಣ್ಣಿನ ಕಷ್ಟವನ್ನು ಗ್ರಹಿಸಬೇಕೆನ್ನುವ ಗಂಡು ಪಡಬೇಕಾದ ಕಷ್ಟವನ್ನು ಮುಂದೆ ಕೇಳು. ಆ ದಿನ ರಾತ್ರಿ ಸೈರಂಧ್ರಿಯು ಗುಟ್ಟಾಗಿ ವಲಲ ನನ್ನು ಸಮೀಪಿಸಿದಳು. ಹಾಗೆ ಹೋಗುವಾಗ, ಲೋಕೈಕವೀರನಿಗೂ ಪರರ ಸೇವೆ ಮಾಡುವ ಸ್ಥಿತಿ ಬರುವದಲ್ಲವೇ ಎಂದುಕೊಳ್ಳುತ್ತಾ ಭೀಮನಿಗಾಗಿ ಮರುಗಿ ದಳು. ತಾನು ಈ ರೀತಿ ನಡುರಾತ್ರಿಯಲ್ಲಿ ಬರುವದನ್ನು ಭೀಮನು ಹೇಗೆ

ಸ್ವೀಕರಿಸುವನೋ ಎಂದು ಬಹಳವಾಗಿ ಅಂಜುತ್ತಾ ಮೆಲ್ಲಮೆಲ್ಲನೆ ಅವನನ್ನು ಸಮೀಪಿಸಿ ಅವನ ಮುಖದ ಮೇಲಿನ ಹೊದಿಕೆಯನ್ನು ಮೆಲ್ಲನೆ ಸರಿಸಿದಳು. ವಲಲನಿಗೆ ಎಚ್ಚರವಾಗಿ ಅವನು ಅವಳನ್ನು ನೋಡಿದನು. ಅವಳು ಆ ರೀತಿ ರಾತ್ರಿ ಕಾಲದಲ್ಲಿ ತನ್ನನ್ನು ರಸಹ್ಯವಾಗಿ ಸಮೀಪಿಸಿದುದು ಅನುಚಿತವೆಂದು ತಿಳಿಸಿದನು. ಸೈರಂಧ್ರಿಯು ಕೀಚಕನಿಂದ ತನಗಾಗುತ್ತಿದ್ದ ತೊಂದರೆಗಳನ್ನೆಲ್ಲ ವಿವರಿಸಿ ಹೇಳಿ ತಾನು ಸಾಯಲು ಯೋಚಿಸಿರುವದಾಗಿಯೂ, ಹಾಗೆ ಸತ್ತರೆ ಆ ಪಾತಕವು ಭೀಮನನ್ನು ಆವರಿಸುವದೆಂದೂ ಹೇಳಿ ಗಟ್ಟಿಯಾಗಿ ಅತ್ತಳು. ಇದರಿಂದ ಭೀಮನಿಗೆ ಒಮ್ಮೆಗೇ ಸಿಟ್ಟು ಏರಿತು.

ರಮೆ:– ಸಿಟ್ಟೆ ? ಅಯ್ಯೊ !

ಮುರಳಿ:– ಕೇಳು. ಅವನು ಸೈರಂಧ್ರಿಯನ್ನು ಕುರಿತು ತಾನೀಗ ತನ್ನ ಹೆಂಡತಿಯ ಜವಾಬ್ದಾರಿಕೆಯನ್ನು ವಹಿಸಿಕೊಳ್ಳುವ ಸ್ಥಿತಿಯಲ್ಲಿಲ್ಲವೆಂದೂ, ತನ್ನ ಗಂಡುತನವು ಸಂಪೂರ್ಣವಾಗಿ ಸತ್ವಹೀನವಾಗಿದೆಯೆಂದೂ, ದ್ರೌಪದಿಯು ಅವಳ ಕಷ್ಟಗಳನ್ನು ಉಳಿದ ನಾಲ್ವರು ಗಂಡಂದಿರಲ್ಲಿ ಹೇಳಿಕೊಳ್ಳಬೇಕೆಂದೂ ಖಂಡತುಂಡವಾಗಿ ಹೇಳಿದನು. ಅವಳು, ಆ ನಾಲ್ವರೂ ತನ್ನಲ್ಲಿ ಕ್ರೀಡಿಸಿ ತನ್ನ ಆಪತ್ತಿನಲ್ಲಿ ಸದ್ದಿಲ್ಲದೆ ಅಡಗುವವರೆಂದೂ, ತನ್ನ ಕಷ್ಟಗಳಲ್ಲಿ ಭಾಗಿಯಾಗುವ ಒಬ್ಬನೇ ಒಬ್ಬನಾದ ಭೀಮನು ತನ್ನನ್ನು ಈಗಲೂ ಸಲಹಬೇಕೆಂದೂ ಅಂಗಲಾಚಿ ಬೇಡಿಕೊಂಡಳು. ಅಲ್ಲದೆ ಇದೇ ಸಂದರ್ಭವೆಂದು ಅವಳು ವಲಲನಲ್ಲಿ ತನ್ನ ಮನಸ್ಸನ್ನು ಬಿಚ್ಚಿ ತೋರಿಸುತ್ತಾ "ಭೀಮಾ, ನಿನಗೆ ನಾನು ಅತ್ಯಂತ ದುಃಖಕರವಾದ ಒಂದು ವಿಷಯವನ್ನು ತಿಳಿಸುತ್ತಿದ್ದೇನೆ. ನೀನು ಸುಧೇಷ್ಣೆಯ ಮುಂದೆ ಹುಲಿ, ಸಿಂಹಗಳೊಂದಿಗೆ ಆಗಾಗ ಹೋರಾಡಿ ಆಟವಾಡುವದನ್ನು ಕಂಡಾಗಲೆಲ್ಲ ನಿನ್ನ ಕುರಿತು ನನ್ನ ಮನಸ್ಸು ಕಲಕುವದು. ಆಗಿನ ನನ್ನ ಇಂಗಿತ ಮತ್ತು ಚೇಷ್ಟೆಗಳನ್ನರಿತ ಅಂತಃಪುರದ ಸ್ತ್ರೀಯರು ನನ್ನನ್ನು ಹಾಸ್ಯ ಮಾಡುವರು. ನನ್ನ ಚರ್ಯೆಗಳನ್ನು ನೋಡಿದ ಸುಧೇಷ್ಣೆ ಕೂಡ ನಾನೂ ನೀನೂ ಅನ್ಯೋನ್ಯ ಅನುರಾಗದಿಂದಿದ್ದೇವೆಂದು ಊಹಿಸಿರುವಳು. ನಿನ್ನನ್ನು ಪ್ರತಿ ಬಾರಿ ಕಂಡಾಗಲೂ ನನ್ನ ಮನಸ್ಸು ಅಸ್ತವ್ಯಸ್ತವಾಗುವದು. ನಿನ್ನಲ್ಲಿ ಸತ್ಯವಾಗಿಯೂ ಇಷ್ಟರಮಟ್ಟಿಗೆ ಅನುರಕ್ತಳಾಗಿರುವ ನನ್ನ ರಕ್ಷಣಾ ಭಾರವು ನಿನಗೆ ಮಾತ್ರವೇ ಸೇರಿದುದು" ಎಂದಳು.

ರಮೆ:– ಈಗ ನಿಮಗೊಂದು ಹೊಸ ಕೋಡು ಮೂಡಿರಬೇಕಲ್ಲವೆ ?

ಮುರಳಿ:– ಪ್ರಾಣಿ ಭಾಷೆ ನನಗೆ ಅರ್ಥವಾಗುವದಿಲ್ಲ ತಾಯೀ.

ರಮೆ:– ಪ್ರಾಣಿ ಭಾಷೆಯೆ ?

ಮುರಳಿ:– ಹೌದು. ಕೋಡು, ಬಾಲ, ಗೊರಸು, ಕೆಚ್ಚಲು........

ರಮೆ:– ಹಾಗೆ. ಅದು ಪ್ರಾಣಿ ಭಾಷೆ ಅಲ್ಲ. ಪಂಡಿತರ ಭಾಷೆ.

ಮುರಳಿ:– ಆದರೆ ಪಾಮರನ ಭಾಷೆಯಲ್ಲಿ ತಿಳಿಸಿ ಉದ್ಧರಿಸಬೇಕು.

ರಮೆ:– ಆಗಲಿ. ಪ್ರಸನ್ನಳಾಗಿದ್ದೇನೆ. ಕೇಳಿ........

ಮುರಳಿ:– ಹೆಣ್ಣು ಪ್ರಸನ್ನಳಾದರೆ ಪುರುಷನು ತನ್ನಲ್ಲಿರುವ ಅಲ್ಪ ಸ್ವಲ್ಪ ಮನಶ್ಶಾಂತಿಯನ್ನೂ ಕಳೆದುಕೊಂಡು ಬೇಕು–ಬೇಡಗಳ ಹೊಯ್ದಾಟದಲ್ಲಿ ಸಿಕ್ಕಿ ಪರಿತಾಪಗೊಳ್ಳುತ್ತಾನೆ ಎಂದು ವಾತ್ಸ್ಯಾಯನರ ಅಂಬೋಣವಿದೆ.

ರಮೆ:– ಹೌದು, ಹೌದು. ತಾವು ವಾತ್ಸ್ಯಾಯನರ ಭಕ್ತರು ಎಂಬದು ನನಗೂ ಗೊತ್ತು.

ಮುರಳಿ:– ಧನ್ಯನಾದೆ.

ರಮೆ:– ಏಕೆ?

ಮುರಳಿ:– ನಾನು ವಾತ್ಸ್ಯಾಯನರ ಭಕ್ತ ಎಂಬದನ್ನು ನನ್ನ ಕೈಹಿಡಿದವಳು ತಾನಾಗಿ ತಿಳಿಯಲು ಸಾಧ್ಯವಾಯಿತೆಂದರೆ ನನ್ನಿಂದ ಅವಳಿಗೆ ಕೊರತೆ ಉಂಟಾಗಿಲ್ಲ ಎಂಬದು ಸ್ಪಷ್ಟ ತಾನೆ?

ರಮೆ:– ಏನು ಕೊರತೆ?

ಮುರಳಿ:– ವಾತ್ಸ್ಯಾಯನರ ಶಾಸ್ತ್ರದಿಂದ ಏನು ಕೊರತೆಯನ್ನು ತುಂಬಬಹುದೊ, ಅದು.

ರಮೆ:– ಛೀ. ಏನು ಮಾತು ಅಂತ ಆಡುತ್ತೀರಿಯಪ್ಪ!

ಮುರಳಿ:– ನಿಜ. ಆಡದೆಯೆ ಮಾಡುವನು ರೂಢಿಯೊಳಗುತ್ತಮನು....... ನಾನು ಹಾಗೆ ಉತ್ತಮನಾಗಬೇಕೆಂದು ಬಯಸಿದ್ದೀಯೇನು?

ರಮೆ:– ಹೇಗೆ?

ಮುರಳಿ:– ಅದೇ. ಆಡದೆಯೆ ಮಾಡಬೇಕು ಎಂದು........

ರಮೆ:– ಭೀಮ ದ್ರೌಪದಿಯರು ಮತ್ತೇನು ಮಾಡಿದರು ಹೇಳಿ.

ಮುರಳಿ:– ಯಾವಾಗ?

ರಮೆ:– ಯಾವಾಗ ಅಂತೆ! ಅದೇ ಆ ರಾತ್ರಿ ಅವರು ಗುಪ್ತವಾಗಿ ಒಂದೆಡೆ ಸೇರಿದರಲ್ಲ, ಆಗ. ಅದೂ ಮರೆತುಹೋಯಿತು, ಇವರಿಗೆ!

ಮುರಳಿ:– ಎಲ್ಲಿಗೆ ಬಿಟ್ಟೆ ಹೇಳು? ಅವರು ರಹಸ್ಯವಾಗಿ ರಾತ್ರಿ ಇಬ್ಬರೂ ಒಂದೆಡೆ ಸೇರಿದರು. ಮತ್ತೆ?

ರಮೆ:– ದ್ರೌಪದಿ, ತನಗೆ ಭೀಮನನ್ನು ಕಂಡಾಗಲೆಲ್ಲ ಮನಸ್ಸು ಕದಲುವ ದೆಂದು ಹೇಳಿದಳು.

ಮುರಳಿ:– ಆಮೇಲೆ ?

ರಮೆ:– ಆಮೇಲೆ ಏನಾಯಿತು ಹೇಳಿ.

ಮುರಳಿ:– ಇದನ್ನು ಕೇಳಿದ ಭೀಮನಿಗೆ...........ಹ್ಞಾಂ, ನನ್ನ ಕೋಡು ಏನು ಹೇಳು.

ರಮೆ:– ನಿಮ್ಮ ತಲೆ ........

ಮುರಳಿ:– ಮತ್ತೆ ಕೋಡು ಅಂತ ಹೇಳಿದೆ ?

ರಮೆ:– ಹೌದಪ್ಪಾ ಹೇಳಿದೆ. ಯಾಕೆ ಹೇಳಿದೆನೋ ಏನೋ. ಹೇಳಿದೆ. ಅಲ್ಲ ? 'ಮಹಾಭಾರತದಲ್ಲಿ ಭೀಮನು ವೀರತನದಲ್ಲಿ, ದಯೆ, ಅನುಕಂಪಗಳಲ್ಲಿ, ಸಂಯಮದಲ್ಲಿ, ವಿಶಾಲ ಭಾವನೆಯಲ್ಲಿ–ಹೀಗೆ ಎಲ್ಲದರಲ್ಲಿಯೂ ಬಹಳ ಆದರ್ಶ ಎಂದು ಹೇಳಲು ಒದ್ದಾಡುತ್ತಿದ್ದೀರಲ್ಲಾ, ತನ್ನ ಕೈಹಿಡಿದ ಹೆಣ್ಣನ್ನು ಆಕರ್ಷಿಸಿ ಇಟ್ಟುಕೊಳ್ಳುವದರಲ್ಲಿಯೂ ಅವನು ನಿಸ್ಸೀಮ ಎಂದು ದ್ರೌಪದಿಯೇ ಹೇಳಿರುವಾಗ ಅದೂ ಅವನ ಒಂದು ಹೆಚ್ಚುಗಾರಿಕೆಯಲ್ಲವೇ ಎಂದು ಹೇಳಲು ಹೊರಟು........

ಮುರಳಿ:– ........ವಾತ್ಸ್ಯಾಯನರಲ್ಲಿಗೆ ತಲಪಿದೆ.

ರಮೆ:– ಹುಚ್ಚು. ವಾತ್ಸ್ಯಾಯನರ ಹುಚ್ಚು ಹಿಡಿದಿರುವದು ನಿಮಗೇ.

ಮುರಳಿ:– ಹೌದು. ನನಗೆ ಅವರ ಹುಚ್ಚು ಹಿಡಿದರೆ ಅದರ ಲಾಭ ನಿನಗೇ ಎಂದು ಗೊತ್ತಿಲ್ಲದಿರುವಷ್ಟು ನೀನು........

ರಮೆ:– ಛೀ. ಏನಪ್ಪ ! ಯಾವ ಮಾತನ್ನು ಯಾವ ಸಂದರ್ಭದಲ್ಲಿ ಆಡ ಬೇಕು ಎಂದಿಲ್ಲದೆ ನೀವು ಏಕೆ ಹೀಗೆ ಮಾತನಾಡುತ್ತಿದ್ದೀರೋ ಕಾಣೆ.

ಮುರಳಿ:– ಇದು ಮಾತಿನ ಸಮಯವೇ ಹೊರತು ಕೃತಿಯ ಸಮಯವೇನು ಈಗ ?

ರಮೆ:– ನಿಮ್ಮ ದಮ್ಮಯ್ಯ. ಕತೆ ಹೇಳಿ.

ಮುರಳಿ:– ಆಗಲಿ. ನಿನ್ನ ಶರಣಾಗತಿಯನ್ನು ಬೇಕಾದಾಗ ಬಳಸಿಕೊಳ್ಳು ತ್ತೇನೆ. ಈಗ ಕೇಳು. ದ್ರೌಪದಿಯ ಮಾತುಗಳನ್ನು ಕೇಳಿದ ಭೀಮನು "ಗಳಿಸುವವನು ಒಬ್ಬನಾದರೆ ಉಂಡು ಜಾರುವವನು ಮತ್ತೊಬ್ಬ ಎಂದಂತಾಯಿತು. ನೀನು, ಉಳಿದ ನಾಲ್ವರ ಮನಸ್ಸು ಕರಗುವಂತೆ ಅವರಲ್ಲಿ ಹೇಳಿಕೊ. ನಾನು ಅಣ್ಣನ ಆಜ್ಞೆಯಿಂದ ಬಂಧಿತನಾಗಿದ್ದೇನೆ" ಎಂದನು. ಇದರಿಂದ ಆ ಬೆಂಕಿಯ ಮಗಳ ದುಃಖವು ರೋಷವಾಗಿ ಮಾರ್ಪಟ್ಟು ಅವಳು ತನ್ನ ಜೀವನದಲ್ಲಿ ಆಗಿಹೋದ

ಸಂಕಟಗಳನ್ನೆಲ್ಲ ಒಂದೊಂದಾಗಿ ಜ್ಞಾಪಿಸಿಕೊಂಡು ದುಃಖಿಸಿ ಆ ಸಂಕಟಗಳಲ್ಲಿ ಪ್ರತಿಯೊಂದನ್ನೂ ಆಗಾಗಲೇ ನಿವಾರಿಸಲು ಸಮರ್ಥರಾಗಿದ್ದರೂ ಹಾಗೆ ಮಾಡದೆ ನಿರ್ವೀರ್ಯರಂತೆ ತಟಸ್ಥರಾಗಿರುತ್ತಿದ್ದ ತನ್ನ ಗಂಡಂದಿರನ್ನು ಹಳಿದಳು. ತಾನು ಈ ರೀತಿ ಹಳಿಯಲ್ಪಟ್ಟರೂ ಭೀಮನು ಕೋಪಿಸಿಕೊಳ್ಳಲಿಲ್ಲ. ಹೆಣ್ಣಿನ ಮನಸ್ಸಿನ ನೋವು ಅವನಿಗೆ ತಿಳಿದಿತ್ತು. ಅವನು ದ್ರೌಪದಿಯನ್ನು ಕುರಿತು "ದ್ರೌಪದಿ, ನೀನು ದುಃಖದಲ್ಲಿ ನೊಂದು ನನ್ನನ್ನು ಹಳಿದರೆ ಅದರಿಂದ ನನಗೇನೂ ಬೇಸರವಿಲ್ಲ. ನೀನು ಹಳಿಯುವುದರಲ್ಲಿ ತಪ್ಪೂ ಇಲ್ಲ. ಆದರೆ ನಾನು ನಿನ್ನ ಸಂಕಟದ ಸಂದರ್ಭಗಳಲ್ಲಿ ತಟಸ್ಥನಾಗಿರುವದರಲ್ಲಿಯೂ ತಪ್ಪಿಲ್ಲ. ನೀನು ಏನಂದರೇನು! ನನ್ನನ್ನು ಎದುರಿಸಿ ತಮ್ಮ ಜೀವವನ್ನು ಉಳಿಸಿಕೊಳ್ಳುವವರು ಇದ್ದಾರೆಯೋ ಇಲ್ಲವೇ ಎಂಬದು ನನಗೇ ಗೊತ್ತಿದೆ. ಆದರೆ ಮಾಡುವದೇನು ? ನಾನಿಂದು ನಪುಂಸಕರ ಸಹೋದರನಾಗಿ ಜನಿಸಿ ಪೌರುಷಹೀನನಾಗಿ ಬದುಕಬೇಕಾಗಿದೆ. ನನ್ನ ಯಾವ ಭಯವೂ ಇಲ್ಲದೆ ನೀನು ನನ್ನನ್ನು ಹಳಿಯಬಹುದು. ಅದರಿಂದ ನನಗೆ ಬೇಸರವಾಗುವದಿಲ್ಲ. ಅಂದು ತುಂಬಿದ ಕೌರವ ಸಭೆಯಲ್ಲಿ ಅವರು ನಿನ್ನ ಸೀರೆಯನ್ನು ಬಿಚ್ಚಲು ಪ್ರಯತ್ನಿಸಿದಾಗ ದುಶ್ಯಾಸನನನ್ನು ಕೊಂದೇಬಿಡಲು ಮನಸ್ಸು ಮಾಡಿದೆ. ಅಣ್ಣ ಅಲ್ಲಿಯೂ ನನ್ನನ್ನು ತಡೆದ. ಇಂದು ಕೀಚಕನನ್ನು ಅಲ್ಲಿಯೇ ಹಿಸುಕಿ ಹಾಕಲು ಬಯಸಿದೆ. ಆಗ ಯುಧಿಷ್ಠಿರನು ಹೇಗೆ ವರ್ತಿಸಿದ ಎಂಬದನ್ನು ನೀನೇ ನೋಡಿದ್ದೀಯ. ಇದನ್ನೆಲ್ಲ ತಿಳಿದೂ ಕೂಡ, ನೀನು ನಿನ್ನ ಬಗೆಗೆ ನಾನು ಕರ್ತವ್ಯ ಮಾಡಿದವನಲ್ಲ ಎಂದು ನನ್ನ ಮೇಲೆ ಆರೋಪ ಮಾಡುತ್ತಿದ್ದೀಯೆ. ಈಗಲೂ ನಾನು ನನ್ನ ಅಣ್ಣನ ಮಾತನ್ನು ಮೀರಿ ನಡೆದರೆ ಲೋಕ ಏನು ಹೇಳುತ್ತದೆ? ಒಬ್ಬಳು ಹೆಂಗಸಿಗಾಗಿ ಭೀಮನು ಅಣ್ಣನನ್ನು ಮೀರಿ ನಡೆದ ಎಂದು ಆಪಾದಿಸುತ್ತದೆ. ದ್ರೌಪದಿ, ಇದು ನನಗೆ ಉಣ್ಣಲಾರದ ಊಟವಾಗಿದೆ. ನಾನು ಅಣ್ಣನ ಆಜ್ಞೆಯ ಹಗ್ಗದಿಂದ ಕಟ್ಟಲ್ಪಟ್ಟವನಾಗಿದ್ದೇನೆ. ನನಗೆ ಸ್ವಾತಂತ್ರ್ಯವೇ ಇಲ್ಲ. ನೀನು ಆ ನಾಲ್ವರಲ್ಲಿಯೇ ಹೇಳಿಕೊ. ದ್ರೌಪದಿ, ಇಂದು ನಿನ್ನ ಪಾಲಿಗೆ ನಾನು ಇದ್ದೂ ಇಲ್ಲದಂತಾಗಿದ್ದೇನಾದ್ದರಿಂದ ನೀನು ಇನ್ನು ಮುಂದೆ ಆ ನಾಲ್ವರ ಅರಸಿ. ನಾನು ನಿನ್ನ ಗಂಡನಲ್ಲ....

ರಮೆ:– ಛೆ, ಛೆ, ಛೆ. ದ್ರೌಪದಿಯಂತಹ ಹತ್ತುಸಾವಿರ ಹೆಣ್ಣುಗಳನ್ನು ಸಮರ್ಥವಾಗಿ ಆಳಬಲ್ಲ ವೀರಪುರುಷ, ಈಗ ಇರುವ ಒಬ್ಬಳನ್ನೇ ಇತರ ನಾಲ್ವರೊಂದಿಗೆ ಹಂಚಿಕೊಂಡು ಆಳಬೇಕಾಗಿ ಬಂದೂ ಕೂಡ ಅವನು ಪಡುತ್ತಿರುವ ವೇದನೆಯನ್ನು ನೋಡಿದರೆ, ಪ್ರಚಂಡವಾದ ಬಂಡೆಯ ಭಾರವನ್ನು ಮೀರಿ ಅದರ ಸೆರೆಯಿಂದ ಇಣಿಕಿ ಬೆಳೆಯಲು ಪ್ರಯತ್ನಿಸುತ್ತಿರುವ ಮೊಳಕೆಯಂತೆ ಅವನ ವ್ಯಕ್ತಿತ್ವವು ಎಂತಹ ಬಿಕ್ಕಟ್ಟಿನ ವಾತಾವರಣದಲ್ಲಿ ಸಿಕ್ಕಿಕೊಂಡಿತ್ತು ಎಂಬದು

ಅರ್ಥವಾಗುತ್ತದೆ. ಕಾಡಿನಲ್ಲಿ ಸ್ವಚ್ಛಂದವಾಗಿ ಬದುಕಿರುವ ಸಿಂಹದ ಪರಾಕ್ರಮವನ್ನು ಗುರುತಿಸುವದು ಒಂದು ವಿಧ. ಆದರೆ ಬೋನಿನೊಳಗೆ ಸಿಕ್ಕಿಕೊಂಡಿರುವ ಸಿಂಹದ ಪರಾಕ್ರಮವನ್ನು ಕಂಡುಕೊಳ್ಳಲು ಕಲ್ಪನೆಯೊಂದೇ ಆಧಾರ. ಅದರ ನಿಟ್ಟುಸಿರು, ನಿರಾಶೆಯನ್ನು ಸುರಿಸುವ ಕಣ್ಣುಗಳು, ಇತರರನ್ನು ನೋಡುವದರಲ್ಲಿರುವ ತಿರಸ್ಕಾರ, ಅಸಹಾಯಕತೆಗೆ ಸಿಕ್ಕಿದರೂ ಛಲವನ್ನು ಬಿಡದಿರುವ ಅದರ ನಡಿಗೆಯ ಠೀವಿ, ವಿನಾಕಾರಣಕ್ಕಾಗಿ ಅದಕ್ಕೆ ಬರುವ ಸಿಟ್ಟು – ಇವುಗಳಿಂದಷ್ಟೇ ಆದರ ನಿಜವಾದ ಮೃಗರಾಜತ್ವದ ಪರಾಕ್ರಮವನ್ನು ಕಲ್ಪಿಸಿಕೊಳ್ಳಬೇಕಾಗುವಂತೆಯೇ ಭೀಮನ ವ್ಯಕ್ತಿತ್ವವನ್ನೂ ಅಳೆಯಬೇಕಾಗಿದೆ. ಹೇಳಿ, ಹೇಳಿ. ಕತೆ ಮುಂದುವರಿಸಿ.

ಮುರಳಿ:– ಸರಿಯಾಗಿ ಹೇಳಿದೆ. ಕೇಳು. ಭೀಮನ ಮಾತುಗಳನ್ನು ಕೇಳುತ್ತಿದ್ದಂತೆಯೇ ದ್ರೌಪದಿಯ ಕೊರಳು ಬಿಗಿಯುತ್ತಾ ಬಂತು. ಧಾರಾಕಾರವಾಗಿ ಕಣ್ಣೀರು ಹರಿಯಿತು. ಸರಿಯಾಗಿ ಮಾತನಾಡಲಾರದೆ ಬಿಕ್ಕಿ ಬಿಕ್ಕಿ ಅಳುತ್ತಾ ಅವಳು ಆಗಾಗ ಅವನ ಮಾತುಗಳಿಗೆ ತಲೆದೂಗುತ್ತಾ "ಹಿಂದೆ ಯಾವ ಸ್ತ್ರೀಯಾದರೂ ನನ್ನಷ್ಟು ದುಃಖಿಸಿದ್ದಾಳೆಯೆ ? ನನ್ನಂತಹ ಹೆಂಗಸೂ, ಭೀಮನಂತಹ ಗಂಡಸೂ ಪ್ರಪಂಚದಲ್ಲಿ ಇನ್ನು ಹುಟ್ಟದಿರಲಿ. ನಾನು ಹುಟ್ಟಿದುದಕ್ಕೆ ಯಾವ ರೀತಿಯಲ್ಲಾದರೂ ಪ್ರಾಣವನ್ನು ಕಳೆದುಕೊಳ್ಳುತ್ತೇನೆ. ದುರ್ಯೋಧನ, ಜಯದ್ರಥ, ಕೀಚಕ – ಇವರುಗಳಿಂದ ನನಗಾದ ಅವಮಾನವೇ ಸಾಕು. ನೋಡಿದರೆ ನಾನು ಹುಟ್ಟಿದುದು ಪಾಂಚಾಲ ರಾಜನಲ್ಲಿ. ನಾನು ಕೈ ಹಿಡಿದವರೋ ದೇವತೆಗಳನ್ನೂ ಮೀರಿಸುವ ಐದು ಜನ. ಆದರೆ ಇಂದು ನನ್ನ ಪಾಲಿಗೆ ಬಂದಿರುವ ಕೆಲಸವೆಂದರೆ ಸುಧೇಷ್ಣೆಯಂತಹ ಸಾಮಾನ್ಯ ಹೆಂಗಸಿನ ಮುಡಿ ಕಟ್ಟುವದು, ಅವಳ ಹಿಂದೆ – ಮುಂದೆ ಸುತ್ತುವದು, ಅವಳ ಕಾಲೊತ್ತುವದು, ಇತ್ಯಾದಿ. ಗಂಡಂದಿರಾದ ನಿಮಗೆ ಕೂಡ ಭಯಪಡದಿದ್ದ ನಾನು ಈ ವಿರಾಟನ ಮುಂದೆ ಭಯದಿಂದ ನಡುಗುತ್ತಾ ನಿಲ್ಲಬೇಕಾದ ಪರಿಸ್ಥಿತಿಯಲ್ಲಿ ಇಂದು ಬದುಕಬೇಕಾಗಿದೆ. ಹಿಂದೆ ನಾನು ನೂರಾರು ಸೇವಕಿಯರಿಂದ ಯಾವ ಯಾವ ಸೇವೆಗಳನ್ನೆಲ್ಲ ಮಾಡಿಸಿಕೊಳ್ಳುತ್ತಿದ್ದೆನೋ, ಇಂದು ಆ ಸೇವೆಗಳನ್ನು ನಾನೇ ಇನ್ನೊಬ್ಬಳು ಸ್ತ್ರೀಗೆ ಮಾಡಬೇಕಾಗಿದೆ. ಗಂಡಂದಿರಾದ ನೀವುಗಳು ನಿಮ್ಮ ಸಮಸ್ತ ಭಾಗ್ಯಗಳನ್ನೂ ಕಳೆದುಕೊಂಡು ಪರದೇಸಿಗಳಾಗಿರುವದೇ ಅಲ್ಲದೆ ಇಂದು ನನ್ನನ್ನೂ ಕೀಚಕನಿಗೆ ಒಪ್ಪಿಸಲು ಸಮ್ಮತಿಸುತ್ತಿದ್ದೀರಿ. ಆಗಲಿ. ನೀವು ಧರ್ಮಿಷ್ಠರೆಂದು ಖ್ಯಾತಿ ಪಡೆದು ಬದುಕಿ. ನಿಮ್ಮ ಧರ್ಮ ಉಳಿಯುವದಕ್ಕಾಗಿ ನಾನು ಪ್ರಾಣ ಕಳೆದುಕೊಳ್ಳುತ್ತೇನೆ. ಭೀಮಾ, ನನಗೆ ಸಾವಿನ ಆಜ್ಞೆಯನ್ನು ಕೊಡು. ನಿನ್ನ ಅಣ್ಣನಾಜ್ಞೆಯ ಧರ್ಮವನ್ನು ಪಾಲಿಸಿಕೊಂಡು ನೀನು ಸುಖವಾಗಿ ಬದುಕು. ಮುಂದೆ ನಿನ್ನ

ಮಡದಿಯಾಗುವವಳೊಂದಿಗೆ ನೀನು ಸುಖ ಪಡುವ ಸಮಯದಲ್ಲಿ ದ್ರೌಪದಿ ಎಂಬವಳೊಬ್ಬಳಿದ್ದಳು ಎಂದು ನನ್ನನ್ನು ಜ್ಞಾಪಿಸಿಕೊ, ಅಷ್ಟೆ........ ಭೀಮಾ, ಸಿಟ್ಟಿನ ಭರದಲ್ಲಿ ನಿನ್ನ ಮನಸ್ಸು ನೋಯುವಂತೆ ನಾನು ಮಾತನಾಡಿದ್ದರೆ ನನ್ನನ್ನು ಕ್ಷಮಿಸಿಬಿಡು" ಎಂದು ಅವ್ಯಾಹತವಾಗಿ ಅಳುತ್ತಾ ಅವಳು ಭೀಮನ ಕಾಲು ಹಿಡಿದು ನಮಸ್ಕರಿಸಿದಳು........ದ್ರೌಪದಿಯ ಕಣ್ಣೀರು, ಹೆಣ್ಣಿಗೆ ಸಾಮಾನ್ಯವಾಗಿ ಬಂದು ಬಿಡುವಂತಹ ಅಗ್ಗದ ಕಣ್ಣೀರಾಗಿದ್ದಿಲ್ಲದುದು ಭೀಮನಿಗೆ ತಿಳಿಯದಿರಲಿಲ್ಲ. ಈ ಲೋಕವನ್ನು ಬಿಡುವದಕ್ಕೆ ಮುಂಚಿತವಾಗಿ ಅವಳು ತನ್ನ ಹೃದಯವನ್ನು ತೋಡಿಕೊಂಡು ಬಂದಿರುವ ಕಣ್ಣೀರೇ ಅದು ಎಂಬದು ಅವನಿಗೆ ಗೊತ್ತಾಯಿತು. ದ್ರೌಪದಿಯ ಈ ಆರ್ತತೆಯಿಂದಾಗಿ ಭೀಮನ ಅಂತಃಕರಣವು ಕಲಕಲ್ಪಟ್ಟಿತು. ಅವಳ ಪರಿಸ್ಥಿತಿಯನ್ನು ನೆನಸಿಕೊಂಡು ಅವನಿಗೂ ದುಃಖ ಉಕ್ಕಿ ಬಂತು. ಕಣ್ಣುಗಳು ಹನಿಗೂಡಿದವು. ಅವನ ಆ ದುಃಖವು ತಕ್ಷಣವೇ ರೋಷವಾಗಿ ಮಾರ್ಪಟ್ಟು ಕೀಚಕನನ್ನು ಮನಸ್ಸಿನಲ್ಲಿಯೇ ಹಿಂಡಿದನು. ದ್ರೌಪದಿಯನ್ನು ಬರಸೆಳೆದು ಬಿಗಿದಪ್ಪಿ, ಆಕೆಯ ಕಣ್ಣೀರನ್ನು ತಾನೇ ತನ್ನ ಸೆರಗಿನಿಂದ ಒರೆಸಿ, ಅವಳ ಮುಂಗುರುಳನ್ನು ನೇವರಿಸಿ, ಗಲ್ಲವನ್ನು ಹಿಡಿದು ಸಂತೈಸುತ್ತಾ, ಪಕ್ಕದಲ್ಲಿದ್ದ ಗಿಂಡಿಯ ನೀರಿನಿಂದ ಅವಳ ಮುಖವನ್ನು ತಾನೇ ತೊಳೆದು, ಭಗೀರಥ ಪ್ರಯತ್ನದಿಂದ ತನ್ನ ಪ್ರಬಲ ವೈರಿಯನ್ನು ಕೊಂದು ಮೂರು ಲೋಕದ ಆಧಿಪತ್ಯವನ್ನು ಪಡೆದವನು ವ್ಯಕ್ತಪಡಿಸುವ ನಿಶ್ಚಿಂತೆ, ಸರಾಗತನದಿಂದ "ಪ್ರಿಯೆ, ಚಿಂತೆಯನ್ನು ಬಿಡು. ಅಣ್ಣನ ಆಜ್ಞೆ ಎಂಬ ಪರ್ವತವನ್ನು ದಾಟಿದ್ದೇನೆ. ಕೀಚಕನನ್ನು ಕೊಲ್ಲುತ್ತೇನೆ. ನಾನು ಹಾಗೆ ಮಾಡುವದು ತಪ್ಪೆಂದು ವಿರೋಧಿಸಿದರೆ ಇಡಿಯ ವೈರಾಟ ವಂಶವನ್ನೇ ನಿರ್ಮೂಲ ಮಾಡುತ್ತೇನೆ. ಇದರಿಂದಾಗಿ ಕೌರವರು ನಮ್ಮನ್ನು ಈ ಅಜ್ಞಾತ ವಾಸದಲ್ಲಿ ಪತ್ತೆ ಹಚ್ಚುವದು ಸಾಧ್ಯವಾಗುವದಾದರೆ, ಅವರು ಹಾಗೆ ಮಾಡುವದಕ್ಕೆ ಮುಂಚೆಯೇ ಅವರನ್ನೆಲ್ಲ ಮುಗಿಸಿಬಿಡುತ್ತೇನೆ. ಹೀಗೆ ಮಾಡುವದು ತಪ್ಪು ಎನ್ನುವದಕ್ಕಾಗಿ "ಭೀಮನು ನ್ಯಾಯವನ್ನು ಬಿಟ್ಟಿದ್ದಾನೆ" ಎಂದು ದೇವತೆಗಳೇನಾದರೂ ಹೇಳುವದಾದರೆ ಅವರನ್ನು ನೆಲಸಮ ಮಾಡುತ್ತೇನೆ. ನಾನು ಮಾಡುವದು ಅನಿವಾರ್ಯ ಎಂದು ಅಣ್ಣನು ಸುಮ್ಮನಿರುವದಾದರೆ ಸರಿ. ಇಲ್ಲದೆ ಅವನೇನಾದರೂ ಸಿಟ್ಟುಗೊಂಡರೆ ನಮ್ಮಿಬ್ಬರ ಭ್ರಾತೃತ್ವವೂ ಇಲ್ಲಿಗೇ ತುಂಡಾಗಲಿ. ಅರ್ಜುನ, ನಕುಲ, ಸಹದೇವರು ಸಿಟ್ಟುಗೊಳ್ಳುವದಾದರೆ ಅವರ ಮೇಲೆ ಕೈ ಮಾಡಬೇಕಾದರೂ ಸರಿಯೆ – ನಾನು ಹಿಂಜರಿಯುವದಿಲ್ಲ. ಇನ್ನು ಕೃಷ್ಣನೇನಾದರೂ ಇದಕ್ಕೆ ಅಡ್ಡ ಬಂದರೆ ಅವನನ್ನೂ ಮೀರುತ್ತೇನೆ. ಇನ್ಯಾರಿಗೆ ನಾನು ಬಾಗಿ ಬದುಕಬೇಕು ? ಆದುದರಿಂದ ದ್ರೌಪದಿ, ಧೈರ್ಯದಿಂದಿರು. ನಿನ್ನ ರಕ್ಷಣಾ ಭಾರವು ಈ ಬಾರಿಗೆ ನನ್ನದು. ಆ ನಾಯಿ ಕೀಚಕನನ್ನು ನಾಳೆ ರಾತ್ರೆ ನಾಟ್ಯ

ಮಂದಿರಕ್ಕೆ ಗುಪ್ತವಾಗಿ ಬರುವಂತೆ ತಿಳಿಸು. ಅಲ್ಲಿ ಅವನ ಇಹಲೋಕ ಯಾತ್ರೆಯನ್ನು ಮುಗಿಸುತ್ತೇನೆ” ಎಂದನು.

ತನೆ:– ಅವನು ದ್ರೌಪದಿಯ ನೆರವಿಗೆ ಒದಗುತ್ತೇನೆಂದುದೇನೋ ಅವನ ಒಂದು ದೊಡ್ಡ ಗುಣವೇ ಹೌದು. ಆದರೆ ಅವನು ಅದಕ್ಕಾಗಿ “ಆಗಲಮ್ಮ, ಕೀಚಕನನ್ನು ನಾನು ಕೊಲ್ಲುತ್ತೇನೆ, ಹೆದರಬೇಡ” ಎಂಬಷ್ಟೇ ಮಿತವಾದ ಮಾತುಗಳನ್ನು ಹೇಳಿ, ಅವನನ್ನು ಕೊಲ್ಲುವದು ಹೇಗೆಂಬದರ ಕುರಿತು ಚಿಂತಿಸಲು ಪ್ರಾರಂಭಿಸಿದ್ದರೆ ಅವನು ಬಹಳ ಪ್ರಾಯೋಗಿಕವಾದ ಲೆಕ್ಕಾಚಾರಗಳುಳ್ಳವನು ಎಂದು ಹೇಳಬಹುದಿತ್ತು. ಅದು ಬಿಟ್ಟು “ಹಾಗೆ ಮಾಡುತ್ತೇನೆ, ಹೀಗೆ ಮಾಡುತ್ತೇನೆ” ಎಂದು ಕೇವಲ ಕಲ್ಪನೆಯ ಎದುರಾಳಿಗಳನ್ನು ಸೃಷ್ಟಿಸಿಕೊಂಡು ಆಡಂಬರದ ಮಾತುಗಳನ್ನಾಡುವದು ನೋಡುವಾಗ, ಇಂತಹ ಸಂದರ್ಭದಲ್ಲಿಯೇ ಅಲ್ಲವೇ ಉತ್ತರನ ಪೌರುಷ ಎಂಬ ವ್ಯಂಗ್ಯವಾದ ಹೋಲಿಕೆ ಅನ್ವಯಿಸುವದು ? ಅಷ್ಟು ತಿಳಿದವನು, ಅಷ್ಟು ಬಲಾಢ್ಯನಾದವನು ಇಂತಹ ಸಂದರ್ಭದಲ್ಲಿ ಅದೇಕೆ ಅವನು ಭವಿಯಂತೆ, ದುರಹಂಕಾರಿಯಂತೆ ಕೂಗಾಡಿದ ?

ಮುರಳಿ:– ಭೀಮನ ವ್ಯಕ್ತಿತ್ವದ ವಿಮರ್ಶೆಯಲ್ಲಿ ವಿದ್ವಾಂಸರು ತಪ್ಪಿರುವದೇ ಇಲ್ಲಿ. ಆದುದರಿಂದ ನೀನೂ ಈ ರೀತಿ ಭಾವಿಸಿರುವದು ತಪ್ಪೇನೂ ಅಲ್ಲ. ಮನುಷ್ಯನು ಸಿಟ್ಟಿಗೆ ವಶನಾಗುವದು ಒಳ್ಳೆಯದಲ್ಲ ಎಂಬ ಅಭಿಪ್ರಾಯ ನಮ್ಮಲ್ಲಿ ಸಾಮಾನ್ಯವಾಗಿ ರೂಢಿಯಲ್ಲಿದೆ. ಅಲ್ಲವೆ ? ಅದೇಕೆ ಎಂದು ಯೋಚಿಸಿದ್ದೀಯಾ ? ಸಿಟ್ಟು, ದುಃಖ, ಕಾಮ, ರೋಷ ಮೊದಲಾದ ಯಾವದೇ ಪ್ರವೃತ್ತಿಗಳು ಮೇರೆ ಮೀರಿದಾಗ ಅವು ಮನುಷ್ಯನ ವಿವೇಕವನ್ನು ಅದುಮಿ ತಮ್ಮದೇ ಪ್ರಭುತ್ವವನ್ನು ನಡೆಸುತ್ತವೆ. ಆಗ ಬುದ್ಧಿ ತನ್ನ ಸಾಮರ್ಥ್ಯವನ್ನು ಕಳೆದುಕೊಂಡಿರುತ್ತದೆ. ಬುದ್ಧಿಶೂನ್ಯನಾದ ಮನುಷ್ಯನು ಹಿಂದೆ ಏನಾಯಿತು, ಈಗ ಏನಾಗುತ್ತಿದೆ, ಮುಂದೆ ಏನಾಗಬಹುದು ಎಂಬ ವಿವೇಚನೆಯನ್ನು ಕಳೆದುಕೊಂಡು ಪ್ರಾಣಿಯಂತೆ ವರ್ತಿಸಲು ಅವಕಾಶವಾಗುತ್ತದೆ. ಇದರಿಂದಾಗಿ ಪ್ರಮಾದವಾಗುತ್ತದೆ. ಆದರೆ ಸಿಟ್ಟಿನೊಂದಿಗೆ ವಿವೇಕವೂ ಜಾಗೃತವಾಗಿರಲು ಸಾಧ್ಯವಾಗುವದಾದರೆ ಅದೊಂದು ಅತ್ಯದ್ಭುತವಾದ ಪುರುಷ ಲಕ್ಷಣ ಎನಿಸಿಕೊಳ್ಳಲು ಸಾಧ್ಯವಾಗುತ್ತದೆ. ಏಕೆಂದರೆ, ಇತರ ವೇಳೆಗಳಲ್ಲಿ ಇಲ್ಲದಂತೆ, ಸಿಟ್ಟಿನ ಸಮಯದಲ್ಲಿ ಮನುಷ್ಯನ ದೈಹಿಕ ಮತ್ತು ಮಾನಸಿಕವಾದ ಪರಮಾವಧಿ ಶಕ್ತಿಯು ಒಟ್ಟಾಗಿ ಕಾರ್ಯಪ್ರವೃತ್ತವಾಗಿರುತ್ತದೆ. ಇತರ ವೇಳೆಯಲ್ಲಿ ಏನೂ ಕೈಲಾಗದವನು ಎನಿಸುವ ಮನುಷ್ಯ ಕೂಡ ಸಿಟ್ಟಿನ ವೇಳೆಯಲ್ಲಿ ದೈವದ ಒಂದು ವಿಶಿಷ್ಟವಾದ ಕೃತಿಯಂತೆ ಅದ್ಭುತವಾದ ಚಟುವಟಿಕೆ ಪಡೆದಿರುವದನ್ನು ನಾವು ಕಾಣಬಹುದು. ನಾವು ಯಾವದನ್ನು ನಿಗ್ರಹಿಸುವದಕ್ಕಾಗಿ, ಗೆಲ್ಲುವದಕ್ಕಾಗಿ ಸಿಟ್ಟುಗೊಳ್ಳುತ್ತೇವೋ, ಆ ವ್ಯಕ್ತಿ ಅಥವಾ ವಿಷಯವು

ಹೆಚ್ಚು ಪ್ರಬಲವಾಗಿದ್ದಷ್ಟೂ ನಮ್ಮ ಸಿಟ್ಟೂ ಅಷ್ಟೇ ಪ್ರಬಲವಾಗಿ ಸಿದ್ಧಗೊಂಡಿರುತ್ತದೆ. ಸಾಮಾನ್ಯ ಸಂದರ್ಭದಲ್ಲಿ ನಾವು ಇರುವ ಪರಿಸ್ಥಿತಿಯಲ್ಲಿ ಆ ಎದುರಾಳಿ ವ್ಯಕ್ತಿ ಅಥವಾ ವಿಷಯವನ್ನು ನಿಗ್ರಹಿಸಲು ನಾವು ಅಸಮರ್ಥರಾಗಿರುವದರಿಂದ ಅದನ್ನು ನಿಗ್ರಹಿಸಲು ಅವಶ್ಯವಾಗುವಷ್ಟು ಶಕ್ತಿಯನ್ನು ನಮ್ಮಲ್ಲಿ ಉತ್ಪಾದಿಸುವವಕ್ಕೆಂದೇ ಸಿಟ್ಟು ಹುಟ್ಟಿಕೊಳ್ಳುವದು. ಹಾಗಾಗಿ ಸಿಟ್ಟುಗೊಳ್ಳುವದು ಅಷ್ಟರಿಂದಲೇ ಮೂರ್ಖತನವೆಂದಾಗಲಿ, ಅದೊಂದು ಅವಗುಣವೆಂದಾಗಲಿ ಭಾವಿಸುವದು ತಪ್ಪು. ಆದರೆ, ಸಿಟ್ಟು ಬಂದಾಗ ಮನುಷ್ಯನು ವಿವೇಕವನ್ನು ಕಳೆದುಕೊಳ್ಳುವದು ಸಾಮಾನ್ಯ ಎಂಬದರಿಂದಾಗಿ ಹಾಗೂ ಪರಿಸ್ಥಿತಿಯನ್ನೆದುರಿಸಲು ಅವಶ್ಯವಾಗುವಷ್ಟಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಸಿಟ್ಟುಗೊಳ್ಳುವ ಹವ್ಯಾಸ ಬೆಳೆಯುತ್ತದೆ ಎಂಬದರಿಂದಾಗಿ ಸಿಟ್ಟುಗೊಳ್ಳುವದು ನಿಷಿದ್ಧ ಎನ್ನುತ್ತಾರೆ. ಆದರೆ ಸಿಟ್ಟು ಬಂದಾಗಲೂ ಕೂಡ ತನ್ನ ವಿವೇಕವನ್ನು ಕಳೆದುಕೊಳ್ಳದಿರುವದು ಒಬ್ಬನಿಗೆ ಸಾಧ್ಯವಾಗುವದಾದರೆ ಅವನು ಅದ್ಭುತ ಕೆಲಸಗಳನ್ನು ಸಾಧಿಸಲು ಸಮರ್ಥನಾಗುತ್ತಾನೆ. ತುಂಬ ಆತ್ಮವಿಶ್ವಾಸ ಪಡೆದವರಿಗೆ ಮಾತ್ರ ಇದು ಸಾಧ್ಯವಾಗುತ್ತದೆ. ಯೋಗೀಶ್ವರನೆನಿಸಿಕೊಂಡ ಕೃಷ್ಣ ಕೂಡ ಅನೇಕ ವೇಳೆ ಸಿಟ್ಟನ್ನು ಪ್ರದರ್ಶಿಸುತ್ತಾನೆ. ಅನೇಕ ಪ್ರಬಲ ವೈರಿಗಳನ್ನು ಸ್ವತಃ ನಾಶಮಾಡಬೇಕಾಗಿ ಬಂದ ಅವನು ಅವರುಗಳನ್ನು ಕೊಲ್ಲುವಾಗ ನಗುತ್ತಲಿದ್ದ ಎಂಬದು ಅಸಂಬದ್ಧವಾಗುತ್ತದೆ. ಭೀಮನು ಕೃಷ್ಣನ ಮನಸ್ಥಿತಿಯ ಮಟ್ಟಕ್ಕೆ ಏರಿಲ್ಲವಾದರೂ ಅದನ್ನು ಸಮೀಪಿಸುತ್ತಿದ್ದ ಎಂಬದನ್ನು ಅವನ ಮನೋಭಾವಗಳಿಂದ ತಿಳಿಯಬಹುದು. ಕೀಚಕನ ಕುರಿತಾಗಿ ದ್ರೌಪದಿಗೆ ನೀಡಿದ ಭರವಸೆಯ ಈ ಸಂದರ್ಭ ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಅರ್ಜುನ ಮೊದಲಾದವರು ತಮ್ಮ ವೈರಿಗಳನ್ನು ಕೊಲ್ಲಲು ಪ್ರತಿಜ್ಞೆ ಮಾಡುವಾಗ ಸಾಕಷ್ಟು ಮುಂದಾಲೋಚನೆ ಮಾಡದೆ ಅನಂತರ ಆ ಪ್ರತಿಜ್ಞೆಯನ್ನು ನೆರವೇರಿಸಲು ಎಷ್ಟು ಪ್ರಯಾಸಪಟ್ಟರು ಎಂಬದನ್ನೂ ನಾವು ಕಾಣಬಹುದು. ಅದೇ ಭೀಮನು ಇಂತಹ ಸಂಕಲ್ಪಗಳನ್ನು ಮಾಡುವಾಗ ಅವನ ಆತ್ಮವಿಶ್ವಾಸ ಹೇಗಿರುತ್ತದೆ, ಅದರಿಂದಾಗಿ ಅವನು ತನ್ನ ವಚನವನ್ನು ಎಷ್ಟು ಸರಾಗವಾಗಿ ಪಾಲಿಸಲು ಸಾಧ್ಯವಾಗಿದೆ ಎಂಬದನ್ನೂ ನೋಡಬಹುದು.

ಈ ಸಂದರ್ಭದಲ್ಲಿಯೂ ಅಷ್ಟೆ. ಅಣ್ಣನ ಆಜ್ಞೆಗೆ ಕಟ್ಟುಬಿದ್ದು, ಉಪಯೋಗಿಸಲ್ಪಡದೆ ಬಿದ್ದಿರುವ ಉಕ್ಕಿನ ತುಂಡಿನಂತೆ ಅವನ ಚೈತನ್ಯವು ನಿಷ್ಕ್ರಿಯವಾಗಿ ಮುದುಡಿ ಬಿದ್ದುಕೊಂಡಿದ್ದರೂ ದ್ರೌಪದಿಯ ಕಣ್ಣೀರು, ಅದಕ್ಕೆ ಕಾರಣವಾದ ಅವಳ ಅಪಾರ ವೇದನೆ, ಅವಳ ನ್ಯಾಯಬದ್ಧವಾದ ಕೋರಿಕೆ, ಕೀಚಕನು ಎಸಗುತ್ತಿದ್ದ ಅನ್ಯಾಯ–ಇವೆಲ್ಲವೂ ಹುರಿಗೊಂಡು ಅವನ ಮನಸ್ಸನ್ನು ಕಲಕಿದಾಗ

ಅವನೊಳಗೆ ಹುದುಗಿದ್ದ ನ್ಯಾಯಪಕ್ಷಪಾತತನದ ಕಿಡಿ ಸಿಡಿದು ಅನ್ಯಾಯವನ್ನು ನಿರ್ಮೂಲಗೊಳಿಸುವ ಮತ್ತು ಆ ಅನ್ಯಾಯಕ್ಕೆ ಬಲಿಯಾಗಿ ಪರಿತಾಪ ಪಡುತ್ತಿದ್ದ ವ್ಯಕ್ತಿಯನ್ನು ಸಂತೈಸುವ ಇಚ್ಛೆ ಪ್ರಬಲವಾಗಿ ಸೆಟೆದು ನಿಂತುದು ಸಹಜವೇ ಆಗಿತ್ತು. ಅಣ್ಣನ ಆಜ್ಞೆಯನ್ನು ಕಣ್ಣು ಮುಚ್ಚಿ ಪಾಲಿಸಬೇಕೆಂದು ಅವನಲ್ಲಿ ಅತ್ಯಂತ ಪ್ರಬಲವಾಗಿ ಬೇರೂರಿದ್ದ ಅವನ ವಿಧಿ ನಿಷೇಧಾರ್ಥಕ ಇಚ್ಛೆಯನ್ನು ವಾಸ್ತವಿಕ ರೂಪದ ಈ ಹೊಸ ಇಚ್ಛೆ ಮೀರಿ ನಿಂತುದರಿಂದ, ಈ ಹೊಸ ಇಚ್ಛೆಯು ಅತ್ಯಂತ ಪ್ರಬಲವಾದುದಾಗಬೇಕಾಗಿದ್ದು, ಅಂತಹದರ ಪೂರೈಕೆಗಾಗಿ ಅವನಲ್ಲಿ ಅತ್ಯದ್ಭುತವಾದ ಶಕ್ತಿಯು ಆವಿರ್ಭಾವವಾಗಲೇಬೇಕಾಯಿತು. ತನ್ನ ಎಲ್ಲ ಬಯಕೆ, ಶಕ್ತಿ, ಸಾಮರ್ಥ್ಯಗಳನ್ನೂ ತಾನು ಅಣ್ಣನ ಆಜ್ಞೆ ಎಂಬದಕ್ಕೆ ಶರಣು ಗೊಳಿಸಿ ತನ್ನ ವ್ಯಕ್ತಿತ್ವವನ್ನೇ ಮರೆತು ಕುಳಿತಿದ್ದ ಅವನು ಈಗ ಅಂತಹ ಅಣ್ಣನ ಆಜ್ಞೆ ಎಂಬದನ್ನು ಅನಿವಾರ್ಯವಾಗಿ ಮೀರಬೇಕಾದಾಗ ಅವನಲ್ಲಿ ಅಪಾರವಾದ ವ್ಯಕ್ತಿತ್ವ ಮೂಡಿ ಬರಬೇಕಾದುದು ಸಹಜವೇ ಆಗಿತ್ತು. ಇಲ್ಲಿ ಭೀಮನು ತನ್ನ ಜೀವನದಲ್ಲಿ ತನಗೆ ಬಹಳ ವಿರಳವಾಗಿ– ಅಂದರೆ, ಬೇರೊಮ್ಮೆ ಇಲ್ಲ ಎನ್ನುವಷ್ಟು ಅಪೂರ್ವವಾಗಿ– ಒದಗಿದ ಒಂದು ಸಂದರ್ಭದಲ್ಲಿದ್ದಾನೆ. ಅವನ ಯಾವದೇ ಮನೋಭಿಲಾಷೆಯ ಪೂರೈಕೆಗೆ ಅವನಿಗೆ ಜೀವನದಲ್ಲಿ ಇದ್ದ ಒಂದೇ ಒಂದು ಅಡ್ಡಿ– ಅಥವಾ ಅವನು ಅಡ್ಡಿ ಎಂದು ಕಾಣುತ್ತಿದ್ದ ಒಂದೇ ಒಂದು ವಿಷಯ–ಎಂದರೆ ಅಣ್ಣನ ಅನುಮತಿ. ಮೂರು ಲೋಕವನ್ನಾದರೂ ಅವನು ಎದುರಿಸಬಲ್ಲ. ಗೆಲವು, ಸೋಲು ಅವನ ದೃಷ್ಟಿಯಲ್ಲಿಲ್ಲ. ಎದುರಿಸಬೇಕಾದರೆ ಎದುರಿಸಬೇಕು. ಆದರೆ ಅವನು ಎದುರಿಸಲಾರದ ಒಂದೇ ವಿಷಯವೆಂದರೆ ಅಣ್ಣನ ವಿರೋಧವನ್ನು. ಈಗ ಇಲ್ಲಿ ಆ ರೀತಿಯ ಅಪೂರ್ವ ಸನ್ನಿವೇಶ ಅವನಿಗೆ ಒದಗಿದೆ. ಕೀಚಕನನ್ನು ಕೊಲ್ಲದಿದ್ದರೆ ನಿರಪರಾಧಿ ಪತ್ನಿಯ ಆತ್ಮಹತ್ಯೆ ನಡೆಯುತ್ತದೆ. ಅಣ್ಣನ ಆಜ್ಞೆಯನ್ನು ವಿರೋಧಿಸುವದು, ಅಥವಾ ನಿರಪರಾಧಿ ಪತ್ನಿಯ ಆತ್ಮಹತ್ಯೆಗೆ ಅವಕಾಶ ಮಾಡಿ ಕೊಡುವದು– ಈ ಎರಡರಲ್ಲಿ ಅವನು ಆರಿಸಿಕೊಂಡುದು ಅಣ್ಣನಿಗೆ ವಿರೋಧವಾಗಿ ಹೋಗುವದನ್ನು. ಆದರೆ ಈ ಆಯ್ಕೆ ಅಷ್ಟು ಸುಲಭದ ಕೆಲಸವಾಗಿರಲಿಲ್ಲ. ತನ್ನ ಈ ವರೆಗಿನ ಮನೋಧರ್ಮವನ್ನು ಅವನು ಪೂರ್ಣವಾಗಿ ಬದಲಾಯಿಸಬೇಕಾಗಿತ್ತು. ಅಲ್ಲದೆ ಇದರ ಜೊತೆಗೆ ಅವನು ಸೆಣಸಬೇಕಾಗಿದ್ದ ವೈರಿ ಕೂಡ ಸಾಮಾನ್ಯನಾದವ ನೇನೂ ಆಗಿರಲಿಲ್ಲ. ತನಗೆ ಸರಿದೊರೆ ಎನಿಸಬಲ್ಲ ಕೀಚಕ. ಇಷ್ಟೇಯೆ ? ಹೀಗೆ, ಅಣ್ಣನ ಆಜ್ಞೆಯನ್ನು ಮೀರಿ, ಕೀಚಕನನ್ನು ಕೊಲ್ಲುವದು– ಈ ಎರಡೇ ಅವನು ಎದುರಿಸಬೇಕಾಗಿದ್ದ ಕಾರ್ಯಗಳಲ್ಲ. ಅಷ್ಟಕ್ಕೆ ಬೇಕಾದ ಮನೋಬಲವನ್ನು ಮಾತ್ರ ಅವನು ತಂದುಕೊಂಡರೆ ಸಾಲದಾಗಿತ್ತು. ತನ್ನ ಈ ಹೊಸ ಸಂಕಲ್ಪವನ್ನು ನೆರವೇರಿಸುವಲ್ಲಿ ತಾನು ತಮ್ಮ ಅಜ್ಞಾತವಾಸದ ನಿಯಮವನ್ನೇ ಮುರಿಯ

ಬೇಕಾಗಲೂಬಹುದು ಎಂಬುದನ್ನು ಊಹಿಸುವಷ್ಟು ಆ ಸಿಟ್ಟಿನ ಭರದಲ್ಲಿಯೂ ಅವನ ಬುದ್ಧಿ ತಿಳಿಯಾಗಿಯೇ ಇತ್ತು. ಅಜ್ಞಾತವಾಸವು ಬಯಲಾದರೆ ಅವರು ಈ ವರೆಗೆ ಅನುಭವಿಸಿದ ಹನ್ನೆರಡು ವರ್ಷಗಳ ವನವಾಸವು ಕೇವಲ ನಿಷ್ಪ್ರಯೋಜಕ ವಾದುದಾಗಿ ಅವರು ಪುನಃ ಅಂತಹ ಹನ್ನೆರಡು ವರ್ಷಗಳ ವನವಾಸವನ್ನು ಅನುಭವಿಸಬೇಕಾಗುತ್ತಿತ್ತು. ಸಿಟ್ಟಿನ ಭರದಲ್ಲಿಯೂ ಕೂಡ ಅವನ ವಿವೇಚನಾ ಶಕ್ತಿ ಎಷ್ಟು ಸ್ಪಷ್ಟವಾಗಿತ್ತು ಎಂಬುದನ್ನು ಅವನ ಮಾತಿನಲ್ಲಿಯೇ ನಾವು ಕಂಡು ಕೊಳ್ಳಬಹುದು. ಅವನು ಕಲ್ಪಿಸಿಕೊಂಡ ಪ್ರಕಾರ ಅವನಿಗೆ ಈಗ ಇದ್ದ ದೊಡ್ಡ ಆತಂಕ ಯಾವುದು? ಕೀಚಕನಲ್ಲ. ಕೀಚಕನನ್ನು ಬೆಂಬಲಿಸಬಲ್ಲ ಇಡಿಯ ವಿರಾಟವಂಶವಲ್ಲ, ಕೌರವರಲ್ಲ, ಯಾರೂ ಅಲ್ಲ. ಭೀಮನಿಗೆ ಎದುರಾಗಿ ನಿಂತಿದ್ದ ಹಿಮಾಚಲವೆಂದರೆ ಅಣ್ಣನ ಇಚ್ಛೆ. ಅದನ್ನು ದಾಟುವದೊಂದೇ ಕಷ್ಟ. ಅದನ್ನು ದಾಟಿಬಿಟ್ಟರೆ ಅನಂತರ ಅವನನ್ನು ಮೂರು ಲೋಕ ಎದುರಿಸಿದರೂ ಅವನು ಅವುಗಳನ್ನು ನಿವಾರಿಸಬಲ್ಲ. ಅಣ್ಣನ ಆಜ್ಞೆಯನ್ನು ದಾಟಿದ ತಕ್ಷಣ ಅವನಿಗೆ ಎದುರಾಗುವವನು ಕೀಚಕ. ಕೀಚಕ ಲೋಕಪ್ರಸಿದ್ಧನಾಗಿದ್ದ ಬಲಶಾಲಿ. ಆದರೂ ಭೀಮನಿಗೆ ಅವನನ್ನು ಸೋಲಿಸುವದೊಂದು ಚಿಂತೆಯ ವಿಷಯವಲ್ಲ. ತನ್ನ ಕೈ ಹಿಡಿದವಳನ್ನು ಬಹಿರಂಗವಾಗಿ ಅವಮಾನಗೊಳಿಸಿದವನು ಎಷ್ಟೇ ಬಲಾಢ್ಯನಾ ಗಿದ್ದರೂ ತಾನು ಅವನನ್ನು ಹಿಂದೆ- ಮುಂದೆ ನೋಡದೆ ಎದುರಿಸಲೇಬೇಕಾಗುತ್ತದೆ. ಇಲ್ಲವಾದರೆ ತನಗಾದ ಅವಮಾನವನ್ನು ಸಹಿಸಿಕೊಂಡು ಕೂರಬೇಕಾಗುತ್ತದೆ. ಭೀಮ ಹೀಗೆ ಕೂರಲಾರ. ಅವಮಾನವನ್ನು ನೀಗುವಲ್ಲಿ, ಅನ್ಯಾಯವನ್ನು ದಮನ ಮಾಡುವಲ್ಲಿ ಅವನು ತನ್ನ ಯೋಗಕ್ಷೇಮಗಳನ್ನು ಚಿಂತಿಸುತ್ತ ಕೂರುವ ಸ್ವಭಾವದವನಲ್ಲ. ಹಾಗಾಗಿ, ತಾನು ಬಹಳ ಪ್ರಯಾಸದಿಂದ ಅಣ್ಣನ ಆಜ್ಞೆ ಯನ್ನು ದಾಟಲು ಸಾಧ್ಯವಾಗುವದಾದರೆ ಅನಂತರ ತಕ್ಷಣ ತಾನು ಎದುರಿಸ ಬೇಕಾಗುವ ಕೀಚಕನ ಕುರಿತು ವಿವೇಚನೆ ಮಾಡಬೇಕಾಗಿಲ್ಲ. ಒಂದೋ ಕೀಚಕನ ಪ್ರಾಣ, ಇಲ್ಲವೆ ತನ್ನ ಪ್ರಾಣ. ಒಂದು ವೇಳೆ ತಾನು ಕೀಚಕನನ್ನು ಕೊಲ್ಲಲು ಸಾಧ್ಯವಾಗುವದಾದರೆ ಅನಂತರ ಏನಾದೀತು? ಕೀಚಕನ ಬೆಂಬಲಿಗರಾದ ವಿರಾಟರೆಲ್ಲರೂ ಎದುರುಬೀಳುವದು ಸಹಜ. ಅವರನ್ನು ಕೂಡ ತಾನು ಎದುರಿಸ ಬೇಕಾಗುವದು ಅನಿವಾರ್ಯವಾಗುತ್ತದೆ. ಕೀಚಕನೊಂದಿಗೆ ಸೆಣಸಾಟ ಸಾಕಷ್ಟು ರಹಸ್ಯವಾಗಿ ನಡೆಯುತ್ತದೆ. ಆದರೆ ವಿರಾಟರೊಂದಿಗೆ ಹಾಗಲ್ಲ. ಈ ಸೆಣಸಾಟ ಬಯಲಾಗಲೇಬೇಕಾಗುತ್ತದೆ. ಇದರ ಪರಿಣಾಮವಾಗಿ ಕೌರವರು ತಮ್ಮನ್ನು ಪತ್ತೆ ಹಚ್ಚಲು ಸಾಧ್ಯವಾಗುವದು ಅನಂತರದ ತನ್ನ ಸಮಸ್ಯೆ. ತಮ್ಮನ್ನು ಅವರು ಪತ್ತೆ ಹಚ್ಚಿದರೆ ತಾವು ಪುನಃ ಕಾಡಿನ ವಾಸಕ್ಕೆ ಹೋಗಬೇಕಾಗುವದು ಅವಶ್ಯ ವಾಗುತ್ತದೆ. ಇದರಿಂದಾಗಿ ತನ್ನ ಅಣ್ಣತಮ್ಮಂದಿರು, ಪತ್ನಿ–ಇವರನ್ನು ತಾನು

ತನ್ನ ಕಾರ್ಯದಿಂದಾಗಿ ರಾಜ್ಯವಿಹೀನರನ್ನಾಗಿ ಮಾಡಿ ಕಾಡಿಗೆ ಅಟ್ಟಿದಂತಾಗುತ್ತದೆ. ಭೀಮ ಕಾಡಿಗೆ ಬಂದಿರುವದು ನ್ಯಾಯವನ್ನು ಒಪ್ಪಿಕೊಂಡಲ್ಲ. ತಾವು ಅನ್ಯಾಯಕ್ಕೆ ಒಳಗಾಗಿಯೇ ಕಾಡಿಗೆ ಬಂದಿರುವದು ಎಂಬದನ್ನು ಅವನು ಈ ಹಿಂದೆ ವ್ಯಕ್ತಪಡಿಸಿದ್ದಾನೆ. ಜೂಜು, ಜೂಜಿನ ನಿಯಮ, ಅದರ ಪಾಲನೆ– ಇವುಗಳು ಭೀಮನ ದೃಷ್ಟಿಯಲ್ಲಿ ನ್ಯಾಯಬದ್ಧವಾದವುಗಳಲ್ಲ. ಅರ್ಧ ರಾಜ್ಯ ತಮಗೆ ಸೇರಬೇಕಾದುದೇ ಅವನ ದೃಷ್ಟಿಯಲ್ಲಿ ನ್ಯಾಯ. ಅನ್ಯಾಯಕ್ಕೆ ಅವನು ಶರಣಾಗಿ ಕಾಡಿಗೆ ಬಂದಿರುವದು ಕೇವಲ ಅಣ್ಣನ ಮಾತಿಗಾಗಿ. ಹೀಗೆ ಒಮ್ಮೆ ಹದಿಮೂರು ವರ್ಷಗಳ ಅರಣ್ಯ ವಾಸವನ್ನು ಕಳೆಯಬೇಕಾಗಿರುವದಂತೂ ತನ್ನ ಅಣ್ಣನಿಗಾಗಿ. ಆದರೆ ಪುನಃ ಅಂತಹ ಹದಿಮೂರು ವರ್ಷಗಳ ಕಾಲ ತಾವು ಕಾಡಿನಲ್ಲಿರಬೇಕಾಗುವದಾದರೆ, ಹಾಗೂ ಅದು ಹಾಗಾಗುವದು ತನ್ನ ಕಾರ್ಯದಿಂದ ಎಂದಾದರೆ ಭೀಮ ಅದಕ್ಕೆ ಬದ್ಧನಾಗಲಾರ, ತನ್ನ ಸೋದರರನ್ನೂ ಬದ್ಧರನ್ನಾಗಿ ಮಾಡಲಾರ. ಅಣ್ಣನಿಗಾಗಿ ತಾನು ಕಾಡು ಸೇರಬಲ್ಲ. ತನಗಾಗಿ ಇತರರು ಕಾಡು ಸೇರುವದನ್ನು ಸಹಿಸುವದಿಲ್ಲ. ಹಾಗಾಗಿ, ತಮ್ಮನ್ನು ಪತ್ತೆಹಚ್ಚಿ ಕೌರವರು ಪುನಃ ತಮ್ಮನ್ನು ಕಾಡಿಗೆ ಅಟ್ಟಲು ಹವಣಿಸುವರಾದರೆ ಆ ಕೌರವರನ್ನೇ ನಾಶ ಮಾಡಲು ತಾನು ಸಿದ್ಧ. ಅವರನ್ನು ನಾಶ ಮಾಡಲು ಈ ವರೆಗೆ ಅಡ್ಡಿಯಾಗಿದ್ದ ಅಣ್ಣನ ಆಜ್ಞೆಯನ್ನು ದಾಟಿ ಆಗಿದೆ.

ಭೀಮ ದೊಡ್ಡ ಶಾಸ್ತ್ರವೇತ್ತನೇನೂ ಅಲ್ಲ. ನೀತಿಶಾಸ್ತ್ರಗಳನ್ನೆಲ್ಲ ಓದಿ ಜೀರ್ಣಿಸಿಕೊಂಡು, ತಾವು ಜೂಜಿನ ಮೂಲಕ ಗೆದ್ದುಕೊಂಡ ಒಬ್ಬಳು ಸ್ತ್ರೀಯನ್ನು ತುಂಬಿದ ಸಭೆಯಲ್ಲಿ ಬತ್ತಲೆಯನ್ನಾಗಿ ಮಾಡುವದು ಶಾಸ್ತ್ರದ ಪ್ರಕಾರ ಸರಿಯೋ ತಪ್ಪೋ ಎಂದು ಜಿಜ್ಞಾಸೆ ಮಾಡುತ್ತ ಕೂರುವ ಪ್ರವೃತ್ತಿ ಅವನದಲ್ಲ. ನ್ಯಾಯ, ಅನ್ಯಾಯಗಳನ್ನು ಅವನು ಗ್ರಂಥಗಳಲ್ಲಿ ಹುಡುಕುವವನಲ್ಲ. ಅವನ ಹೃದಯವೇ ಅವನ ಶಾಸ್ತ್ರಭಂಡಾರ. ಕೌರವರು ದ್ರೌಪದಿಗೆ ಮಾಡಿದ ಕಾರ್ಯ ಭೀಷ್ಮ, ದ್ರೋಣ, ವಿದುರ, ಯುಧಿಷ್ಠಿರ ಮೊದಲಾದವರ ದೃಷ್ಟಿಯಲ್ಲಿ "ಧರ್ಮ ಸೂಕ್ಷ್ಮ" ಎನಿಸಬಹುದಾಗಿದ್ದರೂ ಭೀಮನ ದೃಷ್ಟಿಯಲ್ಲಿ ಅದು ಅಕ್ಷಮ್ಯ ಅಪರಾಧ. ಆದರೆ ಅವನು ಅದನ್ನು ಸಹಿಸಿಕೊಂಡುದು ಅಣ್ಣನಿಗಾಗಿ ಮಾತ್ರ. ಆದರೆ ಅಣ್ಣ ಅದನ್ನು ಸಹಿಸಿಕೊಂಡಿರುವದು ಅದೇನೋ "ಧರ್ಮ ಸೂಕ್ಷ್ಮ" ಎಂಬದಕ್ಕಾಗಿ. ಅಣ್ಣನ ಅಭಿಮತವೇ ಸರಿ ಇರಬಹುದು. ಒಂದು ವೇಳೆ ಹಾಗೆಯೇ ಆಗಿ ತಾನು ಈಗ ಕೌರವರನ್ನು ನಾಶಮಾಡಿದರೆ "ಧರ್ಮ ಸೂಕ್ಷ್ಮ"ಗಳ ಶೀರ್ಷಗಾರರಾದ ದೇವತೆಗಳು ತಮ್ಮನ್ನು ಎದುರಿಸಿಯಾರೋ ಏನೋ! ಎದುರಿಸಿದರೆ ಅವರನ್ನೂ ಎದುರಿಸಲು ತಾನು ಸಿದ್ಧ. ಏಕೆಂದರೆ ತನ್ನ ಅಭಿಪ್ರಾಯದ ಪ್ರಕಾರ ತಾನು ಕೌರವರನ್ನು ನಾಶ ಮಾಡುವದರ ಮೂಲಕ ಧರ್ಮಕ್ಕೆ ಅಪಚಾರ ಮಾಡಲಿಲ್ಲ. ಇದರಿಂದ ಏನಾಗು

ತ್ತದೆ ? ಹೀಗೆ ಅಣ್ಣನ ಅಭಿಪ್ರಾಯದ ಪ್ರಕಾರ, ತಾನು ಕೌರವರನ್ನು ನಾಶಮಾಡಿದುದು ಅನ್ಯಾಯ ಎಂದಾಗಿ ಆ ಅನ್ಯಾಯವನ್ನು ಪ್ರತಿಭಟಿಸಲು ನ್ಯಾಯರಕ್ಷಕರಾಗಿ ಬರುವ ದೇವತೆಗಳನ್ನೂ ತಾನು ನಿವಾರಿಸಲು ಹೊರಟರೆ ಏನಾದೀತು ? ಅಣ್ಣನು ತನ್ನನ್ನು ವಿರೋಧಿಸುತ್ತಾನೆ. "ನೀನು ಮಾಡಿದುದು ಅನ್ಯಾಯ" ಎನ್ನುತ್ತಾನೆ. ಆದರೆ ತಾನು ಮಾಡಿದುದು ನ್ಯಾಯ ಎಂಬದು ತನಗೆ ಚೆನ್ನಾಗಿ ಗೊತ್ತಿದೆ. ಹೀಗೆ ತನ್ನಿಬ್ಬರಲ್ಲಿ ಪ್ರಬಲವಾದ ಮತಭೇದ ಉಂಟಾದರೆ ಅದರಿಂದ ತಮ್ಮ ಭ್ರಾತೃತ್ವಕ್ಕೆ ಧಕ್ಕೆ ಬರಬಹುದು. ಬಂದರೆ ಬರಲಿ. ತಾನು ಕಂಡುಕೊಂಡ ನ್ಯಾಯಕ್ಕಾಗಿ ಭ್ರಾತೃತ್ವ ಹೋದರೆ ಅದಕ್ಕೂ ಭೀಮ ಸಿದ್ಧನೇ. ಅಣ್ಣನ ಭ್ರಾತೃತ್ವ ತುಂಡಾಗುವದರಿಂದ ಅನಂತರದ ಪರಿಣಾಮವೆಂದರೆ ತನ್ನ ಮೂವರು ತಮ್ಮಂದಿರು ತಮ್ಮ ಹಿರಿಯಣ್ಣನ ಪರ ವಹಿಸಿ ಬರಬಹುದಾದುದು. ಅವರ ಸಂಬಂಧ ಹರಿದುಕೊಳ್ಳುವದೇನೂ ದೊಡ್ಡ ವಿಷಯವಲ್ಲ.

ಪಾಂಡವರಲ್ಲಿ ಹೀಗೆ ಒಡಕು ಉಂಟಾದರೆ ಅದನ್ನು ವಿರೋಧಿಸಬಹುದಾದ ಒಬ್ಬನೇ ವ್ಯಕ್ತಿ ಕೃಷ್ಣ–"ನೀನು ಹೀಗೆ ಮಾಡಿದುದು ಸರಿಯಲ್ಲ" ಎಂದು. ಅವನು ತನಗೆ ಹೇಳಿದರೆ "ಇದು ನಿನಗೆ ಸಂಬಂಧವಿಲ್ಲ" ಎಂದು ಅವನಿಗೆ ಹೇಳಿದರೆ ಆಯಿತು.

ಇಷ್ಟೆಲ್ಲ ವಿವರಣೆಯಿಂದ ಒಂದು ವಿಷಯವನ್ನು ನಾವು ಸ್ಪಷ್ಟವಾಗಿ ಕಂಡುಕೊಳ್ಳಬಹುದು. ಇಂತಹ ಮುಂಜಾಗರೂಕತೆ ಅಥವಾ ದೂರದೃಷ್ಟಿ ಒಬ್ಬಾತನಿಗೆ ಇರುವದು ಅವನು ಶಾಂತನಾಗಿ ಕುಳಿತು ಚಿಂತಿಸುವಾಗ. ಆದರೆ ಭೀಮ ಈಗ ಒಂದು ಅತ್ಯಂತ ಪ್ರಬಲವಾದ ಗೊಂದಲದಲ್ಲಿ ಸಿಕ್ಕಿಕೊಂಡಿದ್ದಾನೆ. ಅವನ ಮನಸ್ಸು ವಿಪರೀತವಾಗಿ ಕಲಕಲ್ಪಟ್ಟಿದೆ. ಹೆಂಡತಿಯ ಮಾನ ಸಂರಕ್ಷಣೆ ಮತ್ತು ಅಣ್ಣನ ಆಜ್ಞೆಯ ಪಾಲನೆ–ಈ ಎರಡು ವಿರುದ್ಧ ಸೆಳೆತಗಳಲ್ಲಿ ಸಿಕ್ಕಿದ ಅವನು ಒಂದು ಸೆಳೆತವನ್ನು ತುಂಡು ಮಾಡಿಕೊಳ್ಳಲು ಅವಶ್ಯವಾಗುವ ಹಾಗೂ ಮನಸ್ಸಿನ ಸ್ತಿಮಿತವನ್ನು ಕಳೆದುಕೊಳ್ಳಬೇಕಾದಷ್ಟು ಪ್ರಮಾಣದ ವ್ಯಗ್ರತೆಯನ್ನು ಆವಾಹಿಸಿಕೊಂಡಿದ್ದಾನೆ. ಇಂತಹ ಸಂದರ್ಭದಲ್ಲಿ ಕೂಡ ಅವನು ಪ್ರಶಾಂತವಾದ ಮನಸ್ಸಿಗೆ ಮಾತ್ರ ಸಾಧ್ಯವಾಗಬಹುದಾದಂತೆ ಸಾಕಷ್ಟು ದೀರ್ಘವಾಗಿ, ಹಂತ ಹಂತವಾಗಿ ಆಲೋಚಿಸಬಲ್ಲನಾದರೆ ಅವನ ಮನಸ್ಸಿನ ರಚನೆಯನ್ನು ನಾವು ತಿಳಿದುಕೊಳ್ಳಬಹುದು. ಅನೇಕರು ಭಾವಿಸುವಂತೆ ಭೀಮನು ಹಿಂದೆ–ಮುಂದೆ ನೋಡದೆ ದುಡುಕುವ ಸ್ವಭಾವದವನು ಎಂದು ಹೇಳುವದು ಎಂತಹ ಹೇಯ ಅಪಚಾರ ಎಂಬದಕ್ಕೆ ಇಲ್ಲಿ ಸಮರ್ಥನೆ ಸಿಕ್ಕುತ್ತದೆ. ಹಿಂದೆ–ಮುಂದೆ ನೋಡದೆ ಜೂಜಾಡಿ ತನ್ನ ಸಮಸ್ತವನ್ನೂ ಕಳೆದುಕೊಂಡ ಯುಧಿಷ್ಠಿರನು ಸಮಾಧಾನಿ ಎಂದೂ, ಪತ್ನಿಯ ಮಾನಸಂರಕ್ಷಣೆಯಂತಹ ತ್ವರಿತ ಸಂದರ್ಭದಲ್ಲಿ ಕೂಡ ಭೀಮನು ಮುಂದೇನಾಗ

ಬಹುದೆಂಬದನ್ನು ಸ್ಪಷ್ಟವಾಗಿ ಕಂಡುಕೊಳ್ಳಬಲ್ಲವನಾಗಿದ್ದರೂ ಅವನು ದುಡುಕು ಸ್ವಭಾವದವನೆಂದೂ ಹೇಳುವದು ಸೋಜಿಗವೆನಿಸುತ್ತದೆ.

ರಮೆ:– ಏನೇ ಆಗಲಿ. ಪತ್ನಿಯು ಮಾನಹರಣವಾಗುವಂತಹ ಸಂದರ್ಭದಲ್ಲಿ ಕೂಡ ವಿಚಲಿತನಾಗದೆ ತನ್ನ ವ್ರತವನ್ನು ಬಿಡದಿರುವ ಯುಧಿಷ್ಠಿರ ಮತ್ತು ಅರ್ಜುನಾದಿಗಳು ಅಸಾಮಾನ್ಯವಾದ ಮನೋಸ್ಥೈರ್ಯವುಳ್ಳವರು – ಅಥವಾ ಗೀತೆಯಲ್ಲಿ ಹೇಳಿದಂತೆ ಒಂದು ವಿಧದ ಸ್ಥಿತಪ್ರಜ್ಞರು ಎಂದು ಏಕೆ ಹೇಳಬಾರದು ? ಹೀಗೆ ನೋಡುವಾಗ ಭೀಮ ಅಂತಹ ಗುಣವನ್ನು ಹೊಂದಿರಲಿಲ್ಲ ಎಂದು ಕಾಣಿಸುವದಿಲ್ಲವೆ ?

ಮುರಳಿ:– "ಹಣದ ಪೆಟ್ಟಿಗೆಯನ್ನು ಕೊಡದಿದ್ದರೆ ನಿನ್ನ ಮಗುವನ್ನು ಕೊಲ್ಲುತ್ತೇನೆ" ಎಂದು ದರೋಡೆಕೋರನು ತನ್ನ ಮಗುವನ್ನು ಹಿಡಿದಿರುವಾಗಲೂ ಹಣದ ಪೆಟ್ಟಿಗೆಯನ್ನು ಕೊಡದಿರುವ ತಾಯಿಯೂ ತನ್ನ ಮಗುವಿನ ಕುರಿತು ಸ್ಥಿತಪ್ರಜ್ಞಳಾಗಿದ್ದಾಳೆ ಎನ್ನುವಂತಾಯಿತು. ಪತ್ನಿಯು ಮಾನವನ್ನು ಕಾಮುಕನಿಗೆ ಒಪ್ಪಿಸಲು ಹಿಂಜರಿಯದಿದ್ದ ಯುಧಿಷ್ಠಿರಾದಿಗಳು ತಮಗೆ ಸೇರಬೇಕಾದ ಅರ್ಧ ರಾಜ್ಯವನ್ನು ಕೌರವರಿಗೆ ಬಿಟ್ಟುಕೊಡಲು ಸಿದ್ಧರಾಗಿಲ್ಲದೆ ಆ ರಾಜ್ಯಕ್ಕಾಗಿ ವನವಾಸ, ಅಜ್ಞಾತವಾಸ ಮೊದಲಾದ ದುರವಸ್ಥೆಯ ಜೀವನ ಮಾಡಲು ಸಿದ್ಧರಾಗಿದ್ದರು ಎಂಬದನ್ನು ನೀನು ಮರೆಯಬಾರದು. ಈ ಹಿಂದೆ ಭೀಮನು ಹೇಳಿದ ಮಾತನ್ನು ನೀನು ಕೇಳಿದ್ದೀಯೇ. "ನಾವು ನಮ್ಮ ರಾಜ್ಯಕ್ಕಾಗಿ ಕೌರವರಲ್ಲಿ ಯುದ್ಧಮಾಡಿ ಕ್ಷತ್ರಿಯರಂತೆ ಬದುಕೋಣ. ಇಲ್ಲವೇ ರಾಜ್ಯವನ್ನು ಬಯಸದೆ ತಪಸ್ವಿಗಳಾಗಿ ಮುಂದುವರಿಯಲು ನಿರ್ಧರಿಸೋಣ" ಎನ್ನುವ ಅವನ ಮಾತು ಎಷ್ಟು ಪ್ರಾಯೋಗಿಕವಾದುದು ಎಂಬದನ್ನು ನೀನು ಕಂಡುಕೊಳ್ಳಬಹುದು. ತನ್ನ ಅಣ್ಣ ತಮ್ಮಂದಿರ ಅಭಿಪ್ರಾಯಕ್ಕೆ ವಿರೋಧವಾಗಿ ಭೀಮನು ಅನಿವಾರ್ಯವಾಗಿ ವರ್ತಿಸಿದ ಕೆಲವು ಸಂದರ್ಭಗಳು ಬರುತ್ತವೆ. ಆ ಪ್ರತಿಯೊಂದು ಸಂದರ್ಭದಲ್ಲಿಯೂ ಅವನು ಹಾಗೆ ವರ್ತಿಸದೆ ಇರುತ್ತಿದ್ದರೆ ಏನಾಗುತ್ತಿತ್ತು ಎಂಬದನ್ನು ನೋಡುವಾಗ ಅವನ ವರ್ತನೆ ಸರಿಯೋ ಯುಧಿಷ್ಠಿರಾದಿಗಳದು ಸರಿಯೋ ಎಂಬದು ಅರ್ಥವಾಗುತ್ತದೆ. ಇದೂ ಅಂತಹ ಒಂದು ಸಂದರ್ಭ. ದ್ರೌಪದಿಯನ್ನು ಕೀಚಕನಿಂದ ರಕ್ಷಿಸಲು ಭೀಮನು ಮನಸ್ಸು ಮಾಡದೆ ಆಕೆ ಕೀಚಕನ ಕಾಮುಕ್ಕೆ ಬಲಿಯಾಗಿದ್ದರೆ ಅಥವಾ ಆಕೆ ಆತ್ಮಹತ್ಯೆ ಮಾಡಿಕೊಂಡಿದ್ದರೆ ಏನಾಗುತ್ತಿತ್ತು ಎಂಬದನ್ನು ಕಲ್ಪಿಸಿಕೊಂಡರೆ ಪಾಂಡವರು ಚರಿತ್ರಾರ್ಹ ವ್ಯಕ್ತಿಗಳಾಗುವದರಲ್ಲಿ ಭೀಮನ ಪಾತ್ರ ಬಹಳ ಪ್ರಮುಖವಾದುದು ಎಂಬದು ನಿನಗೆ ತಿಳಿಯುತ್ತದೆ.

ರಮೆ:– ಸುಮ್ಮನೆ, ನಿಮ್ಮನ್ನು ಕೆರಳಿಸಲು ಕೇಳಿದೆ. ಮತ್ತೇನಾಯಿತು ಹೇಳಿ.

ಮುರಳಿ:- ಕೇಳು. ಕೀಚಕನನ್ನು ಮುಂದಿನ ರಾತ್ರಿ ನಾಟ್ಯ ಮಂದಿರಕ್ಕೆ ಗುಪ್ತವಾಗಿ ಬರುವಂತೆ ಹೇಳಲು ಭೀಮ ದ್ರೌಪದಿಗೆ ತಿಳಿಸಿದನು. ದ್ರೌಪದಿಯು ಮನಸ್ಸಿನೊಳಗೆ ಭೀಮನನ್ನು ವಂದಿಸುತ್ತಾ ಹಿಂದಿರುಗಿದಳು. ಬೆಳಕು ಹರಿಯಿತು. ಕೀಚಕನು ಬಂದು ದ್ರೌಪದಿಯನ್ನು ಭೇಟಿ ಮಾಡಿದನು. ಅವಳು ಅವನಿಗೆ ಆ ರಾತ್ರಿ ನಾಟ್ಯದ ಮನೆಗೆ ಗುಟ್ಟಾಗಿ ಬರುವಂತೆ ತಿಳಿಸಿ ಮನಸ್ಸಿನೊಳಗೆ ಅಪಾರ ವಾದ ಹಿಗ್ಗನ್ನು ಅನುಭವಿಸಿದಳು. ಕೀಚಕನಿಗೂ ಅಷ್ಟೇ ಪ್ರಮಾಣದಲ್ಲಿ ಹಿಗ್ಗಿನ ಅನುಭವವಾಯಿತು. ಸರಿ. ಇಬ್ಬರಿಗೂ ಒಂದು ಯುಗದಂತೆ ಕಾಣಿಸಿಕೊಂಡ ಅಂದಿನ ಹಗಲು ಕಳೆದು ರಾತ್ರಿಯಾಯಿತು. ದ್ರೌಪದಿಯು ಸಡಗರದಿಂದ, ಆದರೆ ರಹಸ್ಯವಾಗಿ, ಬಂದು ಭೀಮನಿಗೆ ವಿಷಯವನ್ನು ಜ್ಞಾಪಿಸಿ ಅವನ ಹಣೆಗೆ ತಿಲಕ ವನ್ನು ತಿದ್ದಿ ಸೇಸೆದಳಿದು ವೀರ ಕ್ಷತ್ರಿಯ ರಮಣಿಗೆ ಸಹಜವಾದ ರೀತಿಯಲ್ಲಿ ಅವನನ್ನು ಬೀಳ್ಕೊಟ್ಟಳು. ಭೀಮನು ಕತ್ತಲಿನಲ್ಲಿ ಬಂದು ನಾಟ್ಯದ ಮನೆಯೊಳ ಗಿನ ಮಂಚದ ಮೇಲೆ ಮಲಗಿಕೊಂಡನು. ಈ ಕಡೆ ಕೀಚಕನು ಬೇಕು ಬೇಕಾದ ರೀತಿಯಲ್ಲಿ ತನ್ನನ್ನು ಅಲಂಕರಿಸಿಕೊಂಡು ನಾಟ್ಯದ ಮನೆಯನ್ನು ಹೊಕ್ಕು ಕತ್ತಲಿ ನಲ್ಲಿ ಭೀಮನನ್ನು ದ್ರೌಪದಿಯೆಂದೇ ಭಾವಿಸಿ ಅವನನ್ನು ಕುರಿತು ತನ್ನ ರೂಪದ ಬಗೆಗೆ ಹೆಗ್ಗಳಿಕೆಯ ಮಾತುಗಳನ್ನಾಡಿದನು. ಭೀಮನು ಕೂಡ ತಾನೂ ಸಹ ವಿಲಕ್ಷಣವಾದ ರೂಪವತಿಯೇ ಎಂದು ಹೇಳಿಕೊಂಡನು. ಕೀಚಕನು ಭೀಮನ ಮೈ ಸವರುತ್ತಾ ಅವನ ಶರೀರದ ಕಾಠಿಣ್ಯವನ್ನು ಗುರುತಿಸಿ ಅದೇಕೆ ಹಾಗೆ ಎಂದು ಪ್ರಶ್ನಿಸಿದನು. ಭೀಮನು ಇನ್ನು ಹೆಚ್ಚು ಸರಸವಾಡಲು ಇಚ್ಛಿಸಲಿಲ್ಲ. ಅವನು "ಅಯ್ಯಾ, ಪರಸತಿಯನ್ನು ಬಯಸಿದವನಿಗೆ ಅಮೃತವು ವಿಷವಾಗುವದು. ಕೋಮಲತೆಯು ಕರ್ಕಶವಾಗುವದು" ಎಂದು ಹೇಳುತ್ತಾ ಕೀಚಕನ ಮುಂದಲೆ ಯನ್ನು ಹಿಡಿದನು. ಪುರುಷನ ಹಿಡಿತವನ್ನು ಗುರುತಿಸಿದ ಕೀಚಕನು ಒಮ್ಮೆಗೇ ಅವಾಕ್ಕಾಗಿ ತಾನೂ ಭೀಮನನ್ನು ಹಿಡಿದನು. ಕೀಚಕನ ಶಕ್ತಿಗೆ ಸಿಟ್ಟಿನ ಹಿನ್ನೆಲೆ ಯಿರಲಿಲ್ಲ. ಪೂರ್ವಸಿದ್ಧತೆ ಇರಲಿಲ್ಲ. ಸ್ತ್ರೀಯೊಂದಿಗೆ ಸುಖಿಸಲು ಬಂದ ವಿಲಾಸೀ ಭಾವದ ಹಗುರ ಮನಸ್ಸಿನಲ್ಲಿದ್ದನವನು. ಭೀಮನಾದರೋ ಮನಸ್ಸಿನ ಎಲ್ಲ ಪೂರ್ವ ಸಿದ್ಧತೆಗಳಿಂದಲೂ ಸಜ್ಜಾಗಿ ಬಂದಿದ್ದವನು. ಹಾಗಾಗಿ ಕೀಚಕನು, ಭಾರತದ ವೀರರೇ ತನಗೆ ಹೆದರಿ ನಡಗುತ್ತಿದ್ದ ಸಾಹಸಿ ತಾನಾಗಿದ್ದರೂ, ತಾನು ಭೀಮನ ಸಮಬಲನೇ ಆಗಿದ್ದರೂ ಭೀಮನೊಂದಿಗೆ ಹೆಚ್ಚು ಹೊತ್ತು ಸೆಣಸಲು ಸಾಧ್ಯವಾಗ ಲಿಲ್ಲ. ದೇಹದ ಪಶುಬಲದ ದುರಹಂಕಾರಕ್ಕೆ ಸಿಕ್ಕಿ ಕಣ್ಣು ಕುರುಡಾಗಿ ಮುಟ್ಟ ಬಾರದ ಪವಿತ್ರ ವಸ್ತುವನ್ನು ಬಹಿರಂಗವಾಗಿ ಕಾಲಿನಿಂದೊದೆದು ಉರುಳಿಸಿದ ಅಪರಾಧವು, ಅನ್ಯಾಯವನ್ನು ದಮನ ಮಾಡುವ ಭರದಲ್ಲಿ ಮೂರು ಲೋಕವೇ ತನ್ನೆದುರು ನಿಂತರೂ ಅದಕ್ಕೆ ಎದೆಗೊಟ್ಟು ನಿಲ್ಲುವ ಮನೋಬಲಕ್ಕೆ ಮಣಿಯಲೇ

ಬೇಕಾಯಿತು. ಭೀಮನು ಕೀಚಕನ ತಲೆ ಮತ್ತು ಕೈಕಾಲುಗಳನ್ನು ಅವನ ಮುಂಡದೊಳಕ್ಕೆ ನೂಕಿ ಇಡಿಯ ದೇಹವನ್ನು ಒಂದು ಮುದ್ದೆಯಂತೆ ಮಾಡಿ ಅದನ್ನು ದ್ರೌಪದಿಗೆ ತೋರಿಸಿ ತನ್ನ ಅಡುಗೆ ಮನೆಗೆ ಹಿಂದಿರುಗಿದನು.

ರಮೆ:— ಪಾಪ.

ಮುರಳಿ:— ಭೀಮನು ಮಾಡಿದ್ದೇನು ?

ರಮೆ:— ಯಾರು ಹಾಗೆಂದವರು ?

ಮುರಳಿ:— ಮತ್ತೇನು ಪಾಪ ?

ರಮೆ:— ಯುಧಿಷ್ಠಿರನನ್ನು ನೆನಸಿಕೊಂಡು ಹೇಳಿದೆ.

ಮುರಳಿ:— ಅವನೇನು ಪಾಪ ಮಾಡಿದ ?

ರಮೆ:— ಅಲ್ಲ, ಭೀಮನ ಮುಖದ ಮುಂದೆಯೇ ಅವನನ್ನು ಹಳಿದು, ಹೆಸರುವಾಸಿಯಾದ ತನ್ನ ಸಮತೋಲನದ ಬುದ್ಧಿಗೆ ಕಳಂಕ ಹಚ್ಚಿಕೊಂಡನಲ್ಲಾ, ಅದನ್ನು ಹೇಳಿದೆ.

ಮುರಳಿ:— ಹಳಿದುದು ? ಎಲ್ಲಿ ? ಯಾವಾಗ ? ಭೀಮನನ್ನು ಕುರಿತು ಅವನು ನೇರವಾಗಿ ಮಾತನಾಡಿ ಕೂಡ ಇಲ್ಲ ! ಪರೋಕ್ಷವಾಗಿ ಅವನು ಭೀಮನನ್ನು ತಡೆದು ಕೀಚಕನ ತಂಟೆಗೆ ಹೋಗಬಾರದೆಂದು ಹೇಳಿದನೇ ಹೊರತು ಅವನನ್ನು ಹಳಿಯುವದೆಲ್ಲಿ ಬಂತು ?

ರಮೆ:— ಏನು ಆತುರದ ಮನುಷ್ಯ ಅಂತ ನೀವು ?

ಮುರಳಿ:— ಹೌದು. ಅವಕಾಶವನ್ನು ಗಬಕ್ ಅಂತ ಹಿಡಿಯಬೇಕಂತೆ. '

ರಮೆ:— ಅದು ಗೊತ್ತು. ನಿಮ್ಮ ಬುದ್ಧಿ ನನಗೆ ಗೊತ್ತಿಲ್ಲದೆ ಇನ್ಯಾರಿಗೆ ಗೊತ್ತಿರಬೇಕು ! ನಾನು ಅದನ್ನಲ್ಲ ಹೇಳಿದುದು. ಏನೋ ಹೇಳಿದುದಕ್ಕೆ ಏನೋ ಅರ್ಥವನ್ನು ಕಲ್ಪಿಸಿಕೊಳ್ಳುವದರಲ್ಲಿಯೂ ಗಬಕ್ ಅಂತ ಯಾಕೆ ಒದ್ದಾಡುತ್ತೀರಿ ಅಂತ ?

ಮುರಳಿ:— ನೀನು ಏನು ಹೇಳಿದೆ, ನಾನು ಏನು ಕಲ್ಪಿಸಿಕೊಂಡೆ ?

ರಮೆ:— ಭೀಮನಿಗೆ ಮುಖಭಂಗವಾಗುವಂತೆ ಯುಧಿಷ್ಠಿರನು ವರ್ತಿಸಿದುದು ತಪ್ಪಾಯಿತು ಎಂದರೆ ನೀವು ಏನೋ ಕಲ್ಪಿಸಿಕೊಳ್ಳುತ್ತೀರಲ್ಲ !

ಮುರಳಿ:— ಯಾವಾಗಲಮ್ಮಾ, ಯುಧಿಷ್ಠಿರನು ಭೀಮನಿಗೆ ಮುಖಭಂಗ ಮಾಡಿದುದು ? ಇದ್ಯಾವ ಹೊಸ ಭಾರತ ?

ರಮೆ:— ಪಾಂಡವರು ತಮ್ಮ ಅಜ್ಞಾತವಾಸಕ್ಕೆ ಮುಂಚೆ ತಮ್ಮ ಶಸ್ತ್ರಾಸ್ತ್ರಗಳನ್ನು ಕಟ್ಟಿಡುವಾಗ ಅವುಗಳು ಭೀಮನ ಕೈಗೆ ಸಿಕ್ಕಬಾರದೆಂದು ವಿಧಿಸಿರಲಿಲ್ಲವೆ?

ಮುರಳಿ:— ವಿಧಿಸಿದ್ದ.

ರಮೆ:— ಈಗೇನಾಯಿತು ?

ಮುರಳಿ:— ಏನಾಯಿತು ? ಭೀಮನಿಗೆ ಶಸ್ತ್ರಗಳು ಸಿಕ್ಕಿಬಿಟ್ಟವೇನು ?

ರಮೆ:— ಇಲ್ಲ. ಸಿಕ್ಕಲಿಲ್ಲ. ಆದರೂ ಯಾವ ಶಸ್ತ್ರಾಸ್ತ್ರವೂ ಇಲ್ಲದೆ ಅವನು ತನ್ನ ಸಮಬಲನನ್ನು ಮುದ್ದೆ ಮಾಡಲಿಲ್ಲವೆ ?

ಮುರಳಿ:— ಮಾಡಿದ.

ರಮೆ:— ಅಂದರೆ ಏನಂದಂತಾಯಿತು ?

ಮುರಳಿ:— ಏನಂದಂತಾಯಿತು ? ಭೀಮ ಕೀಚಕನನ್ನು ಹೊಡೆದು ಕೊಂದ ಎಂದಂತಾಯಿತು.

ರಮೆ:— ಯಾವದರಲ್ಲಿ ?

ಮುರಳಿ:— ಯಾವದರಲ್ಲಿ ? ಕೈಯಲ್ಲಿಯೇ ಇರಬಹುದು.

ರಮೆ:— ಅಲ್ಲಿಗೆ ಯುಧಿಷ್ಠಿರ ಹಾಗೆ ಹೇಳಿದುದರಿಂದ ಪ್ರಯೋಜನವೇನಾಯಿತು ?

ಮುರಳಿ:— ಹಾಗೆ ! ಅಸಹಾಯ ಶೂರನಾದ ಭೀಮನಿಗೆ ಶಸ್ತ್ರಾಸ್ತ್ರಗಳ ನೆರವು ಬೇಕಾಗಿರಲಿಲ್ಲ ಎಂತಲೂ, ಅದನ್ನು ತಿಳಿದಿದ್ದೂ ಯುಧಿಷ್ಠಿರನು ಅವನಿಗೆ ಶಸ್ತ್ರಗಳು ಸಿಕ್ಕಬಾರದೆಂದು ಹೇಳಿದುದು ಅವನು ಅನವಶ್ಯವಾಗಿ ಭೀಮನಲ್ಲಿ ತಾನು ಅವಿಶ್ವಾಸ ತೋರಿಸಿದಂತಾಯಿತೆಂದೂ ಹೇಳಿದೆಯಾ ?

ರಮೆ:— ಹೇಳಿದೆ.

ಮುರಳಿ:— ಹಾಗೆ ಹೇಳು.

ರಮೆ:— ಹಾಗೇ ಹೇಳಿದೆ.

ಮುರಳಿ:— ಅರ್ಥವಾಯಿತು.

ರಮೆ:— ಸದ್ಯ ಆಯಿತಲ್ಲ. ಮುಂದುವರಿಸಿ.

ಮುರಳಿ:— ವರಿಸುತ್ತೇನೆ, ಕೇಳು. ಕೀಚಕನ ಹನನ ವಿಚಾರ ಹೇಗೋ ಬಯಲಾಯಿತು. ಅವನ ನೂರು ಜನ ತಮ್ಮಂದಿರು ಬಂದು ತಮ್ಮ ಅಣ್ಣನ ಶವವನ್ನು ನೋಡಿ ಗೋಳಿಡುತ್ತಿದ್ದಾಗ ದ್ರೌಪದಿಯು ದೂರದಲ್ಲಿ ನಿಂತು ಇದನ್ನು ನೋಡಿ ಒಳಗಿಂದಲೇ ನಗುತ್ತಿದ್ದಳು. ಇದನ್ನು ನೋಡಿದ ಕೀಚಕನ ತಮ್ಮಂದಿರಿಗೆ

ಅವಳ ಕುರಿತು ಸಂಶಯು ಬಂದಿತು. ಅವಳ ಮೂಲಕವೇ ತಮ್ಮ ಅಣ್ಣನ ಕೊಲೆ ನಡೆದಿರಬೇಕೆಂದು ಅವರು ಊಹಿಸಿ ಆಕೆಯನ್ನು ಹಿಡಿದು ಆಕೆಯನ್ನೂ ಶವದೊಂದಿಗೆ ಬಿಗಿದು ಸ್ಮಶಾನಕ್ಕೆ ಒಯ್ದರು. ಆಕೆಯು ಜೋರಾಗಿ ಕಿರಿಚಿಕೊಳ್ಳುತ್ತಿದ್ದಳು. ಆಕೆಯ ಈ ಆರ್ತನಾದವನ್ನು ಕೇಳಿ ಭೀಮನು ರುದ್ರಭೂಮಿಗೆ ಧಾವಿಸಿದನು. ಅವನ ಬರವನ್ನು ಕಂಡು ದಿಕ್ಕಾಪಾಲಾಗಿ ಓಡುತ್ತಿದ್ದ ಕೀಚಕನ ಸೋದರರನ್ನೆಲ್ಲ ಒಂದು ಮರದ ಕೊಂಬೆಯಿಂದ ಬಡಿದು ಕೊಂದು, ಇಷ್ಟಾಗಿಯೂ ಯಾರಿಗೂ ತಿಳಿಯದಂತೆ ಬಂದು ತನ್ನ ಅಡುಗೆ ಮನೆಯನ್ನು ಸೇರಿಕೊಂಡನು.

ರಮೆ:– ಶಹಭಾಸ್.

ಮುರಳಿ:– ರೋಮಾಂಚಕಾರಿಯಾಗಿದೆಯಲ್ಲ ?

ರಮೆ:– ನಿಮಗೆ ಚಳಿ ಹಿಡಿದಿರಬೇಕು.

ಮುರಳಿ:– ಏಕೆ ?

ರಮೆ:– ರೋಮ ನೆಟ್ಟಗೆ ನಿಲ್ಲಬೇಕಾಗಿದ್ದರೆ ?

ಮುರಳಿ:– ಅದಲ್ಲ, ರಮಾ. ಭೀಮನ ಸಾಹಸವನ್ನು ಕೇಳಿ ರೋಮಾಂಚನ ವಾಗುವದಿಲ್ಲವೇ ಎಂದೆ.

ರಮೆ:– ಇಲ್ಲ ಎಂದೆ.

ಮುರಳಿ:– ಮತ್ತೇಕೆ ನೀನು ಶಹಭಾಸ್ ಎಂದೆ ?

ರಮೆ:– ಹಾಗಲ್ಲ. ಕುಣಿದುದೇ ನಾಟ್ಯ, ಹಾಡಿದುದೇ ಸಂಗೀತ, ಮಾಡಿ ದುದೇ ಉಪನ್ಯಾಸ ಎಂಬಂತೆ, ಹೇಳಿದುದೇ ಕತೆ ಎಂದಾದರೆ ಶಹಭಾಸ್ ಎನ್ನದೆ ಬೇರೇನು ಹೇಳಲಿ ?

ಮುರಳಿ:– ಹೇಳಿದುದೇ ಕತೆ ಎಂದರೆ ? ಮತ್ತೆ ಹೇಳದಿರುವದು ಕತೆ ಯಾಗುತ್ತದೇನು ?

ರಮೆ:– ಮನಸ್ಸಿಗೆ ಬಂದಂತೆ ಹೇಳಿದುದೆಲ್ಲ ಹಾಗಾದರೆ ಕತೆಯಾಗುತ್ತ ದೇನು ?

ಮುರಳಿ:– ಮನಸ್ಸಿಗೆ ಬಂದಂತೇನು ? ಮಹಾಭಾರತ ಒಂದು ಚರಿತ್ರೆ. ಇದ್ದುದನ್ನು ಇದ್ದಂತೆ ಹೇಳಿರುವ ಕತೆ.

ರಮೆ:– ಓಹೊ ! ಹಾಗಾದರೆ ಸರಿ. ಮುಂದುವರಿಸಿ.

ಮುರಳಿ:– ಆಗಲಿ. ಕೀಚಕನ ಇಂತಹ ಸಾವಿನ ವರ್ತಮಾನವು ಕ್ರಮ ಕ್ರಮಶಃ ಎಲ್ಲೆಡೆಗೂ ಹರಡಿತು........

ರಮೆ:– ........ಇದ್ದುದನ್ನು ಇದ್ದಂತೆ ಹೇಳಿರುವದಂತೆ !

ಮುರಳಿ:– ಓಹೊ ! ವ್ಯಾಸರು ಏನೋ ಸುಳ್ಳು ಹೇಳಿಬಿಟ್ಟಿದ್ದಾರೆಂಬ ನೂರ ಒಂದನೆಯ ಖೇದವೊ !

ರಮೆ:– ಕೇವಲ ಸುಳ್ಳು ಹೇಳಿದ್ದಾರೆ ಅಂತ ಅಲ್ಲ. ಜಾಣತನದ ಸುಳ್ಳಾದರೂ ಹೇಳಲಿಲ್ಲವಲ್ಲ ಅಂತ.

ಮುರಳಿ:– ಹಾಗೆ. ದ್ರಾವಿಡ ಪ್ರಾಣಾಯಾಮ ಬೇಡ. ಆಪಾದನೆಗಳ ನಿನ್ನ ಕಂತೆ ಬಿಚ್ಚು, ನೋಡೋಣ.

ರಮೆ:– ಕಂತೆ ಏನು ? ನಿಮಗೆ ದೇವರು ಅಷ್ಟು ಬುದ್ಧಿ ಕೊಟ್ಟಿಲ್ಲವೆ – ಯಾವದನ್ನು ನಂಬಬಹುದು, ಯಾವದನ್ನು ನಂಬಬಾರದು ಅಂತ ತಿಳಿಯಲು ?

ಮುರಳಿ:– ಎಲ್ಲೋ ಮರೆತುಬಿಟ್ಟಿದ್ದಾನೆ ಅಂತ ಕಾಣುತ್ತದೆ. ಹೋಗಲಿ, ಅದೇನು ಹೇಳು ?

ರಮೆ:– ಭೀಮ ಕೀಚಕನನ್ನು ಕೊಂದ. ಇರಬಹುದು. ಆದರೆ ಅಲ್ಲಿಗೆ ಕೀಚಕನ ತಮ್ಮಂದಿರು ಮಾತ್ರ ಬಂದರಂತೆ ! ಬೇರೆ ಯಾರಿಗೂ ವಿಷಯ ಗೊತ್ತಾಗಲೇ ಇಲ್ಲ ! ಇನ್ನೂ ಸಾಲದುದಕ್ಕೆ ಅವರು ದ್ರೌಪದಿಯನ್ನೂ ಹೆಣದೊಂದಿಗೆ ಕಟ್ಟಿಕೊಂಡು ಹೋಗುತ್ತಾರೆ. ಪುಣ್ಯಕ್ಕೆ ಅವಳು ಕಿರಿಚಿಕೊಳ್ಳುತ್ತಾಳೆ. ಆದರೂ ಇತರ ಯಾರಿಗೂ ಗೊತ್ತಾಗುವದಿಲ್ಲ ! ಇಡಿಯ ವಿರಾಟ ನಗರದಲ್ಲಿ ಭೀಮನೊಬ್ಬನಿಗೆ ಮಾತ್ರ ಆ ಕೂಗು ಕೇಳಿಸುತ್ತದೆ ! ಅವನು ಹೋಗಿ ಅವರೆಲ್ಲರನ್ನೂ ಹೊಡೆದು ಕೊಲ್ಲುತ್ತಾನೆ. ಅದು ಕೂಡ ಒಬ್ಬರಿಗೂ ಗೊತ್ತಾಗುವದಿಲ್ಲ. ಭೀಮ, ದ್ರೌಪದಿಯರು ನಿರಾತಂಕವಾಗಿ ಬಂದು ತಮ್ಮ ತಮ್ಮ ನಿವಾಸಗಳನ್ನು ಸೇರುತ್ತಾರೆ. ಅಂತೂ ನೀವು ಇದನ್ನೆಲ್ಲ ನಂಬುತ್ತೀರಿ ?

ಮುರಳಿ:– ನಂಬಿದ್ದೇನೆ.

ರಮೆ:– ನಂಬಿದ್ದೀರಿ ?

ಮುರಳಿ:– ನಂಬಿಬಿಟ್ಟಿದ್ದೇನೆ. ಪ್ರಾರಬ್ಧಕ್ಕೆ ಏನು ಮಾಡುವದು ಹೇಳು !

ರಮೆ:– ಇನ್ನು ಅದೇ ಸರಿ ಎಂದು ವಾದಿಸುತ್ತೀರಿ !

ಮುರಳಿ:– ಅದೇ ಸರಿ ಎಂದು ವಾದಿಸುವ ಚಟ ನನಗಿಲ್ಲ. ಆದರೆ ಅದು ಶುದ್ಧ ಸುಳ್ಳು ಎಂದು ಯಾರಾದರೂ ಕಡ್ಡಿ ತುಂಡಾದಂತೆ ಹೇಳಿದಾಗ ಸೆಟೆದು ಕೊಳ್ಳುತ್ತೇನೆ. ಅದು ಶುದ್ಧ ಸರಿ ಎಂದು ವಾದಿಸಿದ ಹೊರತು ಅವರ ವಾದವನ್ನು ಎದುರಿಸಲು ಸಾಧ್ಯವಾಗುವದಿಲ್ಲ.

ರಮೆ:– ಹಾಗಾದರೆ ಕೇವಲ ವಾದಕ್ಕಾಗಿ ಮಾತ್ರ ನೀವು ಚರ್ಚೆ ಮಾಡುವದು !

ಮುರಳಿ:– ಹೌದು. ನಂಬಿಕೆ ಇರುವಲ್ಲಿ ವಾದ ಇರುವದಿಲ್ಲ. ವಾದ ಮುಂದಾದಾಗ ಅದಕ್ಕೆ ಪ್ರತಿವಾದವೇ ದಾರಿ.

ರಮೆ:– ನೀವು ಎಷ್ಟು ವಾದ ಮಾಡಿದರೂ ಸುಳ್ಳನ್ನು ಸತ್ಯವನ್ನಾಗಿ ಮಾಡಲು ಮಾತ್ರ ಸಾಧ್ಯವಿಲ್ಲ, ತಿಳಿಯಿರಿ.

ಮುರಳಿ:– ಅಷ್ಟೇ ನಿಜ, ಎಷ್ಟು ವಾದ ಮಾಡಿದರೂ ಸತ್ಯವನ್ನು ಸುಳ್ಳು ಮಾಡಲು ಸಾಧ್ಯವಿಲ್ಲ ಎಂಬದು. ತಿಳಿ.

ರಮೆ:– ಹಾಗಾದರೆ ವಿರಾಟನಂತಹ ಒಬ್ಬ ರಾಜನ ಭಾವಮೈದುನ ಹಾಗೂ ಲೋಕವಿಖ್ಯಾತನಾದ ಮಲ್ಲಯುದ್ಧ ಪ್ರವೀಣ ಅಪಮೃತ್ಯುವಿಗೆ ಈಡಾಗಿ ಸತ್ತಾಗ ಊರಿಗೆ ಊರೇ ಅಲ್ಲಿ ಸೇರಲಿಲ್ಲ, ಕೇವಲ ಅವನ ತಮ್ಮಂದಿರು ಸೇರಿ ಹೆಣವನ್ನು ಸುಟ್ಟರು ಎಂಬದಕ್ಕೆ ಯಾವ ಕಾರಣ ಕೊಡುತ್ತೀರಿ ?

ಮುರಳಿ:– ಕೀಚಕನ ಆಕಸ್ಮಿಕ ಮರಣದಿಂದ ನಗರದಲ್ಲಿ ಒಂದು ಬಗೆಯ ಕೌತುಕ, ಭಯಮಿಶ್ರಿತ ವಾತಾವರಣ ಉಂಟಾಗಿತ್ತು ಎಂಬದನ್ನು ನೀನು ಊಹಿಸಿ ಕೊಳ್ಳಬೇಕು. ಅಸಾಮಾನ್ಯ ಶೂರನಾದ ಅವನು ಈ ರೀತಿ ಏಕಾಂತ ಸ್ಥಳವೊಂದ ರಲ್ಲಿ ಬಹಳ ವಿಕೃತ ರೀತಿಯಲ್ಲಿ ಸತ್ತುದು ಸಾವಿರ ಕಲ್ಪನೆಗಳಿಗೆ ಎಡೆ ಕೊಟ್ಟದ್ದಿರ ಬಹುದು. ಅಲ್ಲದೆ ಅವನು ಹಿಂದಿನ ದಿನ ದ್ರೌಪದಿಯನ್ನು ಬಹಿರಂಗವಾಗಿ ಬಲಾತ್ಕರಿಸಿದ್ದ ವಿಷಯ ಊರಿಗೆ ಚೆನ್ನಾಗಿ ತಿಳಿದಿತ್ತು. ಹಾಗಾಗಿ ಅವನು ದ್ರೌಪದಿಯ ಪತಿಯಾದ ಯಾವನೋ ಗಂಧರ್ವನಿಂದ ಹತನಾಗಿರಬೇಕೆಂದು ಜನ ನಂಬಲು ಸಾಧ್ಯವಿತ್ತು. ಅಂದರೆ ಇವೆಲ್ಲ ಅಸಾಮಾನ್ಯ ಘಟನೆಗಳು. ಇಂತಹದ ರಲ್ಲಿ ಊರಿನ ಜನ ನೇರವಾಗಿ ಭಾಗವಹಿಸುವದಕ್ಕಿಂತ ರಹಸ್ಯವಾಗಿ ನಿಂತು ಗುಸುಗುಸು ಆಡಿಕೊಳ್ಳುವದೇ ಹೆಚ್ಚು ಸ್ವಾಭಾವಿಕ.

ವಿರಾಟ ಮತ್ತು ಸುಧೇಷ್ಣೆಯರಿಗಾದರೂ ಕಡಿಮೆ ಗಾಬರಿಯಾಗಿರಲಿಕ್ಕಿಲ್ಲ. ಅವರೂ ಇದನ್ನು ಒಂದು ಅತಿಮಾನುಷವಾದ ಪ್ರಭಾವ ಎಂದು ನಂಬಿ, ಆದರೂ ಸಾಮಾನ್ಯ ಮಾನವರಂತೆ ಅಂಜಿಕೆಯನ್ನು ತೋರಿಸದೆ ತಮ್ಮಷ್ಟಕ್ಕೇ ಇದ್ದುಬಿಟ್ಟಿರಲು ಸಾಕು. ಅವರು ಕೀಚಕನ ಶವವನ್ನು ನೋಡಿದರು ಎಂದು ಹೇಳಿರದ ಮಾತ್ರಕ್ಕೆ ಅದನ್ನು ನೋಡಲೇ ಇಲ್ಲ ಎಂದು ಹೇಳಿದಂತಾಗಲಿಲ್ಲ. ಇನ್ನು ದ್ರೌಪದಿಯಿಂದ ಕೀಚಕನಿಗೆ ಹೀಗಾದುದರಿಂದ ಅವಳನ್ನೂ ಸುಟ್ಟು ಬಿಡಲು ಕೀಚಕನ ತಮ್ಮಂದಿರು ವಿರಾಟನನ್ನು ಕೇಳಿ ಅಪ್ಪಣೆ ಪಡೆದೇ ಹಾಗೆ ಮಾಡಿದ್ದಿರಲೂಬಹುದು.

ಸಾಮಾನ್ಯವಾಗಿ ರಾಜನ ಬಂಧುವೊಬ್ಬನಿಗೆ ಮಾಡಬೇಕಾದ ಶವದಹನದ ರೀತಿಯ ಆಡಂಬರವನ್ನು ಇಲ್ಲಿ ಮಾಡಲಿಲ್ಲ ಎಂಬದು ನಿಜ. ಅದಕ್ಕೆ ಪ್ರಬಲ ಕಾರಣ, ಕೀಚಕನು ಮಹಾ ಶೂರನಾಗಿದ್ದೂ ಕೂಡ ಪರಪತ್ನಿಯನ್ನು ಬಯಸಿ ವಿಕೃತ ರೀತಿಯ ಸಾವಿಗೀಡಾಗಿದ್ದುದನ್ನು ಬಹಿರಂಗಗೊಳಿಸುವದು ರಾಜಮನೆ ತನಕ್ಕೇ ಕಳಂಕ ಎಂದು ಅವರೆಲ್ಲ ಭಾವಿಸಿದ್ದುದು. ಇನ್ನು ರುದ್ರಭೂಮಿಯಲ್ಲಿ ಭೀಮನು ಕೀಚಕನ ತಮ್ಮಂದಿರನ್ನೆಲ್ಲ ಹೊಡೆದು ಕೊಂದುದು ಹೇಗೆ ಗೊತ್ತಾಗಲಿಲ್ಲ ಎಂಬದು.

ಕೀಚಕನ ವಿಚಿತ್ರ ಮರಣದಿಂದ ಮೊದಲೇ ಅಪ್ರತಿಭರಾಗಿದ್ದ ಜನರಿಗೆ ರುದ್ರಭೂಮಿಯ ಘಟನೆಯನ್ನು ಕೇವಲ ಇನ್ನೊಬ್ಬರ ಬಾಯಿಂದ ಕೇಳಿ ಹಾಗೆ ಮಾಡಿದವನು ಯಾರು ಎಂಬ ಸಂಶೋಧನೆಗೆ ತೊಡಗಲು ಮನಸ್ಸಾಗುವದ ಕ್ಕಿಂತಲೂ, ಆ ಘಟನೆಯ ಕುರಿತು ತಮ್ಮ ತಮ್ಮ ಕಲ್ಪನೆಗಳನ್ನು ಚಿತ್ರವಿಚಿತ್ರ ವಾಗಿ ಹರಿಯಬಿಡುವದೇ ಹೆಚ್ಚು ಸಹಜವಾದುದಾಗಿತ್ತು. ರಾಜನ ಅಡುಗೆ ಯವನೇ ಕೊಂದ ಎಂಬ ಮಾತೂ ಬಂದಿರಬಹುದಾದರೂ ಅದು ಸಾಮಾನ್ಯವಾಗಿ ವಿಶ್ವಾಸಕ್ಕೆ ಯೋಗ್ಯವಲ್ಲದುದರಿಂದ, ಗಂಧರ್ವನು ಅಡುಗೆಯವನಂತೆಯೇ ವೇಷ ಧರಿಸಿ ಕೊಂದ ಎಂಬ ನಂಬಿಕೆ ಹೆಚ್ಚು ವಿಶ್ವಾಸ ಯೋಗ್ಯವಾಗಿದ್ದಿರಲು ಸಾಕು. ಇಷ್ಟೆಲ್ಲದರ ಜೊತೆಯಲ್ಲಿಯೇ ಕೀಚಕನ ವಧೆಗೆ ಯಾರು ಕಾರಣರೆಂಬ ಸಂಶೋಧನೆ ನಡೆಯುವದು ಸಹಜವಾದರೂ, ವಧೆಯ ಆ ಕೌತುಕಮಯ ವಾತಾವರಣವು ಜನರಲ್ಲಿ ಮಸಕಾಗಲು ಪ್ರಾರಂಭಿಸಿದ ಮೇಲೆ ಮಾತ್ರವೇ ಇದು ಸಾಧ್ಯ. ಕೀಚಕನು ವಿಚಿತ್ರ ರೀತಿಯಲ್ಲಿ ಸತ್ತ ಎಂಬ ಸತ್ಯದ ಜೊತೆಗೆ ಅವನನ್ನು ಕೊಂದ ವನ ಕುರಿತಾಗಿ ನೂರು ವಿಧದ ಕಲ್ಪನೆಗಳು ಹರಡಿದುದರಲ್ಲಿ ವಿರಾಟನ ಅಡುಗೆ ಯವನೇ ಕೊಂದ ಎಂಬದೊಂದೂ ಸೇರಿದ್ದಿರಬಹುದು ಹೊರತು ಅದು ಪ್ರಧಾನ ವಾದ ಮಾತಾಗಿದ್ದಿರಲು ಸಾಧ್ಯವಿಲ್ಲ. ಹೀಗಾದುದರಿಂದಲೇ........

ರಮೆ:— ಸಂತೋಷ. ಕತೆ ಮುಂದುವರಿಸಿ.

ಮುರಳಿ:— ಪಾಪ. ಕೇಳು. ಈ ವರ್ತಮಾನವು ಕೌರವರ ಕಿವಿಗೂ ತಲ ಪಿತು. ಕೀಚಕನನ್ನು ಕೊಂದ ಗಂಧರ್ವನು ಭೀಮನೇ ಇರಬೇಕೆಂದೂ, ಈ ಕೊಲೆಗೆ ಕಾರಣಳಾದ ಗಂಧರ್ವಪತ್ನಿ ದ್ರೌಪದಿಯೇ ಇರಬೇಕೆಂದೂ, ಆದುದರಿಂದ ಪಾಂಡವರು ವಿರಾಟನಗರಿಯಲ್ಲಿಯೇ ಗುಪ್ತವೇಷದಲ್ಲಿ ಇರಬಹುದೆಂದೂ ದುರ್ಯೋ ಧನನು ತರ್ಕಿಸಿದನು. ಅವನು ಸದಾಕಾಲ ಪಾಂಡವರ ಅಜ್ಞಾತವಾಸವನ್ನೇ ಕುರಿತು ಚಿಂತಿಸುತ್ತಿದ್ದಿರಬಹುದಾದುದು ಸಹಜವಾದುದರಿಂದ, ಇಂತಹ ಯಾವ ಒಂದು ಘಟನೆ ಕೇಳಿ ಬಂದರೂ ಅದರಲ್ಲಿ ಪಾಂಡವರನ್ನು ಹುಡುಕುವ ಕುತೂಹಲ ಅವನಿಗೆ ಸಹಜವಾಗಿ ಇರಬೇಕಾಗಿತ್ತು. ಈ ಘಟನೆಯಲ್ಲಿಯಂತೂ ಅವನು

ಪಾಂಡವರನ್ನು ಹುಡುಕುವದು ಹೆಚ್ಚು ಸ್ವಾಭಾವಿಕವಾಗಿತ್ತು. ಭೀಮ, ಕೀಚಕ, ಶಲ್ಯ, ಬಲರಾಮರು ಸಮಬಲರು ಎಂದಾದಮೇಲೆ, ಹಾಗೂ ಶಲ್ಯ, ಬಲರಾಮರು ಕೀಚಕನ ತಂಟೆಗೆ ಹೋಗಿಲ್ಲ ಎಂಬದನ್ನು ಸುಲಭವಾಗಿ ಕಂಡುಹಿಡಿಯಲು ಸಾಧ್ಯವಾಗಿದ್ದಮೇಲೆ, ಕೀಚಕನ ಹನನ ಭೀಮನಿಂದಲೇ ನಡೆದಿರಬೇಕೆಂದು ಅವನು ತರ್ಕಿಸುವದು ಸಹಜವಾಗಿತ್ತು. ದುರ್ಯೋಧನನು ತನ್ನ ತರ್ಕಕ್ಕೆ ಭೀಷ್ಮಾದಿಗಳ ಒಪ್ಪಿಗೆಯನ್ನು ಪಡೆದನು. ಇದರಿಂದಾಗಿ ಅವನಿಗೆ ಒಂದು ರಾಜ್ಯ ಸಿಕ್ಕಿದಷ್ಟೇ ಸಂತೋಷವಾಯಿತು ಎಂದು ಊಹಿಸುವದು ಕಷ್ಟವಲ್ಲ. ತಡ ಮಾಡದೆ ಇನ್ನು ಪಾಂಡವರನ್ನು ಪತ್ತೆಹಚ್ಚಬೇಕೆಂಬದರತ್ತ ಅವನ ಗಮನ ಹರಿಯಿತು. ಪತ್ತೆಹಚ್ಚಿಬಿಟ್ಟರೆ ಇನ್ನು ಹದಿಮೂರು ವರ್ಷಗಳ ಕಾಲ ತಾನು ನಿರಾತಂಕವಾಗಿದ್ದುಬಿಡಬಹುದು. ಹಾಗಾಗಿ ತನ್ನ ಸಮಸ್ತ ಸೈನ್ಯದೊಂದಿಗೆ ಹೋಗಿ ವಿರಾಟನ ಗೋವುಗಳನ್ನು ಸೆರೆಹಿಡಿಯುವದೆಂದು ಅವನು ತೀರ್ಮಾನಿಸಿದನು.

ರಮೆ:– ಗೋವುಗಳನ್ನೇಕೆ ? ಅದೂ ವಿರಾಟನದು ?

ಮುರಳಿ:– ಆ ಗೋವುಗಳನ್ನು ಬಿಡಿಸಿಕೊಳ್ಳಲು ವಿರಾಟನಿಗೆ ಶಕ್ತಿ ಸಾಲದು. ಆಗ ಅವನ ಸಹಾಯಕ್ಕೆ ಭೀಮಾರ್ಜುನರು ಬಂದೇ ಬರುತ್ತಾರೆ. ಇದು ತರ್ಕ. ಸರಿ. ದುರ್ಯೋಧನನ ಬೃಹತ್ ಸೈನ್ಯವು ವಿಜಯ ಯಾತ್ರೆಗೆ ಹೊರಟಿತು. ಅದರಲ್ಲಿ ಹದಿನಾರು ಸಾವಿರ ಮಹಾರಥರನ್ನೊಳಗೊಂಡ ಒಂದು ಸೈನ್ಯ ಭಾಗವು ಸುಶರ್ಮನೆಂಬ ವೀರನ ಮುಂದಾಳ್ತನದಲ್ಲಿ ವಿರಾಟ ರಾಜ್ಯದ ದಕ್ಷಿಣ ಭಾಗದಿಂದ ಮುನ್ನುಗ್ಗಿತು. ಉಳಿದ ಸಮಸ್ತ ಬಲವನ್ನೂ ಒಳಗೊಂಡು ದುರ್ಯೋಧನನು ಉತ್ತರ ಭಾಗದಿಂದ ದಾಳಿಯಿಟ್ಟನು. ಸುಶರ್ಮನು ದಕ್ಷಿಣದಲ್ಲಿ ವಿರಾಟನ ಗೋವುಗಳನ್ನೆಲ್ಲ ಸೆರೆಹಿಡಿದು ಗೋಪಾಲಕರನ್ನೆಲ್ಲ ಹಿಂಸಿಸಿ ಓಡಿಸಿದನು. ಅವರು ವಿರಾಟನಲ್ಲಿಗೆ ಬಂದು ದೂರಿಟ್ಟರು. ಕೂಡಲೇ ವಿರಾಟನ ಚತುರಂಗಬಲ ಸಿದ್ಧಗೊಂಡು ಹೊರಟಿತು. ವಿಷಯವನ್ನು ತಿಳಿದ ಕಂಕಭಟ್ಟನು ದುರ್ಯೋಧನನ ಕುಹಕವನ್ನು ಅರ್ಥ ಮಾಡಿಕೊಂಡು ಅರ್ಜುನನನ್ನು ಬಿಟ್ಟು ಉಳಿದ ತಮ್ಮಂದಿರೊಂದಿಗೆ ತಾನೂ ಹೊರಟನು. ಮತ್ಸ್ಯರಾಜನ ಸೈನ್ಯಕ್ಕೂ........

ರಮೆ:– ಯಾವ ರಾಜ ?

ಮುರಳಿ:– ಮತ್ಸ್ಯ ದೇಶ ಎಂದರೆ ವಿರಾಟನ ರಾಜ್ಯವೇ. ಕೇಳು. ಆ ಸೈನ್ಯಕ್ಕೂ ಸುಶರ್ಮನ ಪಡೆಗೂ ಘೋರವಾದ ಯುದ್ಧ ನಡೆಯಿತು. ದುರ್ಯೋಧನನ ಸೈನ್ಯವು ಅಪರಿಮಿತವಾಗಿದ್ದುದರಿಂದ ವಿರಾಟನು ಸೆರೆ ಸಿಕ್ಕಿಬಿದ್ದನು. ಇದರಿಂದ ಅನುತಾಪಗೊಂಡ ಕಂಕಭಟ್ಟನು ತಮ್ಮ ಆಶ್ರಯದಾತನ ಸೆರೆ ಬಿಡಿಸುವಂತೆ ಭೀಮನಿಗೆ ಆಜ್ಞಾಪಿಸಿದನು. ಭೀಮನು ಅಣ್ಣನ ಆಜ್ಞೆಯಿಂದ ಉತ್ಸಾಹಗೊಂಡು ಒಂದು ದೊಡ್ಡ ಆಲದ ಮರವನ್ನು ನೋಡಲು ಯುಧಿಷ್ಠಿರನು "ತಮ್ಮಾ, ನೀನು

ಇಂತಹ ಅತಿ ಮಾನುಷ ಕೃತ್ಯಗಳನ್ನು ಮಾಡಿದರೆ ದುರ್ಯೋಧನನು ನಮ್ಮನ್ನು ಪತ್ತೆ ಹಚ್ಚಿಬಿಡುತ್ತಾನೆ. ನೀನು ಮಾಡುವ ಆ ಸಿಂಹನಾದವೇ ಸಾಕು, ನಿನ್ನನ್ನು ಗುರುತಿಸಲು. ನೀನು ಸಿಂಹನಾದ ಮಾಡದಿರುವದೇ ಒಳ್ಳೆಯದು" ಎಂದನು.

ರಮೆ:– ನೀವು ಹೇಳಿದ ಒಂದೊಂದೇ ವಿಷಯಗಳಿಗೆ ಆಧಾರ ಸಿಕ್ಕುತ್ತಿದೆ.

ಮುರಳಿ:– ಏನೋ !

ರಮೆ:– ಹಿಂದೆ ನೀವು ವಾದ ಮಾಡಿದ್ದಿರಿ. ಯಾವಾಗ ಗೊತ್ತೆ ? ಭೀಮ ಮಗುವಾಗಿದ್ದಾಗ ಅವನು ಬಿದ್ದು ಒಂದು ಕಲ್ಲು ಒಡೆಯಿತು ಎಂಬದನ್ನು ನಾನು ಒಪ್ಪದಿದ್ದಾಗ. ಆಗಿನ ಕಾಲದ ವೀರರೆನಿಸಿದವರೇ ನಮಗೆ ಅಪೂರ್ವವಾಗಿ ಕಾಣಿಸುತ್ತಾರೆ. ಭೀಮನು ಅವರ ಪೈಕಿಯೂ ಅಪೂರ್ವದವನಾಗಿದ್ದ ಎಂದು. ಇಲ್ಲಿ ಈಗ ಯುಧಿಷ್ಠಿರನೇ ಹೇಳುತ್ತಿದ್ದಾನೆ, ಭೀಮನಿಗೆ, ಮರ ಕಿತ್ತು ಯುದ್ಧ ಮಾಡಬೇಡ; ಅತಿ ಮಾನುಷ ಕೃತ್ಯ ಮಾಡಬೇಡ; ನಿನ್ನ ಸಿಂಹನಾದವೇ ನಿನ್ನನ್ನು ಪತ್ತೆ ಮಾಡಿಕೊಡುತ್ತದೆ ಎಂದು. ಭೀಮ ಅಂದಿನ ಆ ಅಪೂರ್ವ ದಿನಗಳಲ್ಲಿಯೇ ತಾನು ಇನ್ನೂ ಅಪೂರ್ವ ದೇಹದಾರ್ಢ್ಯ, ವೀರ್ಯ, ಪರಾಕ್ರಮಗಳನ್ನು ಪಡೆದಿದ್ದ ಎಂಬದು ಅವನ ಅಣ್ಣನ ಈ ಮಾತಿನಿಂದಲೇ ಸ್ಪಷ್ಟವಾಗುತ್ತದಲ್ಲ........ಸರಿಯಪ್ಪ. ನೀವು ಎಂದಾದರೂ ತಪ್ಪು ಹೇಳುತ್ತೀರಾ ! ಹೋಗಲಿ, ಮುಂದುವರೆಸಿ.

ಮುರಳಿ:– ಸದ್ಯ, ಬದುಕಿದೆ. ಕೇಳು. ಅಣ್ಣನ ಮಾತಿಗೆ ಭೀಮನು ಉತ್ತರ ಕೊಟ್ಟು ದುರ್ಯೋಧನನನ್ನೇ ತಾನು ತೀರಿಸಿಬಿಟ್ಟರೆ ತಮ್ಮನ್ನು ಪತ್ತೆಹಚ್ಚುವವರೇ ಇಲ್ಲದಂತಾಗುವದಿಲ್ಲವೇ ಎಂದು ಪ್ರಶ್ನಿಸಲು ಯುಧಿಷ್ಠಿರನು ಅವನನ್ನು ಸಮಾಧಾನ ಪಡಿಸಿ ಸಾಮಾನ್ಯ ಯೋಧನಂತೆಯೇ ಅವನು ಯುದ್ಧ ಮಾಡಬೇಕೆಂದು ಒಪ್ಪಿಸಿ ಕಳುಹಿಸಿದನು. ಅನಿವಾರ್ಯವಾದ ಅವಶ್ಯಕತೆಗಾಗಿ ಈ ಹಿಂದೆ "ಅಣ್ಣನಾಜ್ಞೆಯ ಗಿರಿ"ಯನ್ನು ದಾಟಿದ್ದ ಭೀಮನು ತನ್ನ ಸ್ವಭಾವಸಹಜವಾದ ಸೌಜನ್ಯಕ್ಕೆ ಕಟ್ಟುಬಿದ್ದು ಅಣ್ಣನ ಮಾತುಗಳಿಗೆ ಒಪ್ಪಿ ಮುನ್ನುಗ್ಗಿ ಸೈನ್ಯವನ್ನು ಧ್ವಂಸ ಮಾಡುತ್ತಾ ಲೀಲಾಜಾಲವಾಗಿ ತಮ್ಮ ದೊರೆಯನ್ನು ಬಿಡಿಸಿ ತಂದನು. ಸುಶರ್ಮನ ಪಡೆಯು ಭೀಮನ ಪರಾಕ್ರಮವನ್ನು ಕಂಡು ಅಪ್ರತಿಭವಾಗಿ ನಿಶ್ಚೇಷ್ಟಿತವಾಗಿ ಬಿಟ್ಟಿತು. ವಿರಾಟನು ಅಪಾರವಾದ ಕೃತಜ್ಞತೆಯನ್ನು ವ್ಯಕ್ತಪಡಿಸಿದನು.

ರಮೆ:– ಭೀಮನಿಗೆ ಏನಾದರೂ ಯಕ್ಷಿಣಿ ವಿದ್ಯೆ ಬರುತ್ತಿತ್ತು ಎಂದು ಎಲ್ಲಿಯೂ ಬರೆದಿಲ್ಲವೊ ?

ಮುರಳಿ:– ಯಾಕೆ ?

ರಮೆ:– ಹದಿನಾರು ಸಾವಿರ ಮಹಾರಥರುಗಳನ್ನೊಳಗೊಂಡ ಪ್ರಚಂಡ ಪಡೆಯನ್ನು ಅವನು ಲೀಲಾಜಾಲವಾಗಿ ಸವರಬೇಕಾದರೆ........

ಮುರಳಿ:– ಯುದ್ಧವು ವ್ಯಾಪಾರದ ತಕ್ಕಡಿಯಂತಲ್ಲ. ಈ ಬಟ್ಟಲಿಗೆ ಒಂದಿಷ್ಟು ಹಾಕಿದರೆ ಆ ಬಟ್ಟಲಿಗೂ ಅಷ್ಟೇ ಹಾಕಿ ಸರಿದೂಗಬಹುದೆಂಬದು ಯುದ್ಧಕ್ಕೆ ಅನ್ವಯಿಸುವದಿಲ್ಲ. ಹದಿನಾರು ಸಾವಿರ ಇದ್ದಕಡೆ ಗೆಲವು, ಹದಿನೈದು ಸಾವಿರದ ಒಂಭೈನೂರ ತೊಂಬತ್ತ ಒಂಭತ್ತು ಇದ್ದ ಕಡೆ – ಅದರಲ್ಲಿ ಒಬ್ಬ ಯೋಧ ಕಡಿಮೆ ಇರುವದರಿಂದ – ಸೋಲು ಎಂಬದು ಯುದ್ಧದ ತತ್ವ ಅಲ್ಲ. ಶ್ರೀರಾಮನೇ ಆಗಲಿ, ಘಜನಿ ಮಹಮ್ಮದನೇ ಆಗಲಿ, ನೆಪೋಲಿಯನ್ನನೇ ಆಗಲಿ, ಹಿಟ್ಲರನೇ ಆಗಲಿ ತಮ್ಮ ತಮ್ಮ ಸಂಖ್ಯಾಬಲದ ಹೆಚ್ಚಳದಿಂದ ವಿಜೇತರಾದವರಲ್ಲ. "ಯಾವನೋ ಮತ್ಸ್ಯರಾಜನ ಅಡುಗೆಯವನಂತೆ" ಎಂಬ ತುಚ್ಛ ಭಾವದಿಂದ ಎದುರಿಸಿದ್ದ ಸೈನ್ಯ ವನ್ನು ಒಬ್ಬಾತ ಯಮನಂತೆ ಸವರಲು ಪ್ರಾರಂಭಿಸಿದಾಗ ಆ ಸೈನ್ಯವು ತನ್ನ ಭ್ರಾಂತಿ ಯಿಂದ ಚೇತರಿಸಿಕೊಳ್ಳುವದಕ್ಕೆ ಮುಂಚೆಯೇ ಶತ್ರುವಿಗೆ ಸೋತಿರುತ್ತದೆ. ಯಾವದೇ ಹೋರಾಟದಲ್ಲಿ ಜಯವು ದೇಹಬಲ, ಸಂಖ್ಯಾಬಲಗಳನ್ನು ಆಧರಿಸಿರದೆ ಮನೋಬಲವನ್ನು ಬಹಳ ಮಟ್ಟಿಗೆ ಅವಲಂಬಿಸಿರುತ್ತದೆ. ಭೀಮನ ಇತರ ವಿಷಯಗಳ ಕುರಿತಾಗಿ ನೀನು ಅಲ್ಪಸ್ವಲ್ಪವಾದರೂ ನಿನ್ನ ಕಲ್ಪನೆಯನ್ನು ಹರಿಯಬಿಡಲು ಸಾಧ್ಯವಾಗುವದಾದರೂ ರಣರಂಗದಲ್ಲಿ ಅವನ ಯಶಸ್ಸಿನ ಕುರಿತು ನೀನು ನಿಜ ಚಿತ್ರವನ್ನು ಸ್ವಲ್ಪವೂ ತರ್ಕಿಸಲಾರೆ. ಅವನ ಉತ್ಸಾಹ, ಮನೋಬಲ, ದೇಹದಾರ್ಢ್ಯ, ನಿರ್ಭಯತೆ, ಏಕಾಗ್ರತೆಗಳ ಪರಿಣಾಮ ನಮ್ಮ ಕಲ್ಪನೆಗೆ ಮೀರಿದ ವಿಷಯ. ಇದಕ್ಕೆ ಈ ಹಿಂದೆ ಕೆಲವು ನಿದರ್ಶನಗಳು ಸಿಕ್ಕಿವೆಯಾದರೂ ಮುಂದಿನ ಕುರುಕ್ಷೇತ್ರ ಯುದ್ಧದಲ್ಲಿ ಇದನ್ನು ಚೆನ್ನಾಗಿ ಕಾಣ ಬಹುದು. ಅಲ್ಲಿ ಅವನ ಪ್ರತಿಯೊಂದು ಕಾರ್ಯವೂ ಅತಿ ಮಾನುಷವಾಗಿ ಕಾಣಿಸು ತ್ತದೆ. ನೀನು ಅದನ್ನೆಲ್ಲ ಶಂಕಿಸುತ್ತ ಹೋಗುವೆಯಾದರೆ ಕೇವಲ ರಸಾಭಾಸವಾಗು ತ್ತದೆ. ಕೇಳು.

ಉತ್ತರ ದಿಕ್ಕಿನಲ್ಲಿ ಭೀಷ್ಮ, ದ್ರೋಣ, ಕರ್ಣ, ದುಶ್ಯಾಸನ, ದುರ್ಯೋಧನ, ಜಯದ್ರಥ ಮೊದಲಾದ ಹೆಸರಾಂತ ವೀರರು ವಿರಾಟನ ಗೋವುಗಳ ಮಂದೆಯನ್ನು ಸೆರೆ ಹಿಡಿದರು. ವಿರಾಟನ ಮಗನಾದ ಉತ್ತರನು ಯುದ್ಧಸಿದ್ಧತೆ ಮಾಡಿಕೊಳ್ಳುತ್ತಾ ತನ್ನ ಸುತ್ತಲೂ ನೆರೆದಿದ್ದ ತರುಣಸ್ತ್ರೀಯರು ಸ್ವಭಾವ ಸಹಜವಾಗಿ ಬೀರಿದ ಮೋಹ ಪ್ರಭಾವದಿಂದ ಮರುಳಾಗಿ ದುರ್ಯೋಧನನ್ನು ಕುರಿತು ಬಹಳ ತುಚ್ಛವಾಗಿ ಮಾತನಾಡಿ ತನ್ನ ಪರಾಕ್ರಮದ ಕುರಿತು ಆಡಂಬರದ ಮಾತುಗಳನ್ನಾಡಿಕೊಂಡನು. ತನಗೆ ಸರಿಯಾದ ಸಾರಥಿ ಇಲ್ಲವೆಂಬ ಅವನ ಕೊರತೆಯನ್ನು, ಬೃಹನ್ನಳೆಯು ಅವನ ಸಾರಥಿಯಾಗುವದಾಗಿ ಒಪ್ಪಿಸಿ ತುಂಬಲಾಯಿತು. ಇಬ್ಬರೂ ಹೊರಟರು. ದುರ್ಯೋಧನನ ಸಾಗರೋಪಮವಾದ ಸೈನ್ಯವು ಕಣ್ಣಿಗೆ ಬೀಳುತ್ತಲೇ ಉತ್ತರನು ಕೊಚ್ಚಿಕೊಂಡ ಅವನ ಪೌರುಷದ ಟೊಳ್ಳು ಬಯಲಾಯಿತು. ಅವನು ನಿಸ್ತೇಜ

ನಾದನು. ತನ್ನನ್ನು ಮನೆಗೆ ಹೋಗಲು ಬಿಟ್ಟುಕೊಟ್ಟು ಪುಣ್ಯವನ್ನು ಗಳಿಸಿ ಕೊಳ್ಳಬೇಕೆಂದು ಅರ್ಜುನನನ್ನು ಪ್ರಾರ್ಥಿಸಿಕೊಂಡನು. ಅರ್ಜುನನು ಇದನ್ನೆಲ್ಲ ಲಕ್ಷಿಸದೆ ರಥವನ್ನು ಮುಂದಕ್ಕೆ ಓಡಿಸಲು ಉತ್ತರನು ಪ್ರಾಣಭಯದಿಂದ ಪ್ರಾಣಾಪಾಯವನ್ನೂ ಗಮನಿಸದೆ....

ರಮೆ:– ಚೆನ್ನಾಗಿದೆ.

ಮುರಳಿ:– ಏನು ?

ರಮೆ:– ಪ್ರಾಣಭಯದಿಂದ ಪ್ರಾಣಾಪಾಯವನ್ನೂ ಲಕ್ಷಿಸದೆ ಎನ್ನುವ ವಿವರಣೆ.

ಮುರಳಿ:– ಸಂತೋಷ. ಕೇಳು. ಅವನು ಭೀತಿಯಿಂದ, ಓಡುತ್ತಿದ್ದ ರಥದಿಂದ ಕೆಳಗೆ ಹಾರಿ ಮನೆಯತ್ತ ಓಡಲು ಪ್ರಾರಂಭಿಸಿದನು. ಅರ್ಜುನನು ಅವನನ್ನು ಬೆನ್ನಟ್ಟಿ ಹಿಡಿದು ತಂದು ಅವನನ್ನು ಸಾರಥಿಯನ್ನಾಗಿ ಮಾಡಿ ತಾನೇ ರಥಿಕನಾಗಿ ನಿಂತನು. ತಾವು ಹಿಂದೆ ಗೌಪ್ಯವಾಗಿಟ್ಟಿದ್ದ ಆಯುಧಗಳಲ್ಲಿ ತನ್ನ ಗಾಂಡೀವ ಧನುಸ್ಸನ್ನು ಪಡೆದುಕೊಂಡು, ತನ್ನ ಶಿಖಂಡಿತ್ವವನ್ನೂ ಕಳೆದುಕೊಂಡು, ಇದರಿಂದೆಲ್ಲ ಸಂಶಯಗ್ರಸ್ತನಾಗಿ ರಕ್ತರಹಿತನಂತಾಗಿದ್ದ ಉತ್ತರನಿಗೆ ತಾವು ಪಾಂಡವರೆಂಬ ಎಲ್ಲ ವಿಷಯಗಳನ್ನೂ ವಿವರಿಸಿ ಅವನಲ್ಲಿ ಧೈರ್ಯ ತುಂಬಿ ಕೌರವ ಸೈನ್ಯವನ್ನು ಏಕಾಂಗಿಯಾಗಿ ಎದುರಿಸಲು ಮುನ್ನಡೆದನು.

ಈ ಕಡೆ ಕೌರವ ಸೈನ್ಯದಲ್ಲಿ ದ್ರೋಣನು, ತಮಗೆದುರಾಗಿ ಬರುತ್ತಿರುವವನು ಅರ್ಜುನನೆಂದೇ ಊಹಿಸಿ ಅವನ ಪರಾಕ್ರಮವನ್ನು ಮನಸಾರೆ ಹೊಗಳಲು ಪ್ರಾರಂಭಿಸಿದನು. ಇದನ್ನು ಸೈರಿಸದ ಕರ್ಣನು "ನೀವು ನಿಮ್ಮ ದಾತಾರನ ಅಧಃಪತನವಾಗಬೇಕೆಂಬದಕ್ಕಾಗಿಯೋ ನಮ್ಮ ಶತ್ರುವನ್ನು ಸದಾಕಾಲ ಹೊಗಳುತ್ತಾ ನಮ್ಮ ಸೈನ್ಯದ ತೇಜೋವಧೆ ಮಾಡುತ್ತಿದ್ದೀರಿ. ತೋರುವಿಕೆಗೆ ದುರ್ಯೋಧನನ ಪಕ್ಷದವರಾಗಿ ಉಳಿದುಕೊಂಡು ಕಾರ್ಯದಲ್ಲಿ ಪಾಂಡವರ ಅಭ್ಯುದಯಕ್ಕೇ ಸಹಾಯಕರಾಗಿ ಕೆಲಸ ಮಾಡುತ್ತಿರುವ ನೀವು ಸ್ವಾಮಿ ದ್ರೋಹಿಗಳು" ಎಂದು ಟೀಕಿಸಿದನು. ಇದನ್ನು ಸೈರಿಸದ ಕೃಪಾಚಾರ್ಯನು ಅರ್ಜುನನ ಪರಾಕ್ರಮ ಗಳನ್ನು ದ್ವಿಗುಣಿತವಾಗಿ ಹೊಗಳಿ ಕರ್ಣನನ್ನು ಮೂದಲಿಸಿದನು. ಕರ್ಣನು ಪುನಃ ಅವರ ಸ್ವಾಮಿದ್ರೋಹತನವನ್ನು ಖಂಡಿಸಲು ಅವರೊಂದಿಗೆ ಅಶ್ವತ್ಥಾಮನೂ ಸೇರಿಕೊಂಡು ಕರ್ಣನನ್ನು ಜರೆದನು. ದುರ್ಯೋಧನನು ಇವರನ್ನೆಲ್ಲ ಸಂತೈಸಿ....

ರಮೆ:– ಪಾಪ. ತನ್ನ ಸೈನ್ಯಸೌಧದ ವೀರ ಹೆಗ್ಗಂಬಗಳು ಹೀಗೆ ಕುಸಿದು ಬೀಳುತ್ತಿರುವಾಗ ಅವನಿಗೆ ಆ ಸೌಧ ಬೀಳುತ್ತಿರುವದರಿಂದ ತನ್ನನ್ನು ರಕ್ಷಿಸಿ

ಕೊಳ್ಳುವದೇ ಕಷ್ಟವಾಗಿದ್ದು ಇನ್ನು ಶತ್ರುವಿನಿಂದ ರಕ್ಷಿಸಿಕೊಳ್ಳಲು ಏನು ಪ್ರಯತ್ನಪಟ್ಟಾನು !

ಮುರಳಿ:– ಸರಿಯಾಗಿ ಹೇಳಿದೆ. ಕೇಳು. ಹೀಗೆ ತನ್ನ ವೀರರನ್ನೆಲ್ಲ ಸಂತೈಸಿ ಅವನು ಭೀಷ್ಮನಲ್ಲಿಗೆ ಹೋಗಿ ಪಾಂಡವರ ಅಜ್ಞಾತವಾಸದ ಅವಧಿಯ ಬಗ್ಗೆ ಇತ್ಯರ್ಥ ಮಾಡಿಕೊಂಡನು.

ರಮೆ:– ಏನೆಂದು ?

ಮುರಳಿ:– ಪಾಂಡವರ ಹನ್ನೆರಡು ವರ್ಷಗಳ ವನವಾಸವೂ ಒಂದು ವರ್ಷದ ಅಜ್ಞಾತವಾಸವೂ ಹಿಂದಿನ ದಿನಕ್ಕೆ ಮುಗಿಯಿತೆಂದು. ಕೇಳು. ತಾನು ಸೆರೆಹಿಡಿದ ಗೋವುಗಳೊಂದಿಗೆ ಅವನು ಹಸ್ತಿನಾಪುರದತ್ತ ಹೊರಟನು. ಅರ್ಜುನನು ಸೈನ್ಯವನ್ನು ತಡೆದು ಯುದ್ಧ ಮಾಡುವಾಗ ಹಸುಗಳು ತಪ್ಪಿಸಿಕೊಂಡು ಓಡಿಹೋದವು. ಅರ್ಜುನನು ಕೌರವ ಸೈನ್ಯವನ್ನು ನುಚ್ಚುನೂರು ಮಾಡುತ್ತಿರಲು ಅಶ್ವತ್ಥಾಮನು ಕರ್ಣನನ್ನು ಕುರಿತು ಈ ಹಿಂದೆ ಜಂಭ ಕೊಚ್ಚಿಕೊಂಡ ಅವನು ಅರ್ಜುನನನ್ನು ತಡೆಯಲಿಲ್ಲವೇಕೆ ಎಂದು ಮೂದಲಿಸಿದನು.

ರಮೆ:– ಚೆನ್ನಾಯಿತು.

ಮುರಳಿ:– ಚೆನ್ನಾಗಲಿ, ಕೇಳು. ಕರ್ಣನು ಅರ್ಜುನನೊಂದಿಗೆ ಯುದ್ಧಕ್ಕೆ ನಿಂತನು. ಯುದ್ಧದಲ್ಲಿ ಅವನ ಬಿಲ್ಲು ತುಂಡಾಗಲು ಅಷ್ಟರಿಂದಲೇ ಕರ್ಣನು ಸೋತನೆಂಬಂತೆ ದ್ರೋಣನು ಮುಂದೆ ಬಂದನು. ಅರ್ಜುನನು ತನ್ನ ಗುರುವಿನ ಮುಖಸ್ತುತಿ ಮಾಡಿ ಯುದ್ಧ ಮಾಡುತ್ತಿರಲು ದ್ರೋಣನು ತಾನು ಆಲಸ್ಯ ಹೊಂದಿದಂತೆ ನಟಿಸಿ ಹಿಂತಿರುಗಿದನು. ಆಗ ಅರ್ಜುನನು ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿ ಎಲ್ಲರನ್ನೂ ಮಂಕು ಬಡಿಸಿ ತಾನು ವಿಜಯಿಯಾಗಿ ಹಿಂತಿರುಗಿದನು.

ರಮೆ:– ಅದೇನು, ಆ ಅಸ್ತ್ರವನ್ನು ನಿವಾರಿಸಲು ಸಾಧ್ಯವೇ ಇರಲಿಲ್ಲವೆ ?

ಮುರಳಿ:– ಸಾಧ್ಯವಿತ್ತು. ಭೀಷ್ಮನೊಬ್ಬನಿಗೆ ಮಾತ್ರ ಅದರ ನಿವಾರಣೆ ತಿಳಿದಿತ್ತು.

ರಮೆ:– ಹಿಂದಿನ ಕಾಲದಲ್ಲೆಲ್ಲ ಹೀಗೆಯೇ ಯುದ್ಧ ಮಾಡುತ್ತಿದ್ದುದೇನು ?

ಮುರಳಿ:– ಹೀಗೇ ಎಂದರೆ ?

ರಮೆ:– ಒಬ್ಬ ಬಂದ, ಎರಡು ಬಾಣ ಬಿಟ್ಟ, ಹೋದ. ಇನ್ನೊಬ್ಬ ಬಂದ, ಒಂದೆರಡು ಬಿಟ್ಟ, ಹೋದ. ಆಮೇಲೆ ಮತ್ತೊಬ್ಬ, ಮಗದೊಬ್ಬ. ಹೀಗೆ ಎಲ್ಲರ ಸರದಿ ಮುಗಿದ ಮೇಲೆ ಈಚೆ ಕಡೆಯವನು ಮೀಸೆ ತಿರುವುತ್ತಾ ಮನೆಗೆ ಬಂದ.

ಮುರಳಿ:– ನೀನು ರಾಮಾಯಣ, ಮಹಾಭಾರತಗಳನ್ನು ಚಿಕ್ಕಂದಿನಲ್ಲಿ ಓದಿದ್ದೆ ಎಂದೆಯಲ್ಲಾ, ಮತ್ತೆ ! ಅವುಗಳನ್ನು ಓದಿಯೂ ನಿನಗೆ ಹಿಂದಿನ ಕಾಲದ ಯುದ್ಧದ ಕಲ್ಪನೆ ಆಗಲಿಲ್ಲವೇನು ?

ರಮೆ:– ನೀವೇ ಈಗ ಒಂದು ಯುದ್ಧದ ವರ್ಣನೆ ಮಾಡಿದಿರಲ್ಲ ! ಅದಕ್ಕೆ ಯುದ್ಧ ಎಂದು ಹೇಳುತ್ತಾರೇನು ?

ಮುರಳಿ:– ಯುದ್ಧವೇ ತಾನೆ ? ಅರ್ಜುನನು ಕೌರವ ಬಲವನ್ನೆಲ್ಲ ಸೋಲಿಸಿ ಹಿಂತಿರುಗಿದನೆಂದರೆ ಅದಕ್ಕೆ ಇನ್ನೇನು ಹೆಸರು ?

ರಮೆ:– ಹಾಗಿದ್ದಮೇಲೆ ಹೆಚ್ಚುಕಡಿಮೆ ಅದೇ ಸೈನ್ಯದೊಂದಿಗೆ ಪಾಂಡವರು ಮುಂದೆ ಹದಿನೆಂಟು ದಿನ ಅದೇನು ಅಷ್ಟು ಘೋರವಾದ ಯುದ್ಧ ಮಾಡಿದರು ? ಅರ್ಜುನನೊಬ್ಬನೇ ಅರ್ಧ ದಿನದಲ್ಲಿ ಮುಗಿಸಬಹುದಿತ್ತಲ್ಲ ?

ಮುರಳಿ:– ಆ ಯುದ್ಧಕ್ಕೂ ಇದಕ್ಕೂ ವ್ಯತ್ಯಾಸವಿಲ್ಲವೆ ? ಅದು ಶಾಶ್ವತ ವಾದ ಸೋಲು–ಗೆಲವುಗಳ, ಅಳಿವು–ಉಳಿವುಗಳ ಹೋರಾಟ.

ರಮೆ:– ಇದು ?

ಮುರಳಿ:– ಇದು...............

ರಮೆ:– ಇದೂ...............?

ಮುರಳಿ:– ಇದು ಸುಮ್ಮನೆ, ಹಾಗೇ...........

ರಮೆ:– ಸುಮ್ಮನೇ, ಹಾಗೇ........ಹಾಗೆ ಹೇಳಿ. ಏನೋ ದನಗಳನ್ನು ಹಿಡಿಯಲೆಂದು ಬಂದವರು ಎಷ್ಟು ಹುರುಪಿನಿಂದ ಯುದ್ಧ ಮಾಡಿಯಾರು ? ಅಲ್ಲದೆ ಪಾಂಡವರನ್ನು ಪತ್ತೆ ಹಚ್ಚಬೇಕೆಂಬದು ದುರ್ಯೋಧನನ ಆಶಯವಾಗಿತ್ತೇ ಹೊರತು ಅವರನ್ನು ಕೊಲ್ಲಬೇಕೆಂಬದಾಗಲಿ, ಸೆರೆ ಹಿಡಿಯಬೇಕೆಂಬದಾಗಲಿ ಅವನ ಬಯಕೆಯಾಗಿರಲಿಲ್ಲ. ಸಾಲದುದಕ್ಕೆ ದುರ್ಯೋಧನನ ಬಣದೊಳಗಿನ ಅಂತಃ ಕಲಹ ಬೇರೆ ಯುದ್ಧದ ಪೌರುಷಯುತ ವಾತಾವರಣವನ್ನು ನಾಶ ಮಾಡಿತ್ತು. ಇದಕ್ಕೆ ಹಿಂದಿನ ಯುದ್ಧದಲ್ಲಿ ಭೀಮನಿಗಾದರೆ ಒಂದು ಗುರಿ ಇತ್ತು – ತನ್ನ ಆಶ್ರಯದಾತನನ್ನು ಬಿಡಿಸಿಕೊಂಡು ಬರಬೇಕು ಎಂಬದು. ಇಲ್ಲಿ ಎರಡು ಕಡೆ ಯವರಿಗೂ ಏನೂ ಗುರಿ ಇರಲಿಲ್ಲ. ಹಾಗಾಗಿ ಇದೊಂದು ದೊಡ್ಡವರ ಮಕ್ಕಳಾಟ ದಂತಾಯಿತೇ ಹೊರತು ಅದರಲ್ಲಿ........

ಮುರಳಿ:– ಆಗಲಿ. ಇನ್ನು ಮುಂದೆ ನೀನೇ ಕತೆ ಹೇಳು. ನಾನು ಹ್ಞೂಂಗುಟ್ಟುತ್ತೇನೆ.

ರಮೆ:– ಹೇಳಿದೆ, ಅಷ್ಟೆ. ನೀವೇ ಮುಂದುವರಿಸಿ........

ಮುರಳಿ:– ಮತ್ತೆ ಸುಮ್ಮನೆ ಏನೇನೋ ಹರಟುತ್ತೀಯ. ಕೇಳು. ಈ ನಡುವೆ ಕಂಕಭಟ್ಟ ಮತ್ತು ವಿರಾಟ ರಾಜ – ಇವರು ಪಗಡೆಯಾಟದಲ್ಲಿ ತೊಡಗಿದ್ದರು. ಯುದ್ಧವನ್ನು ಗೆದ್ದವನು ಬೃಹನ್ನಳೆಯೋ, ಉತ್ತರಕುಮಾರನೋ ಎಂಬದರ ಬಗ್ಗೆ ವಿವಾದ ಹುಟ್ಟಿತು. ವಾದದ ಕಾವು ಏರಲು ವಿರಾಟನು ದಾಳಗಳಿಂದ ಕಂಕ ಯತಿಯ ಹಣೆಗೆ ಹೊಡೆದನು. ಹಣೆಯಿಂದ ಚಿಮ್ಮುತ್ತಿದ್ದ ರಕ್ತವು ಭೂಮಿಗೆ ಬೀಳುವ ಮೊದಲೇ ಅಲ್ಲೇ ಸಮೀಪದಲ್ಲಿದ್ದ ದ್ರೌಪದಿಯು ತನ್ನ ಸೆರಗಿನಿಂದ ಯುಧಿಷ್ಠಿರನ ಹಣೆಯನ್ನು ಒತ್ತಿ ಹಿಡಿದಳು. ಈ ಕಡೆ ಅರ್ಜುನನ ಸಲಹೆ ಯನ್ನನುಸರಿಸಿ ಉತ್ತರನು ತಾನೇ ಯುದ್ಧವನ್ನು ಗೆದ್ದವನೆಂದು ಹೇಳಿಕೊಂಡು ಬಂದನು. ವಿರಾಟನು ಅವನನ್ನು ಬಹಳ ಆದರಿಸಿ ಉಪಚರಿಸಿದನು. ಇದರಿಂದ ನಾಚಿಕೆಯಾದಂತಾದ ಉತ್ತರನು ಯುದ್ಧದಲ್ಲಿ ನಿಜವಾಗಿ ಗೆದ್ದವರನ್ನು ತಾನು ಮಾರನೆಯ ದಿನ ತಂದೆಗೆ ತೋರಿಸುವದಾಗಿ ತಿಳಿಸಿದನು. ಆ ರಾತ್ರಿ ಐವರು ಪಾಂಡವರೂ ಪತ್ನೀ ಸಮೇತರಾಗಿ ಒಂದೆಡೆ ಸೇರಿದರು. ಅಣ್ಣನ ಹಣೆಯ ಗಾಯವನ್ನು ಕಂಡ ಅರ್ಜುನನು ಅದರ ಕಾರಣವನ್ನು ತಿಳಿದು ಸಿಟ್ಟುಗೊಂಡನು. ಭೀಮನೂ ಒಮ್ಮೆಗೇ ಉದ್ರಿಕ್ತನಾಗಿ ವಿರಾಟನನ್ನೂ ಕೀಚಕನ ಜೊತೆಗೆ ಕಳುಹಿ ಸುವೆನೆನ್ನುತ್ತ ಮೇಲೆದ್ದನು. ಅವನ ಗಲ್ಲವನ್ನು ಹಿಡಿದು ಸಮಾಧಾನಗೊಳಿಸುತ್ತ ಯುಧಿಷ್ಠಿರನು ಭೀಮನಾಣೆಯಾಗಿಯೂ ರಕ್ತವು ಕೆಳಗೆ ಬೀಳಲಿಲ್ಲವೆಂದು ತಿಳಿಸಿ ನಡೆದ ಘಟನೆಯನ್ನು ವಿವರಿಸಿದನು. ಆದರೂ ಭೀಮನು ಅಣ್ಣನಿಗಾದ ಈ ಘಾಸಿ ಯನ್ನು ಸಹಿಸದೆ "ಅಣ್ಣಾ, ವಿರಾಟನು ನಿನ್ನ ಒಡೆಯನೆಂಬ ಗರ್ವದಿಂದ ನಿನ್ನ ಹಣೆ ಯೊಡೆಯುವಂತೆ ಹೊಡೆದಿದ್ದಾನಲ್ಲವೆ? ಅವನನ್ನು ಖಂಡಿತ ಉಳಿಸಬಾರದು" ಎಂದು ರೇಗಾಡಲು ಯುಧಿಷ್ಠಿರನು, ತಾವು ತಮ್ಮ ಆಶ್ರಯದಾತನನ್ನೇ ಕೊಂದರೆ ತಮಗೆ ಲೋಕಾಪವಾದವು ಬರುವದೆಂದೂ, ತಮ್ಮ ಕರ್ಮಫಲದಿಂದಾಗಿ ಇಂತಹ ದುರ್ದೆಸೆ ತಮಗೆ ಒದಗುತ್ತಿದೆಯೆಂದೂ ಸಮಾಧಾನಪಡಿಸಲು ಪ್ರಯತ್ನಿಸಿದನು. ಧರ್ಮದ ಜಾಡ್ಯದಲ್ಲಿ ಮೂರ್ಛೆಹೋಗಿ ಹದಿಮೂರು ವರ್ಷಗಳ ಕಾಲ ಗೆಡ್ಡೆ ಗೆಣಸುಗಳನ್ನು ತಿಂದು ಪಡಬಾರದ ಕಷ್ಟಗಳನ್ನನುಭವಿಸಿದುದು ಸಾಕು ಎಂಬದು ಭೀಮನ ಮರುವಾದವಾಗಿತ್ತು. "ಹಾಗಿದ್ದರೆ ನಾಳೆ ನಾವು ಐವರೂ ಉದಯ ಕಾಲದಲ್ಲಿ ವಿರಾಟನ ಸಿಂಹಾಸನವನ್ನು ಏರಿ ಕುಳಿತುಕೊಳ್ಳೋಣ. ಅವನು ಆಗ ನಮ್ಮನ್ನು ಕಡೆಗಣಿಸಿ ಸಿಟ್ಟುಗೊಂಡರೆ ಅವನನ್ನು ಕೊಲ್ಲೋಣ. ಸಂತೋಷದಿಂದ ಸನ್ಮಾನಿಸಿದರೆ ಕ್ಷಮಿಸೋಣ" ಎಂದು ಹೇಳಿ ಯುಧಿಷ್ಠಿರನು ಭೀಮನನ್ನು ಒಪ್ಪಿಸಿದನು.

ರಮೆ:– ಯುಧಿಷ್ಠಿರನ ನಡತೆಗೂ ಭೀಮನದಕ್ಕೂ ಪೂರ್ವ ಪಶ್ಚಿಮಗಳ ಅಂತರ ಎಂಬದು ಸುಳ್ಳು.

ಮುರಳಿ:– ಏನದು ನಿನ್ನ ಸಂಶೋಧನೆ?

ರಮೆ:– ವಿರಾಟನನ್ನು ಆ ತಕ್ಷಣ ಕೊಲ್ಲಬೇಕೆಂದು ಭೀಮನು ವಾದಿಸಿದನು. ನಾಳೆ ಬೆಳಿಗ್ಗೆ ಇನ್ನೊಂದು ಅವಕಾಶ ಕೊಟ್ಟು ನೋಡಿ ಕೊಲ್ಲೋಣ ಎಂದು ಯುಧಿಷ್ಠಿರ ಒಪ್ಪಿದನು. ಇಷ್ಟೇ ಅಂತರ.

ಮುರಳಿ:– ಭೀಮನೆಂಬ ಅಗಾಧ ಕ್ರತು ಶಕ್ತಿಯ ಪ್ರಚಂಡ ಯಂತ್ರಕ್ಕೆ ಯುಧಿಷ್ಠಿರನೆಂಬ ಬಿರಿ ಇದ್ದುದರಿಂದಲೇ ಪಾಂಡವರೆಂಬ ರಥವು ಲೋಕೋತ್ತರ ವೆನಿಸಿ ನಡೆಯಿತು.

ರಮೆ:– ಬಿರಿ ಅವಶ್ಯವಾದ ಉಪಕರಣವೇ ಹೊರತು, ಯಂತ್ರವೇ ತಾನೇ ರಥದ ಜೀವ ಜೀವಾಳ?

ಮುರಳಿ:– ಇರಬಹುದೇನೋ. ಕೇಳು. ಮಾರನೆಯ ದಿನ ಬೆಳಿಗ್ಗೆ ಪಾಂಡವರು ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು ರಾಜಯೋಗ್ಯವಾದ ಉಡಿಗೆ ಗಳನ್ನು ಧರಿಸಿ ದ್ರೌಪದೀಸಮೇತರಾಗಿ ವಿರಾಟನ ಸಿಂಹಾಸನವನ್ನೇರಿ ಕುಳಿತರು. ವಿಷಯವನ್ನು ತಿಳಿದ ವಿರಾಟನು ಬಂದು ನೋಡಲು ಉತ್ತರ ಕುಮಾರನು ಅವರು ಪಾಂಡವರೆಂದು ಪರಿಚಯ ಮಾಡಿಕೊಟ್ಟನು. ವಿರಾಟನು ಸಂತೋಷದಿಂದ ತನ್ನ ಸಮಸ್ತವನ್ನೂ ಪಾಂಡವರಿಗೆ ಅರ್ಪಿಸಿ ತಾನು ಅವರ ಆಶ್ರಯದಲ್ಲಿರುವವನಂತೆ ವರ್ತಿಸಿದನು. ಇದರ ದ್ಯೋತಕವಾಗಿ ತನ್ನ ಮಗಳಾದ ಉತ್ತರೆಯನ್ನು ಅರ್ಜುನ ಸುಭದ್ರೆಯರ ಮಗನಾದ ಅಭಿಮನ್ಯುವಿಗೆ ಕೊಡುವದೆಂದು ನಿರ್ಧರಿಸಿದನು. ಯುಧಿಷ್ಠಿರನ ಪ್ರಾರ್ಥನೆಯಂತೆ ಕೃಷ್ಣನೂ ದಯಮಾಡಿಸಿದನು. ಅಭಿಮನ್ಯು-ಉತ್ತರೆಯರ ವಿವಾಹವು ವೈಭವದಿಂದ ನಡೆಯಿತು.

ರಮೆ:– ಇದಕ್ಕೆ ಕತೆ ಎನ್ನುತ್ತಾರೊ?

ಮುರಳಿ:– ಯಾವದಕ್ಕೆ?

ರಮೆ:– ಯಾವದಕ್ಕೆ, ನೀವು ಹೇಳುತ್ತಿರುವದಕ್ಕೆ?

ಮುರಳಿ:– ಮಹಾಭಾರತವು ಕತೆಯೂ ಹೌದು, ಚರಿತ್ರೆಯೂ ಹೌದು ಎಂದು ಅನೇಕ ಸಲ ಹೇಳಿದ್ದೇನಲ್ಲ!

ರಮೆ:– ಮಹಾಭಾರತ ಇರಬಹುದು. ನೀವು ಹೇಳುತ್ತಿರುವದನ್ನು ಕೇಳಿದೆ.

ಮುರಳಿ:– ನಾನು ಹೇಳುತ್ತಿರುವದಾದರೂ ರಾಮಾಯಣವನ್ನಲ್ಲ.

ರಮೆ:– ರಾಮಾಯಣವೋ, ಮಹಾಭಾರತವೋ, ಒಂದು ವಾಕ್ಯದಲ್ಲಿ ಮದುವೆ ಮಾಡಿ ಮುಗಿಸುವದು, ಒಂದು ವಾಕ್ಯದಲ್ಲಿ ಮಕ್ಕಳಾಗುವದು–ಇದೆಲ್ಲ ಕತೆ ಹೇಳುವ ಕ್ರಮವೇ ಎಂದೆ?

ಮುರಳಿ:– ಹೇಗೆಲ್ಲ ಆಯಿತು ಎಂಬದನ್ನು ವಿವರಿಸಬೇಕು ಎನ್ನುತ್ತೀಯಾ ?

ರಮೆ:– ಬೇಡವೇ ಮತ್ತೆ ?

ಮುರಳಿ:– ನೀನು ಹೇಳಿದುದನ್ನೆಲ್ಲ ?

ರಮೆ:– ಅಲ್ಲ, ಮದುವೆಯ ವಿವರಣೆ ಸ್ವಲ್ಪವಾದರೂ ಬೇಡವೆ ?

ಮುರಳಿ:– ಮದುವೆಯ ವಿವರ, ಮಧುಚಂದ್ರನ ವಿವರ, ಮದುವಣಿಗರ ಸರಸದ ವಿವರ, ಸಮಾರಾಧನೆಯ ಅಡುಗೆ, ಶಯ್ಯಾಗಾರದ ಅಲಂಕಾರ, ಗರ್ಭಾದಾನದ ಸಡಗರ–ಇವುಗಳ ವಿವರಗಳೆಲ್ಲ–ಆಹಾ–ಹೆಂಗಸರಿಗೆ ರಸದೌತಣ ! ಸ್ವತಃ ಅನುಭವಿಸಿದುದನ್ನು ಹೊಸ ವಿಷಯ ಕೇಳುವಂತೆ ಕೇಳುವದು ನಿನಗೆ ಏನು ಸೊಗಸೋ ಕಾಣೆ. ಸ್ವಾನುಭವದ ಮೂಲಕ ರಸಾಸ್ವಾದನೆ ಮಾಡಲು ಸಾಧ್ಯವಿರುವದನ್ನು ಕಲ್ಪನೆಯ ಮೂಲಕ ಆಸ್ವಾದಿಸುತ್ತ ಕಾಲ ಕಳೆಯುವದು ನನಗೇಕೋ ಹಿಡಿಸುವದಿಲ್ಲವಪ್ಪ. ಕೇಳು, ಕೇಳು. ನಾನು ಅಭಿಮನ್ಯುವಿನ ಮದುವೆಯ ಕತೆ ಹೇಳಲು ಹೊರಟವನಲ್ಲ. ಭೀಮನ ಕತೆ ಹೇಳುತ್ತಿದ್ದೇನೆ, ಕೇಳು.

ರಮೆ:– ಹೋಗಲಿ, ಹೇಳಿ.

ಮುರಳಿ:– ವಿರಾಟನ ಪಟ್ಟಣದಲ್ಲಿ ಕೃಷ್ಣ, ಪಾಂಡವರು ಮತ್ತು ಅವರ ಇತರ ಹಿತೈಷಿಗಳು ಸಭೆ ಸೇರಿ ಪಾಂಡವರು ಮುಂದೆ ಏನು ಮಾಡಬೇಕೆಂಬದರ ಕುರಿತು ಸಮಾಲೋಚನೆ ನಡೆಸಿದರು. ಪಾಂಡವರಿಗೆ ನ್ಯಾಯವಾಗಿ ಸೇರಬೇಕಾದ ಭೂಮಿಯನ್ನು ಬೇಡುವದಕ್ಕಾಗಿ ಒಬ್ಬ ವಿನಯವಂತನನ್ನು ಕೌರವರಲ್ಲಿಗೆ ಕಳುಹಿಸಬೇಕೆಂದು ತಿರ್ಮಾನವಾಯಿತು. ಕೃಷ್ಣನು ದ್ವಾರಕಿಗೆ ಹಿಂದಿರುಗಿದನು. ದುರ್ಯೋಧನನು ಕೃಷ್ಣನ ಬೆಂಬಲವನ್ನು ತನ್ನ ಪರವಾಗಿ ಪಡೆಯಲು ತಾನೇ ಸ್ವತಃ ಕೃಷ್ಣನಲ್ಲಿಗೆ ಹೋದನು. ಈ ಸುಳಿವನ್ನು ತಿಳಿದ ಯುಧಿಷ್ಠಿರನು ತಾನೂ ಅರ್ಜುನನನ್ನು ಕೃಷ್ಣನಲ್ಲಿಗೆ ತ್ವರೆಯಿಂದ ಕಳುಹಿಸಿದನು. ಅರ್ಜುನ ಮತ್ತು ದುರ್ಯೋಧನ – ಈ ಇಬ್ಬರೂ ಒಪ್ಪಿಕೊಂಡ ಪ್ರಕಾರ ಕೃಷ್ಣನೊಬ್ಬನೇ ಪಾಂಡವರ ಪಕ್ಷವನ್ನು ವಹಿಸುವದೆಂದೂ, ಯಾದವರ ನಾರಾಯಣ ಮಹಾಸೈನ್ಯವು ಕೌರವರ ಸಹಾಯಕ್ಕೆ ಸೇರುವದೆಂದೂ ನಿಶ್ಚಯವಾಯಿತು. ದುರ್ಯೋಧನನು ಯಾದವ ಸೈನ್ಯದೊಂದಿಗೂ, ಅರ್ಜುನನು ಕೃಷ್ಣನನ್ನು ತನ್ನ ಸಾರಥಿಯಾಗಿ ಪಡೆದೂ ತಮ್ಮ ತಮ್ಮ ಸ್ಥಳಕ್ಕೆ ಹಿಂದಿರುಗಿದರು. ಪಾಂಡವರ ಪಕ್ಷವನ್ನು ಸೇರಲೆಂದು ಬರುತ್ತಿದ್ದ ಶಲ್ಯನನ್ನು ದುರ್ಯೋಧನನು ಉಪಾಯದಿಂದ ತನ್ನ ಪಕ್ಷಕ್ಕೆ ಸೇರಿಸಿಕೊಂಡುಬಿಟ್ಟನು. ಭರತಖಂಡದ ಮೂಲೆ ಮೂಲೆಗಳಿಂದಲೂ ರಾಜರುಗಳು ಉಭಯ ಪಕ್ಷಗಳಿಗೂ ಬಂದು ಸೇರುತ್ತಿದ್ದರು. ದುರ್ಯೋಧನನು ಸಂಜಯನೆಂಬವನನ್ನು ಪಾಂಡವರಲ್ಲಿಗೆ ಕಳುಹಿಸಿ ಯುದ್ಧವೇ ತನ್ನ ನಿರ್ಧಾರವೆಂಬದನ್ನು ಸ್ಪಷ್ಟಪಡಿಸಿದನು. ಸಂಜಯನು

ಹಿಂತಿರುಗಿ ಬಂದ ಮೇಲೆ ಸಭೆಯಲ್ಲಿ ಅವನ ದೌತ್ಯದ ವಿವರಗಳನ್ನು ಕೇಳ ಲಾಯಿತು. ಅವನು ಯುಧಿಷ್ಠಿರನ ಸೌಜನ್ಯದ ಮಾತುಗಳನ್ನೂ, ಕೃಷ್ಣನು ನಯವಾಗಿಯೇ ಆದರೂ ತಾನು ಪಾಂಡವರ ಪಕ್ಷಪಾತಿ ಎಂಬದನ್ನು ಸ್ಪಷ್ಟವಾಗಿ ತಿಳಿಸಿದ ವಿವರವನ್ನೂ, ಅರ್ಜುನನ ಯುದ್ಧ ನಿಶ್ಚಯದ ಆಟೋಪವನ್ನೂ ತಿಳಿಸಿ ಭೀಮನು ತನ್ನಲ್ಲಿ "ನಿನ್ನ ಒಡೆಯನ ತೊಡೆಗಳು ಕ್ಷೇಮವಾಗಿರುವವೆ? ಅವನ ತಮ್ಮನ ಮೈಗೆ ಆರೋಗ್ಯ ತಾನೆ? ಒಡ ಹುಟ್ಟಿದ ಆ ನೂರು ಮಂದಿಗೂ ಅವರ ಭಾಗದ ಯಮನಾಗಿರುವ ನನ್ನ ಈ ಸಂದೇಶವನ್ನು ಹೆದರದೆ ಹೇಳು ಹೋಗು" ಎಂದು ಹೇಳಿದ ನಿಷ್ಠುರ ಮಾತುಗಳನ್ನೂ ತಿಳಿಸಿದನು. ಈ ಮಾತುಗಳನ್ನು ಕೇಳುತ್ತಲೇ ಕೌರಾವಾದಿಗಳ ಮೈ ಉರಿಯಿತು. ಆದರೆ ವಯೋ ವೃದ್ಧನಾದ ಧೃತ ರಾಷ್ಟ್ರನು ಮಾತ್ರ ಭೀಮನನ್ನು ನೆನಸಿಕೊಂಡು ಭಯಪಡುತ್ತಾ ಸಂಜಯನನ್ನು ಕುರಿತು "ಸಂಜಯಾ, ಆ ಪಾಂಡವ ಬಲದಲ್ಲಿ ನನಗೆ ಭೀಮನ ಭಯವೇ ಎಲ್ಲ ಕ್ಕಿಂತಲೂ ಪ್ರಬಲವಾಗಿದೆ. ಭೀಮನ ಕೋಪವನ್ನು ನೆನಸಿಕೊಂಡರೆ ನನಗೆ ರಾತ್ರಿ ನಿದ್ರೆಯೇ ಬರುವದಿಲ್ಲ. ಅವನಿಗೆ ನಮ್ಮಲ್ಲಿರುವ ದೃಢವಾದ ವೈರತ್ವವನ್ನೂ, ಅವನ ಕೋಪಸೂಚಕ ನಗೆಯನ್ನೂ, ಆವೇಶವನ್ನೂ, ಓರೆನೋಟವನ್ನೂ, ಮಹಾ ವೇಗವನ್ನೂ, ಮಹೋತ್ಸಾಹವನ್ನೂ, ಮಹಾಬಲವನ್ನೂ, ಮಹಾಭುಜಗಳನ್ನೂ ನೆನಸಿಕೊಂಡರೆ ಮುಂದಿನ ಯುದ್ಧದಲ್ಲಿ ನನ್ನ ನೂರ್ವರು ಮಕ್ಕಳನ್ನೂ ಅವನೇ ಹಿಂಡಿ ಯುಧಿಷ್ಠಿರನಿಗೆ ರಾಜ್ಯವನ್ನು ದೊರಕಿಸುವದು ನಿಶ್ಚಯ ಎಂದು ತೋರು ತ್ತದೆ. ಛೆ, ಛೆ. ಸಹಜವಾಗಿಯೇ ಕೋಪಿಷ್ಠನಾದ ಆ ಭೀಮನನ್ನು ಹಲವು ಕಿರುಕುಳಗಳಿಂದ ರೇಗಿಸುವ ನನ್ನ ಮಕ್ಕಳು ಅವನ ಭಯಂಕರವಾದ ಗದೆಗೆ ಆಹುತಿಯಾಗಿಯೇ ಆಗುವರು. ಖಂಡಿತವಾಗಿಯೂ ಸಾಯುವರು. ತಾವೇ ಮಹಾ ವೀರರೆಂದೂ, ತಾವೇ ಮಹಾ ತಿಳಿದವರೆಂದೂ ಭಾವಿಸಿರುವ ನನ್ನ ಮಕ್ಕಳಿಗೆ ನಾನೆಷ್ಟು ಬುದ್ಧಿ ಹೇಳಿದರೂ ಅವರು ಕೇಳುವದಿಲ್ಲ. ವೀರ ಸಾಮ್ರಾಟ ನಾಗಿದ್ದ ಜರಾಸಂಧನನ್ನೂ ಅನೇಕ ಯಕ್ಷ ರಾಕ್ಷಸರನ್ನೂ ಕೊಂದ ಆ ಭೀಮನು ನಮ್ಮ ಸೈನ್ಯವನ್ನೂ ಲೀಲಾಜಾಲವಾಗಿ ಧ್ವಂಸ ಮಾಡುವದು ಖಂಡಿತ. ಗದೆ ಹಿಡಿದು ಯುದ್ಧಮಾಡುವದರಲ್ಲಿ, ಆನೆಯನ್ನೇರಿ ಯುದ್ಧ ಮಾಡುವದರಲ್ಲಿ ಅವನಿಗೆ ಸಮಾನರಾದವರು ಯಾರೂ ಇಲ್ಲ. ರಥಿಕರಲ್ಲಿ ಕೂಡ ಅವನು ಅರ್ಜುನನಿಗೂ, ದ್ರೋಣನಿಗೂ ಸಮನಾದವನೆಂದು ಕೇಳಿದ್ದೇನೆ" ಎಂದೆನ್ನುತ್ತಾ ಕೊರಗಿದನು.

ರಮೆ:– ಈ ಹಳಬರ ಕತೆಯೇ ಹೀಗೆ. ವಿಪರೀತ ಜಾಗರೂಕತೆ, ವಿಪರೀತ ಅಂಜಿಕೆ, ವಿಪರೀತ ಲೆಕ್ಕಾಚಾರ – ಇದೆಲ್ಲವನ್ನೂ ಸುರಿದು ಸುರಿದು ವಾತಾವರಣ ವನ್ನೇ ಒಂದು ವಿಧದಲ್ಲಿ ದುಸ್ಸಹವಾದುದನ್ನಾಗಿ ಮಾಡಿಬಿಡುತ್ತಾರೆ.

**ಮುರಳಿ:– ಹೌದು, ಹೌದು.**

ರಮೆ:– ಇಲ್ಲವೇ, ಹೇಳಿ. ಸರಿಯೋ ತಪ್ಪೋ, ಕೌರವರು ಪಾಂಡವರಿಗೆ ರಾಜ್ಯಾರ್ಧವನ್ನು ಬಿಟ್ಟುಕೊಡುವದಿಲ್ಲ ಎಂದು ತೀರ್ಮಾನ ಮಾಡಿಬಿಟ್ಟಿದ್ದಾರೆ. ಯುದ್ಧ ಮಾಡುವದೆಂದು ಕೂಡ ನಿಶ್ಚಯವಾಗಿಬಿಟ್ಟದೆ. ಅದನ್ನು ತಪ್ಪಿಸಲಿಕ್ಕಂತೂ ಸಾಧ್ಯವಿಲ್ಲ. ಆದರೂ ಈ ಮುದುಕ ಹಾಗೆ, ಹೀಗೆ ಎಂದು ಸಭೆಯಲ್ಲಿ ಕೊರಗಿಕೊಂಡು ಒಂದು ನಿರುತ್ಸಾಹದ ವಾತಾವರಣ ಉಂಟು ಮಾಡುವದನ್ನು ಬಿಡುವದಿಲ್ಲ !

ಮುರಳಿ:– ಹೌದು, ಹೌದು.

ರಮೆ:– ಏನು ಹೌದು ? ಈ ಮುದುಕನ ಕೊರಗಾಟ ಇಲ್ಲದಿದ್ದರೆ ಅಂತಹ ಒಂದು ಹಾಳು ವಾತಾವರಣ ಉಂಟಾಗುತ್ತಿತ್ತೇನು ?

ಮುರಳಿ:– ಇಲ್ಲ.

ರಮೆ:– ಹೇಗೆಂದು ಹೇಳುತ್ತೀರಿ ?

ಮುರಳಿ:– ಹೇಗೆ, ಏನು ? ಈ ವಾತಾವರಣವೇ ಉಂಟಾಗುತ್ತಿರಲಿಲ್ಲ. ಮುದುಕರ ಕೊರಗಾಟದ ಅಡ್ಡಿ ಇಲ್ಲದಿರುತ್ತಿದ್ದರೆ ಕೌರವರು ಈ ಹಿಂದೆಯೇ ಯಾವಾಗಲೋ ಪಾಂಡವರ ಮೇಲೆ ಬಿದ್ದು ಅವರ ಕೈಯಿಂದ ಸಾವನ್ನಪ್ಪಿಯಾಗಿರುತ್ತಿತ್ತು. ಈ ನಿರುತ್ಸಾಹದಾಯಕ ವಾತಾವರಣಕ್ಕೆ ಅವಕಾಶವೆಲ್ಲಿರುತ್ತಿತ್ತು !

ರಮೆ:– ನೀವೂ ಏನು ಕಡಿಮೆ ಕಿರಿಕಿರಿಯವರಲ್ಲ. ಅದಕ್ಕೇ ನಾನು ಹೇಳಿದುದಕ್ಕೆಲ್ಲ ಬಸವನ ಹಾಗೆ ಹೌದು, ಹೌದು ಅಂತ ತಲೆ ಆಡಿಸುತ್ತಿದ್ದುದು. ಇರಲಿ, ಇರಲಿ. ಹೇಳಿ.

ಮುರಳಿ:– ಇರಲಿ, ಇರದಿರಲಿ, ಕೇಳು. ಈ ಕಡೆ ಕೃಷ್ಣನು ಐವರು ಪಾಂಡವರನ್ನೂ ಸೇರಿಸಿ ಮುಂದಕ್ಕೆ ಏನು ಮಾಡಬೇಕೆಂದು ಅವರು ಬಯಸಿದ್ದಾರೆಂಬದನ್ನು ಸ್ಪಷ್ಟವಾಗಿ ಕೇಳಲು ಪ್ರತಿಯೊಬ್ಬರನ್ನೂ ವಿಚಾರಿಸಿದನು. ಮೊದಲು ಯುಧಿಷ್ಠಿರನ ಅಭಿಪ್ರಾಯವನ್ನು ಕೇಳಲಾಯಿತು. ತಮಗೆ ಕೌರವರಿಂದ ಐದು ಗ್ರಾಮಗಳನ್ನು ಕೊಡಿಸಿದರೆ ಕೂಡ ತಾನು ಅಷ್ಟರಿಂದಲೇ ತೃಪ್ತನಾಗುವದಾಗಿ ಅವನು ಕೃಷ್ಣನಲ್ಲಿ ಅರಿಕೆ ಮಾಡಿಕೊಂಡನು. ಭೀಮನನ್ನು ಅನಂತರ ಕೇಳಲಾಯಿತು. ಅವನು “ಕೃಷ್ಣಾ, ಅಣ್ಣನ ಅಭಿಪ್ರಾಯದಂತೆಯೇ ಆಗಲಿ. ದುರ್ಯೋಧನನು ನಮಗೆ ಕೆಡುಕನ್ನುಂಟುಮಾಡಿದ್ದರೆ ಅದು ನಮ್ಮ ಪ್ರಾರಬ್ಧ ಫಲ. ಅದನ್ನೆಲ್ಲ ಮರೆತಿದ್ದೇವೆ. ಸೋದರರ ವಧೆ ಬೇಡ. ಸಂಧಿಯನ್ನೇ ನಡೆಸು” ಎಂದನು.

ರಮೆ:– ಯಾರು ?

ಮುರಳಿ:– ಭೀಮ.

ರಮೆ:– ನೀವು ನಿದ್ದೆ ಮಾಡುತ್ತಿಲ್ಲ ತಾನೆ? ಮೈ ಜಿಗುಟಿ ನೋಡಿಕೊಂಡು ಕತೆ ಹೇಳಿ.

ಮುರಳಿ:– ನನ್ನ ಮೈಯನ್ನೇ ಏನು, ನಿನ್ನ ಮೈಯನ್ನು ಬೇಕಾದರೂ ಜಿಗುಟುವಷ್ಟು–ಏಕೆ, ಜಿಗುಟಬೇಕೆಂದು ಬಯಕೆಯಾಗುವಷ್ಟು–ಎಚ್ಚರದಲ್ಲಿದ್ದೇನೆ.

ರಮೆ:– ಭೀಮ ಏನಾದರೂ ಅಮಲು ಸೇವಿಸಿದ್ದನೇನು?

ಮುರಳಿ:– ಹೌದು. ಒಂದು ವಿಧದಲ್ಲಿ ಚಿಕ್ಕಂದಿನಿಂದಲೂ ಅದೊಂದು ಬಗೆಯ ಅಮಲನ್ನು ಅವನಿಗೆ ಕುಡಿಸಿ ಕುಡಿಸಿ ಅವನೀಗ ತನ್ನ ವ್ಯಕ್ತಿತ್ವವನ್ನು ಆ ಅಮಲಿಗೇ ಮಾರಿಕೊಂಡಂತಾಗಿತ್ತು. ಸ್ವೇಚ್ಛೆಯಿಂದ ಕಾಡಿನಲ್ಲಿ ತಿರುಗಿ ಸಾರ್ವಭೌಮತ್ವವನ್ನು ಬೆಳೆಸಿಕೊಂಡಿರುವ ಹುಲಿ ದೀರ್ಘಕಾಲದ ಬಂಧನದಿಂದಾಗಿ ಬೆಕ್ಕಿನಂತಾಗುವದು ಸಹಜ. ಇಡಿಯ ಜನ್ಮದಲ್ಲಿಯೇ ಸ್ವಇಚ್ಛೆ ಎಂಬದು ಕೇವಲ ಕನಸಿನ ಮುಂಡಿಗೆಯಾಗಿದ್ದು, ತನ್ನ ಸ್ವಭಾವ ಸಹಜವಾದ ಗುಣವು ವ್ಯಕ್ತ ಗೊಂಡಾಗಲೆಲ್ಲ ಅದು ಅಣ್ಣನ ಸ್ವಭಾವಕ್ಕೆ ಬಲಿಯಾಗಬೇಕಾಗಿ ಬಂದು ತಮ್ಮ ಭವಿಷ್ಯದ ನಿರ್ಧಾರದಲ್ಲಿ ತನ್ನ ಅಭಿಪ್ರಾಯವು ಎಂದಿಗೂ ಮಾನ್ಯವಾಗದೆ ಅಣ್ಣನು ಹೇಳಿದಂತೆ ಮಾತ್ರ ಅದು ರೂಪುಗೊಳ್ಳಬೇಕೆಂಬದನ್ನು ಹುಟ್ಟಿದಂದಿನಿಂದ ಈ ವರೆಗೂ ಕಂಡುಕೊಂಡಿರುವ ಭೀಮನು ಈಗಲೂ ಕೂಡ ತಾನು ಯುದ್ಧ ಬೇಕು ಎನ್ನುವದರಿಂದ ಏನು ಪರಿಣಾಮವಾದೀತೋ, ಯುದ್ಧ ಬೇಡವೆಂದರೂ ಅದೇ ಪರಿಣಾಮವಾಗುತ್ತದೆ ಎಂದು ನಂಬಿಕೊಂಡಿದ್ದರೆ ಅದು ಸಹಜವೇ ಆಗಿರಬೇಕು ತಾನೆ? ಭೀಮನ ವ್ಯಕ್ತಿತ್ವದ ಪ್ರಕಾಶಕ್ಕೆ ಈ ರೀತಿ ಪ್ರತಿ ಬಾರಿಯೂ ಮೋಡ ಕವಿದಂತಾಗಿ ಅವನ ವ್ಯಕ್ತಿತ್ವವು ವಿಕಾಸವಾಗುವದಕ್ಕೇ ಅವಕಾಶವಾಗದೆ ಹೋಗ ಬೇಕಾಗಿತ್ತು. ಅಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಅವನು ತನ್ನ ವ್ಯಕ್ತಿತ್ವ ವನ್ನು ಬೆಳೆಸಿಕೊಂಡಿದ್ದು ಅದು ಸಾಕಷ್ಟು ಪ್ರಭಾವಶಾಲಿಯಾಗಿತ್ತು ಎಂಬದು ಅವನ ವ್ಯಕ್ತಿತ್ವದ ಪ್ರಬಲತೆಯ ಕುರಿತಾಗಿ ನಾವು ತಿಳಿಯಬೇಕಾದ ಅವಶ್ಯ ಅಂಶ. ಕೇಳು. ಯುದ್ಧ ಬೇಡವೆಂಬ ಭೀಮನ ಅಭಿಪ್ರಾಯವು ನಮಗೇನು, ಕೃಷ್ಣನಿಗೇ ಆಶ್ಚರ್ಯವನ್ನುಂಟುಮಾಡಿತು. ಆಶ್ಚರ್ಯವೇನು, ಅವನಿಗೆ ದಿಗಿಲಾಯಿತು ಎಂಬದೇ ಹೆಚ್ಚು ಸರಿ. ಭೀಮನ ಅಭಿಪ್ರಾಯವನ್ನು ಕೇಳಿದ ಅವನು "ಶಿವ, ಶಿವಾ. ಭಯಂಕರವಾದ ಹಾಲಾಹಲ ವಿಷವು ಇಂದು ಶೀತಳವಾದ ಅಮೃತ ವಾಯಿತು. ಉಕ್ಕುತ್ತಿರುವ ಅಗ್ನಿಜ್ವಾಲೆಯು ಇಂದು ತಣ್ಣಗಾಯಿತು. ಪ್ರಚಂಡ ರಭಸದಿಂದ ಕೂಡಿದ ಸಿಡಿಲು ಮೆತ್ತಗಾಗಿಬಿಟ್ಟಿತು. ಭೀಮನು ಯುದ್ಧಕ್ಕೆ ಹೆದರಿದ್ದಾನೆ. ಕುಂತಿಯು ನಿಜವಾಗಿಯೂ ಮಕ್ಕಳನ್ನು ಹೆತ್ತಿದ್ದಾಳೆಯೆ! ಭೀಮಾ, ನಿನ್ನ ಪ್ರತಿಜ್ಞೆಯನ್ನೇ ನಂಬಿದ್ದ ನಿನ್ನ ಸೋದರರನ್ನು ನೀನು ನಡು ನೀರಿನಲ್ಲಿ ಕೈಬಿಟ್ಟಂತಾಯಿತು. ಇದು ನಿನಗೆ ಯೋಗ್ಯವಲ್ಲ. ಏಳು. ಎದ್ದು ನಿಲ್ಲು.

ನಿನ್ನ ಕುಲವನ್ನು ಯೋಚಿಸು. ಮನಸ್ಸನ್ನು ಸ್ಥಿರಗೊಳಿಸು ಎಂದು ಭೀಮನ ಮನಸ್ಸನ್ನು ಚುಚ್ಚಿ ಪ್ರಚೋದಿಸಿ ಮಾತನಾಡಿದನು.

ರಮೆ:– ಇದರಿಂದ ಏನು ಗೊತ್ತಾಗುತ್ತದೆ ? ಭೀಮನಿಗೆ ಒಬ್ಬ ಪ್ರಚೋದಕ ಇದ್ದರೆ ಮಾತ್ರ ಅವನಿಂದ ಕಾರ್ಯಸಾಧನೆಯಾಗುತ್ತದೆ ಎಂದು ತಿಳಿಯುವದಿಲ್ಲವೆ?

ಮುರಳಿ:– ಯಾರ ಪ್ರಚೋದನೆಯೂ ಇಲ್ಲದೆ ಸ್ವಯಂಪ್ರೇರಣೆಯಿಂದ ಪಾಂಡವರ ಭವಿಷ್ಯವನ್ನು ರೂಪಿಸಲು ಸಮರ್ಥನಾಗಿದ್ದ ಏಕಮಾತ್ರ ಪಾಂಡವ ಇತರ ನಾಲ್ವರಂತೆಯೇ ಸ್ಪಷ್ಟವಾದ ಅಭಿಪ್ರಾಯ ವ್ಯಕ್ತಪಡಿಸಲಾರದೆ ಹೋದನಲ್ಲಾ ಎಂಬ ಕೃಷ್ಣನ ಆತಂಕ ಇದರಿಂದ ತಿಳಿಯುತ್ತದೆ. ಅರ್ಜುನನಿಗಾದರೂ ತಾನು ಅವನ ಸಾರಥ್ಯವನ್ನು ವಹಿಸಿಕೊಂಡಿರುವದರಿಂದ ಅವನನ್ನು ಹೇಗೂ ತಾನು ನಡೆಸಿಕೊಂಡು ಹೋಗಬಹುದೆಂಬದು ಕೃಷ್ಣನಿಗೆ ತಿಳಿದಿತ್ತು. ಯುಧಿಷ್ಠಿರ, ನಕುಲ, ಸಹದೇವರಿಂದ ಕೃಷ್ಣನು ಬಹಳವಾಗಿ ಏನೂ ನಿರೀಕ್ಷಿಸಿರಲಿಲ್ಲ. ತನ್ನ ಭೂಭಾರಹರಣ ಕಾರ್ಯದಲ್ಲಿ ಭೀಮನೊಬ್ಬನೇ ಸ್ವಶಕ್ತಿಯಿಂದೊಡಗೂಡಿ ತನಗೆ ಸಹಾಯಕನಾಗುವವನು ಎಂಬದನ್ನು ಕೃಷ್ಣ ಚೆನ್ನಾಗಿ ತಿಳಿದುಕೊಂಡಿದ್ದುದರಿಂದಲೇ ಅಂತಹ ಭೀಮನು ಈಗ ವೈರಾಗ್ಯದ ಮಾತುಗಳನ್ನಾಡಿದಾಗ ಅವನಿಗೆ ಕಳವಳ ವಾದುದು. ಮುಂದೆ ಹಾಗೆಯೇ ಅವನು ಅರ್ಜುನನ ಅಭಿಪ್ರಾಯವನ್ನು ಕೇಳುತ್ತಾನೆ. ಅವನು, ಕೃಷ್ಣ ಹೇಗೆ ಹೇಳಿದರೆ ಹಾಗೆ ಮಾಡುವೆನೆನ್ನುತ್ತಾನೆ. ಇದಕ್ಕೆ ಕೃಷ್ಣ ಮರುಮಾತಾಡುವದಿಲ್ಲ. ನಕುಲನು ಯುದ್ಧ ಬೇಡವೆಂದೂ, ಸಹದೇವನು ಬೇಕೆಂದೂ ತಿಳಿಸುತ್ತಾರೆ. ಅನಂತರ ಕೃಷ್ಣನಿಂದ ಕರೆಸಲ್ಪಟ್ಟ ದ್ರೌಪದಿಯು ಸಭೆಗೆ ಬರುತ್ತಾಳೆ.

ರಮೆ:– ........ಮಧ್ಯೆ ಒಂದು ಪ್ರಶ್ನೆ. ಕ್ಷಮಿಸಿ. ಕುಂತಿ ನಿಜವಾಗಿಯೂ ಮಕ್ಕಳನ್ನು ಹೆತ್ತಿದ್ದಾಳೆಯೆ ಎಂದು ಕೃಷ್ಣ ಏಕೆ ಹೇಳಿದ?

ಮುರಳಿ:– ಅಂದರೆ, ಹೆತ್ತ ತಾಯಿಗೆ ಕೀರ್ತಿ ಬರುವಂತೆ ಕ್ಷಾತ್ರ ಧರ್ಮದಿಂದ ರಾಜ್ಯವನ್ನಾಳುವ ಸಾಮರ್ಥ್ಯ ಆಕೆಯ ಐದು ಮಕ್ಕಳಲ್ಲಿ ಭೀಮನೊಬ್ಬನಿಗೆ ಮಾತ್ರ ಇತ್ತೆಂದೂ, ಅವನು ವೈರಾಗ್ಯದ ಮಾತನ್ನಾಡುವಾಗ ಅಂತಹ ರಾಜ್ಯ ಸಂಪಾದನೆಯ ಅವಕಾಶ ತಪ್ಪಿಹೋಗಿ ಕುಂತಿಗೆ ಭೀಮನಂತಹ ಸಮರ್ಥ ಮಗನಿದ್ದರೂ ಇಲ್ಲದಂತಾಯಿತೆಂದೂ ಕೃಷ್ಣ ಹೇಳಿದಂತಾಯಿತು.

ರಮೆ:– ಅಂದರೆ ಉಳಿದ ನಾಲ್ವರು ಕುಂತಿಗೆ ಲೆಕ್ಕಕ್ಕಿಲ್ಲದ ಮಕ್ಕಳು ಎಂದು ಕೃಷ್ಣನೇ ಹೇಳಿದಂತಾಯಿತು.

ಮುರಳಿ:– ಲೆಕ್ಕಕ್ಕೋ, ಭೂಗೋಳಕ್ಕೋ, ಸುಮ್ಮನೆ ಕೇಳು. ರಭಸದಲ್ಲಿ ಸಭೆಗೆ ಬಂದ ದ್ರೌಪದಿಯಾದರೂ ಮೊದಲು ಮಾತನಾಡಿಸಿದುದು ಭೀಮನನ್ನು. "ಭೀಮಾ, ಸಂಧಿಗೆ ಒಪ್ಪಿಕೊಂಡೆಯಾ? ನಿನ್ನ ವೀರತನವನ್ನು ನೀರಿನಲ್ಲಿ ಕದಡಿ ಬಿಟ್ಟೆಯಾ? ದುರ್ಯೋಧನನು ನಿನ್ನನ್ನು ಹೊಗಳಿ ನಿನ್ನನ್ನು ತನ್ನ ಕೈವಶ ಮಾಡಿಕೊಂಡಿದ್ದಾನೆಯೆ? ಯುದ್ಧ ಬೇಡವೆಂದು ಕೃಷ್ಣನಿಗೇ ಬುದ್ಧಿ ಹೇಳಲು ಹೊರಟೆಯಾ? ಬಹುಮತಕ್ಕೆ ತಲೆಬಾಗಿ ನಿನ್ನ ಸ್ವಬುದ್ಧಿಯನ್ನು ಕಳೆದು ಕೊಂಡೆಯಾ?........

ರಮೆ:– ಹೇಳಿ. ಪಾಂಡವರ ಪಕ್ಷದಲ್ಲಿ ಭೀಮನೊಬ್ಬನದೇ ಎದ್ದು ಕಾಣುವ ಸ್ವತಂತ್ರವಾದ, ವಿಶಿಷ್ಟವಾದ ವ್ಯಕ್ತಿತ್ವ ಎಂಬದು ದ್ರೌಪದಿಯ ಮೂಲಕವೂ ಸ್ಪಷ್ಟವಾಯಿತು. ಹೇಳಿ. ನಿಮ್ಮ ಬುದ್ಧಿಗೆ ಜಡ್ಡು ಹಿಡಿಯುತ್ತಿದೆಯೇನು?

ಮುರಳಿ:– ನಿನ್ನ ಬುದ್ಧಿಗೆ ಹಿಡಿದ ಜಡ್ಡು ಬಿಡುತ್ತಿದೆಯಲ್ಲ. ನಾನು ಇನ್ನು ಅಷ್ಟೊಂದು ಜಾಗರೂಕನಾಗಿರಬೇಕಿಲ್ಲ. ಕೇಳು. ಅವಳು ಮುಂದುವರಿದು........ ನಿನ್ನಿಂದ ಬೆಳಗಬೇಕಾಗಿದ್ದ ಚಂದ್ರವಂಶವನ್ನು ನರಕಕ್ಕೆ ಇಳಿಸಿದೆಯಾ?" ಎಂದು ಮಾರ್ಮಿಕವಾಗಿ ಚುಚ್ಚಿ ಮಾತನಾಡಿದಳು.

ರಮೆ:– ಜಡ್ಡು ಗಿಡ್ಡುಗಳ ಜಾಡ್ಯ ಇರಲಿ. ಭೀಮನ ಬಗ್ಗೆ ಏನಾದರೂ ಸ್ವಲ್ಪ ಹೇಳಿ. ಸುಮ್ಮನೆ ಕತೆ ಓಡಿಸಿಕೊಂಡು ಹೋಗುತ್ತಿದ್ದೀರಲ್ಲ! ಕತೆಯ ಈ ಭಾಗ ಬಹಳ ವಿಶಿಷ್ಟವಾದುದು ಎಂದೆನಿಸುತ್ತದೆ. ಇಂತಹ ವಿಶಿಷ್ಟ ಪ್ರಸಂಗದಲ್ಲಿ ಭೀಮನ ಪಾತ್ರ ಬೃಹತ್ತಾಗಿ ಕಾಣಿಸಿಕೊಂಡು ಇತರ ಎಲ್ಲ ಪಾತ್ರಗಳನ್ನೂ ಮರೆ ಮಾಡಿದಂತೆ ಕಾಣಿಸುತ್ತದೆ. ನನಗೆ ವಿವರಿಸಲು ಬರುವದಿಲ್ಲ. ನೀವೇ ಸ್ವಲ್ಪ ಹೇಳಿ.

ಮುರಳಿ:– ನೀನೇ ಹೇಳುತ್ತಿದ್ದೀಯಲ್ಲ! ಹಾಗೆಯೇ ವಿಮರ್ಶೆ ಮಾಡಬೇಕು. ಒಂದು ವಿಷಯವನ್ನು ನಾವು ಮರೆಯಬಾರದು. ಮಹಾಭಾರತ ಕತೆಯ ತಳಪಾಯವೇ ದ್ರೌಪದಿ. ಅದರ ಜೀವಾಳ ಕೃಷ್ಣ. ಕತೆಗೆ ಕಾರಣ ದುರ್ಯೋಧನ. ಈ ಮೂವರ ದೃಷ್ಟಿ ನೆಟ್ಟಿದ್ದುದೂ ಭೀಮನ ಮೇಲೆಯೇ– ಭೀಮನೊಬ್ಬನ ಮೇಲೆಯೇ. ಇದು ಸಣ್ಣ ವಿಷಯವಲ್ಲ. ಮಹಾಭಾರತದಲ್ಲಿ ಭೀಮನ ಸ್ಥಾನವನ್ನು ಹುಡುಕಲು ಬೇರೆ ನಿದರ್ಶನಗಳು ಬೇಕೇ ಇಲ್ಲ. ನಿಜವಾಗಿ ಮಹಾ ಭಾರತದ ಕಥಾನಾಯಕ ಭೀಮನೇ. ಮುಂದೆ ಕೇಳು. ಭೀಮನನ್ನು ಭಂಗಿಸಿ ಮಾತನಾಡಿದ ಮೇಲೆ ದ್ರೌಪದಿಯು ಸಭೆಯನ್ನುದ್ದೇಶಿಸಿ "ಐದು ಊರುಗಳನ್ನು ಬೇಡಲು ಕಳುಹಿಸುವವನು ಹಿರಿಯನಾದ ಯುಧಿಷ್ಠಿರ; ಬೇಡಲು ಹೋಗುವವನು ಕೃಷ್ಣ; ಕೇಡಿಗರಾದ ಕೌರವರೊಡನೆ ಕೂಡಿ ಬದುಕುವವನು ಭೀಮ!" ಎಂದು ಪ್ರಮುಖರನ್ನೆಲ್ಲ ವ್ಯಂಗ್ಯವಾಗಿ ಮೂದಲಿಸಿ........

ರಮೆ:– ಅರ್ಜುನನನ್ನು ಕುರಿತು ಅವಳು ಏನೂ ಹೇಳಲಿಲ್ಲವೊ ?

ಮುರಳಿ:– ಹೇಳಿದಳೋ ಏನೋ; ನನಗೆ ಕೇಳಿಸಲಿಲ್ಲ. ಕೇಳು. ಅವರನ್ನೆಲ್ಲ ಅಷ್ಟು ಮೂದಲಿಸಿದರೂ ಯಾರೂ ಕೂಡ ಅವಳಿಗೆ ಸಮಾಧಾನವಾಗುವಂತೆ ಮಾತನಾಡದಿರುವದನ್ನು ನೋಡಿ, ರೇಗಿ, ವೀರ ರಮಣಿಗೆ ಉಚಿತವಾಗಿ ತನ್ನ ತಂದೆ, ಸಹದೇವ ಮೊದಲಾದ ಯುದ್ಧಾಪೇಕ್ಷಿಗಳ ಸಹಾಯದಿಂದಲೇ ತಾವು ಕೌರವರೊಂದಿಗೆ ಯುದ್ಧ ಮಾಡುವದು ನಿಶ್ಚಯವೆಂದು ಸ್ಪಷ್ಟವಾಗಿ ಹೇಳಿದಳು.

ಬಂಧನದಲ್ಲಿರುವ ಮೃಗರಾಜನು ತನ್ನ ರಾಜತ್ವವನ್ನು ಕಳೆದುಕೊಂಡಿದ್ದರೂ ರಾಜಗುಣವನ್ನು ಕಳೆದುಕೊಳ್ಳದಿರುವಂತೆ ಭೀಮನಿಗೆ ದ್ರೌಪದಿಯ ಕಳವಳವು ಅಸಹನೀಯವೆನಿಸಿತು. ದ್ರೌಪದಿ ಕೌರವರಿಂದ ಪಡೆದ ಅನ್ಯಾದೃಶ ಅವಮಾನಗಳು ಅವನ ಸ್ಮೃತಿಪಟಲದಲ್ಲಿ ಅಚ್ಚೊತ್ತಿದ್ದುದು ಈಗ ಕಣ್ಣ ಮುಂದೆ ನಿಂತವು. ಕೌರವರ ಕ್ರೌರ್ಯದ ಚಿತ್ರಗಳು ಅವನ ಮನೋಪಟಲದಲ್ಲಿ ಮೂಡಿ ಅಣಕಿಸುತ್ತಿದ್ದವು. ಅವನು ಈಗ ಅಣ್ಣನ ಇರವನ್ನು ಗಮನಿಸುವಂತಿರಲಿಲ್ಲ. ತಾನಿದ್ದ ಲೋಕವನ್ನೇ ಅವನು ಕಾಣುತ್ತಿರಲಿಲ್ಲ. ಅವನ ಧೀಮಂತ ವ್ಯಕ್ತಿತ್ವ ಮೂರು ಲೋಕವನ್ನೂ ಆವರಿಸಿ ಮುಚ್ಚಿಬಿಟ್ಟಿತ್ತು. ಸಾಮಾಜಿಕ ಅನ್ಯಾಯದ ಹೆಡತಲೆಗೆ ಒದೆಯಬೇಕೆನ್ನುವ ಅವನ ಸ್ವಭಾವ ಸಹಜವಾದ ವ್ಯಕ್ತಿತ್ವದ ಮುಂದೆ ಮೂರು ಲೋಕಗಳೂ ಕಣ್ಮರೆಯಾಗಿಬಿಟ್ಟವು. ಪ್ರಪಂಚದ ಯಾವ ಶಕ್ತಿಯೂ ಅವನ ವ್ಯಕ್ತಿತ್ವದ ಸಮೀಪ ಕೂಡ ಈಗ ಸುಳಿಯುವಂತಿರಲಿಲ್ಲ. ಅಣ್ಣನ ಇಚ್ಛೆಯನ್ನೇ ಕಡೆಗಣಿಸಿದ ಅವನು ಈಗ ಬೇರೆ ಯಾವದನ್ನೂ ಗಮನಿಸಬೇಕಾಗಿರಲಿಲ್ಲ. ಅವನಿದ್ದಾನೆ, ಕೌರವರಿದ್ದಾರೆ. ಲೋಕದ ಇತರ ಎಲ್ಲವೂ ಈಗ ಅಗಣ್ಯ. ಕ್ರುದ್ಧನಾದ ಅವನು ದ್ರೌಪದಿಯನ್ನು ಸಮಾಧಾನಪಡಿಸುತ್ತಾ "ತರುಣಿ, ಸೈರಿಸು. ನಿನ್ನ ಕಣ್ಣುಗಳಲ್ಲಿ ಈಗ ಹರಿಯುತ್ತಿರುವ ಈ ಕಣ್ಣೀರಿನ ಸಾವಿರ ಪಾಲಿನಷ್ಟು ಕಣ್ಣೀರನ್ನು ನಿನ್ನ ಶತ್ರುಗಳ ಹೆಂಡಿರ ಕಣ್ಣಿನಿಂದ ಸುರಿಸುತ್ತೇನೆ" ಎಂದು ಹೇಳಿ ಮುರಿದೆದ್ದ ತನ್ನ ಮೀಸೆಯನ್ನು ಹುರಿಮಾಡುತ್ತಾ, ಎತ್ತಿದ್ದ ತನ್ನ ಎಡಗೈಯಿಂದ ದ್ರೌಪದಿಯ ಕೆದರುಗೂದಲನ್ನು ನೇವರಿಸುತ್ತಾ ಕೃಷ್ಣನನ್ನು ಕುರಿತು "ಕೃಷ್ಣಾ, ನನಗೆ ಕೌರವ ನಾಯಿಗಳು ಸಮಾನ ಶತ್ರುಗಳಲ್ಲ. ಕುಲಗಿರಿಗಳನ್ನು ಕೀಳಬಲ್ಲೆ. ಯಮನ ಹಣೆಯ ಬರಹವನ್ನು ತಿದ್ದಬಲ್ಲೆ. ಅಣ್ಣನ ಮೇಲಿನ ಗೌರವದಿಂದ ಈ ಹಿಂದೆ ನಾನು ಸಂಧಿಗೆ ಒಪ್ಪಿದೆ. ಇಲ್ಲ, ಇಲ್ಲ. ಈ ಅಬಲೆಯ ಪ್ರತಿಜ್ಞಾಪೂರೈಕೆಯು ನನ್ನ ಹಿರಿಯ ಕರ್ತವ್ಯ. ನನಗೆ ಸಂಧಿಯಲ್ಲಿ ಎಳ್ಳಷ್ಟೂ ಮನಸ್ಸಿಲ್ಲ. ಯುದ್ಧವೇ ನನ್ನ ದೃಢ ನಿಶ್ಚಯ. ಈಗ ಉದ್ಭವವಾಗಿರುವ ಈ ನನ್ನ ಕೋಪವು ಉಪಶಮನವಾಗುವದು ಶತ್ರುಗಳ ಬಿಸಿ ರಕ್ತವನ್ನು ನಾನು ಕುಡಿದ ಮೇಲೆಯೇ. ನೀನು ಬೇಕಿದ್ದರೆ ಹೋಗಿ ಕೌರವರನ್ನು ಬೇಡಿ ಇವರಿಗೆ ನಾಲ್ಕು ಗ್ರಾಮಗಳನ್ನು

ಕೊಡಿಸು. ನಾನು ಗ್ರಾಮದ ಬದಲು ಕೌರವನ ಎರಡು ತೊಡೆಗಳನ್ನು ನಾನಾಗಿಯೇ ಪಡೆದುಕೊಳ್ಳುತ್ತೇನೆ. ನನ್ನ ಮತ್ತು ನನ್ನ ಪತ್ನಿಯ ಪ್ರತಿಜ್ಞೆಗಳನ್ನು ಪೂರೈಸದಿರಲಾರೆ. ಯುಧಿಷ್ಠಿರ, ಅರ್ಜುನ ಮತ್ತು ನಕುಲ – ಇವರ ಅಭಿಪ್ರಾಯಕ್ಕೆ ನಾವು ವಿರೋಧಿಗಳು. ನೀನು ಹೋಗಿ ಸಂತೋಷದಿಂದ ಸಂಧಿಯನ್ನು ಮಾಡಿ ಬಾ" ಎಂದನು.

ರಮೆ:– ಸಂಧಿ ಬೇಡ, ಯುದ್ಧವೇ ಬೇಕು ಎಂದು ಹೇಳುವದಕ್ಕೆ ಭೀಮ ಇಷ್ಟೆಲ್ಲ ಅಬ್ಬರದ ಮಾತುಗಳನ್ನಾಡಬೇಕಿತ್ತು ಎನ್ನುತ್ತೀರಾ ?

ಮುರಳಿ:– ಹುಟ್ಟಿದಂದಿನಿಂದ ಕಾಡಿನಲ್ಲಿ, ಸಾವಿನ ದವಡೆಯಲ್ಲಿ, ಕಷ್ಟಗಳ ಸುಳಿಯಲ್ಲಿ ಅಲೆದು, ಅಲೆದು ಈಗ ತಮ್ಮ ಮುಂದಿನ ಭವಿಷ್ಯ ಹೇಗಿರಬೇಕೆಂಬದನ್ನು ಅಂತಿಮವಾಗಿ ನಿರ್ಧರಿಸುವ ಪ್ರಮುಖ ಸಮಯ ಬಂದಿರುವಾಗ ಇಂತಹ ಸಂದರ್ಭದಲ್ಲಿ ನೀಡುವ ಅಭಿಪ್ರಾಯವು ಹತ್ತಿಯಂತಿರದೆ ಉಕ್ಕಿನಂತೆಯೇ ಇರಬೇಕು ಎಂಬ ಪರಿಸ್ಥಿತಿಯನ್ನು ಊಹಿಸಿಕೊಳ್ಳಲಾರದ ನಿನ್ನಂತಹ........

ರಮೆ:– ಅದೆಲ್ಲ ಬೇಡಿ. ಊಹಿಸಿಕೊಳ್ಳಬೇಕು ಎನ್ನಿ, ಸಾಕು. ನಿನ್ನಂತಹ, ಅವರಂತಹ, ಎಂದು ಮುಂತಾದ ಬೈಗಳು ಬೇಡ. ಮುಂದಕ್ಕೆ ಅಪ್ಪಣೆ ಕೊಡಿಸಿ.

ಮುರಳಿ:– ಕೊಡಿಸುತ್ತೇನೆ, ಕೇಳು. ಈ ಅಭಿಪ್ರಾಯ ಸಂಗ್ರಹ ಕಾರ್ಯಕ್ರಮದ ಕೊನೆಯ ತೀರ್ಪಾಗಿ ಯುಧಿಷ್ಠಿರನು ತಮಗೆ ದುರ್ಯೋಧನನು ಐದು ಗ್ರಾಮಗಳನ್ನು ಕೊಟ್ಟರೆ ತಾವು ಅದನ್ನು ಒಪ್ಪಿಕೊಳ್ಳುತ್ತೇವೆಂದೂ, ಅಷ್ಟನ್ನೂ ಕೊಡಲು ಅವನು ಒಪ್ಪಲಿಲ್ಲವಾದರೆ ಯುದ್ಧವನ್ನೇ ನಿಶ್ಚಯಿಸಬೇಕಾಗುತ್ತದೆಂದೂ ತಿಳಿಸಿದನು. ಕೃಷ್ಣನು ಮಾರನೆಯ ದಿನ ಹಸ್ತಿನಾವತಿಗೆ ಹೊರಟನು. ಭೀಮನು ಕೃಷ್ಣನನ್ನು ಸಮೀಪಿಸಿ ಅವನು ಯುದ್ಧವನ್ನೇ ನಿಶ್ಚಯಿಸಿಕೊಂಡು ಬರಬೇಕೆಂದು ಒತ್ತಾಯಿಸಿ ಅದಕ್ಕೆ ಅವನ ಭರವಸೆಯನ್ನೂ ಪಡೆದು ಹಿಂದಿರುಗಿದನು. ದ್ರೌಪದಿಯೂ ಅದೇ ರೀತಿ ಬಂದು ಕೃಷ್ಣನಲ್ಲಿ ತನ್ನ ದುಃಖವನ್ನೆಲ್ಲ ತೋಡಿಕೊಂಡು ಅವನಿಂದ ಯುದ್ಧ ಸಾಧ್ಯತೆಯ ದೃಢವಾದ ಭರವಸೆಯನ್ನು ಪಡೆದು ಹಿಂದಿರುಗಿದಳು.

ರಮೆ:– ಹಸ್ತಿನಾವತಿಗೆ ಹೋಗುವದಕ್ಕೆ ಮುಂಚೆಯೇ ಕೃಷ್ಣನು ಇವರಿಗೆಲ್ಲ ಯುದ್ಧವನ್ನೇ ತೀರ್ಮಾನಿಸುವ ಭರವಸೆಯನ್ನು ಹೇಗೆ ಕೊಟ್ಟ ?

ಮುರಳಿ:– ವ್ಯಕ್ತಿಗಳ ಸ್ವಭಾವ, ನಡವಳಿಕೆ, ರಾಜಕಾರಣ ಇವುಗಳನ್ನು ತಿಳಿಯಾಗಿ ವಿಮರ್ಶಿಸುವ ವಿಚಕ್ಷಣೆ ಇದ್ದ ಕೃಷ್ಣನಿಗೆ ಮುಂದೆ ಏನಾಗುವದೆಂಬದನ್ನು ಊಹಿಸಲು ಕಷ್ಟವಾಗಲಿಲ್ಲ. ಕೇಳು. ಕೃಷ್ಣನು ಹಸ್ತಿನಾವತಿಗೆ ಹೋಗಿ, ಅಲ್ಲಿ ತನ್ನ ಬರವಿಗಾಗಿ ಕಾಯುತ್ತಿದ್ದ ದುರ್ಯೋಧನ ಮೊದಲಾದ ಯಾರ ಮನೆಗೂ

ಹೋಗದೆ ವಿದುರನ ಮನೆಗೆ ಹೋಗಿ ಅಲ್ಲಿ ತಂಗಿದನು. ಮಾರನೆಯ ದಿನ ಅವನು ತನ್ನ ಬರವಿಗಾಗಿಯೇ ವಿಶೇಷವಾಗಿ ಸಜ್ಜಾಗಿದ್ದ ದುರ್ಯೋಧನನ ಸಭೆಗೆ ಹೋದನು. ಕೃಷ್ಣನು ತಮ್ಮಗಳ ಮನೆಗೆ ಬಾರದೆ ವಿದುರನಲ್ಲಿ ತಂಗಿದುದಕ್ಕಾಗಿ ದುರ್ಯೋಧನನು ಕೃಷ್ಣನನ್ನೂ ವಿದುರನನ್ನೂ ಕೀಳಾಗಿ ಹಳಿದನು. ಇದರಿಂದ ಸಿಟ್ಟುಗೊಂಡ ಮಹಾರಥನಾದ ವಿದುರನು ತಾನು ಮುಂದಿನ ಯುದ್ಧದಲ್ಲಿ ದುರ್ಯೋಧನನ ಸಹಾಯಕ್ಕೆ ಒದಗುವದಿಲ್ಲವೆಂಬದನ್ನು ತೋರಿಸುವದಕ್ಕಾಗಿ ತನ್ನ ಬಿಲ್ಲನ್ನು ಆ ಸಭೆಯಲ್ಲಿಯೇ ಮುರಿದುಹಾಕಿದನು. ಇದರಿಂದ ಮನಸ್ಸಿನೊಳಗೇ ಹರ್ಷಗೊಂಡ ಕೃಷ್ಣನು ದುರ್ಯೋಧನನಿಗೆ ಬುದ್ಧಿ ಹೇಳುತ್ತಾ, ಅವನ ಸೈನ್ಯದ ಸಮಸ್ತ ರಾಜರು ಒಟ್ಟು ಸೇರಿದರೂ ಯುದ್ಧದಲ್ಲಿ ಸಿಟ್ಟುಗೊಂಡು ನಿಲ್ಲುವ ಭೀಮನ ಮುಖವನ್ನು ನೋಡಲು ಕೂಡ ಅವರು ಸಮರ್ಥರಾಗುವದಿಲ್ಲವೆಂದೂ, ಅರ್ಜುನನು ಕೌರವರ ಪಕ್ಷದ ಎಲ್ಲ ಬಿಲ್ಲಾಳುಗಳನ್ನೂ ಗೆಲ್ಲಬಲ್ಲವನೆಂದೂ ತಿಳಿಸಿದನು. ದುರ್ಯೋಧನನು ಇದ್ಯಾವದನ್ನೂ ಕಿವಿಗೇ ಹಾಕಿಕೊಳ್ಳದೆ ಪಾಂಡವರಿಗೆ ತಾನು ಕೊಡುವದು ಯುದ್ಧ ಭೂಮಿಯನ್ನು ಮಾತ್ರ ಎಂದು ಸ್ಪಷ್ಟಪಡಿಸಿದನು. ಸಂಧಿಯು ಮುರಿದು ಬಿದ್ದಿತು. ಹಿಂದೆ ಹೊರಟ ಕೃಷ್ಣನು ಕರ್ಣನನ್ನು ಏಕಾಂತದಲ್ಲಿ ಕರೆದು ಅವನು ಪಾಂಡವರ ಹಿರಿಯಣ್ಣನೆಂದು ತಿಳಿಸಿ ಅವನ ಮನಸ್ಸನ್ನು ಪ್ರಕ್ಷುಬ್ಧಗೊಳಿಸಿ ಅವನ ಕ್ರೂರವಾದ ಬಾಣಗಳಿಗೆ ಪಾಂಡವರು ಬಲಿಯಾಗುವ ಸಾಧ್ಯತೆಯನ್ನು ಬಹಳ ಮಟ್ಟಿಗೆ ಇಲ್ಲದಂತೆ ಮಾಡಿದನು. ಕೃಷ್ಣನ ಪ್ರೇರಣೆಯ ಪ್ರಕಾರ ಕುಂತಿಯೂ ಕರ್ಣನನ್ನು ಜೀವನದಲ್ಲಿ ಪ್ರಥಮ ಬಾರಿಗೆ ಏಕಾಂತದಲ್ಲಿ ಕಂಡು ಅವನು ಒಮ್ಮೆ ತೊಟ್ಟ ಬಾಣವನ್ನು ಪುನಃ ತೊಡಬಾರದೆಂಬದಕ್ಕೆ ಅವನಿಂದ ಭರವಸೆಯನ್ನು ಪಡೆದು ಹಿಂದಿರುಗಿದಳು.

ರಮೆ:– ಕೃಷ್ಣನ ಈ ಭೇದೋಪಾಯದ ರಹಸ್ಯವೇನು ?

ಮುರಳಿ:– ಅರ್ಜುನನ ಪ್ರಾಣ ರಕ್ಷಣೆ.

ರಮೆ:– ಅದು ಹೇಗೆ ?

ಮುರಳಿ:– ಹೌದು. ವಿದುರ, ಕರ್ಣ, ಭೀಷ್ಮ, ದ್ರೋಣ–ಈ ನಾಲ್ವರು ಮಹಾನ್ ಬಿಲ್ಲಾಳುಗಳನ್ನೂ ಸತ್ವಹೀನರಾಗಿ ಮಾಡಿದವನು ಕೃಷ್ಣ. ಈ ನಾಲ್ವರಲ್ಲಿ ಯಾರೊಬ್ಬನ ಮುಂದೆಯೂ ಅರ್ಜುನನು ನಿಲ್ಲಲಾರನೆಂಬದು ಕೃಷ್ಣನಿಗೆ ತಿಳಿದಿತ್ತು. ಭೀಮನು ಎದುರಿಸಬೇಕಾಗಿದ್ದ ಯಾರಲ್ಲಿಯೂ ಕೃಷ್ಣನು ಇಂತಹ ಭೇದವನ್ನು ಪ್ರಯೋಗಿಸಲಿಲ್ಲ. ಬದಲು ಅವರ ಎದುರಿನಲ್ಲಿ ಭೀಮನ ಪರಾಕ್ರಮ ವನ್ನು ಹೊಗಳಿ ಅವರನ್ನು ಇನ್ನೂ ಹೆಚ್ಚು ಕ್ರುದ್ಧರನ್ನಾಗಿಯೇ ಮಾಡಿದನು. ಇದನ್ನೆಲ್ಲ ಮುಂದೆ ತಿಳಿಯುವೆ. ಕೇಳು.

ಹಿಂತಿರುಗಿ ಬರುತ್ತಿದ್ದ ಕೃಷ್ಣನನ್ನು ದೂರದಿಂದಲೇ ಕಂಡ ಭೀಮನು ಯುದ್ಧವೇ ನಿಶ್ಚಯವಾಗಿರಬಹುದೆಂದು ಊಹಿಸಿದನು. ಕೃಷ್ಣನಿಂದ ಎಲ್ಲ ವಿದ್ಯಮಾನಗಳನ್ನೂ ತಿಳಿದ ಪಾಂಡವರು ದುರ್ಯೋಧನನು ಕೃಷ್ಣನನ್ನು ಕಟ್ಟಿಹಾಕಲು ನಡೆಸಿದ ಪ್ರಯತ್ನವನ್ನೂ ತಿಳಿದುಕೊಂಡರು. ಭೀಮನು ಸಖೇದಾನಂದದಿಂದ "ಭೃತ್ಯರ ಅವಮಾನಗಳನ್ನು ಸಹಿಸಿ ಅವರನ್ನು ಕಾಪಾಡುವದು ಒಡೆಯನ ಕರ್ತವ್ಯವಾದಂತೆ ನೀನು ಅವಮಾನವನ್ನು ಸಹಿಸಿ ಯುದ್ಧವನ್ನೇ ನಿಶ್ಚಯಿಸಿರುವೆ. ಇನ್ನು ಯಮುನಿಗೆ ಹೇರಳವಾದ ಔತಣವನ್ನು ನಾನು ಒದಗಿಸುತ್ತೇನೆ" ಎಂದನು. ಪಾಂಡವರ ಏಳು ಅಕ್ಷೌಹಿಣೀ ಸೈನ್ಯವು ಸಿದ್ಧವಾಯಿತು. ಈ ನಡುವೆ ಬಲರಾಮನು, ಭೀಮ–ದುರ್ಯೋಧನರಿಬ್ಬರೂ ತನ್ನ ಶಿಷ್ಯರಾಗಿದ್ದುದರಿಂದ ತಾನು ಮುಂದಿನ ಯುದ್ಧದಲ್ಲಿ ಯಾವ ಪಕ್ಷಕ್ಕೂ ಸೇರಲೊಲ್ಲದೆ ತೀರ್ಥಯಾತ್ರೆಗೆ ಹೊರಟುಹೋದನು. ಧೃಷ್ಟದ್ಯುಮ್ನನ ಸೇನಾ ನಾಯಕತ್ವದಲ್ಲಿ ಶುಭ ಮುಹೂರ್ತದಲ್ಲಿ ಹೊರಟ ಪಾಂಡವ ಸೈನ್ಯವು ಕುರುಕ್ಷೇತ್ರವನ್ನು ಸೇರಿ ಪಶ್ಚಿಮ ದಿಕ್ಕಿನಲ್ಲಿ ಬೀಡುಬಿಟ್ಟಿತು.

ಈ ಕಡೆ ದುರ್ಯೋಧನನು ತನ್ನವರೊಡನೆ ಸಮಾಲೋಚನೆ ನಡೆಸಿದನು. ಕರ್ಣನು ತನ್ನ ಒಡೆಯನಲ್ಲಿ ಧೈರ್ಯವನ್ನು ತುಂಬಿ, ಎದುರಿಸಲೇಬೇಕಾಗಿದ್ದ ಮುಂದಿನ ಯುದ್ಧದಲ್ಲಿ ಗೆಲುವು ಖಂಡಿತ ತಮ್ಮದಾಗುತ್ತದೆಂಬ ವಿಶ್ವಾಸ ಹುಟ್ಟಿಸಿದನು. ದ್ರೋಣನು ಕರ್ಣನನ್ನು ಹೀನಾಯವಾಗಿ ಹಳಿದು ದುರ್ಯೋಧನನಿಗೆ ಸೋಲು ನಿಶ್ಚಯವೆಂದು ವಾದಿಸಿದನು. ಭೀಷ್ಮನೂ ದುರ್ಯೋಧನನಿಗೆ ಬುದ್ಧಿ ಹೇಳಿದನು. ಆದರೆ ದುರ್ಯೋಧನನು ಯುದ್ಧದ ಹೊರತು ಬೇರಾವ ಮಾತನ್ನೂ ಕೇಳುವ ಸ್ಥಿತಿಯಲ್ಲಿ ಇರಲಿಲ್ಲವಾದುದರಿಂದ ಅವನ ಇಚ್ಛೆಯಂತೆ ಭೀಷ್ಮನು ಕೌರವ ಸೈನ್ಯದ ಆಧಿಪತ್ಯವನ್ನು ವಹಿಸಿದನು. ಕೌರವ ಸೈನ್ಯವೂ ಕುರುಕ್ಷೇತ್ರವನ್ನು ಸೇರಿತು. ವೇದವ್ಯಾಸರ ಅನುಗ್ರಹದಿಂದ ಸಂಜಯನು ಕುರುಕ್ಷೇತ್ರದಲ್ಲಿ ನಡೆಯುತ್ತಿದ್ದ ವಿದ್ಯಮಾನಗಳನ್ನೆಲ್ಲ ಅರಮನೆಯಲ್ಲಿ ಕುಳಿತಲ್ಲಿಂದಲೇ ತಿಳಿಯುವ ಸಾಧ್ಯತೆಯನ್ನು ಪಡೆದು ಹಾಗೆ ನಡೆಯುತ್ತಿದ್ದುದನ್ನೆಲ್ಲ ಕುರುಡನಾದ ಧೃತರಾಷ್ಟ್ರನಿಗೆ ವಿವರಿಸಿ ಹೇಳುತ್ತಿದ್ದನು.

ಪಾಂಡವರ ಸೈನ್ಯವು ಸಜ್ಜಾಗಿ ನಿಂತಿತು. ಯುಧಿಷ್ಠಿರನ ಆಜ್ಞೆಯ ಪ್ರಕಾರ ಅರ್ಜುನನು ಸೇನಾವ್ಯೂಹವನ್ನು ರಚಿಸಿದನು. ಭೀಮನು ಸಮಸ್ತ ಪಾಂಡವ ಸೈನ್ಯಕ್ಕೂ ರಕ್ಷಕನಾಗಿ ನಿಂತನು.

ರಮೆ:– .... ಎಲ್ಲಿಂದೆಲ್ಲಿಗೆ .... !

ಮುರಳಿ:-- ಸಮಸ್ತ ಪಾಂಡವ ಸೈನ್ಯಕ್ಕೆ ಎಂದರೆ ಒಂದು ತುದಿಯಿಂದ ಇನ್ನೊಂದು ತುದಿಯವರೆಗೂ. ಅದರಲ್ಲಿ ಎಲ್ಲಿಂದೆಲ್ಲಿಗೆ ಅಂತ ಏನು !

ರಮೆ:– ಸಮಸ್ತ ಎಂದರೆ ಎಷ್ಟು ಅಂತ ನನಗೂ ಗೊತ್ತು. ನಾನು ಏನೋ ಹೇಳಿದರೆ ನೀವು ಏನೋ ಹೇಳುತ್ತೀರಿ.

ಮುರಳಿ:– ನೀನು ಏನು ಹೇಳಿದ್ದು ?

ರಮೆ:– ಅಲ್ಲ ! ಮೊನ್ನೆ ಮೊನ್ನೆ ಕತೆ ಪ್ರಾರಂಭಿಸುವಾಗ ಪಾಂಡವರು, ಕೌರವರು ಇನ್ನೂ ಮಕ್ಕಳಾಗಿದ್ದು ಅವರ ಪರಸ್ಪರ ದ್ವೇಷದ ಕತೆ ಕೇಳುವಾಗ ಏನೋ ಒಂದು ರೀತಿಯ ಹುಡುಗಾಟ ಎನಿಸುತ್ತಿತ್ತು. ಈಗ ಅವರಿಬ್ಬರೇ ರಣರಂಗದಲ್ಲಿ ಪರಸ್ಪರರಿಗೆ ಎದುರಾಗಿ ನಿಂತು ಪರಸ್ಪರರ ಸರ್ವನಾಶಕ್ಕೆ ತೊಡಗಿದ್ದಾರೆ. ಸಾಲದುದಕ್ಕೆ ಅವರು ಲಕ್ಷಾಂತರ ಪ್ರಜೆಗಳ ರಕ್ತ ಬಲಿಕೊಡಲೂ ಸಿದ್ಧರಾಗಿದ್ದಾರೆ. ಇದನ್ನು ಹೇಳಿದೆ. ಇರಲಿ, ಮುಂದಕ್ಕೆ ಹೇಳಿ.

ಮುರಳಿ:– ಹೇಳುತ್ತೇನೆ. ಕೇಳುತ್ತೀಯಾ ?

ರಮೆ:– ಇದೊಂದೇನು ಹೊಸ ರಾಗ, ಕೇಳುತ್ತೀಯಾ ಎಂದು ? ಇಷ್ಟು ದಿನ ಕೇಳದೆ ಮತ್ತೇನು ಮಾಡಿದೆ ?

ಮುರಳಿ:– ಕೇಳಿದ್ದೀಯ. ಈಗಲೂ ಹೇಳುತ್ತೇನೆ. ಕೇಳುತ್ತೀಯ ತಾನೆ?

ರಮೆ:– ನಿಮಗೇನಾಗಿದೆ ಅಂತ ?

ಮುರಳಿ:– ಏನೋ ಆಗಿದೆ ಎಂದು ನನಗೂ ಅನಿಸುತ್ತದೆ ರಮಾ. ನಾನು ಹೇಳಿದ್ದನ್ನು ಕೇಳುತ್ತೀ ತಾನೆ ?

ರಮೆ:– ಏನಾಗಿದೆ ಅಂತ ? ಯಾಕೆ, ಏನಾಯಿತು ?

ಮುರಳಿ:– ಯಾಕೆ ಎಂಬದು ಸ್ವಲ್ಪ ಸ್ವಲ್ಪ ಅರ್ಥವಾಗುತ್ತದೆ. ಆದರೆ ಏನಾಗಿದೆ ಎಂಬದನ್ನು ಹೇಳಲು ಏನೋ ಅಂಜಿಕೆ.

ರಮೆ:– ಒಳ್ಳೆ ಮಾತು. ಯಾಕೆ ಹೀಗಾಯಿತು ?

ಮುರಳಿ:– ಸಹವಾಸ ದೋಷ.

ರಮೆ:– ಏನು ಸಹವಾಸ ?

ಮುರಳಿ:– ಇನ್ನೇನು ಸಹವಾಸ ? ನನಗೆ ಇಷ್ಟು ಹೊತ್ತೂ ಬೇರೆ ಯಾವ ಸಹವಾಸ ಹೇಳು ?

ರಮೆ:– ........ಆ ಸಹವಾಸದಿಂದಾಗಿ ಏನು ದೋಷ ಉಂಟಾಗಿದೆ ?

ಮುರಳಿ:– ........ಕತೆ ಸಾಕು........ಅನಿಸುತ್ತಿದೆ.

ರಮೆ:– ಹಾಗಿದ್ದರೆ ಇಲ್ಲಿ ಕೂರುವದು ಅಪಾಯ. ಕತ್ತಲೂ ಆಯಿತು. ಏಳಿ. ನಾಳೆ ಮುಂದುವರಿಸೋಣ.

ಮುರಳಿ:– ಏಳುವದು ಕತೆಯು ಪ್ರಾರಂಭವಾಗಬೇಕೇ ಹೊರತು, ಮುಕ್ತಾಯವಾಗಬಾರದು. ಹಾಗಾದರೆ ಏಳುತ್ತೇನೆ........ಅಯ್ಯೋ, ಎದ್ದೇಬಿಟ್ಟಿ ಯೇನು ?...........ಮೌನವು ಸಮ್ಮತಿಯ ಲಕ್ಷಣ ಎಂದು ನೀನು ಹಿಂದೆ ಹೇಳಿ ದುದು ಎಷ್ಟು ಸರಿ ! ಅಲ್ಲ ರಮಾ ?

††††††

# ಏಳನೆಯ ಸಂಜೆ

ರಮೆ:– ಅದೇನಪ್ಪ ಅದು, ಅಷ್ಟು ತನ್ಮಯತೆಯಿಂದ ಓದುತ್ತಿರುವದು ?

ಮುರಳಿ:– ........ಒಂದು ನಿಮಿಷ. ಒಂದೇ ನಿಮಿಷ........

ರಮೆ:– ಒಂದಲ್ಲದಿದ್ದರೆ ಐದು ನಿಮಿಷ ತೆಗೆದುಕೊಳ್ಳಿ. ಅದೇನು ಓದುತ್ತಿರುವದು ಎಂದು ಕೇಳಿದೆ, ಅಷ್ಟೆ.

ಮುರಳಿ:– ಇರು ರಮಾ. ಒಂದು ನಿಮಿಷ. ಒಂದೇ ನಿಮಿಷ.

ರಮೆ:– ಅಬ್ಬ ! ನೀವು ಅಷ್ಟು ಮೈಮರೆತಂತೆ ಓದಬೇಕಾದರೆ ಅದೇನೋ ವಿಶೇಷವಾದುದಿರಬೇಕು. ಹೋಗಲಿ ಗಟ್ಟಿಯಾಗಿ ಆದರೂ ಓದಿ. ನಾನೂ ಕೇಳುತ್ತೇನೆ.

ಮುರಳಿ:– ಇರು, ಕೊಟ್ಟೆ, ಒಂದೇ ನಿಮಿಷ.

ರಮೆ:– ನಿಮಿಷ ಮೂರಾಯಿತು. ಅದೇನದು ನಾನು ಓದಬಾರದೇನು ? ಕೊಡಿ ಇಲ್ಲಿ, ನಾನು ಗಟ್ಟಿಯಾಗಿ ಓದುತ್ತೇನೆ........ಕೊಡಿ.

ಮುರಳಿ:– ನೀನು ಒಳ್ಳೇ ಕೀಟಲೆ ಹುಡುಗಿ. ಹೋಗಲಿ, ಕಿತ್ತುಕೋ. ನಾನು ಆಮೇಲೆ ಯಾವಾಗಲಾದರೂ ಓದಿಕೊಳ್ಳುತ್ತೇನೆ.

ರಮೆ:– ಆಮೇಲೆ ಬೇಡ. ಈಗಲೇ ಕೇಳಿ. ನಾನೇ ಗಟ್ಟಿಯಾಗಿ ಓದುತ್ತೇನೆ, ನೀವೂ ಕೇಳಿ.

ಮುರಳಿ:– ಏನಾದರೂ ಮಾಡು. ನಾನು ಬೇಡವೆಂದರೂ ನೀನು ಕೇಳಬೇಕಲ್ಲ.

ರಮೆ:– ಓದಲೇನು ?

ಮುರಳಿ:– ಓದು. ಅರ್ಧ ಓದುವಾಗ ಏನೋ ಹುಚ್ಚು ಬರವಣಿಗೆ ಅಂತ ನೀನೇ ನಿಲ್ಲಿಸುತ್ತೀ. ಓದು ;

ರಮೆ:– ಅದೇನು ? ನಿಮ್ಮನ್ನು ಮೈ ಮರೆಸುವ ಬರವಣಿಗೆ ನನಗೆ ಮಾತ್ರ ಹುಚ್ಚು ಎಂದು ಕಾಣಿಸಲು ಅದೇನು ಕಾರಣ ? ಓದಿಯೇಬಿಡುತ್ತೇನೆ. ನೋಡೋಣ.

ಮುರಳಿ:– ಓದು, ನನಗೇನು !

ರಮೆ:– ಇದೇನು ನಿಮ್ಮ ಕೈ ಬರವಣಿಗೆಯಲ್ಲಿದೆ ?

ಮುರಳಿ:– ಹೌದು, ನಾನೇ ಬರೆದಿಟ್ಟುಕೊಂಡದ್ದು.

ರಮೆ:– ಯಾವದರಿಂದ ?.

ಮುರಳಿ:– ಮೂಲದಿಂದ.

ರಮೆ:– ಮೂಲ ಯಾವದು ?.

ಮುರಳಿ:– ಹೀಗೆಲ್ಲ ಆದರೆ ನೀನು ಅದನ್ನು ಓದುವದಿಲ್ಲ, ಸುಮ್ಮನೆ ಇಡು.

ರಮೆ:– ಇಲ್ಲ, ಇಲ್ಲ ಓದುತ್ತೇನೆ........ ಅಲ್ಲ ? ನಾನು ಮನಸ್ಸಿನಲ್ಲಿಯೇ ಓದಿಕೊಂಡರೆ ಹೇಗೆ ?

ಮುರಳಿ:– ನೀನು ಬೇಕಿದ್ದರೆ ಆಮೇಲೆ ಓದಿಕೊ. ಈಗ ಸುಮ್ಮನೆ ತೆಗೆದಿಡು.

ರಮೆ:– ಹಾಗಲ್ಲ, ನಾನು ಗಟ್ಟಿಯಾಗಿ ಓದಿದರೆ ನೀವು ನನ್ನನ್ನೇ ಮಿಟಿ ಮಿಟಿ ಅಂತ ನೋಡುತ್ತಿರುತ್ತೀರಿ. ನನಗೆ ಒಂದು ತರಹ ಆಗುತ್ತದೆ. ಅದಕ್ಕೆ ಹೇಳಿದೆ.

ಮುರಳಿ:– ನೀನು ಮನಸ್ಸಿನಲ್ಲಿಯೇ ಓದಿಕೊಂಡರೆ ಅಷ್ಟು ಹೊತ್ತು ನಾನೇನು ಮಾಡುತ್ತಿರುತ್ತೇನೆ ಅಂದುಕೊಂಡೆ ?

ರಮೆ:– ಅದೂ ಸರಿ ಅನ್ನಿ. ಆಗಲೂ ನನ್ನನ್ನು ದುರಗುಟ್ಟಿಕೊಂಡು ನೋಡುತ್ತಲೇ ಇರುತ್ತೀರಿ. ಹೋಗಲಿ. ಗಟ್ಟಿಯಾಗಿಯೇ ಓದಿಬಿಡುತ್ತೇನೆ. ನೀವು ನನ್ನನ್ನು ಮಾತ್ರ ನೋಡುತ್ತಿರಬಾರದು.

ಮುರಳಿ:– ಹೊರಗಣ್ಣು ನಿನ್ನನ್ನು ನೋಡುತ್ತಿರಬಹುದು. ಒಳಗಣ್ಣು ಬೇರೇನನ್ನೋ ನೋಡುತ್ತಿರುತ್ತದೆ. ಓದುವದಿದ್ದರೆ ಸುಮ್ಮನೆ ಓದು.

ರಮೆ:– ಇಲ್ಲ, ಓದಿಬಿಡುತ್ತೇನೆ. ನಿಮ್ಮ ಕೈಬರಹ ಓದುವಾಗ ಏನಾದರೂ ತಪ್ಪಿಬಿಟ್ಟರೆ ನಗಬೇಡಿ ಮಾತ್ರ. ಏನು ?

ಮುರಳಿ:– ಅಯ್ಯೋ ದೇವರೇ, ನಗುವದಿಲ್ಲ. ಒಮ್ಮೆ ಓದು.

ರಮೆ:– ಹ್ಞೂಂ. ಓದುತ್ತೇನೆ, ಸುಮ್ಮನೆ ಕೇಳಿ. ಓದಲಾ ?

ಮುರಳಿ:– ಓದು.

ರಮೆ:– "ಈ ಘಟನೆಗಳು" ಎಂದರೇನು ? ನಾವು ನೋಡುವ ಅಥವಾ ಕೇಳುವ ಈ ಎಲ್ಲವೂ ಏನು ? ಸಣ್ಣದರಲ್ಲಿ ಹೇಳುವದಾದರೆ ಈ ಪ್ರಪಂಚ

ಎಂದರೇನು? ವ್ಯಕ್ತಿಯ ಮನಸ್ಸಿನ ರೂಪವು ಬದಲಾಗುವದು ಹೊರತಾಗಿ ಈ ಪ್ರಪಂಚ ಬೇರೇನೂ ಅಲ್ಲ. ಮನಸ್ಸು ಎಂದರೆ ಸಂಸ್ಕಾರಗಳ ಒಂದು ಗೂಡು ಎನ್ನುತ್ತಾರೆ. ಒಂದೊಂದು ವಿಧದ ಸಂಸ್ಕಾರವು ಫಲ ಬಿಟ್ಟಂತೆ ನಾವು ಆಯಾ ಸಂದರ್ಭದಲ್ಲಿ ಅಂತಂತಹ ದೃಶ್ಯಗಳನ್ನೋ, ಭಾವಗಳನ್ನೋ ಅನುಭವಿಸುತ್ತೇವೆ. ಭಾರತದಲ್ಲಿ ನಮ್ಮ ಮನೆಯೊಳಗಿರುವದು ಒಂದು ಬಗೆಯ ಸಂಸ್ಕಾರ ಫಲಿತವಾದ ಅನುಭವ. ನಾವು ಅಮೇರಿಕಾಕ್ಕೆ ಹೋಗಿ ಅಲ್ಲಿ ವಿಧ ವಿಧವಾದ ಅನುಭವಗಳನ್ನು ಪಡೆಯುವದು ಇನ್ನೊಂದು ಬಗೆಯ ಸಂಸ್ಕಾರವು ಫಲಿತವಾದುದರಿಂದ ಉಂಟಾಗುವ ಅನುಭವ. ನಿಜವಾದ "ನಾನು" ಇಲ್ಲಿಂದ ಅಮೇರಿಕಾಕ್ಕೆ ಚಲಿಸಲಾರೆ. ಏಕೆಂದರೆ ನನಗೆ ಗತಿ ಇಲ್ಲ, ಚಲಿಸಲು ಸಾಧ್ಯವಾಗುವ ಅವಕಾಶ ಅಥವಾ ಸ್ಥಳ ಇರುವ ಸಾಧ್ಯತೆ ಇರುವದಿಲ್ಲ. ಮನಸ್ಸಿನ ಒಂದು ನಿಶ್ಚಿತವಾದ ಸಂಸ್ಕಾರವು ಫಲಿತವಾಗುವಾಗ, ನಮ್ಮ ಈ ಕಣ್ಣುಗಳು ನೋಡುವ "ದೃಶ್ಯ" ಅದಕ್ಕನುಗುಣವಾಗಿ ಬದಲಾಗುತ್ತದೆ. ಆಗ ಮನಸ್ಸು ನಾವು ಚಲಿಸುತ್ತಿದ್ದೇವೆ ಎಂಬ ಅನುಭವವನ್ನು ಪಡೆಯುತ್ತದೆ. ನಾವು ಅಮೇರಿಕಾಕ್ಕೆ "ಹೋಗುವದು" ಎಂದರೂ ಇದೇ. ಅಮೇರಿಕಾ ಎಂದರೆ ಒಂದು ನಿಶ್ಚಿತವಾದ ದೃಶ್ಯ ಮತ್ತು ಅನುಭವಗಳಿಗೆ ನಮ್ಮ ಮನಸ್ಸು ಕೊಟ್ಟುಕೊಂಡಿರುವ ಒಂದು ಹೆಸರು, ಅಷ್ಟೆ.

"ನಮ್ಮ ಮಾನಸಿಕ ಪ್ರಪಂಚವನ್ನು ವಿಶ್ಲೇಷಿಸಿದರೆ ಈ ಅಂಶವು ಚೆನ್ನಾಗಿ ಸ್ಪಷ್ಟವಾಗುತ್ತದೆ. ಭೌತಿಕವಾದ ಈ ಪ್ರಪಂಚವೆಂದರೂ ಬೇರೇನು? ನಮ್ಮ ಇಂದ್ರಿಯಗಳು ಗ್ರಹಿಸಿ ಪಡೆದ ಅನುಭವಗಳ ಒಟ್ಟು ಮೊತ್ತವಷ್ಟೇ ಈ ಭೌತಿಕ ಪ್ರಪಂಚ ಎಂದರೆ. ಯಾವದೇ ಒಂದು ವಿಧಾನದಿಂದ ನಾವು ನಮ್ಮ ಇಂದ್ರಿಯಗಳ ಕಾರ್ಯವನ್ನು ಸಂಪೂರ್ಣವಾಗಿ ನಿಲ್ಲಿಸಬಲ್ಲೆವಾದರೆ ಈ ಭೌತಿಕ ಪ್ರಪಂಚ ಎಂಬದು ಹೇಗೆ ಇರಲು ಸಾಧ್ಯ? ನಾವು ನಮ್ಮ ಕಣ್ಣುಗಳನ್ನು ಮುಚ್ಚೋಣ. ನಮಗೆ ಈ ಪ್ರಪಂಚ ಕಾಣಿಸುವದಿಲ್ಲ. ಕಿವಿಗಳನ್ನು ಮುಚ್ಚಿಕೊಂಡರೆ ಈ ಪ್ರಪಂಚದ ಯಾವದೂ ಕೇಳಿಸುವದಿಲ್ಲ. ಆದರೆ ಹೀಗೆ ನಮ್ಮ ಇಂದ್ರಿಯಗಳನ್ನೆಲ್ಲ ನಿಷ್ಕ್ರಿಯಗೊಳಿಸಿ ನಾವು ಈ ಪ್ರಪಂಚದಿಂದ ಹೊರತಾಗಲು ಸಾಧ್ಯವಾಗುವ ಮಾತ್ರಕ್ಕೆ ನಾವು ಮಾಯೆಯಿಂದ ಹೊರತಾದ ಸತ್ಯ ಸ್ಥಿತಿಗೆ ತಲಪಿದ್ದೇವೆಂದು ಹೇಳಲು ಸಾಧ್ಯವಿಲ್ಲ. ಎಲ್ಲ ಇಂದ್ರಿಯಗಳೂ ನಿಷ್ಕ್ರಿಯವಾಗಿ ನಾವು ಈ ಭೌತಿಕ ಪ್ರಪಂಚದಿಂದ ಹೊರತಾಗಿದ್ದರೂ ಕೂಡ ಮನಸ್ಸು ಚಟುವಟಿಕೆಯಿಂದ ಕೂಡಿಯೇ ಇರುತ್ತದೆ. ಸ್ವಪ್ನಾವಸ್ಥೆಯಲ್ಲಿ, ಮೂರ್ಛೆ ಹೋದಾಗ, ಜೀವಾತ್ಮನು ಒಂದು ದೇಹವನ್ನು ಬಿಟ್ಟು ಇನ್ನೊಂದನ್ನು ಸೇರುವ ನಡುವಿನ ಅವಧಿಯಲ್ಲಿ ಇಂತಹ ಪರಿಸ್ಥಿತಿ ಇರುತ್ತದೆ. ಆಗ ನಾವು ಅಮೇರಿಕವನ್ನು "ನೋಡುವದು" ಇಲ್ಲದಿರಬಹುದು, ಆದರೂ ಅಮೇರಿಕಾವು "ಇಲ್ಲ" ಎಂಬ ಸತ್ಯ ಸ್ಥಿತಿಯ ಅರಿವು ನಮಗೆ ಆಗಲು ಸಾಧ್ಯವಿಲ್ಲ. ಅಮೇರಿಕಾದ

"ನೆನಪು" ಅಥವಾ ಅಮೇರಿಕಾ ಎಂಬ ಒಂದು ದೂರದ ಸ್ಥಳವು "ಇದೆ" ಎಂಬ ಭಾವನೆಯ ಬೀಜ ನಾಶವಾಗಿರುವದಿಲ್ಲ. "ನಾವು" ಒಮ್ಮೆ ನಾವು ಕುಳಿತಿರುವ ಸುತ್ತಲಿನ ಪರಿಸರಗಳ ಯಾವ ಸಂಪರ್ಕವನ್ನೂ ಇಟ್ಟುಕೊಳ್ಳದೆ ಇರಲು ಪ್ರಯತ್ನಿಸುತ್ತೇವೆ ಎಂದಿಟ್ಟುಕೊಳ್ಳೋಣ. ಯಾವದನ್ನೂ ನಾವು ನೋಡುತ್ತಿಲ್ಲ, ಕೇಳುತ್ತಿಲ್ಲ, ಆಘ್ರಾಣಿಸುತ್ತಿಲ್ಲ, ಮುಟ್ಟುತ್ತಿಲ್ಲ – ಹೀಗೆ. ಆದರೆ ಮನಸ್ಸು ಮಾತ್ರ ನಿಶ್ಚೇಷ್ಟಿತವಾಗಿರುವದಿಲ್ಲ. ಅದು ತನ್ನ ನಿತ್ಯದ ಚಟುವಟಿಕೆಯಿಂದ ಕೂಡಿಯೇ ಇರುತ್ತದೆ. ಏನು ಚಟುವಟಿಕೆಗಳು? ಅದು, ಇದು, ಇನ್ನೊಂದು, ಮತ್ತೊಂದು. ಈ ಅದು, ಇದು, ಇವುಗಳೆಲ್ಲ ಏನು? ಈ "ಆ ಯೋಚನೆ, ಈ ಯೋಚನೆ" ಇವುಗಳೆಲ್ಲ ಏಕೆ ಮನಸ್ಸಿನಲ್ಲಿ ಹುಟ್ಟಿಕೊಳ್ಳುತ್ತವೆ? ಅವುಗಳೆಲ್ಲ ಆಗಾಗ ಆಯಾ ರೀತಿಯಲ್ಲಿ ಹುಟ್ಟಿಕೊಳ್ಳಬೇಕೆಂದೇನೂ ನಾವು ಅವುಗಳನ್ನು ಆಹ್ವಾನಿಸಿರುವದಿಲ್ಲ. ಆದರೂ ಅವುಗಳು ತಮ್ಮಷ್ಟಕ್ಕೇ ಹುಟ್ಟಿಕೊಂಡಿರುತ್ತವೆ. ನಾನು ಮತ್ತು ಅವನು– ಇಬ್ಬರೂ ಒಂದು ಕೋಣೆಯೊಳಗೆ ಕುಳಿತಿದ್ದೇವೆ. ಅಂದರೆ ಒಂದೇ ವಿಧದ ಭೌತಿಕ ಪರಿಸರಗಳಿಂದ ಇಬ್ಬರೂ ಆವೃತರಾಗಿದ್ದೇವೆ. ಆದರೆ ಯಾವದೇ ಒಂದು ನಿಶ್ಚಿತ ವೇಳೆಯಲ್ಲಿ ನನ್ನ ಮನಸ್ಸಿನಲ್ಲಿ ಹೊಳೆಯುವ ಯೋಚನೆಗೂ ಅವನ ಮನಸ್ಸಿನಲ್ಲಿ ಹೊಳೆಯುವ ಯೋಚನೆಗೂ ಏನೂ ಸಂಬಂಧವಿರುವದಿಲ್ಲ. ಇದು ಯಾಕೆ? ಇದರಿಂದ ಗೊತ್ತಾಗುತ್ತದೆ, ನಮ್ಮ ಮನಸ್ಸಿನಲ್ಲಿ ಆಗಿಂದಾಗ ಹೊಳೆಯುವ ಯೋಚನೆಗಳು ಕೂಡ ನಮ್ಮ ಪ್ರಾರಬ್ಧವು ಫಲ ಬಿಡುತ್ತಿರುವದರ ಪರಿಣಾಮವಾಗಿ ಎಂದು.

ಇಂದ್ರಿಯಗಳು ಮನಸ್ಸಿನಿಂದ ಆಜ್ಞಪ್ತವಾಗಿ ಕೆಲಸ ಮಾಡುತ್ತವೆ. ಸೂಕ್ಷ್ಮವಾದ ಮನಸ್ಸಿಗೆ ಹೋಲಿಸಿದಾಗ ಇಂದ್ರಿಯಗಳು ಬಹಳ ಸ್ಥೂಲವಾದವುಗಳು ಎಂಬದು ಗೊತ್ತಾಗುತ್ತದೆ. ಹಾಗಿದ್ದ ಮೇಲೆ ಮಾನಸಿಕ ಪ್ರಪಂಚವು ಬದಲಾಗುತ್ತಿರುವದೂ, ಆದುದರಿಂದಲೇ ಅದು ಅಸತ್ಯವಾದುದೂ ಹೌದಾದರೆ, ಬದಲಾಗುತ್ತಿರುವ ಈ ಭೌತಿಕ ಪ್ರಪಂಚವು ಅಷ್ಟೇ ಅಸತ್ಯವಾದುದಾಗಬೇಕಾಗುತ್ತದೆ.

ನಮ್ಮ ಪ್ರಾರಬ್ಧ ಏನಿದೆಯೋ–ಅಥವಾ ನಾವು ಹಿಂದಿನ ಜನ್ಮಗಳಲ್ಲಿ ಬಯಸಿದವು ಏನಿವೆಯೋ ಅವು ಈಗ ನಮಗೆ ಒಂದು ಮನೆ, ಹೆಂಡತಿ, ಮಕ್ಕಳು, ಉದ್ಯೋಗ, ಆಸ್ತಿ ಮೊದಲಾದವುಗಳನ್ನು ಒದಗಿಸುವದರ ಮೂಲಕ ಫಲಿತವಾಗಿವೆ, ಅಷ್ಟೆ. ಆದರೆ ಈ ಪ್ರತಿಯೊಂದೂ ಕೂಡ ಒಂದು ನಿಶ್ಚಿತವಾದ ಅವಧಿಯಲ್ಲಿ ಮಾತ್ರ ನಮಗೆ ಒದಗಿರುತ್ತವೆ ಎಂಬದನ್ನು ನಾವು ಮರೆಯಬಾರದು. ನಮ್ಮ ಹಲವಾರು ಇತರ ಅನುಭವಗಳಿಗೆ ಹೋಲಿಸಿದಾಗ ಈ ಹೆಂಡತಿ, ಮಕ್ಕಳು ಮೊದಲಾದ ಅನುಭವ ಹೆಚ್ಚು ದೀರ್ಘವಾಗಿ ಕಾಣಿಸುವದರಿಂದ ಇವುಗಳು ಶಾಶ್ವತ

ಅಥವಾ ಸತ್ಯ ಎಂಬ ಭ್ರಮೆಯನ್ನು ನಮ್ಮಲ್ಲಿ ಉಂಟುಮಾಡುತ್ತವೆ. ಇವು ಶಾಶ್ವತ ಎನ್ನುವದು ಇತರ ಅನುಭವಗಳಿಗೆ ಹೋಲಿಸಿದಾಗ ಮಾತ್ರ ನಮಗೆ ಗೊತ್ತಾಗುವದು ಎಂಬದನ್ನು ನಾವು ಮರೆಯಬಾರದು. ನಾವು ಅಮೆರಿಕಾಕ್ಕೆ ಹೋಗಿ ಅಲ್ಲಿರುವದು ಕೇವಲ ಎರಡೇ ವರ್ಷಗಳ ಕಾಲವೆಂದೂ, ನಾವು ನಮ್ಮ ಮನೆಯಲ್ಲಿ ನಮ್ಮ ಸಂಸಾರದೊಂದಿಗಿರುವದು ನಾವು ಸಾಯುವವರೆಗೆಂದೂ–ಅಥವಾ ದೀರ್ಘ ಅವಧಿಗೆಂದೂ ನಮಗೆ ತಿಳಿದಿದೆ. ಕೇವಲ ಈ ಹೋಲಿಕೆಯ ಆಧಾರದ ಮೇಲೆ ಮಾತ್ರ ನಾವು ನಮ್ಮ ಮನೆಯಲ್ಲಿ ವಾಸಿಸುವದು ದೀರ್ಘ ಅವಧಿಗೆ ಎಂದು ನಮಗೆ ತೋರುವದರಿಂದ ಇದು, ನಾವು ಅಮೆರಿಕಾಕ್ಕೆ ಹೋಗಿ ಬರುವದಕ್ಕಿಂತ 'ಹೆಚ್ಚು ಸತ್ಯವಾದುದು' ಎಂದು ನಮಗನಿಸುತ್ತದೆ. ಆದರೆ ಸತ್ಯದಲ್ಲಿ ಹೆಚ್ಚಾದುದು, ಕಡಿಮೆಯಾದುದು ಎಂದು ಇರಲು ಸಾಧ್ಯವಿಲ್ಲ. ಸತ್ಯ, ಅಸತ್ಯ ಎಂಬ ಎರಡು ಮಾತ್ರವೇ ಇರುವದು.

ಆದುದರಿಂದ ನಮ್ಮ ಮನಸ್ಸು ತನ್ನ ಸಂಸ್ಕಾರಗಳಿಗೆ ಅನುಗುಣವಾಗಿ ವಿಧ ವಿಧವಾದ ಈ ಚಿತ್ರಗಳನ್ನು ನಿರ್ಮಿಸಿಕೊಳ್ಳುತ್ತದೆ. ಇವುಗಳಲ್ಲಿ ಕೆಲವು ಕೇವಲ ಕ್ಷಣಿಕವಾದವುಗಳು, ಇನ್ನು ಕೆಲವು ತಾತ್ಕಾಲಿಕವಾದವುಗಳು, ಮತ್ತೆ ಕೆಲವು ಅಲ್ಪಾವಧಿಯವುಗಳು, ಇನ್ನೂ ಕೆಲವು ದೀರ್ಘಾವಧಿಯವುಗಳು. ಒಬ್ಬ ಮನುಷ್ಯ ಸತ್ತು ಹೋದ ಎನ್ನುವಾಗ ಅವನ ಮನಸ್ಸು ಈ ಪ್ರಪಂಚದ ದೃಶ್ಯಗಳನ್ನು ನೋಡುವದನ್ನು ಬದಲಾಯಿಸಿ, ಅದರ ಸಂಸ್ಕಾರಗಳಿಗೆ ಅನುಗುಣವಾಗಿ ಸ್ವರ್ಗದ ಅಥವಾ ನರಕದ ಅಥವಾ ಇನ್ಯಾವದೋ ಆದ ದೃಶ್ಯಗಳನ್ನು ನೋಡಲು ಪ್ರಾರಂಭಿಸಿತು ಎನ್ನುವದೇ ಸರಿಯಾಗುತ್ತದೆ. ಇಬ್ಬರು ಜೊತೆಯಲ್ಲಿ ಅಮೆರಿಕಾಕ್ಕೆ ಹೋಗುತ್ತಾರೆ. ಆದರೆ ಅವರಿಬ್ಬರ ಅನುಭವಗಳು – ಅಥವಾ ಅಲ್ಲಿ ಅವರ ಮನಸ್ಸಿನ ಮೇಲಾಗುವ ಪ್ರಭಾವಗಳು – ಒಂದೇ ವಿಧವಾಗಿರುವದಿಲ್ಲ. ಒಬ್ಬಾತ ಅವನ ಪ್ರಾರಬ್ಧಕ್ಕೆ ಅನುಗುಣವಾಗಿ ಅಲ್ಲಿ ಜೀವನವನ್ನು ಸುಖವಾಗಿ ಕಳೆಯಬಹುದು. ಇನ್ನೊಬ್ಬಾತನ ಜೀವನ ಅವನಿಗೆ ನೀರಸವಾದುದಾಗಿ ಕಾಣಿಸಬಹುದು. ನಿಜವಾಗಿ ನೋಡಿದರೆ ಅಮೆರಿಕಾವೂ ಇಲ್ಲ, ಭಾರತವೂ ಇಲ್ಲ. ನಾವು ನೋಡುವ ಅಥವಾ ಕೇಳುವ ಇತರ ಯಾವದು ಕೂಡ ಇಲ್ಲ. ಒಬ್ಬಾತ ಗಾಢ ನಿದ್ರೆಯಲ್ಲಿರುವಾಗ ಅಥವಾ ಅವನು ತನ್ನ ಮನಸ್ಸಿನ ಚಟುವಟಿಕೆಯನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಲು ಸಾಧ್ಯವಾದಾಗ ಅವನಿಗೆ ಯಾವದೂ ಇರುವದಿಲ್ಲ – ಅನುಭವವೂ ಇರುವದಿಲ್ಲ, ಅನನುಭವವೂ ಇರುವದಿಲ್ಲ.

"ಆದುದರಿಂದ ಒಬ್ಬಾತ ಏನು ಮಾಡುತ್ತಿದ್ದಾನೋ ಅದನ್ನು ಅವನು ಮಾಡದೆ ನಿರ್ವಾಹವಿಲ್ಲ ಎನ್ನಬೇಕಾಗುತ್ತದೆ. ನನ್ನ ಶರೀರ ಮತ್ತು ಮನಸ್ಸುಗಳು ಏನು ಮಾಡುತ್ತಿವೆಯೋ, ಇತರರ ಶರೀರ ಮತ್ತು ಮನಸ್ಸುಗಳು ಏನು

ಮಾಡುತ್ತಿವೆಯೋ – ಇವೆಲ್ಲವೂ ಮೊದಲೇ ನಿಶ್ಚಿತಗೊಂಡಿವೆ ಎಂದು ಹೇಳಬೇಕಾಗುತ್ತದೆ. ಹಾಗಿರುವಾಗ ಏನೆಲ್ಲ ನಡೆಯುತ್ತಿದೆಯೋ – ನಮ್ಮಿಂದಲೇ ಆಗಲಿ, ಇತರರಿಂದಲೇ ಆಗಲಿ – ಅದನ್ನೆಲ್ಲ ಅನಿವಾರ್ಯವೆಂದು ಶಾಂತವಾಗಿ ಸ್ವೀಕರಿಸುವದು ಮತ್ತು ಇದೆಲ್ಲವೂ ನಿಜವಾದವುಗಳು, ಸತ್ಯವಾದವುಗಳು ಎಂದು ತೋರಿಸಿಕೊಳ್ಳುತ್ತಿರುವ ಕೇವಲ ಅಸತ್ಯವಾದ ದೃಶ್ಯಗಳು ಎಂದು ನಂಬಿಕೊಳ್ಳುವದು ಪ್ರಾಜ್ಞ ಜೀವನದ ಲಕ್ಷಣವಾಗುತ್ತದೆ. ಹೀಗೆ ಮಾಡುವದರಿಂದ ನಮಗೆ ಈಗ ಏನೆಂಬದೇ ತಿಳಿಯದಿರುವ ಜೀವನದ ಗುರಿ ಕೂಡ ನಮಗೆ ಸದಾ ಗೋಚರವಾಗಿರುತ್ತದೆ. ಅದೆಂದರೆ ಜೀವನದ ಈ ಎಲ್ಲ, ಎಲ್ಲ ಅನುಭವಗಳೂ ಇಷ್ಟು ಸತ್ಯ, ಶಾಶ್ವತ ಎಂದು ಕಾಣಿಸಿಕೊಳ್ಳುತ್ತಿದ್ದು ಅವುಗಳೆಲ್ಲ ನಿಜವಾಗಿಯೂ ಅಸತ್ಯವಾದವುಗಳು, ಅಶಾಶ್ವತವಾದವುಗಳು ಎನ್ನುವದು ನಿಜವಾದರೆ ಮತ್ತೆ ಸತ್ಯ ಯಾವದು, ನಿತ್ಯ ಯಾವದು, ಶಾಶ್ವತವಾದುದು ಯಾವದು ಎಂಬದನ್ನು ಕಂಡು ಹಿಡಿಯುವ ಪ್ರಯತ್ನ".

(ತಾ. 24–12–63ರಂದು ವಿಪರೀತ ಜ್ವರ ಬಂದು ಜ್ವರದ ಕಾವು ಇಳಿಯುತ್ತಿದ್ದಾಗ ಮೂಡಿಬಂದ ಭಾವನೆಗಳು)

........ಅಬ್ಬ, ನೀವೇ.

ಮುರಳಿ:– ಏಕೆ ರಮಾ ?

ರಮೆ:– ಏಕೊ, ಏನೂ ಗೊತ್ತಾಗುವದಿಲ್ಲ.

ಮುರಳಿ:– ಅಂದರೆ ?

ರಮೆ:– ಇದನ್ನು ಓದಿ ಏನು ಹೇಳಬೇಕೆಂಬದೇ ಗೊತ್ತಾಗುವದಿಲ್ಲ ಎಂದೆ.... ಅಷ್ಟು ವರ್ಷಗಳ ಹಿಂದೆ ನೀವು ಇದನ್ನು ಬರಿದಿದ್ದೀರೆಂದಾದರೆ............

ಮುರಳಿ:–............ಆದರೆ........?

ರಮೆ:– ಅದೇ ಹೇಳಿದೆ, ಏನೂ ಗೊತ್ತಾಗುವದಿಲ್ಲ ಎಂದು.

ಮುರಳಿ:– ಹೋಗಲಿ ಬಿಡು. ಅದನ್ನೇಕೆ ತಲೆಗೆ ಹಚ್ಚಿಕೊಳ್ಳುತ್ತಿ ?

ರಮೆ:– ತಲೆಗೆ ಹಚ್ಚಿಕೊಳ್ಳದೆಯೂ ಅದು ಬಿಡುವದಿಲ್ಲ. ಹಚ್ಚಿಕೊಂಡರೆ ಹಿತವೂ ಆಗುವದಿಲ್ಲ. ನೀವು ಬರೆದುದು ಸುಳ್ಳು ಎಂದು ಹೇಳಲು ಧೈರ್ಯ ಬರುವದಿಲ್ಲ. ಸತ್ಯ ಎಂದು ಹೇಳುವಷ್ಟು ಸ್ಪಷ್ಟವಾಗಿ ಅದು ಕಾಣಿಸುವದೂ ಇಲ್ಲ ........ಏನೋ ಒಂದು ತರಹ ಆಗಿಬಿಟ್ಟಿದೆಯಪ್ಪ........ಥತ್........ಅದನ್ನು ಯಾಕೆ ಓದಲು ಹೋದೆನೋ ಅನಿಸುತ್ತದೆ.

ಮುರಳಿ:– ಜ್ವರದ ಕಾವಿನಲ್ಲಿ ಏನೇನೋ ಬರೆದುದನ್ನು ನೀನೇಕೆ ತಲೆಗೆ ಹಚ್ಚಿಕೊಳ್ಳುತ್ತೀ, ಬಿಡು ರಮಾ.

ರಮಾ:– ಬಿಡಲು ಸಾಧ್ಯವಾಗಿದ್ದರೆ ನಾನೇಕೆ ಅದನ್ನು ಆತುಕೊಂಡು ಕೂರುತ್ತಿದ್ದೆ ಹೇಳಿ! ಅಂತೂ ನಿಮ್ಮ ಅಭಿಪ್ರಾಯವು ಸರಿಯೋ ತಪ್ಪೋ ನನಗೆ ಹೇಳಲು ಸಾಧ್ಯವಿಲ್ಲ. ಆದರೆ ಮೆದುಳನ್ನು ಕ್ರೂರವಾಗಿ ಕಲಕಿಬಿಡುವ ಶಕ್ತಿ ಅದಕ್ಕಿದೆ.

ಮುರಳಿ:– ಅದು ಆಯಾ ಮೆದುಳಿನ ಪಕ್ವತೆಯನ್ನು ಅವಲಂಬಿಸಿರುತ್ತದೆ. ಅದು ಹಾಳಾಗಲಿ. ಬೇರೆನಾದರೂ ಮಾತನಾಡೋಣ.

ರಮಾ:– ಬೇರೆ ಮಾತು? ಚಿಂತೆಯಿಲ್ಲ ನೀವೂ. ಭೀಮನ ಕತೆ ಮುಗಿದು ಹೋಯಿತೇನು?

ಮುರಳಿ:–ಅಂದಹಾಗೆ ಇಲ್ಲ. ಕೇಳು, ಹೊತ್ತಾಗುತ್ತಿದೆ. ನೇರವಾಗಿ ಕತೆಗೇ ಬಂದುಬಿಡುತ್ತೇನೆ. ನಿನ್ನೆ ಎಲ್ಲಿಗೆ ಬಿಟ್ಟೆ ಹೇಳು?

ರಮಾ:– ಕೌರವರ, ಪಾಂಡವರ ಸೈನ್ಯಗಳೆರಡೂ ಕುರುಕ್ಷೇತ್ರದಲ್ಲಿ ಸಜ್ಜಿತವಾಗಿ ನಿಂತಿವೆ.

ಮುರಳಿ:– ಹೌದು. ನಿಂತಿವೆ. ಇತ್ತಂಡಗಳಲ್ಲಿಯೂ ರಣ ಕಹಳೆ, ಕೊಂಬು, ಭೇರಿ, ನಗಾರಿ, ತಮಟೆ ಮೊದಲಾದ ಸಹಸ್ರಾರು ವಾದ್ಯಗಳು ಭೋರ್ಗರೆದವು. ಕೌರವ ಸೈನ್ಯಾಧಿಪತಿಯಾದ ಭೀಷ್ಮನು ಪಾಂಡವ ಬಲದ ವೀರರನ್ನು ದುರ್ಯೋಧನನಿಗೆ ತಿಳಿಸಿಕೊಡುವಾಗ ಭೀಮನನ್ನು ಕುರಿತು ಅವನು ಪಾಂಡವ ಬಲದ ಆಧಾರ ಸ್ತಂಭವಾಗಿರುವನೆಂದೂ, ಬಾಣ ಯುದ್ಧದಲ್ಲಾಗಲಿ, ಗದಾಯುದ್ಧದಲ್ಲಾಗಲೀ ಅವನಿಗೆ ಸಮಾನರಿಲ್ಲವೆಂದೂ ವಿವರಿಸಿ ಶ್ರೀಕೃಷ್ಣನನ್ನೇ ಸಾರಥಿಯಾಗಿ ಪಡೆದಿರುವದರಿಂದ ಅರ್ಜುನನು ಕೂಡ ಅಜೇಯನಾಗಿರುವನೆಂದೂ ಹೇಳಿದನು.

ರಮಾ:– ಶ್ರೀಕೃಷ್ಣನನ್ನು ಪಡೆದಿರುವದರಿಂದ........

ಮುರಳಿ:– ಹಾಗೆಂದು ಭೀಷ್ಮನು ಹೇಳಿದನು. ಈ ಮಧ್ಯೆ ಯುಧಿಷ್ಠಿರನು ಏಕಾಂಗಿಯಾಗಿ ಕೌರವ ಪಾಳೆಯಕ್ಕೆ ಹೋಗಿ ಹೆಸರಾಂತ ಬಿಲ್ಗಾರರಾದ ಭೀಷ್ಮ, ದ್ರೋಣ, ಕೃಪಾಚಾರ್ಯರನ್ನು ಕಂಡು ತಮ್ಮನ್ನು ರಕ್ಷಿಸಬೇಕೆಂದು ಯಾಚಿಸಿಕೊಂಡು ಅವರಿಂದ ನಿಶ್ಚಯವಾದ ಅಭಯವನ್ನು ಪಡೆದು ಹಿಂದಿರುಗಿದನು.

ರಮಾ:– ಅಂದರೆ, ಅರ್ಜುನ ತನ್ನ ಪಾಲಿನ ಅರ್ಧ ಯುದ್ಧವನ್ನು ಗೆದ್ದಂತಾಯಿತು.

ಮುರಳಿ:– ಹೌದು. ಅವರು ಮೂವರೂ ಅಸಮಾನರಾದ ಬಿಲ್ಲಾಳುಗಳು. ಅರ್ಜುನ ಅವರಲ್ಲಿ ಯಾರೊಬ್ಬರಿಗೂ ಸಾಟಿಯಾಗುತ್ತಿರಲಿಲ್ಲ. ಇಷ್ಟರಲ್ಲಿ ದುರ್ಯೋಧನನ ಒಬ್ಬ ತಮ್ಮನಾದ ಯುಯುತ್ಸು ಎಂಬವನು ತಾವೆಲ್ಲರೂ ಭೀಮನ ಕೈಯಿಂದ ಸಾಯುವದು ನಿಶ್ಚಯವೆಂದು ಮನಗಂಡು ತನ್ನ ಸೈನ್ಯ ಸಮೇತನಾಗಿ ಬಂದು ಯುಧಿಷ್ಠಿರನ ಮೊರೆ ಹೊಕ್ಕು ಅವನ ಆಶ್ರಯ ಪಡೆದನು.

ಈ ಕಡೆ ಕೃಷ್ಣನೂ ಕೌರವ ಸೈನ್ಯದ ಪ್ರಮುಖರನ್ನೆಲ್ಲ ಅರ್ಜುನನಿಗೆ ವಿವರಿಸುತ್ತಾ ಬರಲು ಅರ್ಜುನನಿಗೆ ಇದ್ದಕ್ಕಿದ್ದಂತೆ ಬಂಧು ವ್ಯಾಮೋಹವು ಕವಿದು ಬಂದು ತಾನು ಯುದ್ಧ ಮಾಡುವದಿಲ್ಲವೆಂದು ತಿಳಿಸಿ ಶಸ್ತ್ರತ್ಯಾಗ ಮಾಡಿ ಕುಳಿತನು. ಕೃಷ್ಣನು ಅವನಿಗೆ ಅನೇಕ ವಿಧವಾಗಿ ತಿಳಿಯ ಹೇಳಿ, ಕೊನೆಯಲ್ಲಿ ಅವನಿಗೆ ತನ್ನ ವಿರಾಡ್ರೂಪವನ್ನೂ ಪ್ರದರ್ಶಿಸಿ ಪ್ರಯಾಸದಿಂದ ಅವನನ್ನು ಯುದ್ಧಕ್ಕೆ ಒಡಂಬಡಿಸಿದನು. ದ್ವಾಪರಾಂತ್ಯದ ಭೂಭಾರಹರಣಾರಂಗವಾದ ಪ್ರಖ್ಯಾತ ಕುರುಕ್ಷೇತ್ರ ಯುದ್ಧವು ಆರಂಭವಾಯಿತು.

ರಣಾಂಗಣದಲ್ಲಿ ರಕ್ತದ ಓಕುಳಿಯಾಡಲು ನೆರೆದಿದ್ದ ಎರಡೂ ಸೈನ್ಯಗಳ ಮುಂಗಾವಲು ಬಲಗಳು ನೆತ್ತರು ಚಿಮ್ಮಿಸಿ ಹೊಡೆದಾಡಿದವು. ರಕ್ತದ ಕೋಡಿ ಹರಿಯಿತು. ಮೂಳೆಯ ರಾಶಿಗಳು ಕಾಣಿಸಿಕೊಂಡವು. ಅಂಗಾಂಗಗಳ ತುಂಡುಗಳು ಚೆಲ್ಲಾಡಿದವು. ಭೂತ ಭೇತಾಳಗಳ ವಸಂತೋತ್ಸವವು ಆರಂಭವಾಯಿತು. ಮುಂಗುಡಿಯ ಸೈನ್ಯಗಳು ಧ್ವಂಸವಾಗುತ್ತ ಬಂದಂತೆ ಅತಿರಥರು, ಮಹಾರಥರು ಹೊರಟರು. ಪಾಂಡವ ಪಕ್ಷದಲ್ಲಿ ಭೀಮ ಪರಾಕ್ರಮಿಯಾದ ರಣಭೀಮನು ಹಿಂದಿನ ಅನೇಕ ವರ್ಷಗಳ ತನ್ನ ಆಕಾಂಕ್ಷೆ ಈಡೇರಲು ಅನುವು ದೊರೆತ ಈ ಸುದಿನದಲ್ಲಿ ತನ್ನ ಮಹೋನ್ನತ ಗದಾದಂಡವನ್ನು ತಿರುಗಿಸುತ್ತಾ ದುರ್ಯೋಧನನನ್ನು ಹುಡುಕುತ್ತಾ, ಕರೆಯುತ್ತಾ ಮುನ್ನುಗ್ಗಿ ನಡೆದನು. ಸಾತ್ಯಕಿ, ಅಭಿಮನ್ಯು ಮೊದಲಾದವರು ಅವನನ್ನು ಹಿಂಬಾಲಿಸಿದರು. ಕೌರವ ಸೈನ್ಯವನ್ನು ನುಚ್ಚುನುರಿ ಮಾಡುತ್ತಾ ಈ ಅಜೇಯ ಪರಾಕ್ರಮಿಯು ಮುನ್ನುಗ್ಗಿ ಬರುತ್ತಿರಲು ಅವನನ್ನು ಮೂದಲಿಸುತ್ತಾ ದುರ್ಯೋಧನನೇ ಅವನನ್ನು ಎದುರಿಸಿದನು. ತಕ್ಷಣವೇ ಸೇನಾನಾಯಕನಾದ ಭೀಷ್ಮಾಚಾರ್ಯನು ಬಂದು ದುರ್ಯೋಧನನನ್ನು ತನ್ನ ಹಿಂದಿಟ್ಟುಕೊಂಡು ರಕ್ಷಿಸಿದನು. ಮೊದಲನೆಯ ದಿನದ ಯುದ್ಧವು ಹೀಗೆ ಮುಗಿಯಿತು.

ಎರಡನೆಯ ದಿನದ ಯುದ್ಧದಲ್ಲಿ ಭೀಮನು, ದೊಡ್ಡ ಚತುರಂಗ ಬಲದಿಂದ ಕೂಡಿದ ಕಳಿಂಗ ದೇಶದ ರಾಜನನ್ನೂ, ಚೇದಿ ರಾಜನನ್ನೂ, ನಿಷದ ದೇಶದ ರಾಜನನ್ನೂ, ಶ್ರುತಾಯುವೆಂಬವನನ್ನೂ ಏಕಕಾಲದಲ್ಲಿ ಎದುರಿಸಿದನು. ಒಮ್ಮೆ ಬಾಣಗಳಿಂದ, ಒಮ್ಮೆ ಕತ್ತಿಯಿಂದ, ಒಮ್ಮೆ ಗದೆಯಿಂದ. ಹೀಗೆ ಬೇರೆ ಬೇರೆ

ಆಯುಧಗಳಿಂದ ಅವನು ಶತ್ರುಗಳನ್ನು ನಾಶ ಮಾಡುತ್ತಾ ಬಂದನು. ಕೌರವ ಸೇನಾನಿಯಾದ ಭೀಷ್ಮನು ನೋಡುತ್ತಿದ್ದಂತೆಯೇ ಭೀಮನು ಈ ನಾಲ್ವರು ಮಹಾ ಪ್ರತಾಪಿಗಳನ್ನೂ ಏಕಾಂಗಿಯಾಗಿ ಕೊಂದು ಕೆಡಹಿದನು. ಎಲ್ಲೆಲ್ಲಿಯೂ ಭೀಮನೇ ಎಂಬಂತೆ ವಿಚಿತ್ರ ಗತಿಗಳಲ್ಲಿ ಅವನು ತಿರುಗುತ್ತಾ ಶತ್ರುಗಳನ್ನು ಧ್ವಂಸ ಮಾಡಿದನು. ಭೀಮನ ಈ ಅದ್ಭುತ, ಅತಿ ಮಾನುಷ ಪರಾಕ್ರಮವನ್ನು ನೋಡಿ ರೋಮಾಂಚಿತನಾದ ಪಾಂಡವ ಸೈನ್ಯಾಧಿಪತಿ ಧೃಷ್ಟದ್ಯುಮ್ನನು ಶಂಖವನ್ನೂದಿ ಭೀಮನಲ್ಲಿಗೆ ಧಾವಿಸಿ ಬಂದನು. ಸಾತ್ಯಕಿಯೂ ಓಡಿ ಬಂದು ಭೀಮನನ್ನು ಹೊಗಳಿ ಅವನನ್ನು ಅಪ್ಪಿಕೊಂಡನು. ಭೀಮನ ಈ ವಿಧ್ವಂಸಕ ಕಾರ್ಯವನ್ನು ಶತ್ರು ಪಕ್ಷದಲ್ಲಿ ತಡೆಯುವವರೇ ಇಲ್ಲದಂತಾಯಿತು.

ಮೂರನೆಯ ದಿನದ ಯುದ್ಧವು ಪ್ರಾರಂಭವಾಯಿತು.

ರಮೆ:– ನೀವು ಭೀಮನ ಕತೆ ಹೇಳುವ ಭರದಲ್ಲಿ ಮಹಾಭಾರತ ಕತೆಗೆ ಅಪಚಾರ ಮಾಡುತ್ತಿದ್ದೀರೊ ಅನಿಸುತ್ತದೆ.

ಮುರಳಿ:– ಏಕೆ ?

ರಮೆ:– ನೀವು ಹೇಳಿದ ಪ್ರಕಾರ ಮೊದಲನೆಯ ಎರಡು ದಿನಗಳ ಯುದ್ಧದಲ್ಲಿ ಭೀಮನೊಬ್ಬನೇ ಚಟುವಟಿಕೆ ತೋರಿಸುತ್ತಿದ್ದುದು ಎಂದೆನಿಸುತ್ತದೆ. ಈ ಕಡೆ ಅರ್ಜುನ, ಆ ಕಡೆ ಭೀಷ್ಮ, ದ್ರೋಣ, ಕರ್ಣ, ಮೊದಲಾದ ಯಾರೂ ಕೂಡ ಯುದ್ಧವನ್ನೇ ಮಾಡಲಿಲ್ಲವೇನು ?

ಮುರಳಿ:– ಮಾಡಿದ್ದಾರೆ. ಯುದ್ಧದ ಪ್ರಮುಖ ವಿವರಗಳನ್ನಷ್ಟೇ ತಿಳಿಸಲು ಸಾಧ್ಯ ತಾನೆ ?

ರಮೆ:– ಕುರುಕ್ಷೇತ್ರ ಯುದ್ಧದ ಪ್ರಮುಖ ವಿವರಗಳನ್ನು ತಿಳಿಸುತ್ತಿದ್ದೀರೋ, ಭೀಮನ ಯುದ್ಧದ ಪ್ರಮುಖ ವಿವರಗಳನ್ನು ತಿಳಿಸುತ್ತಿದ್ದೀರೋ ?

ಮುರಳಿ:– ಭೀಮನೊಬ್ಬನದನ್ನೇ ಹೇಳಿದರೆ ಅವನ ಹೆಚ್ಚುಗಾರಿಕೆಯನ್ನು ಏನು ಹೇಳಿದಂತಾಗುತ್ತದೆ ? ಒಟ್ಟು ಪ್ರಮುಖ ಘಟನೆಗಳ ಪೈಕಿ ಅವನ ಪಾತ್ರವೇನು ಎಂಬದನ್ನು ಹೇಳಿದರೆ ತಾನೆ ಅವನ ಹೆಚ್ಚುಗಾರಿಕೆ ಗೊತ್ತಾಗುವದು ?

ರಮೆ:– ಅದನ್ನೇ ಕೇಳಿದೆ. ಹಾಗಿದ್ದರೆ ಯುದ್ಧ ಪ್ರಾರಂಭವಾದ ನಿಮಿಷದಿಂದಲೂ ಅದರಲ್ಲಿ ತ್ರಿಕರಣಪೂರ್ವಕವಾಗಿ ತೊಡಗಿದ ವ್ಯಕ್ತಿ ಬಹುಶಃ ಭೀಮನೊಬ್ಬನೇ ಎಂದಂತಾಯಿತು.

ಮುರಳಿ:– ಅದೇ ಭೀಮನ ವಿಶಿಷ್ಟ ಸ್ವಭಾವ; ಅವನನ್ನು ಇತರರಿಂದ

ಪ್ರತ್ಯೇಕಿಸಿ ತೋರಿಸುವ ಅವನ ಗುಣ. ಇಲ್ಲಿ ಸಾಮಾನ್ಯವಾಗಿ ವಿಮರ್ಶಕರು ಅವನ ವೀರತನವನ್ನಷ್ಟೇ ನೋಡಿ ಮೆಚ್ಚುತ್ತಾರೆ. ಆದರೆ ಇದು ವೀರತನವನ್ನು ದಾಟಿದ ಅವನ ವಿಶಿಷ್ಟ ವ್ಯಕ್ತಿತ್ವವನ್ನು ತೋರಿಸುತ್ತದೆ. ತಾನು ಎದುರಿಸಬೇಕಾದ ಪ್ರತಿಯೊಬ್ಬ ಶತ್ರುವನ್ನೂ ಗೆದ್ದೇ ಗೆಲ್ಲುವೆನೆಂಬ ಭರವಸೆ ಅವನಿಗೆ ಇದ್ದಿರಬಹುದು, ಇದ್ದಿಲ್ಲದಿರಬಹುದು. ಯುದ್ಧದಲ್ಲಿ ಸೋಲು ಗೆಲವುಗಳು ಯಾರಿಗೂ ನಿಶ್ಚಯವಾಗಿರುವದಿಲ್ಲ. ಹಾಗೆಂದು ತಾನು ಯುದ್ಧದಲ್ಲಿ ಸತ್ತು, ವೀರ ಮರಣ ಪಡೆಯುತ್ತೇನೆಂಬ ಕಲ್ಪನೆಯೂ ಅವನಲ್ಲಿ ಇದ್ದಿರಲಿಕ್ಕಿಲ್ಲ. ಫಲವು ಏನೇ ಆಗಲಿ. ಕೈಗೊಂಡ ಕಾರ್ಯದಲ್ಲಿ ಆತ್ಮ ಪೂರ್ವಕವಾಗಿ ತೊಡಗುವದು ಭೀಮನಲ್ಲಿ ಮಾತ್ರ ಎದ್ದು ಕಾಣುತ್ತಿದ್ದ ಮಹದ್ಗುಣ. ಕೃಷ್ಣನು ಈ ಕರ್ಮಯೋಗವನ್ನೇ ಎರಡು ದಿನಗಳ ಹಿಂದೆ ಅರ್ಜುನನಿಗೆ ಬೋಧಿಸಿದ್ದುದು. ಬೋಧನೆಯನ್ನು ಅನುಸರಿಸಿ ನಡೆಯುವದಕ್ಕೂ ಸ್ವಭಾವದಿಂದಾಗಿ ಹಾಗೆ ನಡೆಯುವದಕ್ಕೂ ವ್ಯತ್ಯಾಸವನ್ನು ಇಲ್ಲಿ ಕಾಣುತ್ತೇವೆ. ಗೀತೆಯ ತತ್ತ್ವಗಳನ್ನು ಕೇಳಿದವನು ಅರ್ಜುನ. ಆ ತತ್ತ್ವಗಳಲ್ಲಿ ಬದುಕನ್ನು ನಡೆಸುವ ಸ್ವಭಾವದವನಾಗಿದ್ದವನು ಭೀಮ. ಹೀಗೆ ಅವನು ಒಬ್ಬ ಸಿದ್ಧ ಯೋಗಿಯೂ ಹೌದು, ಅತ್ಯಂತ ಚಟುವಟಿಕೆಗಳಿಂದ ಕೂಡಿದ ಕರ್ಮಚಾರಿಯೂ ಹೌದು. ಇಂತಹ ವ್ಯಕ್ತಿತ್ವ ಮಾನವರ ಇತಿಹಾಸದಲ್ಲಿ ಸಿಕ್ಕುವದು ಅಪರೂಪ. ಕರ್ಮಾಚರಣೆಯನ್ನು ಅತ್ಯಂತ ಕನಿಷ್ಠ ಪ್ರಮಾಣಕ್ಕಿಳಿಸಿಕೊಂಡು ಮಹಾನ್ ಯೋಗಿಗಳಾಗಿದ್ದವರು ಅನೇಕ ಮಂದಿ ಸಿಕ್ಕುತ್ತಾರೆ. ಅಥವಾ ಯೋಗದ ಗೋಜಿಗೇ ಹೋಗದೆ ಅತ್ಯಂತ ದೊಡ್ಡ ಪ್ರಮಾಣದ ಚಟುವಟಿಕೆಗಳಲ್ಲಿ ತೊಡಗಿದ್ದವರೂ ಅನೇಕರು ಸಿಕ್ಕುತ್ತಾರೆ. ಯೋಗದಲ್ಲಿಯೂ ಪೂರ್ಣ ಸಿದ್ಧಿಯನ್ನು ಪಡೆದು, ಕರ್ಮಾಚರಣೆಯಲ್ಲಿಯೂ ಇನ್ನಿಲ್ಲವೆಂಬಷ್ಟು ಚಟುವಟಿಕೆಯಿಂದ ಕೂಡಿದ ವ್ಯಕ್ತಿತ್ವಕ್ಕೆ ಮಾನವನ ಇತಿಹಾಸದಲ್ಲಿ ದೊರಕುವ ಅತ್ಯುತ್ತಮ ಉದಾಹರಣೆ ಎಂದರೆ ಕೃಷ್ಣನದು. ಮಹಾಭಾರತ ಕಾಲದ ಮಟ್ಟಿಗೆ ಹೇಳುವದಾದರೆ, ಕೃಷ್ಣನ ಅನಂತರ ಇಂತಹ ವ್ಯಕ್ತಿತ್ವವನ್ನು ನಾವು ಸ್ಪಷ್ಟವಾಗಿ ಕಾಣುವದು ಭೀಮನಲ್ಲಿ ಮಾತ್ರ. ಯುದ್ಧದ ಅವನ ಚಟುವಟಿಕೆಗಳಲ್ಲಿ ಅವನ ಅಸಮಾನ ವೀರತನವನ್ನಷ್ಟೇ ಗುರುತಿಸದೆ, ಅದರ ಹಿಂದಿರುವ ಅವನ ಈ ವ್ಯಕ್ತಿತ್ವವನ್ನು ನೆನಪಿನಲ್ಲಿಟ್ಟುಕೊಳ್ಳಬಲ್ಲೆವಾದರೆ ಅವನ ಯುದ್ಧ ಚಟುವಟಿಕೆಗಳ ರಸಾನುಭವವನ್ನು ನಾವು ಇನ್ನೂ ಹೆಚ್ಚಾಗಿ ಪಡೆಯಬಹುದಾಗುತ್ತದೆ........

ರಮೆ:– ........ ಮೂರನೆಯ ದಿನದ ಯುದ್ಧವು ಆರಂಭವಾಗಿದೆ. ಅಂದು ಏನೇನು ನಡೆಯಿತು ?

ಮುರಳಿ:– ಭೀಷ್ಮನು ಪಾಂಡವ ಸೈನ್ಯವನ್ನು ಅವ್ಯಾಹತವಾಗಿ ನಾಶ ಮಾಡಲು ಪ್ರಾರಂಭಿಸಿದನು. ಇದರಿಂದ ಕೆರಳಿದ ಅರ್ಜುನನು ಕೌರವ ಪಕ್ಷದ

ವೀರರನ್ನು ತುಂಬ ನೋಯಿಸಿದನು. ಭೀಷ್ಮನಿಗೆ ಸಿಟ್ಟು ಹೆಚ್ಚಾಯಿತು. ಅವನು ರೋಷಗೊಂಡು ಅರ್ಜುನನ ಮೇಲೇರಿ ಬಂದನು. ಭೀಷ್ಮನ ಕೋಪವನ್ನು ಗಮನಿಸಿದ ಕೃಷ್ಣನು, ಭೀಷ್ಮನ ಯಾವ ಬಾಣವೂ ಅರ್ಜುನನಿಗೆ ತಗಲದಂತೆ ಅತ್ಯಂತ ಚಾಕಚಕ್ಯತೆಯಿಂದ ರಥವನ್ನು ನಡೆಸಿದನು. ಕೃಷ್ಣನ ಇಂತಹ ಅದ್ಭುತ ಸಾರಥ್ಯದಿಂದಾಗಿಯೇ ಅರ್ಜುನನು ಗೆಲ್ಲುತ್ತಿರುವದೆಂದು ನಿಶ್ಚಯಿಸಿದ ಭೀಷ್ಮನು ಅರ್ಜುನನಿಗೆ ಹೊಡೆಯುವದನ್ನು ಬಿಟ್ಟು ಕೆಲವು ಕ್ರೂರವಾದ ಬಾಣಗಳಿಂದ ಕೃಷ್ಣನ ಹಣೆಯನ್ನು ಸೀಳಿದನು. ಇದರಿಂದ ಕ್ರುದ್ಧನಾದ ಕೃಷ್ಣನು ತಾನೇ ಚಕ್ರವನ್ನು ಹಿಡಿದು ರಥದಿಂದ ಕೆಳಗೆ ಹಾರಿ ಭೀಷ್ಮನನ್ನು ಕೊಲ್ಲುವದಕ್ಕೆಂದು ಮುನ್ನುಗ್ಗಿದನು. ಇದು ಯುದ್ಧದ ಬಾಹ್ಯ ಚಟುವಟಿಕೆಯಾಗಿದ್ದಿತಷ್ಟೇ ಹೊರತು ಆಂತರ್ಯದಲ್ಲಿ ಭೀಷ್ಮನು ಕೃಷ್ಣನ ಭಕ್ತನಾಗಿದ್ದನು. ಇದು ಕೃಷ್ಣನಿಗೂ ಗೊತ್ತಿದ್ದಿತು. ತನ್ನನ್ನು ಕೊಲ್ಲಲು ಬರುತ್ತಿರುವ ಕೃಷ್ಣನಿಗೆ ಭೀಷ್ಮನು ತನ್ನ ಆಂತರ್ಯವನ್ನು ಬಿಚ್ಚಿ ತೋರಿಸಿದನು. ಕೃಷ್ಣನು ಹಿಂದಿರುಗಿ ಬಂದು ಅರ್ಜುನನ ರಥವನ್ನು ಹತ್ತಿ ಕುದುರೆಗಳನ್ನು ಹೊಡೆಯಲು ಪ್ರಾರಂಭಿಸಿದನು.

ನಾಲ್ಕನೆಯ ದಿನದ ಯುದ್ಧ ಪ್ರಾರಂಭವಾಯಿತು. ಆ ದಿನವೂ ಭೀಮನ ಶತ್ರುನಾಶ ಕಾರ್ಯ ಅವ್ಯಾಹತವಾಗಿ ಮುಂದುವರಿಯಿತು. ಇದನ್ನು ತಾಳಿಕೊಳ್ಳಲಾರದೆ ದುರ್ಯೋಧನನು ತನ್ನ ಎಲ್ಲ ಸೈನ್ಯವೂ ಒಟ್ಟಾಗಿ ಸೇರಿ ಭೀಮನನ್ನು ಒಮ್ಮೆಗೇ ಮುತ್ತಿ ಕೊಲ್ಲಬೇಕೆಂದು ಆಜ್ಞಾಪಿಸಿದನು. ದುರ್ಯೋಧನನ ಮಹತ್ತಾದ ಆ ಸೈನ್ಯಸಾಗರವು ಒಂದು ಮೊತ್ತವಾಗಿ ಭೀಮನ ಮೇಲೆ ಹೀಗೆ ನುಗ್ಗಿ ಬೀಳುತ್ತಿದ್ದಾಗಲೂ ಅವನು ಮಂದರ ಪರ್ವತದಂತೆ ಅಚಲವಾಗಿಯೇ ನಿಂತು ಯುದ್ಧ ಮಾಡಿದನು. ವೀರರ ವೀರನಾದ ಅವನು ಗದಾಧಾರಿಯಾಗಿ ಯಮನಂತೆ ಶತ್ರು ಸೈನ್ಯದ ಮೇಲೆ ಏರಿ ಹೋದನು. ಸಂಹಾರ ಕಾರ್ಯದಲ್ಲಿ ಅವಿಶ್ರಾಂತವಾಗಿ ತೊಡಗಿದ್ದ ಅವನ ಆಗಿನ ರೂಪವು ಭಯಂಕರವಾಗಿದ್ದಿತು. ಅವನ ಈ ಅತ್ಯದ್ಭುತ ಧೈರ್ಯದ ಮುಂದೆ ಶತ್ರು ಸೈನ್ಯವೇ ಧೈರ್ಯಗೆಟ್ಟಿತು. ಕೊನೆಕೊನೆಗೆ ಭೀಮನು ಯಾವ ಕಡೆಗೆ ದೃಷ್ಟಿ ಹೊರಳಿಸಿದನೆಂದರೆ ಆ ಭಾಗದಲ್ಲಿ ಒಂದು ನರಪಿಳ್ಳೆಯೂ ಇಲ್ಲವಾಗುವಂತೆ ಶತ್ರು ಸೈನ್ಯವು ಮರೆಯಾಗುತ್ತಿದ್ದಿತು.

ರಮೆ:– ಅಬ್ಬ. ಕುರುಕ್ಷೇತ್ರ ಎಂದರೆ ಕೌರವರಿಗೂ ಪಾಂಡವರಿಗೂ ನಡೆದ ಯುದ್ಧ ಎಂದುಕೊಂಡಿದ್ದೆ. ಆದರೆ ಅದು ನಡೆದುದು ಕೌರವರಿಗೂ, ಭೀಮನಿಗೂ ಎಂದಂತಾಯಿತು. ಇಷ್ಟೆಲ್ಲಾ ಇದ್ದರೂ ನೀವು ನಿಮ್ಮ ಎಂದಿನ ಒಗ್ಗರಣೆ ಸೇರಿಸದೆ ಸುಮ್ಮನೆ ಕತೆ ಹೇಳುತ್ತಿದ್ದೀರಲ್ಲ. ಯಾಕೆ?

ಮುರಳಿ:– ಏನು ಒಗ್ಗರಣೆ?

ರಮೆ:– ಹಾಗಲ್ಲ. ಈವರೆಗೆ ಅವನ ಒಂದೊಂದು ಮಾತಿಗೂ ಇರುವ ವಿಶೇಷಾರ್ಥವನ್ನೂ, ಆ ಮೂಲಕ ವ್ಯಕ್ತವಾಗುತ್ತಿದ್ದ ಅವನ ವ್ಯಕ್ತಿತ್ವವನ್ನೂ– ಅದೆಲ್ಲ ನಿಜವೋ, ಸುಳ್ಳೋ ಅಂತೂ– ನನ್ನ ತಲೆಗೆ ತುಂಬಿ ಚಿಟ್ಟು ಹಿಡಿಸುತ್ತಿದ್ದಿರಲ್ಲ? ಆದರೆ ಈಗ ಕುರುಕ್ಷೇತ್ರ ಯುದ್ಧದ ಮೊದಲಿನ ನಾಲ್ಕು ದಿನಗಳಲ್ಲಿಯೂ ಭೀಮನು ತಾನೇ ತಾನಾಗಿ ಎದುರಿಲ್ಲದೆ ಯುದ್ಧ ಮಾಡುತ್ತಿದ್ದು ಇತರ ವೀರರನ್ನೆಲ್ಲ ಅಗಣ್ಯರನ್ನಾಗಿ ಮಾಡಿಬಿಟ್ಟಿರುವಾಗಲೂ ನೀವು ಆ ಕುರಿತು ಒಂದು ಮೆಚ್ಚುಗೆಯ ಮಾತನ್ನೂ ಆಡದೆ ಸುಮ್ಮನೆ ಕತೆ ಹೇಳಿಕೊಂಡು ಹೋಗುತ್ತಿದ್ದೀರಲ್ಲ, ಅದಕ್ಕೆ ಹೇಳಿದೆ.

ಮುರಳಿ:– ಹಾಗೆ. ಇದರಲ್ಲಿ ಹೇಳುವದೇನಿದೆ? ಅವರವರ ಕಲ್ಪನೆಯಿಂದ ಅವನ ಶೂರತನವನ್ನು ತೂಗಿಕೊಳ್ಳಬಹುದು. ಪೌರುಷ, ನಿರ್ಭೀತಿತನ, ಉತ್ಸಾಹ, ದಣಿವಿಲ್ಲದೆ ಹೋರಾಡುವದು– ಇವುಗಳಲ್ಲೆಲ್ಲಾ ಭೀಮನ ಕುರಿತು ವಿವರಿಸುವದು ದುಸ್ಸಾಹಸವಾಗುತ್ತದೆ; ಸೂರ್ಯನು ಈ ದೀಪಕ್ಕಿಂತಲೂ ಹೆಚ್ಚು ಪ್ರಕಾಶವುಳ್ಳವನು ಎಂದು ವಿವರಿಸಿದಂತಾಗುತ್ತದೆ. ಅಲ್ಲದೆ, ನಾನಾಗಿ ಭೀಮನ ಹೆಚ್ಚುಗಾರಿಕೆಯನ್ನು ಹೇಳುವದಕ್ಕಿಂತಲೂ ಈ ರೀತಿ ನೀನೇ ತಡೆಯಲಾರದೆ ಹೇಳುವಂತಾದರೆ ಅದಕ್ಕೆ ಬೆಲೆಯೂ ಹೆಚ್ಚಾಗುತ್ತದೆ. ಹಾಗಾಗಿ ನಾನು ವಿವರಿಸಲಿಲ್ಲ, ಮುಂದಕ್ಕೆ ಕೇಳು.

ಯುದ್ಧದ ಐದನೆಯ ಮತ್ತು ಆರನೆಯ ದಿವಸಗಳಲ್ಲಿಯೂ ಭೀಮನ ಸಂಹಾರ ಕಾರ್ಯ ಇದೇ ರೀತಿ ಮುಂದುವರಿಯಿತು. ಕೌರವ ಸೈನ್ಯವನ್ನೆಲ್ಲ ಭೀಮನೊಬ್ಬನೇ ಈ ರೀತಿ ಮುಗಿಸಿಬಿಡುತ್ತಾನೆಂಬಂತೆ ಕಂಡು ಬರಲು ಇದರಿಂದ ಹೆದರಿದ ದುರ್ಯೋಧನನು ಆರನೆಯ ದಿನ ರಾತ್ರಿ ಭೀಷ್ಮನಲ್ಲಿಗೆ ಬಂದು "ತಾತಾ, ನಮ್ಮ ಸೈನ್ಯದಲ್ಲಿ ಲೆಕ್ಕವಿಲ್ಲದಷ್ಟು ಧ್ವಜಗಳೇನೋ ಇವೆ. ಆದರೆ ದಂಡಪಾಣಿಯಾದ ಯಮನಂತಿರುವ ಆ ಭೀಮನೊಬ್ಬನೇ ನಮ್ಮ ಸೈನ್ಯವೆಲ್ಲವನ್ನೂ ಆಹುತಿ ತೆಗೆದುಕೊಳ್ಳುತ್ತಿದ್ದಾನೆ. ಅವನನ್ನು ಸಹಿಸುವದೇ ದುಸ್ಸಾಧ್ಯವಾಗಿದೆ. ನಿನ್ನಂತಹ ಮಹಾವೀರನು ಸೇನಾಪತಿಯಾಗಿರುವಾಗಲೂ ಹೀಗಾಗಬಹುದೇ?" ಎಂದು ತನ್ನ ಆತಂಕವನ್ನು ಹೇಳಿಕೊಂಡಾಗ ಭೀಷ್ಮನು ಮಾರನೆಯ ದಿನ ತಾನು ಯುದ್ಧವನ್ನು ಸರಿಯಾಗಿ ಮಾಡುವದಾಗಿ ಹೇಳಿ ಕಳುಹಿಸಿದನು.

ರಮೆ:– ಯುದ್ಧದಲ್ಲಿ ಸರಿಯಾಗಿ, ತಪ್ಪಾಗಿ ಎಂದು ಎರಡು ಕ್ರಮಗಳಿವೆಯಾ?

ಮುರಳಿ:– ಹೌದು. ದುರ್ಯೋಧನನ ಇಚ್ಛೆ ತನ್ನ ಸೈನ್ಯದ ಒಬ್ಬ ಯೋಧನೂ ಸಾಯದೆ, ಪಾಂಡವ ಸೈನ್ಯವು ಪಾಂಡವರ ಸಹಿತವಾಗಿ ಸಂಪೂರ್ಣ

ನಾಶವಾಗಬೇಕೆಂಬದು. ಭೀಷ್ಮನ ಇಚ್ಛೆ ಅದಲ್ಲ. ದುರ್ಯೋಧನ ಮತ್ತು – ಬಹುಶಃ – ಅವನ ತಮ್ಮಂದಿರು – ಇವರಿಗೆ ತನ್ನ ನಾಯಕತ್ವದಲ್ಲಿ ಅಪಾಯವಾಗ ಬಾರದೆಂಬದಷ್ಟೇ ಅವನ ಗುರಿ. ಅನಿವಾರ್ಯವಾಗಿ ಸಾಯಲು ಸೇರಿರುವ ಈ ಎರಡೂ ಕಡೆಯ ಸೈನ್ಯಗಳಲ್ಲಿ ಕೌರವ – ಪಾಂಡವರ ಹೊರತು ಇತರ ಎಲ್ಲವೂ ಎಷ್ಟು ಬೇಗ ನಾಶವಾದರೆ ಯುದ್ಧವು ಅಷ್ಟು ಬೇಗ ಮುಗಿದೀತು ಎಂದು ಅವನು ಆಶಿಸಿದ್ದರೂ ಇರಬಹುದು. ತಾನು ಯಾರಿಗಾಗಿ ಯುದ್ಧಮಾಡುತ್ತಿದ್ದಾನೋ ಆ ದುರ್ಯೋಧನನಿಗೆ ಈಗ ಕಳವಳವಾಗಿರುವದರಿಂದ ಅದನ್ನು ನಿವಾರಿಸುವಷ್ಟರ ಮಟ್ಟಿಗೆ ಮರುದಿವಸ ಯುದ್ಧ ಮಾಡಲು ಅವನು ನಿರ್ಧರಿಸಿದುದರಿಂದಲೇ ಹಾಗೆ ಹೇಳಿದುದು. ಕೇಳು.

ಏಳನೆಯ ದಿನದ ಯುದ್ಧವೂ ಸುಮಾರಾಗಿ ಹಿಂದಿನ ದಿನಗಳ ಯುದ್ಧ ದಂತೆಯೇ ನಡೆಯಿತು.

ಎಂಟನೆಯ ದಿನ ಭೀಷ್ಮನು ರೋಷಾವಿಷ್ಟನಾಗಿ ಯುದ್ಧ ಮಾಡಿದನು. ಯುಧಿಷ್ಠಿರನ ಆಜ್ಞೆಯ ಪ್ರಕಾರ ಸಮಸ್ತ ಪಾಂಡವ ಸೈನ್ಯವೂ ಅವನನ್ನೆದುರಿಸಿತು. ಆ ಇಡಿಯ ಸೈನ್ಯದಲ್ಲಿ ಭೀಮನೊಬ್ಬನ ಹೊರತು ಇತರ ಎಲ್ಲರೂ ಭೀಷ್ಮಾಸ್ತ್ರದಿಂದ ಗಾಯಗೊಂಡರು. ಭೀಮನು ಭೀಷ್ಮನೊಂದಿಗೆ ಯುದ್ಧ ಮಾಡಿ ಅವನ ಕುದುರೆ ಗಳನ್ನು ಕೊಂದು ಹಾಕಿದನು. ಕಣ್ಣಿಗೆ ಬಿದ್ದ ದುರ್ಯೋಧನನ ಎಂಟು ಮಂದಿ ತಮ್ಮಂದಿರನ್ನು ಆಹುತಿ ತೆಗೆದುಕೊಂಡನು. ಉಳಿದ ತಮ್ಮಂದಿರು ಪ್ರಾಣಭಯ ದಿಂದ ಓಡಿಹೋದರು.

ರಮೆ:– ಆಗ ಭೀಷ್ಮನೇನು ಸುಮ್ಮನೆ ನೋಡುತ್ತಿದ್ದನೆ ?

ಮುರಳಿ:– ಅವನು ಹೊಸ ರಥವನ್ನು ಏರುವದರೊಳಗೆ ಭೀಮನು ನಡೆಸಿದ ಕಾರ್ಯ ಇದು. ತನ್ನ ತಮ್ಮಂದಿರ ಮೊದಲ ಆಹುತಿಯಿಂದ ಬಹಳವಾಗಿ ನೊಂದ ದುರ್ಯೋಧನನು ಭೀಷ್ಮನಲ್ಲಿಗೆ ಹೋಗಿ ಭೀಮನ ಅಸಾಮಾನ್ಯ ಪರಾಕ್ರಮವನ್ನು ಪುನಃ ವರ್ಣಿಸಿ ಭೀಷ್ಮನು ಬೇಕು ಬೇಕೆಂದೇ ಉಪೇಕ್ಷೆಯಿಂದ ಯುದ್ಧ ಮಾಡು ತ್ತಿದ್ದಾನೆಂದು ಆಕ್ಷೇಪಿಸಿದನು. ಆದರೆ ಭೀಷ್ಮನು ದುರ್ಯೋಧನನಿಗೆ ಭೀಮನ ಪ್ರತಿಜ್ಞೆಯನ್ನು ನೆನಪು ಮಾಡಿಕೊಟ್ಟು ಅವನ ಕಣ್ಣಿಗೆ ಬಿದ್ದ ಧೃತರಾಷ್ಟ್ರ ಪುತ್ರ ರನ್ನು ರಕ್ಷಿಸುವದು ಸಾಧ್ಯವಾಗಲಿಕ್ಕಿಲ್ಲವೆಂದು ತಿಳಿಸಿ ಪುನಃ ಯುದ್ಧಕ್ಕೆದು ರಾದನು.

ರಮೆ:– ಭೀಮನೇ. ಭೀಮ ಭೀಮನೇ.

ಮುರಳಿ:– ಭೀಮನೇ. ಕೇಳು.

ಒಂಬತ್ತನೆಯ ದಿನದ ಯುದ್ಧವೂ ಹೀಗೆಯೇ ಮುಗಿಯಿತು. ಈ ವರೆಗೆ ಭೀಮನು ಹೇಗೆ ಕೌರವ ಸೈನ್ಯವನ್ನು ಮನಸ್ವಿಯಾಗಿ ಕೊಂದಿದ್ದನೋ, ಭೀಷ್ಮನು ಪಾಂಡವ ಸೈನ್ಯದಲ್ಲಿ ತಾನು ಇಚ್ಛಿಸಿದಷ್ಟು ಸಂಖ್ಯೆಯ ವೀರರನ್ನೂ ಕೊಂದಿದ್ದನು. ಹೀಗೆಯೇ ಮುಂದುವರಿದರೆ ಭೀಷ್ಮನು ಪಾಂಡವ ಸೈನ್ಯವನ್ನು ನಿಶ್ಶೇಷಗೊಳಿಸುವದು ನಿಶ್ಚಯ ಎಂದು ಪಾಂಡವರು ಹೆದರಿದರು.

ರಮೆ:– ಹಾಗಿದ್ದರೆ ಭೀಷ್ಮನನ್ನು ಸೋಲಿಸಲು ಯಾರಿಗೂ–ಭೀಮನಿಗೂ ಕೂಡ ಸಾಧ್ಯವಿರಲಿಲ್ಲ ಎಂದಂತಾಯಿತು.

ಮುರಳಿ:– ಹೌದು. ಅವನು ಅಸಮಾನ ವೀರ. ಜೊತೆಗೆ ಬಾಲ ಬ್ರಹ್ಮಚಾರಿ. ಸಾಲದುದಕ್ಕೆ ಇಚ್ಛಾಮರಣಿ. ಹಾಗಾಗಿ ಒಂಬತ್ತನೆಯ ದಿನದ ರಾತ್ರಿ ಕೃಷ್ಣನ ಸಲಹೆಯ ಪ್ರಕಾರ ಯುಧಿಷ್ಠಿರಾದಿಗಳು ಭೀಷ್ಮನನ್ನು ಏಕಾಂತದಲ್ಲಿ ಕಂಡು ತಮ್ಮನ್ನು ಅವನು ರಕ್ಷಿಸಬೇಕೆಂದು ಕೇಳಿಕೊಂಡರು. ಮಾರನೆಯ ದಿನ ಅವರು ಶಿಖಂಡಿಯನ್ನು ತನ್ನ ಮುಂದೆ ನಿಲ್ಲಿಸಿದರೆ ತಾನು ಯುದ್ಧ ನಿಲ್ಲಿಸಿ ಶಸ್ತ್ರ ತ್ಯಾಗ ಮಾಡುವದಾಗಿಯೂ ಆಗ ಅರ್ಜುನನು ತನ್ನನ್ನು ಹೊಡೆಯಬಹುದೆಂದೂ ತಿಳಿಸಿದನು.

ರಮೆ:– ಛೆ. ಎಂತಹ ಪರಿಸ್ಥಿತಿ !

ಮುರಳಿ:– ಹೌದು. ಕೇಳು.

ಹತ್ತನೆಯ ದಿನದ ಯುದ್ಧವು ಭಯಂಕರವಾಗಿ ಸಾಗಿತು. ಭೀಷ್ಮನನ್ನು ಭೀಮನು ಎದುರಿಸಿದನು. ಭೀಷ್ಮನ ಸಹಾಯಕ್ಕೆ ಭಗದತ್ತ, ಕೃಪ, ಶಲ್ಯ, ಕೃತವರ್ಮ ವಿಂದಾನುವಿಂದರು, ಜಯದ್ರಥ, ಚಿತ್ರಸೇನ, ದುರ್ಮರ್ಷಣ ಮೊದಲಾದವರು ಧಾವಿಸಿ ಬಂದು ಏಕಕಾಲದಲ್ಲಿ ಭೀಮನನ್ನು ಮುತ್ತಿ ಹೊಡೆದರು. ಭೀಮನೊಬ್ಬನೇ ಯುದ್ಧ ಮಾಡುತ್ತಾ ಅವರೆಲ್ಲರನ್ನೂ ಬಳಲಿಸಿದನು. ಎಲ್ಲರಿಗೂ ಗಾಯಗಳಾದವು. ಅಷ್ಟು ಜನರನ್ನೂ ಹೊಡೆದು ಭೀಮನು ಉತ್ಸಾಹದಿಂದ ಸಿಂಹನಾದ ಮಾಡುತ್ತಿದ್ದುದನ್ನು ಅವರು ಸಹಿಸದಾದರು. ಆದರೂ ಅವರು ಭೀಮನನ್ನು ಏನೂ ಮಾಡುವಂತಿರಲಿಲ್ಲ.

ರಮೆ:– ಹೀಗೆ, ಹೋಗೀ ಬಂದು ಭೀಮನೊಬ್ಬನೇ ಪಾಂಡವ ಬಲದ ಅಗ್ರದಲ್ಲಿ ನಿಂತು ಯುದ್ಧಮಾಡಬೇಕಾಗಿದ್ದರೆ ಅವರ ಕಡೆಯ ಇತರರೆಲ್ಲರೂ ಏನು ಮಾಡುತ್ತಿದ್ದರು ಅಂತ ?

ಮುರಳಿ:– ಈಗ ಕೇಳು. ಭೀಮನ ಸಹಾಯಕ್ಕೆಂದು ಅರ್ಜುನನು ಬಂದನು.

ರಮೆ:– ಎಲ್ಲಿಂದ ?

ಮುರಳಿ:– ಯುದ್ಧರಂಗದಿಂದಲೇ. ಇನ್ನೆಲ್ಲಿಂದ ?

ರಮೆ:– ಯಾವದೋ ಮೂಲೆಯಿಂದ ಅನ್ನಿ.

ಮುರಳಿ:– ನೀನ್ಯಾಕೆ ಅವನ ಮೇಲೆ ಹಾರಿ ಬೀಳುತ್ತೀ, ಪಾಪ, ಕೇಳು. ಭೀಮಾರ್ಜುನರಿಬ್ಬರೂ ಶತ್ರುಗಳೊಡನೆ ಪ್ರಚಂಡವಾಗಿ ಯುದ್ಧ ಮಾಡಿದರು. ಅಷ್ಟರಲ್ಲಿ ಭೀಷ್ಮನೊಂದಿಗೆ ಯುದ್ಧ ಮಾಡಲು ಶಿಖಂಡಿಯು ಬಂದನು. ಭೀಷ್ಮನು ತಕ್ಷಣವೇ ಶಸ್ತ್ರಗಳನ್ನು ಕೈಬಿಟ್ಟು ನಿರಾಯುಧನಾಗಿ ರಥದಲ್ಲಿ ಕುಳಿತನು. ಹೀಗೆ ಕುಳಿತಿದ್ದ ಅವನನ್ನು ಅರ್ಜುನನು ಕ್ರೂರವಾದ ಬಾಣಗಳಿಂದ ಹೊಡೆದು ಕೆಡವಿದನು.

ರಮೆ:– ....... ಹಾಗೆ. ಶಿಖಂಡಿ ಬರುತ್ತಾನೆಂದು ತಿಳಿದು ಅರ್ಜುನನು ಬಂದದ್ದು–ಭೀಷ್ಮನೊಂದಿಗೆ ಇಂತಹ ಘೋರವಾದ ಯುದ್ಧವನ್ನು ಮಾಡಲು !

ಮುರಳಿ:– ಮಧ್ಯೆ, ಮಧ್ಯೆ ರಸಭಂಗ ಮಾಡದೆ ಕೇಳು ರಮಾ. ಸೇನಾಧಿಪತಿಯಾದ ಭೀಷ್ಮನು ರಥದಲ್ಲಿ ಉರುಳಿ ಬಿದ್ದ ತಕ್ಷಣವೇ ದುರ್ಯೋಧನನ ಎದೆಯಲ್ಲಿ ಶೂಲ ಚುಚ್ಚಿದಂತಾಯಿತು. ಅವನೂ, ಹರ್ಷ, ದುಃಖಗಳಿಂದ ಕೂಡಿದ ಪಾಂಡವರೂ ಭೀಷ್ಮನನ್ನು ಸುತ್ತಿ ನಿಂತರು. ಪಾಂಡವರೊಂದಿಗೆ ಸಂಧಿ ಮಾಡಿಕೊಳ್ಳುವಂತೆ ಭೀಷ್ಮನು ದುರ್ಯೋಧನನಿಗೆ ಈಗಲೂ ಸಲಹೆ ಮಾಡಿದನು. ಛಲದಂಕಮಲ್ಲನಾದ ದುರ್ಯೋಧನನು ಆ ಮಾತನ್ನು ಒಪ್ಪುವಂತಿರಲಿಲ್ಲ. ಅಷ್ಟರಲ್ಲಿ ಭೀಮನು ದುರ್ಯೋಧನನು ಸಂಧಿಗೆ ಒಪ್ಪುವದಾದರೂ ಕೂಡ ತಾನು ತನ್ನ ಪ್ರತಿಜ್ಞೆಯನ್ನು ಪೂರೈಸುವದೇ ನಿಶ್ಚಯ ಎಂದು ಸ್ಪಷ್ಟಪಡಿಸಿದನು. ಯುಧಿಷ್ಠಿರನು ಅವನನ್ನು ಗದರಿಸಿದನು.

ರಮೆ:– ಯಾಕೆ ?

ಮುರಳಿ:– ಕುಲಕ್ಕೇ ಪಿತಾಮಹನಾದ ಭೀಷ್ಮನ ಹಿತವಚನವನ್ನು ತಿರಸ್ಕರಿಸಿ ಅವನನ್ನು ಕಡೆಗಣಿಸಿದುದು ಭೀಮನ ಉದ್ಧಟತನ ಎಂಬದಕ್ಕಾಗಿ ಇರಬೇಕು.

ರಮೆ:– ಶಸ್ತ್ರವಿಲ್ಲದೆ ಸುಮ್ಮನೆ ಕುಳಿತ ಅದೇ ಪಿತಾಮಹನನ್ನು ಹೊಡೆದು ಉರುಳಿಸಿದುದು ಉದ್ಧಟತನವಲ್ಲ ! ಭೀಮನ ನಿಷ್ಕಪಟವಾದ ನೇರ ಮಾತುಗಳು ಉದ್ಧಟತನವಾಗಿಬಿಟ್ಟವಂತೊ ?

ಮುರಳಿ:– ಯಾರನ್ನು ಕೇಳುತ್ತಿ ? ಸುಮ್ಮನೆ ಕತೆ ಕೇಳು. ಕೇಳು. ಇತರರೆಲ್ಲ ಹೊರಟುಹೋದ ಮೇಲೆ ಭೀಷ್ಮನು ದ್ರೋಣ, ಕೃಪ ಮೊದಲಾದ ಕೆಲವರನ್ನು ತನ್ನ ಬಳಿಗೆ ಕರೆದು ಅವರು ಸತ್ಯಕ್ಕಾಗಿ ಶ್ರಮಿಸಬೇಕೆಂದೂ ಕೌರವ – ಪಾಂಡವರ ಸಮಸ್ತ ವಿಷಯಗಳನ್ನೂ ಬಲ್ಲ ಅವರು ಕೃಷ್ಣನ ಇಚ್ಛೆಯ ಪೂರೈಕೆಯಾಗುವಂತೆ ನಡೆದುಕೊಳ್ಳಬೇಕೆಂದೂ ಸಲಹೆ ನೀಡಿದನು.

ರಮೆ:– ಇದೆಲ್ಲ ಏನು ಅಂತ ?

ಮುರಳಿ:– ಯಾವದೆಲ್ಲ ?

ರಮೆ:– ತಮಗೆಲ್ಲರಿಗೂ ಹಿರಿಯನೂ, ಗೌರವಾರ್ಹನೂ, ತನ್ನ ಉಪದೇಶಕ್ಕನುಸಾರವಾಗಿ ನಡೆದು ತೋರಿಸಿರುವವನೂ ಆದ ಭೀಷ್ಮನು ಹೀಗೆ ಸಲಹೆ ಮಾಡಿದ ಮೇಲೆ ದ್ರೋಣಾದಿಗಳು ಅದೆಷ್ಟು ಘೋರವಾಗಿ ಯುದ್ಧ ಮಾಡಿದ್ದಾರು ?

ಮುರಳಿ:– ಕೌರವ ವೀರರುಗಳ ಕತೆ ಹೀಗಾದುದರಿಂದ ತಾನೇ ಪಾಂಡವರು ಅವರನ್ನು ಗೆಲ್ಲಲು ಸಾಧ್ಯವಾದುದು ? ಇಲ್ಲವಾಗಿದ್ದರೆ ದುರ್ಯೋಧನನ ಕಡೆಯ ವೀರರೆಲ್ಲ ಎಂಥವರು, ಅವರ ಸಂಖ್ಯೆ ಎಷ್ಟು, ಏನು ಕತೆ !

ರಮೆ:– ಅಷ್ಟು ಸುಲಭದಲ್ಲಿ ಅದನ್ನು ಮುಗಿಸುವದೂ ತಪ್ಪಾಗುತ್ತದೆ. ಕುರುಬಲದಲ್ಲಿ ಜಯಾಕಾಂಕ್ಷೆಯಿಂದ ಹಾಗೂ ತಮ್ಮ ಸಮಸ್ತ ಶಕ್ತಿಯನ್ನೂ ಬಳಸಿಕೊಂಡು ಯುದ್ಧ ಮಾಡಿದವರು ಯಾರೂ ಇಲ್ಲವೇ ಇಲ್ಲ ಎಂದು ನೀವು ಹೇಳಿದಂತಾಗುತ್ತದೆ.

ಮುರಳಿ:– ಆಗಲಿ. ಹಾಗಾದರೆ ಜಯಾಕಾಂಕ್ಷೆಯಿಂದ ಯುದ್ಧಮಾಡಿದವರು ಯಾರಿದ್ದರು ಎನ್ನುತ್ತಿ ?

ರಮೆ:– ಯಾಕಿಲ್ಲ ? ಅರ್ಜುನನು ಜಯಿಸಿದನೆನ್ನಲಾದ ಬಿಲ್ಗಾರರೆನಿಸಿಕೊಂಡ ಭೀಷ್ಮ, ದ್ರೋಣ, ಕರ್ಣ, ಕೃಪ, ಅಶ್ವತ್ಥಾಮ ಮೊದಲಾದವರು ಅರೆ ಮನಸ್ಸಿನಿಂದಲೋ ಯಾವ ಯಾವದೋ ಭಾಷೆ, ವೈಮನಸ್ಯ, ಮೊದಲಾದವುಗಳಿಗೆ ಕಟ್ಟುಬಿದ್ದೋ ಪೂರ್ಣ ಪ್ರಮಾಣದ ಯುದ್ಧ ಮಾಡಲಿಲ್ಲವೇ ಹೊರತು ಕೌರವ ಬಲದ ಇತರರೆಲ್ಲರೂ ಜಯಾಕಾಂಕ್ಷೆಯಿಂದಲೇ ಯುದ್ಧ ಮಾಡಿದ್ದಾರೆ ತಾನೆ !

ಮುರಳಿ:– ಏನು ಹೇಳಲು ಹೊರಟಿದ್ದೀ ?

ರಮೆ:– ಹಾಗಲ್ಲ. ಕುರುಕ್ಷೇತ್ರದಲ್ಲಿ ಅರ್ಜುನನು ಎದುರಿಸಿದ ವೀರರೆಲ್ಲರೂ ಹೆಚ್ಚು ಕಡಿಮೆ ತಾವು ಸಾಯುವದೇ ನಿಶ್ಚಯ ಎಂದು ತೀರ್ಮಾನಿಸಿದ್ದವರೆಂದೂ, ಭೀಮನು ಎದುರಿಸಿದವರೆಲ್ಲರೂ ಶತ್ರುಗಳನ್ನು ಕೊಲ್ಲಲೆಂದೇ ಸಿದ್ಧರಾಗಿದ್ದವರೆಂದೂ ಅನಿಸಿತು. ಅದಕ್ಕೆ ಹೇಳಿದೆ. ನಿಮಗೆ ಹೇಗನ್ನಿಸುತ್ತದೆ ?

ಮುರಳಿ:– ಈಗಲೇ ಅದರ ವಿಮರ್ಶೆ ಏಕೆ ? ಯುದ್ಧವೆಲ್ಲ ಮುಗಿದ ಮೇಲೆ ಬೇಕಿದ್ದರೆ ವಿಮರ್ಶಿಸೋಣ. ಈಗ ತೆಪ್ಪಗೆ ಕೇಳು.

ರಮೆ:– ಆಗಲಿ. ಹೇಳಿ.

ಮುರಳಿ:– ಭೀಷ್ಮನ ಘಾತದ ಅನಂತರ ದುರ್ಯೋಧನನು ಸರ್ವರ ಸಮ್ಮತಿಯಂತೆ ದ್ರೋಣಾಚಾರ್ಯನಿಗೆ ಸೈನ್ಯಾಧಿಪತ್ಯವನ್ನು ವಹಿಸಿದನು. ದ್ರೋಣನು

ಸ್ವಲ್ಪ ಮಟ್ಟಿಗೆ ಮೋಹಪರವಶವಾದ ಸ್ವಭಾವದವನು. ಶಿಷ್ಯನಾದ ದುರ್ಯೋಧನ ನಿಂದ ವಿಶೇಷವಾಗಿ ಗೌರವಿಸಲ್ಪಟ್ಟ ಅವನು ಆ ಗುಂಗಿನಲ್ಲಿ, ತಾನು ಮಾರನೆಯ ದಿನ ಯುಧಿಷ್ಠಿರನನ್ನೇ ಹಿಡಿದು ತಂದು ದುರ್ಯೋಧನನಿಗೆ ಒಪ್ಪಿಸುವದಾಗಿ ಮಾತು ಕೊಟ್ಟನು.

ಈ ಮಾತಿನ ಪ್ರಕಾರ ಅವನು ಹನ್ನೊಂದನೆಯ ದಿನದ ಯುದ್ಧದಲ್ಲಿ ಯುಧಿಷ್ಠಿರನನ್ನು ಹಿಡಿಯಲು ಪ್ರಯತ್ನಿಸುತ್ತಿದ್ದಾಗ ಅರ್ಜುನನು ಅವನೊಂದಿಗೆ ನಿರಂತರವಾಗಿ ಪ್ರತಿಯುದ್ಧ ಮಾಡುತ್ತಿದ್ದು ಹಾಗೆಯೇ ಕತ್ತಲಾಗಿಬಿಟ್ಟುದರಿಂದ ಆ ದಿನ ಯುಧಿಷ್ಠಿರನನ್ನು ಹಿಡಿಯಲಾಗಲಿಲ್ಲ. ದ್ರೋಣನು ವಿಫಲ ಮನಸ್ಕನಾಗಿ ಆ ದಿನ ಹಿಂತಿರುಗಬೇಕಾಯಿತು. ಅಂದಿನ ರಾತ್ರೆ ದುರ್ಯೋಧನನ ಸಭೆಯಲ್ಲಿ ಅವನು ಅರ್ಜುನನ ಅಸಾಧಾರಣ ಪರಾಕ್ರಮುವನ್ನು ವಿವರಿಸಿ ಅವನೊಬ್ಬನಿಂದ ತಾನು ದುರ್ಯೋಧನನಿಗೆ ಕೊಟ್ಟ ಭರವಸೆ ಸುಳ್ಳಾಗಬೇಕಾಯಿತೆಂದು ಹೇಳಿದನು. ಅಷ್ಟರಲ್ಲಿ ಸಭೆಯಲ್ಲಿದ್ದ ಸಂಶಪ್ತಕರೆಂಬವರು ತಾವು ಮಾರನೆಯ ದಿನದಿಂದ ಅರ್ಜುನನಿಗೆ ಬಿಡುವು ದೊರೆಯದಂತೆ ಅವನನ್ನು ಯುದ್ಧ ಚಟುವಟಿಕೆಯಲ್ಲಿ ಅವ್ಯಾಹತವಾಗಿ ತೊಡಗಿಸಿ ಅವನನ್ನು ತಡೆಹಿಡಿದಿಟ್ಟುಕೊಳ್ಳುವದಾಗಿಯೂ, ಆದ್ದರಿಂದ ದ್ರೋಣನು ಅರ್ಜುನನನ್ನು ಎದುರಿಸುವ ಅವಕಾಶವೇ ಉಂಟಾಗ ದಂತಾಗುವದರಿಂದ ಅವನು ನಿರಾತಂಕವಾಗಿ, ತನ್ನ ಮನಸ್ಸಿಗೆ ಅನುಗುಣವಾಗಿ ಯುದ್ಧಮಾಡಬಹುದೆಂದೂ ಅಗ್ನಿಸಾಕ್ಷಿಯಾಗಿ ಘೋಷಿಸಿದರು.

ದ್ರೋಣನು ಸಂತೋಷದಿಂದ ಹನ್ನೆರಡನೆಯ ದಿನದ ಯುದ್ಧವನ್ನು ಪ್ರಾರಂಭಿಸಿದನು. ತಮ್ಮ ಮಾತಿನ ಪ್ರಕಾರವೇ ತ್ರಿಗರ್ತರು– ಅಂದರೆ– ಸಂಶಪ್ತಕರು– ಅರ್ಜುನನನ್ನು ತಮ್ಮೊಡನೆ ಯುದ್ಧಕ್ಕೆ ಆಹ್ವಾನಿಸಿದರು. ಭೀಮನು ಬೇರೊಂದೆಡೆ ಯುದ್ಧ ಮಾಡುತ್ತಿದ್ದನು. ಯುಧಿಷ್ಠಿರನ ರಕ್ಷಣೆಗೆ ದ್ರುಪದಾದಿ ವೀರರು ನಿಂತಿದ್ದರು. ಅರ್ಜುನನಿಲ್ಲದ ಈ ವೇಳೆಯನ್ನು ತನ್ನ ಉದ್ದೇಶಪೂರ್ತಿಕೆಗಾಗಿ ಬಳಸುವದಕ್ಕೆಂದು ದ್ರೋಣನು ಯುಧಿಷ್ಠಿರನತ್ತ ಧಾವಿಸಿದನು. ದ್ರೋಣನ ಛಲದ ಈ ಉಗ್ರತೆಯ ಮುಂದೆ ಯುಧಿಷ್ಠಿರನ ಕಾವಲಿನ ವೀರರ ಪರಾಕ್ರಮ ನಿಷ್ಫಲವಾಯಿತು. ದ್ರೋಣನ ಈ ಪರಾಕ್ರಮುವನ್ನು ನೋಡಿ ದುರ್ಯೋಧನನಿಗೆ ಹರ್ಷ ಉಕ್ಕಿ ಬಂದಿತು. ಅವನು ಆಚಾರ್ಯ ದ್ರೋಣರನ್ನು ಮನಸಾ ಹೊಗಳಿದುದೇ ಅಲ್ಲದೆ ತನ್ನ ಆತ್ಮೀಯ ಗೆಳೆಯನಾದ ಕರ್ಣನನ್ನು ಕುರಿತು "ಕರ್ಣಾ, ದ್ರೋಣರಿಂದ ಪರಾಜಿತರಾದ ಪಾಂಚಾಲರೇ ಮೊದಲಾದವರೆಲ್ಲರೂ ಭೀಮನೊಬ್ಬನನ್ನೇ ಬಿಟ್ಟು ಓಡಿಹೋಗಿದ್ದಾರೆ, ನೋಡು. ಭೀಮನು ದಿಕ್ಕಿಲ್ಲದವ ನಂತಾಗಿದ್ದಾನೆ. ಇನ್ನೇನು ಅವನು ನಮ್ಮವರ ಕೈಗೆ ಸಿಕ್ಕಿಬಿದ್ದಂತೆಯೇ" ಎಂದನು. ಇದಕ್ಕೆ ಉತ್ತರವಾಗಿ ಕರ್ಣನು ಭೀಮನು ಆ ರೀತಿಯೆಲ್ಲಾ ಸಿಕ್ಕಿ

ಬೀಳುವವನಲ್ಲವೆಂದೂ ಅವನು ಅಜೇಯನೆಂದೂ ಮುಂತಾಗಿ ವಿವರಿಸುವಷ್ಟರಲ್ಲಿಯೇ ಇನ್ನೇನು ಯುಧಿಷ್ಠಿರನು ದ್ರೋಣನಿಗೆ ಸಿಕ್ಕಿಬಿಟ್ಟನು ಎನ್ನುವಷ್ಟು ಪರಿಸ್ಥಿತಿ ವಿಷಮಕ್ಕೆ ಬಂದುಬಿಟ್ಟಿತ್ತು. ಈ ದುರ್ಘಟನೆಯನ್ನು ನಿವಾರಿಸಲಿಕ್ಕೆಂದು ಸಾತ್ಯಕಿ, ಘಟೋತ್ಕಚ ಮೊದಲಾದ ಪಾಂಡವ ವೀರರು ಯುಧಿಷ್ಠಿರನ ರಕ್ಷಣೆಗೆಂದು ಧಾವಿಸಿ ಬಂದರು. ಈ ಸಂದರ್ಭವನ್ನು ನಷ್ಟಗೊಳಿಸಬಾರದೆಂಬದಕ್ಕಾಗಿ ಕೌರವ ವೀರರಾದ ಅಶ್ವತ್ಥಾಮ, ಶಲ್ಯ, ಭಗದತ್ತಾದಿಗಳೂ ದ್ರೋಣನ ಬೆಂಬಲಕ್ಕೆ ಧಾವಿಸಿ ಬಂದರು. ಯುಧಿಷ್ಠಿರನು ದ್ರೋಣನ ಸೆರೆಯಾಳಾಗಿಬಿಟ್ಟನೆಂಬ ಅತ್ಯಂತ ತೀವ್ರ ವಿಷಮ ಸ್ಥಿತಿ ಪುನಃ ಬಂದುಬಿಟ್ಟಿತ್ತು. ಈ ಗಲಭೆಯನ್ನು ಕೇಳಿ ಬೇರೆಡೆ ಯುದ್ಧ ಮಾಡುತ್ತಿದ್ದ ಭೀಮನು ಒಮ್ಮೆ ಚಕಿತನಾಗಿ ತಕ್ಷಣವೇ ಮಹಾ ಮೇಘದಂತೆ ಹಾರಿ ಬಂದನು. ಕಡಲನ್ನು ಮಹಾಮೇರುವಿನಿಂದ ಕಲಕುವಂತೆ, ಯುಧಿಷ್ಠಿರನ ಬಳಿ ಒತ್ತಾಗಿ ಸೇರಿದ್ದ ಕೌರವ ಸೈನ್ಯವನ್ನು ಭೇದಿಸುತ್ತಾ ಅವನು ಮುನ್ನುಗ್ಗಿದನು. ದ್ರೋಣನ ಸಹಾಯಕರು ಈ ಅನಿರೀಕ್ಷಿತ ಆಘಾತದಿಂದ ಒಮ್ಮೆಗೇ ದಿಙ್ಮೂಢರಂತಾದರು. ಈ ವರೆಗಿದ್ದ ಅವರ ಉತ್ಸಾಹ ಒಮ್ಮೆಗೇ ಇಳಿದುಹೋಯಿತು. ಬಹಳ ಪರಿಶ್ರಮದಿಂದ ದ್ರೋಣನು ಗಳಿಸಿದ್ದ ಒಂದು ಸುವರ್ಣ ಸಂದರ್ಭವು ಜಾರಿಹೋಗುತ್ತಿರುವದನ್ನು ನೋಡಿ ಹಾಗಾಗಲು ಬಿಡಬಾರದೆಂಬದಕ್ಕಾಗಿ ದುರ್ಯೋಧನನು ತಾನೇ ಆಚಾರ್ಯನ ಬೆಂಬಲಕ್ಕೆ ನುಗ್ಗಿ ಮುಂದೆ ಬಂದನು. ದುರ್ಯೋಧನನು ಕಣ್ಣಿಗೆ ಬಿದ್ದೊಡನೆಯೇ ಭೀಮನ ಕೋಪ ಸಿಡಿದೊಡೆಯಿತು. ಸಾತ್ಯಕಿ, ಘಟೋತ್ಕಚ ಮೊದಲಾದವರನ್ನು ಹಿಮ್ಮೆಟ್ಟುವಂತೆ ಹೇಳಿ ಅವನು ತಾನೇ ತಮ್ಮ ಪಡೆಯ ಅಗ್ರಕ್ಕೆ ಧಾವಿಸಿ ದುರ್ಯೋಧನ ಮಹಾರಾಜನ ರಥ, ಸಾರಥಿಗಳನ್ನು ಹುಡಿಗುಟ್ಟಿದನು. ಯುಧಿಷ್ಠಿರನನ್ನು ಹಿಡಿದು ಕೊಂಡೊಯ್ಯಲು ಬಂದಿದ್ದ ಕೌರವ ಸೇನಾಪತಿ ದ್ರೋಣನು ತನ್ನ ಒಡೆಯನನ್ನೇ ಕಳೆದುಕೊಳ್ಳಬೇಕಾದ ಪ್ರಸಂಗ ಒದಗಿಬಿಟ್ಟಿತು. ರಥ, ಸಾರಥಿಗಳನ್ನು ಕಳೆದುಕೊಂಡು ಅವಾಕ್ಕಾದ ದುರ್ಯೋಧನನು ಭೀಮನಿಂದ ತಲೆಮರೆಸಿಕೊಂಡುಬಿಟ್ಟನು. ಇತರ ವೀರರು ಸೋತು ಹಿಂದೆಗೆದರು. ಭೀಮನ ತೀವ್ರ ಮುಂದೋಟವನ್ನು ತಡೆಯಲು ಕೌರವ ಸೈನ್ಯವು ಅಸಮರ್ಥವಾಯಿತು. ಅವನ ವೇಗವನ್ನು ತಡೆಯಲು ಬೇರೆ ಯಾವ ಮಾರ್ಗವೂ ಇರಲಿಲ್ಲ. ಹಾಗಾಗಿ ಸಾವಿರಾರು ಆನೆಗಳನ್ನು ಅವನ ಮುಂದೆ ನೂಕಿದರು. ಭೀಮನ ವೇಗವು ಒಮ್ಮೆಗೆ ತಡೆಯಲ್ಪಟ್ಟಿತು. ಅಷ್ಟೆ. ಕಾಲದಂಡ ಹಿಡಿದ ಯಮನ ಮುಂದೆ ಆ ಆನೆಗಳು ಎಷ್ಟು ಸಮಯ ಬದುಕಿ ಉಳಿದಾವು! ಭೀಮನ ಮುಂದೋಟ ಮತ್ತೊಮ್ಮೆ ಕೌರವ ಸೈನ್ಯಕ್ಕೆ ಕಳವಳವನ್ನುಂಟು ಮಾಡಿತು. ಹಾಗಾಗಿ ಇಂದ್ರನು ಉಪಯೋಗಿಸುತ್ತಿದ್ದ ಶ್ರೇಷ್ಠ ಆನೆಯೊಂದರ ವಂಶದಲ್ಲಿ ಹುಟ್ಟಿದ್ದ ಸುಪ್ರತೀಕವೆಂಬ ಅತ್ಯಂತ ಭಯಂಕರವಾದ ಮದದಾನೆಯನ್ನು ಹತ್ತಿ ಭಗದತ್ತನೆಂಬ ಮಹಾವೀರನು

ಭೀಮನನ್ನೆದುರಿಸಿದನು. ಹತ್ತು ಸಾವಿರ ಆನೆಗಳ ಬಲವಿದ್ದ ಆ ಪ್ರಚಂಡಾಕೃತಿಯ ಮದದಾನೆಯನ್ನು ನೋಡಿದ ಮಾತ್ರಕ್ಕೇ ಪಾಂಡವ ಬಲದ ಎದೆ ಒಡೆದಂತಾಯಿತು. ಅದು ಪಾಂಡವ ಬಲದ ಆನೆಗಳನ್ನೂ, ಕುದುರೆಗಳನ್ನೂ, ಪದಾತಿಗಳನ್ನೂ ರಥ ಸಹಿತವಾಗಿ ರಥಿಕರನ್ನೂ ಲೀಲಾಜಾಲವಾಗಿ ಧ್ವಂಸ ಮಾಡುತ್ತಾ ಮುನ್ನುಗ್ಗಿತು. ಸಾತ್ಯಕಿ ಮೊದಲಾದ ಅತಿರಥರು ಜಯದ ಆಸೆ ಇಲ್ಲದಿದ್ದರೂ ಬಾಣದ ಮಳೆ ಕರೆದರು. ಆದರೆ ಅವರು ಮುಂದೆ ಬರುವದಕ್ಕೆ ಮುಂಚೆಯೇ ಸುಪ್ರತೀಕವು ಅವರನ್ನು ಬೆದರಿಸಿ ಅಟ್ಟಿಬಿಟ್ಟಿತು. ದನಗಳ ಹಿಂಡನ್ನು ಬೆದರಿಸಿ ಚದುರಿಸುವ ಗೋಪಾಲಕನಂತೆ ಈ ಭೀಕರ ಪ್ರಾಣಿಯು ದ್ರುಪದಾದಿ ಮಹಾವೀರರನ್ನು ಓಡಿಸಿಬಿಟ್ಟಿತು. ಈ ಒಟ್ಟು ಗಲಭೆಯ ಪರಿಣಾಮವಾಗಿ ಆನೆಯಿಂದ ಧ್ವಂಸವಾಗಿದ್ದ ಪಾಂಡವ ಸೈನ್ಯದ ಸಂಖ್ಯೆಯು ಬಹುದೊಡ್ಡ ಪ್ರಮಾಣದ್ದಾಗಿಬಿಟ್ಟಿತ್ತು. ಸುಪ್ರತೀಕದ ವಿಧ್ವಂಸಕ ಕಾರ್ಯಕ್ಕೆ ತಡೆಯೇ ಇಲ್ಲದಂತಾಗಿಬಿಟ್ಟಿತ್ತು. ಸರಿ. ಇಂತಹ ಯಮಶಕ್ತಿಯ ಆ ಭೀಕರ ಮದದಾನೆಯನ್ನು ಭೀಮನು ಸಿಂಹನಾದ ಮಾಡುತ್ತಾ ತನ್ನ ಗದಾದಂಡವನ್ನು ತಿರುಗಿಸುತ್ತಾ ಎದುರಿಸಿದನು.

ಹತ್ತು ಸಾವಿರ ಆನೆಗಳ ಬಲವುಳ್ಳದ್ದೆಂದು ಹೆಸರುವಾಸಿಯಾಗಿದ್ದ ಸುಪ್ರತೀಕವನ್ನು ಅಷ್ಟೇ ಬಲವುಳ್ಳವನೆಂದು ಹೇಳಲ್ಪಟ್ಟ ಭೀಮನು ಎದುರಿಸಿ ಅದರೊಂದಿಗೆ ದೈಹಿಕವಾಗಿ ಸೆಣಸುತ್ತಿದ್ದಾಗ ಆ ಭೀಕರ ದೃಶ್ಯವನ್ನು ನೋಡುತ್ತಿದ್ದ ದೇವತೆಗಳೇ ಭಯಗೊಂಡರು. ಈ ಹೋರಾಟದಿಂದಾಗಿ ಭೂಮಿ ನಡುಗಿತು. ಭೀಮನು ಹಿಂದೆ ಸರಿದು ಒಮ್ಮೆಗೇ ಮುಂದಕ್ಕೆ ಹಾರಿ ತನ್ನ ಮಹಾಗದೆಯಿಂದ ಆನೆಯ ಹಣೆಗೆ ಗುರಿಯಿಟ್ಟು ಹೊಡೆಯುವಾಗ ಅದು ಕೂಡಲೇ ಹಿಂದಕ್ಕೆ ಸರಿದು ಆ ಏಟನ್ನು ವ್ಯರ್ಥಗೊಳಿಸುತ್ತಿತ್ತು. ಅದು ತನ್ನ ಭಯಂಕರ ಘೂಕೃತಿಯೊಂದಿಗೆ ಭೀಮನನ್ನು ಸೊಂಡಿಲಿನಿಂದ ಅಪ್ಪಳಿಸುವಾಗ ಅವನು ಚಮತ್ಕಾರದಿಂದ ಅದನ್ನು ತಪ್ಪಿಸಿಕೊಳ್ಳುತ್ತಿದ್ದನು. ಸುಪ್ರತೀಕವು ಒಮ್ಮೊಮ್ಮೆ ಕೆದರಿ ನಿಂತು ನೆಲವನ್ನು ಅಪ್ಪಳಿಸುತ್ತಾ, ತಾನು ಬಳಲಿದಾಗ ಹಿಂತೆಗೆದು ಭೀಮನ ಧ್ವನಿಯನ್ನೇ ಆಲಿಸುತ್ತಾ, ಪುನಃ ಭೀಮನನ್ನು ತಾಗಿ ಕೆಣಕುತ್ತಾ ಸೆಣಸುತ್ತಿತ್ತು. ಅಷ್ಟರಲ್ಲಿ ಯುಧಿಷ್ಠಿರನು, ಭೀಮನು ಏಕಾಂಗಿಯಾಗಿ ಯುದ್ಧ ಮಾಡುತ್ತಿದ್ದ ಪರಿಸ್ಥಿತಿಯನ್ನು ನೋಡಿ ತನ್ನ ಕೆಲವು ವೀರರನ್ನು ವಿಶೇಷ ಬಲದೊಂದಿಗೆ ಭೀಮನ ನೆರವಿಗೆಂದು ಕಳುಹಿಸಿದನು. ಆದರೆ ಧೈರ್ಯವಾಗಿ ಸುಪ್ರತೀಕವನ್ನು ಎದುರಿಸುವಷ್ಟು ಎದೆಗಾರಿಕೆ ಅವರ್ಯಾರಿಗೂ ಇರಲಿಲ್ಲ. ಇದನ್ನು ತಿಳಿದ ಕೃಷ್ಣನು ಅರ್ಜುನನಿಗೆ ವಿಷಯವನ್ನು ತಿಳಿಸಲು ಅವನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಸಂಶಪ್ತಕರನ್ನು ಜಯಿಸಿ ಭಗದತ್ತನತ್ತ ಧಾವಿಸಿ ಬಂದನು.

ರಮೆ:– ಏನು, ಏನು ?

ಮುರಳಿ:– ಏನು ?

ರಮೆ:– ಅರ್ಜುನ ಏನು ಮಾಡಿದ ಎಂದೆ.

ಮುರಳಿ:– ಅರ್ಜುನನನ್ನು ಕೌರವ ಬಲದ ಇತರ ವೀರರ ಮುಂದೆ ಬಿಡದಂತೆ ತಾವೇ ಅವನನ್ನು ಯುದ್ಧದಲ್ಲಿ ತೊಡಗಿಸಿ ಒಂದೇ ಕಡೆ ಇರಿಸುತ್ತೇವೆಂದು ಪ್ರತಿಜ್ಞೆ ಮಾಡಿದ್ದ ಸಂಶಪ್ತಕರೊಡನೆ ಯುದ್ಧಮಾಡುತ್ತಿದ್ದ ಅರ್ಜುನನು, ಭೀಮನ ನೆರವಿಗೆ ತಾನು ಹೋಗಬೇಕೆಂದು ಕೃಷ್ಣನು ತಿಳಿಸಿದ ತಕ್ಷಣವೇ ತಡಮಾಡದೆ ಸಂಶಪ್ತಕರನ್ನು ಬ್ರಹ್ಮಾಸ್ತ್ರದಿಂದ ಸೋಲಿಸಿ ಭೀಮನ ನೆರವಿಗೆ ಬಂದನು ಎಂದೆ.

ರಮೆ:– ಈಗ ಉಪಯೋಗಿಸಿದ ಬ್ರಹ್ಮಾಸ್ತ್ರವನ್ನು ಅವನು ಮೊದಲೇ ಪ್ರಯೋಗಿಸಿ ಸಂಶಪ್ತಕರನ್ನು ನಿವಾರಿಸಿ ತಾನೂ ಭೀಮನೊಂದಿಗೆ ಸೇರಿ ಕುರುಕ್ಷೇತ್ರದ ನಡುವೆ ಪ್ರಮುಖ ಭಾಗದಲ್ಲಿಯೇ ಯುದ್ಧಮಾಡಲಿಲ್ಲವೇಕೆ ? ಹಾಗಿದ್ದರೆ ಇಷ್ಟು ಹೊತ್ತೂ ಅವನು ಸಂಶಪ್ತಕರೊಂದಿಗೆ ಬಾಣ ಬಿಡುವ ಶಸ್ತ್ರಾಭ್ಯಾಸ ಮಾಡುತ್ತಿದ್ದುದೇನು ?

ಮುರಳಿ:– ಅದೆಲ್ಲ ರಹಸ್ಯ ವಿಚಾರಗಳು – ಪಾಮರನಾದ ನನಗೆ ಹೇಗಮ್ಮಾ ಗೊತ್ತಾಗಬೇಕು ! ನನಗೆ ಗೊತ್ತಾದಷ್ಟನ್ನು ಕೇಳು. ಅರ್ಜುನ – ಭಗದತ್ತರು ಬಾಣಗಳಿಂದ ಹೊಡೆದಾಡುತ್ತಿದ್ದಾಗ ಸುಪ್ರತೀಕವು ಅರ್ಜುನನನ್ನು ಅಟ್ಟಿಸಿ ಅಟ್ಟಿಸಿ ಹೋಗುತ್ತಿತ್ತು. ಅದು ಅಟ್ಟಿ ಬಂದಂತೆಲ್ಲಾ ಕೃಷ್ಣನು ತಮ್ಮ ರಥವನ್ನು ಅತ್ತಿಂದಿತ್ತ ಕೌಶಲ್ಯದಿಂದ ಹರಿಸಿ ಆನೆಯನ್ನು ಬಳಲಿಸಿದನು. ಕೃಷ್ಣನ ತಂತ್ರವೇ ಅರ್ಜುನ ಸೋಲಲೊಲ್ಲದ ಗುಟ್ಟು ಎಂದು ಭೀಷ್ಮ ತಿಳಿದಂತೆಯೇ ತಿಳಿಯಲು ಭಗದತ್ತನಿಗೂ ತಡವಾಗಲಿಲ್ಲ. ಅವನೂ ಕೃಷ್ಣನನ್ನು ಹೊಡೆದು ನೋಯಿಸಿದನು. ಇದರಿಂದ ಕೋಪಗೊಂಡ ಅರ್ಜುನನು ಭಗದತ್ತನ ಬಿಲ್ಲನ್ನು ತುಂಡುಮಾಡಿದನು. ಇದರಿಂದ ಕ್ರುದ್ಧನಾದ ಭಗದತ್ತನು ತನ್ನಲ್ಲಿದ್ದ ವಿಷ್ಣ್ವಂಶವಾದ ಒಂದು ಮಹಾಂಕುಶವನ್ನು ಪ್ರಯೋಗಿಸಿಬಿಟ್ಟನು. ಲೋಕಲೋಕಗಳನ್ನೇ ನಾಶಮಾಡಬಲ್ಲ ಶಕ್ತಿಶಾಲಿಯಾಗಿದ್ದ ಈ ಭಯಂಕರವಾದ ಅಸ್ತ್ರವು ವೇಗವಾಗಿ ಬರುತ್ತಿದ್ದಾಗ ಕೃಷ್ಣನು ಅದಕ್ಕೆದುರಾಗಿ ತನ್ನ ಎದೆಯನ್ನೇ ಒಡ್ಡಿ ಅದನ್ನು ತಡೆದನು. ಅದು ಕೃಷ್ಣನ ಆಭರಣಗಳಲ್ಲಿ ಒಂದಾಗಿ ಸೇರಿಕೊಂಡಿತು.

ರಮೆ:– ಕೆಂಡವನ್ನು ಬೆಂಕಿಯ ರಾಶಿಗೆ ಒಗೆದಂತೆ.

ಮುರಳಿ:– ಅಂದರೆ ?

ರಮೆ:– ಅದು ವೈಷ್ಣವ ಶಕ್ತಿಯಾಗಿದ್ದುದರಿಂದ ವಿಷ್ಣುವಿನ ಅವತಾರವಾದ ಕೃಷ್ಣನಲ್ಲಿ ನಿರಪಾಯವಾದುದಾಗಿ ಸೇರಿಹೋಯಿತು ಎಂದಿರಲ್ಲ, ಅದಕ್ಕೆ ಹೇಳಿದೆ.

ಮುರಳಿ:– ಜಾಣೆ. ಕೇಳು. ಶತ್ರುವಿನ ಅಸ್ತ್ರವನ್ನು ಸಾರಥಿಯು ನಿಗ್ರಹಿಸಿದುದರಿಂದ ತನ್ನ ವೀರತನಕ್ಕೆ ಕುಂದುಂಟಾಯಿತೆಂದು ಭಾವಿಸಿದ ಅರ್ಜುನನಿಗೆ ಕೃಷ್ಣನ ಮೇಲೆ ಬಹಳ ಸಿಟ್ಟು ಬಂದಿತು. ಅವನು ಕೃಷ್ಣನನ್ನು ಕುರಿತು ಅಲ್ಲಿಂದ ಮುಂದಕ್ಕೆ ಅವನೇ (ಕೃಷ್ಣನೇ) ಯುದ್ಧಮಾಡಬೇಕೆಂದೂ, ತಾನು ಸಾರಥಿಯಾಗಿರುವದಾಗಿಯೂ ಮಾರ್ಮಿಕವಾಗಿ ಹೇಳಿದನು. ಕೇವಲ ಹತ್ತು ಹನ್ನೆರಡು ದಿನಗಳ ಹಿಂದಷ್ಟೇ ಗೀತೆಯನ್ನು ಉಪದೇಶಿಸಿ, ಸಾಲದುದಕ್ಕೆ ತನ್ನ ವಿಶ್ವರೂಪದ ಅಲಭ್ಯ ದರ್ಶನ ಮಾಡಿಸಿದ್ದರೂ ಕೂಡ ತನ್ನ ಕ್ಷತ್ರಿಯ ತಾಮಸ ಗುಣವನ್ನು ಬಿಡದಿರುವ ಅರ್ಜುನನನ್ನು ಕಂಡು ಕೃಷ್ಣನು ಮುಗುಳ್ನಕ್ಕು ಅವನಿಗೆ ಭಗದತ್ತನ ಅಂಕುಶದ ಮಹತ್ವವನ್ನು ತಿಳಿಯಹೇಳಿ, ಅದರ ಪ್ರಖರತೆಯನ್ನು ನೋಡಲು ಕೂಡ ಅರ್ಜುನನು ಶಕ್ತನಲ್ಲವೆಂದು ವಿವರಿಸಿ ಸಮಾಧಾನ ಪಡಿಸಿದನು.

ರಮೆ:– ನಾನು ನಡುವೆ ಮಾತನಾಡುವದು ಅಧಿಕ ಪ್ರಸಂಗವೆಂದು ನಿಮಗನಿಸಿದರೆ ಕ್ಷಮಿಸಿ. ಎಲ್ಲಿಯೋ ಓದಿಕೊಂಡಿದ್ದುದು ಇಲ್ಲಿ ನೆನಪಿಗೆ ಬಂದುದರಿಂದ ಹೇಳುತ್ತಿದ್ದೇನೆ. ಈ ನೈಚ್ಯಾನುಸಂಧಾನ ಎನ್ನುತ್ತಾರಲ್ಲ, ಅದಕ್ಕೆ ಅರ್ಜುನನ ಈ ವರ್ತನೆ ಉತ್ತಮ ಉದಾಹರಣೆ ಎನಿಸುತ್ತದೆ. ಏನನ್ನುತ್ತೀರಿ ?

ಮುರಳಿ:– ಏನನ್ನಬೇಕು ?

ರಮೆ:– ನಿಜವಾಗಿಯೂ ವೀರನಾದವನು – ಅದರಲ್ಲಿಯೂ ತನ್ನ ವೀರತನದ ಬಗೆಗೆ ತನಗೇ ವಿಶ್ವಾಸ ಇರುವವನು – ಹೀಗೆ ಹಾಸ್ಯಾಸ್ಪದವಾಗಿ ವರ್ತಿಸುವದಿಲ್ಲ. ಗೀತೆಯ ಮೂಲಕ ಕೃಷ್ಣನ ಮಹತ್ವವನ್ನೂ, ಮಾನವನಾದ ತನ್ನ ಸಣ್ಣತನವನ್ನೂ ಯುದ್ಧದ ವಿದ್ಯಮಾನಗಳು ಪೂರ್ವನಿಯೋಜಿತವಾಗಿ ಲೆಕ್ಕಾಚಾರದಂತೆ ನಡೆಯುತ್ತಿರುತ್ತವೆ ಹೊರತು ವೀರರೆನಿಸಿದ ತಾವೆಲ್ಲ ಅದರಲ್ಲಿ ಒಂದು ನಿಮಿತ್ತವಾಗಿ ಮಾತ್ರ ವರ್ತಿಸುವದೆಂಬದನ್ನೂ ಕೇಳಿದ್ದ ಅವನು ಈಗ ಭಗದತ್ತನ ಅಂಕುಶವನ್ನು ತಾನು ನಿವಾರಿಸಲಾರದೆ ಕೃಷ್ಣನು ನಿವಾರಿಸಿದನೆಂಬದನ್ನು ಸುತ್ತಲಿನ ವೀರರು ನೋಡಿಬಿಟ್ಟರೆ ತನ್ನ ವೀರತನಕ್ಕೆ ಕುಂದು ಬಂದಂತಾಗಿಬಿಡುತ್ತದೆ ಎಂದು ಭಾವಿಸುವದಾದರೆ................

ಮುರಳಿ:– ಅದು ಸರಿ, ಈ ವ್ಯಾಖ್ಯಾನ ಈಗೇಕೆ ಅಂತ ?

ರಮೆ:– ಹಾಗಲ್ಲ. ಹಾಗಾದರೆ ತಾನು ಸುಪ್ರತೀಕದೊಂದಿಗೆ ಏಕಾಂಗಿಯಾಗಿ ಯುದ್ಧಮಾಡುತ್ತಿದ್ದಾಗ ಅರ್ಜುನನು ನಡುವೆ ಪ್ರವೇಶಿಸಿದುದರಿಂದ ಭೀಮನೂ ಸಿಟ್ಟುಗೊಂಡು, "ಇನ್ನು ಮುಂದೆ ಅರ್ಜುನನೇ ಯುದ್ಧಮಾಡಲಿ. ನಾನು ಯುದ್ಧದಿಂದ ನಿವೃತ್ತನಾಗುತ್ತೇನೆ" ಎಂದು ಹೇಳಿ ಹೊರಟು ಹೋಗಬಹುದಿತ್ತಲ್ಲ !

ಮುರಳಿ:– ಅದಕ್ಕೇನೀಗ ರಮಾ ?

ರಮೆ:– ಏನೂ ಇಲ್ಲ. ನಿಮ್ಮ ಭೀಮನ ವ್ಯಕ್ತಿತ್ವವನ್ನು ನರ ಋಷಿಯ ಅವತಾರವೆಂದೂ, ಕೃಷ್ಣನ ಆತ್ಮೀಯ ಗೆಳಯನೆಂದೂ, ಮೂರು ಲೋಕದ ಗಂಡನೆಂದೂ, ಎಲ್ಲ ಹೆಸರುಗೊಂಡ ಅರ್ಜುನನ ವ್ಯಕ್ತಿತ್ವದೊಂದಿಗೆ ಹೋಲಿಸಿದೆ, ಅಷ್ಟೆ. ಈ ಕೆಲಸ ನೀವು ಮಾಡಬೇಕಿತ್ತು. ನೀವು ಬರಬರುತ್ತ ಏಕೋ ಇಂತಹ ವಿಶ್ಲೇಷಣೆಗಳನ್ನು ಮಾಡದೆ, ಮಳೆಯಲ್ಲಿ ಕೋಣ ತಲೆಕೆಳಗೆ ಹಾಕಿ ಸುಮ್ಮನೆ ನಡೆದಂತೆ ಕತೆ ಹೇಳಿಕೊಂಡೇ ಹೋಗುತ್ತಿದ್ದೀರಿ. ತನ್ನ ಸಾರಥ್ಯದ ಕೌಶಲ್ಯದ ಮೂಲಕ ಭೀಷ್ಮ, ಭಗದತ್ತ ಮೊದಲಾದವರ ಬಾಣಗಳಿಂದ ತನ್ನ ಪ್ರಾಣವನ್ನು ರಕ್ಷಿಸುತ್ತಿದ್ದ ಕೃಷ್ಣನಲ್ಲಿಯೇ ಅಪಚಾರವನ್ನು ಕಾಣುವ ಅರ್ಜುನನು ವೀರನೂ ಅಲ್ಲ, ಉತ್ತಮ ವ್ಯಕ್ತಿತ್ವವನ್ನು ಹೊಂದಿದವನೂ ಅಲ್ಲ. ತಾನೊಬ್ಬ ಮಹಾ ವೀರನೆಂದು ತಿಳಿದುಕೊಂಡಿದ್ದ ಅವನನ್ನು ವಿಮರ್ಶಕರೂ ಅವನಂತೆಯೇ ತಪ್ಪು ತಿಳಿದುಬಿಟ್ಟಲ್ಲವೇ ಎನಿಸುತ್ತದೆ.

ಮುರಳಿ:– ಭೀಮ ಅರ್ಜುನ – ಇಬ್ಬರ ಕತೆಯೂ ಆಯಿತು. ಮುಂದೆ ಯಾವ ಕತೆ ? ಅದನ್ನು ನಾನು ಹೇಳುವದೋ, ನೀನು ಹೇಳುತ್ತೀಯೋ ?

ರಮೆ:– ಕಂಡದ್ದನ್ನು ಹೇಳಿದರೆ ಕತೆ ಹೇಳುತ್ತೇನಂತೆ ! ನಾನು ಹೇಳಿದುದು ಅಧಿಕಪ್ರಸಂಗವಾದರೆ ಕ್ಷಮಿಸಿ. ಮೊದಲೇ ಹೇಳಿಕೊಂಡೆನಲ್ಲ !

ಮುರಳಿ:– ನಾನು ಹೇಳಿದುದು ತಪ್ಪಾದರೆ ನೀನು ಕ್ಷಮಿಸು. ಹೇಳುತ್ತಿದ್ದೇನಲ್ಲ !

ರಮೆ:– ಕ್ಷಮಿಸಿದ್ದೇನೆ. ಮುಂದೆ ಹೇಳಿ.

ಮುರಳಿ:– ಹೇಳಿ ಸಿಕ್ಕಿಕೊಂಡೆ. ಏನು ಮಾಡುವದು ಹೇಳು ! ಇರಲಿ, ಕೇಳು. ಕೃಷ್ಣನ ಅಪ್ಪಣೆಯ ಮೇರೆಗೆ ಅರ್ಜುನನು ದಿವ್ಯವಾದ ಒಂದು ಈಶ್ವರಾಸ್ತ್ರದಿಂದ ಸುಪ್ರತೀಕವನ್ನು ಉರುಳಿಸಿದನು.

ರಮೆ:– ಸುಪ್ರತೀಕವನ್ನು ಕೊಂದ ಖ್ಯಾತಿ ಅರ್ಜುನನಿಗೋ ಇಂತಹ ಅಸ್ತ್ರವನ್ನು ಪ್ರಯೋಗಿಸು ಎಂದು ಹೇಳಿಕೊಟ್ಟ ಕೃಷ್ಣನಿಗೋ ಅಥವಾ ಆ ಶಕ್ತಿಯನ್ನು ನೀಡಿದ ಈಶ್ವರನಿಗೊ ?

ಮುರಳಿ:– ನೀನೇನು, ಒಳ್ಳೆ ಅರ್ಜುನನ ದಾಯಾದಿಯ ಹಾಗೆ ಮಾತನಾಡುತ್ತೀ ರಮಾ ? ಸುಮ್ಮನೆ ಕೇಳು. ಸುಪ್ರತೀಕವನ್ನು ಏರಿ ಬಂದಿದ್ದ ಭಗದತ್ತನೂ ಹತನಾದನು.

ತನ್ನ ಈ ಸೋಲಿನಿಂದ ನೊಂದ ದುರ್ಯೋಧನನು ತನ್ನ ಸೈನ್ಯಾಧಿಪತಿಯಾದ ದ್ರೋಣನಲ್ಲಿ ಪಕ್ಷಪಾತವನ್ನು ಆರೋಪಿಸಿ ದೂರಿದನು. ಇದರಿಂದ ಪ್ರಕೋಪಿತನಾದ ದ್ರೋಣನು ಮರುದಿನದ ಯುದ್ಧದಲ್ಲಿ ಯುಧಿಷ್ಠಿರನನ್ನು ಖಂಡಿತ ಸೆರೆ ಹಿಡಿದು ತರುವದಾಗಿ ಮಾತುಕೊಟ್ಟನು.

ಹದಿಮೂರನೆಯ ದಿನದ ಯುದ್ಧವು ಆರಂಭವಾಯಿತು. ದ್ರೋಣಾಚಾರ್ಯನು ದುರ್ಯೋಧನನಿಗೆ ತಾನು ಕೊಟ್ಟ ಮಾತನ್ನು ನೆರವೇರಿಸಲೇಬೇಕೆಂಬದಕ್ಕಾಗಿ ತನ್ನ ಸೈನ್ಯವನ್ನು ವಿಚಿತ್ರಾಕಾರದ ಚಕ್ರವ್ಯೂಹದಲ್ಲಿ ರಚಿಸಿ ನಿಲ್ಲಿಸಿದನು. ಆ ವಿಶಿಷ್ಟವಾದ ವ್ಯೂಹವನ್ನು ಹೊಕ್ಕು ಹಿಂದಿರುಗುವ ರಹಸ್ಯವು ರಾಮ, ಕೃಷ್ಣ, ಮತ್ತು ಅರ್ಜುನ ಇವರಿಗೂ, ಒಳಹೊಗಲು ಮಾತ್ರ ಅಭಿಮನ್ಯುವಿಗೂ ತಿಳಿದಿದ್ದಿತು.

ರಮೆ:– ಓಹೋ, ಭೀಮನಿಗೆ ತಿಳಿದಿರಲಿಲ್ಲ ?

ಮುರಳಿ:– ಅವನಿಗೆ ತಿಳಿದಿರಬೇಕಾಗಿಯೇ ಇರಲಿಲ್ಲ. ದಾರಿಯಲ್ಲಿ ಮಾತ್ರ ನಡೆಯುವವನಿಗೆ ಯಾವ ದಾರಿಯಲ್ಲಿ ಹೋಗಬೇಕೆಂಬ ವಿಷಯ ತಿಳಿದಿರಬೇಕಾದುದು ಅವಶ್ಯವಾಗುತ್ತದೆ. ತಾನು ಹೋಗುವದೇ ದಾರಿ ಎಂದಿರುವವನಿಗೆ ಈ ತಿಳಿವಳಿಕೆ ಏಕೆ ಬೇಕು? ಆದರೂ ಭೀಮನು ಈ ಚಕ್ರವ್ಯೂಹವನ್ನು ಏಕೆ ಪ್ರವೇಶಿಸಲಿಲ್ಲ ಎಂಬದನ್ನು ಮುಂದೆ ಕೇಳುವೆ.

ಯುದ್ಧವು ಆರಂಭವಾಯಿತು. ಭೀಮಾದಿಗಳು ವೈರಿಗಳನ್ನು ಸಂಧಿಸಿದರು. ಆದರೆ ಅಜೇಯವಾದ ಚಕ್ರವ್ಯೂಹವನ್ನು ಭೇದಿಸಲು ಅವರಿಂದ ಸಾಧ್ಯವಾಗಲಿಲ್ಲ. ಅವರು ಇಳಿ ಮನಸ್ಸಿನಿಂದ ಹೋರಾಡುತ್ತಿದ್ದರು. ಅಷ್ಟರಲ್ಲಿ ಅಭಿಮನ್ಯುವು ಯುದ್ಧಕ್ಕೆ ಹೊರಟನು. ಯುಧಿಷ್ಠಿರಾದಿಗಳು ಎಷ್ಟು ತಡೆದರೂ ಅವನು ಕೇಳಲಿಲ್ಲ. ಅವನು ಅತ್ಯದ್ಭುತವಾಗಿ ಕಾದಿದನು. ಅವನನ್ನು ಅನುಸರಿಸಿ ಹೊರಟ ಭೀಮನನ್ನು ವ್ಯೂಹದ ಬಾಗಿಲಿನಲ್ಲಿ ನಿಂತಿದ್ದ ಜಯದ್ರಥನು ತಡೆದು ನಿಲ್ಲಿಸಿಬಿಟ್ಟನು.

ರಮೆ:– ಯುದ್ಧ ಎಂದರೇ ಹೀಗೆ. ಅಲ್ಲವೆ ? ಅದರಲ್ಲಿ ಸೋಲು ಗೆಲುವುಗಳು ಆಕಸ್ಮಿಕವೂ ಆಗಲು ಸಾಧ್ಯವಿದೆ.

ಮುರಳಿ:– ಆದರೆ ಇಲ್ಲಿ ಜಯದ್ರಥನು ಭೀಮನನ್ನು ತಡೆಯಲು ಸಾಧ್ಯವಾದುದು ಆಕಸ್ಮಿಕವೇನೂ ಆಗಿರಲಿಲ್ಲ. ನೀನು ಹೇಳಿದ ಮಾತು ಇತರರಿಗೆ ಕೆಲವೊಮ್ಮೆ ಅನ್ವಯಿಸಬಹುದಾದರೂ ಭೀಮನ ಜೀವನದಲ್ಲಿ ಅವನ ಯಾವದೇ ಸೋಲು, ಯಾವದೇ ಗೆಲವು ಆಕಸ್ಮಿಕವಾಗಿ ನಡೆಯಲಿಲ್ಲ. ಒಂದೆ ಭೀಮನಿಂದ ಬಂಧಿತನಾಗಿದ್ದ ಜಯದ್ರಥನು ಭೀಮಾದಿಗಳನ್ನು ಒಂದು ದಿನದ

ಮಟ್ಟಿಗಾದರೂ ತಾನು ಜಯಿಸಲು ಸಾಧ್ಯವಾಗುವಂತೆ ಈಶ್ವರನಿಂದ ವರವನ್ನು ಪಡೆದಿದ್ದನಷ್ಟೆ? ಆ ವರವನ್ನು ಇಂದು ಅವನು ಬಳಸಿಕೊಂಡನು. ಆ ವರದ ಬಲವನ್ನು ಪಡೆದ ಅವನು ವ್ಯೂಹದ ಬಾಗಿಲಿನಲ್ಲಿ ನಿಲ್ಲದಿರುತ್ತಿದ್ದರೆ ದ್ರೋಣನ ಯಾವ ವ್ಯೂಹವೂ ಭೀಮನೆದುರಿನಲ್ಲಿ ಪ್ರಯೋಜನಕ್ಕೆ ಬರುತ್ತಿರಲಿಲ್ಲ ಎಂಬದು ಇದರಿಂದ ಗೊತ್ತಾಗುತ್ತದೆ. ಈ ಕಡೆ ವ್ಯೂಹದೊಳಗೆ ಅಭಿಮನ್ಯುವಿನ ಹೊಡೆತವನ್ನು ಎದುರಿಸಲು ಕೌರವ ವೀರರಿಗೆ ಸಾಧ್ಯವೇ ಆಗಲಿಲ್ಲ. ಅವನನ್ನು ಅವನ ಎದುರಿನಿಂದ ಸಂಧಿಸಲಾರದ ಅವರು ನ್ಯಾಯಬಾಹಿರ ಕ್ರಮಗಳಿಂದ ಅವನನ್ನು ಕೊಂದು ಉರುಳಿಸಿದರು. ಈ ವರ್ತಮಾನ ತಲಪಿದ ಕೂಡಲೇ ಇಡಿಯ ಪಾಂಡವ ಬಲ ದುಃಖತಪ್ತವಾಯಿತು. ಸಂಜೆ ಅರ್ಜುನನು ಶಿಬಿರಕ್ಕೆ ಮರಳುತ್ತಿರುವಾಗ ಅವನಿಗೂ ಮಗನ ಮರಣವಾರ್ತೆ ತಿಳಿದುಬಂದು ವಿಪರೀತವಾದ ಶೋಕ ರೋಷಗಳಿಂದ ಅವನು ಕಲಕಲ್ಪಟ್ಟನು. ಅಭಿಮನ್ಯುವಿನ ಮರಣ ಹೇಗೆ ನಡೆಯಿತೆಂಬ ವಿದ್ಯಮಾನಗಳನ್ನೆಲ್ಲ ತಿಳಿದುಕೊಂಡ ಅವನು ಕೋಪಾವಿಷ್ಟನಾಗಿ ಸಕಲ ದಿಕ್ಪಾಲಕರ ಸಾಕ್ಷಿಯಲ್ಲಿ, ಮಾರನೆಯ ದಿನ ಸೂರ್ಯಾಸ್ತಮಯದೊಳಗೆ ತಾನು ಜಯದ್ರಥನನ್ನು ಕೊಲ್ಲುವದಾಗಿಯೂ ಅದಕ್ಕೆ ತಪ್ಪಿದರೆ ತಾನೇ ಸ್ವತಃ ಅಗ್ನಿಪ್ರವೇಶ ಮಾಡಿ ಸಾಯುವದಾಗಿಯೂ ಘೋರವಾದ ಪ್ರತಿಜ್ಞೆ ಮಾಡಿದನು.

ರಮೆ:– ಭಯಂಕರ ಪ್ರತಿಜ್ಞೆ.

ಮುರಳಿ:– ಹೌದು. ಭಯಂಕರ ಪ್ರತಿಜ್ಞೆ. ಹಾಗೆಲ್ಲ ಆದರೇ ಯುದ್ಧದ ಬಿಸಿ ಹೆಚ್ಚುವದು.

ರಮೆ:– ನಿಜ. ನಿಜ. ಚೆನ್ನಾಗಿದೆ. ಮುಂದಕ್ಕೆ ಹೇಳಿ.

ಮುರಳಿ:– ಮುಂದಕ್ಕೆ ಏನು? ಪ್ರತಿಜ್ಞೆಯ ಪ್ರಕಾರ ಅರ್ಜುನ ಮಾರನೆಯ ದಿನ ಜಯದ್ರಥನನ್ನು ಕೊಂದನು.

ರಮೆ:– ಏನು? ತುರ್ತಾಗಿ ಬಸ್ಸಿಗೆ ಹೋಗಬೇಕಾಗಿದೆಯೇನು?

ಮುರಳಿ:– ಯಾಕೆ?

ರಮೆ:– ಮತ್ತೆ ಒಂದು ದಿನದ ಯುದ್ಧವನ್ನು ಒಂದೇ ವಾಕ್ಯದಲ್ಲಿ ಮುಗಿಸುತ್ತೀರಿ?

ಮುರಳಿ:– ಮಕ್ಕಳಿಗೆ ಕತೆ ಹೇಳುವಾಗ ಹೀಗೆ ಸ್ಥೂಲವಾಗಿ ಮಾತ್ರವೇ ಹೇಳಬೇಕು.

ರಮೆ:– ನಾನು ಯಾವಾಗಿನಿಂದ ನಿಮಗೆ ಮಗುವಾಗಿ ಕಾಣಿಸಲು ಪ್ರಾರಂಭವಾದದ್ದು ?

ಮುರಳಿ:– ಕಾಣಿಸುವದೆಲ್ಲ ಸರಿಯಾಗಿಯೇ ಕಾಣಿಸುತ್ತೀಯ. ಆದರೆ ಒಳಗಿನ ಬೆಳವಣಿಗೆಯನ್ನು ನೋಡುವಾಗ........

ರಮೆ:– ಏನು ಒಳಗಿನ ಬೆಳವಣಿಗೆ? ಮುಂದಕ್ಕೆ ಕತೆ ಹೇಳಿ ಎಂದು ಆಸಕ್ತಿ ತೋರಿಸಿದುದೇ ತಪ್ಪಾಯಿತ್ತೇನು ?

ಮುರಳಿ:– ಅಲ್ಲವೆ ? ಊರಿದ ಕಾಲು ಭದ್ರವಾಗಿದೆಯೇ ಎಂದು ಗಮನಿಸುವದಕ್ಕಿಂತ ಮುಂಚೆಯೇ ಮುಂದಿನ ಹೆಜ್ಜೆ ಎಲ್ಲಿಡಲಿ ಎಂದು ಆಸಕ್ತಿ ತೋರಿಸಿ ತೊಡರುಗಾಲಿಕ್ಕಿ ಬೀಳುವದು ಮಗುವಿನ ಲಕ್ಷಣವಲ್ಲವೆ ?

ರಮೆ:– ಏನು ಗ್ರಹಚಾರವಪ್ಪಾ ಇದು ? ಅದೇನು ಅಂತ ನೇರವಾಗಿ ಹೇಳಬಾರದೆ ? ಕತೆಯ ಸ್ವಾರಸ್ಯವನ್ನೆಲ್ಲ ಹಾಳುಮಾಡಿಬಿಡುತ್ತೀರಿ ಅಪ್ಪ ನೀವು ! ಹಾಗೆ ಹೇಳಿದರೆ ಮಗು, ಮಣ್ಣು ಅಂತ ಎಲ್ಲ ಹೇಳುತ್ತೀರಿ ! ನೀವು ಪ್ರೌಢರು, ವಿದ್ಯಾವಂತರು, ಜ್ಞಾನಿ ಎಲ್ಲ ಆಗಿದ್ದೀರಲ್ಲ, ಅದೇನೆಂದಾದರೂ ಹೇಳಿ, ಹೋಗಲಿ.

ಮುರಳಿ:– ಸಿಡುಕಬೇಡ ತಾಯಿ, ಶಾಂತಳಾಗು. ಪ್ರಸನ್ನಳಾಗು, ವರದಳಾಗು, ಸುಪ್ರಸೀದಳಾಗು, ನಿನಗೆ ಕೋಟಿ ನಮಸ್ಕಾರ.

ರಮೆ:– ಛೆ. ಹುಡುಗಾಟ ಬಿಟ್ಟು ದಯವಿಟ್ಟು ಹೇಳಿ.

ಮುರಳಿ:– ಅಲ್ಲ, ರಮಾ ? ಕತೆ ಕೇಳುವಾಗ ಅದರ ಘಟನೆಗಳು ಏಕೆ, ಹೇಗೆ ಎಂಬದನ್ನು ಸ್ವಲ್ಪವಾದರೂ ವಿಮರ್ಶಿಸಿಕೊಳ್ಳಬೇಡವೆ ?

ರಮೆ:– ಬೇಕು, ಹೇಳಿ.

ಮುರಳಿ:– ವ್ಯೂಹದ ಮಧ್ಯದಲ್ಲಿ ಅಭಿಮನ್ಯುವನ್ನು ಕೊಂದವರು ಯಾರು ?

ರಮೆ:– ನನಗೇನು ಗೊತ್ತು ? ನೀವು ಹೇಳಿದಿರಾ ?

ಮುರಳಿ:– ದುಶ್ಶಾಸನನ ಒಬ್ಬ ಮಗ.

ರಮೆ:– ಸರಿ.

ಮುರಳಿ:– ಸರಿ. ಅಭಿಮನ್ಯು ಸಾಯುವಾಗ ಜಯದ್ರಥ ಎಲ್ಲಿದ್ದ ?

ರಮೆ:– ಎಲ್ಲಿದ್ದ ?

ಮುರಳಿ:– ವ್ಯೂಹದ ಹೊರಬಾಗಿಲಿನಲ್ಲಿಯೇ ಇದ್ದ.

ರಮೆ:– ಆಗಲಿ. ಇದ್ದ.

ಮುರಳಿ:– ಹಾಗಿದ್ದ ಮೇಲೆ ಅಭಿಮನ್ಯು ಮರಣಕ್ಕೆ ಪ್ರತೀಕಾರವಾಗಿ ಅರ್ಜುನನು ಜಯದ್ರಥನನ್ನು ಕೊಲ್ಲುವದಾಗಿ ಪ್ರತಿಜ್ಞೆ ಮಾಡಿದುದೇಕೆ ?

ರಮೆ:– ಅದೇ, ಏಕೆ ಅಂತ ?

ಮುರಳಿ:– ಏಕೆ ಅಂತ ಏಕೆ ಯೋಚಿಸಲಿಲ್ಲ ಅಂತ ?

ರಮೆ:– ನೋಡಿದಿರಾ ? ನೀವು ಹೇಳಿದುದು ಸರಿಯೇ. ಹಾಳು ತಲೆಗೆ ಇದೆಲ್ಲ ಹೊಳೆಯುವದೇ ಇಲ್ಲವಲ್ಲ ಅಂತ !

ಮುರಳಿ:– ತಪ್ಪಾಯಿತು ಎನ್ನು.

ರಮೆ:– ತಪ್ಪಾಯಿತಪ್ಪ. ಹೇಳಿ.

ಮುರಳಿ:– ದಮ್ಮಯ್ಯ ಅನ್ನು.

ರಮೆ:– ದಮ್ಮಯ್ಯಾನೋ, ತಮ್ಮಯ್ಯಾನೋ, ಎಲ್ಲ ಆಯಿತಪ್ಪ. ಒಂದು ಸಲ ಹೇಳಿ.

ಮುರಳಿ:– ನೋಡು. ಮಹಾಭಾರತದ ಇಂತಹ ಸಂದರ್ಭಗಳನ್ನು ಸರಿಯಾಗಿ ಗಮನಿಸದಿರುವದರಿಂದಲೇ ಅದರ ಪಾತ್ರಗಳ ತುಲನಾತ್ಮಕ ವಿಮರ್ಶೆ ಅನೇಕರಿಗೆ ಅಸಾಧ್ಯವಾಗಿರುವದು.

ಅಭಿಮನ್ಯುವಿನ ಮರಣದ ಪ್ರತೀಕಾರವಾಗಿ ತಾನೇ ಅರ್ಜುನನು ಜಯದ್ರಥನನ್ನು ಕೊಲ್ಲುವದಾಗಿ ಪ್ರತಿಜ್ಞೆ ಮಾಡಿದುದು ? ಆದರೆ ನಿಜವಾಗಿ ನೋಡಿದರೆ ಜಯದ್ರಥನು ಅಭಿಮನ್ಯುವಿನೊಂದಿಗೆ ಯುದ್ಧ ಮಾಡಿಯೇ ಇಲ್ಲ. ಕರ್ಣನೇ ಮೊದಲಾದ ಇತರ ವೀರರು ಅಭಿಮನ್ಯುವನ್ನು ಸುತ್ತುಗಟ್ಟಿ ಹೊಡೆದು ಅವನ ಸಾವಿಗೆ ಕಾರಣರಾದವರು. ಹಾಗಿರುವಾಗ ಅರ್ಜುನನು ಭೀಕರ ಪ್ರತಿಜ್ಞೆಯನ್ನು ಮಾಡಿ ಜಯದ್ರಥನನ್ನು ಕೊಲ್ಲಲು ಪಣ ತೊಟ್ಟುದೇಕೆ ? ಜಯದ್ರಥನು ಚಕ್ರವ್ಯೂಹದ ಬಾಗಿಲಿನಲ್ಲಿ ನಿಂತಿದ್ದವನು ಎಂಬದನ್ನು ನೋಡಿದ್ದೇವೆ. ಈಶ್ವರನ ವರ ಬಲದಿಂದಾಗಿ ಆ ದಿನ ಒಂದರಲ್ಲಿ ಅವನು ಭೀಮನು ವ್ಯೂಹದ ಒಳಗೆ ಹೋಗದಂತೆ ತಡೆಯುವದರಲ್ಲಿ ಯಶಸ್ವಿಯಾಗಿದ್ದನು ಎಂಬದನ್ನೂ ನೋಡಿದ್ದೇವೆ. ಅಂದರೆ, ಅವನು ಆ ರೀತಿ ಭೀಮನನ್ನು ತಡೆಯಲು ಸಾಧ್ಯವಾದುದರಿಂದಲೇ ಅಭಿಮನ್ಯುವು ಸಾಯಲು ಅವಕಾಶವಾಯಿತು ಎಂದು ಅರ್ಜುನನು ಸರಾಗವಾಗಿ ನಂಬಿದ್ದನು ಎಂಬದು ಗೊತ್ತಾಗುತ್ತದೆ. ಈ ಹಿಂದೆಯೇ ಹೇಳಿದಂತೆ ಚಕ್ರವ್ಯೂಹವನ್ನು ಪ್ರವೇಶಿಸಲು ರಾಮ, ಕೃಷ್ಣ, ಅಭಿಮನ್ಯು ಮತ್ತು ಅರ್ಜುನ – ಈ ನಾಲ್ವರಿಗೆ ಮಾತ್ರ ತಿಳಿದಿದ್ದಿತು ಎಂಬದನ್ನು ಇಲ್ಲಿ ವಿಮರ್ಶಿಸಬಹುದು. ವ್ಯೂಹದ ಒಳಗೆ ಹೋಗಲು ಭೀಮನಿಗೆ ಸಾಧ್ಯವಿರಲಿಲ್ಲ ಎಂದಾದರೆ ಅವನು ಒಳಹೊಗದಂತೆ ಜಯದ್ರಥನು ತಡೆದು ಅಭಿಮನ್ಯುವಿನ ಮರಣಕ್ಕೆ ಕಾರಣನಾದನು ಎಂಬ ಅವನ

ಹೊಣೆಗಾರಿಕೆ ಅರ್ಥವಿಲ್ಲದ್ದಾಗುತ್ತದೆ. ಜಯದ್ರಥನು ತಡೆಯದಿರುತ್ತಿದ್ದರೆ ಭೀಮನು ಒಳಹೊಕ್ಕು ಅಭಿಮನ್ಯುವು ಸಾಯಲು ಎಡೆಕೊಡುತ್ತಿರಲಿಲ್ಲ ಎಂಬದು ಅರ್ಜುನನ ಪ್ರತಿಜ್ಞೆಯಿಂದ ಸ್ಪಷ್ಟವಾಗುತ್ತದೆ. ಇಡಿಯ ಪಾಂಡವ ಬಲಕ್ಕೆ ಭೀಮನೊಬ್ಬನೇ ರಕ್ಷಾಕವಚದಂತಿದ್ದವನು ಎಂಬದಕ್ಕೆ ಈ ಘಟನೆಗಿಂತ ಉತ್ತಮ ನಿದರ್ಶನ ಬೇಕಾಗುವದಿಲ್ಲ.

ರಮೆ:– ಆಗ ಸುಮ್ಮ ಸುಮ್ಮನೆ ನನ್ನ ಕೈಯಲ್ಲಿ ತಪ್ಪಾಯಿತು ಎಂದು ಹೇಳಿಸಿದಿರಲ್ಲಾ ! ಈಗ ನಾನಾಗಿಯೇ ಮನಃಪೂರ್ವಕವಾಗಿ ಹೇಳುತ್ತಿದ್ದೇನೆ– ತಪ್ಪಾಯಿತು. ಮುಂದುವರಿಸಿ.

ಮುರಳಿ:– ಒಪ್ಪಿಕೊಂಡೆ. ಮುಂದಕ್ಕೆ ಕೇಳು.

ಹದಿನಾಲ್ಕನೆಯ ದಿನದ ಯುದ್ಧ ಪ್ರಾರಂಭವಾಯಿತು. ಅರ್ಜುನನ ಪ್ರತಿಜ್ಞೆಯ ಸುದ್ದಿ ದುರ್ಯೋಧನನ ಪಾಳೆಯವನ್ನೂ ಮುಟ್ಟಿತ್ತು. ದ್ರೋಣನೇನು ಸಾಮಾನ್ಯನೆ? ಪ್ರತಿಜ್ಞೆ ಮಾಡಿದವನ ಗುರು ತಾನು ಎಂಬದನ್ನು ತೋರಿಸಿಕೊಳ್ಳುವ ಹಟ ಅವನಲ್ಲಿರುವದಿಲ್ಲವೆ ! ಜಯದ್ರಥನನ್ನು ನಡುವೆ ನಿಲ್ಲಿಸಿ ಅವನ ಸುತ್ತಲೂ ಮಹಾರಥರನ್ನೂ, ಅವರ ಸುತ್ತಲೂ ಸೈನ್ಯವನ್ನು ಮೊದಲು ಶಕಟ ವ್ಯೂಹದಲ್ಲಿಯೂ, ಅದನ್ನು ಸುತ್ತಿ ಚಕ್ರವ್ಯೂಹದಲ್ಲಿಯೂ, ಅದನ್ನು ಸುತ್ತಿ ಹಂಸ ವ್ಯೂಹದಲ್ಲಿಯೂ, ಅದನ್ನು ಸುತ್ತಿ ಗರ್ಭವ್ಯೂಹದಲ್ಲಿಯೂ, ಪುನಃ ಅದನ್ನು ಸುತ್ತಿ ಪದ್ಮವ್ಯೂಹದಲ್ಲಿಯೂ ನಿಲ್ಲಿಸಿದನು.

ಈ ಕಡೆ ಅರ್ಜುನನು ಹಿಂದಿನ ಇಡಿಯ ರಾತ್ರಿ ಪೂಜಾದಿಗಳಲ್ಲಿ ನಿರತನಾಗಿದ್ದು ಪ್ರಾತಃಕಾಲದಲ್ಲಿ ಕೃಷ್ಣನ ಅಭಯವನ್ನೂ ಪಡೆದು ಯುದ್ಧಕ್ಕೆ ಹೊರಟನು. ವ್ಯೂಹದ ಬಾಗಿಲಿನಲ್ಲಿ ಗರುಡಿಯಾಚಾರ್ಯನಾದ, ಕೌರವ ಸೇನಾಪತಿಯಾಗಿದ್ದ ದ್ರೋಣನು ತಾನೇ ಸ್ವತಃ ನಿಂತಿದ್ದನು. ಅವನು ಅರ್ಜುನನನ್ನು ಕುರಿತು "ನಿನ್ನೆ ಸಂಜೆ ಮಾಡಿದ್ದ ಪ್ರತಿಜ್ಞೆಯನ್ನು ಇಲ್ಲೊಮ್ಮೆ ಹೇಳು. ನಾನು ನಿರ್ಮಿಸಿರುವ ಈ ವ್ಯೂಹದೊಳಗಿನ ಯಾವನಾದರೂ ಒಬ್ಬನನ್ನು ನೀನು ಕೊಂದರೂ ಕೂಡ ಗೆಲವು ನಿನ್ನದು. ಯುದ್ಧ ಮಾಡು" ಎಂದು ಮೂದಲಿಸಿದನು.

ರಮೆ:– ಅದು ಸವಾಲು ! ಗುರು, ಗುರುವೇ. ಮತ್ತೆ ?

ಮುರಳಿ:– ದ್ರೋಣನಿಗೂ ಅರ್ಜುನನಿಗೂ ಯುದ್ಧ ಆರಂಭವಾದ ಸ್ವಲ್ಪ ಹೊತ್ತಿನಲ್ಲಿಯೇ ಅರ್ಜುನನ ಗಾಂಢೀವದ ತಿರುವು ತುಂಡಾಯಿತು. ಅಷ್ಟರಲ್ಲಿ ಕೃಷ್ಣನು "ಅರ್ಜುನಾ, ನೀನು ಯುದ್ಧ ಮಾಡಿ ಗುರುವನ್ನು ಇಂದು ಗೆಲ್ಲಲಾರೆ. ನಯವಾದ ಮಾತುಗಳಿಂದ ಅವನ ಮನಸ್ಸನ್ನು ಗೆಲ್ಲು" ಎಂದು ಹೇಳಿಕೊಟ್ಟನು. ಅದೇ ರೀತಿ ಅರ್ಜುನನು ನಿಶ್ಶಸ್ತ್ರನಾಗಿ ಭೂಮಿಗಿಳಿದು ದ್ರೋಣನಿಗೆ ನಮಸ್ಕರಿಸಿ

ತಮ್ಮ ಮೇಲ್ಮೆಯನ್ನು ಸಾಧಿಸಿಕೊಡಬೇಕೆಂದು ಬೇಡಿಕೊಂಡನು. ದ್ರೋಣನು ಇದರಿಂದ ಪ್ರಸನ್ನನಾಗಿ ಅರ್ಜುನನು ಒಳಹೊಗಲು ಬಿಟ್ಟುಕೊಟ್ಟನು.

ರಮೆ:– ಛಿ. ನಾಚಿಗೆಗೇಡು.

ಮುರಳಿ:– ಯಾರಿಗೆ ?

ರಮೆ:– ಯಾರಿಗೆ, ನಿಮ್ಮ ದ್ರೋಣನಿಗೂ ಅರ್ಜುನನಿಗೂ–ಇಬ್ಬರಿಗೂ. ಈ ಅರ್ಜುನ ಹೀಗೇ ಏನು ಯುದ್ಧ ಮಾಡಿದುದು ? ಮಾಡಿದ ಯುದ್ಧಗಳಲ್ಲಿ ಗೆದ್ದುದು ? ದುರ್ಯೋಧನ, ಈ ದ್ರೋಣನಂಥವರನ್ನೆಲ್ಲ ನಂಬಿಕೊಂಡು ಯುದ್ಧದಲ್ಲಿ ಸೋತು ಹೋದರೆ ಆಶ್ಚರ್ಯವೇನು ! ಇದನ್ನೇ ಏನು ಹಿಂದಿನ ಕಾಲದ ಧರ್ಮ ಯುದ್ಧ ಎಂದು ಹೇಳುತ್ತಿದ್ದುದು ? ಶತ್ರುವು ತನ್ನ ಕಡೆಯವರನ್ನು ಕೊಲ್ಲಲು ಸೈನ್ಯದ ಅಧಿಪತಿಯೇ ಅವಕಾಶ ಮಾಡಿಕೊಡುವದೇ ಧರ್ಮವೇನು ?

ಮುರಳಿ:– ಧರ್ಮದ ಕುರಿತು ವ್ಯಾಖ್ಯಾನ ಈಗ ಬೇಡ. ತನ್ನ ಜೀವನವಿಡೀ ಅಧರ್ಮವನ್ನೇ ಆಚರಿಸಿ ಮೆರೆದ ದುರ್ಯೋಧನ, ಅಂತಹ ಧರ್ಮವು ಅಂತಿಮ ಪರೀಕ್ಷೆಗೆ ಒಳಗಾಗಿ ತೀರ್ಮಾನಗೊಳ್ಳಬೇಕಾದ ಈ ಸಂದಿಗ್ಧ ಸಂದರ್ಭದಲ್ಲಿ ಧರ್ಮ ಕಾರ್ಯಗಳೇ ತನ್ನ ನೆರವಿಗೆ ಬರಬೇಕು ಎಂದು ನಿರೀಕ್ಷಿಸುವದು ಬಹುಶಃ ತಪ್ಪಾಗುತ್ತಿತ್ತು. ಈ ಅಂತಿಮ ಪರೀಕ್ಷಾ ಕಾಲದಲ್ಲಿ ಪಾಂಡವರ ಧರ್ಮವು ಅವರನ್ನು ಹೇಗಾದರೂ ರಕ್ಷಿಸುತ್ತದೆಯೇ, ದುರ್ಯೋಧನನ ಅಧರ್ಮವು ಹೇಗಾದರೂ ಅವನನ್ನು ವಂಚನೆಗೆ ಈಡುಮಾಡಿ ಸೋಲಿಸುತ್ತದೆಯೇ ಎಂಬದರ ವಿಮರ್ಶೆಯೇ ಬಹುಶಃ ಇಲ್ಲಿನ ಧರ್ಮಾಧರ್ಮಗಳ ಸರಿಯಾದ ವ್ಯಾಖ್ಯೆಯಾಗುತ್ತದೆ. ಕೃಷ್ಣನು ಅರ್ಜುನನಿಗೆ ತನ್ನ ವಿಶ್ವರೂಪವನ್ನು ತೋರಿಸಿದಾಗ ಭೀಕರಾಕೃತಿಯ ವಿರಾಟ್‌ಪುರುಷನ ಬಾಯೊಳಗೆ ಕೌರವರೂ ಅವನ ಕಡೆಯ ಸಮಸ್ತರೂ ಸಾವನ್ನರಸಿ ಹೊರಟಿದ್ದುದನ್ನು ಅರ್ಜುನ ನೋಡಿದ್ದಾನೆ. ಅಂದರೆ, ಚಿಕ್ಕಂದಿನಿಂದಲೂ ಧರ್ಮಕ್ಕೆ ಅಪಚಾರವೆಸಗಿದ ಕೌರವರು ಪ್ರಕೃತಿಯ ಸಹಜನಿಯಮವನ್ನನುಸರಿಸಿ ತಮ್ಮ ವಿನಾಶವನ್ನು ಈಗಾಗಲೇ ತಂದುಕೊಂಡಿದ್ದಾರೆ. ಪ್ರಕೃತಿಯೇ ಅವರ ನಾಶವನ್ನು ನಿರ್ಧರಿಸಿರುವಾಗ ಅದು ಸಾಧ್ಯವಾಗಲು ಏನೆಲ್ಲ ಆಗಬೇಕೋ ಅವೆಲ್ಲ ತಮ್ಮಷ್ಟಕ್ಕೇ ನಡೆಯುತ್ತಿರುತ್ತವೆ. ಅರ್ಜುನನ ನಮಸ್ಕಾರದಿಂದ ಅಹಂಕಾರ ಉಬ್ಬಿದಂತಾಗಿ ಅವನು ಒಳಹೊಗಲು ಅವಕಾಶ ಮಾಡಿಕೊಡುವದರ ಮೂಲಕ ತನ್ನ ಕರ್ತವ್ಯದಲ್ಲಿ ಭ್ರಷ್ಟತೆಯನ್ನು ಪ್ರದರ್ಶಿಸಲು ದ್ರೋಣನಿಗೆ ಮನಸ್ಸು ಬಂದುದಾದರೂ ಈ ಅದಮ್ಯವಾದ ಪ್ರಕೃತಿಯ ನಿಯಮದ ಅನುಲ್ಲಂಘನೀಯ ಪರಿಣಾಮದಿಂದಲೇ ಆಗಿದೆ.

ಈಗ ಸ್ವಲ್ಪ ವಿಮರ್ಶೆ ಮಾಡು. ಕುರುಕ್ಷೇತ್ರವು ಧರ್ಮ ಅಧರ್ಮಗಳ ಸತ್ವಪರೀಕ್ಷೆಯ ಕುಲುಮೆಯಾಗಿತ್ತೆಂಬದಂತೂ ನಿಜ. ಅಲ್ಲಿ ಧರ್ಮಾತ್ಮರಾದ

ಪಾಂಡವರು ಗೆಲ್ಲಬೇಕು; ಅಧರ್ಮಿಗಳಾದ ಕೌರವರು ಸೋಲಬೇಕು. ದ್ರೋಣ-ಅರ್ಜುನ ಇಬ್ಬರೂ ಯುದ್ಧ ಹಿಡಿದು ನಿಂತರೆ ಅರ್ಜುನನ ಕೈಯಲ್ಲಿ ದ್ರೋಣರು ಸೋಲುವದು ಸಾಧ್ಯವಿಲ್ಲ. ದ್ರೋಣರಿಂದ ಅರ್ಜುನ ಸೋತರೆ ಪರಿಣಾಮ ವಿಪರೀತವಾಗುತ್ತದೆ. ಹಾಗಿದ್ದಮೇಲೆ ಪ್ರಕೃತಿಯಾದರೂ ತನ್ನ ನಿಯಮವನ್ನು ಸಾಧಿಸುವದು ಹೇಗೆ ? ದ್ರೋಣರ ಯಾವದಾದರೂ ವೈಯಕ್ತಿಕ ದೌರ್ಬಲ್ಯವನು ಬಳಸಿ ಮಾತ್ರವೇ ಅವರನ್ನು ಗೆಲ್ಲಬೇಕು. ಯೋಧನಾಗಿ ಅವರಲ್ಲಿ ಯಾವ ದೌರ್ಬಲ್ಯವೂ ಇರಲಿಲ್ಲ. ಕೆರಳಿದ ದ್ರೋಣರು ಮೂರು ಲೋಕವನ್ನೂ ಎದುರಿಸಲು ಸಮರ್ಥರಾಗಿದ್ದವರು. ಅವರ ಒಂದು ದೌರ್ಬಲ್ಯವೆಂದರೆ ಅವರ ಸ್ವಾಭಿಮಾನ. ಹಿಂದೆ ತನ್ನ ಸಹಪಾಠಿ ದ್ರುಪದನಿಂದ ತನ್ನ ಸ್ವಾಭಿಮಾನಕ್ಕೆ ಚ್ಯುತಿ ಬಂದಾಗ ವರ್ಷಗಟ್ಟಲೆ ಆ ಸೇಡನ್ನು ಸಾಕಿ ಕೊನೆಯಲ್ಲಾದರೂ ಪ್ರತೀಕಾರ ಮಾಡಿಯೇ ತೃಪ್ತನಾದ ಪ್ರಚಂಡ ಸ್ವಾಭಿಮಾನೀ ಬ್ರಾಹ್ಮಣ, ದ್ರೋಣ. ಈಗಲಾದರೂ ಪ್ರಕೃತಿ ಅವರ ಈ ದೌರ್ಬಲ್ಯವನ್ನೇ ಬಳಸಿಕೊಂಡಿತು. ಅವರ ಆ ದೌರ್ಬಲ್ಯವನ್ನು ತಿಳಿಯುವಷ್ಟು ಅರ್ಜುನನು ಸೂಕ್ಷ್ಮಮತಿ ಇದ್ದವನಾಗಿರಲಿಲ್ಲ. ಏಕೆಂದರೆ ಅವನು ಸ್ವತಃ ಸ್ವಾಭಿಮಾನಿಯಾಗಿದ್ದ. ದ್ರೋಣನ ಈ ದೌರ್ಬಲ್ಯ ಕೃಷ್ಣನಿಗೆ ಚೆನ್ನಾಗಿ ತಿಳಿದಿತ್ತು. ಅವನಿಗೆ ತಿಳಿಯದುದು ಯಾವದೂ ಇರಲಿಲ್ಲ. ಅದನ್ನೇ ಅವನು ಅರ್ಜುನನಿಗೆ ಹೇಳಿಕೊಟ್ಟುದು. ತನ್ನೊಂದಿಗೆ ಹೊಡೆದಾಡುತ್ತಿದ್ದ ಅರ್ಜುನ ಕೆಳಗಿಳಿದು ಬಂದು ತನಗೆ ನಮಸ್ಕಾರ ಮಾಡಿ ತಮ್ಮನ್ನು ಕಾಪಾಡಬೇಕೆಂದು ಕೇಳಿಕೊಂಡಾಗ ದ್ರೋಣನ ಸ್ವಾಭಿಮಾನ ತೃಪ್ತಿಗೊಂಡಿತು. ಆ ತೃಪ್ತಿಯ ಮತ್ತಿನಲ್ಲಿ ಕರ್ತವ್ಯದ ಜವಾಬ್ದಾರಿ ಮರೆತುಹೋಯಿತು. ಪ್ರಕೃತಿ ಗೆದ್ದಿತು. ದ್ರೋಣ ಸೋತಿದ್ದನು. ಹೀಗೆಯೇ ನಮ್ಮ ಜೀವನದಲ್ಲಿಯೂ ಘಟನೆಗಳು ನಡೆಯುವದು. ಧರ್ಮೋ ರಕ್ಷತಿ ರಕ್ಷಿತಃ ಎಂದು ನಾವು ನಂಬಲು ಸಾಧ್ಯವಾದುದೇ ಇದರಿಂದ.

ರಮೆ:- ತಲೆಯೊಳಗೆ ಏನೋ ಗುಂಯ್ ಅನ್ನುತ್ತದಪ್ಪ. ಕತೆ ಹೇಳಿ.

ಮುರಳಿ:- ಅದು ಅಜ್ಞಾನದ ಹುಳು ಕೂಗುವದು ! .... ಶ್ .... ಕೋಪಿಸಿಕೊಳ್ಳಬೇಡ, ತಮಾಷೆ ಮಾಡಿದೆ.... ಮುಂದಕ್ಕೆ ಕೇಳು. ವ್ಯೂಹದ ಒಳಗೆ ನುಗ್ಗಿದ ಅರ್ಜುನನು, ಅವಿಶ್ರಾಂತನಾಗಿ, ಖಾಡಾ ಖಾಡಿಯಾಗಿ ಯುದ್ಧ ಮಾಡಿದ. ಇದರಿಂದಾಗಿ ಅವನ ಕುದುರೆಗಳು ತುಂಬ ಬಳಲಿದವು. ಅಲ್ಲಿಯೇ ವರುಣಾಸ್ತ್ರದಿಂದ ನೀರನ್ನುಂಟುಮಾಡಿ ಅವುಗಳ ನೀರಡಿಕೆಯನ್ನು ಹೋಗಲಾಡಿಸಿ ಪುನಃ ಯುದ್ಧಕ್ಕೆ ಆರಂಭಿಸಿದ. ತನ್ನ ಸುತ್ತಲೂ ಸಾಗರದಂತೆ ನೆರೆದಿದ್ದ ಶತ್ರುಸೈನ್ಯದ ನಡುವೆ ಏಕಾಂಗಿಯಾಗಿ ಹೋರಾಡುತ್ತಿದ್ದ ಅರ್ಜುನನು ಸಹಜವಾಗಿ ಬಳಲಿದನು. ಬಹಳ ಅಪಾಯಕಾರಿಯಾದ ಪ್ರತಿಜ್ಞೆಯ ನಿರ್ವಹಣ ಕಾರ್ಯದಲ್ಲಿ ತೊಡಗಿದ

ಅರ್ಜುನನ ಗಾಂಡೀವದ ಠೇಂಕಾರವನ್ನು ಕೇಳದೆ ಯುಧಿಷ್ಠಿರನು ಬಹಳ ಕಳವಳ ಪಟ್ಟು ಅವನ ಸ್ಥಿತಿಯನ್ನು ಅರಿತು ತಿಳಿಸುವಂತೆ ಆಜ್ಞಾಪಿಸಿ ಸಾತ್ಯಕಿಯನ್ನು ಕಳುಹಿಸಿದನು.

ವ್ಯೂಹದ ಬಾಗಿಲಿನಲ್ಲಿದ್ದ ದ್ರೋಣನು ಸಾತ್ಯಕಿಯನ್ನೂ ಕುರಿತು ಅವನು ಒಳಹೊಗಬೇಕಾದರೆ ತನ್ನನ್ನು ಯುದ್ಧದಲ್ಲಿ ಜಯಿಸಬೇಕೆಂದೂ ಇಲ್ಲವಾದರೆ ಅರ್ಜುನನಂತೆಯೇ ಭಯದಿಂದ ತನಗೆ ನಮಸ್ಕಾರ ಮಾಡಿ ಒಳಹೊಗಬಹುದೆಂದೂ ತಿಳಿಸಿದನು. ಕಾರ್ಯಾತುರದಲ್ಲಿದ್ದ ಸಾತ್ಯಕಿಯೂ ಅರ್ಜುನನಂತೆಯೇ ದ್ರೋಣ ನಿಗೆ ವಂದಿಸಿ ವ್ಯೂಹವನ್ನು ಪ್ರವೇಶಿಸಿದನು. ಅವನು ಕೂಡ ಭಾರೀ ಕಾಳಗದಲ್ಲಿ ತೊಡಗಬೇಕಾಗಿ ಬಂದುದರಿಂದ ತಾನು ಬಂದ ಕಾರ್ಯವನ್ನು ಪೂರೈಸಲು ಅವನಿಂದಾಗಲಿಲ್ಲ. ಇದರಿಂದ ಮತ್ತಷ್ಟೂ ಕಳವಳಗೊಂಡ ಯುಧಿಷ್ಠಿರನು ಅರ್ಜುನನ ವೃತಾಂತವನ್ನು ತಿಳಿದು ಬಂದು ಹೇಳುವಂತೆ ಭೀಮನಿಗೇ ಆಜ್ಞಾಪಿ ಸಿದನು.

ರಮೆ:- ಒಂದು ಸಂದೇಹ. ಈ ಕುರುಕ್ಷೇತ್ರದ ಘಟನೆಯನ್ನು ವ್ಯಾಸರು ಕಲ್ಪನೆಯಿಂದ ಹೆಣೆದುದಲ್ಲ ಎಂದು ಹೇಗೆ ಹೇಳುತ್ತೀರಿ ? ನೀವೇ ಹೇಳುವ ಪ್ರಕಾರ ದ್ರೋಣರು ರಚಿಸಿದ್ದ ವ್ಯೂಹವು ಶತ್ರುಗಳಿಗೆ ಅಜೇಯವಾಗಿತ್ತು. ಅರ್ಜುನ ನಂಥವರೂ ದ್ರೋಣರಿಗೆ ನಮಸ್ಕಾರ ಮಾಡಿ ಒಳಹೋಗಬೇಕಾಯಿತು. ಅಂದರೆ ಪಾಂಡವ ಪಕ್ಷದಿಂದ ಅರ್ಜುನನೊಬ್ಬನೇ ಒಳಹೊಕ್ಕನೆಂದು ಹೇಳಿದಂತಾಯಿತು. ಬಹಳ ಸಮಯವಾದ ಮೇಲೆ ಸಾತ್ಯಕಿಯೂ ಒಳಗೆ ಹೋದ. ಹೇಳೀ – ಕೇಳೀ, ಶತ್ರುಗಳ ವ್ಯೂಹ. ಒಳಹೊಗಲಿಕ್ಕೇ ಅವಕಾಶ ಮಾಡಿಕೊಡದಿರುವಷ್ಟು ಭದ್ರವೂ ಅಜೇಯವೂ ಆಗಿತ್ತು. ಅಂತಹವರೊಳಗೆ ಈ ಅರ್ಜುನ, ಸಾತ್ಯಕಿಯರು ಒಬ್ಬೊಬ್ಬರೇ ಸಿಕ್ಕಿಕೊಂಡಾಗಲೂ ಇವರು ಸಾಯದೆ ಉಳಿದಿದ್ದರು ಎಂದರೆ ಇವರು ಒಬ್ಬೊಬ್ಬನೂ ಸಮಗ್ರ ಕೌರವ ಬಲಕ್ಕಿಂತಲೂ ಹೆಚ್ಚು ಪರಾಕ್ರಮಿ ಯಾಗಿದ್ದನೆಂದು ಹೇಳಬೇಕಾಗುತ್ತದೆ. ಆದರೆ ವಾಸ್ತವಿಕವಾಗಿ ಹಾಗೇನೂ ಇಲ್ಲ. ಒಳಹೊಗಲಿಕ್ಕೇ ಸಾಧ್ಯವಿಲ್ಲದ ಈ ವ್ಯೂಹದೊಳಗೆ ಅರ್ಜುನನೊಬ್ಬನನ್ನು ಸೇರಿಸಿಕೊಂಡು ಕೌರವ ವೀರರೆಲ್ಲರೂ ಸೇರಿ ಹೊಡೆದು ಕೊಲ್ಲಲಿಲ್ಲ ಏಕೆ? ಮಹಾಭಾರತ ಕಥೆಯನ್ನು ಇಷ್ಟು ಬೇಗ ಮುಗಿಸಬಾರದು ಎಂಬದಕ್ಕಾಗಿಯೆ ?

ಮುರಳಿ:- ಒಪ್ಪಿದೆ, ಒಪ್ಪಿಕೊಂಡೆ. ಮೆಚ್ಚಿದೆ. ಶರಣಾಗತನಾದೆ.

ರಮೆ:- ಮತ್ತೆ ಸುಮ್ಮನೆ ವಾದ ಮಾಡುತ್ತೀರಿ ? ಮಹಾಭಾರತವು ಕವಿ ಕಲ್ಪನೆಯ ಕತೆ ಎಂದು ಹೇಳಿಬಿಟ್ಟರೆ ಆಳೆತ್ತರ ಹಾರುತ್ತೀರಿ? ಅದಕ್ಕೇ ಹೇಳು ವದು, ಯಾವದನ್ನೂ ತುಂಬ ವಿವೇಚನೆ ಮಾಡಿ ತೀರ್ಮಾನಕ್ಕೆ ಬರಬೇಕು, ಅಂತ. ಇನ್ನು ಮುಂದುವರಿಸಿ. ವ್ಯಾಸರು ಕಲ್ಪಿಸಿಕೊಂಡು ಬರೆದ ಕತೆ ಇದು ಎಂದರೆ

ನನ್ನ ದೃಷ್ಟಿಯಲ್ಲಿ ಮಹಾಭಾರತವು ಕಡಿಮೆ ಮೌಲ್ಯದ ಗ್ರಂಥವೇನೂ ಆಗುವದಿಲ್ಲ. ಅದೊಂದು ಅದ್ಭುತವಾದ ಕತೆಯೇ ಹೌದು. ಈ ದೃಷ್ಟಿಯನ್ನಿಟ್ಟುಕೊಂಡು ಮುಂದಕ್ಕೆ ಹೇಳಿ.

ಮುರಳಿ:– ನಿಜವಾಗಿ ಈಗ ನಿನ್ನ ಸ್ಥಾನ ಒಮ್ಮೆಗೇ ಏರಿಬಿಟ್ಟಿತು. ನೀನು ಹತ್ತಾರು ದೇಶೀಯ ವಿಮರ್ಶಕರ, ವಿದೇಶೀಯ ಸಂಶೋಧಕರ ಸಾಲಿಗೆ ಸೇರಿಬಿಟ್ಟೆ.

ರಮೆ:– ಅಷ್ಟು ದೊಡ್ಡ ಸ್ಥಾನವನ್ನೇನೂ ನನಗೆ ಕೊಡುವದು ಬೇಡ. ಆದರೂ ನನಗೆ ಅದೇ ಆಶ್ಚರ್ಯವಾಗುತ್ತಿತ್ತು. ವಿದೇಶಗಳಿಂದ ಬಂದು ಇಲ್ಲಿ ಸಂಸ್ಕೃತವನ್ನು ಕಲಿತು ಅದರಲ್ಲಿ ಪಾಂಡಿತ್ಯ ಪಡೆದು ನಮ್ಮ ಈ ಗ್ರಂಥಗಳನ್ನೆಲ್ಲ ವಿಮರ್ಶೆ ಮಾಡಬೇಕಾದರೆ ಅವರೆಲ್ಲರೂ ಎಷ್ಟು ಪರಿಶ್ರಮ ಪಟ್ಟಿರಲಿಕ್ಕಿಲ್ಲ! ಅವರ ಆ ಪರಿಶ್ರಮ, ಸಂಶೋಧನೆಯಲ್ಲಿ ಅವರಿಗಿರುವ ಕುತೂಹಲ – ಇವನ್ನು ನೋಡಿ ಅವಾಕ್ಕಾದ ನಮ್ಮ ದೇಶದ ವಿದ್ವಾಂಸರೂ ಕೂಡ ಆ ವಿದೇಶೀಯರ ಮಾರ್ಗವನ್ನನು ಸರಿಸಿ ಹೋಗಿ ನೋಡಿ ಅವರು ಹೇಳಿದುದು ಸರಿ ಎಂದು ಕಂಡುಕೊಂಡ ಮೇಲೆ ಸಾರ್ವತ್ರಿಕವಾಗಿ ಎಂಬಂತೆ, ಎಲ್ಲ ವಿದ್ವಾಂಸರೂ, ನಮ್ಮ ಈ ಗ್ರಂಥಗಳು ಚರಿತ್ರೆ ಎಂಬ ನಮ್ಮ ಭಾವನೆ ಹೇಗೆ ತಪ್ಪು ಎಂಬದನ್ನು ಸಾರಿ ಹೇಳಿರುವಾಗ ನೀವೊಬ್ಬರು ನನ್ನಂತಹ ಒಬ್ಬಳು ದಡ್ಡಿಯನ್ನು ಕೂರಿಸಿಕೊಂಡು ಮಹಾಭಾರತವು ಚರಿತ್ರೆಯೇ ಹೌದು ; ವ್ಯಾಸರು ಕಲ್ಪನೆಯಿಂದ ಕತೆ ಹೆಣೆದೇ ಇಲ್ಲ ಎಂದು ಪುನಃ ಪುನಃ ಒತ್ತಿ ಹೇಳುತ್ತಿದ್ದಾಗ ನನಗೆ ನಿಜವಾಗಿ ಬಹಳ ಆಶ್ಚರ್ಯವಾಗುತ್ತಿತ್ತು. ನೀವೇ ಅರ್ಜುನನ ಕುರಿತಾಗಿ ಹೇಳುವಂತೆ ತನ್ನ ಸ್ವಂತ ಬಲವನ್ನು ತಿಳಿಯದೆ ಇತರ ಬಲಾಢ್ಯರನ್ನು ಸಣ್ಣದಾಗಿ ಕಾಣುವ ಪರಿಸ್ಥಿತಿ ಇಲ್ಲಿಯೂ ಇಲ್ಲವೇ ಎಂದು ಅನಿಸುತ್ತಿತ್ತು............ಆದರೂ ಶರಣಾಗತನಾದೆ ಎನ್ನುವಷ್ಟು ದೊಡ್ಡ ಗುಣವೂ ನಿಮ್ಮಲ್ಲಿ ಇದೆ ಅನ್ನಿ !

ಮುರಳಿ:– ನಿಜ. ಯುದ್ಧೋತ್ಸುಕನಾದ ಭೀಮನು...........

ರಮೆ:– ಏನೋ ಸಂಶಯ. ನಿಂತ ನೀರನ್ನು ನಂಬಬಾರದಂತೆ.

ಮುರಳಿ:– ಏಕೆ ?

ರಮೆ:– ನಾನು ಅಷ್ಟು ಹೇಳಿದರೂ ಏನೂ ಮಾತನಾಡದೆ ಮುಂದುವರಿಯುತ್ತಿದ್ದೀರಿ ?

ಮುರಳಿ:– ನೀವು ವಿದ್ವಾಂಸರು, ಅಜ್ಞ ಶರಣಾಗಿದ್ದೇನೆ. ಇತಿಹಾಸ ಹೇಳಲು ಹೊರಟುದು ಅಜ್ಜಿಕತೆಯಾಗಿಬಿಟ್ಟಿತು ! ಸೋಲಿನ ಸೀರವತೆಯಲ್ಲಿ ಮಾತಿಗೆಲ್ಲಿ ಅವಕಾಶ ?

ರಮೆ:– ನಿಮ್ಮ ಮಾತು ವ್ಯಂಗ್ಯವೊ. ಸಹಜವೊ ?

ಮುರಳಿ:– ನಿನಗೆ ಹೇಗೆಂದು ಕಾಣಿಸುತ್ತಿದೆ ?

ರಮೆ:– ಗೊತ್ತಾಗುವುದಿಲ್ಲವಪ್ಪ.

ಮುರಳಿ:– ನಿನ್ನ ವಿದ್ವತ್ತಿನಲ್ಲಿ ಇದನ್ನೆಲ್ಲ ಗೊತ್ತುಮಾಡಿಕೊಳ್ಳುವ ಅಂಶ ಸೇರಿಲ್ಲವೊ ?

ರಮೆ:– ನಿಮಗೇನೋ ಆಗಿದೆ. ತಾನು ತುಂಬಾ ತಿಳಿದವನು ಎಂದುಕೊಂಡ ಗುಳ್ಳೆ ಒಡೆದಾಗ ಹೀಗಾಗುತ್ತದೋ ಏನೋ. ನಾನು ಹೇಳಿಕೊಂಡೆನೆ, ನಾನು ವಿದ್ವಾಂಸಳು ಎಂದು ?

ಮುರಳಿ:– ವಿದ್ವಾಂಸಳೆಂದು ಹೇಳಿಕೊಳ್ಳಲಿಲ್ಲ. ವಿದ್ವಾಂಸಳ ಹಾಗೆ ಹೇಳಿದೆ. ಅದಕ್ಕೆ ಮತ್ತೇನೆಂದು ಹೇಳಬೇಕು ?

ರಮೆ:– ಇಲ್ಲವಾದರೂ ನಿಮ್ಮದು ಬಹಳ ದುರಹಂಕಾರದ ಸ್ವಭಾವ.

ಮುರಳಿ:– ದುರಹಂಕಾರ ಇರುವವರು ಶರಣಾದೆ ಎನ್ನುತ್ತಾರೆಯೆ ?

ರಮೆ:– ಶರಣಾದೆ ಎನ್ನುವವರು ಹೀಗೆಲ್ಲ ಮಾತನಾಡುತ್ತಾರೆಯೆ ? ಹೋಗಲಿ ಬಿಡಿ. ನಿಮ್ಮ ಅಭಿಪ್ರಾಯಕ್ಕೆ ವಿರೋಧವಾಗಿ ಮಾತನಾಡಿ ನಾನೇಕೆ ನಿಮ್ಮೊಂದಿಗೆ ವೈಯಕ್ತಿಕವಾದ ವಿರಸವನ್ನು ತಂದುಕೊಳ್ಳುವದು ! ಮಹಾಭಾರತವು ಚರಿತ್ರೆಯೊ, ಅಜ್ಜಿ ಕತೆಯೋ, ಏನು ಮಣ್ಣೊ ! ಅದು ಏನಾದರೆ ನನಗೇನಾಗಬೇಕು ! ಪ್ರಾರಂಭ ಮಾಡಿದುದಕ್ಕೆ ನಿಮ್ಮ ಕತೆಯನ್ನು ಹೇಳಿ ಮುಗಿಸಿ....ಒಂದು ವಿಷಯ ಹೀಗಲ್ಲವೇ ಎಂದು ಕೇಳಿದರೆ ಒಂದೋ ಹೌದು ಎನ್ನಬೇಕು. ಇಲ್ಲವೇ ಅಲ್ಲ ಎನ್ನಬೇಕು; ಏಕೆ ಹಾಗೆ ಎಂದು ಹೇಳಿಕೊಡಬೇಕು. ಇದು ಏನಿಲ್ಲ....ತಾನೇ ಮಹಾ ತಿಳಿದವರು ಎಂಬ........

ಮುರಳಿ:– ದೇವತಾ ಯೋಗ್ಯವಾದ ದೃಶ್ಯ........

ರಮೆ:– .... ಎಲ್ಲ ತಿಳಿದಿದೆಯಂತೆ. ಆದರೆ ಇನ್ನೊಬ್ಬರಲ್ಲಿ ಹೇಗೆ ಮಾತನಾಡಿದರೆ ಅವರಿಗೆ ಹಿತವಾಗುತ್ತದೆ ಎಂಬದು ಮಾತ್ರ ಗೊತ್ತಿಲ್ಲ....

ಮುರಳಿ:– ........ ಹೀಗೆ ಏನೋ ಆಗಿಯೇ ಆ ಇಂದ್ರ ಬಂದಿರಬೇಕು, ಅಹಲ್ಯೆಯ ಬಳಿಗೆ....

ರಮೆ:– ಎಂಥದು ನಿಮ್ಮದೇ ಒಂದು ಮಾತು ?

ಮುರಳಿ:– ನಿನ್ನ ಕುರಿತು ಹೇಳುತ್ತಿದ್ದೆ ರಮಾ ! ಸುಂದರಿ ಅರೆ ಮುನಿಸಿನಿಂದಿರುವಾಗ ಅವಳನ್ನು ಇಂದ್ರನಿಂದ ಅವಳ ಗಂಡ ರಕ್ಷಿಸಿಕೊಳ್ಳುವದು ಹೇಗೆ ಎಂಬ ಕುರಿತು ಯೋಚಿಸುತ್ತಿದ್ದೆ.

ರಮೆ:– ಈ ನಾಟಕವೆಲ್ಲ ಗೊತ್ತಿದೆ. ಸಾಕು. ಕತೆ ಮುಂದುವರಿಸಿ.

ಮುರಳಿ:– ನಿಜ ಹೇಳಲೆ ? ಕತೆ ಕೇಳುವಾಗ ನೀನು ಅದರ ಆಚೆಗೂ ಒಳ ಹೊಕ್ಕು ನೋಡುವ ನಿನ್ನ ದೃಷ್ಟಿಯನ್ನು ಮೆಚ್ಚಿದೆ. ಆದರೆ ಹಾಗೆ ನೋಡಿದುದು ಸಾಲಲಿಲ್ಲ ಎಂದು ಹೇಳಿದೆ, ಅಷ್ಟೆ.

ರಮೆ:– ಏನದು ನಿಮ್ಮ ಒಗಟು ?

ಮುರಳಿ:– ಅಜೇಯವಾದ ವ್ಯೂಹದಲ್ಲಿ ಏಕಾಂಗಿಯಾಗಿ ಸಿಕ್ಕಿಕೊಂಡ ಅರ್ಜುನನನ್ನು ಕೌರವ ವೀರರೆಲ್ಲರೂ ಸೇರಿ ಕೊಲ್ಲದುದರಿಂದ ಕತೆಯು ಸಹಜತೆಗೆ ಧಕ್ಕೆ ಬಂದಿದೆ ಎಂದು ಕಂಡುಕೊಂಡ ನಿನ್ನ ದೃಷ್ಟಿ ಮೆಚ್ಚುವಂಥಾದ್ದೆ. ಆದರೆ ಅಷ್ಟರಿಂದಲೇ ತೀರ್ಮಾನಕ್ಕೆ ಬರುವದು ಅಭಿಪ್ರಾಯ ಎನಿಸಬಹುದೇ ಹೊರತು ಸಿದ್ಧಾಂತ ಎನಿಸಲಾರದು. ಯುದ್ಧದ ಚಮತ್ಕಾರಗಳ ಕುರಿತು ನಮಗೆಲ್ಲ ಏನು ತಿಳಿದಿದೆ? ಏನೂ ಇಲ್ಲ. ಹಿಂದಿನ ದಿನ ದ್ರೋಣರು ರಚಿಸಿದ ವ್ಯೂಹವು ನೀನು ಹೇಳಿದಂತೆಯೇ ಶತ್ರುವನ್ನು ನಡುವೆ ಸಿಕ್ಕಿಸಿ ಕೊಲ್ಲಲಿಕ್ಕೆಂದೇ ರಚಿತವಾದುದು. ಇಂದಿನ ವ್ಯೂಹದ ರಚನೆ ಅಂತಹ ಉದ್ದೇಶಕ್ಕಾಗಿ ಅಲ್ಲ. ಇದು ತಮ್ಮವನನ್ನು ರಕ್ಷಿಸುವದಕ್ಕಾಗಿ ರಚಿತಗೊಂಡುದು. ಕೌರವ ವೀರರು ಜಯದ್ರಥನ ಕಾವಲಿನಲ್ಲಿದ್ದಾರೆ. ಅವರು ಅರ್ಜುನನ ಮೇಲೆ ಬಿದ್ದರೆ ಅಂತಹ ವ್ಯೂಹ ರಚನೆಯ ಉದ್ದೇಶವೇ ವಿಫಲವಾಗಿ ಅದು ಯುದ್ಧದ ಶಿಸ್ತಿಗೆ ಭಂಗ ತರುತ್ತದೆ. ಅರ್ಜುನನ ಕಣ್ಣಿಗೆ ಜಯದ್ರಥ ಬೀಳಬಾರನೆನ್ನುವದಷ್ಟೇ ಇಂದಿನ ವ್ಯೂಹ ರಚನೆಯ ಉದ್ದೇಶ.

ರಮೆ:– ತಪ್ಪು, ತಪ್ಪು, ತಪ್ಪು. ಹೆಚ್ಚು ಟೀಕೆ ಮಾಡದೆ ನನ್ನನ್ನು ಹೆಚ್ಚು ಅಣಕಿಸದೆ ದಯವಿಟ್ಟು ಮುಂದುವರಿಸಿ. ತಪ್ಪಾಯಿತು.

ಮುರಳಿ:– ಹುಚ್ಚು ಹುಡುಗಿ. ಕೇಳು. ಯುಧಿಷ್ಠಿರನಿಂದ ಆಜ್ಞಾಪಿಸಲ್ಪಟ್ಟ ಭೀಮನು ಯುದ್ಧೋತ್ಸುಕನಾಗಿ, ಅಣ್ಣನಿಗೆ ನಮಸ್ಕರಿಸಿ, ಸೂತನಿಗೆ ಉಡುಗೊರೆಗಳನ್ನಿತ್ತು, ರಥಾಶ್ವಗಳಿಗೆ ವಂದಿಸಿ, ಸ್ತುತಿಪಾಠಕರು ಹೊಗಳುತ್ತಿರಲು, ರಣಕಹಳೆಯೇ ಮೊದಲಾದ ರಣವಾದ್ಯಗಳು ಭೋರ್ಗರೆಯುತ್ತಿರಲು ಯುದ್ಧಕ್ಕೆ ಹೊರಟನು. ಯಥಾಕ್ರಮವಾಗಿ ದ್ರೋಣನು ಇವನನ್ನು ತಡೆದನು. ತಾನು ಅಣ್ಣನ ಆಜ್ಞೆಯ ಪ್ರಕಾರ ವ್ಯೂಹದೊಳಗೆ ಹೋಗುತ್ತಿರುವದಾಗಿಯೂ, ತನ್ನನ್ನು ಹೋಗಲು ಬಿಡಬೇಕೆಂದೂ ಭೀಮನು ಕೇಳಿಕೊಂಡಾಗ ದ್ರೋಣನು ಅರ್ಜುನ, ಸಾತ್ಯಕಿಗಳಂತೆಯೇ ಭೀಮನೂ ಅವನ ಶತ್ರುವಾದ ತನ್ನ ಕಾಲಿಗೆ ಬಿದ್ದು ಒಳಗೆ ಹೋಗಬಹುದೆಂದೂ, ಇಲ್ಲವಾದರೆ ತನ್ನೊಂದಿಗೆ ಯುದ್ಧ ಮಾಡಬೇಕೆಂದೂ ತಿಳಿಸಿ ಅವನ ಮಾರ್ಗವನ್ನು ತಡೆದನು. ಅರ್ಜುನ ಸಾತ್ಯಕಿಯರು ಎಳೆಯುವರೆಂದೂ, ಗರುಡಿಯ ಮನೆಗೂ ಯುದ್ಧರಂಗಕ್ಕೂ ವ್ಯತ್ಯಾಸವಿರುವದರಿಂದ ಅಲ್ಲಿ ಗುರುವಿಗೆ

ಮಾಡುವ ವಂದನೆ ಇಲ್ಲಿ ಅನವಶ್ಯವೆಂದೂ ತಾವು ದ್ರೋಣನನ್ನು ತಮ್ಮ ತಂದೆ, ಬಂಧು, ಗುರು ಎಂದೆಲ್ಲಾ ತಿಳಿದಿದ್ದರೂ, ದ್ರೋಣನು ತನ್ನನ್ನು ಪಾಂಡವರ ಶತ್ರುವೆಂದು ಕರೆದುಕೊಂಡಿರುವದರಿಂದ ತಾನು ಕೂಡಾ ಅವನೊಂದಿಗೆ ಶತ್ರುವಿನಂತೆಯೇ ವರ್ತಿಸಬೇಕಾಗಿದೆಯೆಂದೂ, ತನಗಿರುವ ಗುರುಭಕ್ತಿಯಿಂದಾಗಿ ಗುರುವಿನ ಮೊದಲಿನ ದುಡುಕು ಮಾತಿಗೆ ಮಾತ್ರ ಮನ್ನಣೆ ಕೊಡುವದಾಗಿಯೂ ತಿಳಿಸಿ ಭೀಮನು ಮುಂದೆ ಹೊರಟನು.

ರಮೆ:– ಅದು ಭೀಮ.

ಮುರಳಿ:– ಅದು ಅಲ್ಲ. ಅವನು !

ರಮೆ:– ಅವನೇ. ಅದು ಎಂದರೆ ಆ ಮಾತುಗಳು ಎಂದೆ. ಅಂತಹ ಮಾತುಗಳನ್ನು ಭೀಮ ಮಾತ್ರ ಆಡಬಲ್ಲ ಅಂತ.

ಮುರಳಿ:– ಎಂತಹ ಮಾತುಗಳನ್ನು ?

ರಮೆ:– "ನೀನು ನನ್ನ ತಂದೆಗೆ ಸಮಾನ ಎಂದು ತಿಳಿದುಕೊಂಡಿದ್ದೇನೆ. ಆದರೆ ನೀನೇ ನಿನ್ನನ್ನು ನನ್ನ ಶತ್ರು ಎಂದು ಹೇಳಿಕೊಂಡಿರುವದರಿಂದ ನೀನು ನನ್ನಲ್ಲಿಯೂ ನಿನ್ನ ಕುರಿತು ಶತ್ರುತ್ವವನ್ನೇ ಕಾಣುವೆ. 'ನೀನು ನನ್ನ ಶಿಷ್ಯ. ನನಗೆ ನೀನು ನಮಸ್ಕಾರ ಮಾಡುವದರಲ್ಲಿ ಅವಮಾನವಿಲ್ಲ. ಮಾಡಿ ಹೋಗು' ಎಂದು ಹೇಳಿದ್ದರೆ ನಾನೂ ನಮಸ್ಕಾರ ಮಾಡುತ್ತಿದ್ದೆನೋ ಏನೋ. ನಿನ್ನನ್ನು ನನ್ನ ಶತ್ರುವೆಂದು ಕರೆದುಕೊಂಡಿರುವದರಿಂದ ನಿನಗೆ ನಾನು ನಮಸ್ಕಾರ ಮಾಡಲಾರೆ. ಯುದ್ಧವನ್ನೇ ಮಾಡುತ್ತೇನೆ" ಎಂಬ ಅರ್ಥದ ಭೀಮನ ಮಾತು ಅವನ ಕನ್ನಡಿಯಂತಹ ಶುಭ್ರ ಮನಸ್ಸನ್ನು ಪ್ರತಿಬಿಂಬಿಸುತ್ತದೆ. ಅವನು ಎಷ್ಟು ವಿನಯಶಾಲಿಯೋ ಅಷ್ಟೇ ನಿಷ್ಠುರವಂತ ಕೂಡ. ಅವನು ಪ್ರಕೃತಿಯ ಜೀವಂತ ರೂಪ. ಪ್ರಸನ್ನವಾಗಿಸಿಕೊಂಡರೆ ಏನನ್ನೂ ಪಡೆಯಬಹುದು ; ಎದುರು ಹಾಕಿಕೊಂಡರೆ ಎಲ್ಲವನ್ನೂ ಕಳೆದುಕೊಳ್ಳಬೇಕು. ಪೂರ್ಣ ವಿಕಾಸಗೊಂಡ ವ್ಯಕ್ತಿತ್ವದ ಲಕ್ಷಣವೇ ಇದು. ಒಪ್ಪಿದೆ. ಮುಂದಕ್ಕೆ ಹೇಳಿ.

ಮುರಳಿ:– ಒಪ್ಪಿದುದನ್ನು ಮೆಚ್ಚಿದೆ. ಮುಂದಕ್ಕೆ ಕೇಳು. ಭೀಮನೂ ಅರ್ಜುನ ಸಾತ್ಯಕಿಯರಂತೆ ತನಗೆ ನಮಸ್ಕಾರ ಮಾಡಬಹುದೆಂದು ದ್ರೋಣನು ನಿರೀಕ್ಷಿಸಿದ್ದ. ತಾನು ಮಾಡಿದ ಸಲಹೆ ಯುದ್ಧರಂಗಕ್ಕೆ ಶೋಭಿಸುವಂತಹದಲ್ಲ, ವೀರನಿಗೆ ಗೌರವ ತರುವಂತಹುದಲ್ಲ, ಸೈನ್ಯಾಧಿಪತಿಗೆ ತಕ್ಕುದಾದುದಲ್ಲ ಎಂಬ ಅಳುಕು ದ್ರೋಣನಲ್ಲಿದ್ದಿರಬೇಕು. ತನ್ನ ಅಂತಹ ಸಲಹೆಯನ್ನು ಭೀಮ ತಿರಸ್ಕರಿಸಿದುದರಿಂದ ಅವನ ಸ್ವಾಭಿಮಾನ ಬಹಳವಾಗಿ ಕಲಕಲ್ಪಟ್ಟಿತು. ಅವನು ಭೀಮನನ್ನು ಕುರಿತು "ಎಲವೋ ಭೀಮ. ಬಣಗುಗಳ ಜೊತೆ ನೀನು ನನ್ನನ್ನು

ಹೋಲಿಸಿ ನನಗೆ ಮರ್ಯಾದೆ ಕೊಡದೆ ವರ್ತಿಸುವಂತಿದೆ. ಇರಲಿ. ಯುದ್ಧ ಮಾಡು. ವಿನೀತರಿಗೆ ಶರೀರವನ್ನೇ ಅರ್ಪಿಸುವ, ವಿರೋಧಿಗಳ ಶರೀರವನ್ನೇ ಮುರಿಯುವ ಅರಿಮರ್ದನನಾದ ದ್ರೋಣಾಚಾರ್ಯ ನಾನು ಎಂಬದನ್ನು ಮರೆಯ ಬೇಡ" ಎಂದು ಹೇಳಿ ಭೀಮನ ಮೇಲೆ ಬಾಣ ಪ್ರಯೋಗ ಮಾಡಿ ಅವನ ಮುನ್ನಡೆ ಯನ್ನು ತಡೆದನು. ಆಚಾರ್ಯನ ಸಂಗಡ ಬಿಲ್ಲಿನಲ್ಲಿ ಕಾದುವದು ಅಸಾಧ್ಯವೆಂದೂ ಅದು ಸಮಯದ ನಷ್ಟವೆಂದೂ ಯೋಚಿಸಿದ ಭೀಮನು ತನ್ನ ಗದಾದಂಡವನ್ನು ಹಿಡಿದು "ಇದು ನಿಮಗೆ ನಾನು ಯುದ್ಧರಂಗದಲ್ಲಿ ಮಾಡುವ ವಂದನೆ" ಎಂದು ಹೇಳುತ್ತಾ ದ್ರೋಣನ ರಥ, ಅಶ್ವ, ಸಾರಥಿಗಳನ್ನು ಹುಡಿ ಮಾಡಿದನು. ಹೊಸ ರಥವನ್ನೇರಿ ಭೀಮನನ್ನು ಪುನಃ ಸಂಧಿಸಬೇಕೆಂದು ದ್ರೋಣಾಚಾರ್ಯನು ಹಿಂದೆ ಸರಿದನು. ಈ ಅವಕಾಶವನ್ನು ಉಪಯೋಗಿಸಿಕೊಂಡು ಭೀಮನು ವ್ಯೂಹವನ್ನು ಭೇದಿಸಿ ಒಳಗೆ ನುಗ್ಗಿದನು. ಅವನು ಹೀಗೆ ನುಗ್ಗಿ ಆತುರದಿಂದ ಮುನ್ನಡೆ ಯುತ್ತಿದ್ದು ಸೈನ್ಯವನ್ನು ಕ್ಷೋಭೆಗೊಳಿಸುತ್ತಿದ್ದಾಗ ವಜ್ರಾಯುಧದ ಪೆಟ್ಟಿಗೆ ನುಚ್ಚುನೂರಾಗುವ ಗಿರಿಯಂತೆ, ಮಂದರದ ಮಥನದಲ್ಲಿ ಅಲ್ಲೋಲ ಕಲ್ಲೋಲ ವಾಗುವ ಸಮುದ್ರದಂತೆ ಕೌರವ ಸೈನ್ಯವು ತೀವ್ರವಾಗಿ ಕಲಕಲ್ಪಟ್ಟಿತು. ವ್ಯೂಹದ ಅನಂತರ ವ್ಯೂಹವನ್ನು ಭೇದಿಸಿಕೊಂಡು ಭೀಮನು ಏಕಾಂಗಿಯಾಗಿ ಒಳಹೊಗುವಾಗ ಅವನನ್ನು ಮಹಾರಥರು ಎಂಟು ದಿಕ್ಕುಗಳಿಂದಲೂ ಮುತ್ತಿದರು.

ರಮೆ:– ನೀವು ಹೇಳಿದುದು ಏನಾಯಿತು? ಎಂಟು ದಿಕ್ಕುಗಳಿಂದಲೂ ಮಹಾರಥರು ಮುತ್ತಿದರು ಎಂದರೆ ಹಾಗೆಯೇ ಮುತ್ತಿ ಅವರು ಅರ್ಜುನನನ್ನು ಕೊಲ್ಲಬಹುದಿತ್ತಲ್ಲವೆ?

ಮುರಳಿ:– ಆದರೆ ಇಲ್ಲಿ ಭೀಮನು ವ್ಯೂಹದ ನಿಶ್ಚಿತ ಮಾರ್ಗವನ್ನು ಅನುಸರಿಸಿ– ಅರ್ಥಾತ್ ವ್ಯೂಹದ ಶಿಸ್ತನ್ನು ಅನುಸರಿಸಿ– ಹೋಗಿಲ್ಲ. ವ್ಯೂಹವನ್ನು ಅಲ್ಲೋಲ ಕಲ್ಲೋಲ ಮಾಡಿ ಅದರ ರಚನೆಯನ್ನು– ಅರ್ಥಾತ್ ಶಿಸ್ತನ್ನು– ಮುರಿದುಬಿಟ್ಟಿದ್ದಾನೆ. ಹಾಗಾಗಿ ವ್ಯೂಹದ ಶಿಸ್ತಿಗೆ ಮೀರಿ ಮಹಾರಥರು ಅವನನ್ನು ಮುತ್ತಲು ಸಾಧ್ಯವಾಗಿದೆ. ಭೀಮನಲ್ಲದೆ ಇತರ ಯಾರೇ ಆದರೂ ಹೀಗೆ ವ್ಯೂಹವನ್ನು ಚದುರಿಸಲು ಸಾಧ್ಯವಿರಲಿಲ್ಲ. ಹಾಗಾಗಿ ಅದರ ಶಿಸ್ತನ್ನು ಮುರಿಯು ವದು ಸಾಧ್ಯವಿರಲಿಲ್ಲ.

ರಮೆ:– ನಿಮಗೆ ಈ ಮೋಹಿನಿ, ಗೀಹಿನಿ ಎನ್ನುವ ಯಾವದಾದರೂ ಏನಾದರೂ ವಶವಾಗಿದೆಯೋ ಏನೋ!

ಮುರಳಿ:– ಆಗಿದೆಯೋ ಅಲ್ಲ; ಆಗಿದ್ದಾಳೋ ಅನ್ನು. ಹೌದು. ಮೋಹಿನಿ ವಶಳಾಗಿದ್ದಾಳೆ.

ರಮೆ:– ಇಲ್ಲವಾದರೆ ಏನನ್ನೋ ಆದರೂ ಹೀಗೆ ಸಮರ್ಥಿಸಿ ಎದುರಿನವರ ಬಾಯಿ ಮುಚ್ಚಿಸಿಬಿಡುವದು ಹೇಗೆ ಸಾಧ್ಯ ?

ಮುರಳಿ:– ಅದು ಎದುರಿನಲ್ಲಿರುವವರ ಬಲಾಬಲವನ್ನು ತಿಳಿಸುತ್ತದೆ, ಅಷ್ಟೆ.

ರಮೆ:– ಅದೂ ಸರಿಯೇ ಅನ್ನಿ. ನನ್ನೆದುರಿನಲ್ಲಿ ನೀವೊಬ್ಬ ಪಂಡಿತರು....

ಮುರಳಿ:– ಅಷ್ಟೆ.

ರಮೆ:– ನನ್ನೆದುರಿನಲ್ಲಿ ಅನ್ನಿ.

ಮುರಳಿ:– ನಿನ್ನೆದುರಿನಲ್ಲಿ ಮಾತ್ರ.

ರಮೆ:– ಹಾಗೆ ಹೇಳಿ. ಮುಂದುವರಿಸಿ.

ಮುರಳಿ:– ಕೇಳು. ಸುತ್ತಲೂ ಶತ್ರು ಸೈನ್ಯಸಾಗರ. ನಡುವೆ ಏಕಾಂಗಿಯಾದ ಭೀಮ. ಶತ್ರು ಸೈನ್ಯದ ಹತ್ಯೆ ಅವ್ಯಾಹತವಾಗಿ ನಡೆದಿದೆ. ಕುಮಾರವ್ಯಾಸ ಹೇಳುತ್ತಾನೆ. ಕೌರವ ಸೈನ್ಯ ಒಂದು ಮಹಾ ಸಾಗರ. ಸಿಡಿದು ಬಿದ್ದಿದ್ದ ಸಾವಿರಾರು ಕಣ್ಣಾಲಿಗಳೇ ಅದರಲ್ಲಿದ್ದ ಮೀನುಗಳು. ತುಂಡಾಗಿದ್ದ ಛತ್ರಗಳೇ ತಾವರೆಗಳು. ಮಿದುಳಿನ ಮುದ್ದೆಗಳೇ ರಾಜಹಂಸಗಳು. ಉದುರಿದ್ದ ರುಂಡಗಳೇ ನೀರ್ವಕ್ಕಿಗಳು. ಇಂತಹ ವಿಶಾಲ ಸರೋವರದ ನಡುವೆ ಜಲಕ್ರೀಡೆಯಾಡುತ್ತಿದ್ದಿತು, ಭೀಮನೆಂಬ ಮದದಾನೆ.

ರಮೆ:– ಅಹಹ. ಧನ್ಯ, ಕುಮಾರವ್ಯಾಸ.

ಮುರಳಿ:– ಅಷ್ಟೇ ಅಲ್ಲ. ಶತ್ರುಗಳ ಆನೆ, ಕುದುರೆ, ರಥ, ಪದಾತಿಗಳಿಂದ ಕೂಡಿದ ಆ ಮಹಾ ಸೈನ್ಯವು ಒಂದು ಘೋರಾರಣ್ಯದಂತಿದ್ದರೆ ಅದರ ಮಧ್ಯೆ ಪಟಪಟಿಸುತ್ತಾ, ಭುಗಿ ಭುಗಿಲ್ ಎಂದು ಘುಡಿಘುಡಿಸುತ್ತಾ ತೀವ್ರವಾಗಿ ಹೊತ್ತಿ ಉರಿಯಿತು, ಭೀಮನೆಂಬ ದಾವಾಗ್ನಿ.

ಇಷ್ಟಾಗುವಾಗ ಕರ್ಣಾದಿಗಳು ಹಠಾತ್ತಾಗಿ ಭೀಮನನ್ನು ಎದುರಿಸಿ ಬಂದರು. ಅವರನ್ನು ತಡೆದು ದುರ್ಯೋಧನನ ಕೆಲವು ತಮ್ಮಂದಿರು ವಿವಿಧಾಯುಧಗಳನ್ನು ಹಿಡಿದು ಸಾಲಾಗಿ ಭೀಮನತ್ತ ನುಗ್ಗಿ ಬರುತ್ತಿದ್ದುದು ಭೀಮನು ಅವರಲ್ಲಿ ಯಾರ್‍ಯಾರನ್ನು ಅನುಕ್ರಮವಾಗಿ ಕೊಲ್ಲಬೇಕೆಂಬದನ್ನು ಅವರೇ ಸೂಚಿಸುವಂತಿದ್ದಿತು. ವಿವಿಧಾಯುಧಗಳಿಂದ ಶತ್ರು ಸೈನ್ಯವನ್ನು ಅವ್ಯಾಹತವಾಗಿ ಧ್ವಂಸ ಮಾಡಿದ ಭೀಮನು ಈಗ ಬಾಣವನ್ನು ಕಿವಿಯವರೆಗೆ ಎಳೆದು ನಿಂತಿದ್ದಾಗ ಸಿಂಹದ ಹೊಲವನ್ನು ಹೊಗುವ ಕ್ಷುದ್ರ ಮೃಗಗಳಂತೆ ದುರ್ಯೋಧನನ ಆ ತಮ್ಮಂದಿರು ಅವನನ್ನು ಎದುರಿಸುತ್ತಿದ್ದಂತೆಯೇ ಸತ್ತು ಸತ್ತು ಬೀಳುತ್ತಿದ್ದರು. ಇದರಿಂದ ಸಮಸ್ತ ಕೌರವ

ಸೈನ್ಯವೂ ಸೇನಾಪತಿಯಾದ ದ್ರೋಣನನ್ನು ಹಳಿಯಿತು. ಇದರಿಂದ ದ್ರೋಣನು ಅತ್ಯಂತ ಕ್ರೋಧಾವಿಷ್ಟನಾದನು. ಈ ರೀತಿ ಭೀಕರವಾದ ಸಿಟ್ಟಿನ ಭರದಲ್ಲಿದ್ದ ದ್ರೋಣನು ಹೊಸ ರಥವನ್ನೇರಿ ಭೀಮನನ್ನು ಹುಡುಕುತ್ತಾ ಹೊರಟನು. ಗದಾಘಾತದಿಂದ ಪುಡಿಯಾದ ರಥಗಳನ್ನು, ಕ್ರೂರ ಬಾಣಗಳಿಂದ ಕೊರಳು ಕತ್ತರಿಸಿ ಬಿದ್ದಿದ್ದ ಪದಾತಿಗಳ ಶವವನ್ನು ನೋಡಿದ ಆಚಾರ್ಯನು ಭೀಮನ ಕದನದ ಮಾರ್ಗವನ್ನು ಸುಲಭವಾಗಿ ಕಂಡುಹಿಡಿದನು. ಅಮೌಲ್ಯವಾದ ಕಿರೀಟಗಳನ್ನು ಧರಿಸಿದ್ದ ಕೌರವಾನುಜರ ಹೆಣಗಳನ್ನೂ, ಕಾಡಾನೆಯು ಲೀಲಾ ವಿಹಾರಾರ್ಥವಾಗಿ ಕಲಕಿದ ಸರೋವರದಂತಿದ್ದ ತನ್ನ ಸೈನ್ಯವನ್ನೂ ನೋಡುತ್ತಾ ಅವನು ಬರುತ್ತಿದ್ದಾಗ........

ರಮೆ:– ಇದನ್ನೆಲ್ಲ ಕೇಳುವಾಗ ಯಾವ ಜೀವಿಯನ್ನಾದರೂ ಆಹುತಿ ತೆಗೆದು ಕೊಳ್ಳಲು ಸಮರ್ಥನಾಗಿರುವ ಸಾಕ್ಷಾತ್ ಯಮನೇ ದಂಡ ಹಿಡಿದು ಯುದ್ಧಮಾಡಿದ ನೆಂದು ಅನಿಸುತ್ತದೆ. ಭೀಮನ ವೀರತನಕ್ಕೆ, ಸಾಹಸಕ್ಕೆ ಹೋಲಿಕೆಯೇ ಇಲ್ಲ ವೇನೋ. ಇರಲಿ. ಮುಂದೆ ಹೇಳಿ.

ಮುರಳಿ:– ಕೇಳು. ತನ್ನ ಸೈನ್ಯ ಈ ರೀತಿಯಾಗಿ ಹತಗೊಳಿಸಲ್ಪಟ್ಟಿರುವದನ್ನು ನೋಡುತ್ತಾ ಭೀಮನು ಮುಂದುವರಿದ ಮಾರ್ಗದಲ್ಲಿಯೇ ಆಚಾರ್ಯನು ಕ್ರುದ್ಧ ನಾಗಿ ಬರುತ್ತಿರುವಾಗ ದೂರದಲ್ಲಿ ಭೀಮನ ಬಿಲ್ಲಿನ ಠಂಕಾರವೂ ರಥ ಚಕ್ರದ ಚೀತ್ಕಾರ ಧ್ವನಿಯೂ ಕೇಳಿಸಿದವು. ತಕ್ಷಣವೇ ಅತ್ತ ಧಾವಿಸಿ ಭೀಮನನ್ನು ಸಂಧಿಸಿದ ಆಚಾರ್ಯನು "ಎಲವೋ ಭೀಮ. ನಿನ್ನ ಪೌರುಷವನ್ನು ಆ ಬಡಪಾಯಿ ಗಳಲ್ಲಿ ತೋರಿಸಬೇಡ. ನನ್ನೊಂದಿಗೆ ಯುದ್ಧ ಮಾಡು" ಎಂದು ಕರೆದನು. ಹಿಂತಿರುಗಿ ನೋಡಿ ಗುರುವನ್ನು ಕಂಡ ಭೀಮನು ಅವನಿಗೆ ಮನಸ್ಸಿನಲ್ಲಿಯೇ ವಂದಿಸಿ ತಾನು ಯುದ್ಧದ ತೀವ್ರ ಭರದಲ್ಲಿದ್ದುದರಿಂದ ಆಚಾರ್ಯರ ಆಗಮನವನ್ನು ತಾನು ಗಮನಿಸಲಿಲ್ಲವೆಂದೂ, ಅವನ ಆಗಮನದ ಕಾರಣವನ್ನು ತಿಳಿಸಬೇಕೆಂದೂ ರಸಿಕತೆಯಿಂದ ವಿನಯವಂತನಂತೆ ಕೇಳಿಕೊಂಡನು. ವ್ಯೂಹದ ಬಾಗಿಲಿನಲ್ಲಿಯೇ ನಿಂತು ಕಾಯಬೇಕಾಗಿದ್ದ ದ್ರೋಣನು ಈ ರೀತಿ ವ್ಯೂಹದ ಒಳಗೆ ನಡೆದು ಬಂದಿದ್ದುದು ಭೀಮನಿಗೆ ಆಶ್ಚರ್ಯವನ್ನೂ ಉಂಟುಮಾಡಿದ್ದಿರಬೇಕು.

ಈ ಸಂದರ್ಭವನ್ನು ನೀನು ಸೂಕ್ಷ್ಮವಾಗಿ ಗಮನಿಸಬೇಕು. ಚಾಪಾಗ ಮಾಚಾರ್ಯನೆಂದು ಪ್ರಖ್ಯಾತನಾಗಿದ್ದ ದ್ರೋಣನು ಮಹಾ ವೀರ್ಯವಂತನೂ ಛಲವಾದಿಯೂ ಆಗಿದ್ದವನು. ಅವನು ಈಗ ತನ್ನ ಪಕ್ಷದವರಿಂದ ಭಂಗಿಸಲ್ಪಟ್ಟು ತನ್ನ ಸೈನ್ಯಾಧಿಪತ್ಯದ ಪ್ರಯೋಜನವನ್ನು ತೋರಿಸಲೇಬೇಕೆಂದು ಮನಸ್ಸುಮಾಡಿ ಬಂದಿದ್ದವನು. ಸಾಲದುದಕ್ಕೆ ಭೀಮನು ಅರ್ಜುನ ಸಾತ್ಯಕಿಗಳಂತಲ್ಲದೆ ಮೊದಲ ಬಾರಿಗೇ ತನ್ನ ರಥ, ಕುದುರೆ, ಸಾರಥಿಗಳನ್ನು ಹುಡಿಮಾಡಿ ತನ್ನನ್ನು ಭಂಗಿ

ಸಿದ್ದಾನೆ. ಈ ಹಲವು ಒತ್ತಡಗಳಿಂದಾಗಿ ಭೀಮನನ್ನು ಕೊಲ್ಲಬೇಕು ಅಥವಾ ವ್ಯೂಹದಿಂದ ಹೊರಗೆ ಹಾಕಲೇಬೇಕು ಎಂಬ ದೃಢ ನಿರ್ಧಾರದಿಂದ ಆಚಾರ್ಯನು ಬಂದಿದ್ದಾನೆ. ಅವನ ಈ ದೃಢ ನಿಶ್ಚಯಕ್ಕೆ ಪ್ರತಿಯಾಗಿ ಭೀಮನು ಕೇವಲ ಲಘುವಾಗಿ ತನ್ನಲ್ಲಿ ಮಾತನಾಡಿದುದರಿಂದ ದ್ರೋಣನ ಪ್ರಚಂಡ ಕೋಪಾಗ್ನಿಗೆ ತುಪ್ಪವನ್ನೆರೆದಂತಾಗಿದೆ. ಹೀಗೆ ಕ್ರುದ್ಧನಾಗಿ ಭೀಮನನ್ನು ಸೋಲಿಸಿ ಅಟ್ಟಲೇ ಬೇಕೆಂಬ ದೃಢತೆಯಿಂದ ಮುನ್ನುಗ್ಗಿ ಬಂದಿದ್ದ ಆಚಾರ್ಯನನ್ನು ಭೀಮನು ಕೇವಲ ಏಕಾಂಗಿಯಾಗಿ ಶತ್ರುಸಾಗರದ ನಡುವೆ ಎದುರಿಸಿದ ಘಟನೆಯಿದು. ಸೂಕ್ಷ್ಮವಾಗಿ ಗಮನಿಸು.

ಕೆರಳಿದ್ದ ದ್ರೋಣನು ಭೀಮನನ್ನು ಕುರಿತು "ಭೀಮಾ, ನನ್ನಲ್ಲಿ ನಿನ್ನ ಠಕ್ಕಿನ ವಿನಯವನ್ನು ತೋರಿಸಬೇಡ. ಎದುರಿಸಿ ನಿಂತು ಯುದ್ಧ ಮಾಡು" ಎಂದು ಹೇಳುತ್ತಲೇ ಅವನ ಮೇಲೆ ಕ್ರೂರವಾದ ಬಾಣಗಳನ್ನು ಪ್ರಯೋಗಿಸಿದನು. ಅವುಗಳನ್ನು ತುಂಡುಮಾಡಿ ನಗುತ್ತಾ ಭೀಮನು.

ರಮೆ................ನಗುತ್ತಾ.............?

ಮುರಳಿ:– ಹೌದು. ಅವನೇ ಭೀಮ. ಕೇಳು. "ನಿಮ್ಮ ಶಿಷ್ಯ ವರ್ಗದಲ್ಲಿ ಎರಡು ಬಗೆಯವರಿದ್ದಾರೆ. ಒಂದು ಬಗೆಯವರು ವಿನಯ ಪರರು. ಉಳಿದವರು ಧೂರ್ತರು. ಯುಧಿಷ್ಠಿರ, ಅರ್ಜುನ, ನಕುಲ, ಸಹದೇವರಂತೆ ನಾನು ವಿನೀತ ನಲ್ಲ. ನನ್ನ ವಿನಯದ ಕ್ರಮವೇ ಬೇರೆ. ನೀವು ಹಿಂದಕ್ಕೆ ತೆರಳಿ" ಎಂದನು. ಇದರಿಂದ ದ್ರೋಣನು ಇನ್ನಷ್ಟೂ ಕೆರಳಿದನು. "ಶಿಷ್ಯನಲ್ಲಿ ಕಾದುವದೇಕೆ ಎಂದು ನಾನು ಬಗೆದರೆ ನಿನಗೆ ನನ್ನಲ್ಲಿ ಇಷ್ಟು ಅಸಡ್ಡೆಯೇ?" ಎನ್ನುತ್ತ ಭೀಮನ ಮೇಲೆ ಬಾಣಗಳ ಮಳೆಯನ್ನೇ ಕರೆದನು. ಇಷ್ಟಾಗುವಾಗ ಭೀಮನಿಗೂ ಸಿಟ್ಟು ಏರಿತು. ಅವನು ಆಕ್ರೋಶದಿಂದ "ಗುರುಗಳೇ, ಮುಂದೆ ಒದಗಬಹುದಾದ ಅಚಾತುರ್ಯದ ತಪ್ಪು ನನ್ನದಾಗುವದಿಲ್ಲ. ಅರ್ಜುನ, ಸಾತ್ಯಕಿಯರಲ್ಲಿ ಕಂಡ ವಿನಯವನ್ನು ನನ್ನಲ್ಲಿ ಕಾಣಲಾರಿರಿ. ಧನುರ್ವೇದದ ಆಚಾರ್ಯರ ಬಿಂಕವು ಬಯಲಾಯಿತೆಂಬ ಅಪಕೀರ್ತಿಯನ್ನು ಹೊರುತ್ತೀರಿ" ಎಂದೆನ್ನುತ್ತಾ ಹಣೆಗೆ ಮುಂಗೈಯನ್ನು ಮರೆ ಮಾಡಿಕೊಂಡು........

ರಮೆ:– ಅದೇಕೆ?

ಮುರಳಿ:– ದ್ರೋಣಾಚಾರ್ಯನ ಅವ್ಯಾಹತವಾದ ಬಾಣಗಳ ಮಳೆಯಿಂದ ಮುಖವನ್ನು ರಕ್ಷಿಸಿಕೊಳ್ಳಲು.

ರಮೆ:– ಅಬ್ಬ. ಕೌರವ ಸೇನಾಪತಿಯಾದ, ಗರುಡಿಯಾಚಾರ್ಯನಾದ, ಚಾಪಾಗಮಾಚಾರ್ಯನೆನಿಸಿದ ದ್ರೋಣನ ಬಾಣಗಳಿಗೆ ಪ್ರತಿಯಾಗಿ ಮುಂಗೈ!

ಇಂತಹ ಒಂದು ಗಂಡು ಈ ದೇಶದಲ್ಲಿ ಹುಟ್ಟಿದ್ದುದು ನಿಜವೇ ಎನ್ನುತ್ತೀರಾ? ಧನ್ಯವಾಯಿತು ಬಿಡಿ ಈ ಗಂಡು ಭೂಮಿ ಭಾರತ. ಅಸ್ತ್ರ, ಪ್ರತಿ ಅಸ್ತ್ರ, ಇನ್ನೊಂದು ಅಸ್ತ್ರ, ಅದಕ್ಕೊಂದು ಅಸ್ತ್ರ– ಹೀಗೆ ಮಕ್ಕಳು ಗೋಲಿಯಾಡುವಂತೆ ಯುದ್ಧ ಮಾಡುವ ಇತರ ಬಿಲ್ಗಾರರಿಗೆ ಹೋಲಿಸಿದಾಗ ಕುರುಕ್ಷೇತ್ರದಲ್ಲಿ ನಿಜವಾಗಿ ಯುದ್ಧ ಮಾಡಿದವನು ಭೀಮನೊಬ್ಬನೇ ಎಂದೆನಿಸುತ್ತದೆ. ಅರ್ಜುನನಾಗಿದ್ದರೆ ದ್ರೋಣನ ಈ ಬಾಣಗಳಿಂದ ತಪ್ಪಿಸಿಕೊಳ್ಳಲು ಕೃಷ್ಣನು ರಥವನ್ನು ಅದೆಷ್ಟು ಶ್ರಮದಿಂದ ಅತ್ತಿಂದಿತ್ತ ಓಡಾಡಿಸಬೇಕಾಗಿತ್ತೊ!

ಮುರಳಿ:– ಏನು ಬೇಕಾಗಿತ್ತೊ, ಏನು ಬೇಡವಾಗಿತ್ತೊ, ಸುಮ್ಮನೆ ಕೇಳು. ಹೀಗೆ ತನ್ನ ಮೇಲೆ ಎರಗುತ್ತಿದ್ದ ದ್ರೋಣನ ಬಾಣ ಪರಂಪರೆಯನ್ನು ಎಳ್ಳಷ್ಟೂ ಲೆಕ್ಕಿಸದೆ ಅವನತ್ತ ಮುಂದುವರಿದ ಭೀಮನು ದೇವತೆಗಳೂ ಭಯಪಡುವಂತೆ ಒಂದು ಭೀಕರವಾದ ಸಿಂಹನಾದವನ್ನು ಮಾಡಲು ದ್ರೋಣಾಚಾರ್ಯನೂ ಒಮ್ಮೆಗೆ ಸ್ವಲ್ಪ ಹಿಂದೆ ಸರಿದನು.

ರಮೆ:– ಗಂಡು, ಗಂಡುಗಲಿ. ಧನ್ಯ, ಭೀಮ, ಧನ್ಯ.

ಮುರಳಿ:– ಹೀಗೆ ಏಕಾಂಗಿಯಾಗಿ ಶತ್ರುಪಕ್ಷದ ಸೇನಾ ಸಾಗರದ ನಡುವೆ ಶತ್ರು ಸೇನೆಯ ಅಧಿಪತಿಯನ್ನು ಎದುರಿಸಿದ ಭೀಮನು ದ್ರೋಣನನ್ನು ಆಗಲೇ ಕೊಂದುಬಿಡುವದು ಅನುಚಿತವೆಂದು ಬಗೆದು ಅವನ ರಥದ ಕುದುರೆಗಳು, ಸಾರಥಿ ಮತ್ತು ರಥಿಕನ ಸಹಿತವಾಗಿ ರಥವನ್ನು ಹಿಡಿದೆತ್ತಿ ಜೋರಾಗಿ ತಿರುಗಿಸಿ ಆಕಾಶದತ್ತ ಎಸೆದನು. ಗರುಡಿಯ ಗುರುವಾದ ದ್ರೋಣನು ಮೇಲಿನಿಂದ ಬೀಳುವಾಗ ಗರುಡಿಯ ಒಂದು ಪಟ್ಟನ್ನು ಆಧರಿಸಿ ನೋವಾಗದಂತೆ ನೆಲಕ್ಕೆ ಬಿದ್ದನು. ರಥವು ಪುಡಿ ಪುಡಿಯಾಗಿ ಬೇರೆಡೆ ಬಿದ್ದಿತು. ದ್ರೋಣನು ಬೇರೊಂದು ರಥವನ್ನು ಹತ್ತಿ ಬಂದು ಭೀಮನನ್ನು ಎದುರಿಸಿದನು. ಭೀಮನು ಅದನ್ನೂ ಹೊಡೆದು ಪುಡಿ ಮಾಡಿದನು. ಹೀಗೆ ದ್ರೋಣನು ಹತ್ತಿ ಬಂದ ಎಂಟು ರಥಗಳನ್ನು ಭೀಮನು ಮೇಲಿಂದ ಮೇಲೆ ಪುಡಿ ಮಾಡಿದನು. ಭೀಮನು ವ್ಯೂಹದಿಂದ ಹಿಂದಿರುಗಿ ಹೋಗುವಾಗ ಅವನನ್ನು ಹೊರಗೆ ಹೋಗಲು ಬಿಡದೆ ತಡೆಯಬೇಕೆಂದು ನಿಶ್ಚಯಿಸಿದ ದ್ರೋಣನು ತಾನಿದ್ದ ಸ್ಥಳದಿಂದ ತಪ್ಪಿಸಿಕೊಂಡು ಹೋಗಿ ವ್ಯೂಹದ ಬಾಗಿಲಲ್ಲಿ ನಿಂತನು.

ರಮೆ:– ಏನಿದು! ಕಲ್ಪನೆಗೂ ಮೀರಿದ ಪರಾಕ್ರಮ. ಭೀಮನನ್ನು ಈ ಸಂದರ್ಭದಲ್ಲಿ ವರ್ಣಿಸಲು ಶಬ್ದಗಳು ಎಷ್ಟು ಅಸಮರ್ಥವಾಗುತ್ತವೆ! ಅದು ಯಾವ ವಿಮರ್ಶಕ ಅರ್ಜುನನನ್ನು ಮೂರು ಲೋಕದ ಗಂಡ ಎಂದುದು! ಒಬ್ಬಳು ಹೆಂಡತಿಯ ಗಂಡನಾಗಿಯೇ ಅವಳನ್ನು ರಕ್ಷಿಸಲಾರದ ನಪುಂಸಕ ಮೂರು ಲೋಕದ ಗಂಡ ಎಂದಾಗುವದು ಹೇಗೆ? ದ್ರೋಣನೆಲ್ಲಿ, ಭೀಮನೆಲ್ಲಿ! ಶತ್ರು ಪಕ್ಷದ ಸೈನ್ಯ

ಸಾಗರವೆಲ್ಲಿ? ನಡುವೆ ನಿಂತು ದಿಕ್ಕುಗಳನ್ನು ನಡುಗಿಸಿದ ಏಕಾಂಗಿಯಾದ ಈ ವೀರನೆಲ್ಲಿ! ಬಿಲ್ಗಾರರ ಗುರುವಾದ ದ್ರೋಣನೆಲ್ಲಿ, ಅವನ ಬಾಣಗಳನ್ನು ಮಳೆಯ ಹನಿಗಳಂತೆ ಕಂಡ ಉಕ್ಕಿನ ಹೃದಯದ ವೀರನೆಲ್ಲಿ! ಶತ್ರು ಸೈನ್ಯಾಧಿಪತಿಯನ್ನು ಸುಲಭವಾಗಿ ಕೊಂದುಹಾಕಬಹುದಾದ ಸಂದರ್ಭದಲ್ಲಿಯೂ ಅವನು ತಮ್ಮ ಗುರುವಾಗಿದ್ದುದರಿಂದ ಅವನನ್ನು ದೂರ ಎಸೆದು ಅವನಿಗೆ ಜೀವದಾನ ಮಾಡಿದ ಈ ಮಹಾನ್ ಜೀವಿ ಯುದ್ಧ ರಂಗದಲ್ಲಿಯೂ ತೋರಿದ ಆ ದೊಡ್ಡ ಗುಣಕ್ಕೆ ಹೋಲಿಕೆ ಎಲ್ಲಿ? ಹೃದಯದ ಗುಣದಲ್ಲಿ, ದೇಹದ ಬಲದಲ್ಲಿ, ಸಂಕಲ್ಪ ಶಕ್ತಿಯಲ್ಲಿ ಭೀಮನಷ್ಟು ದೊಡ್ಡ ವ್ಯಕ್ತಿಯನ್ನು ಪ್ರಪಂಚದ ಯಾವ ಇತಿಹಾಸದಲ್ಲಿ ಹುಡುಕಬಹುದು........

ಮುರಳಿ:– ದ್ರೋಣಾಚಾರ್ಯನು ಈ ರೀತಿ ತಪ್ಪಿಸಿಕೊಂಡು.......

ರಮೆ:– ಹೇಳಿ, ಹೇಳಿ. ಮುಂದುವರಿಸಿ.

ಮುರಳಿ:– .......ಆಚಾರ್ಯನು ಕಣ್ಮರೆಯಾಗಿ ಹೋದ ಮೇಲೆ ಭೀಮನು ತನ್ನ ರಥವನ್ನು ಹತ್ತಿ ಕೇವಲ ತನ್ನ ಸಿಂಹನಾದಗಳಿಂದಲೇ ಶತ್ರುಗಳನ್ನು ಓಡಿಸುತ್ತಾ ಮುನ್ನುಗ್ಗುತ್ತಿರಲು ವ್ಯೂಹದ ನಡುವೆ ಸೇರಿಹೋಗಿದ್ದ ಕೃಷ್ಣನು ಭೀಮನ ಸಿಂಹನಾದವನ್ನು ಗುರುತಿಸಿ ಹಿಗ್ಗಿ ಅರ್ಜುನನಿಗೆ ತಿಳಿಸಿದನು. ಭೀಮನ ರಥಾಶ್ವಗಳ ಖುರಪುಟದ ಸದ್ದಿಗೇ ಶತ್ರುಗಳು ದೀನ ಸ್ವರದಿಂದ ಕೂಗುತ್ತಾ, ನುಗ್ಗಲು ಅವಕಾಶ ಸಿಕ್ಕಿದತ್ತ ಓಡುತ್ತಿದ್ದರು. ಹೀಗೆ ದಿಕ್ಕಾಪಾಲಾಗಿ ಓಡುತ್ತಿದ್ದ ತಮ್ಮ ಸೈನ್ಯವನ್ನು ಹುರಿದುಂಬಿಸಿ ಕರ್ಣನು ಭೀಮನನ್ನೆದುರಿಸಿ ಮುಂದೆ ಬಂದನು. ದಿಕ್ಕುಗೆಟ್ಟು ಓಡುತ್ತಿದ್ದ ಶತ್ರುಗಳನ್ನು ನೋಡಿ ನಗುತ್ತಾ ರಥದಲ್ಲಿ ಬಾಗಿ ಕುಳಿತಿದ್ದ ಭೀಮನನ್ನು...........

ರಮೆ:– ........ನಗುತ್ತಾ........?

ಮುರಳಿ:– ಹೌದು.

ರಮೆ:– ನಿಮಗೇಕೆ ಇಂತಹ ಮೌಢ್ಯ ಬಡಿದಿದೆ ಅಂತ ?

ಮುರಳಿ:– ಅಯ್ಯೋ ದೇವರೇ! ನನಗೇನು ಮೌಢ್ಯ? ಭೀಮನು ನಗುತ್ತಾ ರಥದಲ್ಲಿ ಕುಳಿತಿದ್ದ ಎಂದರೆ ನನಗೆ ಮೌಢ್ಯ ಹಿಡಿದಿದೆ ಅಂತ ಅರ್ಥವೆ ?

ರಮೆ:– ಪೆದ್ದನೊಬ್ಬ ಕತೆಯನ್ನು ಬಾಯಿಪಾಠಮಾಡಿ ಮಂತ್ರ ಹೇಳಿದಂತೆ ದಡಬಡನೆ ಉದ್ದಕ್ಕೆ ಹೇಳುತ್ತಾ ಹೋಗುವ ರೀತಿ ನೀವಾದರೂ ಈಗೀಗ ಸುಮ್ಮನೆ ಕತೆ ಹೇಳುತ್ತಾ ಹೋಗುತ್ತೀರಲ್ಲಾ, ನಿಮ್ಮ ರಸವತ್ತಾದ ವಿಮರ್ಶಾ ರಸದ ಕಾರಂಜಿ ಒಣಗಿ ಹೋಗಿ ನಿಮ್ಮ ಮನಸ್ಸು ಮರುಭೂಮಿಯಾಗಿಬಿಟ್ಟಿದೆಯೇನು ?

ಮುರಳಿ:– ಅಯ್ಯೋ ಗ್ರಹಚಾರವೆ? ಇದ್ಯಾಕೆ ಹೀಗೆ ಸುಮ್ಮನೆ ನನ್ನನ್ನು ಪೀಡಿಸುತ್ತೀಯಾ ಅಂತ! ಏನು ಎಂಬದನ್ನು ಬಿಡಿಸಿಯಾದರೂ ಹೇಳು.

ರವೆ:– ನಡೆಯುತ್ತಿರುವದು ಲೋಕವಿಖ್ಯಾತವಾದ ಕುರುಕ್ಷೇತ್ರ ಯುದ್ಧ. ಹದಿನೆಂಟು ಅಕ್ಷೋಹಿಣೀ ಸೈನ್ಯದ ರಕ್ತದ ಹೊಳೆ ಹರಿದ ಕುರುಕ್ಷೇತ್ರ. ಅರ್ಜುನನು ಬದುಕುತ್ತಾನೋ ಅಗ್ನಿಗೆ ಆಹುತಿಕೊಟ್ಟುಕೊಳ್ಳುತ್ತಾನೋ ಎಂಬದು ನಿರ್ಣಯ ವಾಗುವಂತಹ ಅತ್ಯಂತ ಕುತೂಹಲಕಾರೀ ದಿನದ ಯುದ್ಧ ವರ್ಣನೆ. ನಮಸ್ಕಾರ ಮಾಡು ಎಂದು ಹೇಳಲ್ಪಟ್ಟ ಶಿಷ್ಯನು ಗುರುವನ್ನು ಧಿಕ್ಕರಿಸಿ ನಡೆದಾಗ ಗುರುವೂ ಸೇನಾಪತಿಯೂ ಆದ ಪ್ರಸಿದ್ಧ ಬಿಲ್ಗಾರ ಕೆರಳಿ ನಿಂತು ನಡೆದ ಯುದ್ಧ ಭಾಗ. ಇಂತಹ ತೀವ್ರ ಅಪಾಯಕಾರೀ ವಾತಾವರಣದ ನಡುವೆ ಭೀಮ ಏಕಾಂಗಿಯಾಗಿ ಸಿಕ್ಕಿಕೊಂಡಿದ್ದ ತೀವ್ರ ಸನ್ನಿವೇಶ. ಹೀಗೆ, ಕತೆ ಕೇಳುವವರೇ ರೆಪ್ಪೆ ಮುಚ್ಚದೆ, ಉಸಿರನ್ನು ನಿಧಾನಗೊಳಿಸಿ ಕೇಳುವಂತಹ ಸಂದಿಗ್ಧದಲ್ಲಿಯೂ ಭೀಮನು ಶತ್ರು ಸೈನ್ಯದವರು ಓಡುತ್ತಿದ್ದುದನ್ನು ನೋಡಿ ರಥದಲ್ಲಿ ಕುಳಿತು ನಗುವಷ್ಟರ ಮಟ್ಟಿನ ಶುದ್ಧವಾದ ಒಂದು ರಸಿಕ ಅಂತಃಕರಣವನ್ನು, ಕಳಂಕ ರಹಿತ ವಾದ ಮನಸ್ಸನ್ನು, ಉದ್ವೇಗವನ್ನು ದಾಟಿದ ಪರಮಹಂಸನ ಹೃದಯವನ್ನು ಹೊಂದಿದ್ದನೆಂಬ ಘಟನೆಗೆ ಪ್ರಪಂಚದ ಯಾವ ಸಾಹಿತ್ಯದಿಂದ ನೀವು ಹೋಲಿಕೆ ಯನ್ನು ಆರಿಸುತ್ತೀರಿ ಎಂದು ಕೇಳಿದೆ. ಮಗುವಿನ ಮನಸ್ಸು ಎಂದು ಇದಕ್ಕೆ ಹೇಳಬಹುದಾದಷ್ಟು ಬೇರೆ ಯಾವ ಸನ್ನಿವೇಶಕ್ಕೆ ಹೇಳಬಹುದು ಎಂದು ಕೇಳುತ್ತೇನೆ. ಹೊರಗಡೆ ಯಮ ಸ್ವರೂಪ; ಒಳಗಡೆ ಪರಮ ಶಾಂತನಾದ ನಾರಾಯಣ ಸ್ವರೂಪ– ಇಂತಹ ಒಂದು ವ್ಯಕ್ತಿತ್ವವನ್ನು ಪ್ರಪಂಚವು ಬೇರೆಲ್ಲಿ ಯಾದರೂ ಯಾವದೇ ಕಾಲದಲ್ಲಾದರೂ ಕೇಳಿ ಬಲ್ಲುದೇ ಎಂದು ಕೇಳುತ್ತೇನೆ. ಅತ್ತಿಂದಿತ್ತ ಎರಡು ಕಠಿಣ ಮಾತುಗಳು ನಡೆದರೆಯೇ ಮನಸ್ಸು ರೇಗಿ, ಬುದ್ಧಿ ತನ್ನ ಸಮತೋಲವನ್ನು ಕಳೆದುಕೊಂಡು ಮಾನವತೆಯ ಸೌಂದರ್ಯವನ್ನೇ ಸಂಪೂರ್ಣವಾಗಿ ನಷ್ಟಗೊಳಿಸಿಕೊಂಡು ಸಾಮಾನ್ಯರು ಪ್ರಾಣಿಗಳಂತಾಗುವದು ಸಹಜವಾಗಿರುವಾಗ, ಅಲೆಅಲೆಯಾಗಿ ನಡೆದ ಕಗ್ಗೊಲೆಗಳ ನಡುವೆಯೇ ಏನೋ ಒಂದು ದೃಶ್ಯವನ್ನು ನೋಡಿ ನಗುತ್ತಾ ಕೂರುವದು ಒಬ್ಬನಿಗೆ ಸಾಧ್ಯವಾಗುತ್ತ ದೆಂದರೆ ಅವನು ಮಾನವನೋ, ದೇವನೋ ಎಂದು ಕೇಳುತ್ತೇನೆ. ಇದಕ್ಕಲ್ಲವೇ ನಿರ್ಲಿಪ್ತತೆ ಎಂದು ಹೇಳುವದು ಎಂದು ನಿಮ್ಮನ್ನು ಕೇಳುತ್ತೇನೆ. ಇದನ್ನಲ್ಲವೇ ಕರ್ಮಯೋಗವೆಂದು ಕೃಷ್ಣನು ಅರ್ಜುನನಿಗೆ ಬೋಧಿಸಿದುದು ಎಂದು ಕೇಳುತ್ತೇನೆ. ಇದಲ್ಲವೇ ಪರಿಪೂರ್ಣವಾಗಿ ವಿಕಾಸಗೊಂಡ ವ್ಯಕ್ತಿತ್ವ ಎಂದು ಕೇಳುತ್ತೇನೆ. ಇದ ಲ್ಲವೇ ಕೃಷ್ಣ ಲೋಕಕ್ಕೆ ಸ್ವತಃ ಆಚರಣೆಯಲ್ಲಿ ತೋರಿದ ಆದರ್ಶ ಎಂದು ಕೇಳು

ತ್ತೇನೆ. ಕೃಷ್ಣನನ್ನು ಬಿಟ್ಟರೆ ಭೀಮನೊಬ್ಬನಲ್ಲಲ್ಲದೆ ಈ ಭಗವದ್ಗುಣ ಬೇರೆ ಯಾರಲ್ಲಿ ಮೂಡಿ ಬಂದಿದೆ ಎಂದು ಕೇಳುತ್ತೇನೆ. ಮೌಢ್ಯವಿಲ್ಲವಂತೆ, ನಿಮಗೆ!

ಮುರಳಿ:– ಒಂದು ಅರ್ಧಾಂಗದ ಮೌಢ್ಯ ಇನ್ನೊಂದು ಅರ್ಧಾಂಗಕ್ಕೆ ಬಂದಿದೆ. ಇದರ ಪ್ರತಿಭೆ ಅದಕ್ಕೆ ಹೋಗಿದೆ. ಅಂತೂ ಸಮತೋಲನ ಸರಿಯಾಗಿದೆ ಬಿಡು.

ರಮೆ:– ನಾನೇನೂ ಇದಕ್ಕೆ ಹಿಂದೆಯೂ ನಿಮ್ಮ ಹಾಗೆ ಮೌಢ್ಯ ತಾಳಿರಲಿಲ್ಲ. ನನಗೆ ತಿಳಿದಷ್ಟೂ ಚರ್ಚೆ ಮಾಡುತ್ತಲೇ ಇದ್ದೆ.

ಮುರಳಿ:– ವಿಷಯವನ್ನು ತಿಳಿದುಕೊಳ್ಳದೆ ಹಾಗೆ ಚರ್ಚೆ ಮಾಡುವದಕ್ಕಿಂತ ವಿಷಯ ತಿಳಿದುಕೊಂಡು ಮೌಢ್ಯವಾಗಿರುವದೇ ಲೇಸಲ್ಲವೆ? ಇರಲಿ, ಭೀಮನ ವಿಷಯ ಅನವಶ್ಯವಾಗಿ ನಾನು ತುಂಬ ಹೇಳುತ್ತಿದ್ದೇನೆಂದು ಆರೋಪಿಸುತ್ತಿದ್ದ ನೀನೇ ಈಗ ಅವನ ವಿಷಯವಾಗಿ ನಾನು ಹೇಳುತ್ತಿರುವದು ಸಾಲದು ಎಂದು ಹೇಳುವಷ್ಟಕ್ಕೆ ಬಂದಿದ್ದೀಯಲ್ಲ, ಬಿಡು. ಮುಂದಕ್ಕೆ ಕೇಳು.

ರಮೆ:– ನಿಮ್ಮ ಮೌಢ್ಯ ಹರಿಯುತ್ತಿದೆ. ಬುದ್ಧಿ ಚುರುಕಾಗುತ್ತಿರುವಂತೆ ಕಾಣುತ್ತಿದೆ. ಇನ್ನು ಚರ್ಚೆ ಬೆಳೆಸುವದು ಒಳ್ಳೆಯದಲ್ಲ. ಹೇಳಿ. ಕತೆ ಹೇಳಿ.

ಮುರಳಿ:– ತನಗೆ ಹೆದರಿ ದಿಕ್ಕುಗಾಣದೆ ಓಡುತ್ತಿದ್ದ ಶತ್ರುಸೈನ್ಯವನ್ನು ನೋಡುತ್ತಾ ತನ್ನ ರಥದಲ್ಲಿ ನಗುತ್ತಾ ಬಾಗಿ ಕುಳಿತಿದ್ದ ಭೀಮನನ್ನು ಕರ್ಣನು ಮೂದಲಿಸಿ ಹೊಡೆದನು. ಪ್ರತಿಯಾಗಿ ಭೀಮನೂ ಮೂದಲಿಸಿ ಹೊಡೆದನು. ಸ್ವಲ್ಪ ಸಮಯ ಹೀಗೆಯೇ ಬಾಣಗಳಲ್ಲಿ ಕಾದಾಡಿದ ಅನಂತರ ಭೀಮನು ಕರ್ಣನ ಕುದುರೆಗಳನ್ನೂ ರಥವನ್ನೂ ಸಾರಥಿಯನ್ನೂ ಕೊಂದನು. ಕರ್ಣನು ಪಾದಚಾರಿಯಾಗಿಯೇ ಭೀಮನ ಮೇಲೆ ಬಾಣ ಪ್ರಯೋಗ ಮಾಡಲು ಭೀಮನು "ಈತನ ಬಿಲ್ಲನ್ನು ತುಂಡು ಮಾಡದೆ 'ಪಾಪ' ಎಂದು ಬಿಟ್ಟರೆ ಅದು ತಪ್ಪೇ ಆಯಿತು" ಎನ್ನುತ್ತಾ ಅವನ ಬಿಲ್ಲನ್ನು ತುಂಡು ಮಾಡಿದನು. ಹೊಸ ರಥಕ್ಕಾಗಿ ಕರ್ಣನು ಹಿಮ್ಮೆಟ್ಟಬೇಕಾಯಿತು. ಆ ಸಂದರ್ಭದಲ್ಲಿ ದುರ್ಯೋಧನನ ಕೆಲವು ತಮ್ಮಂದಿರು ತಮಗೆ ಬದುಕು ಸಾಕಾಗಿದೆ ಎಂದು ತೀರ್ಮಾನಿಸಿಕೊಂಡವರಂತೆ ಭೀಮನನ್ನು ಎದುರಿಸಿ ಅವನಿಂದ ಹತರಾದರು. ಅಷ್ಟರಲ್ಲಿ ಕರ್ಣನು ಹೊಸ ರಥವನ್ನೇರಿ ಭೀಮನನ್ನು ಮೂದಲಿಸುತ್ತಾ ಪುನಃ ಎದುರಿಸಿ ಬಂದನು. ಸ್ವಲ್ಪ ಹೊತ್ತು ಸಮಾನವಾಗಿ ಯುದ್ಧ ಮಾಡಿದ ಮೇಲೆ ಭೀಮನು ಮೊದಲಿನಂತೆಯೇ ಕರ್ಣನನ್ನು ವಿರಥನನ್ನಾಗಿ ಮಾಡಿ "ಎಲವೋ ಬಾಹಿರ. ನೀನು ಅರ್ಜುನನ ಬೇಟೆಯ ಮೃಗ. ನಿನ್ನನ್ನು ನಾನು ಕೊಲ್ಲುವದಿಲ್ಲ, ಹೋಗು" ಎಂದು ಹೀಯಾಳಿಸಿ ಬಿಟ್ಟು

ಬಿಟ್ಟನು. ಇದನ್ನು ಕಂಡ ದುರ್ಯೋಧನನು ತನ್ನ ತಮ್ಮ ದುರ್ಜಯನನ್ನು ಭೀಮನಿಗೆದುರಾಗಿ ಕಳುಹಿಸಲು ಅವನು ತನ್ನ ಅಣ್ಣನನ್ನು ಕಾಣಲು ಹಿಂತಿರುಗಲೇ ಇಲ್ಲ. ಅಷ್ಟರಲ್ಲಿ ಕರ್ಣನು ಪುನಃ ಸಜ್ಜಿತನಾಗಿ ಬಂದು ಭೀಮನನ್ನು ಎದುರಿಸಿದನು. ಈಗಿನ ಅವರ ಯುದ್ಧವು ಬಹು ಬಿರುಸಾಗಿ ನಡೆಯಿತು. ಕರ್ಣನು ಎರಡು ಬಾರಿ ಪರಾಜಿತಗೊಂಡು ಕೆಣಕಿದ ಸರ್ಪದಂತಾಗಿದ್ದನು. ಈ ಯುದ್ಧದಲ್ಲಿ ಭೀಮನು ಕರ್ಣಾಸ್ತ್ರಕ್ಕೆ ಆಹುತಿಯಾಗುವದು ನಿಶ್ಚಯವೆಂದು ಕೌರವರು ನಂಬಿದರು. ಕರ್ಣ ಮೇಘವು ಬಾಣವರ್ಷವನ್ನು ಪವನಜ ಗಿರಿಯ ಮೇಲೆ ಸುರಿದರೆ, ಭೀಮ ಮಾರುತವು ವಿವಿಧಾಯುಧಗಳಿಂದ ಕರ್ಣ ಮೇಘವನ್ನು ಹಾರಿಸಿತು. ಸ್ವಲ್ಪ ಸಮಯದಲ್ಲಿಯೇ ಕರ್ಣನು ಪುನಃ ರಥವನ್ನು ಕಳೆದುಕೊಂಡು ಭಯದಿಂದ ಹಿಂತಿರುಗಿದನು. ಸರಿ. ದುರ್ಯೋಧನನ ಇನ್ನಷ್ಟು ಮಂದಿ ತಮ್ಮಂದಿರು ಭೀಮನನ್ನು ಕೆಣಕಿ ಅವನಿಂದ ಕೊಲ್ಲಲ್ಪಟ್ಟರು. ಹೀಗೆ ಬೆಳಗಿನಿಂದಲೂ ಜಯದ ಮೇಲೆ ಜಯ ದೊರೆತ ಅವ್ಯಾಹತವಾದ ವಿಜಯ ತರಂಗಗಳ ಭೋರ್ಗರೆತದಿಂದ ಝುಮ್ಮೆದ್ದ ಭೀಮ ವಿಕ್ರಮನು ನಿಷ್ಠುರವಾದ ಒಂದು ಸಿಂಹನಾದವನ್ನು ಮಾಡಲು ಅದು ಪಾಂಡವ ಪಾಳೆಯದಲ್ಲಿದ್ದ ಯುಧಿಷ್ಠಿರನಿಗೆ ಕೂಡ ಕೇಳಿಸಿತು. ತಮ್ಮನ ಈ ಪ್ರಚಂಡ ಸಿಂಹನಾದವು ಅವನ ವಿಜಯದ ಸೂಚಕವೆಂದು ಸರಿಯಾಗಿ ಅರ್ಥ ಮಾಡಿಕೊಂಡ ಯುಧಿಷ್ಠಿರನು ಆನಂದದಿಂದ ಹಿಗ್ಗಿ ತನ್ನ ಸೈನ್ಯದ ಎಲ್ಲೆಡೆಯಲ್ಲಿಯೂ ವಿಜಯ ಸೂಚಕವಾದ ಜಯಭೇರಿಯನ್ನು ಹೊಡೆಯುವಂತೆ ಆಜ್ಞಾಪಿಸಿದನು. ಇಷ್ಟರಲ್ಲಿ ಕರ್ಣನು ಭೀಮನನ್ನು ಪುನಃ ಪುನಃ ಎದುರಿಸಿ ಹದಿನೆಂಟು ಬಾರಿ ಅವನಿಂದ ಸೋತು ಹಿಂತಿರುಗಿದನು. ಕರ್ಣನೊಂದಿಗೆ ಯುದ್ಧ ಮಾಡುತ್ತಲೇ ಭೀಮನು ದುರ್ಯೋಧನನ ಅನೇಕ ತಮ್ಮಂದಿರನ್ನು ಕೊಂದನು.

ರಮೆ:– ಮತ್ತೆಂತಹ ಮಹಾವೀರ ಅವನು ?

ಮುರಳಿ:– ಛೆ. ಅವನನ್ನು ವೀರ ಎಂದು ಯಾರು ಹೇಳುತ್ತಾರೆ! ಶುದ್ಧ ಹೇಡಿ.

ರಮೆ:– ಹೇಡಿ ಎಂದು ಯಾರೂ ಹೇಳಿಲ್ಲ. ಅಂತಹ ವೀರ, ಇಂತಹ ವೀರ, ಅರ್ಜುನನಿಗೆ ಸರಿಸಾಟಿಯಾದವನು ಎಂದೆಲ್ಲ ವರ್ಣಿಸುತ್ತಾರೆ ಮತ್ತೆ ?

ಮುರಳಿ:– ಎಲ್ಲ ತಪ್ಪು. ಅವನು ಬರೀ ಪುಕ್ಕಲು ಮನುಷ್ಯ.

ರಮೆ:– ನೀವೇನು ತಲೆ ಕೆಟ್ಟವರಂತೆ ಮಾತನಾಡುತ್ತೀರಿ ?

ಮುರಳಿ:– ಮಾತನ್ನು ನಿಯಂತ್ರಿಸಿದರೆ ಜೀವನದಲ್ಲಿ ಹಲವು ಗಂಡಾಂತರಗಳನ್ನು ನಿಯಂತ್ರಿಸಲು ಸಾಧ್ಯವಾಗುತ್ತದೆ ಎಂದುಕೊಂಡಿದ್ದೇನೆ.

ರಮೆ:– ನಿಮ್ಮ ಕೊಕ್ಕೆಮಾತು ಬೇಡ. ನೀವು ಹೇಳುತ್ತಿದ್ದ ಕಥಾಭಾಗ ವನ್ನು ವಿವರಿಸಿ, ನೋಡೋಣ.

ಮುರಳಿ:– ನೀನೇ ವಿವರಿಸುತ್ತಿದ್ದೀಯಲ್ಲಾ !

ರಮೆ:– ಆಗಲಿ. ಮುಂದಕ್ಕೆ ಹೇಳಿ. ಅವನು ಮಹಾವೀರನೇ ಎಂದು ಕೊಳ್ಳೋಣ. ಈಗೇನು ? ಕತೆ ಮುಂದುವರಿಸಿ.

ಮುರಳಿ:–ಬೇಡ. ಅವನು ಶುದ್ಧ ಹೇಡಿಯೆಂದೇ ಪರಿಗಣಿಸೋಣ. ಮುಂದಕ್ಕೆ ಕೇಳು.

ರಮೆ:– ಸರಿ. ಒಬ್ಬಾತನಿಂದ ಹದಿನೆಂಟು ಬಾರಿ ಸೋಲುವದು, ಅವನಿಂದ ಜೀವದಾನ ಪಡೆದು ಹಿಂದಿರುಗುವದು ವೀರತನದ ಸಂಕೇತ ಎಂದು ಒಪ್ಪಿಕೊಳ್ಳು ತ್ತೇನೆ. ಮುಂದಕ್ಕೆ ಹೇಳಿ.

ಮುರಳಿ:– ವೀರನಲ್ಲ ಎಂದು ನೀನು ಯಾರಿಗೆ ಹೇಳಿದ್ದು ?

ರಮೆ:– ಯಾರಿಗೆ, ಕರ್ಣನಿಗೆ. ನೀವು ಯಾರಿಗೆ ಎಂದು ತಿಳಿದದ್ದು ?

ಮುರಳಿ:– ಭೀಮನಿಗೆ ಅಂತ.

ರಮೆ:– ಹಾಗೆನ್ನಲು ನನಗೇನೂ ನಿಮ್ಮಷ್ಟು ತಲೆ ಕೆಟ್ಟಿಲ್ಲ. ಶತ್ರು ಗಳಿಂದಲೂ ತನ್ನವರಿಂದಲೂ ಸದಾಕಾಲ ತೇಜೋವಧೆ ಮಾಡಲ್ಪಟ್ಟರೂ ಕೂಡ ಅರ್ಜುನನಂತಹ ಬಿಲ್ಗಾರನನ್ನೇ ಗಾಳಿಗೆ ತೂರುವಷ್ಟು ಸಮರ್ಥನಾದ ಕರ್ಣ ಈ ರೀತಿ ಭೀಮನ ಕೈಯಿಂದ ಹದಿನೆಂಟು ಬಾರಿ ಭಂಗಿಸಲ್ಪಟ್ಟು ಹಿಂದೆ ಸರಿದನಲ್ಲಾ, ಅವನ ವೀರತನ ಹಾಗಾದರೆ ಯಾವ ಮಟ್ಟದ್ದು ಎಂದು ಕೇಳಿದೆ, ಅಷ್ಟೆ.

ಮುರಳಿ:– ಅವನ ವೀರತನ ಲೋಕ ಒಪ್ಪಿಕೊಂಡಂತೆಯೇ ಬಹಳ ಉನ್ನತಮಟ್ಟದ್ದು ಎಂಬದಕ್ಕೆ ಈ ಘಟನೆ ಅಡ್ಡಿಯಾಗುವದಿಲ್ಲ. ದುರ್ಯೋಧನನು ತನ್ನ ಹಿರಿಯರು, ಹಿತೈಷಿಗಳು ಇವರೆಲ್ಲರ ಸಲಹೆಯ ವಿರುದ್ಧವಾಗಿ ಪಾಂಡವರೊಂದಿಗೆ ಯುದ್ಧವನ್ನೇ ಬಯಸಿದುದು ಕೇವಲ ಕರ್ಣನೊಬ್ಬನನ್ನು ನಂಬಿ ಎಂದು ನಾವು ಮರೆಯಬಾರದು. ಭೀಷ್ಮ, ದ್ರೋಣ ಮೊದಲಾದವರು ಕರ್ತವ್ಯಕ್ಕಾಗಿ ಯುದ್ಧ ಮಾಡಿದವರೇ ಹೊರತು, ಪಾಂಡವರನ್ನು ನಾಶ ಮಾಡ ಬೇಕು ಎಂಬದಕ್ಕಾಗಿ ಹೋರಾಡಿದವರಲ್ಲ. ಇದು ದುರ್ಯೋಧನನಿಗೂ ಗೊತ್ತು. ತನ್ನ ಗೆಲವಿನ ಬಗೆಗೆ ಅವನ ಪೂರ್ಣ ವಿಶ್ವಾಸ ಕೇಂದ್ರೀಕೃತವಾಗಿದ್ದುದು ಸ್ವಸಾಮರ್ಥ್ಯದಲ್ಲಿ ಮತ್ತು ಕರ್ಣನ ನಿಷ್ಠೆ, ಪರಾಕ್ರಮಗಳಲ್ಲಿ. ಭೀಷ್ಮ, ದ್ರೋಣರಿಗೆ ಅವರ ಧರ್ಮ ಪಕ್ಷಪಾತವೂ ವೃದ್ಧಾಪ್ಯವೂ ಪಾಂಡವರನ್ನು

ಗೆಲ್ಲಲು ಆತಂಕಗಳಾಗಿದ್ದಾಗ ಕರ್ಣನಿಗೆ ಇದ್ಯಾವ ಆತಂಕವೂ ಇರಲಿಲ್ಲ. ಅವನು ಬದುಕಿದ್ದುದೇ ದುರ್ಯೋಧನನಿಂದ, ದುರ್ಯೋಧನನಿಗಾಗಿ. ಇಂದು ನಡೆದ ಯುದ್ಧ ಸಂದರ್ಭದಲ್ಲಿಯೇ ಆದರೂ ಅವನು ಭೀಮನ ಮೇಲೆ ಕರುಣೆಯನ್ನು ತೋರಿ ಆಗಲಿ, ದುರ್ಯೋಧನನ ಅಧರ್ಮದ ಮೇಲೆ ಉದಾಸೀನ ತಳೆದಾಗಲಿ ಯುದ್ಧ ಮಾಡಲಿಲ್ಲ. ಏಕಾಂಗಿಯಾಗಿ ತಮ್ಮ ಸೈನ್ಯವನ್ನು ಹೊಕ್ಕ ಶತ್ರುವು ತಮ್ಮ ಸೇನಾಪತಿಯನ್ನೇ ಹೊಡೆದೋಡಿಸಿ, ಯುದ್ಧ ಕಾರಣನಾದ ಮಹಾರಾಜನ ತಮ್ಮಂದಿರನ್ನು ಮೇಲಿಂದ ಮೇಲೆ ಕೊಂದು ಹಾಕಿ ತಮ್ಮ ಸೈನ್ಯವು ದಿಕ್ಕಾಪಾಲಾಗಿ ಓಡುವಂತೆ ಮಾಡಿದ ವಿಜಯೋನ್ಮತ್ತತೆಯಿಂದ ಬೀಗಿರುವದನ್ನು ಯಾವ ನಿಷ್ಠಾವಂತ ಗಂಡೂ ನೋಡಿಕೊಂಡು ಸುಮ್ಮನಿರಲಾರ. ಹಾಗಾಗಿ ಕರ್ಣನು ತನ್ನ ಪೂರ್ಣ ಸಾಮರ್ಥ್ಯದಿಂದಲೇ ಭೀಮನನ್ನೆದುರಿಸಿದುದು. ಭೀಮನೊಬ್ಬನಿಂದಲೇ ತಮ್ಮ ಸಮಸ್ತ ಸೈನ್ಯವೂ ಭಂಗಿಸಲ್ಪಟ್ಟು ಆದರಿಂದಾಗಿ ಅಧೀರನಾಗಿದ್ದಿರಬಹುದಾದ ದುರ್ಯೋಧನನ ಮನಸ್ಸನ್ನು ಸಂತೋಷಪಡಿಸಲು ಕರ್ಣನಿಗಿಂತ ಬೇರೆ ಯಾರೂ ಹೆಚ್ಚು ಬಯಸಿದ್ದಿರಲು ಸಾಧ್ಯವಿಲ್ಲ. ಈ ರೀತಿ ದೃಢ ಸಂಕಲ್ಪದಿಂದಲೇ ಎದುರಿಸಿ ಬಂದ ಕರ್ಣನಂತಹ ಪ್ರಚಂಡ ಪರಾಕ್ರಮಿಯನ್ನು ಭೀಮನು ಮತ್ತೆ ಮತ್ತೆ ಸೋಲಿಸಿ ಓಡಿಸಿದನೆಂದರೆ ಭೀಮನ ಗಂಡುತನ ಎಂತಹದೆಂಬದನ್ನು ನಾವು ಇದರಿಂದ ಊಹಿಸಬಹುದು. ಯಾವ ಕರ್ಣನು ಮುಂದೆ ತೀವ್ರ ದುರವಸ್ಥೆಯಲ್ಲಿ ಸಿಕ್ಕಿದಾಗ ಮಾತ್ರ ಅರ್ಜುನನು ಅವನನ್ನು ಮಹಾಸ್ತ್ರದಿಂದ ಹೊಡೆದು ಕೊಲ್ಲಲು ಸಾಧ್ಯವಾಯಿತೋ ಅಂತಹವನು ಈಗ ನಿಶ್ಚಿತವಾದ ಸಂಕಲ್ಪದಿಂದ, ಪೂರ್ಣ ಸಜ್ಜಾಗಿ ಬಂದಾಗಲೇ ಭೀಮ ಅವನನ್ನು ಪುನಃ ಪುನಃ ಸೋಲಿಸಿ ಅವನಿಗೆ ಜೀವದಾನ ಮಾಡಿ ಹಿಂದೆ ಕಳುಹಿಸಿದ್ದಾನೆ ಎಂಬದನ್ನು ವಿಮರ್ಶಿಸುವಾಗ ಕರ್ಣನು ಹೇಡಿ ಎಂಬದು ಗೊತ್ತಾಗುವದಕ್ಕಿಂತಲೂ ಭೀಮನು ಅದೆಂತಹ ಉದ್ದಾಮ ಯೋಧ ಎಂಬದು ಗೊತ್ತಾಗುತ್ತದೆ.

ರಮೆ:– ಅದನ್ನೇ ಮತ್ತೆ ನಾನು ಹೇಳಿದುದು ! ಕೆಲವೊಮ್ಮೆ ನೀವು ಹಳಿ ತಪ್ಪಿದ ರೈಲಿನಂತೆ ಆಡುತ್ತೀರಿ. ಸರಿಯಾಗಿ ಹಳಿಯಲ್ಲಿಯೇ ಹೋದರೆ ಅದ್ಭುತ ಉಪಯೋಗ. ಆದರೆ ಮಾತ್ರ ಹಳಿ ತಪ್ಪಿತೆಂದು ನಿಲ್ಲುವದಿಲ್ಲ. ಆಗಲೂ ಹಾಗೆಯೇ ಹೋಗುತ್ತಲೇ ಇರುವದು. ಆಗ ಅಷ್ಟೇ ಅಗಾಧವಾದ, ಆದರೆ ಭೀಕರವಾದ ಪರಿಣಾಮ.

ಮುರಳಿ:– ಅದೆಲ್ಲ ನೀನು ತೋರಿಸುವ ಬಾವುಟದ ಬಣ್ಣದ ಪರಿಣಾಮ. ಕೆಂಪು ಎಂದು ಹಸಿರು ಬಾವುಟ ತೋರಿಸಿಬಿಡುತ್ತೀ. ಸರಿ. ರೈಲು ಹೊರಟು ಬಿಡುತ್ತದೆ. ಅನಾಹುತ ಕಟ್ಟಿಟ್ಟದ್ದೇ.

ರಮೆ:– ನೀವು ರೈಲು ಬಿಡುವದು ಸಾಕು. ಸದ್ಯ ಕತೆ ಮುಂದುವರಿಸಿ.

ಮುರಳಿ:– ಕೇಳು. ತಮ್ಮ ಸೇನಾಪತಿಯಾದ ದ್ರೋಣ, ಮತ್ತು ತನ್ನ ಮಗ ದುರ್ಯೋಧನನ ಆಧಾರಸ್ತಂಭವಾಗಿದ್ದ ಕರ್ಣ – ಈ ಇಬ್ಬರನ್ನೂ ಒಂದೇ ದಿನದಲ್ಲಿ ಮತ್ತೆ ಮತ್ತೆ ಸೋಲಿಸಿ ಇಬ್ಬರಿಗೂ ಜೀವದಾನ ಕೊಟ್ಟು ಕಳುಹಿಸಿ ಏಕಾಂಗಿಯಾಗಿ ಕೌರವ ಸೈನ್ಯವೆಲ್ಲವನ್ನೂ ಧ್ವಂಸಮಾಡುತ್ತಾ ನಡುನಡುವೆ ತನ್ನ ಅನೇಕ ಮಕ್ಕಳನ್ನೂ ಕೊಂದು ಹಾಕಿದ ಭೀಮನ ಅಪ್ರತಿಮವಾದ ಸಾಹಸ ವಾರ್ತೆಯನ್ನು ಸಂಜಯನ ಮೂಲಕ ಕೇಳಿ ತಿಳಿದುಕೊಳ್ಳುತ್ತಿದ್ದ ಧೃತರಾಷ್ಟ್ರನು ಅತ್ಯಂತ ವ್ಯಸನ ದಿಂದ ಕರುಳು ಕಿವುಚಿದಂತಾಗಿ ಸಂಜಯನನ್ನು ಕುರಿತು "ಸಂಜಯಾ, ಕರ್ಣನು ಮಹಾ ಬಲಾಢ್ಯನೆಂದೂ ಕೃಷ್ಣ ಸಮೇತರಾದ ಐವರು ಪಾಂಡವರನ್ನೂ ಏಕಾಂಗಿಯಾಗಿ ಗೆಲ್ಲಬಲ್ಲವನೆಂದೂ ನಮ್ಮೆಲ್ಲರ ನಂಬಿಕೆಯಾಗಿತ್ತಲ್ಲವೆ! ಅಂತಹ ಕರ್ಣನೇ ಭೀಮನಿಂದ ಈ ರೀತಿ ಪರಾಜಿತನಾದನಲ್ಲವೆ! ಅಶ್ವತ್ಥಾಮ, ಕೃಪ, ಕರ್ಣ, ಶಲ್ಯ ಮೊದಲಾದ ಮಹಾವೀರರೆಲ್ಲ ಒಂದಾಗಿ ಸೇರಿಯೂ ಭೀಮನೊಬ್ಬನಿಂದಲೇ ಪರಾಜಿತರಾದರಲ್ಲವೆ. ಆ ಭೀಮನ ಅಸಾಧಾರಣ ಪರಾಕ್ರಮವನ್ನೂ ಯುದ್ಧ ಪಾಂಡಿತ್ಯವನ್ನೂ ತಿಳಿದು ಕೂಡ ನನ್ನ ಮಕ್ಕಳು ಅವನನ್ನು ಏಕೆ ಕೋಪಗೊಳಿ ಸುವರೊ! ಸಂಜಯಾ, ತಾನೊಬ್ಬನೇ ನಮ್ಮ ಸೇನಾನಾಯಕನಾದ ದ್ರೋಣನನ್ನೂ ಹೊಡೆದೋಡಿಸಿ, ಕರ್ಣನನ್ನೂ ಪುನಃ ಪುನಃಭಂಗಿಸಿ ಮೆರೆಯುತ್ತಿರುವ ಆ ಭೀಮ ನನ್ನೆದುರಿಸಿ ಯಾರೂ ಜೀವ ಸಹಿತ ಹಿಂತಿರುಗಲು ಸಾಧ್ಯವೇ ಇಲ್ಲ ಎಂದಾಯಿತಲ್ಲ! ಮಹಾವೀರನೆನಿಸಿದ ಕರ್ಣನ ಮೇಲೆ ಬಾಣ ಪ್ರಯೋಗ ಮಾಡುತ್ತಲೇ ನನ್ನ ಮಕ್ಕ ಳನ್ನೂ ಕೊಂದು ಹಾಕಿದ ಅವನ ಅಸ್ತ್ರ ವಿದ್ಯಾ ಚಮತ್ಕಾರಕ್ಕೆ ಎಣೆಯುಂಟೆ!" ಎಂದು ಗೋಳಾಡಿದನು.

ಈ ಕಡೆ ಭೀಮ ಕರ್ಣರು ಪುನಃ ಸಂಧಿಸಿ ಯುದ್ಧ ಮಾಡುತ್ತಿರುವಾಗ ಭೀಮನು ಪ್ರದರ್ಶಿಸುತ್ತಿದ್ದ ಅಸ್ತ್ರ ಚಮತ್ಕಾರಗಳನ್ನು ಕಂಡ ಪಾಂಡವ–ಕೌರವ ಪಕ್ಷದವರಿಬ್ಬರೂ ಅವನನ್ನು ಅಭಿನಂದಿಸಿದರು. ಕರ್ಣನು ಭೀಮನ ಬಾಣಗಳಿಗೆ ಬಲಿಯಾಗಿಬಿಡುತ್ತಾನೆಂದು ಶಂಕಿಸಿದ ದುರ್ಯೋಧನನು ತನ್ನ ಕೆಲವು ತಮ್ಮಂದಿ ರನ್ನು ಕರ್ಣನ ಸಹಾಯಕ್ಕೆಂದು ಕಳುಹಿಸಿದನು. ಭೀಮನು ಒಮ್ಮೆಗೇ ಏಳು ಬಾಣಗಳನ್ನು ಪ್ರಯೋಗಿಸಿ ಆ ಏಳು ಮಂದಿ ಧೃತರಾಷ್ಟ್ರ ಪುತ್ರರನ್ನೂ ಏಕಕಾಲದಲ್ಲಿ ಕೊಂದನು. ತನ್ನ ಕೈಯಿಂದ ಈ ರೀತಿ ಹತರಾಗುತ್ತಿದ್ದ ಧೃತರಾಷ್ಟ್ರ ಪುತ್ರರನ್ನು ನೋಡಿ– ಅದರಲ್ಲಿಯೂ ವಿಕರ್ಣನೆಂಬವನ ಶವವನ್ನು ನೋಡುತ್ತಾ "ಕುಮಾರಾ, ವಿಕರ್ಣ. ನಾನು ನನ್ನ ಪ್ರತಿಜ್ಞೆಯನ್ನು ಪೂರೈಸಲಿಕ್ಕಾಗಿಯಷ್ಟೇ ನಿಮ್ಮೆಲ್ಲರನ್ನೂ ಕೊಲ್ಲಬೇಕಾಗಿದೆ. ನೀನೂ ಹತನಾದೆ. ಯುದ್ಧ ಧರ್ಮವೇ ಕ್ರೂರವಾದುದು. ಆದರೇನು ಮಾಡುವದು? ಅದು ನಮ್ಮ ಧರ್ಮ. ಆಚರಿಸದೆ ವಿಧಿಯಿಲ್ಲ.

ಶತ್ರುವೆಂದುಬಿಟ್ಟರೆ ಸಾಕು. ಅವನು ಯಾರೇ ಆಗಿದ್ದರೂ ವಧಾರ್ಹನಾಗುತ್ತಾನೆ" ಎಂದು ಹೇಳಿ ಶೋಕಿಸುತ್ತಾ ಪುನಃ ಯುದ್ಧವನ್ನು ಮುಂದುವರಿಸಿದನು. ಅವನಿಗೆ ಪುನಃ ಕರ್ಣನೊಡನೆ.......

ರಮೆ:– ಸ್ವಲ್ಪ ನಿಲ್ಲಿಸಿ.

ಮುರಳಿ:– ಯಾಕೆ ?

ರಮೆ:– ದಯವಿಟ್ಟು ಸ್ವಲ್ಪ ಸುಮ್ಮನಿರಿ.

ಮುರಳಿ:– ಯಾಕೆ ? ಏನು ?

ರಮೆ:– ಕಾದ ಕಾವಲಿಗೆ ತಣ್ಣೀರೆರೆದಂತೆ ಹೃದಯ ಹಿಂಡಿದಂತಾಗುತ್ತಿದೆ. ದಯವಿಟ್ಟು ಸ್ವಲ್ಪಕಾಲ ಏನೂ ಮಾತನಾಡದೆ ಸುಮ್ಮನಿರಿ.

ಮುರಳಿ:– ...............

ರಮೆ:– ........ ಹದಿಮೂರು ವರ್ಷಗಳ ಕಾಲ ತನ್ನ ಬಯಕೆಗಳೆಲ್ಲ ಮೇಲಿಂದ ಮೇಲೆ ಭಸ್ಮವಾಗಿ, ಆಗಿ, ಹೃದಯದಲ್ಲಿ ಹರಡಿದ್ದ ಸ್ಮಶಾನ ಕ್ರುದ್ಧತೆ. ಅಂತಹ ವಿನಾಶಾತ್ಮಕವಾದ, ರಕ್ತದಾಹುತಿಗೆ ಹಾತೊರೆಯುತ್ತಿದ್ದ ಭೀಕರ ಹಿನ್ನಲೆಯಲ್ಲಿ ಪ್ರಾರಂಭವಾದ ಯುದ್ಧದಲ್ಲಿ ಈ ಹದಿನಾಲ್ಕು ದಿನಗಳ ಕಾಲ ಹಿಂದಿನ ಹದಿನಾಲ್ಕು ವರ್ಷಗಳಲ್ಲಿಯೂ ಹೃದಯದಲ್ಲಿ ಹೊತ್ತಿ ಉರಿಯುತ್ತಿದ್ದ ಆಶಾ ಭಗ್ನತೆಯ ತೀವ್ರ ಜ್ವಾಲೆಯನ್ನು ತಣಿಸುವ ಅಪೂರ್ವ ಅವಕಾಶ. ಎದುರಿನಲ್ಲಿ ತಮ್ಮದಕ್ಕಿಂತ ಎಷ್ಟೋ ಪಾಲು ಹೆಚ್ಚು ಸಂಖ್ಯೆಯಲ್ಲಿದ್ದ ಸೈನ್ಯ ಸಾಗರ. ಸಾಲದು ದಕ್ಕೆ ಧರ್ಮಾವಲಂಬಿಗಳಾಗಿ ಕಾಡಿನಲ್ಲಿ ಬದುಕಬೇಕಾಗಿ ಬಂದ ತಮ್ಮನ್ನೇ ಕೊಲ್ಲುವದಕ್ಕೆಂದು ತನ್ನ ಎದುರಿನಲ್ಲಿ ನಿಂತಿರುವ ತಮ್ಮ ಕೇವಲ ಸಂಬಂಧಿಕರಾದ ಅಜ್ಜ, ಗುರು, ನೆಂಟರು ಮೊದಲಾದವರು. ಲೋಕದ ಉದ್ದಗಲಕ್ಕೆ ಹರಡಿ ನಿಂತಂತಿರುವ ಈ ಅನ್ಯಾಯವನ್ನು, ಅಧರ್ಮವನ್ನು ನಾಶ ಮಾಡಬೇಕು. ಇಲ್ಲವೇ ಈ ವಿಶಾಲವಾಗಿ ನಿಂತಿರುವ ಅಧರ್ಮದ ತುಳಿತದಲ್ಲಿ ತಾನು ಸಾಯಬೇಕು. ಹೀಗೆ ಪ್ರತೀಕಾರ, ನಾಶ, ಸಾವು, ಕಗ್ಗೊಲೆ, ರಕ್ತತರ್ಪಣ ಮೊದಲಾದ ಭೀಭತ್ಸ ಚಿತ್ರ ಮನಸ್ಸಿನ ಒಳಗೂ ಹೊರಗೂ ದಟ್ಟವಾಗಿ, ವಿಶ್ವ ವ್ಯಾಪಕವಾಗಿರುವಷ್ಟು ಪ್ರಭಾವಯುತವಾಗಿ ಹರಡಿ ಕಣ್ಣುಬಿಟ್ಟರೆ ಹೆಣ, ರಕ್ತ; ಕಿವಿಗೆ ಕೇಳಿಸುವದು ಸಾವು, ನೋವು; ಕೈ ಎತ್ತಿದರೆ ಕೊಲೆ, ಹೆಣದ ರಾಶಿ ಎಂಬ ಕ್ರೂರ, ಭೀಕರ ಪರಿಸರದಲ್ಲಿ ಭೀಮನ ಮನಸ್ಸು ಅದೆಷ್ಟು ಕ್ರುದ್ಧವಾಗಿದ್ದಿರಬೇಡ ! ಎಷ್ಟು ವ್ಯಗ್ರವಾಗಿದ್ದಿರಬೇಡ ! ಎಷ್ಟು ಉಗ್ರವಾಗಿದ್ದಿರಬೇಡ ! ಹೀಗೆ ಅವನ ಮನಸ್ಸಿನಲ್ಲಿ ಈಗ ಅಷ್ಟು ದಿನಗಳಿಂದ ಚಿತೆ ಹೊತ್ತಿ ಹುಚ್ಚೆದ್ದು ಅವಿರತವಾಗಿ ಉರಿಯುತ್ತಿದ್ದರೆ ಮಾತ್ರವೇ ಶತ್ರುಗಳ ಮಾರಣ ಹೋಮ ನಡೆಸಲು ಸಾಧ್ಯ

ವಾಗುತ್ತಿದ್ದುದು. ಆದರೆ ಒಳಗೆ ಈ ರೀತಿ ಭೀಕರ ಜ್ವಾಲೆ ಉರಿಯುತ್ತಿರುವಾಗಲೂ, ವಿನಾ ಕಾರಣ ಸಾಯುತ್ತಿರುವವರನ್ನು ಕಂಡಾಗ ಅವನ ಆಂತರ್ಯದ ರೋಷ ಜ್ವಾಲೆಯ ತಳದಲ್ಲಿ ಅನುಕಂಪದ ಶುಭ್ರ ಗಂಗೆ ಹರಿಯಲು ಸಾಧ್ಯವಾಗುತ್ತದೆಂದರೆ ಅವನದೊಂದು ಅತ್ಯಪೂರ್ವವಾದ ವ್ಯಕ್ತಿತ್ವವಾಗುತ್ತದೆ. ಗೀತೆಯಲ್ಲಿ ಕೃಷ್ಣ ಹೇಳಿದಂತೆ ಹಾಗೂ ಅವನು ಜೀವನದಲ್ಲಿ ಸ್ವತಃ ನಡೆದು ತೋರಿಸಿದಂತೆ, ಜಯಾಪಜಯಗಳ ಕಡೆಗೆ ಲಕ್ಷ್ಯವಿಡದೆ ಕೇವಲ ಕರ್ಮಕ್ಕಾಗಿ ಮಾಡುವ ಕರ್ಮ ಎಂಬಂತೆ – ಆದರೆ ಹಾಗೆಂದು ಆ ಕರ್ಮದಲ್ಲಿ ಎಳ್ಳಷ್ಟೂ ಅಶ್ರದ್ಧೆಯನ್ನು ತೋರಿಸದೆ – ಅದೇ ತನ್ನ ಜೀವನದ ಪರಮಗುರಿ ಎಂಬಷ್ಟು ಶ್ರದ್ಧೆಯಿಂದ ಭೀಕರ ಯುದ್ಧದಂತಹ ಪ್ರಚಂಡ ಕರ್ಮವನ್ನು ಮಾಡಿದ ಭೀಮನ ಜೀವನವು ಅದೆಷ್ಟು ಪವಿತ್ರವಾದುದು, ಅದೆಷ್ಟು ಆದರ್ಶಯುತವಾದದು ! ಕೃಷ್ಣನೇನೋ ಸಾಕ್ಷಾತ್ ಭಗವಂತನ ಅವತಾರವೆಂದಾಯಿತು. ಹಾಗಾಗಿ ಅವನು ಆಡಿದ ಮಾತು ವೇದ, ಇಟ್ಟ ಹೆಜ್ಜೆ ಯೋಗ ಎಂದಾಗುವದು ಸಹಜ. ಆದರೆ ಭೀಮನು ಹಾಗಲ್ಲ. ಅವನು ಅವತಾರ ಪುರುಷನಲ್ಲ. ಎಲ್ಲವನ್ನೂ ಬಿಟ್ಟು ಮೋಕ್ಷ ಮಾರ್ಗದಲ್ಲಿ ನಡೆಯಲು ಮನಸ್ಸು ಮಾಡಿದ ತಪಸ್ವಿಯಲ್ಲ. ಆಚಾರ್ಯನಲ್ಲ. ಆದರ್ಶವನ್ನು ಸ್ಥಾಪಿಸಲು ಹೊರಟ ಮಹಾರಾಜನಲ್ಲ. ಅವನೊಬ್ಬ ಸಾಮಾನ್ಯ ಕ್ಷತ್ರಿಯ. ಇಂತಹವನೊಬ್ಬ ಯೋಗ ಜೀವನವನ್ನು ಪೂರ್ಣ ಪ್ರಮಾಣದಲ್ಲಿ ಅನುಸರಿಸಿ ಸಫಲನಾದನೆಂಬದು ಲೋಕದ ಸಾಮಾನ್ಯ ಜನತೆಗೊಂದು ಭರವಸೆ – ದಿವ್ಯ ಜೀವನವು ಸಾಧ್ಯವಾಗುವದು ವಾತಾವರಣವನ್ನು ಅವಲಂಬಿಸಿರದೆ ಅವನವನ ವ್ಯಕ್ತಿತ್ವವನ್ನಷ್ಟೇ ಅವಲಂಬಿಸಿದೆ ಎಂದು ನಂಬಲು ಭೀಮನೊಂದು ಹಿಮಾಲಯ ಪರ್ವತ – ರಾಗ ದ್ವೇಷಗಳಿಲ್ಲದ ಉತ್ತುಂಗ ಚೇತನ. ಅದನ್ನು ಕುರಿತು "ನಿನ್ನನ್ನು ಕೊಲ್ಲುತ್ತೇನೆ" ಎಂದು ಕೂಗಿದರೆ ದೊರಕುವದು ಅದೇ ಉತ್ತರ. "ಅಯ್ಯೋ ಪಾಪ" ಎಂದು ಕೂಗಿದರೆ ಅದೇ ಮಾರ್ದನಿ. ಕಲ್ಲು ಎಂದು ಅದನ್ನು ಒದೆದರೆ ಕಾಲು ಮುರಿಯುವದು ನಿಶ್ಚಯ. ಶಿವಲಿಂಗ ಎಂದು ಅಪ್ಪಿಕೊಂಡರೆ ಅಭಯವೂ ನಿಶ್ಚಯ. ಯುದ್ಧವು ಅವನ ಮೇಲೆ ಹೇರಲ್ಪಟ್ಟ ಕರ್ತವ್ಯ. ಆ ಕರ್ತವ್ಯವನ್ನು ಅವನು ತ್ರಿಕರಣಪೂರ್ವಕವಾಗಿ ನಿರ್ವಹಿಸಬೇಕಾಗಿದ್ದುದೂ ಅವಶ್ಯವಾಗಿತ್ತು. ಆದರೆ ಹಾಗೆಂದು ಅವನು ತನ್ನ ತ್ರಿಕರಣಗಳನ್ನು ಯುದ್ಧಾವಶ್ಯಕತೆಯಾದ ಕ್ರೌರ್ಯ ಗುಣಕ್ಕೆ ಮಾರಿಕೊಳ್ಳಲಿಲ್ಲ. ಕ್ರೌರ್ಯವನ್ನು ಅವಶ್ಯಕತೆಗನುಗುಣವಾಗಿ ಆವಾಹಿಸಿಕೊಳ್ಳುತ್ತಿದ್ದನಷ್ಟೆ. ಹಾಗಾದುದರಿಂದಲೇ ಅಂತಹ ಕ್ರೂರ ಚಟುವಟಿಕೆಯ ನಡುವೆಯೂ ಅವಕಾಶ ಸಿಕ್ಕಿದ ಸಣ್ಣ ಅವಧಿಯಲ್ಲಿ ಕೂಡ ಅವನ ಮಾನವೀಯತೆ ಚಿಮ್ಮಿ ಹೊರಸೂಸಲು ಸಾಧ್ಯವಾಗುತ್ತಿದ್ದುದು.

........ಕ್ಷಮಿಸಿ. ಇಂತಹ ಒಂದು ಅದ್ಭುತ ವ್ಯಕ್ತಿತ್ವವನ್ನು ಯಥಾವತ್ತಾಗಿ

ಚಿತ್ರಿಸಲು ಸಂಪೂರ್ಣವಾಗಿ ಅಸಮರ್ಥಳಾಗಿದ್ದೇನೆ. ನೀವಾಗಿದ್ದರೆ ಇನ್ನೂ ಸ್ಪಷ್ಟವಾಗಿ ವಿವರಿಸುತ್ತಿದ್ದಿರಿ. ಆದರೆ ನಿಮಗೇಕೋ ಈಗ ಮಂಕು ಕವಿದಿದೆ. ನನಗೆ ಮಂಕು ಹರಿದಿದೆ. ಆದರೆ ವಿವರಿಸಲು ಬರುವದಿಲ್ಲ. ವಿವರಿಸಿ ಏನಾಗಬೇಕು ! ತಿಳಿದುಕೊಳ್ಳುವದು ತಾನೇ ಮುಖ್ಯ ! ತಿಳಿದುಕೊಂಡಿದ್ದೇನೆ. ಅಥವಾ ನಾನು ತಿಳಿದುಕೊಂಡಷ್ಟೇ ನನ್ನ ಚೇತಸ್ಸನ್ನು ಹಸನುಗೊಳಿಸಲು ಸಾಕಾಗುವಷ್ಟಾಗಿದೆ. ನಾನೇನೂ ನಿಮ್ಮಂತೆ ಭೀಮನ ವ್ಯಕ್ತಿತ್ವದ ಪೂರ್ಣ ಸ್ವರೂಪವನ್ನು ವಿವರಿಸುತ್ತೇನೆಂದು ಹೊರಟವಳಲ್ಲ ತಾನೆ, ಸದ್ಯ. ಹೋಗಲಿ, ಹೇಳಿ. ಕತೆಯನ್ನಾದರೂ ಮುಂದುವರಿಸಿ.

ಮುರಳಿ:– ಇದೇ ನೋಡು. ಸತ್ಸಂಗದ ಪ್ರಯೋಜನ. ಇತಿಹಾಸ, ಪುರಾಣಗಳ ಪ್ರಯೋಜನ. ಸಚ್ಚಿಂತನೆಯ ಪ್ರಯೋಜನ.

ರಮೆ:– ಯಾವದು ?

ಮುರಳಿ:– ತಲೆಗೆ, ಮೈಗೆ ಎಣ್ಣೆ ಹಚ್ಚಿಕೊಳ್ಳುತ್ತೇವೆ. ಅನಂತರ ಬಚ್ಚಲಿನಲ್ಲಿ ಕುಳಿತು ಮೈಯ ಮೇಲೆ ಹೇರಳವಾಗಿ ನೀರನ್ನು ಸುರಿದುಕೊಳ್ಳುತ್ತೇವೆ. ಬಚ್ಚಲಿನ ಚರಂಡಿಯಲ್ಲಿ, ನಾವು ಹಚ್ಚಿಕೊಂಡ ಎಣ್ಣೆಯೂ ಕೊಚ್ಚಿ ಹೋಗುತ್ತಿರುತ್ತದೆ, ಮೈ ಮೇಲೆ ಸುರಿದುಕೊಂಡ ನೀರೂ ಕೊಚ್ಚಿ ಹೋಗುತ್ತಿರುತ್ತದೆ. ಹಾಗಾದರೆ ನಾವು ಉಪಯೋಗಿಸಿದ ಎಣ್ಣೆ, ನೀರುಗಳು ವ್ಯರ್ಥವಾದುವೇ ಎಂದರೆ, ಇಲ್ಲ. ಎಣ್ಣೆ–ನೀರಿನಿಂದಾಗಿ ಮೈ ಹಸನಾಗುವದು ಆಗಿಯೇ ಇರುತ್ತದೆ. ಸತ್ಸಂಗ, ಸಚ್ಚಿಂತನೆಗಳ ಪ್ರಯೋಜನವೂ ಹೀಗೆಯೇ. ಕೇಳಿದುದೆಲ್ಲವೂ ಉಳಿದುಕೊಳ್ಳುವದಿಲ್ಲ. ಅವೆಲ್ಲ ಕೊಚ್ಚಿಹೋದಂತೆಯೇ ಕಾಣಿಸಬಹುದು. ಆದರೆ ಅದರಿಂದಾಗಿ ಮನಸ್ಸು ಹಸನಾಗಿರುವದು ನಮಗೆ ಗೊತ್ತಾಗುವದಿಲ್ಲ. ಆದರೆ ಆಗಿರುತ್ತದೆ. ಭೀಮನ ಕತೆಯನ್ನು ನಾವು ಪ್ರಾರಂಭಿಸುವಾಗ ಇದ್ದ ನಿನ್ನ ಮನೋಭಾವಕ್ಕೂ, ಭಾರತೀಯ ಸಂಸ್ಕೃತಿಗೆ ಸೇರಿದ ಕರ್ಮ, ಯೋಗ ಮುಂತಾದವುಗಳ ಕುರಿತು ನಿನಗಿದ್ದ ತಿಳಿವಳಿಕೆಗೂ ಈಗಿನದಕ್ಕೂ ಇರುವ ಅಂತರವೇ ಇದಕ್ಕೆ ಸಾಕ್ಷಿ. ಇರಲಿ, ಕೇಳು.

ರಮೆ:– ಹೇಳಿ, ಹೇಳಿ.

ಮುರಳಿ:– ಕರ್ಣನೊಂದಿಗೆ ಭೀಮನಿಗೆ ಮತ್ತೊಮ್ಮೆ ಯುದ್ಧ ಕೈಗಟ್ಟಿತು. ಎರಡು ಕಡೆಯ ಸೈನ್ಯಗಳೂ ತಮ್ಮ ಯುದ್ಧವನ್ನು ನಿಲ್ಲಿಸಿ ಇವರಿಬ್ಬರ ಯುದ್ಧವನ್ನು ಆಶ್ಚರ್ಯದಿಂದ ನೋಡುತ್ತಿದ್ದವು. ಕೊನೆಗೊಮ್ಮೆ ಕರ್ಣನು ತನಗೆ ಪರಶುರಾಮನಿಂದ ದತ್ತವಾಗಿದ್ದ ದಿವ್ಯಾಸ್ತ್ರಗಳಿಂದ ಭೀಮನ ಸಾರಥಿಯನ್ನೊಮ್ಮೆ, ರಥವನ್ನೊಮ್ಮೆ ಕೈಯ ಬಿಲ್ಲನ್ನೊಮ್ಮೆ ತುಂಡು ಮಾಡಿ ಭೀಮನನ್ನು ಹೊಡೆದು

ನೋಯಿಸಿದನು. ಆಯುಧ ವಿಹೀನನಾದ ಭೀಮನು ಅತ್ಯಂತ ಕೋಪದಿಂದ ಕತ್ತಿ ಹಿಡಿದು ಕರ್ಣನ ಬಾಣಗಳನ್ನು ಲೆಕ್ಕಿಸದೆ ಮುನ್ನುಗ್ಗಿ ಬರಲು ಕರ್ಣನು ಭಯದಿಂದ ಕಣ್ಮರೆಯಾಗಿ ತಪ್ಪಿಸಿಕೊಂಡನು. ಅವನು ಹೊರಟುಹೋದನೆಂದು ಭೀಮನು ಹಿಂದಿರುಗಿದಾಗ ಕರ್ಣನು ಹಿಂದಿನಿಂದ, ನ್ಯಾಯಕ್ಕೆ ವಿರುದ್ಧವಾಗಿ, ಅವನ ಕತ್ತಿಯನ್ನು ತುಂಡು ಮಾಡಿದನು. ಭೀಮನಿಗೀಗ ರಥವಿಲ್ಲ, ಸಾರಥಿಯಿಲ್ಲ, ಆಯುಧವಿಲ್ಲ, ತನ್ನವರೆಂಬವರು ಒಬ್ಬರೂ ಇಲ್ಲ. ಆದರೂ ಅವನು ತನ್ನ ಸುತ್ತ ಮುತ್ತಲಿನ ಶವಗಳನ್ನೂ, ರಥಚಕ್ರಗಳನ್ನೂ ಉಪಯೋಗಿಸಿ ಕರ್ಣನನ್ನು ಹೊಡೆಯಲು ಕರ್ಣನು ಅವುಗಳೆಲ್ಲವನ್ನೂ ಸುಲಭವಾಗಿ ತುಂಡುಮಾಡಿ ಭೀಮನನ್ನು ಬಿಲ್ಲಿನ ಕೊಪ್ಪಿನಿಂದ ಇರಿದು ಬಹುವಾಗಿ ಮೂದಲಿಸಿದನು. ಭೀಮನು ಅದೇ ಬಿಲ್ಲನ್ನು ಕಿತ್ತುಕೊಂಡು ಅದರಿಂದ ಕರ್ಣನನ್ನು ಅಪ್ಪಳಿಸಿದನು.

ರಮ:– ಕೌರವ ಪಕ್ಷದಲ್ಲಿ ಇದ್ದವರ ಪೈಕಿ ಒಬ್ಬನೇ ಒಬ್ಬ ಗಂಡು.

ಮುರಳಿ:– ಯಾರು ?

ರಮ:– ಕರ್ಣ.

ಮುರಳಿ:– ಅದೇನು ?

ರಮ:– ಹೌದು. ಕಾಲಭೈರವನನ್ನು ಬಿಲ್ಲಿನ ತುದಿಯಿಂದಲಾದರೂ ಮುಟ್ಟಿಬಿಟ್ಟನಲ್ಲ !

ಮುರಳಿ:– ಹಾಗೆ. ಕೇಳು. ಇಷ್ಟರಲ್ಲಿ ಕೃಷ್ಣನು ಅರ್ಜುನನ ರಥವನ್ನು ಅಲ್ಲಿಗೆ ಹರಿಸಿ, ಭೀಮನನ್ನು ಮೂದಲಿಸಿ ತನ್ನ ಪೌರುಷವನ್ನು ತಾನೇ ಕೊಚ್ಚಿಕೊಂಡ ಕರ್ಣನನ್ನು ಜರೆದು ಭೀಮನ ಪೌರುಷವನ್ನು ಅವನಿಗೆ ತಿಳಿಸಿದನು. ಅಷ್ಟರಲ್ಲಿ ಕರ್ಣನು ಹಿಂದಿರುಗಿಬಿಟ್ಟನು.

ಹೊತ್ತು ಮೀರುತ್ತಾ ಬಂದಿತ್ತು. ಅರ್ಜುನನಿಗೆ ಭಾರೀ ಯುದ್ಧವು ಕೈಗಟ್ಟಿತ್ತು. ಸೈಂಧವನು ಇನ್ನೂ ಕಣ್ಮರೆಯಾಗಿಯೇ ಇದ್ದನು. ಅರ್ಜುನನ ಪ್ರತಿಜ್ಞೆ ಈಡೇರುವ ಸಾಧ್ಯತೆಯೇ ಕಾಣಿಸುತ್ತಿರಲಿಲ್ಲ. ಸೂರ್ಯಾಸ್ತಮಯಕ್ಕೆ ಬಹಳ ಸ್ವಲ್ಪ ಕಾಲ ಮಾತ್ರ ಉಳಿದಿದ್ದಿತು. ಇಷ್ಟರಲ್ಲಿ ಕೃಷ್ಣನು ತನ್ನ ಶಿಷ್ಯನನ್ನು ಪಾರು ಮಾಡಲು ತನ್ನ ಚಕ್ರವನ್ನು ಸೂರ್ಯನಿಗೆ ಅಡ್ಡಲಾಗಿ ಹಿಡಿದನು. ಒಮ್ಮೆಗೇ ಎಲ್ಲೆಲ್ಲಿಯೂ ಕತ್ತಲು ಆವರಿಸಿತು.

ರಮ:– ಈ ಬುರುಡೆ ವ್ಯಾಸರದೇಯೋ ನಿಮ್ಮದೊ ?

ಮುರಳಿ:– ಒಬ್ಬ ಪುಣ್ಯಾತ್ಮನ ಪುಣ್ಯಕಾರ್ಯದ ಕತೆಯಲ್ಲಿ ಬರುವ ಒಂದು ದೃಶ್ಯದ ಸೌಂದರ್ಯ ನಿನಗೆ ಕಾಣಿಸದೆ ಅಲ್ಲಿ ಪೈಶಾಚಿಕ ಸಂಸರ್ಗದ ತಲೆ ಬುರುಡೆ ಕಾಣಿಸಬೇಕಾದರೆ ನಿನ್ನ ದೃಷ್ಟಿಯಲ್ಲಿ ಏನೋ ದೋಷವಿರಬೇಕು ರಮಾ.

ರಮೆ:— ಆಗಲಿ, ಆಗಲಿ. ನಾನು ಕಣ್ಣು ಬಿಟ್ಟರೆ ಪಿಶಾಚಿಯನ್ನೇ ಕಾಣುವದು. ಈಗೇನು ? ಚಿಂತೆಯಿಲ್ಲ. ಕತೆ ಹೇಳಿ.

ಮುರಳಿ:— ಪಿಶಾಚಿಯನ್ನು ಕಾಣುವದೆಂದಲ್ಲ. ಅದು ದೃಷ್ಟಿಯ ವಿಪರ್ಯಾಸ.

ರಮೆ:— ನಾನು ಸಂಸ್ಕೃತ ಪಂಡಿತಳೂ ಅಲ್ಲ, ಕಣ್ಣಿನ ವೈದ್ಯಳೂ ಅಲ್ಲ. ಸಾಮಾನ್ಯ ಒಬ್ಬ ಕನ್ನಡದ ಹುಡುಗಿಗೆ ಅರ್ಥವಾಗುವಂತೆ ಹೇಳುವದಾದರೆ ಹೇಳ ಬಹುದು. ಇಲ್ಲವಾದರೆ ಕತೆ ಮುಂದುವರಿಸಬಹುದು.

ಮುರಳಿ:— ಕನ್ನಡದ ಹುಡುಗಿಯನ್ನೇ ಕುರಿತು ಇಷ್ಟು ದಿನವೂ ನಾನು ಹೇಳಿದುದು. ದೃಷ್ಟಿಯ ವಿಪರ್ಯಾಸದಿಂದಾಗಿ ಒಂದೇ ದೃಶ್ಯದಲ್ಲಿ ಹಲವರು ಹಲವು ಲೋಕಗಳನ್ನು ಕಾಣಬಹುದು. ಉದಾಹರಣೆಗೆ ನೋಡು. ಹಿಂದೂಗಳ ದೇವರ ವಿಗ್ರಹದ ಮೇಲೆ ಅಮೂಲ್ಯವಾದ ಒಡವೆಗಳ ಅಲಂಕಾರ ಮಾಡಲಾಗಿದೆ ಎಂದಿಟ್ಟುಕೊ. ಅದನ್ನು ನೋಡುವ ಒಬ್ಬ ಭಕ್ತನಿಗೆ ಭಕ್ತಿ ಉದ್ರೇಕವಾಗುತ್ತದೆ. ಮೈ ಮರೆಯುತ್ತಾನೆ. ಅದನ್ನೇ ನೋಡುವ ಒಬ್ಬಳು ಅಲಂಕಾರ ಪ್ರಿಯ ಸ್ತ್ರೀಗೆ ಆಸೆ ಉಕ್ಕೇರಬಹುದು. ಒಬ್ಬ ಅಕ್ಕಸಾಲಿಗನಿಗೆ ಆ ಒಡವೆಗಳ ರಚನೆ, ವಿನ್ಯಾಸ ಗಳ ಮೇಲೆ ಮನಸ್ಸು ನೆಡಬಹುದು. ನಾಸ್ತಿಕನಿಗೆ ಕ್ರೋಧ ಉಕ್ಕಬಹುದು. ಕಳ್ಳನ ಬಾಯಿಯಲ್ಲಿ ನೀರೂರಬಹುದು. ನೋಡುವ ಕಣ್ಣುಗಳು ಒಂದೇ ಬಗೆಯವು. ಗ್ರಹಿಸುವ ಭಾವನೆಗಳು ಮಾತ್ರ ತೀರಾ ಭಿನ್ನವಾದವು. ಹೀಗಾಗು ವದು ದೃಷ್ಟಿ ವಿಪರ್ಯಾಸದಿಂದ. ಕೃಷ್ಣನು ತನ್ನ ಚಕ್ರದಿಂದ ಸೂರ್ಯನನ್ನು ಮುಚ್ಚಿದ ಎಂದಾಗ ನನಗೆ ಕಾಣಿಸಿದುದು ಅವನು ಹಾಗೆ ಮುಚ್ಚಿದ ಚಿತ್ರ. ನಿನಗೆ ಕಾಣಿಸಿದುದು ಸ್ಮಶಾನದ ಬುರುಡೆ............

ರಮೆ:— ಥೂ ಏನು ನೀವು ? ನಾನು ಹೇಳಿದುದು ಆ ಬುರುಡೆ ಏನೂ ಅಲ್ಲ. ಸುಳ್ಳು ಎಂದು ಹೇಳಿದೆ, ಅಷ್ಟೆ.

ಮುರಳಿ:— ಸರಿ, ಬಿಡು. ಸುಳ್ಳು ಎಂದು ಹೇಳಿದ ಹೇಳಿಕೆ ಸ್ಮಶಾನದ ಬುರುಡೆಯಷ್ಟು ಕರಾಳವಾಗಿತ್ತು ಎಂದೇ ಇಟ್ಟುಕೊ. ಅದೂ ಆಗುವದು ದೃಷ್ಟಿ ವಿಪರ್ಯಾಸದಿಂದಲೇ.

ರಮೆ:— ಹಾಳು ದೃಷ್ಟಿಗೆ ಬೆಂಕಿ ಹಚ್ಚಿತು. ಆಗಲಿ. ದೃಷ್ಟಿಯನ್ನು ಸರಿ ಪಡಿಸಿಕೊಳ್ಳುತ್ತೇನೆ. ಹೇಳಿ. ಓ, ಅಗೋ, ಕಾಣಿಸುತ್ತಿದೆ. ಶ್ರೀ ಕೃಷ್ಣ ಪರಮಾತ್ಮ ಲೀಲಾಮಾನುಷ ವಿಗ್ರಹನಾಗಿ, ಸುಂದರಾಂಗನಾಗಿ, ನೀಲಮೇಘಶ್ಯಾಮನಾಗಿ, ಕೌಸ್ತುಭಧಾರಿಯಾಗಿ ನಿಂತಿದ್ದಾನೆ............ಅಲ್ಲ, ಅಲ್ಲ........ರಥದಲ್ಲಿ ಕುಳಿತಿ ದ್ದಾನೆ........ಅವನು ತನ್ನ ಬಲಗೈಯನ್ನು ಮೇಲೆತ್ತಿದ್ದಾನೆ ... .... ಚಾವಟಿಯನ್ನು

ಎಡಗೈಯಲ್ಲಿ ಹಿಡಿದು ಕಡಿವಾಣವನ್ನು ಹಲ್ಲಿನಲ್ಲಿ ಕಚ್ಚಿಕೊಂಡಿದ್ದಾನೋ ಅಂತ.... ಹೇಗೂ ಎತ್ತಿದ ಬಲಗೈಯ ತುದಿಯಲ್ಲಿ ತೋರುಬೆರಳು ಮಾತ್ರ ನಿಮಿರಿ ನಿಂತಿದೆ.... ಅದೇ ಬೆರಳು ತಾನೇ ಚಕ್ರವನ್ನು ಹಿಡಿದಿರುವದು ?........ಸರಿ ತಾನೆ ?........ ಆಹಾ........ ಆ ಬೆರಳ ತುದಿಯಲ್ಲಿ ದೇದೀಪ್ಯಮಾನವಾದ ಆ ದಿವ್ಯ ಸುದರ್ಶನವು ಊರಗಲಕ್ಕೆ........ಅಲ್ಲ, ಅಲ್ಲ........ಅಷ್ಟು ಅಗಲಕ್ಕೆ ........ಅಂದರೆ ಆಕಾಶದ ಗಲಕ್ಕೆ ಹರಡಿ ನಿಂತಿದೆ........ಯಾವಾಗಲೂ ಸ್ವತಃ ತಾನೇ ಕೋಟಿ ಸೂರ್ಯ ಪ್ರಭೆಯಿಂದ ಪ್ರಜ್ವಲಿಸುವ ಆ ದಿವ್ಯ ಚಕ್ರವು ಇಂದು ತನ್ನ ಕಾಂತಿಯನ್ನು ಕಳೆದುಕೊಂಡು ಕರ್‍ರಗೆ ಮಸಿಯಂತೆ ಕಾಣಿಸುತ್ತಿದೆ. ಯಾವಾಗ ಅದು ಹೀಗೆ ಆಕಾಶವನ್ನೆಲ್ಲ ಮುಚ್ಚಿಬಿಟ್ಟಿತ್ತೋ........ತೆಗೆದುಕೊಳ್ಳಿ........ಎಲ್ಲೆಲ್ಲೂ ಕತ್ತಲು. ಕಗ್ಗತ್ತಲು. ಸೂರ್ಯನಿಲ್ಲ, ಚಂದ್ರನಿಲ್ಲ, ನಕ್ಷತ್ರಗಳಿಲ್ಲ........ತಡಕ್ ಅಂತ ಒಮ್ಮೆಗೇ ಕತ್ತಲಾಗಿ ಬಿಟ್ಟುದರಿಂದ ಯಾರೂ ದೀಪವನ್ನೂ ಹಚ್ಚಿಲ್ಲ. ಏನಾದರೂ ಬೆಳಕಿದ್ದರೆ ಅದು ಕೃಷ್ಣನ ಕೌಸ್ತುಭದಿಂದ ಮಾತ್ರ ಬರಬೇಕು. ಅವನು ತನ್ನ ಎಡಗೈಯಲ್ಲಿ ಅದನ್ನೂ ಮುಚ್ಚಿಕೊಂಡುಬಿಟ್ಟಿದ್ದಾನೆ. ಇಂತಹ ಘೋರ ಕತ್ತಲಿನಲ್ಲಿ ಜಯದ್ರಥ ಅರ್ಜುನನಿಗೆ ಸ್ಪಷ್ಟವಾಗಿ ಕಾಣಿಸಿಕೊಂಡ........ಹೇಳಿ. ಈಗ ಹೇಳಿ. ನನ್ನ ದೃಷ್ಟಿ ಸರಿಯಾಯಿತೋ ಇಲ್ಲವೋ ಹೇಳಿ.

ಮುರಳಿ:– ನಿನ್ನ ಬಲಗಡೆಗೆ ತಿರುಗಿ ಆ ದಾರಿಯಲ್ಲಿ ಹೋಗು ಎಂದು ಹೇಳಿದುದಕ್ಕೆ ನೀನು ಎಡಗಡೆಗೆ ತಿರುಗಿ ಹೊರಟೆ. ಅದು ತಪ್ಪು, ಪುನಃ ಎರಡು ಬಾರಿ ಬಲಗಡೆಗೆ ತಿರುಗಿ ಹೋಗು ಎಂದುದಕ್ಕೆ ಇನ್ನೊಮ್ಮೆ ಎಡಗಡೆಗೆ ತಿರುಗಿ "ಈಗ ನನ್ನ ದಿಕ್ಕು ಸರಿಯಾಯಿತೋ ಇಲ್ಲವೋ ಹೇಳಿ" ಎಂದು ಹೇಳುತ್ತಿದ್ದೀಯ. ಮಹಾಭಾರತದಲ್ಲಿ ಬರುವ ಇಂತಹ ಅಸಾಮಾನ್ಯ ಘಟನೆಗಳ ಕುರಿತು ಕತೆಯ ಪ್ರಾರಂಭದ ದಿನಗಳಲ್ಲಿ ಬೇಕಷ್ಟು ಚರ್ಚೆ ನಡೆಸಿದ್ದೇವೆ. ಇಂಥವುಗಳನ್ನು "ಆಗಿರಲು ಸಾಧ್ಯ" ಎಂದು ಸ್ವೀಕರಿಸುವಷ್ಟು ವಿಚಾರ ಮಥನ ಮಾಡಿ ಬಂದ ತಿಳಿವಿನ ಪಕ್ವತೆ ಇಲ್ಲವಾದರೆ "ಏನೋ, ಇದ್ದಿರಬಹುದೇನೋ" ಎಂದು ಸ್ವೀಕರಿಸುವಷ್ಟು ಸರಳತೆಯಾದರೂ ಇರಬೇಕು. ಆದರೆ ನಿಮ್ಮಂತಹವರಿಗೆ "ಹೀಗಿದ್ದಿರಲು ಸಾಧ್ಯವೇ ಇಲ್ಲ" ಎನ್ನುವ ಪೂರ್ವಗ್ರಹ ಪೀಡನೆಯ ಫಲವಾದ ಒರಟುತನ ಇದೆ. ಸಾಕಷ್ಟು ಪ್ರಬಲವಾದ ಕಾರಣಗಳ ಬಲವನ್ನು ಪಡೆದಿರುವದರಿಂದೇನಾದರೂ ನಿಮ್ಮ ಬುದ್ಧಿ ಹೀಗೆ ಒರಟಾಗಿರುವದೇ ಎಂದರೆ ಅದೂ ಅಲ್ಲ. "ನನಗೆ ಕಾಣಿಸುತ್ತಿಲ್ಲ; ಆದುದರಿಂದ ಅದು ಇಲ್ಲ" ಎಂಬ ಶಠತನದ ಒರಟು ನಿಮ್ಮದು.

ರವಿ:– "ನಿಮ್ಮ ಬುದ್ಧಿ ಒರಟು; ನಿಮ್ಮದು ಶಠತನ" ಎಂದೆಲ್ಲ ನಮ್ಮ ಅಭಿಪ್ರಾಯವನ್ನು ಟೀಕಿಸುವ ನಿಮ್ಮ ವಾದ ಬಹಳ ಸುಸಂಸ್ಕೃತವಾದದ್ದೋ ?

ಮುರಳಿ:– ನಿಮ್ಮ ಅಭಿಪ್ರಾಯವನ್ನು ನಾನು ಟೀಕಿಸಲಿಲ್ಲ. ಆದರ

ಹಿನ್ನೆಲೆಯನ್ನು ವಿಮರ್ಶಿಸಲು ಪ್ರಯತ್ನಿಸಿದೆ, ಅಷ್ಟೆ. ಒಂದು ಊರಿನ ಬೆಳೆ ಏನು ಎಂದು ತರ್ಕಿಸುವಾಗ ಅಲ್ಲಿನ ಭೂಮಿ ಮರುಭೂಮಿಯೇ, ಜೌಗು ಪ್ರದೇಶವೇ, ಬೆಟ್ಟದ ಕಣಿವೆಯೇ, ಮೈದಾನವೇ ಎಂದು ಕಂಡುಕೊಂಡರೆ ಉತ್ತರ ಸಿಕ್ಕುವದು ಸುಲಭವಾಗುತ್ತದೆ ಎಂಬದಕ್ಕಾಗಿ.

ರಮೆ:– ನಿಮ್ಮ ಅಭಿಪ್ರಾಯಕ್ಕೆ ವಿರೋಧವಾದುದನ್ನು ಹೀಗೆ ಕವಿತ್ವದ ಭಾಷೆಯಲ್ಲಿ ಟೀಕಿಸಿಬಿಟ್ಟರೆ ನಿಮ್ಮ ವಾದ ಗೆದ್ದಂತಾಗುತ್ತದೆ ಎಂಬ ನಿಮ್ಮ ವ್ಯರ್ಥ ಪ್ರಯತ್ನ ಏಕೆ? ನನಗೂ ನಿಮಗೂ ಇದೇ ವ್ಯತ್ಯಾಸ. ನನ್ನ ಅಭಿಪ್ರಾಯ ಎಷ್ಟು ಪುಷ್ಟವಾಗಿದ್ದರೂ ಅದನ್ನು ವ್ಯಕ್ತಪಡಿಸುವ ನನ್ನ ಭಾಷೆ ಬಿಗಿಯಿಲ್ಲದೆ ಹೋಗುವದ ರಿಂದಲೇ ಪ್ರತಿ ಬಾರಿಯೂ ನಾನು ವಾದದಲ್ಲಿ ನಿಮಗೆ ಸೋಲುತ್ತಿದ್ದೇನೋ ಅನಿಸುತ್ತದೆ. ನೀವು ಕೇವಲ ಮಾತಿನ ಚಮತ್ಕಾರದಲ್ಲಿಯೇ ಎಂತಹ ತೀಕ್ಷ್ಣವಾದ ವಿರೋಧ ಅಭಿಪ್ರಾಯಗಳನ್ನೂ ಸರಿ ಎಂದು ಸ್ಥಾಪನೆ ಮಾಡಿಬಿಡುತ್ತೀರಿ.

ಮುರಳಿ:– ನನ್ನ ಒಂದು ತಪ್ಪು ಅಭಿಪ್ರಾಯವನ್ನು ಬೇರೆಯವರು ತಿದ್ದಿದರೆ ನನ್ನ ವ್ಯಕ್ತಿತ್ವವೇ ಅವರದಕ್ಕೆ ಶರಣಾಗಿಬಿಟ್ಟಿತೆಂದು ಭಾವಿಸುವದು ನನ್ನಲ್ಲಿ ಅಹಂಭಾವ ಅವಶ್ಯಕತೆಗಿಂತ ಮಿತಿಮೀರುವಷ್ಟಿದೆ ಎಂಬದನ್ನು ಸೂಚಿಸುತ್ತದೆ.

ರಮೆ:– ನನಗೇನೂ ಅಂತಹ ಅಹಂಭಾವ ಇಲ್ಲ. ಗೊತ್ತಾಯಿತಾ ?

ಮುರಳಿ:– ಅಹಂಭಾವ ಯಾವ್ಯಾವ ವಿಧದಲ್ಲಿ ವ್ಯಕ್ತವಾಗುತ್ತದೆಂದು ನಮಗೆ ಗೊತ್ತಾಗುವದಿಲ್ಲ. ನನಗೂ ನಿನಗೂ ಈ ಹಿಂದೆ ಹಲವು ಬಾರಿ ವಾದ ಉಂಟಾ ಗಿದೆ. ಪ್ರತಿ ಬಾರಿಯೂ ಕೂಡ ನಿನ್ನ ಅಭಿಪ್ರಾಯ ತಪ್ಪು ಎಂಬದನ್ನು ನೀನೇ ಒಪ್ಪುವಂತೆ ವಿವರಿಸಿ ತೋರಿಸಿದ್ದೇನೆ. ಆಗ ವಿಧಿಯಿಲ್ಲದೆ ನಿನ್ನದು ತಪ್ಪೆಂದು ನೀನು ಒಪ್ಪಿಕೊಂಡರೂ ಅನಂತರ ಯಾವಾಗಲೋ ನಿನಗೆ ಅನಿಸುತ್ತದೆ – 'ಛೆ, ನಾನು ಪ್ರತಿ ಬಾರಿಯೂ ಇವರಿಗೆ ಹೀಗೆ ಸೋಲುತ್ತಿದ್ದೇನಲ್ಲಾ' – ಎಂದು. ಅಂದರೆ ನಿನ್ನ ಅಭಿಪ್ರಾಯ ತಪ್ಪಾದುದನ್ನು ಸರಿಪಡಿಸಿಕೊಂಡೆ ಎಂದು ನೀನು ಭಾವಿಸುವದರ ಬದಲು "ನಾನು ಇವರಿಗೆ ಸೋಲುತ್ತಿದ್ದೇನೆ" ಎಂದು ಕಲ್ಪಿಸಿ ಕೊಳ್ಳುವಂತಾಗುವದೂ ಅಹಂಭಾವದ ಲಕ್ಷಣ.

ರಮೆ:– ಆಗಲಿ. ವಿನೀತಳಾಗಿ ಒಪ್ಪಿಕೊಳ್ಳುತ್ತೇನೆ. ಕೃಷ್ಣ ಚಕ್ರವನ್ನು ಬಿಟ್ಟು ಸೂರ್ಯನನ್ನು ಉರುಳಿಸಿ....ಅಲ್ಲ, ಅಲ್ಲ....ಚಕ್ರವನ್ನು ಎಸೆದು ಸೂರ್ಯ ನನ್ನು ಮರೆಮಾಡಿ........ಅಥವಾ ಚಕ್ರವನ್ನು ಕೈಯಲ್ಲಿಯೇ ಹಿಡಿದುಕೊಂಡು ಮೇಲೆತ್ತಿ ಸೂರ್ಯನನ್ನು ಮರೆಮಾಡಿ ಕತ್ತಲಾವರಿಸುವಂತೆ ಮಾಡಿಬಿಟ್ಟ. ಮುಂದಕ್ಕೆ ಅಪ್ಪಣೆ ಕೊಡಿಸಿ.

ಮುರಳಿ:– ಇದೂ ವಿಸಯುವಲ್ಲ. ಕೆಣಕಲ್ಪಟ್ಟ ಅಹಂಭಾವವು ಅಸಹಾಯು ಕತೆಯಿಂದ ನರಳುವ ಲಕ್ಷಣವಿದು. ತಾನೂ ವಾದ ಮಾಡಲಾರದೆ ಇನ್ನೊಬ್ಬರ ವಾದವನ್ನು ಒಪ್ಪಲೂ ಸಾಧ್ಯವಾಗದೆ ಆಡುವ ಮಾತು.

ರಮೆ:– ಈಗ ನಾನು ಏನು ಮಾತನಾಡಿದರೆ ಈ ಲೋಕದಲ್ಲಿ ಬದುಕಲು ಯೋಗ್ಯಳೆನಿಸಿಕೊಳ್ಳುತ್ತೇನೆ ಹೇಳಿಬಿಡಿ, ಹೋಗಲಿ.

ಮುರಳಿ:– ಸಿಟ್ಟಾಗಬೇಡ ರಮಾ. ನಾವು ವಾದ ಮಾಡುತ್ತಿರುವ ಅಂಶವೇ ಅಷ್ಟು ಜಟಿಲವಾದುದು. ಕೃಷ್ಣ ಆ ರೀತಿ ಮಾಡಿದ ಎಂಬದನ್ನು ಎಷ್ಟರಮಟ್ಟಿಗೆ ಸುಳ್ಳು ಎಂದು ಹೇಳಬಹುದೋ ಅವನು ಹಾಗೆ ಮಾಡಲಿಲ್ಲ ಎಂದು ಹೇಳುವ ದನ್ನೂ ಅಷ್ಟೇ ಬಲವಾಗಿ ಸುಳ್ಳು ಎಂದು ಹೇಳಲೂ ಸಾಧ್ಯವಿರುವ ಪರಿಸ್ಥಿತಿ ಇಲ್ಲಿದೆ. ಇದು ವಾದಕ್ಕೆ ಯೋಗ್ಯವಾದ ವಿಚಾರವೇ ಅಲ್ಲ. ಹಿಂದೆ ನಾನು ಹಲವು ಬಾರಿ ಹೇಳಿದಂತೆ ಮಹಾಭಾರತದ ಘಟನೆಗಳನ್ನು ಸ್ವೀಕರಿಸುವಾಗ ಶುಷ್ಕವಾದ ತರ್ಕ ವನ್ನು ಆಧರಿಸುವದಕ್ಕಿಂತಲೂ ಫಲಪ್ರದವಾದ ಕಲ್ಪನೆಯನ್ನು ಆಧರಿಸುವದು ವಿಹಿತ.

ರಮೆ:– ಆದರೆ ಕಲ್ಪನೆಗೂ ಮೀರಿದ ಇಂತಹ ವಿಷಯುಗಳನ್ನು ಹೇಗಪ್ಪಾ ಒಪ್ಪುವದು ?

ಮುರಳಿ:– ನಿನ್ನ ಕಲ್ಪನೆ ನಿನ್ನ ತರ್ಕಗಳ ಕೆಲವೊಂದು ಮಿತಿಯ ಕಡಿವಾಣ ದಿಂದ ಬಂಧಿತವಾಗಿದೆ. ದ್ರಾವಿಡ ಪ್ರಾಣಾಯಾಮ ಬೇಡ. ವಿಚಾರ ಮಾಡೋಣ, ಇರು. ಇಂತಹುದೇ ವಿಚಾರದಲ್ಲಿ ಈ ಹಿಂದೆ ಹಲವು ಬಾರಿ ಹೇಳಿರುವದಕ್ಕಿಂತ ಈಗ ಹೊಸದಾಗಿ ಏನೂ ಹೇಳಲು ಸಿಕ್ಕುವದಿಲ್ಲ. ಹಿಂದೆ ಮಾಡಿದ ವಿಮರ್ಶೆ ಗಳನ್ನು ನೀನು ಮರೆತಿರುವದರಿಂದ ಈಗ ಪುನಃ ಅದನ್ನೇ ಜ್ಞಾಪಿಸಿಕೊಳ್ಳಬೇಕಾ ಗಿದೆ. ವೈಜ್ಞಾನಿಕ ಎಂದು ಈಗಿನ ನೀವುಗಳು ಕರೆದುಕೊಳ್ಳುವ ನಿಮ್ಮ ವಿಚಾರ ಧಾರೆ ಎಷ್ಟೊಂದು ಆಳವಾಗಿ ನಿಮ್ಮಲ್ಲಿ ಬೇರೂರಿಬಿಟ್ಟಿದೆಯೆಂದರೆ ನೀವಾಗಿಯೇ ಅದನ್ನು ಕಿತ್ತುಹಾಕಬೇಕೆಂದು ಮಾಡುವ ಪ್ರಯತ್ನವನ್ನು ಕೂಡ ಅದು ವಿಫಲ ವಾಗಿಸುತ್ತದೆ. ಪೂರ್ವಗ್ರಹಪೀಡಿತವಾದ ಭಾವನೆಗಳಿರುವ ಯಾರೇ ಆದರೂ ಅಂತಹ ಭಾವನೆಯ ಸರಿ–ತಪ್ಪುಗಳನ್ನು ವಿಮರ್ಶೆ ಮಾಡಲು ಅನರ್ಹರಾಗುತ್ತಾರೆ. ಉದಾಹರಣೆಗೆ, ಈ ಭೂತ, ಪಿಶಾಚ ಮುಂತಾದವುಗಳು ಇವೆಯೆಂದು ಬಹಳ ವಾಗಿ ನಂಬಿರುವವರು ರಾತ್ರಿ ಕಾಲದಲ್ಲಿ ಅಸ್ಪಷ್ಟವಾಗಿ ಕಾಣುವ ಮರದ ತುಂಡು, ಮನುಷ್ಯ ಮೊದಲಾದ ಎಲ್ಲವನ್ನೂ ಪಿಶಾಚವೆಂದೇ ನಂಬಿಕೊಳ್ಳುತ್ತಾರೆ. ಇವು ಗಳಲ್ಲಿ ನಂಬಿಕೆ ಇಲ್ಲದವರು ನಿಜವಾದ ಪಿಶಾಚದ ಚೇಷ್ಟೆಗಳನ್ನು ಕೂಡ ಹಾಗೆಂದು ನಂಬುವದಿಲ್ಲ. ಈ ವಿಶ್ವವು ಈ ವಿಶ್ವದಷ್ಟೇ ದೊಡ್ಡದಾದ ಅದ್ಭುತ ರಹಸ್ಯಗಳಿಂದ

ಕೂಡಿದೆ. ಅದನ್ನು ಸರಿಯಾಗಿ ಎಲ್ಲವನ್ನೂ ತಿಳಿದುಕೊಳ್ಳಲು ಮನುಷ್ಯರಾದ ನಾವು ಬಹಳ ಸಣ್ಣವರೂ ಅಲ್ಪಾಯುಷಿಗಳೂ ಆಗಿದ್ದೇವೆ. ಹಾಗಿರುವಾಗ ಇಲ್ಲಿನ ಒಂದು ವಿಚಾರ ಹೀಗೇ ಸರಿ ಎಂದು ಹಟ ತೊಟ್ಟು ವಾದಿಸುವದು ತಪ್ಪಾಗುತ್ತದೆ....

ರಮೆ:— ಹೌದು. ಆದರೆ ನೀವು ಹೇಳುತ್ತಿರುವ ಈ ಎಲ್ಲ ಮಾತುಗಳೂ ನನಗೆ ಎಷ್ಟು ಅನ್ವಯಿಸುತ್ತವೋ ನಿಮಗೂ ಅಷ್ಟೇ ಅನ್ವಯವಾಗಬೇಕು ತಾನೆ ?

ಮುರಳಿ:— ಖಂಡಿತ ಹೌದು. ಆದರೆ ಇಲ್ಲಿ ನಿನಗೂ ನನಗೂ ವ್ಯತ್ಯಾಸ ಇದೆ. ಒಂದು ವಿಚಾರ ಕೇವಲ ಅಸಂಭವ ಎಂದು ಪಟ್ಟುಹಿಡಿದು ಕುಳಿತಿರುವ ವಳು ನೀನು........

ರಮೆ:— ಅದು ನಡೆದೇ ಇದೆ ಎಂದು ಪಟ್ಟು ಹಿಡಿದು ಕುಳಿತಿರುವವರು ನೀವು !

ಮುರಳಿ:— ಅದು ನಡೆದೇ ಇಲ್ಲ ಎಂದು ಹೇಳುವದು ಸರಿಯಲ್ಲ ಎಂಬದಷ್ಟೇ ನನ್ನ ವಾದ. ನಡೆದೇ ಇದೆ ಎಂದು ನೀನು ಒಪ್ಪಿಕೊಳ್ಳುವದು ಬೇಡ. ನಡೆದಿರಲೂ ಬಹುದೇನೋ ಎಂಬಷ್ಟು ನೀನು ಒಪ್ಪಿದರೆ ಸಾಕು. ಅನಂತರ ನಾವು ನನ್ನ–ನಿನ್ನ ಬುದ್ಧಿಶಕ್ತಿಯ ಆಧಾರದಿಂದ ಅದು ನಡೆದಿದೆಯೋ ಇಲ್ಲವೇ ಎಂಬದನ್ನು ತೀರ್ಮಾನಿಸುವದನ್ನು ಕೈಬಿಟ್ಟು ಅಂತಹ ಒಂದು ಪ್ರಸಂಗವನ್ನು ಉಲ್ಲೇಖಿಸಿರುವ ಗ್ರಂಥ ಕರ್ತನ ಬುದ್ಧಿಶಕ್ತಿ, ಉದ್ದೇಶ, ಆತನ ವ್ಯಕ್ತಿತ್ವದ ಔನ್ನತ್ಯ–ಮೊದಲಾದವುಗಳ ಹಿನ್ನೆಲೆಯಲ್ಲಿ ಈ ಉಲ್ಲೇಖ ಗ್ರಾಹ್ಯವೇ ಅಗ್ರಾಹ್ಯವೇ ಎಂಬದನ್ನು ಪರೀಕ್ಷಿಸ ಬಹುದು.

ರಮೆ:— ಅರ್ಥ ಇಷ್ಟು. ನಾನೂ – ನೀವೂ ಇಬ್ಬರೂ ವಿಮರ್ಶೆ ಮಾಡುವಲ್ಲಿ ಸಮಾನ ಬಲವುಳ್ಳವರು ಎಂಬದನ್ನು ನಾನು ಮೊದಲು ಒಪ್ಪಿಕೊಂಡು ಅಹಂಭಾವ ದಲ್ಲಿ ಮೈ ಮರೆಯಬೇಕು. ಆಗ ನೀವು ವೇದವ್ಯಾಸರನ್ನು ನಿಮ್ಮ ಪರವಾದ ವಕೀಲಿಗೆ ಕರೆದು ತಂದು "ನೋಡು, ಇವರು ನನ್ನ ಪರ ವಹಿಸುವದರಿಂದ ನನ್ನ ವಾದವೇ ಶ್ರೇಷ್ಠ" ಎಂದು ನೀವು ಹೇಳಿಕೊಳ್ಳಬೇಕು. ಇದೆಲ್ಲ ಪ್ರಯೋಜನಕ್ಕೆ ಬಾರದ ವಾದಗಳು. ಇಲ್ಲಿ ಚರ್ಚೆಯಲ್ಲಿರುವ ಘಟನೆ ನಡೆದಿದೆಯೋ ಇಲ್ಲವೋ ಎಂಬ ವಿಮರ್ಶೆಯನ್ನು ಯಾವದೇ ಒಂದು ತೀರ್ಮಾನಕ್ಕೆ ತಂದು ನಮಗಾಗ ಬೇಕಾದುದು ಏನೂ ಇಲ್ಲ. ನಾವು ಇಂತಹ ಘಟನೆಗಳ ಕುರಿತು ಯಾವ ತೀರ್ಮಾನಕ್ಕೆ ಬಂದರೂ ಕೂಡ ಅವು ಗತಕಾಲದ ರಹಸ್ಯವೇ ಆಗಿ ಉಳಿಯುವದು ತಪ್ಪುವದಿಲ್ಲ. ಮತ್ತೇಕೆ ಈ ಪರಿಶ್ರಮ ? ಕತೆಯನ್ನು ಮುಂದುವರಿಸಿ.

ಮುರಳಿ:— ಪ್ರಯಾಣ ಮಾಡುವಾಗ ಕಾರಿನ ಒಂದು ಚಕ್ರದ ಗಾಳಿ ಹೊರಟುಹೋಗಿ ಅದನ್ನು ಸರಿಪಡಿಸಲು ಬಹಳ ಸಮಯ ಪ್ರಯತ್ನಿಸಿದ ಮೇಲೆ

"ನಮಗೇಕೆ ಈ ಪರಿಶ್ರಮ ? ಇಂಜಿನ್ ಸರಿಯಾಗಿದೆ, ಆಸನ ಸರಿಯಾಗಿದೆ. ಚೆನ್ನಾಗಿ ಕುಳಿತು ಕಾರನ್ನು ಬಿಡೋಣ" ಎಂದು ಹೇಳುವಂತೆ ಮಾತನಾಡುತ್ತಿದ್ದೀಯ. ಕತೆ ಕೇಳುವದರ ಪ್ರಯೋಜನವನ್ನೇ ಮರೆತು ಕತೆ ಕೇಳಲು ಬಯಸಿದ್ದೀಯ.

ರಮೆ:– ಇನ್ನೇನು ಮಾಡುವದು ? ಅರ್ಧ ಕತೆ ಕೇಳಿ ಆಗಿದೆ. ಕತೆಯ ಜೊತೆಯಲ್ಲಿ ನಿಮ್ಮ ಚಮತ್ಕಾರದ ತರ್ಕ ಶಕ್ತಿಯ ಕತೆ ಕೇಳದಿದ್ದರೆ ಕತೆಯನ್ನು ಪೂರ್ತಿ ಮಾಡುವದೇ ಇಲ್ಲ ಎಂದು ಹೆದರಿಸುತ್ತಿದ್ದೀರಿ. ಹೋಗಲಿ, ಹೇಳಿ. ಕೃಷ್ಣನು ಚಕ್ರ ಹಿಡಿದು ಸೂರ್ಯನನ್ನು ಮರೆಮಾಡುವದು ಹೇಗೆ ಸಾಧ್ಯವಾಯಿತು ಎಂಬದನ್ನು ಸ್ವಲ್ಪದರಲ್ಲಿ ಹೇಳಿಬಿಡಿ. ನಾನೂ ಒಪ್ಪಿಕೊಂಡುಬಿಡುತ್ತೇನೆ. ಆಮೇಲಾದರೂ ಕತೆ ಮುಂದುವರಿಸಿ.

ಮುರಳಿ:– ನಿನ್ನ ಮೂರ್ಖತನಕ್ಕಾಗಿ ಪಶ್ಚಾತ್ತಾಪ ಪಟ್ಟಷ್ಟೇ ನಿನ್ನ ನಿಷ್ಕಪಟತನಕ್ಕಾಗಿ ಸಂತೋಷಿಸುತ್ತೇನೆ. ನೀನು ನನ್ನೊಂದಿಗೆ ಹೀಗೆ ಮಾತನಾಡುವಂತೆ ಇತರರಲ್ಲಿ ಆಡಿದ್ದರೆ ಅವರು ನಿನಗೆ ಕತೆ ಹೇಳುವದರ ಬದಲು ನಿನ್ನ ಕತೆಯನ್ನೇ ಬದಲಿಸುತ್ತಿದ್ದರು ! ಇರಲಿ, ಸ್ವಲ್ಪ ವಿಮರ್ಶೆ ಮಾಡೋಣ. ಮನಸ್ಸನ್ನು ತೆರೆದು ಕೇಳು.

ಸಾವಿರಾರು ವರ್ಷಗಳ ಹಿಂದಿನ ಕಾಲದಲ್ಲಿ ನಡೆದುದೆನ್ನಲಾದ ಒಂದು ಅತಿ ಪ್ರಕೃತಿ ಘಟನೆಯು ಸರಿಯೋ ತಪ್ಪೋ ಎಂದು ಹೇಳಲು ಅಂತಹುದೇ ಘಟನೆಯ ವಿವರಗಳನ್ನು ಆಧರಿಸಿ ಈಗ ವಿಮರ್ಶಿಸುವದು ಸಾಧ್ಯವಿಲ್ಲ. ಒಬ್ಬನು ಆನೆಯನ್ನು ಹೆಗಲ ಮೇಲೆ ಹೊರುತ್ತಿದ್ದ ಎನ್ನುವ ಹಿಂದಿನ ಒಂದು ಘಟನೆಯನ್ನು ವಿಮರ್ಶಿಸುವಾಗ ನಮಗೆ ಗೊತ್ತಿರುವ ಈಗಿನ ಒಬ್ಬನು ಬಲವಾದ ಎತ್ತನ್ನು ಹೊರುತ್ತಿದ್ದಾನೆ ಎಂಬದರ ಆಧಾರದ ಮೇಲೆ ಮಾತ್ರವೇ ಹಿಂದಿನ ಆ ಘಟನೆಯನ್ನು ವಿಮರ್ಶಿಸಬಹುದಷ್ಟೆ. ಚಕ್ರದಂತಹ ಒಂದು ಆಯುಧವನ್ನು ಎತ್ತಿ ಹಿಡಿದು ಸೂರ್ಯ ಮಂಡಲದ ಬೆಳಕೇ ಕೆಳಗೆ ಬೀಳದಂತೆ ತಡೆಯಲಾಯಿತು ಎಂಬದು ನಮ್ಮ ಇಂದಿನ ಕಲ್ಪನೆಗೆ ಮೀರಿದ ವಿಷಯ, ನಿಜ. ಆದರೆ ಒಂದು ವಿಷಯವನ್ನು ನಾವು ಕಲ್ಪಿಸಲಾರದುದರಿಂದಲೇ ಅಂತಹ ವಿಷಯವು ಇರಲಾರದೆಂದು ತೀರ್ಮಾನಿಸುವದೂ ದೊಡ್ಡ ತಪ್ಪಾಗುತ್ತದೆ. ಕಲ್ಪನೆಯ ಕುರಿತು ಒಂದು ನಿದರ್ಶನವನ್ನು ತೆಗೆದುಕೊಳ್ಳೋಣ. ನಾಲ್ಕು ಚಕ್ರದ ಬಂಡಿ ಅಥವಾ ಎರಡು ಚಕ್ರಗಳು ಮತ್ತು ಎರಡು ಅಥವಾ ಒಂದು ಪ್ರಾಣಿ– ಹೀಗೆ ನಾಲ್ಕು ಅಥವಾ ಮೂರು ಬಿಂದುಗಳಲ್ಲಿ ಆಧರಿತವಾದ ಒಂದು ಬಂಡಿ ಓಡಬಲ್ಲದೆಂಬದನ್ನು ಕಲ್ಪಿಸಿದುದು ಆಶ್ಚರ್ಯದ ವಿಷಯವಲ್ಲ. ಆದರೆ ಕೇವಲ ಎರಡೇ ಚಕ್ರಗಳಿರುವ ಒಂದು ಬಂಡಿ ಓಡಬಲ್ಲುದು, ಹಾಗೂ ಅದರ ಮೇಲೆ ಸವಾರನೊಬ್ಬ ಕುಳಿತು ಮಾರ್ಗವನ್ನು ಕ್ರಮಿಸಬಲ್ಲ ಎಂದು

ಕಲ್ಪಿಸಿದುದು ನಿಜಕ್ಕೂ ಅದ್ಭುತವಲ್ಲವೆ? ಎರಡು ಚಕ್ರಗಳ ಒಂದು ಬಂಡಿ ತನ್ನಷ್ಟಕ್ಕೇ ತಾನು ನಿಲ್ಲಲು ಅಸಮರ್ಥವಾಗಿರುವಾಗ ಅಂತಹದರ ಮೇಲೆ ಕುಳಿತು ತಾನು ಸವಾರಿ ಮಾಡಬಲ್ಲೆ ಎಂದು ಈ ಬಗೆಯ ಪ್ರಯಾಣದಲ್ಲಿ ಮೊದಲಿಗ ಕಲ್ಪಿಸಿದಾಗ ಇತರರು ಅವನದು ಎಂತಹ ಹುಚ್ಚು ಕಲ್ಪನೆ ಎಂದು ಹೇಳಿದ್ದಿರಲು ಸಾಧ್ಯವಿದೆ. ಆದರೆ ಇಂದು ಎರಡು ಚಕ್ರದ ಸೈಕಲು–ಏಕೆ ಒಂದೇ ಚಕ್ರದ ಸೈಕಲಿನಲ್ಲಿ ಕೂಡ–ಸವಾರರು ಮಾಡುವ ಗತಿಯ ಚಮತ್ಕಾರಗಳನ್ನು ನೋಡುವಾಗ ನಮಗೆ ಅಷ್ಟೊಂದು ಅದ್ಭುತವೆನಿಸದಿದ್ದರೂ ಹಾಗೆ ಮಾಡಬಹುದೆಂದು ಮೊದಲ ಬಾರಿಗೆ ಕಲ್ಪಿಸಿಕೊಂಡವನ ಕಲ್ಪನೆ ಯಾವ ಅದ್ಭುತಕ್ಕಿಂತ ಕಡಿಮೆಯಾದುದು? ಕ್ರಮಶಃ ಈ ಸೈಕಲುಗಳೇನಾದರೂ ಸಂಪೂರ್ಣವಾಗಿ ಕಣ್ಮರೆಯಾಗಿ ಹೋಗಿಬಿಟ್ಟು ಒಂದೆರಡು ತಲೆಮಾರುಗಳು ಕಳೆದ ಮೇಲೆ ಈ ಸೈಕಲ್ ಸವಾರಿಯ ಅದ್ಭುತ ಗತಿಗಳನ್ನು ವಿವರಿಸಿದ ಒಂದು ಗ್ರಂಥವನ್ನು ಒಬ್ಬಾತ ಓದಿದರೆ ಈಗ ನೀನು ಕೃಷ್ಣನ ಚಕ್ರದ ಅದ್ಭುತವನ್ನು ಎಷ್ಟು ಹಾಸ್ಯಾಸ್ಪದವೆಂದು ಹೇಳುತ್ತಿದ್ದೀಯೋ, ಅವನೂ ಅದನ್ನು ಅಷ್ಟೇ ಹಾಸ್ಯಾಸ್ಪದವೆಂದು ಹೇಳುವ ಸಾಧ್ಯತೆ ಇದೆ. ಈ ಶತಮಾನದಲ್ಲಿ ವಿಮಾನಗಳ ಆವಿಷ್ಕಾರವಾಗುವದಕ್ಕೆ ಮುಂಚೆ ಪುರಾಣದಲ್ಲಿ ಬರುವ ವಿಮಾನಗಳ ಪ್ರಸ್ತಾಪವೂ ಇಷ್ಟೇ ಹಾಸ್ಯಾಸ್ಪದವೆನಿಸುತ್ತಿತ್ತು. ಮಂತ್ರಾಸ್ತ್ರಗಳ ಮಹಿಮೆ, ಬಾಂಬುಗಳ ಆವಿಷ್ಕಾರಕ್ಕೆ ಮುಂಚೆ, ದಿವ್ಯ ದೃಷ್ಟಿಯ ಪ್ರಸ್ತಾಪ ಟೆಲಿವಿಜನ್‌ನ ಆವಿಷ್ಕಾರಕ್ಕೆ ಮುಂಚೆ, ಪರಲೋಕಗಳ ಯಾತ್ರೆಯ ಪ್ರಸ್ತಾಪ, ಚಂದ್ರಲೋಕದ ಪ್ರಯಾಣಕ್ಕೆ ಮುಂಚೆ– ಹೀಗೆ ನೂರು ಪ್ರಸ್ತಾಪಗಳು ಅಂದಿನ ಕವಿಗಳ ಹುಚ್ಚು ಕಲ್ಪನೆಯೆಂದೂ ಹಾಸ್ಯಾಸ್ಪದ ನಿರೂಪಣೆಗಳೆಂದೂ ಪರಿಗಣಿಸಲ್ಪಟ್ಟದ್ದವು ಎಂಬದನ್ನು – ಬಹುಶಃ ನೀನೂ ತಿಳಿದಿರಬಹುದು. ಪುರಾಣಗಳ ಕೆಲವು ಪ್ರಸ್ತಾಪಗಳು ಈ ರೀತಿ ನಿಜ ಕಥನಗಳೆಂದು ಸಿದ್ಧಗೊಂಡ ಮಾತ್ರಕ್ಕೆ ಅವುಗಳಲ್ಲಿ ಬರುವ ಎಲ್ಲವನ್ನೂ ನಿಜವೆಂದೇ ನಂಬಬೇಕೇ ಎಂದು ನೀನು ಕೇಳಬಹುದು. ನಮ್ಮ ಕನಸಿನ ಕಲ್ಪನೆಗಳನ್ನು ಕೂಡ ಮೀರುವಂತಹ ಪ್ರಸ್ತಾಪಗಳು ಇಂದು ಕೇವಲ ಸಹಜವಾದ ವಿಷಯಗಳಾಗಿ ನಮ್ಮ ಕಣ್ಣಮುಂದೆಯೇ ಕಾಣಿಸುತ್ತಿರುವಾಗ, ಪುರಾಣಗಳ ಪ್ರಸ್ತಾಪಗಳಲ್ಲಿ ದೋಷ ಇರುವದಕ್ಕಿಂತ ಹೆಚ್ಚಾಗಿ ನಮ್ಮ ಕಲ್ಪನೆ ಅಥವಾ ತರ್ಕ ಶಕ್ತಿಯಲ್ಲಿಯೇ ದೋಷವಿದೆಯೆಂದು ನಾವು ನಂಬಬೇಕಾದುದು ಅವಶ್ಯವಾಗುತ್ತದೆ.

ಅತಿ ಪ್ರಕೃತಿ ಘಟನೆಗಳು ಇಂದು ಕೂಡ ಪೂರ್ತಿಯಾಗಿ ಕಣ್ಮರೆಯಾಗಿಲ್ಲ ಎಂಬದನ್ನು ನಾವು ಒಪ್ಪಬೇಕು. ಸಿದ್ಧಿಗಳ ವಿಷಯ ನಾವು ಸಣ್ಣ ಪ್ರಮಾಣದಲ್ಲಿಯೇ ಆದರೂ ಇಂದೂ ನೋಡುತ್ತಿದ್ದೇವೆ. ಗಾಳಿಯಲ್ಲಿ ಬರಿಗೈಯನ್ನು ಬೀಸಿ

ಅಂಗೈಯಲ್ಲಿ ಸಾಲಿಗ್ರಾಮುವನ್ನೋ ಶಿವಲಿಂಗವನ್ನೋ, ಚಿನ್ನದ ನಾಣ್ಯವನ್ನೋ ಅಥವಾ ಇತರ ವಸ್ತುಗಳನ್ನೋ ಪಡೆಯುವದನ್ನೂ ನಾವು ಅಚ್ಚರಿಯಿಂದ ನೋಡಿದರೂ ಕೂಡ ಅದು ಪವಾಡ ಎಂದು ನಮಗೆ ತಲೆಮಾರುಗಳಿಂದ ಕೇವಲ ಪರಿಚಿತವಾಗಿರುವ ವಿಷಯ ಎಂದು ವಿಶೇಷ ಅಚ್ಚರಿಗೊಳ್ಳದೆ ಸ್ವೀಕರಿಸುತ್ತಿದ್ದೇವೆ. ಮಂತ್ರ ಅಥವಾ ಶಾಸ್ತ್ರೀಯವಾದ ಸಂಗೀತದಿಂದ ಮಳೆ ಬರಿಸುವದು, ದೀಪವನ್ನು ಬೆಳಗಿಸುವದು ಸಾಧ್ಯ ಎಂಬದನ್ನು ಕೇಳಿದ್ದೇವೆ. ಕೇವಲ ಭಸ್ಮದ ಪ್ರಯೋಗದಿಂದ, ಆರೋಗ್ಯವಂತರಾಗಿರುವ ವ್ಯಕ್ತಿಗಳೆಲ್ಲರೂ ಮಂಕು ಕವಿದು ಮೈಮರೆತು ಮಲಗುವದು ಸಾಧ್ಯವಾಗಿರುವದನ್ನು ನೋಡಿದ್ದೇವೆ. ಇಷ್ಟಾಗಿ ಈ ಎಲ್ಲ ಅತಿ ಪ್ರಕೃತಿ ಘಟನೆಗಳನ್ನು ಮಾಡುವವರು ಕೇವಲ ಸಾಮಾನ್ಯ ಮನುಷ್ಯರು – ಹಾಗಿರುವಾಗ, ತುರುಗಾಹಿಗಳ ಸಾಮಾನ್ಯ ಹಳ್ಳಿಯೊಂದರಲ್ಲಿ ಹುಟ್ಟಿದ ಒಬ್ಬಾತ ದೇವಾಧಿದೇವನೆನಿಸುವಷ್ಟು ಶ್ರೇಷ್ಠ ಮಟ್ಟಕ್ಕೆ ಏರಿದಾಗ ಅವನು ಏನನ್ನು ಸಾಧಿಸಲಿಕ್ಕಿಲ್ಲ ಎಂದು ಹೇಳುವದು ಕಷ್ಟ. ಯೋಗಕ್ಕೆ ಸಂಬಂಧಿಸಿದಂತೆ ಕೃಷ್ಣನನ್ನು ಹೇಳುವಾಗ ಅವನನ್ನು ಯೋಗೀಶ್ವರ ಎಂದು ಮಾತ್ರವಲ್ಲದೆ ಯೋಗವೇ ಅವನು ಎಂದೂ ಹಿಂದಿನವರು ಹೇಳಿದ್ದಾರೆ. ಹೀಗೆ ಹೇಳಬೇಕಾದರೆ ಅದಕ್ಕೆ ಸಾಕಷ್ಟು ಕಾರಣಗಳು ಇದ್ದಿರಲೇ ಬೇಕು ತಾನೆ?

ವೈಜ್ಞಾನಿಕ ಎಂದು ಕರೆದುಕೊಳ್ಳುವ ನಮ್ಮ ದೃಷ್ಟಿಯಾದರೂ ಎಷ್ಟು ಸ್ಥೂಲವಾದುದು ಎಂಬದನ್ನು ನಾವು ವಿಚಾರಮಾಡಿ ತಿಳಿದುಕೊಳ್ಳಬಹುದು. ನಲವತ್ತು ಕೋಟಿ ಜನತೆಯನ್ನು ತನ್ನ ಬೆರಳಿನ ಮೇಲೆ ಕುಣಿಸಿದಂತೆ ನಿಯಂತ್ರಿಸಿದ ಗಾಂಧಿಯವರ ಈ ಕಾರ್ಯ ನಮಗೆ ಅತಿ ಪ್ರಕೃತಿ ಎನಿಸಲಿಲ್ಲ. ಆದರೆ ಅದೇ ಗಾಂಧಿಯವರು ಕೇವಲ ಒಂದು ವ್ಯಕ್ತಿಯನ್ನು – ಉದಾಹರಣೆಗೆ – ಅವನು ಕುಳಿತ ನೆಲದಿಂದ ಅರ್ಧ ಅಡಿ ಮೇಲೇರಿಸಿದ್ದಿದ್ದರೆ ನಾವೆಲ್ಲರೂ ಕಣ್ಣು, ಮೂಗು ಅರಳಿಸಿ ಅವರನ್ನು ದೈವತ್ವಕ್ಕೆ ಏರಿಸುತ್ತಿದ್ದೆವು. ಹಾಗೆಯೇ ಕೃಷ್ಣನಾದರೂ ಇದೇ ಕುರುಕ್ಷೇತ್ರದ ಹಿನ್ನೆಲೆಯಲ್ಲಿ ನಿರ್ವಹಿಸಿದ ಪಾತ್ರ ಮಾನವ ಶಕ್ತಿಗೆ ಮೀರಿದುದು ಎಂಬದು ನಮ್ಮ ಸ್ಥೂಲ ದೃಷ್ಟಿಗೆ ಗೋಚರವಾಗುವದೇ ಇಲ್ಲ. ಭೀಷ್ಮ, ದ್ರೋಣ, ಕರ್ಣ, ಶಲ್ಯ, ಅಶ್ವತ್ಥಾಮ, ದುರ್ಯೋಧನ ಮೊದಲಾದ ಕೌರವ ವೀರರ ಸಂಖ್ಯೆಗೆ ಹೋಲಿಸಿದಾಗ ಪಾಂಡವರ ಪಕ್ಷದಲ್ಲಿ ಇದ್ದ ಒಬ್ಬನೇ ವೀರನೆಂದರೆ ಭೀಮ. ಸೈನಿಕ ಸಂಖ್ಯಾಬಲದಲ್ಲಾದರೂ ಕೌರವರು ಪಾಂಡವರ ಒಂದೂವರೆ ಪಾಲಿನಷ್ಟು ಹೆಚ್ಚಾಗಿದ್ದರು. ಈ ರೀತಿಯ ಅಸಮತೆಯ ಯುದ್ಧದಲ್ಲಿ ಪಾಂಡವರು ನಾಮಾವಶೇಷರಾಗಿಹೋಗಿ ಕೌರವರ ಒಬ್ಬ ವೀರ ಕೂಡ ಸಾಯದೆ ಉಳಿಯಬೇಕಾಗಿದ್ದುದು ಸಹಜವಾದ ಯುದ್ಧವೊಂದರ ಫಲಿತಾಂಶವಾಗಬೇಕಾಗಿತ್ತು. ಇಂತಹದು ಸಂಪೂರ್ಣವಾಗಿ ವ್ಯತಿರಿಕ್ತವಾಗಿ ಕೌರವರೇ ನಾಮಾವಶೇಷರಾಗಿ

ಹೋಗಿ ಪಾಂಡವರ ಪಕ್ಷದಲ್ಲಿ ಒಬ್ಬನೇ ಒಬ್ಬ ಹೆಸರಾಂತ ವೀರನೂ ಸಾಯು ದಿರುವಂತಹ ಅತ್ಯದ್ಭುತ ಪರಿಸ್ಥಿತಿಯನ್ನು ನಿರ್ಮಾಣ ಮಾಡಿದ ಕೃಷ್ಣನ ಆ ಒಂದು ಕೌಶಲ್ಯವೇಕೆ ಅತಿ ಪ್ರಕೃತಿ, ಅಸಹಜ ಎನಿಸುವದಿಲ್ಲ? ಕೃಷ್ಣನಲ್ಲದೆ ಬೇರೆ ಯಾರೇ ಆಗಿದ್ದರೂ ಕೂಡ ಇಂತಹ ಒಂದು ಪರಿಸ್ಥಿತಿಯನ್ನು ನಿರ್ಮಿಸಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ ಎಂಬದನ್ನು, ನಾವು ವೈಜ್ಞಾನಿಕವೆಂದು ಕರೆದು ಕೊಳ್ಳುವ ನಮ್ಮ ದೃಷ್ಟಿ ಏಕೆ ಗುರುತಿಸುವದಿಲ್ಲ? ವೈಜ್ಞಾನಿಕವೆನ್ನುವ ನಮ್ಮ ದೃಷ್ಟಿಯಾದರೂ ಕೂಡ ಈ ರೀತಿ ಕೇವಲ ಸ್ಥೂಲವಾದ, ಭೌತಿಕವಾದ ಘಟನೆ ಗಳಲ್ಲಿ ಸರಿ–ತಪ್ಪುಗಳನ್ನು ಹುಡುಕಲು ಹೊರಡುತ್ತದೆಯೇ ವಿನಹ ಇದನ್ನು ದಾಟಿದ ಸೂಕ್ಷ್ಮ ವಿಮರ್ಶೆಗೆ ಅದು ಹೋಗುತ್ತಿಲ್ಲ ಎಂಬದನ್ನು ನಾವು ಗಮನಿಸ ಬಹುದು. ಆದರೆ, ನಾನು ಹಿಂದೆಯೇ ಹೇಳಿದಂತೆ ಈ ವಿಶ್ವವು ಸ್ಥೂಲವಾಗಿ ಕಾಣುವದಕ್ಕೆ ಹತ್ತು ಪಾಲು, ನೂರು ಪಾಲು, ಸಾವಿರ ಪಾಲು ಕೋಟಿ ಕೋಟಿ ಪಾಲು ಹೆಚ್ಚಾಗಿ ಸೂಕ್ಷ್ಮವಾದ ಕೆಲವು ನಿಯಮಗಳಿಂದ ಕೂಡಿದೆ ಎಂಬದನ್ನು ನಾವು ಮರೆಯಬಾರದು. ವಿಜ್ಞಾನದ ವಿಚಾರಧಾರೆ ಇನ್ನೂ ಕೂಡ ಈ ವಿಶ್ವದ ಭೌತಿಕವಾದ ಹೊರವೈಯನ್ನು ಕೇವಲ ಪರಚಿ ನೋಡುತ್ತಿದೆ, ಅಷ್ಟೆ. ಇದರ ರಹಸ್ಯವನ್ನು ತಿಳಿಯಲು, ಹಾಗಿದ್ದರೆ, ವಿಜ್ಞಾನವು ಇನ್ನೂ ಎಷ್ಟು ಆಳಕ್ಕೆ ಹೋಗ ಬೇಕಾಗಿದೆ ಎಂಬದನ್ನು ನೀನು ಊಹಿಸಬಹುದು. ನಾವು ಕಾಣುವ ಈ ಯಾವ ವಸ್ತುಗಳೂ ಯಥಾರ್ಥವಾಗಿ ಹಾಗಿಲ್ಲ; ಇವೆಲ್ಲವೂ ಪರಮಾಣುವಿನ ಅಭೇದ್ಯ ಅಂಶಗಳಾದ ಇಲೆಕ್ಟ್ರಾನ್, ನ್ಯೂಟ್ರಾನ್‌ಗಳ ವಿವಿಧ ವಿನ್ಯಾಸದ ಲೀಲೆ ಎಂದು ವಿಜ್ಞಾನಿಗಳೇ ಹೇಳುತ್ತಾರೆ. ಆದರೆ ಭಾರತೀಯ ದಾರ್ಶನಿಕರು ಈ ವಿಚಾರವನ್ನೂ, ಅದಕ್ಕಿಂತಲೂ ಆಚೆ ಇರುವ ಬ್ರಹ್ಮವಸ್ತು ಅಥವಾ ಆತ್ಮ ಮೊದಲಾದ ವಿಚಾರ ಗಳನ್ನೂ ಸಾವಿರ ಸಾವಿರ ವರ್ಷಗಳ ಹಿಂದೆಯೇ ಕಂಡುಕೊಂಡಿದ್ದರು ಎಂಬ ಸತ್ಯಕ್ಕೆ ನಾವು ಕುರುಡಾಗಬಾರದು. ಅಂತಹವರ ಲೇಖನಿಯಿಂದ ಬಂದ ಇತಿಹಾಸ ವಾದ ಮಹಾಭಾರತವು ಶಿಶು ಸಾಹಿತ್ಯಕ್ಕೆ ಮಾತ್ರ ಯೋಗ್ಯವಾಗುವ ತಮಾಷೆಗಳ ಪ್ರಸ್ತಾಪದಿಂದ ಕೂಡಿದೆ ಎಂದು ಹೇಳುವಾಗ ನಾವು ನಮ್ಮ ಬೆನ್ನನ್ನು ತಟ್ಟಿ ಕೊಳ್ಳುತ್ತಿದ್ದೇವೆ; ಅದರ ಬದಲು ನಾವು ಹಾಗೆ ಹೇಳುವದಕ್ಕೆ ಮುಂಚೆ ನಮ್ಮ ಎದೆಯನ್ನು ಮುಟ್ಟಿ ನೋಡಿಕೊಳ್ಳುವ ಅಭ್ಯಾಸ ಮಾಡಬೇಕು. ಯಾವದೇ ವಿಚಾರವನ್ನು ತಿರಸ್ಕರಿಸುವದು ಸುಲಭ. ಒಪ್ಪುವದು ಕಷ್ಟ. ಒಪ್ಪುವದಕ್ಕೆ ದೊಡ್ಡ ವ್ಯಕ್ತಿತ್ವ ಬೇಕು. ಯಾವದನ್ನೇ ತೆಗೆದುಕೊ. ದೇವರಿದ್ದಾನೆಯೇ ಎನ್ನುವಾಗ ಇಲ್ಲ ಎಂದು ತಿರಸ್ಕರಿಸುವದು ಸುಲಭ. ಅವನು ಕಾಣಿಸುವದಿಲ್ಲ, ಆದ್ದರಿಂದ ಇಲ್ಲ ಎಂದು ಹೇಳಿಬಿಡಬಹುದು. ಇದ್ದಾನೆಂದು ಸ್ವೀಕರಿಸಲು ಬೇಕಾಗುವ ವ್ಯಕ್ತಿತ್ವವೇ ಬೇರೆ. ಇನ್ನೊಬ್ಬನಿಗೆ ಸಹಾಯವನ್ನಾದರೂ ಅಷ್ಟೆ. ಇಲ್ಲ ಎಂದು ತಿರಸ್ಕರಿಸುವದು ಸುಲಭ.

ಇದೆ ಎಂದು ಒಪ್ಪಿಕೊಳ್ಳುವದನ್ನು ಸಾಧಿಸಲು ದೊಡ್ಡ ವ್ಯಕ್ತಿತ್ವ ಬೇಕು. ಗಾಂಧಿಯವರು ಮಹಾತ್ಮರಲ್ಲ, ನಮ್ಮಂತೆಯೇ ಒಬ್ಬ ಮನುಷ್ಯ ! ಪರಿಸ್ಥಿತಿ ಅವರನ್ನು ಅಲ್ಲಿಗೇರಿಸಿತು ಎಂದು ಅವರ ಹಿರಿತನವನ್ನು ತಿರಸ್ಕರಿಸುವದು ಸುಲಭ. ಅದನ್ನು ಹೌದೆಂದು ಸ್ವೀಕರಿಸಿ ಸಾಧಿಸುವದು ಕಷ್ಟ. ಕೇವಲ ಸ್ಥೂಲವಾಗಿ ಗೋಚರವಾಗುವ ವಿಷಯಗಳ ಕುರಿತೇ ಹೀಗಾಗುವಾಗ ವಿಶ್ವದ ರಹಸ್ಯಕ್ಕೆ ಸೇರಿದ ಅಂಶಗಳನ್ನು ಸ್ವೀಕರಿಸುವದು ಅಥವಾ ತಿರಸ್ಕರಿಸುವದು ಬಹಳ ಗಂಭೀರವಾದ ವಿಚಾರವಾಗುತ್ತದೆ. ಛತ್ರಿಯನ್ನು ಸೂರ್ಯನಿಗೆ ಮರೆ ಮಾಡಿದರೆ ನನಗೊಬ್ಬನಿಗೆ ಮಾತ್ರ ಕತ್ತಲು ಆವರಿಸುತ್ತದೆ ಎಂಬದಷ್ಟೇ ನಮಗೆ ತಿಳಿದಿರುವದು. ಆದರೆ ನಾವು ತರ್ಕಿಸಬೇಕು, ಮಂತ್ರಘೋಷದಿಂದ ಮೋಡಗಳನ್ನು ಕಲೆ ಹಾಕಿಸಿ ಸೂರ್ಯನನ್ನು ಹೆಚ್ಚು ವಿಸ್ತಾರವಾದ ಕ್ಷೇತ್ರಕ್ಕೆ ಮರೆ ಮಾಡಲು ಸಾಧ್ಯವಾಗುವ ವೇದವಿದರು ಇದ್ದಾರೆ; ಅವರು ನಮಗಿಂತಲೂ ಹೆಚ್ಚು ತಿಳಿದವರು ಎಂದು. ಅದಕ್ಕಿಂತ ಒಂದು ಹೆಜ್ಜೆ ಮುಂದೆ ಹೋದರೆ ತನ್ನ ಆಯುಧವನ್ನು ಮೇಲೆತ್ತಿ ಇನ್ನೂ ಹೆಚ್ಚು ವಿಶಾಲವಾದ ಕ್ಷೇತ್ರದಲ್ಲಿ ಕತ್ತಲು ಆವರಿಸುವಂತೆ ಮಾಡುವಷ್ಟು ತಿಳಿದವನ ಕುರಿತು ವ್ಯಾಸರು ಮಹಾಭಾರತದಲ್ಲಿ ಪ್ರಸ್ತಾಪ ಮಾಡಿದ್ದಾರೆ. ತರ್ಕವನ್ನು ವಾಹನವನ್ನಾಗಿ ಮಾಡಿ ಕಲ್ಪನೆಯನ್ನು ಹರಿಯಬಿಟ್ಟರೆ ವ್ಯಾಸರು ಬರೆದುದು ನಿಜಕತೆ ಎಂದು ಗೋಚರವಾಗಲು ಸಾಧ್ಯವಿದೆ. ನಮ್ಮ ಭೌತಿಕ ಕಣ್ಣುಗಳನ್ನು ಮೀರಿದ ಒಂದು ಬೆಳಕೇ ಇಲ್ಲ; ಅದಕ್ಕೆ ಕಾಣಿಸುವದು ಎನ್ನುವದು ಯಾವದೂ ಇಲ್ಲ ಎಂದು ನಾವು ನಂಬಿಕೊಂಡರೆ ನಂಬಬಹುದು. ಆದರೆ ಹಾಗನ್ನುವಾಗ ನಮ್ಮ ತಂದೆ ಯಾರು ಎಂಬದನ್ನು ನಾವು ಹೇಳಲು ಹಿಂಜರಿಯಬೇಕಾಗುತ್ತದೆ. ನೀನು ಇಂತಹುದೇ ರೀತಿಯ ವಾದವನ್ನು............

ರಮೆ:– ಛೀ ಛಿ. ಹಾಗೆಲ್ಲ ಹೇಳಬೇಡೀಪ್ಪ. ನಾನು ಹಿಂದೆಯೇ ಹೇಳ ಲಿಲ್ಲವೆ ? ಆದರೆ ಆಗ ಅಹಂಭಾವದಿಂದ ಹೇಳಿದೆ – ವಾದದ ಕೊನೆಯಲ್ಲಿ ನೀವು ಗೆದ್ದಿರುತ್ತೀರಿ ಎಂದು. ಈಗ ಶರಣಾಗಿ ಹೇಳುತ್ತಿದ್ದೇನೆ – ನೀವು ಗೆದ್ದಿದ್ದೀರಿ ಎಂದು. ನಿಜವಾಗಿಯೂ ವಿಚಾರ ಎನ್ನುವದು ವಿಶ್ವದಷ್ಟೇ ದೊಡ್ಡದು – ನಾವು ಏನನ್ನೂ ತಿಳಿದುಕೊಳ್ಳದೆ ಏನೋ ಎಂದು ನಮ್ಮನ್ನು ತಿಳಿದುಕೊಂಡುಬಿಟ್ಟದ್ದೇವೆ, ಅಷ್ಟೆ. ಯಾವದು ಸರಿಯೋ, ಯಾವದು ತಪ್ಪೋ, ಈ ವಿಶ್ವದ ರಹಸ್ಯವು ನಿಜ ವಾಗಿ ಅದೇನಿದೆಯೋ, .... ಛೆ, ನಾವೆಲ್ಲಿ, ವಿಶ್ವದ ಸತ್ಯಸ್ಥಿತಿಯೆಲ್ಲಿ ? ಮಗುವಿಗೆ ಏನೂ ಬಾರದು. ನಮಗೆ ಅದಕ್ಕಿಂತ ಸ್ವಲ್ಪ ಹೆಚ್ಚು ಬರುತ್ತದೆ, ಅಷ್ಟೆ. ಆದರೆ ವಿಶ್ವದ ವಿಚಾರವನ್ನೆಲ್ಲ ತಿಳಿದುಕೊಂಡುಬಿಟ್ಟದ್ದೇನೆ ಎಂಬ ಅಹಂಕಾರದಲ್ಲಿ ಮಾತ್ರವೇ ನಾವು ಮಕ್ಕಳಿಗಿಂತ ಅತ್ಯಂತ ಹೆಚ್ಚು ಬೆಳೆದಿರುವದು ! ಒಂದು ವರ್ಷದ ಮಗುವಿಗಿಂತ ಹತ್ತು ವರ್ಷದ ಹುಡುಗನಿಗೆ ಎಷ್ಟು ಹೆಚ್ಚು ತಿಳಿದಿರು

ತ್ತದೆ? ಅವನಿಗಿಂತ ಇಪ್ಪತ್ತು ವರ್ಷದ ಯುವಕನಿಗೆ ಎಷ್ಟು ಹೆಚ್ಚು ತಿಳಿದಿರುತ್ತದೆ? ಅವನಿಗಿಂತ ಮೂವತ್ತು ವರ್ಷದವನಿಗೆ, ಅವನಿಗಿಂತ ನಲವತ್ತು ವರ್ಷದವನಿಗೆ – ಹೀಗೆ ಒಬ್ಬ ಪ್ರೌಢ ಎನಿಸಿಕೊಂಡವನಿಗಾದರೂ ಒಂದು ವರ್ಷದ ಹಸುಳೆಗಿಂತ ಎಷ್ಟು ಹೆಚ್ಚು ತಿಳಿದಿರಲು ಸಾಧ್ಯ? ವ್ಯವಹಾರದಲ್ಲಿ ಹೆಚ್ಚು ತಿಳಿದಿರಬಹುದೇ ವಿನಹ, ಅನಂತವಾದ ಈ ವಿಶ್ವದ ರಹಸ್ಯದ ಕುರಿತು ಚಿಕ್ಕಂದಿನಿಂದಲೂ ವಿಚಾರ ಮಾಡುತ್ತ ಕುಳಿತರೆ ಕೂಡ ಎಷ್ಟು ತಿಳಿಯಲು ಸಾಧ್ಯ? ಇದು ಒಂದು ಜನ್ಮದ ವಿಚಾರದಿಂದ ಬರುವಂತಹುದಲ್ಲ. ಜನ್ಮ ಜನ್ಮಗಳಲ್ಲಿ ಈ ಕುರಿತು ಚಿಂತನೆ ಮಾಡಿ, ಮಾಡಿ, ಕರಗಿಸಿಕೊಂಡು, ಸಂಗ್ರಹಿಸಿ, ಸಂಗ್ರಹಿಸಿ ಏನಾದರೂ ಸ್ವಲ್ಪ ತಿಳಿದುಕೊಳ್ಳಬಹುದೇ ವಿನಹ, ಕಾಲೇಜುಗಳಲ್ಲಿ ಪದವಿ ಪಡೆದ ತಕ್ಷಣ ವಿಶ್ವದ ಯಾವದೇ ರಹಸ್ಯದ ಕುರಿತು ವೈಜ್ಞಾನಿಕವಾಗಿ ವಿಚಾರ ಮಾಡಬಲ್ಲೆ ಎಂದು ತಿಳಿದುಕೊಳ್ಳುವ ಇಂದಿನ ವಿದ್ಯಾವಂತರ ಕುರಿತು ಅನುಕಂಪ ಪಡಬೇಕಾಗುತ್ತದೆ. ಒಪ್ಪಿಕೊಳ್ಳುತ್ತೇನೆ. ವಿಶ್ವದ ರಹಸ್ಯಗಳ ಕುರಿತು ಹೊರಗಿನಿಂದ ಕಲಿತು ಅದನ್ನು ಹೊರಗೆಡಹುವದು, ತನ್ನ ಗರ್ಭದಲ್ಲಿ ನಿಧಿಯನ್ನು ಒಳಗೊಂಡಿರುವ ನೆಲವನ್ನು ಮುಚ್ಚಿರುವ ಬೃಹತ್ ಶಿಲೆಯೊಂದಕ್ಕೆ ನೀರು ಹೊಯ್ದು ಹೊಯ್ದು ಗುಂಡಿ ಮಾಡಿ ಒಳಗಿನ ನಿಧಿಯನ್ನು ಕಾಣಲು ಬಯಸುವಂತೆ ವ್ಯರ್ಥವೂ, ಹಾಸ್ಯಾಸ್ಪದವೂ ಆದ ಪ್ರಯತ್ನವಾಗುತ್ತದೆ. ವಿಶ್ವದ ರಹಸ್ಯ ವಿಚಾರಗಳು ಒಳಗಿನಿಂದ ಉಕ್ಕಿ ಬಂದು ಹೊರಗೆ ಹರಿಯಬೇಕು. ಅದಕ್ಕೇ ಜನ್ಮಾಂತರಗಳ ಸಂಗ್ರಹ ಬೇಕಾಗುವದು. ಅಂತಹದು ಕಲ್ಪನೆಯ ಬೆನ್ನಿನಲ್ಲಿ ಕುಳಿತು ಮಾತ್ರ ಬರಲು ಸಾಧ್ಯ....

ಮುರಳಿ:– ನೀನು ನನ್ನನ್ನು ಯಾವ ವಿಚಾರದಲ್ಲಿಯೂ ಒಪ್ಪಿಸಲು ಇದನ್ನೆಲ್ಲ ಹೇಳುತ್ತಿಲ್ಲವಷ್ಟೆ?

ರಮೆ:– ಇಲ್ಲ. ನನ್ನ ಒಪ್ಪಿಗೆ ಎಷ್ಟು ಪೂರ್ಣವಾದುದು ಎಂದು ತಿಳಿಸಲು ಹೇಳುತ್ತಿದ್ದೇನೆ. ದಯವಿಟ್ಟು ಕತೆಯನ್ನು ಮುಂದುವರಿಸಿ. ಪ್ರಕೃತಿಯ ನಿಯಮಾನುಸಾರವಾಗಿಯೇ ಧರ್ಮವು ಅಧರ್ಮವನ್ನು ಹತ್ತಿಕ್ಕಲೇಬೇಕಾಗಿಬಂದ ಅಗ್ನಿಪರೀಕ್ಷೆಯ ಸಂದರ್ಭದಲ್ಲಿ ಆ ಪ್ರಕೃತಿಯ ನಿಯಮವು ವ್ಯತ್ಯಸ್ತವಾಗದಂತೆ ಮಾಡುವದಕ್ಕಾಗಿ ಕೃಷ್ಣನು ಬೇರೆ ಮಾರ್ಗವೇ ಇಲ್ಲದೆ ಅತಿ ಪ್ರಕೃತಿಯನ್ನು ಆಧರಿಸಿ ತನ್ನ ಚಕ್ರದಿಂದ ಸೂರ್ಯಮಂಡಲವನ್ನು ಮರೆ ಮಾಡಿ ಕುರುಕ್ಷೇತ್ರವು ಕತ್ತಲಿನಿಂದ ಆವೃತವಾಗುವಂತೆ ಮಾಡಿದ ಎಂಬದನ್ನು ಒಪ್ಪಿಕೊಳ್ಳುತ್ತೇನೆ. ದಯವಿಟ್ಟು ಮುಂದುವರಿಸಿ.

ಮುರಳಿ:– ಜಾಣೆ. ಕೇಳು. ಕೃಷ್ಣನು ಹೀಗೆ ಮಾಡಿದ ತಕ್ಷಣವೇ ಕುರುಕ್ಷೇತ್ರದಲ್ಲಿ ಸೂರ್ಯಾಸ್ತಮವಾದಂತೆ ಭಾಸವಾಯಿತು. ಅರ್ಜುನನಿಗೆ ಕೂಡ

ಕೃಷ್ಣನ ತಂತ್ರ ಗೊತ್ತಾಗಲಿಲ್ಲ. ತನ್ನ ಪ್ರತಿಜ್ಞೆ ವಿಫಲವಾದುದರಿಂದ ಅವನು ಅಗ್ನಿ ಪ್ರವೇಶ ಮಾಡಲು ಸಿದ್ಧಗೊಳ್ಳುತ್ತಿದ್ದನು. ತನ್ನನ್ನು ಕೊಲ್ಲುತ್ತೇನೆಂದು ಪಣ ತೊಟ್ಟವನು ಈಗ ತಾನೇ ಸಾಯಲು ಉದ್ಯುಕ್ತನಾಗಿರುವ ಸಂತೋಷದಾಯಕ ಘಟನೆಯನ್ನು ನೋಡುವ ಕುತೂಹಲದಿಂದ ಜಯದ್ರಥನೂ ಕತ್ತೆತ್ತಿ ನೋಡುತ್ತಿರಲು ಕೃಷ್ಣನು ಅರ್ಜುನನಿಂದ ಪಾಶುಪತ ಮಹಾಸ್ತ್ರವನ್ನು ತೊಡಿಸಿ ಸೂರ್ಯನಿಗೆ ಮರೆಯಾಗಿದ್ದ ತನ್ನ ಚಕ್ರವನ್ನು ಒಮ್ಮೆಗೇ ಸರಿಸಿ ಸೈಂಧವನನ್ನು ಕೊಲ್ಲಿಸಿದನು.

ರಮೆ:- ಪಾಪ. ಒಬ್ಬ ಸಾಮಾನ್ಯ ವೀರನಾದ ಜಯದ್ರಥನನ್ನು ಅರ್ಜುನ ಕೊಲ್ಲಬೇಕಾದರೆ ಇಷ್ಟೆಲ್ಲ ರಂಪಾಟವಾಗಿಹೋಯಿತು. ನಿಜವಾಗಿಯೂ ಕೃಷ್ಣನ ಸಾಹಸವು ಅದ್ವಿತೀಯವಾದುದು.

ಮುರಳಿ:- ಹೇಗೆ ?

ರಮೆ:- ಹೌದು. ಪ್ರಚಂಡ ಬಿಲ್ಗಾರರು ಹಲವರು ಸೇರಿದ್ದ ಕೌರವ ಪಕ್ಷವನ್ನು ಒಬ್ಬ ಸಾಮಾನ್ಯ ಬಿಲ್ಗಾರನಾದ ಅರ್ಜುನನ ಮೂಲಕ ಗೆಲ್ಲಬೇಕಾದರೆ ಕೃಷ್ಣ ಅದೇನೇನು ಕೌಶಲ್ಯ, ತಂತ್ರಗಳನ್ನು ಬಳಸಬೇಕಾಯಿತು ನೋಡಿ !

ಮುರಳಿ:- ಆಗಲಿ. ನೀನು ಕೃಷ್ಣನ ಕತೆಯನ್ನು ಹೇಳುವ ಸಂದರ್ಭದಲ್ಲಿ ಅದೆಲ್ಲವನ್ನೂ ನನಗೆ ವಿವರಿಸು. ಸದ್ಯಕ್ಕೆ ನಾನು ಭೀಮನ ಕತೆಯನ್ನು ಮುಗಿಸಿ ಬಿಡುತ್ತೇನೆ, ಕೇಳು.

ರಮೆ:- ಮುಗಿಸಿಬಿಡುತ್ತೇನೆ ಎನ್ನುವ ಶಬ್ದ ಅಷ್ಟು ರುಚಿಸುವದಿಲ್ಲ. ಮುಂದುವರಿಸುತ್ತೇನೆ ಅನ್ನಿ.

ಮುರಳಿ:- ಅದೇ ಪರಿಸುತ್ತೇನೆ, ಕೇಳು. ಸೈಂಧವನ ವಧೆಯಿಂದಾಗಿ ದುರ್ಯೋಧನನಿಗೆ ತುಂಬ ದುಃಖವಾಯಿತು. ಆವನು ಸೇನಾಧಿಪತಿ ದ್ರೋಣರಲ್ಲಿ ಬಂದು ಅವರು ಪಾಂಡವಪಕ್ಷಪಾತಿಯಾಗಿದ್ದಾರೆಂದು ಪುನಃ ಆಪಾದಿಸಿದನು. ಆ ದಿನ ರಾತ್ರಿಯೂ ತಾವು ಯುದ್ಧವನ್ನು ಮುಂದುವರಿಸುವದಾಗಿಯೂ, ಅರ್ಜುನನಲ್ಲಿ ಈ ವರೆಗೆ ಇದ್ದ ಪಾಶುಪತಾಸ್ತ್ರಕ್ಕೆ ತಾನು ಹೆದರುತ್ತಿದ್ದುದಾಗಿಯೂ, ಈಗ ಅದು ವ್ಯಯವಾದುದರಿಂದ ಇನ್ನು ಮುಂದೆ ತಾವು ನಿರ್ಭಯವಾಗಿ ಯುದ್ಧ ಮಾಡಬಹುದೆಂದೂ ತಿಳಿಸಿದ ದ್ರೋಣನು ಸೈನ್ಯವನ್ನು ರಾತ್ರಿ ಯುದ್ಧಕ್ಕೆ ಆಜ್ಞಾಪಿಸಿದನು.

ರಮೆ:- ಅದೇನು ದ್ರೋಣನ ಛಲ ?

ಮುರಳಿ:- ಇಲ್ಲವೆ ? ಸೇನಾಪತಿಯಾದ, ಉಭಯ ಪಕ್ಷದ ವೀರರಿಗೂ ಯುದ್ಧ ವಿದ್ಯಾ ಗುರುವಾದ ತನ್ನನ್ನು ಭೀಮ ಪರಾಭವಗೊಳಿಸಿ ಜೀವದಾನ ಮಾಡಿದುದು, ಕೌರವ ಪಕ್ಷದ ಆಧಾರಸ್ತಂಭವಾಗಿದ್ದ ಕರ್ಣನನ್ನೂ ಭೀಮನು ಸೋಲಿಸಿ ಜೀವದಾನ ಮಾಡಿದುದು, ತಮ್ಮ ಪಕ್ಷವೆಲವೂ ಜಾಗರೂಕತೆಯಿಂದ

ರಕ್ಷಿಸುತ್ತಿದ್ದರೂ ಜಯದ್ರಥನನ್ನು ಕೃಷ್ಣ ಕೊಲ್ಲಿಸಿದುದು – ಇವೆಲ್ಲವೂ ತನ್ನ ಸೈನ್ಯಾಧಿಪತ್ಯದ ಅವಧಿಯಲ್ಲಿ ನಡೆದಿರುವಾಗ, ಸ್ವಭಾವ ಸಹಜವಾಗಿಯೇ ಅಭಿಮಾನಸ್ಥನಾದ ದ್ರೋಣನಿಗೆ ಆ ದಿನ ಹೇಗಾಗಿರಲಿಕ್ಕಿಲ್ಲ! "ಇವನು ಗುರುವೇ ಹೌದು; ಇವನು ಸೈನ್ಯಾಧಿಪತ್ಯಕ್ಕೆ ಯೋಗ್ಯ ಹೌದು" ಎನ್ನುವದನ್ನು ಲೋಕಕ್ಕೆ ತೋರಿಸಿಕೊಡಬೇಕು ಎಂದು ದ್ರೋಣ ಎಷ್ಟು ತೀವ್ರವಾಗಿ ಬಯಸಿದ್ದಿರಲಿಕ್ಕಿಲ್ಲ.

ರಮೆ:– ನಿಜ. ಮುಂದೆ ಹೇಳಿ.

ಮುರಳಿ:– ಕೇಳು ಹದಿನಾಲ್ಕನೆಯ ದಿನದಲ್ಲಿ ಪ್ರಥಮ ಬಾರಿಗೆ ರಾತ್ರಿ ಯುದ್ಧವು ಪ್ರಾರಂಭವಾಯಿತು. ಅಸಂಖ್ಯಾತವಾದ ದೀವಟಿಕೆಗಳ ಬೆಳಕಿನಲ್ಲಿ ಎರಡೂ ಸೈನ್ಯಗಳು ಹೋರಾಡಿದವು. ಈಗಲೂ ಭೀಮನು ಅತ್ಯಾಶ್ಚರ್ಯಕರ ವಾಗಿ ಯುದ್ಧಮಾಡಿ ಕರ್ಣ, ಶಲ್ಯ, ಕೃಪ, ಅಶ್ವತ್ಥಾಮ ಮೊದಲಾದವರ ಕಣ್ಣೆದುರಿನಲ್ಲಿಯೇ ದುರ್ಯೋಧನನ ಅನೇಕ ತಮ್ಮಂದಿರನ್ನು ಹೊಡೆದೂ, ನೆಲಕ್ಕಪ್ಪಳಿಸಿಯೂ, ಬಾಣ ಪ್ರಯೋಗ ಮಾಡಿಯೂ ಕೊಂದು ಹಾಕಿದನು. ಕರ್ಣನು ತನ್ನ ಮೇಲೆ ಪ್ರಯೋಗಿಸಿದ ಒಂದು ದಿವ್ಯ ಶಕ್ತಿಯನ್ನು ಕೈಯಿಂದಲೇ ಆತುಕೊಂಡು ಅದನ್ನೇ ತಿರುಗಿಸಿ ಕರ್ಣನ ಮೇಲೆ ಪ್ರಯೋಗಿಸಿದನು. ಶಕುನಿಯು ಅದನ್ನು ಚಾಕಚಕ್ಯತೆಯಿಂದ ಕತ್ತರಿಸಿಹಾಕಬೇಕಾಯಿತು. ಭೀಮನ ಪರಾಕ್ರಮ ವನ್ನು ಪುನಃ ಹೀಗೆ ಕಂಡ ಕೌರವ ಸೈನ್ಯವು ಓಡಲು ಪ್ರಾರಂಭಿಸಿತು. ಪಾಂಡವ ವೀರರು ಭೀಮನನ್ನು ಮನಸಾರೆ ಕೊಂಡಾಡಿದರು.

ರಾತ್ರಿ ಯುದ್ಧವು ಸಾಗಿತು. ಬರಬರುತ್ತಾ ಕರ್ಣನ ಕೈ ಮೇಲಾಗ ತೊಡಗಿತು. ಅವನನ್ನು ಎದುರಿಸಿ ಹೊರಟ ಅರ್ಜುನನನ್ನು ಕೃಷ್ಣನು ತಡೆದು ರಾತ್ರಿ ಯುದ್ಧಕ್ಕೆ ಹೆಸರಾಂತ ರಾಕ್ಷಸರ ಪೈಕಿ ಒಬ್ಬನಾದ ಘಟೋತ್ಕಚನನ್ನು ಅವನ ಅಪರಿಮಿತ ಸೈನ್ಯದೊಂದಿಗೆ ಯುದ್ಧಕ್ಕೆ ಕಳುಹಿಸಿದನು.

ರಮೆ:– ಗೌರವವು ತಾನು ಕೂರುವ ಆಸನವನ್ನು ಅವಲಂಬಿಸಿಲ್ಲ ಎಂಬದಕ್ಕೆ ಉದಾಹರಣೆ.

ಮುರಳಿ:– ಹೌದು.

ರಮೆ:– ಯಾವದು ಹೌದು ?

ಮುರಳಿ:– ಅದೇ ಗೌರವವು ತಾನು ಕೂರುವ ಆಸನವನ್ನು ಅವಲಂಬಿಸಿಲ್ಲ ಎಂಬದಕ್ಕೆ ಉದಾಹರಣೆ.

ರಮೆ:– ಯಾವದು ಉದಾಹರಣೆ ?

ಮುರಳಿ:– ಯಾವದು ? ಘಟೋತ್ಕಚ ಯುದ್ಧಕ್ಕೆ ಹೊರಟುದೊ ?

ರಮೆ:– ಅಲ್ಲಿ ಯಾವ ಗೌರವ, ಯಾವ ಆಸನ ಬಂದಿದೆ ?

ಮುರಳಿ:– ಯಾವದೂ ಬಂದಿಲ್ಲ, ಅಲ್ಲವೆ ? ಮತ್ತೆ ಯಾವದನ್ನು ಹೇಳಿದೆ ?

ರಮೆ:– ನೀವು ಮತ್ತೆ ಏಕೆ ಹೌದು ಎಂದು ಹೇಳಿದಿರಿ ?

ಮುರಳಿ:– ನೀನು ಹೀಗೆಲ್ಲ ಕೂಲಂಕಷವಾಗಿ ಶೋಧನೆ ಮಾಡುವದಕ್ಕಾಗಿ ನನ್ನನ್ನು ಬತ್ತಲೆ ನಿಲ್ಲಿಸುತ್ತೀಯ ಎಂದು ಅಂದಾಜು ಮಾಡದೆ ಏನೋ ಹೇಳಿಬಿಟ್ಟೆ. ಕ್ಷಮಿಸಬೇಕು.

ರಮೆ:– ಬತ್ತಲೆ ನಿಂತವರ ಮೇಲೆ ಬಾಣ ಪ್ರಯೋಗ ಮಾಡಬಾರದಂತೆ. ಹಾಗಾಗಿ ಕ್ಷಮಿಸಿದ್ದೇನೆ.

ಮುರಳಿ:– ಅಷ್ಟು ಸಾಲದು. ಅನುಗ್ರಹಿಸಲೂ ಬೇಕು.

ರಮೆ:– ಏನನ್ನು ಅನುಗ್ರಹಿಸುವದು ?

ಮುರಳಿ:– ಅದೇ. ಗೌರವವು ತಾನು ಕೂರುವ ಆಸನವನ್ನು ಅವಲಂಬಿಸಿಲ್ಲ ಎಂಬದಕ್ಕೆ ಇಲ್ಲಿ ಬಂದ ಉದಾಹರಣೆ ಯಾವದು ಎಂಬ ರಹಸ್ಯವನ್ನು ಭೇದಿಸಿ ಅನುಗ್ರಹಿಸಬೇಕು.

ರಮೆ:– ಅಲ್ಲ ? ಅಜೇಯನಾಗುತ್ತಿದ್ದ ಕರ್ಣನನ್ನು ಎದುರಿಸಲು ಹೊರಟ ಅರ್ಜುನನನ್ನು ತಡೆದು ಕೃಷ್ಣನು ಘಟೋತ್ಕಚನನ್ನು ಯುದ್ಧಕ್ಕೆ ಕಳುಹಿಸಿದನಲ್ಲಾ, ಅದನ್ನು ಹೇಳಿದೆ.

ಮುರಳಿ:– ಗೊತ್ತಾಯಿತು.

ರಮೆ:– ಏನು ಗೊತ್ತಾಯಿತು ?

ಮುರಳಿ:– ಗೊತ್ತಾಯಿತು. ಗೌರವವು ತಾನು ಕೂರುವ ಆಸನವನ್ನು ಅವಲಂಬಿಸಿಲ್ಲ. ಇದಕ್ಕೆ ಉದಾಹರಣೆ ಏನೆಂದರೆ ಕರ್ಣನದು. ಅವನು ಗೌರವ ವನ್ನು ಪಡೆಯಲು ಸಿಂಹಾಸನದಲ್ಲಿಯೇ ಕೂರಬೇಕಾಗಿರಲಿಲ್ಲ. ಕೇವಲ ತನ್ನ ರಥ ದಲ್ಲಿ ಕುಳಿತರೂ ಅವನ ಮುಂದೆ ಯಾರನ್ನು ನಿಲ್ಲಿಸಬೇಕು, ಯಾರನ್ನು ನಿಲ್ಲಿಸ ಬಾರದು ಎಂದು ಅವನ ಶತ್ರುವು ಲೆಕ್ಕಾಚಾರ ಹಾಕಬೇಕಾಗಿದ್ದಷ್ಟು ಗೌರವವು ಅವ ನಿಗೆ ಸಿಕ್ಕಿಯೇ ಸಿಕ್ಕಿತು. ಈಗ ಗೊತ್ತಾಯಿತು.

ರಮೆ:– ಗೊತ್ತಾಯಿತಾ ?

ಮುರಳಿ:– ಗೊತ್ತಾಯಿತು, ಗೊತ್ತಾಯಿತು.

ರಮೆ:– ನೀವು ಬತ್ತಲೆ ನಿಂತ ದುರವಸ್ಥೆ ಹೋಯಿತಾ ?

ಮುರಳಿ:– ಹೋಯಿತು, ಹೋಯಿತು. ಬಟ್ಟೆ ಹಾಕಿಕೊಂಡಿದ್ದೇನೆ.

ರಮೆ:– ದುರದೃಷ್ಟ.

ಮುರಳಿ:– ಯಾವದು ?

ರಮೆ:– ನೀವು ಬಟ್ಟೆ ಹಾಕಿಕೊಂಡುದು.

ಮುರಳಿ:– ಯಾಕೆ, ನಾನು ಬತ್ತಲೆಯಾಗಿಯೇ ನಿಲ್ಲಬೇಕೇನು ?

ರಮೆ:– ಬೇಡ. ಆದರೆ ನೀವು ಹಾಕಿಕೊಂಡ ಬಟ್ಟೆಯನ್ನು ಪುನಃ ಬಿಚ್ಚಬೇಕಾಯಿತಲ್ಲಾ ಅಂತ ವ್ಯಸನವಾಯಿತು.

ಮುರಳಿ:– ಯಾಕೆ ?

ರಮೆ:– ನೀವು ಬತ್ತಲೆಯನ್ನು ಮುಚ್ಚುವ ಆತುರದಲ್ಲಿ ಕಪ್ಪು ಬಟ್ಟೆಯನ್ನು ಹಾಕಿಕೊಂಡುಬಿಟ್ಟದ್ದೀರಿ. ಸಾಕಷ್ಟು ಪರಿಶೀಲಿಸದೆ ಪಂಚೆ ಎಂದು ಸೀರೆಯನ್ನು ಉಟ್ಟುಬಿಟ್ಟದ್ದೀರಿ.

ಮುರಳಿ:– ಅಯ್ಯೋ ಗ್ರಹಚಾರವೆ! ಗೌರವವು ತಾನು ಕೂರುವ ಆಸನವನ್ನು ಅವಲಂಬಿಸಿಲ್ಲ ಎನ್ನುವದಕ್ಕೆ ಇಲ್ಲಿ ಕರ್ಣನೂ ಉದಾಹರಣೆ ಅಲ್ಲವೋ ಹಾಗಾದರೆ ?

ರಮೆ:– ಅಲ್ಲ.

ಮುರಳಿ:– ಒಳ್ಳೇ ಗ್ರಹಚಾರವಾಯಿತಲ್ಲಾ! ಇನ್ನು ಇಲ್ಲಿ ಯಾರಿದ್ದಾರೆ! ಘಟೋತ್ಕಚನಲ್ಲ, ಕರ್ಣನಲ್ಲ. ಹಾಗಾದರೆ ಅರ್ಜುನನೊ ?

ರಮೆ:– ಅವನು ಹೇಗಾಗುತ್ತಾನೆ ?

ಮುರಳಿ:– ಅದೇ. ಅವನು ಹೇಗಾಗುತ್ತಾನೆ ? ಆದರೆ ಇನ್ನು ಇಲ್ಲಿ ಇರುವದು ಯಾರು ? ನಾನು, ನೀನು ಮಾತ್ರವೇ. ಏನಾದರೂ ನನ್ನನ್ನೇ ಹೇಳಿಬಿಟ್ಟೆಯೋ ಅಂತ ?

ರಮೆ:– ಹೇಗೆ ?

ಮುರಳಿ:– ನನ್ನ ಕಥನ ಕೌಶಲ್ಯವನ್ನು ನೋಡಿ ನನ್ನಲ್ಲಿ ಅಸಾಧಾರಣ ಭಕ್ತಿ ಗೌರವಗಳುಂಟಾಗಿ ನಾನು ನಿನ್ನಂತಹ ಸಾಮಾನ್ಯ ಹೆಂಗಸಿನ ಮುಂದೆ ಇಂತಹ ಸಾಮಾನ್ಯ ಜಗುಲಿಯ ಮೇಲೆ ಕುಳಿತಿದ್ದರೂ ನನ್ನ ಗೌರವವು ಈ ಸಣ್ಣ ಸ್ಥಾನವನ್ನು ಅವಲಂಬಿಸಿಲ್ಲ ಎಂದೆಲ್ಲ ಏನಾದರೂ ಹೇಳಿಬಿಟ್ಟೆಯೋ ಅಂತ!

ರಮೆ:– ಅಹಾಹ. ಮಂಕುತನ ಒಂದೇ ಸಾಕು. ಅದಕ್ಕೆ ಅಹಂಕಾರವೂ ಸೇರಿದರೆ ಹಾಗೂ ಅಂತಹ ಕರಾಳ ತಮಸ್ಸು ಒಂದು ಗಂಡಸಿನ ರೂಪ ತಾಳಿದರೆ…………

ಮುರಳಿ:– ತಾಳಿದರೆ ? ನನ್ನಂತೆ ಕಾಣಿಸುತ್ತದೊ ? ಆಗಲಿ. ಮತ್ತೆ ಯಾರ ಉದಾಹರಣೆಯನ್ನು ನೀನು ಕೊಟ್ಟಿದ್ದು ರಮಾ ? ಸದ್ಯ. ಭೀಮ ಗೀಮನ ಉದಾಹರಣೆಯನ್ನೇನಾದರೂ ಕೊಟ್ಟೆಯೇನು ?

ರಮೆ:– ಭೀಮನ ಪ್ರಸ್ತಾಪ ಇಲ್ಲಿ ಎಲ್ಲಿ ಬಂದಿದೆ ?

ಮುರಳಿ:– ಅದೇ. ಅದು ಇಲ್ಲಿ ಎಲ್ಲಿ ಬಂದಿದೆ ? ಮತ್ತೆ ಯಾರದ್ದು ಅಂತ ನೀನೇ ಹೇಳಿಬಿಡು.

ರಮೆ:– ರಾತ್ರಿ ಯುದ್ಧದಲ್ಲಿ ಅಜೇಯನಾಗುತ್ತಿದ್ದ ಕರ್ಣನನ್ನು ಎದುರಿಸಲು ಹೊರಟ ಅರ್ಜುನನನ್ನು ತಡೆದು ಕೃಷ್ಣನು ಘಟೋತ್ಕಚನನ್ನು ಯುದ್ಧಕ್ಕೆ ಕಳುಹಿಸಿದ ಎನ್ನುವಾಗ ಅಲ್ಲವೇ ನಾನು ಹೇಳಿದುದು – ಗೌರವವು ತಾನು ಕೂರುವ ಆಸನವನ್ನು ಅವಲಂಬಿಸಿಲ್ಲ ಎಂದು ?

ಮುರಳಿ:– ಗೊತ್ತಾಯಿತು. ಗೊತ್ತಾಯಿತು. ಕೃಷ್ಣನನ್ನು ಕುರಿತು ಹೇಳಿದೆ.

ರಮೆ:– ಹೇಗೆ ?

ಮುರಳಿ:– ಅವನು ಎಲ್ಲಿ ಕುಳಿತರೇನು, ಅವನು ಸಾಕ್ಷಾತ್ ಭಗವಂತ ಎಂಬದಕ್ಕಾಗಿ ಹೇಳಿರಬೇಕು.

ರಮೆ:– ಅದನ್ನು ಇಲ್ಲಿ ಯಾಕೆ ಹೇಳುತ್ತೇನೆ ?

ಮುರಳಿ:– ಕೃಷ್ಣ ಎಂಬ ಪ್ರಸ್ತಾಪ ಬಂದುದಕ್ಕಾಗಿ. ಭಗವಂತನ ಪುಣ್ಯನಾಮ ಕಿವಿಗೆ ಬಿದ್ದೊಡನೆ ಭಕ್ತಿಯ ಭಾವೋದ್ವೇಗದ ಕಟ್ಟೆಯೊಡೆದು ವಿಚಾರಗಂಗೆ ಧುಮ್ಮಿಕ್ಕಿದುದರಿಂದ ಇರಬಹುದೆ ?

ರಮೆ:– ಬೇಡದುದಕ್ಕೆಲ್ಲ ನಿಮಗೆ ಬುದ್ಧಿ ಇದೆ.

ಮುರಳಿ:– ನಾನು ನಿನ್ನನ್ನು ಅಷ್ಟು ಹೊಗಳಿದರೂ ನೀನು ನನ್ನನ್ನು ತೆಗಳುತ್ತೀಯಲ್ಲಾ, ನಾನು ನಿನ್ನೊಂದಿಗೆ ಹೇಗೆ ಬದುಕುವದು, ಹೇಳು !

ರಮೆ:– ಹುಡುಗಿಯನ್ನು ಚೇಡಿಸುವ ಹುಡುಗಾಟ ಬಿಟ್ಟು, ಹೇಳುತ್ತಿರುವ ಕಥಾ ಸಂದರ್ಭದ ಗಾಂಭೀರ್ಯಕ್ಕೆ ಅನುಗುಣವಾಗಿ ಮಾತನಾಡಿ, ಸಾಕು. ಪಾಂಡವ ಪಕ್ಷದ ಸೈನ್ಯಾಧಿಪತಿ ಧೃಷ್ಟದ್ಯುಮ್ನ. ಯುದ್ಧದ ಕಾರ್ಯಕ್ರಮಗಳನ್ನು ನಿಯಂತ್ರಿಸಬೇಕಾಗಿದ್ದವನು ಅವನು. ಅವನಿಲ್ಲವಾದರೆ ಆಜ್ಞೆ ಕೊಡಬೇಕಾದವನು ಪಕ್ಷದ ಪ್ರಥಮನಾದ ಯುಧಿಷ್ಠಿರ. ಅವನೂ ಇಲ್ಲವಾದರೆ ಮಾರ್ಗದರ್ಶನ ನೀಡಬೇಕಾಗಿದ್ದವನು ಆ ಸನ್ನಿವೇಶದಲ್ಲಿ ಯುದ್ಧ ಮಾಡುತ್ತಿದ್ದ ವೀರನಾದ ಅರ್ಜುನ. ಅವನೂ ಇಲ್ಲದಂತೆ ಈಗ ಕೇವಲ ಗಾಡಿ ಹೊಡೆಯುವ ಕೃಷ್ಣ ಮಾರ್ಗದರ್ಶನ ಮಾಡಿ ಆಜ್ಞೆ

ನೀಡುತ್ತಿದ್ದನೆಂದರೆ ಗೌರವವು ಅವನು ಕೂತಿದ್ದ ಆಸನವನ್ನು ಅವಲಂಬಿಸಿರಲಿಲ್ಲ ಎಂದು ಹೇಳಿದಂತಾಗಲಿಲ್ಲವೇ ಎಂದು ಹೇಳಿದರೆ ಸರಸದಾಟಕ್ಕೆ ಬರುತ್ತಾರೆ !

ಮುರಳಿ:– ನೀನು ಬಡಿಸಿದ ರಸದೂಟದ ರುಚಿ ನಿನ್ನೊಂದಿಗೆ ಸರಸದಾಟಕ್ಕೆ ಪ್ರೇರೇಪಿಸಿತು. ಇರಲಿ. ಕೇಳು. ಘಟೋತ್ಕಚ ಸ್ವತಃ ರಾಕ್ಷಸ. ಸಾಲದುದಕ್ಕೆ ಭೀಮನ ಮಗ. ಅವನ ಪ್ರಹಾರಗಳಿಂದ ಕೌರವ ಸೈನ್ಯವು ತತ್ತರಿಸಿಹೋಯಿತು. "ಓ, ಇವನು ಭೀಮನ ಮಗ; ಬಕಾರಿಯ ತನಯ; ಪವನಜಸುತ, ಹೈಡಂಬಿ" ಎನ್ನುತ್ತಾ, ಅವನನ್ನು ನೋಡಿದ ಸೈನ್ಯವು ಭೀಮನನ್ನು ನೆನಸಿಕೊಂಡು ಹೆದರಿತು. ತಾರಕ, ಕೈಟಭ, ಮಹಿಷ, ಜಂಭಾಸುರ, ಕಾಲನೇಮಿ, ರಾವಣ, ಗುಹ, ಕುಂಭಕರ್ಣ ಮೊದಲಾದ ರಾಕ್ಷಸ ವೀರರ ಪರಾಕ್ರಮಗಳು ಇವನಲ್ಲಿ ಕಾಣುತ್ತಿವೆ ಎಂದು ದೇವತೆಗಳು ಹೊಗಳಿದರು. ಯುವಕ ಘಟೋತ್ಕಚನ ಉಪಟಳವು ತಡೆಯಲಾಗದಷ್ಟು ಹೆಚ್ಚಿತು. ಕರ್ಣನು ಅರ್ಜುನನನ್ನು ಕೊಲ್ಲುವ ದಕ್ಕೆಂದು ಒಂದು ಅತ್ಯಪೂರ್ವವಾದ ಶಕ್ತಿಯನ್ನು ಇಟ್ಟುಕೊಂಡಿದ್ದನು. ಅದನ್ನು ಈಗ ಅವನು ಘಟೋತ್ಕಚನ ಮೇಲೆ ಪ್ರಯೋಗಿಸಿ ಅವನನ್ನು ಕೊಲ್ಲದಿದ್ದರೆ ಅವನು ಅರ್ಜುನನ ಮೇಲೆ ಅದನ್ನು ಪ್ರಯೋಗಿಸುವದಕ್ಕೆ ಅವಕಾಶವೇ ಆಗದಂತೆ ತಾವು ನಾಶವಾಗುವದು ನಿಶ್ಚಯವೆಂದು ಕರ್ಣನನ್ನು ದುರ್ಯೋಧನನು ಒಡಂಬಡಿಸಿ ಅವನು ಆ ಶಕ್ತಿಯನ್ನು ಘಟೋತ್ಕಚನ ಮೇಲೆ ಪ್ರಯೋಗ ಮಾಡುವಂತೆ ಮಾಡಿ ಅವನನ್ನು ಕೊಲ್ಲಿಸಿದನು. ಘಟೋತ್ಕಚನ ಸಾವಿಗಾಗಿ ಪಾಂಡವರು ಬಹಳ ದುಃಖಿಸಿದರು. ಈ ಮಧ್ಯೆ ಧೃತರಾಷ್ಟ್ರನು ಸಂಜಯನನ್ನು ಕುರಿತು ಕರ್ಣನಿಂದ ಪ್ರಯೋಗಿಸಲ್ಪಟ್ಟ ಆ ಶಕ್ತ್ಯಾಯುಧದ ವಿಷಯವನ್ನು ಕೇಳಲು ಅವನು "ರಾಜಾ, ಅರ್ಜುನನನ್ನು ರಕ್ಷಿಸುವದಕ್ಕಾಗಿಯೇ ಕೃಷ್ಣನು ಘಟೋತ್ಕಚನನ್ನು ಕರ್ಣನಿಗೆದುರಾಗಿ ಕಳುಹಿಸಿದುದು. ಆ ಕೃಷ್ಣನೊಬ್ಬನಿಲ್ಲದಿರುತ್ತಿದ್ದರೆ ಅರ್ಜುನನು ಯುದ್ಧದಲ್ಲಿ ನಿಮಿಷ ಮಾತ್ರವೂ ಬದುಕುವ ಸಂಭವವಿರಲಿಲ್ಲ. ಕೃಷ್ಣನ ವಿವಿಧ ತಂತ್ರಗಳಿಂದಲೇ ಅರ್ಜುನನು ವಿಜಯ ಎಂಬ ಹೆಸರನ್ನು ಉಳಿಸಿಕೊಂಡಿದ್ದಾನಲ್ಲದೆ ಬೇರೆಯಲ್ಲ" ಎಂದನು. ಮಾರನೆಯ ದಿನದ ಯುದ್ಧವು ಪ್ರಾರಂಭವಾಯಿತು.

ರಮೆ:– ಇದೇನು ಹೀಗೆ ಓಡುತ್ತೀರಿ ?

ಮುರಳಿ:– ಬಸ್ಸಿಗೆ ಹೊತ್ತಾಯಿತು. ಅದಕ್ಕೆ.

ರಮೆ:– ಬಸ್ಸಿಗೆ ? ಎಂಥಾ ಬಸ್ಸು ?

ಮುರಳಿ:– ಕುಳಿತವನು ಓಡುವದು ಕಾಣಿಸುವಾಗ, ಅಲ್ಲಿಲ್ಲದ ಬಸ್ಸು ರಸ್ತೆಯ ಬದಿಯಲ್ಲಿ ನಿಂತಂತೆ ನಿನಗೆ ಕಾಣಿಸುತ್ತಿಲ್ಲವೇನು ?

ರಮೆ:– ನಿಮ್ಮ ಭಾಷಾ ಪಾಂಡಿತ್ಯದ ಪ್ರದರ್ಶನ ಸಾಕು. ಕತೆಯನ್ನು ಯಾಕೆ ಓಡಿಸುತ್ತೀರಿ ಎಂದು ಕೇಳಿದೆ.

ಮುರಳಿ:– ಎಲ್ಲಿ ಓಡಿಸಿದೆ ? ಘಟೋತ್ಕಚನ ಮರಣದೊಂದಿಗೆ ಅಂದಿನ ರಾತ್ರಿ ಯುದ್ಧವು ಮುಗಿಯಿತು. ಮಾರನೆಯ ದಿನದ ಯುದ್ಧ ಪ್ರಾರಂಭ ವಾಯಿತು ಎಂದೆ. ಸೈನ್ಯದವರೆಲ್ಲ ಹೇಗೆ ಮಲಗಿಕೊಂಡರು, ಯಾವ ಗಾಯಕ್ಕೆ ಏನು ಮದ್ದು ಹಾಕಿದರು, ಎಷ್ಟೆಷ್ಟು ವಿಕಾರವಾಗಿ ನೋವಿನಿಂದ ನರಳಿದರು, ಏನೇನು ಕೆಟ್ಟ ಸ್ವಪ್ನಗಳನ್ನು ಕಂಡರು, ಹೇಗೆ ಹೇಗೆಲ್ಲ ಗೊರಕೆ ಹೊಡೆದರು ಎಂಬ ವಿವರಗಳನ್ನು ಹೇಳಲಿಲ್ಲ, ಅಷ್ಟೆ.

ರಮೆ:– ನಿಮ್ಮ ಆ ವಿವರಗಳನ್ನೆಲ್ಲ ನಾಳೆ ನಿಮಗೆ ಹುಟ್ಟುವ ಮಕ್ಕಳಿಗಾಗಿ ಕಾದಿಟ್ಟುಕೊಳ್ಳಿ. ನನಗೆ ಬೇಡ. ನಾನು ಕೇಳಿದುದು ಅದಲ್ಲ. ಕೌರವ ಸೈನ್ಯ ವನ್ನು ಒಮ್ಮೆಗೇ ತಲ್ಲಣಿಸುವಂತೆ ಮಾಡಿ, ಕರ್ಣನಲ್ಲಿದ್ದ ಅಪೂರ್ವ ಶಕ್ತಿಯನ್ನು ನಷ್ಟ ಮಾಡಿಸಿ ಪಾಂಡವ ವೀರನಾದ ಅರ್ಜುನನ ಪ್ರಾಣವನ್ನು ತನ್ನ ಪ್ರಾಣತ್ಯಾಗ ದಿಂದ ಉಳಿಸಿದ ಘಟೋತ್ಕಚನು ಸತ್ತುದಕ್ಕಾಗಿ ಅವನ ತಂದೆಯಾದ ಭೀಮನು ದುಃಖಿಸಿ, ಅಭಿಮನ್ಯುವಿನ ಮರಣದ ಸಂದರ್ಭದಲ್ಲಿ ಅರ್ಜುನನು ಪ್ರತಿಜ್ಞೆ ಮಾಡಿ ದಂತೆ ತಾನೂ ರೋಷವನ್ನು ಪ್ರಕಟಿಸಲಿಲ್ಲವೇ ಎಂದು ಕೇಳಿದೆ.

ಮುರಳಿ:– ಇಲ್ಲ.

ರಮೆ:– ಯಾಕೆ ?

ಮುರಳಿ:– ಗೊತ್ತಿಲ್ಲ.

ರಮೆ:– ಯಾಕೆ ಗೊತ್ತಿಲ್ಲ ? ಭೀಮನು ಹೃದಯಶೂನ್ಯ ಎಂದು ಹೇಳಲು ನಿಮಗೆ ನಾಲಿಗೆ ಹಿಡಿಯುತ್ತದೆ, ಅದಕ್ಕೆ.

ಮುರಳಿ:– ಹೃದಯ ಯಾಕೆ ಶೂನ್ಯ ? ಘಟೋತ್ಕಚ ಎಷ್ಟಾದರೂ ರಾಕ್ಷಸ ನಲ್ಲವೆ ?

ರಮೆ:– ಓಹೊ. ಅವನು ರಾಕ್ಷಸ. ಭೀಮನ ಮಗನಲ್ಲ !

ಮುರಳಿ:– ಮಗ ಹೌದು. ಆದರೂ ರಾಕ್ಷಸ ತಾನೆ ?

ರಮೆ:– ಹಾಗಾದರೆ ರಾಕ್ಷಸ ಸತ್ತುದರಿಂದ ಮನುಷ್ಯನಾದ ಭೀಮನಿಗೆ ಆನಂದವಾದುದನ್ನಾದರೂ ನೀವು ಹೇಳಲಿಲ್ಲವಲ್ಲ !

ಮುರಳಿ:– ಆನಂದವಾಗಲು ಅವನು ಮಗನಲ್ಲವೆ ?

ರಮೆ:– ಘಟೋತ್ಕಚನು ರಾಕ್ಷಸನಾಗಿದ್ದುದರಿಂದ ಅವನು ಸತ್ತುದರಿಂದಾಗಿ ಮನುಷ್ಯನಾದ ಭೀಮನಿಗೆ ದುಃಖವಾಗಲಿಲ್ಲ. ಅವನು ಮಗನಾಗಿದ್ದುದರಿಂದ ತಂದೆ

ಯಾದ ಇವನಿಗೆ ಆನಂದವೂ ಆಗಲಿಲ್ಲ ! ಅದಕ್ಕೇ ನಾನು ಹೇಳಿದುದು–ಅವನಿಗೆ ಹೃದಯುವಿರಲಿಲ್ಲ ಎಂದು.

ಮುರಳಿ:– ಅವನಿಗೆ ಮಗನೆಂಬ ವ್ಯಾಮೋಹವಿಲ್ಲ. ರಾಕ್ಷಸನೆಂಬ ತಿರಸ್ಕಾರವಿಲ್ಲ. ಸಾಮಾನ್ಯರ ಹೃದಯು ಅವನಲ್ಲಿರಲಿಲ್ಲ ಎಂಬದು ನಿಜ. ಅವನಲ್ಲಿದ್ದುದು ಯೋಗಿಯ ಹೃದಯು, ಸ್ಥಿತಪ್ರಜ್ಞನ ಹೃದಯು. ಮಗನಿಗಾಗಿ ಅಳುವದು ಪ್ರಕೃತಿಯ ಸಹಜ ಲಕ್ಷಣ. ಅಳದಿರಲು ಸಾಧ್ಯವಾಗುವದು ಪ್ರಕೃತಿಯನ್ನು ಮೀರಿದ ಲಕ್ಷಣ. ಮಗನ ಮೇಲಿನ ವ್ಯಾಮೋಹದಿಂದ ರೋಷ ವೇರ್ಪಟ್ಟು ಅದರಿಂದ ದೃಷ್ಟಿ ಮಂಕಾಗಿ ಭಾವೋದ್ವೇಗಕ್ಕೆ ಈಡಾಗಿ ಹಿಂದೆ ಮುಂದೆ ನೋಡದೆ ಏನೋ ಪ್ರತಿಜ್ಞೆ ಮಾಡಿಬಿಟ್ಟು ಅರ್ಜುನನು ತನಗೂ ತನ್ನನ್ನು ನಂಬಿದವರಿಗೂ ಎಂತಹ ಆಪತ್ತನ್ನು ತಂದುಕೊಂಡ ಎಂಬದನ್ನು ನೋಡಿದ್ದೇವೆ. ಇದು ಸಾಮಾನ್ಯ ಮಾನವರ ಲಕ್ಷಣ. ಪ್ರಕೃತಿ, ಮಾನವ, ಪುರುಷಾರ್ಥ, ಕರ್ಮ, ಜ್ಞಾನ ಮೊದಲಾದ ಸದ್ವಿಚಾರಗಳನ್ನು ತಿಳಿದುಕೊಳ್ಳುವದಕ್ಕಾಗಿ ನೀನು ಭಗವದ್ಗೀತೆಯನ್ನು ಓದಬಹುದು. ಅಥವಾ ಅಷ್ಟೇ ಪ್ರಯೋಜನ ಸಿಕ್ಕಲು ಭೀಮನ ಜೀವನವನ್ನು ವಿಶ್ಲೇಷಿಸಬಹುದು. ಯುದ್ಧದಲ್ಲಿ ಮಗನು ಸತ್ತಾಗ ಯಾರ ಮೇಲೆ ಸಿಟ್ಟು ಮಾಡಿಕೊಳ್ಳಲೂ ಸಾಧ್ಯವಿಲ್ಲ. ವಿರಾಟನಗರದಲ್ಲಿ ಕೀಚಕನು ದ್ರೌಪದಿಯನ್ನು ಕೇವಲ ಕೆಣಕಿದಾಗ ತಮ್ಮ ಅಜ್ಞಾತವಾಸ, ಅಣ್ಣನ ಕಟ್ಟುಪಾಡು, ತಮ್ಮ ಜೀವನದ ಭವಿಷ್ಯ – ಇದ್ಯಾವದನ್ನೂ ಲೆಕ್ಕಿಸದೆ ಕೀಚಕನಲ್ಲಿ ಕೋಪಗೊಂಡ ಭೀಮ ಯುದ್ಧ ಭೂಮಿಯಲ್ಲಿ ತನ್ನ ಮಗನೇ ಸತ್ತು ಬಿದ್ದಾಗ ಅವನನ್ನು ಕೊಂದವನ ಮೇಲೆ ಅದಕ್ಕಾಗಿ ಎಳ್ಳಷ್ಟೂ ಸಿಟ್ಟಾಗಲಿಲ್ಲ ಎಂಬದು ಅವನು ಎಷ್ಟು ದೊಡ್ಡ ವಿವೇಕಿ ಎಂಬದನ್ನಷ್ಟೇ ತೋರಿಸುತ್ತದೆ.

ರಮೆ:– ಮಾರನೆಯ ದಿನದ ಯುದ್ಧ ಎಂದರೆ ಹದಿನೈದನೆಯ ದಿನದ ಯುದ್ಧ. ಅಲ್ಲವೆ ?

ಮುರಳಿ:– ಹೌದು. ಯಾಕೆ ಓಡುತ್ತಿದ್ದೀಯ ?

ರಮೆ:– ಆಡಬಾರದುದನ್ನು ಆಡಿದವನು ಹಾಗೆ ಆಡಿ ಸಿಕ್ಕಿಕೊಂಡು ಬಿಟ್ಟಾಗ ಹೇಗಾದರೂ ತಪ್ಪಿಸಿಕೊಳ್ಳಲಿಕ್ಕೆಂದು ಓಡದೆ ಇನ್ನೇನು ಮಾಡುವದು ?

ಮುರಳಿ:– ಅಷ್ಟು ಸಾಕು, ಮುಂದಕ್ಕೆ ಕೇಳು. ಹದಿನೈದನೆಯ ದಿನದ ಯುದ್ಧವು ದ್ರೋಣಾಚಾರ್ಯನ ನಾಯಕತ್ವದ ಕೊನೆಯ ದಿನದ ಯುದ್ಧ. ಆ ದಿನ ಚಾಪಾಗಮಾಚಾರ್ಯನು ಮಾಡಿದ ಯುದ್ಧವು ಯಾವ ವಿಶೇಷಣಗಳಿಗೂ ಸಿಕ್ಕದಷ್ಟು ಅದ್ಭುತವಾಗಿತ್ತು. ಅವನು ಶತ್ರು ಸೈನ್ಯವನ್ನು ಸಾವಿರಗಟ್ಟಲೆಯಲ್ಲಿ, ಲಕ್ಷಗಟ್ಟಲೆಯಲ್ಲಿ ಧ್ವಂಸ ಮಾಡಿದನು. ಪಾಂಡವ ಸೈನ್ಯವು ದಿಕ್ಕಿಲ್ಲದಂತೆ ಕಾಣಿಸು

ತ್ತಿತ್ತು. ಯಾವ ಮಹಾರಥನೂ ಆಚಾರ್ಯನ ಮುಂದೆ ನಿಂತು ಯುದ್ಧ ಮಾಡುವ ಧೈರ್ಯ ಮಾಡಲಿಲ್ಲ – ಎಲ್ಲ ವೀರರೂ ಗಾಯಗೊಂಡರು. ದ್ರೋಣನು ಕೈ ದಣಿಯುವಂತೆ ಶತ್ರುಗಳನ್ನು ಕೊಂದನು. ತನ್ನನ್ನು ಪಾಂಡವ ಪಕ್ಷಪಾತಿ ಎಂದು ಈ ವರೆಗೆ ಆಪಾದಿಸುತ್ತಿದ್ದ ದುರ್ಯೋಧನನನ್ನು ಕರೆದು ತನ್ನ ಯುದ್ಧವನ್ನು ನೋಡುವಂತೆ ಹೇಳಿದನು. ಆ ದಿನ ಬಹುಶಃ ದ್ರೋಣಾಚಾರ್ಯನ ಜೀವನದಲ್ಲಿಯೇ ಅವನು ಅತ್ಯಂತ ವಿಶೇಷವಾದ ಸಾಮರ್ಥ್ಯವನ್ನು ತೋರಿದ ದಿನವಾಗಿತ್ತು. ಅವನಿಗೆ ಎದುರೇ ಇರಲಿಲ್ಲ. ಅಂದಿನ ದ್ರೋಣಾಚಾರ್ಯನನ್ನು ಎದುರಿಸುವದು ಅಸಾಧ್ಯವೆಂಬದನ್ನು ಮನಗಂಡ ಕೃಷ್ಣನು ಯುಧಿಷ್ಠಿರನನ್ನು ಕರೆದು ಅಶ್ವತ್ಥಾಮ ಎಂಬ ಹೆಸರಿನ ಆನೆಯು ಸತ್ತ ಸುದ್ದಿಯನ್ನು ಗಟ್ಟಿಯಾಗಿ ತಿಳಿಸುವಂತೆ ಹೇಳಿದನು. ಯುಧಿಷ್ಠಿರನು ಹಾಗೆ ಹೇಳಲು ನಿರಾಕರಿಸಿದಾಗ ಭೀಮನು ತಾನದನ್ನು ಗಟ್ಟಿಯಾಗಿ ಕೂಗಿ ಹೇಳಿದನು. ಇದರಿಂದ ಚಕಿತನಾದ ದ್ರೋಣನು ಪಾಂಡವರ ಕುಹಕವನ್ನು ಗುರುತಿಸಿ ಇನ್ನಷ್ಟು ಪ್ರಚಂಡವಾಗಿ ಯುದ್ಧಮಾಡಿದನು. ಆ ವೇಳೆಗೆ ಅಲ್ಲಿಗೆ ಕೆಲವು ಋಷಿಗಳು ಬಂದು ದ್ರೋಣನ ವರ್ಣ ಧರ್ಮವನ್ನು ಅವನಿಗೆ ಜ್ಞಾಪಿಸಿ ಹಿಂದಿರುಗಿದರು. ಇದರಿಂದ ಶಾಂತನಾದ ಗುರುವು ತನ್ನ ಮಗ ಅಶ್ವತ್ಥಾಮನು ಸತ್ತುದು ಹೌದೇ ಎಂಬದನ್ನು ಯುಧಿಷ್ಠಿರನ ಬಾಯಿಂದ ಕೇಳಲು ಬಯಸಿದಾಗ ಯುಧಿಷ್ಠಿರನು ಕೃಷ್ಣನ ನಿರ್ಬಂಧಕ್ಕೆ ಕಟ್ಟುಬಿದ್ದು ಹಾಗೆ ಹೇಳಬೇಕಾಯಿತು. ಯುಧಿಷ್ಠಿರನ ಬಾಯಿಂದ ಆ ಮಾತು ಬಂದುದರಿಂದ ತನ್ನ ಮಗ ಅಶ್ವತ್ಥಾಮನು ಸತ್ತುದು ನಿಜವಿರಬೇಕೆಂದು ನಂಬಿದ ದ್ರೋಣನಿಗೆ ಬಹಳ ವ್ಯಸನವಾಯಿತು. ಜೊತೆಯಲ್ಲಿಯೇ ಕೋಪವೂ ಮೇರೆ ಮೀರಿ ಉಕ್ಕಿ ಬಂದಿತು. ಅವನೀಗ ಹೆಣಗಳ ಒಟ್ಟಿಲನ್ನು ಕಟ್ಟಿದನು. ಅವನ ಆ ಕೋಪವು ಹಾಗೆಯೇ ಮುಂದುವರಿದಿದ್ದರೆ ಆ ದಿನವೇ ಪಾಂಡವ ಸೈನ್ಯವು ನಾಮಾವಶೇಷವಾಗುವ ಸಾಧ್ಯತೆ ಇತ್ತು. ಅವನನ್ನೆದುರಿಸಿದ ಧೃಷ್ಟದ್ಯುಮ್ನನು ಬಹಳ ಗಾಯಗೊಂಡು ಶೋಚನೀಯ ಸ್ಥಿತಿಗೀಡಾದನು. ಇದರಿಂದ ಭೀಮನಿಗೆ ದುಸ್ಸಹವಾದ ಕೋಪ ಉಂಟಾಯಿತು. ಅವನು ದ್ರೋಣನನ್ನು ಎಳ್ಳಷ್ಟೂ ಲೆಕ್ಕಿಸದೆ ರಭಸದಿಂದ ನೇರವಾಗಿ ಮುನ್ನುಗ್ಗಿ ಅವನ ರಥವನ್ನು ಕೈಯಿಂದ ಹಿಡಿದು ನಿಲ್ಲಿಸಿ ಅವನನ್ನು ಕುರಿತು ಮೃದುವಾಗಿ "ಆಚಾರ್ಯ, ಅಹಿಂಸೆಯು ಶ್ರೇಷ್ಠವಾದ ಧರ್ಮಾಚರಣೆ. ನೀನೀಗ ಪರ ಧರ್ಮವನ್ನಾಶ್ರಯಿಸಿ, ಮ್ಲೇಚ್ಛಾದಿಗಳನ್ನು ಕೊಲ್ಲುತ್ತಿದ್ದೀಯೆ. ನೀನು ಬ್ರಾಹ್ಮಣನಾಗಿದ್ದು ಅಜ್ಞಾನಿಯಂತೆ ಈ ಹೀನ ಕೃತ್ಯವನ್ನು ಮಾಡುತ್ತಿದ್ದೀಯೆ. ಯಾವ ಈ ನಿನ್ನ ಭೂತ ಹಿಂಸೆಯನ್ನೆಲ್ಲ ನೀನು ನಿನ್ನ ಮಗನ ಹೆಸರಿನಲ್ಲಿ ಮಾಡುತ್ತಿದ್ದೀಯೋ ಅಂತಹ ಮಗನೇ ಇಲ್ಲವಾಗಿರವಾಗ ಆ ಪುತ್ರನಾಶವನ್ನೂ ಬಗೆಯದೆ ನೀನು ಈ ಹಿಂಸಾಕಾರ್ಯದಲ್ಲಿ ತೊಡಗಿದ್ದೀಯೆ" ಎಂದನು. ದ್ರೋಣನಿಗೆ

ಒಮ್ಮಿಂದೊಮ್ಮೆಗೇ ತೀವ್ರವಾದ ಮನಃ ಪರಿವರ್ತನೆಯುಂಟಾಯಿತು. ಅವನು ಹಾಗೆಯೇ ಶಸ್ತ್ರ ಸನ್ಯಾಸ ಮಾಡಿ ರಥದಲ್ಲಿ ಕುಳಿತು ಯೋಗಾರೂಢನಾಗಿ ಶರೀರ ವನ್ನು ತ್ಯಜಿಸಿದನು.

ರಮೆ:– ಹಿಂಸೆಯ ಪ್ರತಿರೂಪಾಗಿದ್ದ ಭೀಮನು ದ್ರೋಣರಿಗೆ ಅಹಿಂಸೆಯ ಕುರಿತು ನೆನಪಿಸಿದುದು ಹಾಸ್ಯಾಸ್ಪದ ಎನಿಸಲಾರದೆ?

ಮುರಳಿ:– ಅದು ಯುದ್ಧ. ಭೀಮ ಶತ್ರುವಿನ ದೌರ್ಬಲ್ಯವನ್ನು ತಿಳಿದು ಕೊಂಡು ಅದಕ್ಕೆ ಗುರಿಯಿಟ್ಟು ಹೊಡೆದ ಬಾಣ ಅದು. ವರ್ಣಾಶ್ರಮ ಧರ್ಮಕ್ಕೆ ವಿಶೇಷವಾದ ಗೌರವವಿದ್ದ ಕಾಲದಲ್ಲಿ ದ್ರೋಣರು ತಮ್ಮ ಧರ್ಮವನ್ನು ಮೀರಿ ಒಂದು ಅಕೃತ್ಯದಲ್ಲಿ ತಾನು ತೊಡಗಿದ್ದಾರೆಂದು ಅವರಿಗೆ ನೆನಪಿಸುವದು ಅವರ ಸತ್ವವನ್ನು ಉಡುಗಿಸಲು ಸಮರ್ಥವಾಗಿದ್ದ ಒಂದು ಶಸ್ತ್ರಪ್ರಯೋಗವಾಗಿತ್ತು. ಅವರ ಮಗ ಸತ್ತುಹೋಗಿದ್ದಾನೆಂಬದಂತೂ ಅವರನ್ನು ಯುದ್ಧದಿಂದ ಸಂಪೂರ್ಣ ವಾಗಿ ವಿಮುಖನನ್ನಾಗಿ ಮಾಡಲು ಸಮರ್ಥವಾಗಿದ್ದ ಇನ್ನೊಂದು ಪ್ರಬಲ ಅಸ್ತ್ರ. ಭೀಮ ಬಹಳ ಕೌಶಲ್ಯದಿಂದ ಇವುಗಳನ್ನು ಪ್ರಯೋಗಿಸಿದ್ದ.

ರಮೆ:– ಧನ್ಯ ಭೂಮಿ ಭಾರತ.

ಮುರಳಿ:– ಏಕೆ?

ರಮೆ:– ಹೌದು. ಒಪ್ಪಬೇಕು. ಎಂತೆಂತಹ ಮಹಾನ್ ವ್ಯಕ್ತಿಗಳು ಇಲ್ಲಿ ಆಗಿಹೋಗಿದ್ದಾರೆ! ಕಾಲಭೈರವನಂತೆ ವಿನಾಶಕಾರ್ಯದಲ್ಲಿ ತೊಡಗಿದ್ದ ಅಸಮಾನ ವೀರ ದ್ರೋಣನನ್ನು ಕಂಡು ಪಾಂಡವ ಬಲವೆಲ್ಲ ಹೆದರಿ ಓಡುತ್ತಿದ್ದಾಗ ಅವನ ಶತ್ರುವಾದವನೊಬ್ಬನು ಅವನಲ್ಲಿಗೆ ನಿರ್ಭಯವಾಗಿ ಹೋಗುವದು, ಅವನ ಬಳಿ ಮಾತನಾಡುವದು, ಆ ಕ್ರೌರ್ಯದ ನಡುವೆ ಆ ಗುರುವಿಗೆ ಕೊಡಬೇಕಾದ ಗೌರವ ವನ್ನು ಕೊಟ್ಟು ವಿನಯದಿಂದ ಮಾತನಾಡಿಸುವದು, ಅವನು ವರ್ಣದಲ್ಲಿ, ವಯಸ್ಸಿ ನಲ್ಲಿ, ಅಂತಸ್ತಿನಲ್ಲಿ ಹಿರಿಯನಾದರೂ ಅವನಿಗೆ ಹಿತೋಪದೇಶ ಮಾಡುವದು ಈ ಎಲ್ಲದರ ಮೂಲಕ ತನ್ನ ಕರ್ತವ್ಯವನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸುವದು– ಇದನ್ನೆಲ್ಲ ಕೇಳುವಾಗ ಆ ಭೀಮನ ನಿರ್ಭಯತೆ, ನಿರ್ಲಿಪ್ತತೆ, ಹಿರಿಯರಲ್ಲಿ ಗೌರವ, ಯಾವಾಗ ಏನು ಮಾಡಬೇಕೆಂದು ತಿಳಿದಿರುವ ಕರ್ತವ್ಯಜ್ಞಾನ – ಇವುಗಳೆಲ್ಲ ನೆನಪಿಗೆ ಬಂದು ರೋಮಾಂಚನವಾದಂತಾಗುತ್ತದೆ. ಇರಲಿ. ಮುಂದಕ್ಕೆ ಹೇಳಿ.

ಮುರಳಿ:– ಕೇಳು. ಈ ರೀತಿ ಯೋಗಾರೂಢನಾಗಿ ಕುಳಿತಿದ್ದ ದ್ರೋಣ ನನ್ನು ಪಾಂಡವ ಸೇನಾನಾಯಕನಾದ ಧೃಷ್ಟದ್ಯುಮ್ನನು ತನ್ನ ಜೀವಿತದ ಉದ್ದೇಶ ವನ್ನು ಸಫಲಗೊಳಿಸಲಿಕ್ಕೆಂಬಂತೆ ತನ್ನ ಪಕ್ಷದವರೇ ಅನೇಕರು ವಿರೋಧಿಸು

ತ್ತಿದ್ದರೂ ಕೂಡ ಛಿದ್ರ ಛಿದ್ರವಾಗಿ ತುಂಡು ಮಾಡಿದನು. ಕೌರವ ಸೈನ್ಯವು ಒಮ್ಮೆಗೇ ಬಣ್ಣಗೆಟ್ಟಿತು. ತಮ್ಮ ಸೈನ್ಯದ ಇಂತಹ ದುರವಸ್ಥೆಯನ್ನೂ, ರಥಿಕ ನಿಲ್ಲದ ತನ್ನ ತಂದೆಯ ರಥವನ್ನೂ, ಕೊನೆಯಲ್ಲಿ ಛಿದ್ರ ಛಿದ್ರವಾಗಿ ಹೋಗಿದ್ದ ತನ್ನ ತಂದೆಯ ಶರೀರವನ್ನೂ ನೋಡಿದ ಅಶ್ವತ್ಥಾಮನು ಬಹಳವಾಗಿ ದುಃಖಿಸಿದನು. ಅವನ ದುಃಖವು ಕೂಡಲೇ ಉಗ್ರವಾದ ಕೋಪವಾಗಿ ಮಾರ್ಪಟ್ಟಿತು. ರುದ್ರನ ಅಂಶದಿಂದ ಹುಟ್ಟಿದ್ದ ಅಶ್ವತ್ಥಾಮನು ರೌದ್ರಾವತಾರಿಯಾಗಿ ಇಡಿಯ ವಿಶ್ವದ ಅಳಿವನ್ನೇ ನಿಶ್ಚಯಿಸಿದ ಮಹಾಕಾಲನಂತೆ ಭೀಷಣನಾಗಿ ಸಮಸ್ತ ಪಾಂಡವ ಬಲವನ್ನೂ ಒಂದೇ ಹೊಡೆತಕ್ಕೆ ನಾಶ ಮಾಡಲು ನಿರ್ಧರಿಸಿ ನಾರಾಯಣ ಮಹಾಸ್ತ್ರವನ್ನು ಹೆದೆಗೇರಿಸಿದನು. ಈ ಅಸ್ತ್ರವನ್ನು ಎದುರಿಸುವ ಪ್ರತಿ ಅಸ್ತ್ರವನ್ನು ವಿಶ್ವವು ಈವರೆಗೆ ಕಾಣಲಿಲ್ಲ. ಅದನ್ನು ಅಶ್ವತ್ಥಾಮನು ಅಭಿಮಂತ್ರಿಸಿದ ಕೂಡಲೇ ಅದು ಜಾಜ್ವಲ್ಯಮಾನವಾಗಿ ಉರಿಯಲು ಪ್ರಾರಂಭಿಸಿತು. ಕೇವಲ ಆ ಉರಿಯನ್ನು ತಾಳಲಾರದೆ ಆನೆ, ಕುದುರೆಗಳು ದಿಕ್ಕಾಪಾಲಾಗಿ ಓಡಿದವು. ಅದರ ಬೇಗೆಯಿಂದ ಸೈನ್ಯವು ಬಳಲಿತು. ಈ ಗಲಭೆಯನ್ನು ಕಂಡ ಅರ್ಜುನನು ವಿಷಯವನ್ನು ತಿಳಿದುಕೊಂಡು ದ್ರೋಣನ ವಧೆಗೆ ಕಾರಣನಾದ ಯುಧಿಷ್ಠಿರನನ್ನು ಹಳಿದನು. ಯುಧಿಷ್ಠಿರನು ಕುಟಿಲತನದಿಂದ ದ್ರೋಣನನ್ನು ಕೊಲ್ಲಿಸಿದನೆಂದೂ ಅದರಿಂದ ಕ್ರುದ್ಧನಾಗಿರುವ ಅಶ್ವತ್ಥಾಮನನ್ನು ತಡೆಯಲು ತನ್ನಿಂದ ಸಾಧ್ಯವಿಲ್ಲವೆಂದೂ ಯುಧಿಷ್ಠಿರನೇ ಹೋಗಿ ಅಶ್ವತ್ಥಾಮನನ್ನು ಎದುರಿಸಬೇಕೆಂದೂ ಜರೆದನು.

ರಮೆ:- ಛೀ, ನೀಚ. ಹೇಡಿ, ಹೆಣ್ಣಿಗ, ಪುಕ್ಕಲ, ತಾನೊಬ್ಬ ಮಹಾವೀರನೆಂದು ತಿಳಿದುಕೊಂಡಿರುವ ಬಡಾಯಿಕೋರ.

ಮುರಳಿ:- ಇರಲಿ. ಅವನಿಗೆ ಬೇರೆ ಹತ್ತು ದಿವ್ಯ ನಾಮಗಳೂ ಇವೆ. ಕೇಳು. ಅರ್ಜುನನು ಅಣ್ಣನನ್ನು ಹಳಿದುದನ್ನು ಖಂಡಿಸಿದ ಭೀಮನು ತಾನು ಅಶ್ವತ್ಥಾಮನನ್ನು ಎದುರಿಸುವದಾಗಿ ತಿಳಿಸಿದನು.

ರಮೆ:- ಗಂಡು. ಅವನೀಗ ಗಂಡು. ಗಂಡುಗಳ ಗಂಡು. ಧೀರ.

ಮುರಳಿ:- ಇರಲಿ, ಇರಲಿ. ಯಾರೂ ಕೊಡದ ದಿವ್ಯನಾಮಗಳನ್ನು ಅವನಿಗೆ ನೀನು ಕೊಡುವದು ಬೇಡ. ಕೇಳು. ಈ ಕಡೆ ಅಶ್ವತ್ಥಾಮನು ನಾರಾಯಣಾಸ್ತ್ರವನ್ನು ಆಕ್ರೋಶದಿಂದ ಎಳೆದು ಪ್ರಯೋಗಿಸಿದನು. ಅದಕ್ಕೆ ಎದುರೇ ಇಲ್ಲದುದನ್ನೂ ಅದು ಮಾಡಬಹುದಾಗಿದ್ದ ಸರ್ವನಾಶವನ್ನೂ ತಿಳಿದಿದ್ದ ಕೃಷ್ಣನು ಕೂಡಲೇ ಪಾಂಡವ ಬಲದ ಸಮಸ್ತ ಸೈನಿಕರೂ ತಮ್ಮ ತಮ್ಮ ಎಲ್ಲ ಆಯುಧಗಳನ್ನೂ ಬಿಸುಟು ನಿಶ್ಶಸ್ತ್ರರಾಗಿ ನಿಲ್ಲುವಂತೆ ಆಜ್ಞಾಪಿಸಿದನು. ಎಲ್ಲರೂ ಹಾಗೆಯೇ ಮಾಡಿದರು. ಆದರೆ ಭೀಮನೊಬ್ಬ ಮಾತ್ರ ಆಯುಧವನ್ನು ಬಿಸಾಡದೆ

ಮುಂದೆ ನಡೆದನು. ಕೃಷ್ಣನು ತಾನೇ ಓಡಿ ಹೋಗಿ ಭೀಮನ ಮುನ್ನಡೆಯನ್ನು ತಡೆಯಬೇಕಾಯಿತು. ಆಗ ಭೀಮನು "ಕೃಷ್ಣಾ, ಉಳಿಯುವದು ದೇಹವೋ, ಕೀರ್ತಿಯೊ? ಭಂಡತನದಿಂದ ಪೌರುಷವನ್ನು ಕಳೆದುಕೊಂಡು ಈ ಶರೀರವನ್ನು ಉಳಿಸಿಕೊಳ್ಳಲು ನಾನು ಇಚ್ಛಿಸುವದಿಲ್ಲ. ಸತ್ತರೂ ಪೌರುಷದಿಂದೊಡಗೂಡಿಯೇ ಸಾಯುತ್ತೇನೆ" ಎಂದು ಹೇಳುತ್ತಲೇ ಸಾವಿಗೆದುರಾಗಿ ಮುಂದುವರಿದನು. ಇಷ್ಟರಲ್ಲಿ ನಾರಾಯಣಾಸ್ತ್ರವು ಪಾಂಡವ ಪಕ್ಷದ ಪ್ರತಿಯೊಬ್ಬನನ್ನೂ ಸಂಧಿಸುತ್ತಾ ಎಲ್ಲರೂ ನಿಶ್ಯಸ್ತ್ರರಾಗಿರುವದನ್ನು ಕಂಡು ಭೀಮನಲ್ಲಿಗೆ ಬಂದು ಅವನು ಶಸ್ತ್ರಧಾರಿಯಾಗಿರುವದನ್ನು ನೋಡಿ ಮೆಚ್ಚಿ "ಶಹಭಾಸ್ ಭೀಮ. ಗಂಡುಗಳ ಗಂಡು ಇಲ್ಲಿ ನೀನೊಬ್ಬನೇ. ಉಳಿದವರೆಲ್ಲರೂ ಗಂಡು ವೇಷವನ್ನು ಧರಿಸಿರುವ ಹೆಂಗಸರು. ನೀನು ಇಂದು ನನಗೆ ಸೋತರೂ ಜಯವು ನಿನ್ನದೇ" ಎನ್ನುತ್ತ ಅವನನ್ನು ಆಕ್ರಮಿಸಿಕೊಂಡಿತು. ಮಹಾ ಪರ್ವತವೇ ಉರಿಯತೊಡಗಿದಂತೆ ಭೀಮನನ್ನು ಜ್ವಾಲೆ ಆವರಿಸಿತು. ಇದರಿಂದ ಹೆದರಿದ ಅರ್ಜುನನು ತಕ್ಷಣವೇ ವರುಣಾಸ್ತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸಲು ನಾರಾಯಣಾಸ್ತ್ರವು ಅದನ್ನು ಕ್ಷಣದಲ್ಲಿಯೇ ಧ್ವಂಸ ಮಾಡಿ ಭೀಮನನ್ನು ಇನ್ನೂ ಬಲವಾಗಿ ಆವರಿಸಿತು. ಕೃಷ್ಣನು ಕೂಡಲೇ ಉರಿಯಲ್ಲಿ ನುಗ್ಗಿ ಭೀಮನ ಆಯುಧವನ್ನು ತಾನೇ ಕಿತ್ತು ಬಿಸುಡಲು ನಾರಾಯಣಾಸ್ತ್ರವು ತನ್ನನ್ನು ಎದುರಿಸುವವರೇ ಇಲ್ಲದಂತಾಗಿ ತನ್ನಷ್ಟಕ್ಕೇ ಉಪಶಮನಗೊಂಡಿತು. ಅಶ್ವತ್ಥಾಮನು ನಿರಾಶೆಗೊಂಡು ಮೌನದಿಂದ ಹಿಂದಿರುಗಿದನು.

ರಮೆ:– ಕವಿ, ಭೀಮನ ಕುರಿತು ತಾನು ಆಡಬೇಕಾದ ಮಾತನ್ನು ಅಸ್ತ್ರದ ಬಾಯಿಯಲ್ಲಿ ಆಡಿಸಿದ್ದಾನೆ. ಅಲ್ಲವೆ ?

ಮುರಳಿ:– ಅಸ್ತ್ರವು ಆಡಿದ ಮಾತನ್ನು ಕವಿ ತನ್ನ ಬಾಯಿಯಲ್ಲಿ ಆಡಿಕೊಂಡು ಬರೆದಿಟ್ಟದ್ದಾನೆ ಎಂದೂ ಆಗಬಹುದಲ್ಲವೆ ?

ರಮೆ:– ಸರಿ. ಅಸ್ತ್ರ ಮಾತನಾಡಿತು. ಒಬ್ಬೊಬ್ಬರನ್ನೇ ಹುಡುಕಿಕೊಂಡು ತಿರುಗಿತು. ಅನಂತರ ತನ್ನಷ್ಟಕ್ಕೆ ತಾನೇ ಸಣ್ಣದಾಗಿಕೊಂಡು ಅಳುತ್ತಾ ಹೊರಟು ಹೋಯಿತು.

ಮುರಳಿ:– ಇಲ್ಲಿಗೆ ಕತೆ ಮುಗಿಯಿತು.

ರಮೆ:– ಏಕೆ ?

ಮುರಳಿ:– ಮತ್ತೆ ಕತೆಯಲ್ಲಿ ಇಲ್ಲದುದನ್ನು ನೀನು ಹೇಳಲು ಪ್ರಾರಂಭಿಸಿದರೆ ನಾನು ಇರುವದನ್ನು ಹೇಳುವದು ಹೇಗೆ ?

ರಮೆ:– ಒಂದು ಅಸ್ತ್ರವು ಮಾತನಾಡಿತು ಎಂಬದನ್ನು ಮತ್ತೆ ಹೇಗಪ್ಪಾ ನಂಬುವದು ?

ಮುರಳಿ:– ಲೋಹದ ಒಂದು ದೊಡ್ಡ ಆಕೃತಿಯು ಗಾಳಿಯಲ್ಲಿ ತೇಲುತ್ತಾ ಹೋಗುತ್ತದೆ ಎಂಬದನ್ನು ನಂಬಲು ಕಷ್ಟವಾಗಬಹುದು. ಆದರೆ ನಂಬಲೇಬೇಕು ತಾನೆ ! ಒಂದು ಪೆಟ್ಟಿಗೆಯ ಗುಂಡಿಯನ್ನು ತಿರುಗಿಸಿದರೆ ಅದು ಇಂದು ಮಾತ ನಾಡುವದಿಲ್ಲವೆ ? ಹಾಡುವದಿಲ್ಲವೆ ? ಸಾರಥಿಯೇ ಇಲ್ಲದ ವಿಮಾನವು ನೂರಾರು ಮೈಲಿಗಳ ದೂರದಲ್ಲಿರುವ ಶತ್ರು ಪ್ರದೇಶಕ್ಕೆ ಹಾರಿ ಹೋಗಿ ನಿಶ್ಚಿತವಾದ ಸ್ಥಳದಲ್ಲಿ ಬಾಂಬುಗಳನ್ನು ಸುರಿಯುತ್ತದೆ ಎಂಬದನ್ನು ನಂಬಲೂ ಕಷ್ಟವಾಗಬಹುದು. ಆದರೆ ನಂಬಲೇಬೇಕಲ್ಲ ! ನಿರ್ಜೀವವಾದ ಆಕಾಶ ನೌಕೆಯೊಂದು ಭೂಮಿಯಿಂದ ಲಕ್ಷಾಂತರ ಮೈಲುಗಳ ದೂರದ ಚಂದ್ರ ಗ್ರಹಕ್ಕೆ ಹಾರಿ ಹೋಗಿ ಅಲ್ಲಿ ಯಾವ ನಿಶ್ಚಿತ ಸ್ಥಳದಲ್ಲಿ ಯಾವ ನಿಶ್ಚಿತ ನಿಮಿಷದಲ್ಲಿ ಇಳಿಯಬೇಕೋ ಹಾಗೆಯೇ ಇಳಿದು, ಭೂಮಿಯಲ್ಲಿರುವ ಚಾಲಕ ಇಲ್ಲಿಂದ ಆಜ್ಞಾಪಿಸಿದ ಪ್ರಕಾರವೇ ಚಂದ್ರ ಗ್ರಹದ ಮಣ್ಣನ್ನು ಅಗೆಯುವದು, ಆ ಮಣ್ಣನ್ನು ತನ್ನೊಳಗಿನ ಪ್ರಯೋಗ ಶಾಲೆಗೆ ಸಾಗಿಸುವದು, ಅದನ್ನು ಅಲ್ಲಿ ಪ್ರಯೋಗಕ್ಕೆ ಒಳಪಡಿಸುವದು, ಆ ಪ್ರಯೋಗದ ಫಲಿತಾಂಶವನ್ನು ಭೂಮಿಯಲ್ಲಿರುವ ತನ್ನ ಸೂತ್ರಧಾರನಿಗೆ ತಿಳಿಸುವದು–ಹೀಗೆಲ್ಲ ಮಾಡುವದು ಸಾಧ್ಯ ಎಂದಾದರೆ, ಮಂತ್ರ ಪ್ರೇರಿತವಾದ ಒಂದು ಅಸ್ತ್ರವು ಮಾತ ನಾಡಿತು ಎನ್ನುವದೂ ಅಸಾಧ್ಯ ಎಂದು ಹೇಳಲು ಸಾಧ್ಯವಿಲ್ಲ ಎಂಬದನ್ನು ನೀನೇಕೆ ಒಪ್ಪಬಾರದು ? ಎಲ್ಲಿ ಇಂತಹ ಚಲನೆ ಇದೆಯೋ ಅಲ್ಲಿ ಏನೋ ಒಂದು ಬಗೆಯ ಚೈತನ್ಯ ಇರಲೇಬೇಕು ತಾನೆ ? ನಾವಿಂದು ವಿದ್ಯುಚ್ಛಕ್ತಿಯಲ್ಲಿ ಅಂತಹ ಚೈತನ್ಯವನ್ನು ಕಾಣುತ್ತಿದ್ದೇವೆ. ಹಿಂದಿನವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಚೈತನ್ಯವೇ ಮೂರ್ತೀಭವವಾಗುವಂತೆ ಮಾಡುತ್ತಿದ್ದರು ಎಂದೇಕೆ ನಾವು ನಂಬಬಾರದು ?

ರಮೆ:– ನಂಬಬಹುದು, ಹೇಳಿ ಮುಂದೇನಾಯಿತು ?

ಮುರಳಿ:– ಏನೂ ಆಗಿಲ್ಲ. ಇನ್ನು ಏನಾದರೂ ಆಗಬೇಕಷ್ಟೆ. ಅನ್ನ, ಸಾರು ಎಲ್ಲ ಇನ್ನು ಮುಂದೆ ಆಗಬೇಕು.

ರಮೆ:– ಅಯ್ಯೋ, ಕತ್ತಲಾಗಿಬಿಟ್ಟಿತಲ್ಲ ? ನೀವು ಕತೆ ಹೇಳಲು ನಾನು ಪ್ರೋತ್ಸಾಹ ಕೊಟ್ಟಂತೆ ನಾನು ಅಡುಗೆ ಮಾಡಲು ನೀವು ಪ್ರೋತ್ಸಾಹ ಕೊಡು ತ್ತೀರೋ ಇಲ್ಲವೊ ?

ಮುರಳಿ:– ನೀನು ನನಗೆ ಕೊಟ್ಟಂತಹ ಪ್ರೋತ್ಸಾಹ ನಾನು ನಿನಗೆ ಕೊಟ್ಟರೆ ನಿನ್ನ ಅಡುಗೆ ಆಗುವಂತೆಯೂ ಇಲ್ಲ, ನಾವೂ ಊಟ ಮಾಡುವಂತೆಯೂ ಇಲ್ಲ, ಆಮೇಲೆ ಮಲಗುವಂತೆಯೂ ಇಲ್ಲ, ಆಮೇಲೆ........ಎಲಾ, ಎದ್ದು ನನ್ನನ್ನೊಬ್ಬ ನನ್ನೇ ಬಿಟ್ಟು ಹೋಗುತ್ತೀಯಲ್ಲಾ ರಮಾ ! ನೀನೊಬ್ಬಳೇ ಕತ್ತಲಲ್ಲಿ ದೀಪವನ್ನು ತಡಕಬೇಡ. ನಾನೂ ನಿನ್ನ ಬಳಿ ಬಂದು ನಿಲ್ಲುತ್ತೇನೆ, ತಾಳು.

††††††

# ಎಂಟನೆಯ ಸಂಜೆ

**ಮು**ರಳಿ:– ನೀನು ಇಂದು ಬೆಳಿಗ್ಗೆ ಕೇಳಿದ ಪ್ರಶ್ನೆಗಳು ಯಾರವು ? ನೀನೇ ಕೇಳಿದುದೋ........

ರಮೆ:– ಓ, ಅಂದಹಾಗೆ ಅವುಗಳಿಗೆಲ್ಲ ಉತ್ತರ ಬರೆದಿಟ್ಟದ್ದೀರಾ ?

ಮುರಳಿ:– ಬರೆದಿಟ್ಟದ್ದೇನೆ ಇಗೋ. ಆದರೆ ಈ ಪ್ರಶ್ನೆಗಳನ್ನೆಲ್ಲ ನೀನು ಹಿಂದೆಯೇ ಬರೆದಿಟ್ಟುದೋ, ಈಗ ಬರೆದು ಕೊಟ್ಟುದೋ ?

ರಮೆ:– ಇಲ್ಲ. ನಾನು ಕಾಲೇಜಿನಲ್ಲಿ ಓದುವಾಗ ಬೇರೆ ಬೇರೆ ಪತ್ರಿಕೆಗಳ ಪ್ರಶ್ನೋತ್ತರ ವಿಭಾಗದಲ್ಲಿ ಕೇಳಿದ ಪ್ರಶ್ನೆಗಳಲ್ಲಿ ಕೆಲವು ಇವು.

ಮುರಳಿ:– ಮತ್ತೆ ಪುನಃ ನನ್ನಲ್ಲಿ ಏಕೆ ಅವುಗಳನ್ನು ಕೇಳಿದೆ ? ನನ್ನ ತಿಳಿವಳಿಕೆ ಎಷ್ಟಿದೆ ಎಂದು ಕಂಡುಹಿಡಿಯಲಿಕ್ಕೇನು ?

ರಮೆ:– ತಿಳಿವಳಿಕೆಯನ್ನಲ್ಲ. ಅದು ಗೊತ್ತೇ ಇದೆಯಲ್ಲ ! ಲೋಕದ ಕುರಿತು ನಿಮ್ಮ ದೃಷ್ಟಿಕೋನ ಎಂತಹದು ಎಂಬದನ್ನು ಸ್ಪಷ್ಟವಾಗಿ ತಿಳಿಯೋಣ ಎಂಬದಕ್ಕಾಗಿ. ಇರಲಿ. ಒಂದೊಂದಾಗಿ ಉತ್ತರಗಳನ್ನು ಓದುತ್ತೇನೆ.

ಮುರಳಿ:– ಪ್ರಶ್ನೆಯನ್ನೂ ಓದಿ ಅನಂತರ ಉತ್ತರವನ್ನು ಓದು. ಯಾವದಕ್ಕೆ ಏನು ಬರೆದಿದ್ದೇನೆ ಎಂಬದನ್ನು ನಾನೂ ಪರೀಕ್ಷಿಸಿ ನೋಡುತ್ತೇನೆ.

ರಮೆ:– ಆಗಲಿ.

ಪ್ರಶ್ನೆ:– ಮನುಷ್ಯ ಜೀವನದ ಮೇಲೆ ಗ್ರಹಗತಿಗಳು ಪ್ರಭಾವ ಬೀರುತ್ತವೆಂಬದನ್ನು ನೀವು ಒಪ್ಪುತ್ತೀರಾ ?

ಉತ್ತರ:– ನಾನು ಒಪ್ಪದಿದ್ದರೂ ಕೂಡ ಯಾವದೋ ಗ್ರಹಗತಿಯಿಂದಾಗಿಯೇ ಹಾಗೆ ಒಪ್ಪದಿರುವದು ಎಂದೂ ಒಪ್ಪುತ್ತೇನೆ.

ರಮೆ:– ತಮಾಷೆಯಾಗಿ ಉತ್ತರ ಕೊಟ್ಟದ್ದೀರಿ.

ಪ್ರಶ್ನೆ:– ಉಪವಾಸವಿದ್ದು ದೇವರ ಪೂಜೆ ಮಾಡುವದು ಒಳ್ಳೆಯದೋ, ಚೆನ್ನಾಗಿ ಊಟ ಮಾಡಿ ಅನಂತರ ಮಾಡುವದು ಒಳ್ಳೆಯದೊ ?

ಉತ್ತರ:– ಬರೀ ಊಟವೇ ಯಾಕೆ ? ಚೆನ್ನಾಗಿ ಊಟ ಮಾಡಿ ಮಲಗಿ, ನಿದ್ರೆ ಮಾಡಿ ಎದ್ದು, ಊಟ ಮಾಡಿ, ಮಲಗಿ, ನಿದ್ರೆ ಮಾಡಿ, ಎದ್ದು, ಊಟ ಮಾಡಿ........

ರಮೆ:– ಇದನ್ನೂ ತಮಾಷೆಯಾಗಿಯೇ ಬರೆದುಬಿಟ್ಟದ್ದೀರಿ.

ಪ್ರಶ್ನೆ:– ಸ್ತ್ರೀಯ ಸ್ವರಕ್ಕೂ ಪುರುಷನದಕ್ಕೂ ಪರಿಣಾಮದಲ್ಲಿ ಏನು ವ್ಯತ್ಯಾಸ ?

ಉತ್ತರ:– ಒಂದು ಹಸಿವಿನಿಂದ ಅಳುವ ಮಗುವನ್ನು ಸಂತೈಸಲು ಸೂಕ್ತವಾದ ಸ್ವರ–ಮಾರ್ದವತೆ. ಇನ್ನೊಂದು ಹಸಿವಿನಿಂದ ಅಳುವ ಸ್ತ್ರೀಯನ್ನು ಸಂತೈಸಲು ಸೂಕ್ತವಾದ ಸ್ವರ–ಪೌರುಷ.

ರಮೆ:– ಚಿಂತೆಯಿಲ್ಲ ನೀವು !

ಪ್ರಶ್ನೆ:– ಈ ವಿಜ್ಞಾನಿಗಳಿಗೂ ಪರಮಾತ್ಮನಿಗೂ ಏನು ವ್ಯತ್ಯಾಸ ?

ಉತ್ತರ:– ಇವರು ತಾಮ್ರದ ತಂತಿಯಂತೆ. ಅವನು ಆ ತಂತಿಯಲ್ಲಿ ಪ್ರವಹಿಸುವ ವಿದ್ಯುತ್ತಿನಂತೆ. ವಿದ್ಯುತ್ ಹರಿದರೆ ಮಾತ್ರವೇ ತಂತಿಯು ಲೋಕದಲ್ಲಿ ಅನೇಕ ಉಪಯೋಗಗಳನ್ನೂ ದುರಂತಗಳನ್ನೂ ಮಾಡಲು ಸಾಧ್ಯ ವಾಗುವದು.

ರಮೆ:– ಇದು ಅರ್ಥವಾಗಬೇಕಾದರೆ ಇನ್ನೂ ವಿವರಿಸಬೇಕು. ಆಮೇಲಾಗಲಿ.

ಪ್ರಶ್ನೆ:– ಆತ್ಮಾರ್ಪಣೆಗೂ ಆತ್ಮಹತ್ಯೆಗೂ ವ್ಯತ್ಯಾಸ ?

ಉತ್ತರ:– ಮನೆಗೆ ಬಂದ ಹಿರಿ ಪ್ರಾಯದ ಯೋಗ್ಯ ಅತಿಥಿಯ ಕಾಲು ಮುಟ್ಟಿ ನಮಸ್ಕರಿಸುವದಕ್ಕೂ, ಸಾಲ ಹಿಂದಕ್ಕೆ ಕೇಳಲು ಮನೆಗೆ ಬಂದ ನಿರ್ದಯಿ ಸಾಹುಕಾರನ ಕಾಲು ಮುಟ್ಟಿ ನಮಸ್ಕರಿಸುವದಕ್ಕೂ ಇರುವ ವ್ಯತ್ಯಾಸ.

ಅಥವಾ ಶೀಲವತಿಯೊಬ್ಬಳ ದೃಷ್ಟಿಯಲ್ಲಿ ಪ್ರಿಯತಮನ ಚುಂಬನಕ್ಕೂ ಅಪರಿಚಿತನೊಬ್ಬ ಬಲಾತ್ಕಾರದಿಂದ ಮಾಡುವ ಚುಂಬನಕ್ಕೂ ಇರುವ ವ್ಯತ್ಯಾಸ.

ರಮೆ:– ಆಗಲಿ. ಮುಂದಿನದನ್ನು ನೋಡೋಣ.

ಪ್ರಶ್ನೆ:– ಚಿಂತಕ, ಭಾವುಕ, ಸಾಮಾನ್ಯ– ಈ ಮೂವರಲ್ಲಿ ವ್ಯತ್ಯಾಸವೇನು?

ಉತ್ತರ:– ಕಾರ್ಯಕ್ಷೇತ್ರದಲ್ಲಿ, ಒಬ್ಬನ ಕಾರ್ಯಕ್ಷೇತ್ರ ಕುತ್ತಿಗೆಯ ಮೇಲ್ಭಾಗ. ಇನ್ನೊಬ್ಬನದು ನಡುವಿನಿಂದ ಕುತ್ತಿಗೆಯವರೆಗಿನದು. ಮತ್ತೊಬ್ಬನದು ನಡುವಿನಿಂದ ಕೆಳಗಿನ ಭಾಗ.

ರಮೆ:– ಎಂಥಾ ಮನುಷ್ಯ ನೀವು !

ಪ್ರಶ್ನೆ:– ಹೆಂಗಸು ಅಲಂಕಾರ ಮಾಡಿಕೊಳ್ಳುವದು ಗಂಡಸರನ್ನು ಮೆಚ್ಚಿಸಲಿಕ್ಕೋ ಅಥವಾ ಅವರ ಸ್ವಂತ ತೃಪ್ತಿಗೊ ?

ಉತ್ತರ:– ಎರಡಕ್ಕೂ ಅಲ್ಲವೋ ಅಂತ ? ಇತರ ಯಾವದಾದರೂ ಹೆಂಗಸು ಈ ಗಂಡಸರ ಗಮನವನ್ನು ಸೆಳೆದುಕೊಂಡುಬಿಟ್ಟಾಳೋ ಎಂಬ ಕಿಚ್ಚಿಗಾಗಿಯೋ ಅಂತ !

ರಮೆ:– ಇರಲಿ, ಇರಲಿ. ಇದಕ್ಕೆಲ್ಲ ಇದೆ, ನಿಮಗೆ. ಮುಂದಿನದನ್ನು ನೋಡೋಣ.

ಪ್ರಶ್ನೆ:– ಎಲ್ಲೆಲ್ಲಿಯೂ ದೇವರಿದ್ದಾನೆಂದ ಮೇಲೆ ದೇವಾಲಯಕ್ಕೇ ಏಕೆ ಹೋಗಬೇಕು ?

ಉತ್ತರ:– ಕಾಡು, ಬೆಟ್ಟ, ಸ್ಮಶಾನ, ರಸ್ತೆ–ಎಲ್ಲೆಲ್ಲಿಯೂ ಮಲಗಲು ಜಾಗ ಇದೆ ಎಂದಾದರೆ ತನ್ನ ಮಲಗುವ ಕೋಣೆಯನ್ನೇ ಹುಡುಕಿಕೊಂಡು ಬಂದು ಏಕೆ ಮಲಗಬೇಕು ?

ರಮೆ:– ಎಲಾ ! ಆಗಲಿ. ನೋಡೋಣ.

ಪ್ರಶ್ನೆ:– ಕಾಮಕ್ಕೂ, ಪ್ರೇಮಕ್ಕೂ ವ್ಯತ್ಯಾಸ ?

ಉತ್ತರ:– ಊಟಕ್ಕೆ ಬಡಿಸಿದ ಬಾಳೆ ಎಲೆಯ ಮೇಲೆ ಹಾಗೂ ಆ ಬಾಳೆಲೆಯನ್ನು ನೀಡಿದ ಗಿಡದ ಮೇಲೆ ನಮಗಿರುವ ಅಭಿಮಾನದ ವ್ಯತ್ಯಾಸ. ಒಂದನ್ನು ಉಂಡಾದ ತಕ್ಷಣ ಎಸೆಯುತ್ತೇವೆ ; ಇನ್ನೊಂದನ್ನು ನೀರೆರೆದು ಪೋಷಿಸಿ ಆದರಿಸುತ್ತೇವೆ.

ರಮೆ:– ಅಬ್ಬ ! ಇರಲಿ.

ಪ್ರಶ್ನೆ:– ಕೆಟ್ಟ ವಿಷಯಗಳಿಂದ ಮಲಿನಗೊಂಡ ಮನಸ್ಸನ್ನು ಶುದ್ಧೀಕರಿಸಿ ಯೋಗ್ಯವಾದ ವಿಷಯಗಳ ಕಡೆಗೆ ಹರಿಯುವಂತೆ ಮಾಡುವದು ಹೇಗೆ ?

ಉತ್ತರ:– ಈ "ಹೇಗೆ ?" ಎಂಬ ಪ್ರಶ್ನೆ ಮನಸ್ಸಿನಲ್ಲಿ ಸದಾ ಕೊರೆಯುತ್ತಿದ್ದರೆ ಸಾಕು. ಅದೇ ಅದಕ್ಕೆ ಉತ್ತರವೂ ಆಗುತ್ತದೆ.

ರಮೆ:– ಹಾಗೆ. ಆಗಲಿ.

ಪ್ರಶ್ನೆ:– ಹಿಂಸೆ ಮತ್ತು ಅಹಿಂಸೆಗೆ ವ್ಯತ್ಯಾಸವೇನು ?

ಉತ್ತರ:– ಒಲ್ಲದ ಸ್ತ್ರೀಯ ಮುಂದೆ ದೂರದಲ್ಲಿ ನಿಂತು ಆಕೆಯ ಸಂಗವನ್ನು ಅಂಗಲಾಚಿ ಬೇಡುವದು ಆಕೆಗೆ ಹಿಂಸೆ. ಅದೇ ಅವಳು ಯಾರಿಗೆ ಒಲಿದಿದ್ದಾಳೋ ಆತ ಆಕೆಯ ತುಟಿ ಗಾಯವಾಗುವಂತೆ ಕಚ್ಚುವದೂ ಆಕೆಗೆ ಅಹಿಂಸೆ.

ರಮೆ:– ಅಹಹ, ಬರೆದಿದ್ದೀರಿ. ಚಿಂತೆಯಿಲ್ಲ !

ಪ್ರಶ್ನೆ:– ಮಾನವನೇ ದೇವರು ಎಂಬದು ಹೌದೆ ?

ಉತ್ತರ:– ಅಲ್ಲ. ದೇವರನ್ನೇ ಸೃಷ್ಟಿಸಿದ ದೇವರ ಒಂದು ಅದ್ಭುತ ಕೃತಿ ಅವನು.

ರಮೆ:– ಇದೇನು ಒಗಟು ? ಇರಲಿ. ಆಮೇಲೆ ಚರ್ಚಿಸೋಣ.

ಪ್ರಶ್ನೆ:– ಸುಖ ಕೊಡು ಎಂದು ದೇವರನ್ನು ಬೇಡಿದಂತೆಲ್ಲ ಅವನು ಕಷ್ಟವನ್ನೇ ಕೊಡುತ್ತಿದ್ದರೆ ಅಂತಹ ದೇವರನ್ನು ಪೂಜಿಸಬೇಕೋ, ತ್ಯಜಿಸಬೇಕೊ ?

ಉತ್ತರ:– ನಾವು ಹೇಳಿದಂತೆ ಮಾಡುವದಕ್ಕಾಗಿ ನಾವು ನೇಮಿಸಿಕೊಂಡಿರುವ ಜವಾನನಂತಹ ಆ ದೇವರನ್ನು ಪೂಜಿಸಬಾರದು. ನಮ್ಮ ಕಷ್ಟ ಸುಖಗಳಿಗೆಲ್ಲ ನಾವೇ ಕಾರಣರು ಎಂಬ ಬುದ್ಧಿಯನ್ನು ನಮಗೆ ದಯಪಾಲಿಸುವ ಗುರುವಿನಂತಹ ದೇವರನ್ನು ಪೂಜಿಸಬೇಕು.

ರಮೆ:– ಏನೋ ಹೇಳುತ್ತೀರಿ. ಇದನ್ನೆಲ್ಲ ತುಂಬ ಯೋಚಿಸಬೇಕು. ಇರಲಿ.

ಪ್ರಶ್ನೆ:– ವೈಜ್ಞಾನಿಕ ಸಾಧನೆಗೂ ತಪಸ್ಸಿನ ಸಾಧನೆಗೂ ಇರುವ ವ್ಯತ್ಯಾಸ ವೇನು ?

ಉತ್ತರ:– "ತಿಳಿದುದು ಸತ್ಯ"– ಇದು ವೈಜ್ಞಾನಿಕ ಸಾಧನೆ. "ಸತ್ಯವನ್ನು ತಿಳಿಯುವದು"– ಇದು ತಪಸ್ಸಾಧನೆ.

ರಮೆ:– ಇದೆಲ್ಲ ಅಷ್ಟು ಸುಲಭದಲ್ಲಿ ಹೇಳಲಿಕ್ಕಾಗುವಂತಹುದೇನೂ ಅಲ್ಲ. ಆಯಿತೆ ? ಆಗಲಿ. ಆಮೇಲೆ ನೋಡೋಣ. ಮುಂದಿನದೇನು !

ಪ್ರಶ್ನೆ:– ವಿಧಿಯನ್ನು ಬುದ್ಧಿವಂತಿಕೆಯ ಮೂಲಕ ಜಯಿಸಬಹುದೆ ?

ಉತ್ತರ:– ವಿಧಿಯ ಸಂಕಲ್ಪ ಹಾಗಿದ್ದರೆ ಜಯಿಸಬಹುದು.

ರಮೆ:– ಎಲ್ಲ ಚಮತ್ಕಾರ. ಇರಲಿ.

ಪ್ರಶ್ನೆ:– ದೇವರನ್ನು ಮನಸ್ಸಿನಲ್ಲಿಯೇ ಆರಾಧಿಸಿದರೆ ಸಾಲದೆ? ದೇವಾಲಯ, ಮಸೀದಿ ಮುಂತಾದ ಪ್ರಾರ್ಥನಾ ಮಂದಿರಗಳಿಗೇ ಏಕೆ ಹೋಗಬೇಕು ?

ಉತ್ತರ:– ಪ್ರೇಯಸಿಯೊಂದಿಗೆ ಪ್ರೇಮ ಸಂಭಾಷಣೆ ನಡೆಸಲು ಸಂತೆಯ ನಡುವೆ ಸಾಧ್ಯವಿಲ್ಲವೆಂದಲ್ಲ. ಆದರೆ ಏಕಾಂತದ ಸ್ಥಳ ಪ್ರಶಸ್ತ ಎಂದಷ್ಟೆ.

ರಮೆ:– ಏನೇನೋ ಹೇಳಿದ್ದೀರಪ್ಪ. ಆಗಲಿ ಮುಂದಿನದನ್ನು ನೋಡೋಣ.

ಪ್ರಶ್ನೆ:– ಎಲ್ಲ ಜೀವಿಗಳಲ್ಲಿಯೂ ಇರುವ ಪರಮಾತ್ಮ ಒಬ್ಬನೇ ಆಗಿರುವಾಗ ವ್ಯಕ್ತಿ–ವ್ಯಕ್ತಿಯಲ್ಲಿ ಭೇದವನ್ನೇಕೆ ಎಣಿಸಬೇಕು ?

ಉತ್ತರ:– ಎರಡೂ ಕಾಗದದ ಮೇಲೆ ಹರಡಿರುವ ಬಣ್ಣವೇ. ಒಂದು ಮುದ್ದಾದ ಮಗುವಿನ ಚಿತ್ರ – ಆಹ್ಲಾದವನ್ನುಂಟುಮಾಡುವಂತಹದು. ಇನ್ನೊಂದು ಅಸಹ್ಯ ಭಂಗಿಯಲ್ಲಿ ನಿರ್ವಾಣದಲ್ಲಿರುವ ಹೆಂಗಸಿನ ಚಿತ್ರ – ಜಿಗುಪ್ಸೆಯನ್ನುಂಟು ಮಾಡುವಂತಹದು. ಮೂಲದ ಬಣ್ಣ ಒಂದೇ. ಕಾಣುವ ರೂಪದಲ್ಲಿ ವ್ಯತ್ಯಾಸ.

ರಮೆ:– ಎಲ್ಲ ಚಮತ್ಕಾರದ ಉದಾಹರಣೆಗಳ ಜಾಲ. ಇರಲಿ.

ಪ್ರಶ್ನೆ:– ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ–ಇವರಲ್ಲಿ ತಾತ್ತ್ವಿಕ ದೃಷ್ಟಿಯಿಂದ ಅಗ್ರಸ್ಥಾನಕ್ಕೆ ಅರ್ಹರು ಯಾರು ?

ಉತ್ತರ:– ಮೂರು ದಾರಿ ಸೇರುವಲ್ಲಿ ಕೈ ಹಲಗೆ ಇದೆ. ಅದರಲ್ಲಿರುವ ಮೂರು ಹಲಗೆಗಳ ಪೈಕಿ ಉಪಯುಕ್ತತೆಯಲ್ಲಿ ಯಾವ ಹಲಗೆ ಶ್ರೇಷ್ಠ ಎಂದು ಕೇಳಿದಂತಾಯಿತು.

ರಮೆ:– ಇದೊಂದು ತಮಾಷೆಯಾಗಿದೆ. ಇರಲಿ.

ಪ್ರಶ್ನೆ:– ಕೆಲವರು ದೇವಾಲಯಗಳನ್ನು ಕಟ್ಟಿಸಿ ಪೂಜಾದಿಗಳನ್ನು ನಡೆಸುವಂತೆ ಏರ್ಪಡಿಸುತ್ತಾರೆ. ಇನ್ನು ಕೆಲವರು ಶಾಲೆ, ಆಸ್ಪತ್ರೆ, ಅನಾಥಾಶ್ರಮ ಮೊದಲಾದವನ್ನು ಕಟ್ಟಿಸಿ ಅವುಗಳು ಚೆನ್ನಾಗಿ ನಡೆಯುವಂತೆ ಮಾಡುತ್ತಾರೆ. ಇವೆರಡರಲ್ಲಿ ಯಾವದು ಹೆಚ್ಚಿನ ಪುಣ್ಯ ಕೆಲಸ ?

ಉತ್ತರ:– ಕೇವಲ ಕಾಡುದಾರಿ ಇರುವ ದೂರದ ಊರಿಗೆ ಕಾಲು ನಡಿಗೆಯಲ್ಲಿ ಒಬ್ಬಾತ ಪ್ರಯಾಣ ಹೊರಟಿರುತ್ತಾನೆ. ಅವನು ಹೊರಡುವ ಮುಂಚೆ ಮಾಡುವ ಊಟ ಮುಖ್ಯವೋ, ಅಥವಾ ಅವನು ದಾರಿಗೆಂದು ಕಟ್ಟಿಕೊಂಡಿರುವ ಬುತ್ತಿ ಮುಖ್ಯವೋ ಎಂದು ಕೇಳಿದಂತಾಯಿತು.

ರಮೆ:– ಹಾಗಲ್ಲವೆ ! ಇರಲಿ. ಕೊನೆಯ ಪ್ರಶ್ನೆ.

ಪ್ರಶ್ನೆ:– ವಿಜ್ಞಾನದ ಹೊಸ ಹೊಸ ಆವಿಷ್ಕಾರಗಳು ಇಷ್ಟೊಂದು ಅದ್ಭುತವಾದುದಾಗಿದ್ದರೂ, ಅವುಗಳ ಪ್ರಯೋಜನ ಮನುಷ್ಯನಿಗೆ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಸಿಕ್ಕುತ್ತಿದೆಯಾದರೂ, ನೀವು ಅದಕ್ಕೆ ಕೊಡಬೇಕಾದ ಮಹತ್ವವನ್ನು ಕೊಡದೆಯೇ ಮಾತನಾಡುತ್ತೀರಲ್ಲಾ, ಏಕೆ ? ವಿವರವಾಗಿ ಉತ್ತರ ಕೊಡಿ.

ಉತ್ತರ:– ಆಕೆ ತನ್ನ ಕೈ ಕೂಸಿನೊಂದಿಗೆ ಕುದುರೆ ಗಾಡಿಯಲ್ಲಿ ವೇಗವಾಗಿ ಹೋಗುತ್ತಿದ್ದಳು. ಸ್ವಲ್ಪ ಸಂಪ್ರದಾಯಬದ್ಧಳಾದ ಯುವತಿ. ಹೊರಗೆ ಇಣಿಕಿ ನೋಡುವದೇ ಮೊದಲಾದ ಚೇಷ್ಟೆಗಳೆಲ್ಲ ಹೆಣ್ಣಿಗೆ ಭೂಷಣವಲ್ಲ ಎಂಬ ಯಾವದೋ

ಹಳೆಯ ರೂಢಿಗಳನ್ನೆಲ್ಲ ಮೈಗೂಡಿಸಿಕೊಂಡಿದ್ದವಳು. ಹಾಗಾಗಿ, ತಾನಾಯಿತು, ತನ್ನ ಮಗುವಾಯಿತು ಎಂದು ಗಾಡಿಯೊಳಗೇ ಮಗುವಿನ ಸಂಗಡ ಆಟವಾಡುತ್ತ ಇಡಿಯ ಲೋಕಕ್ಕೇ ಬೆನ್ನು ಹಾಕಿಬಿಟ್ಟಿದ್ದಳು. ಹೊರಗಡೆ ಇಣಿಕಿ ನೋಡಬಾರ ದೆಂಬ ಅವಳ ಗೊಡ್ಡುತನವನ್ನು ಗಾಡಿ ಹೊಡೆಯುವವನು ಟೀಕಿಸಿದ. ಹೊಸ ಹೊಸ ಸುಂದರ ದೃಶ್ಯಗಳು, ಬೇರೆ ಬೇರೆ ಊರುಗಳು, ಹಸಿರು ಹೊಲಗಳು, ಹೊಳೆಗಳು ಮೊದಲಾದವೆಲ್ಲವನ್ನೂ ನೋಡಿ ಸಂತೋಷಪಡುವದು ಬಿಟ್ಟು ಸದಾ ಕಾಲ ಹೇಗೂ ತನ್ನ ಬಳಿಯೇ ಇರುವ ಮಗುವಿನೊಂದಿಗೆ ಆಡುತ್ತಾ ಕೂರುವದು ಅವಳ ಅಜ್ಞಾನ, ಗೊಡ್ಡುತನ ಎಂದು ಅವನು ವಾದಿಸಿದ. ಇರಬಹುದೋ ಏನೋ ಎಂದು ಅವಳು ನಾಚಿಕೊಂಡು ಸ್ವಲ್ಪ ತಲೆ ಹೊರಗೆ ಹಾಕಿ ನೋಡಿದಳು. ಹಿಂದೆ ಹಿಂದಕ್ಕೆ ಓಡುತ್ತಾ ಇದ್ದ ದೃಶ್ಯಗಳನ್ನಂತೂ ನೋಡಲು ಹಿತವಾಗುತ್ತಿದ್ದುದು ನಿಜವಾಗಿತ್ತು. ಮೊದ ಮೊದಲು ಸಂಕೋಚವೆನಿಸಿದರೂ ಎಂದೂ ಮುಗಿಯದ ಹೊಸತನದ ಆಕರ್ಷಣೆಯನ್ನು ಹೊತ್ತ ದೃಶ್ಯಗಳು ಅವಳ ಮನಸ್ಸನ್ನು ಸೆಳೆದವು. ಬದಲಾಗುತ್ತಿದ್ದ ಆ ದೃಶ್ಯಗಳನ್ನು ನೋಡುತ್ತಾ ನೋಡುತ್ತಾ ಅವಳ ಚಿಂತನೆ ಕೂಡ ಯಾವದೋ ಲೋಕಕ್ಕೆ ಹೋಗಿಬಿಟ್ಟಿತ್ತು. ಈಗ ಕೇವಲ ತಲೆಯನ್ನಷ್ಟೇ ಅಲ್ಲದೆ, ದೇಹದ ಸಾಕಷ್ಟು ಭಾಗವನ್ನು ಹೊರಗೆ ಹಾಕಿದ್ದ ಅವಳು ಯಾವದೋ ನೀರಿನ ತೋಡಿನಲ್ಲಿ ಯಾವದೋ ಹಕ್ಕಿಗಳು ಮಿಯುವದನ್ನು ಕಂಡಾಗ, ಯಾವದೋ ದನ ಕಾಯುವ ಹುಡುಗ ಮೇಯುತ್ತಿರುವ ಯಾವದೋ ಹಸುವಿಗೆ ಒರಗಿ ಕೊಳಲೂದುವದನ್ನು ಕಂಡಾಗ, ಯಾವದೋ ಊರಿನ ಯಾವದೋ ದೇವಾಲಯದ ಗೋಪುರ ಆಕಾಶವನ್ನು ಸೀಳಿ ನಿಂತಿದ್ದ ನಿಲುವನ್ನು ಕಂಡಾಗ– ಹೀಗೆ ಮನಸ್ಸನ್ನು ಸೆರೆ ಹಿಡಿಯುವ ಬೇರೆ ಬೇರೆ ದೃಶ್ಯಗಳನ್ನು ಕಂಡಾಗ ಅದರದರಲ್ಲಿಯೇ ಮನಸ್ಸು ನೆಟ್ಟು ಚಿಂತನೆ ಲೋಕವನ್ನೆಲ್ಲ ಸುತ್ತಲು ಪ್ರಾರಂಭಿಸಿ ಆಕೆ ಅಕ್ಷರಶಃ ಮೈಮರೆತು ಕುಳಿತುಬಿಟ್ಟಿದ್ದಳು.

ಗಾಡಿ ಹೊಡೆಯುವವನಿಗೆ ಬಹಳ ಆನಂದವಾಯಿತು–ಒಬ್ಬಳು ಹೆಂಗಸಿನ ಗೊಡ್ಡುತನವನ್ನು ಪರಿಹರಿಸಿದೆನಲ್ಲಾ ಎಂದು.

ಅವಳ ಊರು ಸಿಕ್ಕಿತು. ಆಕೆಯನ್ನು ಗಾಡಿ ಹೊಡೆಯುವಾತ ಇಳಿಯಲು ಹೇಳಿದ. ಆಕೆ ನೋಡುತ್ತಾಳೆ, ಮಗುವು ಮಾರ್ಗದಲ್ಲಿ ಎಲ್ಲಿಯೋ ಬಿದ್ದುಹೋಗಿ ಬಿಟ್ಟಿತ್ತು. ಜೀವನ ಯಾತ್ರೆಯ ಕಾಲದಲ್ಲಿ ವಿಜ್ಞಾನದ ಹೊಸ ಹೊಸ ಆವಿಷ್ಕಾರದ ಸುಖದಲ್ಲಿ ನಾವು ಹೀಗೆ ಮೈ ಮರೆತಾಗ ನಮ್ಮ ಆತ್ಮ ಎಲ್ಲಿಯೋ ಬಿದ್ದು ಹೋದಂತಾಗಿರುವದೇ ಹೆಚ್ಚು.

ಮುರಳಿ:– ............ತೇರ್ಗಡೆಯಾಗಿದ್ದೇನೋ ಅಥವಾ ಲಾಗ ಹೊಡೆದು **ಬಿಟ್ಟೆನೊ ?**

ರಮೆ:– ........ಶಿಷ್ಯತ್ವಕ್ಕೆ ಕೇವಲ ಅನರ್ಹಳೆಂದು ಪರಿಗಣಿಸಲ್ಪಟ್ಟಿದ್ದೇನೋ ಎಂಬದನ್ನು ದಯವಿಟ್ಟು ತಿಳಿಸಬೇಕು.

ಮುರಳಿ:– ಏಕೆ ?

ರಮೆ:– ಕೇವಲ ಸಾಮಾನ್ಯವಾದ, ನಿಷ್ಪ್ರಯೋಜಕವಾದ, ಲಘುವಾದ ಪ್ರಶ್ನೆಗಳನ್ನೇನಾದರೂ ಕೇಳಿಬಿಟ್ಟು........

ಮುರಳಿ:– ನಾನೂ ಹಾಗೆಯೇ ಏನಾದರೂ ಹುಚ್ಚು ಹುಚ್ಚಾಗಿ, ಅಸಂಬದ್ಧ ವಾಗಿ, ರೂಢಿಗೆ ವ್ಯತಿರಿಕ್ತವಾಗಿ ಉತ್ತರಗಳನ್ನು ಕೊಟ್ಟುಬಿಟ್ಟು........

ರಮೆ:– ಈ ನಟನೆಗಳೆಲ್ಲ ಸಾಕು. ಈಗ ಹೇಳಿ–ನೀವು ನಿಮ್ಮ ಉತ್ತರಗಳಲ್ಲಿ ಎಲ್ಲ ಸತ್ಯವನ್ನೇ ಹೇಳಿದ್ದೀರಾ ?

ಮುರಳಿ:– ನನ್ನ ಅಭಿಪ್ರಾಯವನ್ನು ಹೇಳಿದ್ದೇನೆ.

ರಮೆ:– ಸತ್ಯ ಎಂದರೇನು, ಅಭಿಪ್ರಾಯ ಎಂದರೇನು ?

ಮುರಳಿ:– ಸತ್ಯ ಒಂದೇ. ಅದನ್ನು ಬೇರೊಂದು ರೀತಿಯಲ್ಲಿ ಹೇಳಲು ಸಾಧ್ಯವೇ ಇಲ್ಲ. ಅಭಿಪ್ರಾಯಗಳು ಬದಲಾಗುತ್ತವೆ.

ರಮೆ:– ಹಾಗಾದರೆ ಯಾವ ಅಭಿಪ್ರಾಯವೂ ಸತ್ಯ ಎನಿಸಿಕೊಳ್ಳುವದಿಲ್ಲ ಎಂದಂತಾಯಿತು.

ಮುರಳಿ:– ಹೌದು. ಅದನ್ನು ಸತ್ಯ ಎಂದು ಕರೆಯುವದು ತಪ್ಪಾಗುತ್ತದೆ. ಬಳಕೆಯಲ್ಲಿ ಇದನ್ನು ವ್ಯಾವಹಾರಿಕ ಸತ್ಯ ಎಂದು ಕರೆಯುತ್ತಾರೆ.

ರಮೆ:– ಹಾಗಾದರೆ ನಾವು ಅನೇಕರು ಸುಳ್ಳನ್ನೇ ಹೇಳುತ್ತಿದ್ದೇವೆ ಎಂದಂತಾಯಿತಲ್ಲ !

ಮುರಳಿ:– ಯಾವ ಅಭಿಪ್ರಾಯವನ್ನು ಒಪ್ಪಿಕೊಳ್ಳುವದರಿಂದ ಹೆಚ್ಚಿನ ಜೀವಿಗಳಿಗೆ ಪ್ರಯೋಜನವಾಗುತ್ತದೋ, ಯಾವ ಅಭಿಪ್ರಾಯವನ್ನು ವ್ಯಕ್ತಪಡಿಸುವದರಿಂದ ಮಾನವನು ಪರಮ ಸತ್ಯ ಸ್ವರೂಪದ ದರ್ಶನದತ್ತ ಒಯ್ಯಲ್ಪಡಲು ಸಾಧ್ಯವಾಗುತ್ತದೊ, ಅಂತಹ ಅಭಿಪ್ರಾಯಗಳು ಸತ್ಯವಾದವು ಎಂದು ರೂಢಿಯಲ್ಲಿ ಹೇಳಲ್ಪಡುತ್ತವೆ.

ರಮೆ:– ಅಂದರೆ, ನೀವು ಕೊಟ್ಟಿರುವಂತಹ ಉತ್ತರಗಳೆಲ್ಲ ಈ ಅಳತೆ ಗೋಲಿನಿಂದ ನೋಡಿದರೆ ಸತ್ಯವಾದವುಗಳೇ ಎಂದು ಹೇಳಬಹುದೇನು ?

ಮುರಳಿ:– ಹೇಳಬಹುದು ಎಂದು ನಾನು ಹೇಳುವದು ಕೂಡ ಒಂದು ಅಭಿಪ್ರಾಯವಾಗುತ್ತದೆ.

ರಮೆ:– ಇದೆಂಥಾ ಮಾತು ? ಹಾಗಾದರೆ ಪ್ರಪಂಚದ ವ್ಯವಹಾರದಲ್ಲಿ ಒಂದೇ ಒಂದು ಸತ್ಯ ಎಂಬದೂ ಇಲ್ಲವೇನು ?

ಮುರಳಿ:– ಇಲ್ಲ. ಪ್ರಪಂಚದ ವ್ಯವಹಾರದಲ್ಲಿ ಎಂದು ನೀನು ಹೇಳಿದುದನ್ನು ಮರೆಯಬೇಡ, ಅಷ್ಟೆ.

ರಮೆ:– ಆಗಲಿ. ಹಾಗಾದರೆ ಸತ್ಯ ಇಲ್ಲವೇ ಇಲ್ಲ ?

ಮುರಳಿ:– ಇಲ್ಲ.

ರಮೆ:– ಆಶ್ಚರ್ಯ. ಸೂರ್ಯ ಪೂರ್ವದಲ್ಲಿ ಹುಟ್ಟುತ್ತಾನೆ ಎನ್ನುವದು ಸತ್ಯವಲ್ಲ !

ಮುರಳಿ:– ಪೂರ್ವದಲ್ಲಿ ಹುಟ್ಟಿದಂತೆ ನಮಗೆ ಕಾಣಿಸುತ್ತಾನೆ ಎಂಬದು ಸತ್ಯ. ನಮ್ಮ ಕಣ್ಣು ಸತ್ಯವನ್ನೇ ಕಾಣುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ವಿಜ್ಞಾನದ ಪ್ರಕಾರ ಸೂರ್ಯ ಹುಟ್ಟುವದು ಎಂಬದೇ ಇಲ್ಲವಷ್ಟೆ ?

ರಮೆ:– ನಾನು ಈಗ ನಿಮ್ಮನ್ನು ನೋಡುತ್ತಿದ್ದೇನೆ ಎಂಬದೂ ಹಾಗಾದರೆ ಸುಳ್ಳು ಎಂದುಬಿಡಿ.

ಮುರಳಿ:– ನೀನು ನನ್ನನ್ನು ನೋಡುತ್ತಿರುವದು ಕೂಡ ನಿನ್ನ ಕಣ್ಣಿನ ವರದಿ. ಕಣ್ಣು ಸತ್ಯದ ಆಶ್ರಯಸ್ಥಾನ ಎಂದು ಹೇಳಲು ಸಾಧ್ಯವಿಲ್ಲ.

ರಮೆ:– ಹಾಗಾದರೆ ಇದೆಲ್ಲ – ನಾವು ನೋಡುವದೆಲ್ಲ, ಕೇಳುವದೆಲ್ಲ, ಮಾಡುವದೆಲ್ಲ – ಎಲ್ಲ ಸುಳ್ಳೆ !

ಮುರಳಿ:– ಸುಳ್ಳಲ್ಲ. ಇದರಲ್ಲಿ ವ್ಯಾವಹಾರಿಕ ಸತ್ಯ ಅಡಗಿದೆ. ಸುಳ್ಳೂ ಸೇರಿದೆ. ಇದ್ಯಾವದೂ ಪರಮ ಸತ್ಯವಲ್ಲ. ಅದಕ್ಕೇ ಜ್ಞಾನಿ ಹೇಳಿದುದು–ಅಸತೋಮಾ ಸದ್ಗಮಯ ; ತಮಸೋ ಮಾ ಜ್ಯೋತಿರ್ಗಮಯ ; ಮೃತ್ಯೋರ್ಮಾ ಅಮೃತಂಗಮಯ ಎಂದು. ಇದೆಲ್ಲವೂ ಅಸತ್. ಇದೆಲ್ಲವೂ ತಮಸ್ಸು. ಇದೆಲ್ಲವೂ ಅಶಾಶ್ವತ.

ರಮೆ:– ಓ, ಹಾಗೆ ಹೇಳಿ. ಇಲ್ಲಿಯೂ ವೇದಾಂತ ಮಾತನಾಡುತ್ತಿದ್ದೀರಿ ಎಂದು ನನಗೆ ಹೊಳೆಯಲೇ ಇಲ್ಲ. ಇದ್ಯಾವದೂ ಸತ್ಯವಲ್ಲ ಎಂದರೆ ಇದೆಲ್ಲವೂ ಮಾಯೆ ಅನ್ನುತ್ತಾರಲ್ಲ ಅದು ಅಂತ ಅನ್ನಿ.

ಮುರಳಿ:– ಹೌದು. ಹೀಗೆ ವೇದಾಂತವು ಲೋಕದ ವ್ಯವಹಾರಗಳನ್ನೆಲ್ಲ ಮುಗಿಸಿ ಲೋಕವನ್ನು ಬಿಟ್ಟು ಹೊರಡುತ್ತಿರುವವರಿಗೆ ಮಾತ್ರ ಬೇಕಾದುದು ಎಂಬ ಸಾಮಾನ್ಯ ಭಾವನೆ ತಪ್ಪು. ಸತ್ಯದ ಬದುಕನ್ನು ಬದುಕುತ್ತೇನೆನ್ನುವ ಯಾರೇ ಆದರೂ ವೇದಾಂತದ ಬೆಳಕಿನಲ್ಲಿ ಮಾತ್ರ ಬದುಕಲು ಸಾಧ್ಯ. ಸತ್ಯದ

ಶೋಧನೆಯಲ್ಲಿ ತೊಡಗಿರುವ ಜಿಜ್ಞಾಸುವು ಇದೆಲ್ಲವರಲ್ಲಿಯೂ ಸತ್ಯವಾವುದನ್ನು ಹುಡುಕುತ್ತಾನೆ. ಈ ನಾನು, ನೀನು, ಇದು, ಅದು, ಭೂಮಿ, ಸಸ್ಯ, ಆಕಾಶ – ಇವರಲ್ಲಿ ಯಾವದು ಸತ್ಯ, ಹಾಗಾಗಿ ಯಾವದು ಶಾಶ್ವತ ಎಂಬದನ್ನು ಕಂಡು ಹಿಡಿಯಲು ಹೋಗಿ ನೇತಿ, ನೇತಿ – ಇವಲ್ಲ, ಇವಲ್ಲ – ಎಂದು ಒಂದೊಂದನ್ನಾಗಿ ಪ್ರತಿಯೊಂದನ್ನೂ ತಿರಸ್ಕರಿಸುತ್ತಾ ಹೋಗುತ್ತಾನೆ. ಅದೇ ಶುದ್ಧ ವೈರಾಗ್ಯ. ಈ ಯಾವವರಲ್ಲಿಯೂ ಅಭಿರುಚಿ ಇಲ್ಲದ ಅವನು ಕೊನೆಗೆ ಸತ್ಯವನ್ನು ಕಂಡುಕೊಂಡು ಶಾಂತನಾಗುತ್ತಾನೆ – ಈ ಕತ್ತಲೆಯಿಂದ ಬೆಳಕಿಗೆ ಹೋಗಿರುತ್ತಾನೆ. ಈ ಅಸತ್ಯದಿಂದ ಹೊರಟು ಸತ್ಯದ ಅವಲಂಬನೆ ಪಡೆದಿರುತ್ತಾನೆ. ಈ ಕ್ಷಣಿಕವಾದುದನ್ನು ಬಿಟ್ಟು ಶಾಶ್ವತವಾದ ನೆಲೆಯನ್ನು ಪಡೆದಿರುತ್ತಾನೆ.

ರಮಾ:– ಬಹಳ ದೂರ ನನ್ನನ್ನು ಒಯ್ದುಬಿಟ್ಟಿದ್ದೀರಿ. ಹೊಸ ಲೋಕದಲ್ಲಿ ಕಂಗಾಲಾಗಿದ್ದೇನೆ. ನೀವೊಬ್ಬರೇ ಬೇಕಿದ್ದರೆ ಅಲ್ಲಿಗೆ ಹೋಗಿ. ನನಗೆ ಚೆನ್ನಾಗಿ ಪರಿಚಯವಿರುವ ಈ ಲೋಕಕ್ಕೆ ನನ್ನನ್ನು ಕರೆತಂದು ಬಿಟ್ಟುಬಿಡಿ. ಹಾಗಾದರೆ ನೀವು ಹೇಳಿದ ಉತ್ತರಗಳೆಲ್ಲ ಅಸತ್ತು, ತಮಸ್ಸು.

ಮುರಳಿ:– ಸತ್ಯದ ನೆಲೆಯಲ್ಲಿ ನಿಂತು ನೋಡಿದಾಗ.

ರಮಾ:– ಅದೆಂಥಾ ನುಣುಚಿಕೊಳ್ಳುವ ಉತ್ತರ? ಸತ್ಯದ ನೆಲೆಯಿಂದ ನೋಡುವದು, ಬೇರೊಂದು ನೆಲೆಯಿಂದ ನೋಡುವದು........

ಮುರಳಿ:– ಹೌದು ರಮಾ. ನಾನು ಅದನ್ನು ಮುಟ್ಟಿ ನೋಡುವಾಗ ಅದು ಒಂದು ತೊಟ್ಟು ನೀರು. ವಿದ್ಯುತ್ ಶಕ್ತಿ ಅದನ್ನು ನೋಡಲೆಂದು ಮುಟ್ಟುವಾಗ ಅದು ಆಮ್ಲಜನಕ ಮತ್ತು ಜಲಜನಕ ವಾಯುಗಳ ಸಂಗಮ. ಹೀಗೆಯೇ ಈ ಲೋಕದ ವೈವಿಧ್ಯ. ಆದುದರಿಂದಲೇ ಇದು ಪರಮ ಸತ್ಯವಲ್ಲ ಎಂದು ಹೇಳುವದು. ಇದೆಲ್ಲ ವ್ಯಾವಹಾರಿಕ ಸತ್ಯಗಳು. ಅಷ್ಟೆ.

ರಮಾ:– ತಲೆ ಕೆಟ್ಟುಹೋಗುತ್ತಿದೆ. ಸಧ್ಯ, ಉಳಿಸಿ ಕಾಪಾಡಿ. ಒಂದು ಚಕಾರವನ್ನೂ ಎತ್ತದೆ ನೇರವಾಗಿ ಭೀಮನ ಕತೆಯನ್ನು ಮುಂದುವರಿಸಿ. ಕೈ ಮುಗಿದು ಕೇಳಿಕೊಳ್ಳುತ್ತೇನೆ. ನಿಮ್ಮ ದಮ್ಮಯ್ಯ.

ಮುರಳಿ:– ಹುಚ್ಚು ಹುಡುಗಿ. ಹೋಗಲಿ, ಕೇಳು. ನಿನ್ನೆ ಎಲ್ಲಿಗೆ ಬಿಟ್ಟಿದ್ದೆವು?

ರಮಾ:– ಅದು ಕೂಡ ನಿಮಗೆ ನೆನಪಿರುವದಿಲ್ಲ! ಕೌರವ ಸೈನ್ಯದ ಅಧಿಪತಿಯಾಗಿದ್ದ ಭೀಷ್ಮಾಚಾರ್ಯನು ಗಾಯಗೊಂಡು ಮಲಗಿದನು.

ಮುರಳಿ– ಮಲಗಿದನು. ಅನಂತರ ದುರ್ಯೋಧನನು ತನ್ನ ಕಡೆಯ ಸರ್ವರ ಸಮ್ಮತಿಯನ್ನು ಪಡೆದು ದ್ರೋಣಾಚಾರ್ಯನಿಗೆ ತನ್ನ ಸೈನ್ಯದ ಅಧಿಪತ್ಯವನ್ನು ವಹಿಸಿದನು. ದ್ರೋಣನು........

ರಮೆ:– ........ ಒಂದು ನಿಮಿಷ. ಕ್ಷಮಿಸಬೇಕು. ಭೀಷ್ಮನು ಗಾಯ ಗೊಂಡು ಮಲಗುವವರೆಗೂ ಆಗಿಲ್ಲವೆಂದು ಕಾಣಿಸುತ್ತದೆ. ಕೃಷ್ಣನು ಭೀಷ್ಮನ ಮೇಲೆ ಸಿಟ್ಟುಗೊಂಡು ಅವನನ್ನು ಕೊಲ್ಲುವದಾಗಿ ನಿರ್ಧರಿಸಿ ಚಕ್ರ ಹಿಡಿದು ರಥ ದಿಂದ ಕೆಳಗೆ ಹಾರಿದವರೆಗೆ ಆಗಿರಬೇಕೆಂದು ಕಾಣುತ್ತದೆ.

ಮುರಳಿ:– ಮತ್ತೆ ನಿನ್ನ ನೆನಪಿನ ಶಕ್ತಿಯನ್ನು ಬಹಳವಾಗಿ ಕೊಚ್ಚಿ ಕೊಳ್ಳುತ್ತಿ ? ನಾನೇನೋ ಭಾರೀ ಮರೆಯುವವನೆಂದೂ ನೀನು ಅಷ್ಟು ಸ್ಪಷ್ಟ ವಾಗಿ ನೆನಪಿಸಿಕೊಳ್ಳಲು ಸಮರ್ಥಳೆಂದೂ ಸಂದರ್ಭ ಸಿಕ್ಕಿದಾಗಲೆಲ್ಲ ನನ್ನನ್ನು ಲೇವಡಿ ಮಾಡುತ್ತಿರುತ್ತೀ? ಅದಕ್ಕೇ ನೋಡು, ಯಾವಾಗಲೂ ಇನ್ನೊಬ್ಬರ ದೌರ್ಬಲ್ಯವನ್ನು ಕುರಿತು ಆಡಬಾರದು ಅನ್ನುವದು. ನಾವು ಕೂಡ ಯಾವ ದೌರ್ಬಲ್ಯಕ್ಕೆ ಯಾವಾಗ ಬಲಿಯಾಗಿಬಿಡುತ್ತೇವೋ ಎಂದು ಹೇಳಲು ಸಾಧ್ಯವಿಲ್ಲ ........ ಆದರೆ ಇಲ್ಲಿ ಹೇಗೂ ನನ್ನ ದೌರ್ಬಲ್ಯ ನನಗೆ ಗೊತ್ತಿದೆ. ಮರೆತುಬಿಡು ವದು ತುಂಬ, ನಾನು. ಹಾಗಾಗಿ ಇದ್ದರೂ ಇರಬಹುದೇನೋ ಅಂತ ಮಾಡಿ ಕೊಂಡಿದ್ದೆ. ಅದೇ ಈಗ .... ಹಾಗೆ ಹೇಳು. ಕೃಷ್ಣನು ಭೀಷ್ಮನ ಮೇಲಿನ ಸಿಟ್ಟಿನಿಂದ ಚಕ್ರವನ್ನು ಹಿಡಿದು ರಥದಿಂದ ಕೆಳಗೆ ಹಾರಿ ಅವನನ್ನು ಕೊಲ್ಲು ವದಕ್ಕೆಂದು ಮುನ್ನುಗ್ಗಿದನು. ಆದರೆ ಕೃಷ್ಣನ ಭಕ್ತನಾಗಿದ್ದ ಭೀಷ್ಮನಿಗೆ ಇದರಿಂದ ಯಾವ ಭಯವೂ ಆಗಲಿಲ್ಲ. ಅವನು ಕೃಷ್ಣನಲ್ಲಿ ತನ್ನ ಹೃದಯವನ್ನು ಬಿಚ್ಚಿ....

ರಮೆ:– ಅಲ್ಲ, ನೀವು ಎಲ್ಲಿಯಾದರೂ ಸಿಟ್ಟು ಮಾಡಿಕೊಳ್ಳುತ್ತೀರೋ ಏನೋ .... ಕ್ಷಮಿಸೀಪ್ಪ .... ಇದೂ ಅಲ್ಲ. .... ನನಗೇಕೆ ನಿಮ್ಮ ಮರವೆ ಅಂಟಿ ಕೊಂಡುಬಿಟ್ಟಿತು ಅಂತ ! .... ಇಲ್ಲಿಯವರೆಗೂ ಕತೆ ಬಂದಿಲ್ಲ .... ಕೃಷ್ಣ ಚಕ್ರ ಹಿಡಿದುದನ್ನು ಎಲ್ಲಿಯೋ ಓದಿದ ನೆನಪಿನಿಂದಾಗಿ ನೀವೇ ಇಲ್ಲಿಯವರೆಗೆ ಕತೆ ಹೇಳಿ ಕೇಳಿದ ನೆನಪು ಅಂತ ನಾನು ಭಾವಿಸಿರಬೇಕು. ಇಲ್ಲಿಯವರೆಗೂ ಎಲ್ಲಿ ಬಂದಿದೆ ? ಕೃಷ್ಣನಿಗೆ ಸಂಬಂಧಿಸಿದುದೇ ಯಾವದೋ ಒಂದು ಘಟನೆಗೆ ಕತೆ ನಿಲ್ಲಿಸಿದ್ದೀರಿ ಅನ್ನುವ ನೆನಪು ಹೀಗೆ ಮಾಡಿರಬೇಕು. ಅವನು ಚಕ್ರ ಹಿಡಿದುದಲ್ಲ. ಅರ್ಜುನ ನಿಗೆ ಗೀತೋಪದೇಶ ಮಾಡಿದಲ್ಲಿಗೆ ನೀವು ನಿನ್ನೆ ಕತೆ ನಿಲ್ಲಿಸಿದುದು .... ಛೀ .... ಎಂತಹ ಹಾಳು ಮರವೆ ಅಂತ .... ಹೇಳಿ. ಮುಂದಕ್ಕೆ ಹೇಳಿ....

ಮುರಳಿ:– ಒಳ್ಳೇ ಕೋತಿಯನ್ನು ಕುಣಿಸಿದಂತೆ ಕುಣಿಸುತ್ತೀಯಲ್ಲ ರಮಾ. ನಾನಂತೂ ಮರೆಯುವವನು. ನೀನೇನೋ ಜ್ಞಾಪಕಶಕ್ತಿ ಇರುವವಳು ಅಂತ ನಾನು ನಂಬಿದರೆ ನೀನೂ ಹೀಗೆಯೇ ಆದೆಯಲ್ಲ .... ನಾವು ಕತೆ ಬಿಟ್ಟು ಬೇರೆ ಏನೇನೋ ಚರ್ಚೆ ಮಾಡಿದೆವಲ್ಲ ! ಅದು ಯಾವ ಘಟನೆಗೆ ಸಂಬಂಧಿಸಿ ಚರ್ಚಿ ಸಿದುದು ಅನ್ನುವದಾದರೂ ಗೊತ್ತಾದರೆ ಕತೆಯ ಯಾವ ಭಾಗವನ್ನು ನಿನ್ನೆ ಹೇಳು ತ್ತಿದ್ದುದು ಅನ್ನುವದು ಗೊತ್ತಾಗುತ್ತದೆ. ಅದೂ ನೆನಪಿಗೆ ಬರುವದಿಲ್ಲ !

ರಮೆ:— ಚರ್ಚೆ ಯಾವದು ಗೊತ್ತೆ? ಭೀಮ ಕೀಚಕನನ್ನು ಕೊಂದು ಅವನ ಶವ ಸಂಸ್ಕಾರ ಮಾಡಿದಾಗ ಯಾರಿಗೂ ತಿಳಿಯದಂತೆ ಗೌಪ್ಯವಾಗಿ ಹಾಗೆ ಮಾಡಲಾಯಿತು ಎಂದು ನೀವು ಹೇಳಿದುದನ್ನು ನಾನು ಟೀಕಿಸಿದೆ. ಆಗ ನೀವು, ನಿಮ್ಮ ನಿತ್ಯದ ವಾಡಿಕೆಯಂತೆ ಒಂದಷ್ಟುದ್ದ ಉಪನ್ಯಾಸ ಬಿಗಿದಿರಿ. ಅದೇ ಚರ್ಚೆ.

ಮುರಳಿ:— ನಿಜ, ನಿಜ. ನನಗೂ ಈಗ ಜ್ಞಾಪಕಕ್ಕೆ ಬಂದಿತು. ಸರಿ, ಸರಿ. ಅಂತೂ ನಿನ್ನ ನೆನಪು. ಚಿಂತೆ ಇಲ್ಲ. ನನಗೂ ಅಷ್ಟೆ. ಮರೆಯುತ್ತದೆ ಎಂದರೆ ಪೂರ್ತಿ ಮರೆತುಹೋಗುವದಿಲ್ಲ. ಒಂದು ಚೂರು ಸೂಕ್ಷ್ಮ ಸಿಕ್ಕಿಬಿಟ್ಟರೆ ಥಟ್ ಅಂತ ಎಲ್ಲವೂ ಜ್ಞಾಪಕಕ್ಕೆ ಬಂದುಬಿಡುತ್ತದೆ.

ನಿಜ, ನಿಜ........ಛೆ. ಈ ಪರದಾಟದಲ್ಲಿಯೇ ಬಹಳ ಸಮಯ ನಷ್ಟವಾಗಿ ಹೋಯಿತು. ಇರಲಿ, ಕೇಳು.

ರಮೆ:— ಹೇಳಿ, ಹೇಳಿ.

ಮುರಳಿ:— ಹೀಗೆ, ಕೀಚಕನ ಶವವನ್ನು ಗೂಢವಾಗಿ ಸಂಸ್ಕಾರ ಮಾಡಿದರೂ ಕೂಡ, ಅಸಮಾನ ಬಲನಾದ ಕೀಚಕ ಕೊಲ್ಲಲ್ಪಟ್ಟನೆಂಬ ಸುದ್ದಿ ಕ್ರಮಶಃ ಎಲ್ಲೆಡೆಗೂ ಹರಡಿ ಹಸ್ತಿನಾಪತಿಗೂ ತಲಪಿತು. ದುರ್ಯೋಧನನು........

ರಮೆ:— ........ಅಂತೂ ನನ್ನ ಭವಿಷ್ಯ ಸ್ವಲ್ಪ ಕಠಿಣವಾದದ್ದೇ!

ಮುರಳಿ:— ನಿನ್ನ ಭವಿಷ್ಯವೆ? ಇದೇನು ಭೀಮನ ಕತೆಯ ನಡುವೆ ನಿನ್ನದೊಂದು ವ್ಯಥೆ?

ರಮೆ:— ವ್ಯಥೆ ಮೈದಳೆದು ಜೀವಂತವಾಗಿ ಕಣ್ಣಮುಂದೆ ಬಂದು ಕುಳಿತಾಗ ಯಾವ ಕತೆಯ ಕಡೆಗೆ ಗಮನ ಹೋಗುತ್ತದೆ ಹೇಳಿ?

ಮುರಳಿ:— ವ್ಯಥೆ ಜೀವಂತವಾಗಿ ಬಂದು ನಿನ್ನ ಕಣ್ಣಮುಂದೆ ಕುಳಿತು ಬಿಟ್ಟಿತೆ? ಎಂಥದದು?

ರಮೆ:— ವ್ಯಥೆ!

ಮುರಳಿ:— ವ್ಯಥೆ ಸರಿ. ಎಲ್ಲಿದೆ ಅದು? ಸದ್ಯಕ್ಕೆ ಜೀವಂತವಾಗಿ ನಿನ್ನ ಕಣ್ಣ ಮುಂದೆ ಕುಳಿತಿರುವವನು ನಾನೊಬ್ಬನೇ. ಬೇರೆ ನೊಣ ಗಿಣ ಏನಾದರೂ ನನ್ನ ಹೆಗಲ ಮೇಲೆ ಕುಳಿತುಕೊಂಡಿದೆಯೇನು?

ರಮೆ:— ನೊಣ, ಸೊಳ್ಳೆ, ಇರುವೆಗಳೆಲ್ಲ ವ್ಯಥೆ ಅನಿಸುತ್ತವೆಯೆ!

ಮುರಳಿ:— ಹಾಗಾದರೆ ನಾನೇ ನಿನ್ನ ವ್ಯಥೆಯ ಜೀವಂತ ರೂಪವಾಗಿ ಕುಳಿತುಬಿಟ್ಟಿದ್ದೇನೆ ಎಂದು ಹೇಳಿಬಿಡು. ಹಾಳಾಗಿ ಹೋಗಲಿ.

ರಮೆ:– ಹಾಳಾಗಿ ಏನೂ ಹೋಗುವದು ಬೇಡ. ಆದರೆ ಸದ್ಯಕ್ಕೆ ನೀವು ಮಾತ್ರ ನನ್ನ ಕಣ್ಣು ಮುಂದೆ ಜೀವಂತವಾಗಿ ಕುಳಿತಿರುವದರಿಂದ ನೀವೇ........

ಮುರಳಿ:– ನಿನ್ನ ವ್ಯಥೆಯಾಗಿಬಿಟ್ಟಿದ್ದೇನೆ. ಹೇಳಿಬಿಡು ಆಚೆ !

ರಮೆ:– ಹೌದು.

ಮುರಳಿ:– ಹೌದು ?

ರಮೆ:– ಹೌದು.

ಮುರಳಿ:– ಕೀಚಕನ ಪ್ರೇತವೇನಾದರೂ ನಿನಗೆ ಒಡಿಯಲಿಲ್ಲವಷ್ಟೆ ?

ರಮೆ:– ಈ ಭೂತ, ಪ್ರೇತಗಳನ್ನೆಲ್ಲ ನೀವು ನಂಬುತ್ತೀರೇನು ?

ಮುರಳಿ:– ನಾನು ಅವುಗಳನ್ನು ನಂಬುತ್ತೇನೆಯೋ ಇಲ್ಲವೋ ಎಂಬದನ್ನು ಕೇಳಿಕೊಂಡು ಈ ವಿಶ್ವದ ಅಗೋಚರ ಶಕ್ತಿಗಳೆಲ್ಲ ಬದುಕುತ್ತವೇನು ?

ರಮೆ:– ಸರಿ, ಬಿಡಿ. ಹಾಗಿದ್ದರೆ ಕತೆ ಮುಂದುವರಿಸಿ.

ಮುರಳಿ:– ಏನು, ಭೂತಗಳನ್ನು ವಾದಿಸದೆ ಅಷ್ಟಕ್ಕೇ ಕೈ ಬಿಟ್ಟುಬಿಟ್ಟೆ ?

ರಮೆ:– ನಿಮ್ಮೊಂದಿಗೆ ಇನ್ನೆಷ್ಟು ಕುಸ್ತಿ ಮಾಡಿ ಒದ್ದಾಡಲಿ !

ಮುರಳಿ:– ಹಾಗೆ........ಈಗ ಈ ಭೂತದ ಪ್ರಸ್ತಾಪ ಏಕೆ ಬಂತು........?

ರಮೆ:– ಅದೂ ಮರೆತುಹೋಯಿತೇನು ? ಕೀಚಕನ ಶವ........

ಮುರಳಿ:– ಸರಿ, ಸರಿ. ಗೊತ್ತಾಯಿತು. ಕೀಚಕನ ಶವವನ್ನು ಅವನ ತಮ್ಮಂದಿರು ರಹಸ್ಯವಾಗಿ ಒಯ್ದು ಸುಟ್ಟರು........

ರಮೆ:– ........ನನ್ನ ಭವಿಷ್ಯದ ಕುರಿತು ಮಾತು ಮುಗಿಯಲೇ ಇಲ್ಲ ವಲ್ಲ !

ಮುರಳಿ:– ಏನು ನಿನ್ನ ಭವಿಷ್ಯ ?

ರಮೆ:– ಅದೇ, ನನ್ನ ಭವಿಷ್ಯ ಬಹಳ ವ್ಯಥೆಯಿಂದ........

ಮುರಳಿ:– ಓಹೋಹೊ. ಅಂದಹಾಗೆ ಹೌದಲ್ಲ ! ಅದೇನು ಹೇಳು, ಕೇಳೋಣ. ನಾನು ನಿನ್ನ ವ್ಯಥೆಯ ಜೀವಂತ ರೂಪ ಎಂದೆಯಲ್ಲ, ಹೇಗೆ ಹೇಳು ನೋಡೋಣ.

ರಮೆ:– ನಿಮ್ಮ ಮರವೆಯ ಗಾಢತೆಯನ್ನು ಒಮ್ಮೊಮ್ಮೆ ಗಮನಿಸುವಾಗ ನನಗೆ ಹಾಗೆ ಹೆದರಿಕೆ ಆಗುತ್ತದೆ.

ಮುರಳಿ:– ಏನು ಮರೆತೆ ನಾನು ?

ರಮಾ:– ಕೃಷ್ಣನು ಭೀಷ್ಮನ ವಿರುದ್ಧ ಚಕ್ರ ಹಿಡಿದಲ್ಲಿಗೆ ನಿನ್ನೆ ಕತೆ ನಿಂತುದು ಅಂದರೆ ಹೌದು ಅನ್ನುತ್ತೀರಿ. ಅದು ತಪ್ಪು, ಅವನು ಗೀತೋಪದೇಶ ಮಾಡಿ ದಲ್ಲಿಗೆ ನಿಲ್ಲಿಸಿದ್ದೆವು ಅಂದರೆ ಅದೇ ಸರಿ ಎನ್ನುತ್ತೀರಿ. ಅದಕ್ಕೆ ಸ್ವಲ್ಪ ಹಿಂದೆ ಕೀಚಕನ ವಧೆಯ ಕುರಿತು ಚರ್ಚೆ ನಡೆಸಿದ್ದೆವು ಎಂದರೆ ಅಲ್ಲಿಂದಲೇ ಕತೆ ಮುಂದುವರಿಸುತ್ತೀರಿ. ನಿಮ್ಮ ಈ ಮರೆವು ಎಷ್ಟು ಆಳವಾಗಿದೆ ಎಂದರೆ ನಿಮ್ಮಂತೆ ಮರೆವೆಯ ನಟನೆ ಕೂಡ ಮಾಡಲು ಸಾಧ್ಯವಿಲ್ಲವೇನೋ ಅನಿಸುತ್ತದೆ. ಹೀಗೆಲ್ಲ ಮರೆಯುವವರು ನಿಮ್ಮ ಜೀವನದಲ್ಲಿ ಅದೆಷ್ಟೆಷ್ಟನ್ನು ಕಳೆದುಕೊಳ್ಳಲಿಕ್ಕಿದೆಯೋ, ನಾನು ಅದೆಷ್ಟೆಲ್ಲ ಅನುಭವಿಸಲಿಕ್ಕಿದೆಯೋ.................

ಮುರಳಿ:– ಮರವೆಯಿಂದ ಕಳೆದುಕೊಳ್ಳುವದು ನಿಜವಾದರೂ, ಹಾಗೆ ಕಳೆದುಕೊಂಡುದೆಲ್ಲ ನಷ್ಟವೇ ಆಗುವದಿಲ್ಲ ರಮಾ. ನನ್ನ ದೃಷ್ಟಿಯಲ್ಲಿ ಮರೆವೆ ಯಿಂದ ಕಳೆದು ಹೋಗುವದರಲ್ಲಿ ನಷ್ಟಕ್ಕಿಂತ ಲಾಭಾಂಶವೇ ಜಾಸ್ತಿ.

ರಮಾ:– ಹೇಗೆ ಹೇಳುತ್ತೀರಿ ?

ಮುರಳಿ:– ಉತ್ತರ ಸರಳವಾಗಿದೆ. ನಿನ್ನೆಯವರೆಗಿನ ದುಃಖಗಳೆಲ್ಲ ಮರೆ ಯುತ್ತವೆ. ಇದರಿಂದಾಗಿ ಯಾವ ಸಂಕೋಚವೂ ಇಲ್ಲದ ಹೊಸ ಜೀವನವನ್ನು ಇಂದಿನಿಂದ ಪ್ರಾರಂಭಿಸಬಹುದು. ನಿನ್ನೆಯವರೆಗಿನ ಸುಖಗಳೂ ಮರೆಯುತ್ತವೆ. ಇದರಿಂದಾಗಿ ಯಾವದರ ಮೋಲಿನ ವ್ಯಾಮೋಹವೂ ಇಲ್ಲದ ಹೊಸ ಜೀವನವನ್ನು ಪ್ರಾರಂಭಿಸಬಹುದು.

ರಮಾ:– ಆದರೆ ನಿನ್ನೆಯ ವರೆಗಿನ ಜೀವನದ ಅನುಭವದಿಂದ ನಾವು ಕಲಿತ ಪಾಠಗಳೂ ಎಲ್ಲವೂ ಮರೆತು ಹೋದರೆ ಅದು ಅಪಾರ ನಷ್ಟವಲ್ಲವೆ ?

ಮುರಳಿ:– ಅನುಭವಗಳಿಂದ ಕಲಿತ ಪಾಠದಿಂದಾಗಿ ಮುಂದಿನ ಜೀವನ ಅವಶ್ಯವಾಗಿ ಯಶಸ್ವಿಯಾಗುತ್ತದೆ ಎಂಬದು ರೂಢಿಯ ಮಾತೇ ಹೊರತು ಸದಾ ಸತ್ಯವಾಗುವ ಮಾತಲ್ಲ. ಅದು ನಿಜವಾದರೆ ವಯಸ್ಸು ಹೆಚ್ಚಾಗಿರುವ ಪ್ರತಿ ಯೊಬ್ಬನೂ ಅವನಿಗಿಂತ ಕಡಿಮೆ ವಯಸ್ಸಿನ ಇತರ ಎಲ್ಲರಿಗಿಂತ ಮತ್ತು ಜೀವನ ದಲ್ಲಿ ವಿಶೇಷ ಚಟುವಟಿಕೆಗಳನ್ನು ನಡೆಸಿದವನು ಹಾಗೆ ನಡೆಸದಿರುವವನಿಗಿಂತ ಅವಶ್ಯವಾಗಿ ಹೆಚ್ಚು ಸುಖ ಜೀವನವನ್ನು ನಡೆಸಬೇಕಾಗಿತ್ತು. ಆದರೆ ವಸ್ತುಸ್ಥಿತಿ ಹಾಗೇನೂ ಇಲ್ಲ. ಜೀವನದಲ್ಲಿ ಬರುವ ಪ್ರತಿಯೊಂದು ಸಂದರ್ಭ ಕೂಡ ಆ ಸಂದರ್ಭದಲ್ಲಿ ಹೊಚ್ಚ ಹೊಸತೇ ಆಗಿರುತ್ತದೆ. ಆಗಿನ ಸನ್ನಿವೇಶ, ಆ ಸನ್ನಿವೇಶ ದಲ್ಲಿ ಸಿಕ್ಕಿರುವ ಆ ವ್ಯಕ್ತಿ, ಆ ಸನ್ನಿವೇಶದಲ್ಲಿ ನಮಗೆ ಹೊಳೆಯುವ ಚಿಂತನೆ ಹಾಗೂ ಆ ಸಂದರ್ಭದ ನಮ್ಮ ಗ್ರಹಗತಿ – ಅರ್ಥಾತ್ ಪ್ರಾರಬ್ಧ – ಇತ್ಯಾದಿಗಳು ಆ ಸನ್ನಿವೇಶದ ಪರಿಣಾಮವನ್ನು ನಿರ್ಧರಿಸುತ್ತವೆಯೋ ಹೊರತು, ಅಂತಹುದೇ

ಹಿಂದಿನ ಸನ್ನಿವೇಶದಲ್ಲಿ ನಾವು ಕಲಿತ ಪಾಠ ಇಲ್ಲಿ ಉಪಯೋಗಕ್ಕೆ ಬರುವದು ಬಹಳ ಕಡಿಮೆ. ಅದು ಉಪಯೋಗಕ್ಕೆ ಬಂದರೆ ಆಕಸ್ಮಿಕವೇ ಹೊರತು, ಅದು ನಿಯಮಬದ್ಧವಾಗಿ ಅಲ್ಲ. ಮಾನವ ಕುಲದ ಸಾವಿರಾರು ವರ್ಷಗಳ ಅನುಭವದ ಪಾಠವು ನಮ್ಮ ಇಂದಿನ ಜೀವನವನ್ನು ಈಗಿರುವಷ್ಟೇ ಸುಖದಾಯಕವಾಗಿ, ಸುರಕ್ಷಿತವಾಗಿ ಮಾಡಿದೆ ಎಂದಾದರೆ, ನಾವು ಅನುಭವದಿಂದ ಕಂಡು ಬುದ್ಧಿವಂತರಾಗುತ್ತೇವೆನ್ನುವದು ಎಷ್ಟು ತಪ್ಪು ಎಂದು ತಿಳಿಯುತ್ತದೆ.

ರಮೆ:– ಹಾಗಾದರೆ ನೀವು ನನ್ನನ್ನು ಒಂದು ಆರು ತಿಂಗಳು ನೋಡದಿದ್ದರೆ ನಾನು ನಿಮ್ಮ ಹೆಂಡತಿಯೆಂಬದೇ ನಿಮಗೆ ಮರೆತುಹೋಗುತ್ತದೋ ಏನೊ !

ಮುರಳಿ:– ಛೆ. ಸುಖದಾಯಕವಾದ ಮರವೆಯ ಲಕ್ಷಣಗಳು ನಿನಗೆ ಅರ್ಥವಾಗುವದಿಲ್ಲ. ಇಂದಿನ ನನ್ನ ಚಟುವಟಿಕೆಗೆ, ನಾಳಿನ ನನ್ನ ಅವಶ್ಯಕತೆಗೆ ಬೇಕಾಗುವದನ್ನು ಬಿಟ್ಟು ಉಳಿದ ಎಲ್ಲವೂ ಕೇವಲ ಅನವಶ್ಯಕವಾದವುಗಳು ಎಂಬ ಪ್ರಜ್ಞೆಯಿಂದಾಗಿ ಮನಸ್ಸು ಅವುಗಳನ್ನು ನೆನಪಿನಲ್ಲಿಟ್ಟುಕೊಳ್ಳದೆ ತಿರಸ್ಕರಿಸುವ ರೀತಿಯ ಮರೆವನ್ನು ನಾನು ಹೇಳುತ್ತಿರುವದು.

ರಮೆ:– ನಿಮ್ಮಂತೆಯೇ ಮರೆಯುವ ಹೆಂಡತಿ ನಿಮಗೆ ಸಿಕ್ಕಿದ್ದರೆ ಬಹಳ ತಮಾಷೆಯಾಗಿರುತ್ತಿತ್ತು.

ಮುರಳಿ:– ಹೇಗೆ ?

ರಮೆ:– ಭೀಮನ ಕತೆಯೂ ಇಲ್ಲ, ರಾಮನ ಕತೆಯೂ ಇಲ್ಲ; ಪ್ರತಿ ದಿನವೂ ಮರೆವಿನ ಕತೆಯೊಂದೇ ಇರುತ್ತಿತ್ತು.

ಮುರಳಿ:– ನಿಜ, ನಿಜ. ಭೀಮನ ಕತೆ ಮುಗಿಸಬೇಕಲ್ಲ ! ನೋಡು ಮರೆವು ಯಾರನ್ನು ಬಿಟ್ಟದೆ ? ನಿನಗೆ ಕೂಡ ನಿನ್ನೆ ಕತೆಯನ್ನು ಎಲ್ಲಿಗೆ ನಿಲ್ಲಿಸಿದ್ದೆವೆಂಬದು ಹೇಗೆ ಮರೆತು ಹೋಗಿದೆ ನೋಡು !

ರಮೆ:– ನನಗೇನೂ ಮರೆತಿಲ್ಲ, ತಿಳಿಯಿತೆ ? ನಿಮ್ಮನ್ನು ಒಂದಷ್ಟು ಆಟವಾಡಿಸಿದೆ, ಅಷ್ಟೆ.

ಮುರಳಿ:– ಹಾಗೇನು ? ನೋಡು. ನಿನ್ನ ಗಂಡನೇ ನಿನ್ನ ಮುಗ್ಧ ಮಗುವೂ ಆಗುವದಾದರೆ........

ರಮೆ:– ಅದೇನೋ ನಿಜ. ಒಳ್ಳೆಯದು, ಕೆಟ್ಟದು– ಯಾವದರ ಪ್ರಬಲ ನೆನಪೂ ಉಳಿಯದ ತಿಳಿಯಾದ ಅಂತಃಕರಣದವರನ್ನು ಕಂಡಾಗ ನಮ್ಮ ಮನ, ಮೈ– ಎರಡೂ ಅವರ ಮುಂದೆ ಬಾಗುತ್ತವೆ.

ಮುರಳಿ:– ವಿಧೇಯತೆಯಿಂದಲೂ ಬಾಗುತ್ತವೆ, ಬಾಗಿದಂತೆ ಮಾಡಿ ಅವರನ್ನು ಸುಲಭವಾಗಿ ಕೆಳಗೆ ಕೆಡವಲೂ ಬಾಗುತ್ತವೆ.

ರಮೆ:– ನೀಚರ ಮಾತು ಬಿಡಿ. ಸಭ್ಯ ಸಮಾಜದ ಕುರಿತು ಆಡುವ ಯಾವ ಮಾತು ತಾನೆ ನೀಚರಿಗೆ ಅನ್ವಯಿಸುತ್ತದೆ? ಸಭ್ಯರ ಕುರಿತು ಹೇಳಿ.

ಮುರಳಿ:– ಹಾಗಾದರೆ ಭೀಮನ ಕತೆ ಬೇಡವೆನ್ನುತ್ತೀಯಾ?

ರಮೆ:– ಛೆ, ಹೌದು. ಹೇಳಿ. ಬೇರೆ ಒಂದು ಮಾತೂ ಇನ್ನು ಕೂಡದು. ಕುರುಕ್ಷೇತ್ರದ ಹದಿನೈದು ದಿನಗಳ ಯುದ್ಧ ಮುಗಿದಿದೆ. ದ್ರೋಣಾಚಾರ್ಯನು ಸತ್ತಿದ್ದಾನೆ. ಇದರಿಂದ ಸಿಟ್ಟುಗೊಂಡ ಅಶ್ವತ್ಥಾಮನು ನಾರಾಯಣಾಸ್ತ್ರವನ್ನು ಪ್ರಯೋಗಿಸಿ ಕೃಷ್ಣನು ಅದನ್ನೂ ಪೂರ್ಣವಾಗಿ ವಿಫಲಗೊಳಿಸಿದ್ದಾನೆ. ನಿರಾಶೆಯಿಂದ ಅಶ್ವತ್ಥಾಮನು ಹಿಂದಿರುಗಿದ್ದಾನೆ. ಮುಂದಕ್ಕೆ ಹೇಳಿ.

ಮುರಳಿ:– ದ್ರೋಣಾವಸಾನವಾದ ಮೇಲೆ ಕೌರವ ಪಡೆಗೆ ಕರ್ಣನನ್ನು ಅಧಿಪತಿಯನ್ನಾಗಿ ಮಾಡಲಾಯಿತು. ಹದಿನಾರನೆಯ ದಿನದ ಯುದ್ಧ ಪ್ರಾರಂಭವಾಯಿತು. ಕರ್ಣನ ನಾಯಕತ್ವದಲ್ಲಿ ತಮಗೆ ಜಯವು ನಿಶ್ಚಯ ಎಂದು ದುರ್ಯೋಧನನು ನಂಬಿ ಅವನನ್ನು ಉತ್ಸಾಹದಿಂದ ರಣರಂಗಕ್ಕೆ ಕಳುಹಿಸಿ ಕೊಟ್ಟನು. ಕೌರವ ಪಕ್ಷದ ಸೈನಿಕರೂ ಅಷ್ಟೇ ಉತ್ಸಾಹದಿಂದ ಮುನ್ನುಗ್ಗಿದ್ದರು. ಪಕ್ಷದಲ್ಲಿ ನವ ಚೈತನ್ಯ ಮೂಡಿತ್ತು. ಪಾಂಡವ ವೀರರೂ ಶತ್ರು ಪಕ್ಷದ ಹೊಸ ನಾಯಕನನ್ನು ಎದುರಿಸುವ ತವಕದಿಂದ ಮುನ್ನುಗ್ಗಿ ಬಂದರು. ಇವರ ಮುನ್ನಡೆಯನ್ನು ತಡೆಯುವದಕ್ಕಾಗಿ ಕೌರವ ಪಕ್ಷದ ಕ್ಷೇಮಧೂರ್ತನೆಂಬ ಮಹಾರಥನು ಒಂದು ಸಾವಿರ ಮದದಾನೆಗಳನ್ನು ಮುಂದೊಡ್ಡಿ ನಿಂತನು. ಈ ಆನೆಗಳ ಹಾವಳಿ ತಡೆಯಲಸಾಧ್ಯವಾಗುತ್ತಾ ಬಂದಿತು. ಭೀಮನು ತನ್ನ ಗದಾದಂಡವನ್ನು ತಿರುಗಿಸುತ್ತಾ ಆನೆಗಳನ್ನು ಎದುರಿಸಿದನು. ಯಾವ ದೇಶದಲ್ಲಿ ಗರುಡನೇ ರಾಜನಾಗಿರುವನೋ ಆ ದೇಶದ ಪ್ರಜೆಗಳು ನಾಗನಿಗೆ ತನಿ ಎರೆಯಬೇಕಾದ ಭಯವನ್ನು ಬಿಟ್ಟಿರುವಂತೆ ಭೀಮನ ಹಿಂಬಾಲಕರೂ ಅವನ ಹಿಂದಿನಿಂದ ನಿರ್ಭಯವಾಗಿ ಮುನ್ನುಗ್ಗಿದರು. ಭೀಮನು ಶತ್ರುಪಕ್ಷದ ಮಾವುತನೊಬ್ಬನನ್ನು ಕೆಳಗೆ ಎಳೆದು ಹಾಕಿ ತಾನು ಅವನ ಆನೆಯ ಮೇಲೇರಿ, ಆ ಆನೆಯು ಘೀಳಿಡುತ್ತಿರಲು ಅದನ್ನು ಅಂಕುಶದಿಂದ ಬಡಿದು ಕ್ಷೇಮಧೂರ್ತನ ಸಮ್ಮುಖಕ್ಕೆ ನೂಕಿದನು. ಇಬ್ಬರೂ ಬಾಣಗಳಲ್ಲಿ ಹೊಡೆದಾಡಿದರು. ಭೀಮನ ಕ್ರೂರ ಬಾಣಗಳು ಕ್ಷೇಮಧೂರ್ತನ ಎಲ್ಲ ಆನೆಗಳನ್ನೂ ಕೆಡಹಿದವು. ಕ್ಷೇಮಧೂರ್ತನ ಆನೆಯೂ ಹೀಗೆ ಸಾಯಲು ಅವನು ನೆಲಕ್ಕೆ ಹಾರಿ ಖಡ್ಗದಿಂದ ಹೊಡೆಯಬೇಕೆನ್ನುವಷ್ಟರಲ್ಲಿ ಭೀಮನು ಅವನ ತಲೆಯನ್ನು ಹಾರಿಸಿದನು. ಈಗ ಕೌರವ ಸೇನೆಯ ಮಹಾರಥರು

ಭೀಮನನ್ನು ಮುತ್ತಿದರು. ಅವರೊಂದಿಗೆ ಪಾಂಡವ ಪಕ್ಷದ ಸಾತ್ಯಕಿಯು ಖಾಡಾಖಾಡಿಯಾಗಿ ಯುದ್ಧ ಮಾಡಿದನು. ಸಾತ್ಯಕಿಯನ್ನು ಅಶ್ವತ್ಥಾಮನು ಸೋಲಿಸಿ ಭೀಮನನ್ನು ಮೂದಲಿಸುತ್ತಾ ಎದುರಾದನು. ರುದ್ರಾಂಶ ಸಂಭೂತ ನಾದ ಅವನು ಜಯಾಕಾಂಕ್ಷೆಯಿಂದ ಭೀಮನೊಡನೆ ಕಾಳಗವನ್ನು ಬಯಸಲು ಭೀಮನೂ ಪ್ರತಿಯಾಗಿ ಅವನನ್ನು ಮೂದಲಿಸುತ್ತಾ ಬಾಣಗಳ ಮಳೆಗರೆದನು. ಇಬ್ಬರೂ ಘೋರವಾಗಿ ಹೊಡೆದಾಡಿದರು. ಇವರಿಬ್ಬರ ಆ ಭೀಕರ ಯುದ್ಧವನ್ನು ನೋಡಿ ಸಿದ್ಧರು, ದೇವತೆಗಳು, ಮಹರ್ಷಿಗಳು ಮೊದಲಾದವರು ಇಂತಹ ಯುದ್ಧವು ನಡೆಯುವದು ಅಪೂರ್ವವೆಂದು ಅವರಿಬ್ಬರನ್ನೂ ಬಹುವಾಗಿ ಕೊಂಡಾಡಿದರು.

ರಮೆ:– ವ್ಯಾಸರು ಸ್ವಲ್ಪ. ಕುಮಾರವ್ಯಾಸ ತುಂಬ. ನೀವು ವಿಪರೀತ–ಅಂತ ಅನ್ನಿಸಿತು. ಅಭಿಮಾನ ಕೆಣಕಲ್ಪಡದಿದ್ದರೆ ಹೌದು ಎಂದು ಒಪ್ಪಿಕೊಳ್ಳಿ.

ಮುರಳಿ:– ಹೌದು.

ರಮೆ:– ಹಾಗೆ. ಸರಿ, ಮುಂದಕ್ಕೆ ಹೇಳಿ.

ಮುರಳಿ:– ಶಸ್ತ್ರ ವಿದ್ಯೆಯಲ್ಲಿ ತಂದೆಗೆ ಸಮಾನನಾದ........

ರಮೆ:– ಮತ್ತೆ ಪಾಂಡವರ ಕತೆಯೆಲ್ಲ ಪೂರ್ಣವಾಗಿ ಚಾರಿತ್ರಿಕವಾಗಿಯೇ ನಡೆದುದು ಎಂದು ವಾದಿಸುತ್ತೀರಿ ?

ಮುರಳಿ:– ಹೌದು.

ರಮೆ:– ಮತ್ತೆ ವ್ಯಾಸರು ಇಷ್ಟಾದರೆ ನೀವು ವಿಪರೀತ ಎಂದರೆ ಅದೂ ನಿಜ ವೆಂದು ಒಪ್ಪಿಕೊಳ್ಳುತ್ತೀರಿ ?

ಮುರಳಿ:– ಹೌದು.

ರಮೆ:– ಹೌದು, ಹೌದು, ಹೌದು. ಹಾಳಾಗಲಿ ಕತೆ ಹೇಳಿ.

ಮುರಳಿ:– ಒಳ್ಳೆಯ ಗ್ರಹಚಾರವಾಯಿತಲ್ಲ ! ಹೌದು ಎಂದು ಕಾಣಿಸಿದು ದನ್ನು ಹಾಗೆಂದು ಒಪ್ಪಿಕೊಳ್ಳಬಾರದೆ ?

ರಮೆ:– ಆದರೆ ನಿಮ್ಮ ಎರಡು ಹೌದುಗಳು ಒಂದಕ್ಕೊಂದು ವಿರೋಧ ವಾದ ಒಪ್ಪಿಗೆಯ ಸೂಚಕವಾದರೆ ನಾನೂ ನಿಮ್ಮ ಆ ವಿಚಿತ್ರ ನಿಲುವನ್ನು ಹೌದು ಎಂದು ಒಪ್ಪಿಕೊಳ್ಳಬೇಕೇನು ?

ಮುರಳಿ:– ಬೇಡ.

ರಮೆ:– ಮತ್ತೆ ಗ್ರಹಚಾರ ಅಂತ ಅಳುತ್ತೀರಿ !

ಮುರಳಿ:– ಗ್ರಹಚಾರ ಎಂದರೆ ನನ್ನದು ಅಂತ ಅಲ್ಲ. ನಿನ್ನ ಗ್ರಹಚಾರಕ್ಕಾಗಿ ಅತ್ತೆ, ಅಷ್ಟೆ.

ರಮೆ:– ಹೌದು, ಹೌದು. ಗ್ರಹಚಾರ ನನ್ನದೇ. ನಿಜವೇ.

ಮುರಳಿ:– ಒಪ್ಪಿಕೊಳ್ಳುತ್ತಿ ತಾನೆ ?

ರಮೆ:– ಪ್ರತ್ಯಕ್ಷವಾಗಿರುವದನ್ನು ಒಪ್ಪಿಕೊಳ್ಳದೆ ಇರುವದು ಹೇಗೆ ?

ಮುರಳಿ:– ಏನು ಪ್ರತ್ಯಕ್ಷವಾಗಿರುವದು ?

ರಮೆ:– ಗ್ರಹಚಾರ !

ಮುರಳಿ:– ಎಲ್ಲಿ ಪ್ರತ್ಯಕ್ಷವಾಗಿದೆ ?

ರಮೆ:– ಪ್ರತ್ಯಕ್ಷವಾಗಿ ಎಂದರೆ ಇರುವದು ಎಲ್ಲಿ ಎಂದು ಅರ್ಥವಾಗುತ್ತದೆ ? ಹೇಳಿ.

ಮುರಳಿ:– ಪ್ರತ್ಯಕ್ಷವಾಗಿ ಎಂದರೆ ಕಣ್ಣಿನ ಮುಂದೆ ಅಂತ.

ರಮೆ:– ಅದನ್ನೇ ನಾನು ಹೇಳಿದುದು.

ಮುರಳಿ:– ನಿನ್ನ ಕಣ್ಣಿನ ಮುಂದೆ ಗ್ರಹಚಾರ ಎಲ್ಲಿ ಕಾಣಿಸುತ್ತಿದೆ ?

ರಮೆ:– ಕಾಣಿಸುತ್ತಿರುವದನ್ನೇ ಹೇಳಿದುದು !

ಮುರಳಿ:– ಇಲ್ಲಿ ಗ್ರಹಚಾರ ಎಲ್ಲಿ ಕಾಣಿಸುತ್ತಿದೆ ರಮಾ ?

ರಮೆ:– ನಿಮಗೆ ಕಾಣಿಸದಿರಬಹುದು. ನನಗೆ ಕಾಣಿಸುತ್ತಿದೆಯಲ್ಲ !

ಮುರಳಿ:– ಎಲ್ಲಿ, ನನಗೂ ತೋರಿಸು.

ರಮೆ:– ..........

ಮುರಳಿ:– ಅದು ನಾನು.

ರಮೆ:– ಅದೇ ನನ್ನ ಗ್ರಹಚಾರ.

ಮುರಳಿ:– ಅಂದರೆ, ನಿನ್ನ ಗ್ರಹಚಾರಕ್ಕಾಗಿ ನಾನು ಅತ್ತೆ ಎಂದರೆ ನನಗಾಗಿ ನಾನು ಅತ್ತೆ ಎಂದು ನಾನು ಹೇಳಿದುದೇನು ?

ರಮೆ:– ನೀವು ಏಕೆ ಹೇಳಿದಿರೊ ! ಅಂತೂ ಈ ದೃಷ್ಟಿಯಿಂದ ನೀವು ಹೇಳಿದುದು ಸರಿ ಎಂದು ನಾನು ಒಪ್ಪಿಕೊಂಡೆ.

ಮುರಳಿ:– ನಾನು ಹೇಗೆ ನಿನ್ನ ಗ್ರಹವಾದೆ ?

ರಮೆ:– ವ್ಯಾಸರು ಇಷ್ಟಾದರೆ ನೀವು ವಿಪರೀತ ಎಂಬದನ್ನೂ ಹೌದು ಎಂದು ಒಪ್ಪಿಕೊಳ್ಳುತ್ತೀರಿ. ಪಾಂಡವರ ಚಾರಿತ್ರಿಕವಾದ ಕತೆಯನ್ನೇ ಹೇಳುತ್ತಿದ್ದೀರೋ

ಎಂದರೆ ಅದೂ ಹೌದೆಂದು ಒಪ್ಪಿಕೊಳ್ಳುತ್ತೀರಿ. ನಿಮ್ಮ ಈ ಎರಡು ಅಭಿಪ್ರಾಯಗಳೂ ಒಂದಕ್ಕೊಂದು ವಿರೋಧವಾದುದರಿಂದ ನಾನು ಅವುಗಳನ್ನು ಒಪ್ಪಿಕೊಳ್ಳುವದಿಲ್ಲವೆಂದರೆ ಬೇಡ ಎನ್ನುತ್ತೀರಿ. ನಿಮಗೆ ಬೇಕಾದಾಗ ಗಂಟೆಗಟ್ಟಲೆ ಪುರಾಣ ಕೊಚ್ಚುತ್ತೀರಿ. ನಾನೇನಾದರೂ ಕೇಳಿಬಿಟ್ಟರೆ ಅಕ್ಷರಕ್ಕೆ ಲಕ್ಷ ರೂಪಾಯಿ ಬೆಲೆ ಇರುವಂತೆ ಬೇಕು, ಬೇಡ, ಹೌದು, ಅಲ್ಲ ಎಂದಿಷ್ಟೇ ಹೇಳಿ ಕಲ್ಲುಗುಂಡಿನಂತೆ ಕುಳಿತುಬಿಡುತ್ತೀರಿ. ಬದಲಾಯಿಸಲಾರದ ಹಣೆಯ ಬರಹಕ್ಕೆ ತಾನೆ ಗ್ರಹಚಾರ ಎನ್ನುವದು ? ಮತ್ತೆ ನಿಮ್ಮ ಈ ವರ್ತನೆ ಗ್ರಹಚಾರವಲ್ಲದೆ ಮತ್ತೇನು ?

ಮುರಳಿ:– ವ್ಯಾಸರು ಸ್ವಲ್ಪ, ಕುಮಾರವ್ಯಾಸ ತುಂಬ, ನೀವು ವಿಪರೀತ– ಎಂದು ನೀನು ಯಾವದಕ್ಕೆ ಹೇಳಿದೆ ?

ರಮೆ:– ಇಷ್ಟು ಹೊತ್ತು ಕನಸಿನಲ್ಲಿ ಮಾತನಾಡುತ್ತಿದ್ದಿರೇನು ?

ಮುರಳಿ:– ಯಾಕೆ ?

ರಮೆ:– ನಾನು ಹಾಗೆ ಕೇಳಿದ ತಕ್ಷಣ ಹೌದು ಎಂದು ಒಪ್ಪಿಕೊಂಡುಬಿಟ್ಟು ಈಗ ಏಕೆ ಹಾಗೆ ಕೇಳಿದೆ ಎಂದು ಕೇಳುತ್ತೀರಿ ?

ಮುರಳಿ:– ಸುಂದರಿಯಾದ ಹುಡುಗಿಯರಲ್ಲಿ ನಾನು ಮಾತನಾಡುವ ಕ್ರಮವೇ ಹೀಗೆ. ಏನು ಮಾಡಲಿ ಹೇಳು !

ರಮೆ:– ನೀವು ಹೊಗಳಿ ಮೇಲೇರಿಸಿ ಅನಂತರ ನಾನು ಕೆಳಗೆ ಬೀಳುವಾಗ ಹೆಚ್ಚು ಎತ್ತರದಿಂದ ಬೀಳಬೇಕಾಗುವಂತೆ ಮಾಡುವ ಈ ತಂತ್ರವೇನೂ ಬೇಡ. ಸೌಂದರ್ಯಕ್ಕೂ ಮಾತಿಗೂ ಸಂಬಂಧವೇನು ?

ಮುರಳಿ:– ತಾನು ಮೆಚ್ಚಿದ ಪುರುಷನಲ್ಲಿ ಸುಂದರಿಗೆ ಮೇಲುಗೈಯಾದಾಗ ಅವಳು ಹೇಗಿರುತ್ತಾಳೆ; ಸಮಾನಳಾಗಿ ಸೆಣಸುವಾಗ ಹೇಗಿರುತ್ತಾಳೆ; ಸೋತಾಗ ಹೇಗಿರುತ್ತಾಳೆ; ಚಿಂತನೆಯ ಭಂಗಿಯಲ್ಲಿ ಹೇಗಿರುತ್ತಾಳೆ; ತನ್ನನ್ನು ಸೋಲಿಸಿದ ಪುರುಷನನ್ನು ಬೇರೆ ವಿಧದಲ್ಲಾದರೂ ಗೆಲ್ಲಬೇಕೆಂಬದಕ್ಕಾಗಿ ಅವಳು ಅವನನ್ನು ಹೇಗೆ ತನ್ನ ವಶಕ್ಕೆ ತೆಗೆದುಕೊಳ್ಳುತ್ತಾಳೆ; ಆಗ ಅವಳ ಸೌಂದರ್ಯ........

ರಮೆ:– ಕಾಮಶಾಸ್ತ್ರದ ವಿವರಣೆ ಬೇಡ. ಚರ್ಚೆಯ ವಿಷಯಕ್ಕೆ ಬನ್ನಿ.

ಮುರಳಿ:– ಬಂದೆ.

ರಮೆ:– ಹೇಳಿ.

ಮುರಳಿ:– ಕೇಳು.

ರಮೆ:– ವ್ಯಾಸರು ಸ್ವಲ್ಪ, ಕುಮಾರವ್ಯಾಸ ತುಂಬ, ನೀವು ವಿಪರೀತ ಎಂದು ಹೇಳಿದುದನ್ನು ನೀವು ಹೌದು ಎಂದೇಕೆ ಒಪ್ಪಿಕೊಂಡಿರಿ ?

ಮುರಳಿ:– ಹೌದಾದುದರಿಂದ.

ರಮೆ:– ಏನು ಹೌದಾದುದರಿಂದ?

ಮುರಳಿ:– ವ್ಯಾಸರು ಸ್ವಲ್ಪ, ಕುಮಾರವ್ಯಾಸ ತುಂಬ, ನಾನು ವಿಪರೀತ ಎನ್ನುವದು ಹೌದಾದುದರಿಂದ.

ರಮೆ:– ಥತ್. ಅವರೇನು ಸ್ವಲ್ಪ, ನೀವೇನು ವಿಪರೀತ ಅಂತ? ಯಾವದರಲ್ಲಿ ಅಂತ?

ಮುರಳಿ:– ಹಾಗೆ. ಈ ಲೋಕಕ್ಕೆ ಅಂಟಿಕೊಂಡಿರುವದರಲ್ಲಿ. ಈ ಹೆಣ್ಣು, ಹೊನ್ನು, ಮಣ್ಣು – ಇವುಗಳಿಗೆ ಅಂಟಿಕೊಂಡಿರುವದರಲ್ಲಿ ವ್ಯಾಸರು ಸ್ವಲ್ಪ, ಕುಮಾರವ್ಯಾಸ ಅವರಿಗಿಂತ ಸ್ವಲ್ಪ ಹೆಚ್ಚು, ನಾನು ಕಂಡಾಬಟ್ಟೆ ಎಂಬದು ಹೌದು ಎಂದು ಒಪ್ಪಿಕೊಂಡೆ.

ರಮೆ:– ನಾನು ಈ ಲೋಕದ ವ್ಯವಹಾರವನ್ನೇ ಕುರಿತಾಗಿ ಕೇಳಿದೆ ಎಂದು ನೀವು ಏಕೆ ತಿಳಿದುದು?

ಮುರಳಿ:– ನೀನು ಪ್ರಶ್ನೆ ಕೇಳುವಾಗ ನಾನು ನಿನ್ನನ್ನೇ ಒಂದು ತರಹಾ ನೋಡುತ್ತಾ ಇದ್ದೆನಲ್ಲಾ, ಅದಕ್ಕಿರಬೇಕು.

ರಮೆ:– ಸಾಮಾನ್ಯವಾಗಿ ಹೆಣ್ಣು ಗಂಡನ್ನು ವಶಪಡಿಸಿಕೊಳ್ಳುವಂತೆ ಕೂಡ ನಿಮ್ಮನ್ನು ವಶಪಡಿಸಿಕೊಳ್ಳಲಾಗುವದಿಲ್ಲವಲ್ಲ! ಅದಕ್ಕೆ ಮುಂಚೆಯೇ ಅವಳು ನಿಮಗೆ ಶರಣಾಗಿಬಿಡುವಂತೆ ನೀವು ಮಾತನಾಡುತ್ತೀರಿ!

ಮುರಳಿ:– ಶರಣಾಗುವದರ ಮೂಲಕ ಅವಳು ನನ್ನನ್ನು ವಶಕ್ಕೆ ತೆಗೆದು ಕೊಂಡಿರುತ್ತಾಳೆ.

ರಮೆ:– ಅಯ್ಯೋ ಸರಸ ಸಾಕಪ್ಪ. ನಾನೇಕೆ ವ್ಯಾಸರ, ಕುಮಾರವ್ಯಾಸರ, ನಿಮ್ಮ ಕುರಿತಾಗಿ ಹಾಗೆ ಹೇಳಿದೆ ಎಂದು ನೀವು ಕೇಳಬೇಕೊ ಬೇಡವೊ?

ಮುರಳಿ:– ಕೇಳಬೇಕು, ಕೇಳಬೇಕು. ಅಂದಹಾಗೆ ನೀನು ಹಾಗೆ ಕೇಳಿದುದೇಕೆ?

ರಮೆ:– ನಿಮ್ಮ ತಲೆ. ವ್ಯಾಸರು ಭಾರತದ ಕತೆಯಲ್ಲಿ ಸ್ವಲ್ಪ ಚರಿತ್ರೆ ಸೇರಿಸಿದ್ದರೆ ಕುಮಾರವ್ಯಾಸ ಅದಕ್ಕೆ ಒಂದಷ್ಟು ಕಲ್ಪನೆ ಸೇರಿಸಿರಬೇಕೆಂದೂ, ನೀವು ವಿಪರೀತ ಕಲ್ಪನೆ ಸೇರಿಸುತ್ತಿದ್ದೀರೆಂದೂ ಹೇಳಿದೆ.

ಮುರಳಿ:– ಹಾಗೇನು? ಹಾಗಾದರೆ ನಿನ್ನ ಪ್ರಶ್ನೆಗೆ ಹೌದು ಎಂದು ಉತ್ತರ ಕೊಟ್ಟುದು ಸರಿಯಾಗಲಿಲ್ಲ.

ರಮೆ:– ಹಾಗೆ ಸೋಲೊಪ್ಪಿಕೊಳ್ಳಿ.

ಮುರಳಿ:– ಸೋತೆ. ನಾ ನಿನಗೆ ಮನಸೋತೆ.

ರಮೆ:– ನಿಮಗೆ ಈ ದಿನ ಏನಾಗಿದೆ ಅಂತ? ಸುಮ್ಮನೆ ಹೊತ್ತು ಕಳೆಯುವದರ ಬದಲು ವಿಷಯಕ್ಕೆ ಬರಬಾರದೆ?

ಮುರಳಿ:– ಬರಬಹುದು. ನಾನು ಕತೆಯಲ್ಲಿ ವಿಪರೀತ ಕಲ್ಪನೆ ಸೇರಿ ಸುತ್ತೇನೆಂದು ಏಕೆ ಹೇಳಿದೆ?

ರಮೆ:– ಹಾಗೆ ಬನ್ನಿ. ಅಶ್ವತ್ಥಾಮನು ಅಸ್ತ್ರವಿದ್ಯೆಯಲ್ಲಿ ಮಹಾ ನಿಪುಣನೆಂದು ಹೆಸರಾದವನು ತಾನೆ? ಸಾಕ್ಷಾತ್ ದ್ರೋಣನ ಏಕಮಾತ್ರ ಪುತ್ರನಾಗಿ ಅಮಿತ ಪುತ್ರವಾತ್ಸಲ್ಯದ ರೂಪದಲ್ಲಿ ದ್ರೋಣನ ವಿದ್ಯೆಯನ್ನೆಲ್ಲ ಪಡೆದವನು ತಾನೆ? ಸಾಲದುದಕ್ಕೆ ಯುವಕ ಮತ್ತು ಮುಂಗೋಪಿ. ಇಂತಹ ಪ್ರಚಂಡ ಬಿಲ್ಗಾರನೊಂದಿಗೆ ಭೀಮನು ಬಿಲ್ಲು ಬಾಣಗಳಿಂದಲೇ ಸಮಾನವಾದ ಯುದ್ಧ ಮಾಡಿದನೆಂಬದು ನಿಮ್ಮ ಕಲ್ಪನೆಯೋ ಹೇಗೆ ಎಂದು ಕೇಳಿದೆ. ಅವನು ಗದೆಯನ್ನು ಧರಿಸಿ ಯಾರನ್ನೂ ಎದುರಿಸುವವನೆನ್ನುವದರಲ್ಲಿ ನನಗೆ ಸಂಶಯ ಉಳಿದಿಲ್ಲ. ಆದರೆ ಬಿಲ್ಲಿನಲ್ಲಿ..........ಅದೂ ಅಶ್ವತ್ಥಾಮನಂತಹವನೊಂದಿಗೆ ಹೀಗೆ ಯುದ್ಧ ಮಾಡಿದನೇ ಎಂಬದನ್ನು ಖಚಿತಪಡಿಸಿಕೊಳ್ಳಲು ಕೇಳಿದೆ.

ಮುರಳಿ:– ನಾನು ಹಿಂದೆಯೇ ಹೇಳಿದ್ದೇನೆ. ಕತೆಯಲ್ಲಿ ನನ್ನ ಕಲ್ಪನೆ ಎಳ್ಳಷ್ಟೂ ಇಲ್ಲ; ವ್ಯಾಸ, ನಾರಣಪ್ಪರ ವಿವರಣೆಯನ್ನು, ಅಸಮರ್ಥ ರೀತಿಯಲ್ಲಿ ಮಾತ್ರವೇ ಹೇಳಬಲ್ಲೆ ಎಂದು. ಭೀಮ ಯಾರಿಗೂ ಕಡಿಮೆಯೆನಿಸದ ಬಿಲ್ಗಾರನೇ. ಆದರೆ ಗದೆಯಲ್ಲಿ ನಿಮಿಷದೊಳಗೆ ಮಾಡುವದನ್ನು ಬಿಲ್ಲಿನಲ್ಲಿ ಗಂಟೆಗಟ್ಟಲೆ ಮಾಡಲೊಲ್ಲದ ವೀರ ಅವನು. ಅಷ್ಟೆ. ಕೇಳು. ಭೀಮನ ಬಾಣಗಳ ಪೆಟ್ಟನ್ನು ಸಹಿಸಲಾರದೆ ಕೌರವ ಪಕ್ಷದ ಮಹಾರಥರು ಅಶ್ವತ್ಥಾಮನನ್ನು ಬಿಟ್ಟು ಓಡಿ ಹೋದರು.

ರಮೆ:– ಭಲೇ.

ಮುರಳಿ:– ಹೂ ಬಿಟ್ಟ ಮುತ್ತುಗದ ಮರದಂತೆ ಅಶ್ವತ್ಥಾಮನ ಶರೀರವು ಭೀಮನ ಬಾಣಗಳಿಂದ ಕೆತ್ತಲ್ಪಟ್ಟು ಅವನು ವೇದನೆಯನ್ನು ಸಹಿಸಲಾರದೆ ಮೂರ್ಛೆ ಬಿದ್ದುಬಿಟ್ಟನು.

ರಮೆ:– ಭೇಷ್, ಭೇಷ್.

ಮುರಳಿ:– ಈ ಕಡೆ ಭೀಮನೂ ಪ್ರಜ್ಞೆತಪ್ಪಿ ಬಿದ್ದನು.

ರಮೆ:– ಶಹಭಾಸ್. ಹಲವು ಗಂಡುಗಳ ಗಂಡ ಅವನು. ಎದುರಾಳಿ ಸಾಕ್ಷಾತ್ ಅಶ್ವತ್ಥಾಮನಾದುದರಿಂದ, ಭೀಮನು ಏಕಾಂಗಿಯಾಗಿ ಕೌರವ ಪಕ್ಷದವ

ರೆಲ್ಲರನ್ನೂ ಎದುರಿಸಬೇಕಾಗ ಬಂದುದರಿಂದ, ಸಾಲದುದಕ್ಕೆ ಭೀಮನು ತನಗೆ ಅನುಗುಣವಾದ ಗದೆಯನ್ನು ಬಿಟ್ಟು ಬಿಲ್ಲಿನಲ್ಲಿ ಅವರೊಂದಿಗೆ ಯುದ್ಧ ಮಾಡಿದುದ ರಿಂದ ಅವನು–ಬಹುಶಃ ಕುರುಕ್ಷೇತ್ರದಲ್ಲಿ ಪ್ರಥಮ ಬಾರಿಗೆ – ಮೂರ್ಛೆ ಹೋದುದು. ಇಲ್ಲವೆ ?

ಮುರಳಿ:– ಹೌದು. ಜಾಣೆ. ಕೇಳು. ಅದೇ ದಿನ ಯುಧಿಷ್ಠಿರನೂ ದುರ್ಯೋಧನನನ್ನು ಬಾಣ ಯುದ್ಧದಲ್ಲಿ ಸೋಲಿಸಿದನು.

ರಮೆ:– ಅರ್ಜುನ ?

ಮುರಳಿ:– ತಿಳಿಯದು. ಸುಮ್ಮನೆ ಹೇಳಿದಷ್ಟು ಕೇಳು. ಸಂಜೆಯಾಯಿತು. ದುರ್ಯೋಧನನ ಒಡ್ಡೋಲಗ ಸೇರಿತು. ಅಂದಿನ ಯುದ್ಧದ ಕುರಿತು ದುರ್ಯೋ ಧನನಿಗೆ ವಿಪರೀತ ನಿರಾಶೆಯಾಗಿದ್ದಿರಬೇಕು. ಕರ್ಣನ ಆಧಿಪತ್ಯದಲ್ಲಿ ತಾವು ಒಂದೇ ದಿನದ ಯುದ್ಧದಲ್ಲಿ ಅದೇನೋ ವಿಜಯ ಸಾಧಿಸಿಬಿಡಬಹುದು ಎಂದು ಅವನು ನಿರೀಕ್ಷಿಸಿದ್ದಿರಬಹುದು. ಆದರೆ ಆ ದಿನವೂ ಪಾಂಡವರದೇ ಮೇಲುಗೈ ಯಾದುದರಿಂದ ಅವನು ಆ ಕುರಿತು ಒಡ್ಡೋಲಗದಲ್ಲಿ ಪ್ರಸ್ತಾಪಿಸಿದನು. ಅದನ್ನು ಕೇಳಿ ಕರ್ಣನು "ದುರ್ಯೋಧನಾ, ಅರ್ಜುನನು ಯಾವ ವಿಶೇಷವಾದ ಪರಾ ಕ್ರಮಿಯೂ ಅಲ್ಲ. ಕೃಷ್ಣನ ಸಾರಥ್ಯದಿಂದಾಗಿ ಅಷ್ಟೇ ಅವನನ್ನು ನಾವು ಗೆಲ್ಲಲು ಸಾಧ್ಯವಾಗದಿರುವದು. ಸಾರಥಿತನದಲ್ಲಿ ಅತ್ಯಂತ ಸಮರ್ಥನೆನಿಸಿದ ಶಲ್ಯನನ್ನು ನನಗೆ ಸಾರಥಿಯನ್ನಾಗಿ ಒದಗಿಸಿಕೊಟ್ಟರೆ ನನ್ನ ಯುದ್ಧವನ್ನು ಆಮೇಲೆ ನೋಡು" ಎಂದನು.

ರಮೆ:– ಅರ್ಜುನನನ್ನು ಎದುರಿಸುವದರ ಕುರಿತೇ ಕರ್ಣನು ಪ್ರಸ್ತಾಪಿಸ ಬೇಕಾದರೆ ಭೀಮನನ್ನು ಅವನು ಗಣನೆಗೇ ತೆಗೆದುಕೊಂಡಿಲ್ಲ ಎಂದಂತಾಗುವ ದಿಲ್ಲವೆ ?

ಮುರಳಿ:– ಕರ್ಣ ಬಿಲ್ಲಾಳು. ಪಾಂಡವರ ಕಡೆ ಹೆಸರಾಂತ ಬಿಲ್ಲಾಳು ಅರ್ಜುನ. ಹಾಗಾಗಿ ಕರ್ಣನ ಗುರಿ ಅರ್ಜುನನತ್ತ. ಅಲ್ಲದೆ ಚಿಕ್ಕಂದಿನಿಂದಲೂ ಕರ್ಣ – ಅರ್ಜುನರೇ ಬಿಲ್ಗಾರತನದಲ್ಲಿ ಪರಸ್ಪರ ಸ್ಪರ್ಧಿಗಳಾಗಿದ್ದು ಪರಸ್ಪರ ವೈರ ವನ್ನು ಸಾಧಿಸುತ್ತಿದ್ದವರು. ಭೀಮನನ್ನು ಕೊಲ್ಲುತ್ತೇನೆಂದಾಗಲಿ, ಗೆಲ್ಲುತ್ತೇನೆಂದಾ ಗಲಿ ಅಥವಾ ಸಮರ್ಥ ರೀತಿಯಲ್ಲಿ ಎದುರಿಸುತ್ತೇನೆಂದು ಕೂಡ ಹೇಳಿಕೊಳ್ಳುವ ವೀರ ಕೌರವ ಪಕ್ಷದಲ್ಲಿ ಯಾರೂ ಇರಲಿಲ್ಲ. ಹಾಗಾಗಿ ಆ ಹೊಣೆಗಾರಿಕೆಯನ್ನು ಸಾಕ್ಷಾತ್ ದುರ್ಯೋಧನನೇ ಹೊರಬೇಕಾಯಿತು. ಅಲ್ಲದೆ – ಬಹುಶಃ – ಅರ್ಜುನನು ವಿಶೇಷವಾದ ಗಮನವನ್ನು ಸೆಳೆಯುವ ಒಬ್ಬ ದೊಡ್ಡ ವೀರನೆಂದೇ ಕೌರವ ಪಕ್ಷದವರು ಪರಿಗಣಿಸುತ್ತಿರಲಿಲ್ಲವೇನೋ. ಆಗಲೇ ಲೋಕಮಾನ್ಯನಾಗಿದ್ದ

ಹಾಗೂ ಪಾಂಡವ ಪಕ್ಷದ ಯಶಸ್ವೀ ಚಟುವಟಿಕೆಗಳ ಸೂತ್ರಧಾರನೆಂದು ಪ್ರಖ್ಯಾತ ಗೊಂಡಿದ್ದ ಕೃಷ್ಣನು ಸ್ವತಃ ತಾನೇ ಅರ್ಜುನನ ರಥದಲ್ಲಿ ಕುಳಿತುಬಿಟ್ಟದರಿಂದ ಕೌರವ ಪಕ್ಷದವರು ಅರ್ಜುನನನ್ನು ಕಡೆಗಣಿಸುವದು ಬಿಟ್ಟು ತಮ್ಮ ವಿಶೇಷ ಗಮನವನ್ನೇ ಅತ್ತ ಹರಿಸಬೇಕಾಗಿ ಬಂದಿದ್ದಿತು.

ರಮೆ:— ಹಾಗಿದ್ದ ಮೇಲೆ ಕೌರವ ಪಕ್ಷದವರು ಕೃಷ್ಣ ಸಹಿತನಾದ ಅರ್ಜುನ ನಿಗೆ ಸರಿದೂಗುವಂತೆ ತಮ್ಮನ್ನು ಸಜ್ಜುಗೊಳಿಸಿಕೊಂಡು ಅವನಲ್ಲಿ ಯುದ್ಧ ಮಾಡ ಬೇಕಿತ್ತೇಕೆ? ಅವನನ್ನು ಸಾಮಾನ್ಯನೆಂದು ಕಡೆಗಣಿಸಿ ಭೀಮನೊಬ್ಬನನ್ನೇ ಎದುರಿಸಿ, ಸಾಧ್ಯವಾದರೆ ಭೀಮನನ್ನು ಕೊಂದು ಪಾಂಡವರ ಮೇಲೆ ವಿಜಯ ವನ್ನು ಸಾಧಿಸಬಹುದಿತ್ತಲ್ಲವೆ?

ಮುರಳಿ:— ಪೂರ್ಣ ಹಾಗಲ್ಲ. ಆದರೆ ನೀನಂದುದು ಭಾಗಶಃ ಸರಿ. ಪಾಂಡವ ಸಹೋದರರ ಪೈಕಿ ಒಬ್ಬನು ಸತ್ತರೂ ಯುಧಿಷ್ಠಿರನು ಸೋಲನ್ನೊಪ್ಪಿಕೊಳ್ಳುತ್ತಿದ್ದ ಎಂಬದು ಕೌರವ ಪಕ್ಷದ ಎಲ್ಲರಿಗೂ ತಿಳಿದಿದ್ದಿತು. ಹಾಗಿರುವಾಗ ಈ ಐವರ ಪೈಕಿ ಯಾರನ್ನು ಕೊಲ್ಲುವದು? ಯುಧಿಷ್ಠಿರನು ಬಹಳ ಜೋಪಾನವಾಗಿ ರಕ್ಷಿಸಲ್ಪಟ್ಟದ್ದ. ನಕುಲ ಸಹದೇವರು ಬಹುಪಾಲು ಬಿರುಸಿನ ಯುದ್ಧಗಳಲ್ಲಿ ಎಲ್ಲಿಯೂ ಕಾಣಿಸಿಕೊಳ್ಳುತ್ತಿರಲಿಲ್ಲ. ಇನ್ನು ಉಳಿದವರು ಭೀಮ ಮತ್ತು ಅರ್ಜುನ. ಅರ್ಜುನನನ್ನು ಕೊಲ್ಲಲು ಸಾಧ್ಯವಿಲ್ಲದಿದ್ದಂತೆ ಮಹಾ ಚತುರನಾದ ಕೃಷ್ಣನು ಸದಾಕಾಲ ಅವನ ಬೆಂಗಾವಲಾಗಿ ಕಾಯುತ್ತಿದ್ದ. ಇನ್ನು ಯಾವ ರಕ್ಷಣೆಯೂ ಇಲ್ಲದೆ ಸದಾಕಾಲವೂ ರಣರಂಗದ ಜೀವಾಳವಾಗಿ ಯುದ್ಧ ಮಾಡು ತ್ತಿದ್ದವನು ಭೀಮ. ಅವನನ್ನು ಕೊಲ್ಲುವದಿರಲಿ, ಅವನಿಂದ ತಾವು ಪ್ರಾಣವನ್ನು ಉಳಿಸಿಕೊಳ್ಳಲಿಕ್ಕೇ ಕೌರವ ಪಕ್ಷದ ವೀರರು ಪರಿಶ್ರಮಪಡಬೇಕಾಗುತ್ತಿತ್ತು.

ಕೌರವ ಪಕ್ಷದ ಮೊದಲಿನ ಇಬ್ಬರು ಸೇನಾಪತಿಗಳಾದ ಭೀಷ್ಮ ಮತ್ತು ದ್ರೋಣರು ಈ ಮೇಲಿನ ರೀತಿ ಪಾಂಡವರ ಪೈಕಿ ಯಾರ ಸಾವನ್ನೂ ಬಯಸಿದ್ದಿ ರಲು ಸಾಧ್ಯವಿಲ್ಲ. ಆದರೂ ದ್ರೋಣನ ಪ್ರಾಣ ಭೀಮನ ಕೈಯಲ್ಲಿ ಸಿಕ್ಕಿಕೊಂಡು ಬಿಡುಗಡೆ ಹೊಂದಿತ್ತು. ನಿಜವಾಗಿಯೂ ಪಾಂಡವರ ಸೋಲನ್ನು, ಅರ್ಥಾತ್ ದುರ್ಯೋಧನನ ವಿಜಯವನ್ನು—ಅರ್ಥಾತ್ ಐವರು ಪಾಂಡವರ ಪೈಕಿ ಒಬ್ಬನ ಸಾವನ್ನು—ಬಯಸಿ ಯುದ್ಧಕ್ಕೆ ಇಳಿದ ಕೌರವ ಪಕ್ಷದ ಮೊದಲ ಸೇನಾಪತಿ ಯೆಂದರೆ ಕರ್ಣ. ಅವನು ಭೀಮಾರ್ಜುನರ ಪೈಕಿ ಯಾರನ್ನು ಸುಲಭವಾಗಿ ಕೊಲ್ಲಲು ಸಾಧ್ಯವಿತ್ತು? ಭೀಮನ ಕೈಯಲ್ಲಿ ಸಿಕ್ಕಿ ಇಪ್ಪತ್ತೊಂದು ಬಾರಿ ಈ ಹಿಂದೆ ಸೋತಿದ್ದಾನೆ. ಹಾಗಾಗಿ ಅವನು ನಿಷ್ಠೆಯಿಂದ ಸಾಧಿಸಲು ಸಾಧ್ಯವಿದ್ದುದು ಅರ್ಜುನನ ವಧೆಯನ್ನು ಮಾತ್ರ. ಅವನು ಕಂಡುಕೊಂಡ ಪ್ರಕಾರ ಅರ್ಜುನನನ್ನು ಕೊಲ್ಲಲು ತನಗಿದ್ದ ಒಂದೇ ಆತಂಕವೆಂದರೆ ತನಗೆ ಸರಿಯಾದ ಸಾರಥಿ ಇಲ್ಲದಿರು

ವದು. ಯಾವ ಸಾರಥಿಯೇ ಆದರೂ ಕೃಷ್ಣನಿಗೆ ಸಮಾನನಾಗಿ ಬರುವದಿಲ್ಲವೆಂದು ಅವನಿಗೆ ತಿಳಿದಿತ್ತು. ಆದರೆ ರಥಿಕರ ಪೈಕಿ ಅರ್ಜುನನು ತನಗೆ ಸಾಟಿಯಲ್ಲವೆಂದು ಬಗೆದ ಅವನು, ಸಾರಥಿಗಳ ಪೈಕಿ ತನ್ನವನು ಅರ್ಜುನನ ಸಾರಥಿಗಿಂತ ನಿಕೃಷ್ಟ ನಾದರೂ ಸರಿದೂಗುತ್ತದೆಂದು ನಿರೀಕ್ಷಿಸಿದುದು ಸಹಜವಾಗಿತ್ತು. ಇದರಲ್ಲಿ ಇನ್ನೊಂದು ಅಂಶವೂ ತಿಳಿಯುತ್ತದೆ. ಸಾರಥ್ಯದಲ್ಲಿ ಕೃಷ್ಣ ಮತ್ತು ಶಲ್ಯರಿಗೆ ಎಷ್ಟು ವ್ಯತ್ಯಾಸವಿತ್ತೋ, ಬಿಲ್ಗಾರತನದಲ್ಲಿ ಕರ್ಣ ಮತ್ತು ಅರ್ಜುನರಿಗೆ ಅಷ್ಟು ವ್ಯತ್ಯಾಸವಿತ್ತು ಎಂದು ಹೇಳಬಹುದು.

ರಮೆ:– ಆಗಲಿ. ಶಲ್ಯನು ಕರ್ಣನ ಸಾರಥ್ಯವನ್ನು ಒಪ್ಪಿದನೇನು ?

ಮುರಳಿ: – ಕರ್ಣನ ಹೇಳಿಕೆಯಲ್ಲಿ ಅರ್ಥವಿರುವದನ್ನು ಗಮನಿಸಿದ ದುರ್ಯೋಧನನು ಆ ತಕ್ಷಣವೇ ಶಲ್ಯನ ಶಿಬಿರಕ್ಕೆ ಬಂದು ತಮ್ಮ ಕೋರಿಕೆಯನ್ನು ನಮ್ರತೆಯಿಂದ ಪ್ರಸ್ತಾಪಿಸಿದನು. ಆದರೆ ಶಲ್ಯನಿಗೆ ಮಾತ್ರ ಈ ಪ್ರಸ್ತಾಪವು ವಿಷಪ್ರಾಯವಾಗಿದ್ದಿತು. ಒಬ್ಬ ಸೂತಪುತ್ರನಿಗೆ ಕ್ಷತ್ರಿಯನಾದ ತಾನು ಎಂದೆಂದಿಗೂ ಸಾರಥಿಯಾಗಲು ಸಾಧ್ಯವಿಲ್ಲ ಎಂದು ಸ್ಪಷ್ಟವಾಗಿ ಹೇಳಿಬಿಟ್ಟನು. ಆದರೆ ದುರ್ಯೋಧನನ ನಮ್ರತೆ ಮತ್ತು ನಿರ್ಬಂಧಗಳಿಗೆ ಬಂಧಿತನಾಗಿ ಅವನು ಕೊನೆ ಯಲ್ಲಿ ಈ ಸೂಚನೆಗೆ ಒಪ್ಪಿಗೆ ಕೊಡಬೇಕಾಯಿತು.

ಕುರುಕ್ಷೇತ್ರದ ಹದಿನೇಳನೆಯ ದಿನ ಸೂರ್ಯೋದಯವಾಯಿತು. ಆ ದಿನ ಕರ್ಣನ ಇಡಿಯ ಜೀವನದಲ್ಲಿಯೇ ಅತ್ಯಂತ ಮಹತ್ವಪೂರ್ಣವಾದ ದಿನವಾಗಿದ್ದಿತು. ತನ್ನ ಸರ್ವಸ್ವವೂ ಯಾರಾಗಿದ್ದನೋ ಆ ದುರ್ಯೋಧನನು ತನಗೆ ಮಾಡಿದ ಉಪ ಕಾರದ ಋಣವನ್ನು ತೀರಿಸಲು ಅವನು ಈ ದಿನ ಸಂಕಲ್ಪ ಮಾಡಿದ್ದನು. ತನ್ನ ಜೀವನದ ಗುರಿ ತನ್ನ ಒಡೆಯನ ಒಳಿತು. ಆ ಗುರಿ ಸಾಧನೆಗಾಗಿ ಈ ಯುದ್ಧ. ಯುದ್ಧದಲ್ಲಿ ಈ ದಿನ ತೀರ್ಪಿನ ದಿನ. ಶಲ್ಯ ಸಾರಥಿಯಾಗಿ ಸಿಕ್ಕಿ ಹತ್ತು ಕೈಗಳು ಹೆಚ್ಚಿದಂತಾದ ಕೆಚ್ಚಿನಲ್ಲಿ ಕೌರವ ಸೇನಾನಾಯಕನಾದ ಕರ್ಣನು ಯುದ್ಧಕ್ಕೆ ಹೊರಟನು. ಹಾಗೆ ಹೋಗುವಾಗ ವೀರೋಚಿತವಾಗಿ ಅವನು ಅರ್ಜುನನನ್ನು ತನಗೆ ತೋರಿಸಿದವನಿಗೆ ತಾನು ಬಹುಮಾನ ಕೊಡುವದಾಗಿ ಘೋಷಿಸಿದನು. ತಾಯಿಯ ಗರ್ಭದಲ್ಲಿರುವಾಗಿನಿಂದಲೇ ಕರ್ಣನ ಬೆನ್ನಿಗಂಟಿ ಬಂದ ದುರದೃಷ್ಟ ಅವನ ಕೊನೆ ಸಮೀಪಿಸುತ್ತಿದ್ದ ಇಲ್ಲಿಗೂ ಅಂಟಿ ಬಂದಿತ್ತು. ಅದು ಈಗ ಅವನ ಸಾರಥಿಯ ರೂಪದಲ್ಲಿಯೇ ಕಾಣಿಸಿಕೊಂಡಿತು. ಕರ್ಣನ ಮಾತುಗಳಿಂದ ಒಮ್ಮೆಗೇ ಕೋಪಾಕ್ರಾಂತನಾದ ಶಲ್ಯನು ಅವನು ಅರ್ಜುನನನ್ನು ಅಷ್ಟು ಕಡೆಗಣಿಸುವದು ಅವಿವೇಕವೆಂದೂ ಅವನು ಅವನ ಜಾತಿಗೆ ತಕ್ಕ ಮಾತ ನಾಡಿದಂತಾಯಿತೆಂದೂ ಅಂತಹ ಅಧಮನಿಗೆ ಸಾರಥಿಯಾದುದು ತನ್ನ ಮಹಾಪ ರಾಧವಾಯಿತೆಂದೂ ಭಂಗಿಸಿದನು.

ರಮೆ:– ಒಂದು ನಿಮ್ಮಲ್ಲಿ ಪ್ರಾರ್ಥನೆ. ನಾನು ಕರ್ಣನ ಕತೆಯನ್ನು ವಿವರವಾಗಿ ಕೇಳಲಾರೆ. ಕ್ಷಮಿಸಿ. ಹುಟ್ಟಿದ ಕ್ಷಣದಲ್ಲಿಯೇ ತಾಯಿಯಿಂದ ತಿರಸ್ಕರಿಸಲ್ಪಟ್ಟು, ಕುಲಹೀನರ ಮನೆಯಲ್ಲಿ ಬೆಳೆಯಬೇಕಾಗಿ ಬಂದು, ಕ್ಷತ್ರಿಯರನ್ನು ಮೀರಿಸುವ ಯುದ್ಧ ಸಾಮರ್ಥ್ಯವನ್ನು ತೋರಿದಾಗ ಕುಲಹೀನನೆಂದು ತುಂಬಿದ ಸಭೆಯಲ್ಲಿ ಹೀಯಾಳಿಸಲ್ಪಟ್ಟು, ಅಂತಹ ಆತ್ಮಹತ್ಯಾ ಪ್ರಚೋದಕವಾದ ಸನ್ನಿವೇಶದಲ್ಲಿ ತನ್ನನ್ನು ಅಂಗರಾಜ್ಯಾಧಿಪತಿಯನ್ನಾಗಿ ಮಾಡಿ ತನ್ನ ಹೃದಯದಲ್ಲಿಯೇ ತನಗೆ ಸ್ಥಾನವನ್ನು ಕೊಟ್ಟು, ತನ್ನನ್ನು ಲೋಕವು ಗೌರವಿಸುವಂತೆ ಮಾಡಿದ ದುರ್ಯೋಧನನಿಗಾಗಿಯೇ ತನ್ನ ಜೀವನ ಮುಡಿಪು ಎಂದೂ, ಆ ದುರ್ಯೋಧನನ ಆಜನ್ಮಶತ್ರುಗಳಾದ ಪಾಂಡವರನ್ನು ಕೊಂದು ಆ ಮೂಲಕ ತಾನು ತನ್ನ ಗೆಳೆಯನ ಋಣವನ್ನು ತೀರಿಸುವದಾಗಿಯೂ ಹಾತೊರೆಯುತ್ತಿದ್ದ ಅವನಿಗೆ, ಇನ್ನೇನು, ಅಂತಹ ಪವಿತ್ರ ಕರ್ತವ್ಯವನ್ನು ಮಾಡುವ ಯುದ್ಧದ ಸುದಿನಗಳು ಸಮೀಪಿಸುತ್ತಿವೆ ಎಂದು ಮನಸ್ಸು ನಲಿಯುತ್ತಿದ್ದಾಗ ಪಾಂಡವರು ತನ್ನ ಬೆನ್ನಲ್ಲಿ ಬಿದ್ದ ತಮ್ಮಂದಿರು ಎಂದು ಕೃಷ್ಣನಿಂದ ಹೇಳಲ್ಪಟ್ಟು, ಕುಂತಿಯೇ ತನ್ನನ್ನು ಹೆತ್ತ ತಾಯಿ ಎಂದು ಈ ಘಳಿಗೆಯಲ್ಲಿ ಗೊತ್ತಾದಾಗ ಆಕೆಯೂ ಬಂದು ತೊಟ್ಟ ಬಾಣವನ್ನು ತೊಡಬೇಡ ಎಂದು ತನ್ನಿಂದ ಮಾತು ತೆಗೆದುಕೊಂಡು ಪಾಂಡವರ ತಲೆಗಾಯಲು ಪ್ರಯತ್ನಿಸಿದಾಗ ತನ್ನ ಜೀವನದ ಗುರಿಯೇ ನಾಶವಾದಂತಾಗಿ ತನ್ನ ಬದುಕು ಕೇವಲ ನಿರರ್ಥಕವೂ, ಋಣಭಾರದಿಂದ ಅಪವಿತ್ರವೂ ಆಯಿತೆಂದು ತಾನು ವ್ಯಥೆಪಟ್ಟು, ತನ್ನ ಒಡೆಯನಿಗಾಗಿ ಅವನ ಶತ್ರುವನ್ನು ಕೊಲ್ಲಲಾಗದಿದ್ದರೂ ತನ್ನ ತಲೆಯನ್ನಾದರೂ ಶತ್ರುವಿಗೆ ಒಪ್ಪಿಸಿ ಅಷ್ಟಾದರೂ ಋಣಭಾರವನ್ನು ಕಡಿಮೆ ಮಾಡಿಕೊಳ್ಳಲು ತಾನು ಕೊನೆಯ ಆಸೆಯಾಗಿ ಬಯಸಿದಾಗ ಅದನ್ನೂ ವೀರೋಚಿತವಾಗಿ ಮಾಡಲು ಬಿಡದೆ ಯಾವನೋ ಸಾಮಾನ್ಯ ಯೋಧ ಸಾಯುವಂತೆ ತಾನು ಸಾಯಬೇಕೆಂದು ವಿಧಿ ಒತ್ತಾಯಿಸುತ್ತಿರುವಾಗ ಆ ಕರ್ಣನ ಸ್ಥಾನದಲ್ಲಿ ನಾವು ನಿಂತು ನೋಡಿದರೆ.... ........ದಯವಿಟ್ಟು ಕ್ಷಮಿಸಿ. ನನ್ನ ಮನಸ್ಸು ದುರ್ಬಲವಾದುದು. ವಿಧಿಯನ್ನು ಎದುರಿಸಲಾರೆ. ದಾರಿತಪ್ಪಿಸಿ ಓಡುವದೊಂದೇ ಮಾರ್ಗ. ವಿವರಿಸದೆ ಮುಂದಕ್ಕೆ ಹೋಗಿ.

ಮುರಳಿ:– ನಿಜ. ನನಗಾದರೂ ಮಹಾಭಾರತದ ಈ ಭಾಗ ಬಹಳ ಸಂಕೋಚವನ್ನುಂಟುಮಾಡುತ್ತದೆ. ಹುಟ್ಟಿನಲ್ಲಿ, ಪೌರುಷದಲ್ಲಿ, ಗುಣದಲ್ಲಿ ಕರ್ಣನ ಕತೆಯು ನಮ್ಮ ಕಲ್ಪನೆಯನ್ನು ನಭಸ್ಥಳಕ್ಕೆ–ಮೇಲೆ, ಮೇಲೆ ಅಕ್ಷೇತ್ರಕ್ಕೆ ಒಯ್ಯುವಾಗ, ಅವನ ಜೀವನದಲ್ಲಿ ಒದಗಿದ ಘಟನೆಗಳು ನಮ್ಮ ಕಲ್ಪನೆಯನ್ನು ಪಾತಾಳಕ್ಕೆ–ಕೆಳಗೆ, ಕೆಳಗೆ ಅಷ್ಟೂ ಆಳಕ್ಕೆ ಎಳೆಯುವದರಿಂದ ಈ ಒಂದು ವಿರುದ್ಧ ದಿಕ್ಕುಗಳ ತೀವ್ರ ಸೆಳೆತಕ್ಕೆ ಸಿಕ್ಕುವ ನಮ್ಮ ಮನಸ್ಸು

ಅವರ್ಣನೀಯವಾದ ನೋವಿಗೆ ಸಿಕ್ಕುವದು ಸಹಜ. ನೀನಂದಂತೆಯೇ ಆಗಲಿ. ವಿವರಿಸದೆ ಮುಂದುವರಿಯುತ್ತೇನೆ, ಕೇಳು. ಶಲ್ಯನ ಈ ಮಾತುಗಳನ್ನು ಕೇಳಿದ ಕರ್ಣನು ಆಶ್ಚರ್ಯಚಕಿತನಾಗಿ "ಶಿವ, ಶಿವಾ! ನೀನು ಇಷ್ಟೊಟ ಅರ್ಜುನ ಪಕ್ಷಪಾತಿಯೆ? ನಿನ್ನಂತಹವರನ್ನು ನಂಬಿದ ದುರ್ಯೋಧನನು ನಿಜ ವಾಗಿಯೂ ಪಾಂಡವರನ್ನು ಗೆಲ್ಲಲು ಸಾಧ್ಯವೆ? ನಿನಗೆ ನನ್ನಲ್ಲಿ ವೈರತ್ವ ಕಾಣಿಸಿಕೊಂಡಿತೇ ಹೊರತು ಅರ್ಜುನನಲ್ಲಿ ಕಾಣಿಸಿಕೊಳ್ಳಲಿಲ್ಲ, ಅಲ್ಲವೆ? ಶತ್ರುವನ್ನು ಕೊಂಡಾಡಿ ಸ್ವಾಮಿಯ ಧೈರ್ಯವನ್ನು ಹೀಗೆ ಶಂಕೆಗೀಡುಮಾಡಿ ಶತ್ರುಗಳಿಗೆ ಜಯವನ್ನು ಕೋರುವ ಐವರಲ್ಲಿ ಭೀಷ್ಮ, ದ್ರೋಣರು ಸತ್ತರು. ಇನ್ನು ಮೂವರು ಉಳಿದಿದ್ದೀರಿ" ಎಂದು ಮರುನುಡಿಯುತ್ತಿದ್ದಾಗ ಅಲ್ಲಿಗೆ ಶಲ್ಯನ ಕಡೆಯವರೆಲ್ಲ ಬಂದು ತುಂಬಿದರು. ಪಕ್ಷದಲ್ಲಿ ಒಳಜಗಳ ಆರಂಭ ವಾದುದನ್ನು ನೋಡಿ ಗಾಬರಿಗೊಂಡ ದುರ್ಯೋಧನನು ಅಲ್ಲಿಗೆ ಬಂದು ಶಲ್ಯ ನಲ್ಲಿ ಕ್ಷಮಾಯಾಚನೆಮಾಡಿ ಅವನನ್ನು ಸಮಾಧಾನಪಡಿಸಿದನು. ಒದೆಯಲ್ಪಟ್ಟ ಅಭಿಮಾನವನ್ನು, ಒಡೆಯಲ್ಪಟ್ಟ ಉತ್ಸಾಹವನ್ನು ಹೇಗೋ ಶೇಖರಿಸಿಕೊಂಡ ಕರ್ಣನು ರಣರಂಗಕ್ಕೆ ಧಾವಿಸಿದನು. ಈ ಕಡೆಯಿಂದ ಭೀಮನೂ ವೇಗವಾಗಿ ಧಾವಿಸಿ ಬಂದನು. ಅವನನ್ನು ತಡೆಯಲಿಕ್ಕೆಂದು ಕೌರವರು ಮೂವತ್ತು ಸಾವಿರ ಆನೆಗಳನ್ನು ಮುಂದೆ ನೂಕಿದರು.

ರಮೆ:– ಏತಕ್ಕೆಂದು?

ಮುರಳಿ:– ಭೀಮನನ್ನು ತಡೆಯಲಿಕ್ಕೆಂದು.

ರಮೆ:– ಭೀಮನ ವೇಗವನ್ನು ತಡೆಯಲಿಕ್ಕೆಂದು ಎಂಬು ಹೇಳುವದು ಹೆಚ್ಚು ಉಚಿತ ಎಂದು ಕಾಣುತ್ತದೆ.

ಮುರಳಿ:– ಕಂಡುಕೊಂಡೆ.

ರಮೆ:– ಈ ಭೀಮನನ್ನು ಮನಸ್ಸಿನಲ್ಲಿಟ್ಟುಕೊಂಡೇ ಬ್ರಹ್ಮನು ಅಷ್ಟೊಂದು ಆನೆಗಳನ್ನು ಸೃಷ್ಟಿಸಿದನೋ ಎನ್ನುವಂತೆ ಕಾಣಿಸುತ್ತದೆ. ಏನನ್ನುತ್ತೀರಿ?

ಮುರಳಿ:– ಇರಬಹುದು. ಸುಮ್ಮನೆ ಕೇಳು. ಭೀಮನ ಸಿಂಹನಾದಕ್ಕೆ, ಗದಾಹತಿಗೆ ಆನೆಗಳು ಉರುಳುರುಳಿ ಬಿದ್ದವು. ರಾವುತರ ಬಾಣಗಳನ್ನು ಎಳ್ಳಷ್ಟೂ ಲೆಕ್ಕಿಸದೆ ಭೀಮನು ಆನೆಗಳನ್ನು ಧ್ವಂಸ ಮಾಡುತ್ತಿರುವದನ್ನು ಕಂಡು, ಅವನನ್ನು ಎದುರಿಸುವವರೇ ಇಲ್ಲದಂತಾದರೆಂದು ತನ್ನ ಪಕ್ಷದ ಇತರ ವೀರರನ್ನು ಹಳಿಯುತ್ತಾ ಅಶ್ವತ್ಥಾಮನು ಮುಂದೆ ಬಂದನು. ಭೀಮನು ಆನೆಗಳನ್ನು ಕೊಂದು ಬಳಲಿದ್ದಾನೆಂಬುದಕ್ಕಾಗಿ ಪಾಂಚಾಲರು ಅವನ ಸ್ಥಾನದಲ್ಲಿ ನಿಂತರು. ಅಶ್ವತ್ಥಾಮನನ್ನು ಸರಿಯುವಂತೆ ಪ್ರಾರ್ಥಿಸಿ ಕರ್ಣನು ತಾನೇ ಪಾಂಚಾಲರಿಗೆದು

ರಾಗಿ ನಿಂತನು. ಅವನು ಪಾಂಚಾಲ ಸೈನ್ಯವನ್ನು ಧೂಳೀಪಟ ಮಾಡುತ್ತಿದ್ದಾಗ, ಸಾತ್ಯಕಿ, ನಕುಲ, ಸಹದೇವ, ಧೃಷ್ಟದ್ಯುಮ್ನ ಮೊದಲಾದವರು ಅವನನ್ನು ಮುತ್ತಿದರು. ಕರ್ಣನ ಸ್ಥಳದಲ್ಲಿ ಅವನ ಮಕ್ಕಳಾದ ವೃಷಸೇನ, ಸುಷೇಣರು ನಿಂತು ಶತ್ರುಗಳನ್ನು ಘಾಸಿ ಮಾಡುತ್ತಿರುವದನ್ನು ನೋಡಿದ ಭೀಮನು ಅಲ್ಲಿಗೆ ಧಾವಿಸಿ ಬಂದನು. ಅವರಿಬ್ಬರೂ ಇನ್ನೂ ಬಾಲಕರಾದುದರಿಂದ ಅವರು ಹಿಂತಿರುಗ ಬೇಕೆಂದು ಭೀಮನು ಅವರಿಗೆ ತಿಳಿಸಿದಾಗ ಅವರು ಅದಕ್ಕೆ ಪ್ರತ್ಯುತ್ತರವಾಗಿ ಭೀಮ ನನ್ನು ಬಲವಾಗಿ ಹೊಡೆದರು. ಭೀಮನು ಬೇರೆ ಮಾರ್ಗವಿಲ್ಲದೆ ಅವರಿಬ್ಬರ ಪೈಕಿ ಒಬ್ಬನನ್ನು ಕೊಂದನು. ಇದರಿಂದ ದುಃಖಗೊಂಡು ಭೀಷಣನಾದ ಕರ್ಣನು ಭೀಮನನ್ನು ಬಲವಾಗಿ ಸಂಧಿಸಿದನು. ಸೇನಾಧಿಪತಿಯೊಬ್ಬನನ್ನೇ ಬಳಲಲು ಬಿಡು ತ್ತಿರುವ ತನ್ನ ಪಕ್ಷದ ಇತರ ಮಹಾರಥರನ್ನು ದುರ್ಯೋಧನನು ಮೂದಲಿಸಲು ದುಶ್ಶಾಸನನು ಕರ್ಣನ ಸ್ಥಾನದಲ್ಲಿ ನಿಂತು ಭೀಮನನ್ನೆದುರಿಸಿ ತನ್ನ ರಥ, ಸಾರಥಿ ಗಳೆಲ್ಲವನ್ನೂ ಕಳೆದುಕೊಂಡನು. ಅವನ ಬದಲಿಗೆ ಪುನಃ ಕರ್ಣ ಪುತ್ರನು ಬಂದು ನಿಂತನು. ಹೀಗೆ ಆಗಾಗ ಬದಲಾಗುತ್ತಿದ್ದ ಅನೇಕ ವೀರರೊಂದಿಗೆ ಈ ಕಡೆ ಯಿಂದ ಭೀಮನೊಬ್ಬನೇ ನಿಂತು ಯುದ್ಧ ಮಾಡುತ್ತಿದ್ದುದರಿಂದ ಭೀಮನ ಸಹಾಯಕ್ಕೆಂದು ಯುಧಿಷ್ಠಿರನೇ ಸ್ವತಃ ಬಂದು ನಿಂತನು.

ರಮೆ:– ನಿಮ್ಮ ಅರ್ಜುನ ಏನು ಮಾಡುತ್ತಿದ್ದ ? .... ಓಹೋ ಸಂಶಪ್ತಕರು ಎಂಬ ಅನಾಮಧೇಯ ವೀರರೊಂದಿಗೆ ಈ ಹಿಂದಿನ ದಿನಗಳಂತೆಯೇ ರಣರಂಗದ ಯಾವದೋ ಮೂಲೆಯಲ್ಲಿ ಯುದ್ಧ ಮಾಡುತ್ತಾ ಕುಳಿತಿದ್ದನೇನೋ ! ಅಲ್ಲ ?

ಮುರಳಿ:– ಕುಳಿತಿದ್ದನಂತೆ ! ಮಲಗಿದ್ದ ಎಂದುಬಿಡು. ಹರಟೆ ಬಿಟ್ಟು ಕೇಳು. ಹೀಗೆ ಯುಧಿಷ್ಠಿರನು ತಾನೇ ........

ರಮೆ:– ........ಅಲ್ಲ ? ಒಂದು ಮಾತು. ಭೀಮನ ಕತೆಯನ್ನೇ ನೀವು ಹೇಳುತ್ತಿರುವದಾದರೂ ಮಹಾಭಾರತ ಕತೆಯನ್ನೂ ಅದರ ಪ್ರಮುಖ ಘಟನೆ ಗಳೊಂದಿಗೆ ಅನುಕ್ರಮವಾಗಿ ಹೇಳುತ್ತಿದ್ದೀರಿ ತಾನೆ ?

ಮುರಳಿ:– ಈ ಕುರಿತು ಹಿಂದೆಯೇ ನೀನು ಕೇಳಿಯೂ ಆಗಿದೆ, ನಾನು ಉತ್ತರ ಕೊಟ್ಟೂ ಆಗಿದೆ.

ರಮೆ:– ಅದೇ. ನಿಮ್ಮ ನೆನಪು ಪ್ರಸಿದ್ಧವಾದುದು ತಾನೆ ! ಹಾಗಾಗಿ ಕೇಳಿದೆ, ಅಷ್ಟೆ. ಹಿಂದೆ ಉತ್ತರಕೊಟ್ಟದ್ದೀರಿ ಎಂಬದು ನನಗೂ ಜ್ಞಾಪಕವಿದೆ. ನಿಮ್ಮ ನೆನಪನ್ನು ಕೆದಕಿ ನೋಡಿದೆ, ಅಷ್ಟೆ. ಹಾಗಾದರೆ ಕತೆಯನ್ನು ಅನುಕ್ರಮ ವಾಗಿಯೇ ಹೇಳುತ್ತಿದ್ದೀರಿ ?

ಮುರಳಿ:– ಹೌದು, ಹೇಳುತ್ತಿದ್ದೇನೆ. ಪುನಃ ಏಕೆ ?

ರಮೆ:– ಏಕೂ ಇಲ್ಲ. ಅರ್ಜುನನು ಕುರುಕ್ಷೇತ್ರದಲ್ಲಿ ಮಾಡಿದ ಯುದ್ಧದ ಪ್ರಮುಖ ವಿವರಗಳನ್ನು ಬಿಟ್ಟಿಲ್ಲವಲ್ಲವೆ, ಎಂದು ಕೇಳಿದೆ.

ಮುರಳಿ:– ಹೌದು. ಈಗೇಕೆ ಈ ಸಂಶಯ ಬಂತು ?

ರಮೆ:– ಅಲ್ಲ, ಕೇಳಿದೆ ಅಷ್ಟೆ. ಮೂರು ಲೋಕದ ಗಂಡ ಎಂದರೆ, ಆ ಲೋಕಗಳಲ್ಲಿರುವ ಹೆಂಗಸರಿಗೆಲ್ಲ ಗಂಡನಾಗಬೇಕೆಂದು ಬಯಸಿದ್ದವನು ಎಂದೇನಾದರೂ ಅರ್ಥವಾಗುತ್ತದೋ ಎಂದು ಮನಸ್ಸಿಗೆ ಬಂತು; ಅದಕ್ಕೆ ಕೇಳಿದೆ. ಹೇಳಿ, ಹೇಳಿ. ಮುಂದಕ್ಕೆ ಹೇಳಿ.

ಮುರಳಿ:– ಅಬದ್ಧ ಮಾತನಾಡಬೇಡ. ಸುಮ್ಮನೆ ಕೇಳು ರಮಾ.

ರಮೆ:– ಹೇಳಿ ಅಂದೆನಲ್ಲಾ. ಹೇಳಿ, ಹೇಳಿ.

ಮುರಳಿ:– ನಿನಗೆ, ಈಗೇಕೆ! ಇರಲಿ, ಕೇಳು. ಯುಧಿಷ್ಠಿರನಿಗೆದುರಾಗಿ ಕರ್ಣನೇ ಯುದ್ಧಕ್ಕೆ ನಿಂತನು. ಪಾಂಡವ ವೀರರೆಲ್ಲರೂ ಯುಧಿಷ್ಠಿರನ ಸಹಾಯಕ್ಕೆ ನಿಂತರು. ಆದರೆ ಕರ್ಣನು ಪ್ರಚಂಡವಾಗಿ ಯುದ್ಧ ಮಾಡಿ ಅವರೆಲ್ಲರನ್ನೂ ಸೋಲಿಸಿ ಯುಧಿಷ್ಠಿರನನ್ನು ಬಲವಾಗಿ ಹೊಡೆದನು. ಎದೆಯಲ್ಲಿ ಹೊಕ್ಕ ಬಾಣವು ಬೆನ್ನಿನಲ್ಲಿ ಕಾಣಿಸಿಕೊಳ್ಳಲು ಯುಧಿಷ್ಠಿರನು ಪ್ರಜ್ಞಾಶೂನ್ಯನಾಗಿ ಕೆಳಗೆ ಬಿದ್ದನು. ಪಾಂಡವ ಪಕ್ಷದಲ್ಲಿ ಹಾಹಾಕಾರವುಂಟಾಯಿತು. ದೂರದಲ್ಲಿ ಎಲ್ಲಿಯೋ ಯುದ್ಧ ಮಾಡುತ್ತಿದ್ದ ಭೀಮನ ಕಿವಿಗೂ ವಿಷಯವು ಮುಟ್ಟಿತು. ಅವನಿಗೆ ಒಮ್ಮೆಲೇ ಆಘಾತವಾದಂತಾಯಿತು. ಮೈ ಮರವೆ ಬಂದಂತಾದ ಅವನು ದುಃಖದಿಂದ “ಶಿವ, ಶಿವಾ. ಮಹಾರಾಜನು ನನ್ನ ಮುಂದೆಯೇ ಇಂತಹ ವಿಪತ್ತಿಗೀಡಾದನೆ ! ಇದನ್ನು ಕೇಳಿ ದ್ರೌಪದಿಯು ಅಪಹಾಸ್ಯ ಮಾಡಳೆ ! ಅರ್ಜುನನು ಕೋಪಗೊಳ್ಳನೆ ! ಅರಸನಿಗೆ ಹೀಗಾಗುವದಕ್ಕೆ ಮುಂಚೆಯೇ ನಾನು ಸಾಯಬಾರದಿತ್ತೆ !” ಎಂದು ಕಣ್ಣೀರು ಮಿಡಿದನು. ವೀರನ ಕಣ್ಣೀರು ಎಷ್ಟು ಸಮಯ ಇರುತ್ತದೆ? ಅವನಿಗೆ ರೋಷದಿಂದ ಮೈ ನಡುಗಲಾರಂಭಿಸಿತು. ಹುಬ್ಬುಗಳನ್ನು ಗಂಟಿಕ್ಕಿ ಭಯಂಕರ ಸ್ವರೂಪನಾಗನು. ಯುಧಿಷ್ಠಿರನ ಅಂಗರಕ್ಷಣೆಗೆಂದು ತನ್ನ ಪಕ್ಷದ ಸಮಸ್ತ ವೀರರನ್ನೂ ನಿಲ್ಲಿಸಿ ತಾನು ಕರ್ಣನನ್ನು ಹುಡುಕುತ್ತಾ ಮುಂದೆ ಸಾಗಿದನು.

ರೋಷದ ಮತ್ತಿನಲ್ಲಿ ಕರ್ಣನನ್ನು ಹುಡುಕಿಕೊಂಡು ಮೇಲೇರಿ ಬರುತ್ತಿದ್ದ ಭೀಮನನ್ನು ಕಂಡ ಶಲ್ಯನು ಅವನನ್ನು ಕರ್ಣನಿಗೆ ದೂರದಿಂದಲೇ ತೋರಿಸಿ ಅವನು ಈಗ ದುಸ್ಸಹನಾಗಿದ್ದಾನೆಂದೂ, ಅಭಿಮಾನಕ್ಕಾಗಿ ಕರ್ಣನು ಈಗ ಅವನನ್ನೆದುರಿಸಿ ಪ್ರಾಣವನ್ನು ಅವನಿಗೆ ಒಪ್ಪಿಸುವದು ಸರಿಯಲ್ಲವೆಂದೂ, ತಾವು ಈಗ ಅಲ್ಲಿಂದ ತಪ್ಪಿಸಿಕೊಂಡು ಪಲಾಯನ ಮಾಡುವದೇ ಸೂಕ್ತವೆಂದೂ ಸೂಚಿಸಿದನು. ಆದರೆ ಕರ್ಣನು ಶಲ್ಯನ ಮಾತುಗಳನ್ನು ತಿರಸ್ಕರಿಸಿ ವೀರಾಲಾಪಗಳನ್ನಾಡುತ್ತಾ

ತಾನು ಭೀಮನನ್ನು ಲೆಕ್ಕಿಸುವದಿಲ್ಲವೆಂದು ಹೇಳುತ್ತಿರುವಷ್ಟರಲ್ಲಿಯೇ ಮೃತ್ಯು ಸದೃಶವಾದ ಭೀಮನ ರಥವು ಸಮೀಪಿಸಿಬಿಟ್ಟಿತು. ನೇರವಾಗಿ ನುಗ್ಗಿಬಂದ ಭೀಮನು ಕರ್ಣನನ್ನು ಮೂದಲಿಸಿ ತಾನು ಈಗ ಅವನನ್ನು ಕೊಲ್ಲುವದು ನಿಶ್ಚಯ ವೆಂದೂ ಅವನನ್ನು ರಕ್ಷಿಸಿಕೊಳ್ಳುವ ಸಮರ್ಥರು ಯಾರಾದರೂ ಇದ್ದರೆ ಅವನು ಅಂತಹವರ ಮರೆಹೊಗಬೇಕಾಗಿಯೂ ತಿಳಿಸಿ ಬಾಣಗಳ ಮಳೆಗರೆದನು. ಕರ್ಣನು ಯುಧಿಷ್ಠಿರನನ್ನು ನೋಯಿಸಿ ಭೀಮನನ್ನು ಎಷ್ಟು ಕೆರಳಿಸಿದ್ದನೆಂಬದನ್ನು ಭೀಮನ ಆ ಬಾಣ ಪ್ರಯೋಗದ ತೀವ್ರತೆ ತೋರಿಸುತ್ತಿತ್ತು. ಕರ್ಣನು ಭೀಮನ ಬಾಣ ಗಳನ್ನೆಲ್ಲ ತುಂಡುಮಾಡಲು ಭೀಮನು ತನ್ನ ಬಿಲ್ಲು ಬಾಣಗಳನ್ನು ಬಿಸಾಡಿ ಖಡ್ಗ ವನ್ನು ಹಿಡಿದು ಪರಾಕ್ರಮದಲ್ಲಿ ಆಂಜನೇಯನಂತೆ, ಅಗ್ನಿಯಂತೆ, ಗರುತ್ಮಂತನಂತೆ ಪ್ರಚಂಡ ಕೋಪದಿಂದ ಮುನ್ನುಗ್ಗಿದನು.

ರಮೆ:– ಅದೇನು, ಅವರು ಮೂವರು ಬಹಳ ದೊಡ್ಡ ವೀರರೆಂದೊ ?

ಮುರಳಿ:– ಭೂಮಿಯಲ್ಲಿ ನಿಂತು ಯುದ್ಧ ಮಾಡುವಾಗ ಆಂಜನೇಯ ಅಚಲ–ಹಿಮಾಲಯದಂತೆ. ಹಿಮ್ಮೆಟ್ಟುವದಂತೂ ಇಲ್ಲ; ಮುಂದಡಿಯಿಟ್ಟರೆ ಯಾವದೂ ಅವನನ್ನು ತಡೆಯುವಂತಿಲ್ಲ. ಅಗ್ನಿ ಪ್ರಸರಣಕ್ಕೆ ಹೆಸರಾದವನು. ನೋಡುನೋಡುತ್ತಿರುವಂತೆಯೇ ಎಂತೆಂತಹುದನ್ನೂ ಆವರಿಸಿ ಸುಟ್ಟು ಮುಂದು ವರಿಯುತ್ತಾ ಹೋಗುತ್ತದೆ. ಭೂಮಿಯಿಂದ ಗಗನಕ್ಕೆ ಹಾರುವದರಲ್ಲಿಯೂ ಅಗ್ನಿಯ ವೇಗ ಅಸಮಾನವಾದುದು. ಇನ್ನು ಗರುತ್ಮಂತ. ಮೇಲೆರಗುವಾಗಿನ ಅವನ ವೇಗ ಮತ್ತು ಗುರಿಗಳು ಪ್ರಸಿದ್ಧವಾಗಿವೆ. ಈ ಮೂರು ಗುಣಗಳೂ ಒಬ್ಬ ವೀರನಲ್ಲಿಯೇ ಕಂಡುಬಂದವೆಂದರೆ ಅದನ್ನು ಬೇರೆ ಹೇಗೆ ತಾನೆ ವರ್ಣಿಸಲು ಸಾಧ್ಯ !

ರಮೆ:– ತಿಳಿಯಿತು. ನಮಗಿಂತ ಕವಿ ಏಕೆ ದೊಡ್ಡವನು ಎಂಬದು ಚೆನ್ನಾಗಿ ಅರ್ಥವಾಯಿತು. ರಸಭಂಗ ಮಾಡಿದುದಕ್ಕೆ ಕ್ಷಮೆಯಿರಲಿ. ಮುಂದು ವರಿಸಿ.

ಮುರಳಿ:– ಹಿರಿದ ಖಡ್ಗವನ್ನು ಹಿಡಿದ ಭೀಮನು ಕರ್ಣನ ಮೇಲೇರಿ ಮುನ್ನುಗ್ಗಿದನು.

ರಮೆ:– ಕರ್ಣ ಬಾಣಗಳನ್ನು ಬಿಡುತ್ತಿರಲಿಲ್ಲವೆ ?

ಮುರಳಿ:– ಬಿಡುತ್ತಿದ್ದ. ಆದರೆ ಅದರ ಎದುರಾಗಿ ಹೋಗುತ್ತಿದ್ದವನು ಭೀಮ. ಮಾಡುವ ಯಾವದೇ ಕರ್ಮದಲ್ಲಿ ಮನಸ್ಸನ್ನು ಲಯಗೊಳಿಸ ಬಲ್ಲವನಿಗೆ ಲೋಕದ ಇತರ ಯಾವದೂ ಅಡ್ಡಿಯಾಗಲಾರದು ಎಂಬದಕ್ಕೆ ಭೀಮನ ಇಂತಹ ನಡತೆಗಳು ಸಾಕ್ಷಿ. ಕೇಳು. ಯುಧಿಷ್ಠಿರನನ್ನು ಹಳಿದ ಕರ್ಣನ

ನಾಲಿಗೆಯನ್ನು ತುಂಡುಮಾಡುತ್ತೇನೆನ್ನುತ್ತಾ ಭೀಮನು ಒಂದೇ ನೆಗೆತಕ್ಕೆ ಹಾರಿ ಕರ್ಣನ ಎದೆಗೆ ಒದೆದು...............

ರಮೆ:– ಅ ಹ ಹಾ...............

ಮುರಳಿ:– ಏಕಮ್ಮಾ ?

ರಮೆ:– ಮಾಯೆಯ ಆಟ ಎಷ್ಟು ನಿಷ್ಠುರವಾದುದು ! ತನ್ನ ಒಡ ಹುಟ್ಟಿದ ಅಣ್ಣನನ್ನೇ ವಿಧಿ ತಮ್ಮನಿಂದ ಒದೆಸಿತು. ತನ್ನ ಯಾವ ಅಣ್ಣ ಯುಧಿಷ್ಠಿರನಿಗಾಗಿ ತಾನು ಪ್ರಾಣದ ಹಂಗೂ ಇಲ್ಲದೆ, ಶತ್ರುವನ್ನು ಒದೆಯು ತ್ತಿದ್ದಾನೋ, ಹಾಗೆ ಒದೆಸಿಕೊಳ್ಳುತ್ತಿರುವ ಕರ್ಣನು ತನಗೂ ಯುಧಿಷ್ಠಿರನಿಗೂ –ಇಬ್ಬರಿಗೂ ಹಿರಿಯಣ್ಣ ಎಂಬ ಸತ್ಯವನ್ನು ಮರೆಮಾಡಿದ ವಿಧಿ............ಛೆ........ ಅಜ್ಞಾನ ಎಂದರೂ ಇದೇ ಇರಬೇಕು. ಜ್ಞಾನದ ಸತ್ಯ ಗೋಚರವಾಗದಿದ್ದಾಗ ಅಜ್ಞಾನದ ಕತ್ತಲಿನಲ್ಲಿ ನಾವೂ ಇದೇ ರೀತಿ, ಇರುವದನ್ನು ಇಲ್ಲವೆಂದು, ಇಲ್ಲ ದುದನ್ನು ಇದೆಯೆಂದು ತಿಳಿಯುವದೋ ಏನೊ ! ಭೀಮನ ದೃಷ್ಟಿಯಲ್ಲಿ ಕರ್ಣನು ಶತ್ರು. ಆದರೆ ಅವನು ನಿಜವಾಗಿ ಅಣ್ಣ. ಕರ್ಣನ ದೃಷ್ಟಿಯಲ್ಲಿ ಭೀಮನು ತಮ್ಮ – ಆದರೆ ಶತ್ರುವೆಂದು ಅವನನ್ನು ಪರಿಗಣಿಸಬೇಕಾದ ಸ್ಥಿತಿ........ನಿಜವಾಗಿ ಈ ಲೋಕದ ಬದುಕು ಸತ್ಯದ ಆಧಾರದಲ್ಲಿ ನಡೆಯುವಂತಹುದಲ್ಲ. ಇದರಿಂದ ಪಾಠ ಕಲಿತು ಸತ್ಯದ ಶೋಧನೆಯಲ್ಲಿ ತೊಡಗಬೇಕೇ ಹೊರತು ಇದೇ ಸರ್ವಾರ್ಥ ಎಂದು ನಂಬಿಕೊಳ್ಳುವದು ಕೆಸರಿನ ಮೇಲೆ ವೇಗವಾಗಿ ನಡೆಯಲು ಪ್ರಯತ್ನಿಸಿ ದಂತಾಗುವದೇ ನಿಜ........ಅಬ್ಬ, ಭೀಮನು ಕರ್ಣನ ಎದೆಗೆ ಒದ್ದ............... ಅನಂತರ ?

ಮುರಳಿ:– ಅವನ ಎದೆಗೆ ಒದೆದು ಅವನನ್ನು ಕೆಳಗೆ ಕೆಡವಿ ಭೀಮನು ಅವನ ಮುಂದಲೆಯನ್ನು ಹಿಡಿದು ಕತ್ತಿಯನ್ನು ಎತ್ತಿದಾಗ ಇಡಿಯ ಕೌರವ ಸೈನ್ಯವು ಬಾಯಿ ಬಾಯಿ ಬಿಡುತ್ತಾ ದುರ್ಯೋಧನನ ರಾಜ್ಯಶ್ರೀಯ ಮುಂದ ಲೆಯೇ ಭೀಮನ ಕೈಗೆ ಸಿಕ್ಕಿದಂತಾಯಿತೆನ್ನುತ್ತಾ ಉಸಿರು ಹಿಡಿದು ನಿಂತು ನೋಡುತ್ತಿತ್ತು.

ಅಷ್ಟರಲ್ಲಿ ಮಿಂಚಿನ ವೇಗದಲ್ಲಿ ಶಲ್ಯನು ರಥದಿಂದ ಹಾರಿ ಬಂದು ಭೀಮ ನನ್ನು ಕುರಿತು "ಭೀಮಾ, ನಿನ್ನ ಕಾರ್ಯವನ್ನು ಸಾಧಿಸಿದ್ದೀಯೆ. ಕರ್ಣನು ಅರ್ಜುನನಿಗೆ ಮೀಸಲು. ಇವನನ್ನು ಕೊಲ್ಲಬೇಡ" ಎನ್ನಲು ಭೀಮನು "ಮಾವಾ, ಈ ದುಷ್ಟನು ಇಂದು ನಮ್ಮ ಅಣ್ಣನನ್ನು ಹೀಯಾಳಿಸಿದ್ದಾನೆ. ಆದುದರಿಂದ ಇವನ ನಾಲಿಗೆಯನ್ನಾದರೂ ಕಿತ್ತುಬಿಡುತ್ತೇನೆ" ಎಂದು ಮುಂದುವರಿಯಲು ಶಲ್ಯನು ಪುನಃ ಅವನನ್ನು ತಡೆದು ಸಮಾಧಾನಿಸಿ ಹಿಂದೆ ಕಳುಹಿಸಿದನು.

ರಮೆ:– ಅಣ್ಣನ ಮೇಲೆ ಆತನಿಗಿದ್ದ ಭಕ್ತಿಗೆ ಹೋಲಿಸಿದಾಗ ಅವನ ಪ್ರಾಣ ಕೂಡ ತೃಣವಾದುದು ಎಂಬಷ್ಟು ಗುರುಭಕ್ತಿ. ಅಣ್ಣನ ಮನ ನೋಯುವಂತೆ ಯಾರಾದರೂ ಮಾತನಾಡಿದರೆ ಅವರು ಯಾರೇ ಆಗಿದ್ದರೂ ಅವರ ಪ್ರಾಣವನ್ನು ತೆಗೆಯುತ್ತೇನೆನ್ನುವಷ್ಟರ ಮಟ್ಟಿಗೆ, ಧರ್ಮದ ಕೀರ್ತಿ ಕಲಶವನ್ನು ಎತ್ತಿ ಹಿಡಿದ ಯುಧಿಷ್ಠಿರನಿಗೆ ಬೆಂಬಲ. ಕೌರವ ಸೈನ್ಯದ ಆಶಾಜ್ಯೋತಿಯಾಗಿದ್ದ ಕರ್ಣ ನಂತಹವನನ್ನೂ ಸರಾಗವಾಗಿ ನಿವಾರಿಸಿಬಿಡುವ ಮನೋಬಲ, ದೇಹದಾರ್ಢ್ಯ.... ನಿಮ್ಮ ಭೀಮನು ಮಹಾಭಾರತದ ನಾಯಕ ಎಂದು ಮನಃಪೂರ್ವಕವಾಗಿ ಒಪ್ಪಿ ಕೊಂಡೆ. ಕತೆ ಮುಂದುವರಿಸಿ.

ಮುರಳಿ:– ಘಟನೆಗಳನ್ನಷ್ಟೇ ಗಣನೆಗೆ ತಂದುಕೊಂಡು ನಿರ್ಧಾರ ಮಾಡ ಬೇಡ. ಘಟನೆಗಳು ಪ್ರತಿ ಬಾರಿಯೂ ಅಂತಸ್ಸತ್ವದ ಪ್ರತೀಕ ಎನ್ನಲು ಸಾಧ್ಯ ವಿಲ್ಲ. ಹಿಂದೆ ಒಮ್ಮೆ ಇದೇ ಭೀಮನು ಕರ್ಣನ ಕೈಯಿಂದ ಜೀವದಾನ ಪಡೆದಿ ರುವ ಘಟನೆಯೂ ಇದೆ. ಇಲ್ಲಿ ಭೀಮನ ಅಂತಸ್ಸತ್ವವನ್ನು ನೀನು ಅಳೆಯ ಬೇಕು. ಹದಿಮೂರು ವರ್ಷಗಳ ಕಾಲ ತಡೆಹಿಡಿದಿದ್ದ ರೋಷವನ್ನು ಈ ಹಿಂದಿನ ಹದಿನಾರು ದಿನಗಳ ಕಾಲ ಅವ್ಯಾಹತವಾಗಿ ಹರಿಯಬಿಟ್ಟು ರಕ್ತದ ಕಣಕಣ ದಲ್ಲಿಯೂ ರೋಷವನ್ನು ಆವಾಹಿಸಿಕೊಂಡುದರ ಫಲವಾಗಿ ಆಗಿರಬಹುದಾದ ಬಳಲಿಕೆಯೂ ಸೇರಿ ತನ್ನ ನಿಜವಾದ ವ್ಯಕ್ತಿತ್ವ ಮರೆಯಾಗಿ ಯಾವದೋ ಒಂದು ಪ್ರಚಂಡ ಯಂತ್ರದಂತಾಗಬೇಕಿತ್ತು ಭೀಮನ ವ್ಯಕ್ತ ರೂಪ. ಆದರೆ ಅವನು ತನ್ನ ಅಣ್ಣನಿಗೆ ನೋವಾಯಿತೆಂದು ಕೇಳಿದ ತಕ್ಷಣ, ಸರ್ವಭಕ್ಷಕವೆನಿಸುವಷ್ಟು ವಿಸ್ತಾರ ವಾಗಿ, ಪ್ರಬಲವಾಗಿ ಬೆಳೆದಿದ್ದ ತನ್ನ ರೋಷವನ್ನೂ ನಿಗ್ರಹಿಸಿಕೊಂಡು ತನ್ನ ಅಣ್ಣನಿಗಾಗಿ ಕಣ್ಣೀರು ಹಾಕಬಲ್ಲವನಾಗಿದ್ದ. ತನ್ನ ಆ ದುಃಖ, ಆ ದುಃಖದ ಪರಿಣಾಮವಾಗಿ ಬಂದ ಪ್ರತೀಕಾರದ ಛಲ–ಇವುಗಳನ್ನು ಇತರರು ನೋಡಲಿ ಎಂಬ ಮಾನವ ಸಹಜವಾದ ಬಯಕೆ ಇಲ್ಲದಷ್ಟು ಯೋಗ ಸಿದ್ಧಿ ಇದ್ದುದೂ ಭೀಮನ ವೈಶಿಷ್ಟ್ಯವೇ. ಕರ್ಣನಂತಹ ಅಸಮಾನ ವೀರನನ್ನು, ಅವನು ಎದುರಿಸಿದ ರೀತಿ ಯಂತೂ ಅವನ ದೈಹಿಕ, ಮಾನಸಿಕ, ನೈತಿಕ ಬಲಗಳಿಗೆ ಉತ್ತಮ ಉದಾಹರಣೆ. ಅಂತಹ ವೈಮರವೆ ಬಂದಿರಬಹುದಾದ ಸಂದರ್ಭದಲ್ಲಿ ಕೂಡ ಪುನಃ ಮಾವನ ಮಾತಿಗೆ ಬೆಲೆಕೊಡುವಷ್ಟು ಕಲ್ಪನಾತೀತವಾದ ಸಂಯಮ ಶಕ್ತಿ. ಭೀಮನ ಜೀವ ನದ ಕತೆ ಹೇಳುವದಕ್ಕೆ ಎಷ್ಟು ಅದ್ಭುತವಾಗಿರುತ್ತದೋ, ಅವನ ವ್ಯಕ್ತಿತ್ವವು ವಿಮರ್ಶೆಗೆ ಅದಕ್ಕಿಂತಲೂ ಸಾವಿರ ಪಾಲು ಹೆಚ್ಚು ಅದ್ಭುತವಾಗಿರುವಂತಹದು. ಸಮುದ್ರದ ಮೇಲ್ಮೈಯ ಸೊಗಸನ್ನು ದಿನಗಟ್ಟಲೆ ಆಸ್ವಾದಿಸಬಹುದಾದರೆ ಅದರ ತಳದಲ್ಲಿರುವ ಸಂಪತ್ತನ್ನು ವರ್ಷಗಟ್ಟಲೆ ಸಂಗ್ರಹಿಸಿದರೂ ಮುಗಿಯದಂತೆ ಭೀಮನ

ವ್ಯಕ್ತಿತ್ವ ಕೂಡ. ಮುಂದೆ ಕೇಳು. ಭೀಷ್ಮ, ದ್ರೋಣರು ಮಹಾವೀರರೆಂಬದ ರಲ್ಲಿ ಸಂಶಯವಿಲ್ಲದಿದ್ದರೂ ಅವರು ಪಾಂಡವ ಪಕ್ಷಪಾತಿಗಳೆಂಬ ಸಾರ್ವತ್ರಿಕ ಆಪಾದನೆಯನ್ನು ಹೇರಿದ್ದ ಕೌರವ ಪಾಳೆಯವು ಕರ್ಣನ ನಾಯಕತ್ವದಲ್ಲಿ ಖಂಡಿತವಾಗಿ ತಾನು ವಿಜಯಿಯಾಗುವದಾಗಿಯೂ ಪಾಂಡವರು ಖಂಡಿತವಾಗಿ ತನಗೆ ಶರಣಾಗಿ ಬರುವರೆಂದೂ ನಂಬಿದ್ದು ಈಗ ಕರ್ಣನು ಸರ್ವ ಸ್ವತಂತ್ರನಾದ ಸೇನಾಪತಿಯಾಗಿರುವಾಗಲೇ ಅವನು ಭೀಮನ ಕೈಯಲ್ಲಿ ಸಿಕ್ಕಿ ಸಾಮಾನ್ಯ ಯೋಧನಂತೆ ಹಣಿಯಲ್ಪಟ್ಟದನ್ನು ಕಂಡು ದಿಗ್ಭ್ರಾಂತವಾಯಿತು. ಇಡಿಯ ಕೌರವ ಸೈನ್ಯವೇ ಗರ ಬಡಿದಂತೆ ಸ್ವಲ್ಪ ಸಮಯ ಸ್ತಬ್ಧವಾಗಿ ಬಿಟ್ಟಿತು. ಅನಂತರ ಪ್ರತಿಯೊಬ್ಬರೂ ತಮ್ಮ ತಮ್ಮ ವೀರರುಗಳನ್ನು ಹಳಿಯಲು ಪ್ರಾರಂಭಿಸಿದರು. ಆ ವೇಳೆಗೆ ದುರ್ಯೋಧನನ ಕೆಲವು ತಮ್ಮಂದಿರು ಬಹಳ ದೊಡ್ಡದಾದ ಸೈನ್ಯವನ್ನು ಕಟ್ಟಿಕೊಂಡು ಬಂದು ಭೀಮನನ್ನು ಮುತ್ತಿದರು. ಪಕ್ಷಿಗಳು ಒಡ್ಡಿದ ಬಲೆಯಲ್ಲಿ ಮದದಾನೆ ಸಿಕ್ಕಿಬೀಳುವದು ಅಸಹಜವಾದಂತೆ ಭೀಮನು ಇವರ ಜಾಲದಲ್ಲಿ ಸಿಕ್ಕಿ ಬೀಳದೆ ಆ ಸೈನ್ಯವನ್ನೂ ದುರ್ಯೋಧನನ ಆ ಎಲ್ಲ ತಮ್ಮಂದಿರನ್ನೂ ನೆಲಕ್ಕೆ ಉರುಳಿಸಿದನು.

ಈ ಕಡೆ ಕರ್ಣನಿಗೆ ವಿಪರೀತ ಮುಖಭಂಗವಾದಂತಾಗಿ ತನ್ನನ್ನು ತಾನೇ ಹಳಿದುಕೊಂಡು ಪುನಃ ಯುದ್ಧೋನ್ಮುಖನಾಗಿ ಹೊರಟು ನೇರವಾಗಿ ಯುಧಿಷ್ಠಿರನತ್ತ ರಥವನ್ನು ಹರಿಯಬಿಟ್ಟನು.

ರಮೆ:– ಅದೇಕೆ ? ಅವನು ವೀರನಾಗಿದ್ದರೆ ಭೀಮನನ್ನೇ ಪುನಃ ಎದುರಿಸಬೇಕಾಗಿರಲಿಲ್ಲವೆ ? ತನ್ನನ್ನೂ ಭಂಗಿಸಿ ತನ್ನ ಒಡೆಯನ ತಮ್ಮಂದಿರನ್ನೂ ಕೊಂದು ಬೀಗುತ್ತಿದ್ದ ಭೀಮನನ್ನು ಸೇನಾನಾಯಕನಾದ ಅವನು ಎದುರಿಸದೆ ಈಗಾಗಲೇ ನೊಂದು ಇತರರ ರಕ್ಷಣೆಗೆ ಒಳಗಾಗಿದ್ದ ಯುಧಿಷ್ಠಿರನತ್ತ ಏಕೆ ತೆರಳಿದ ?

ಮುರಳಿ:– ಇದರಲ್ಲಿ ಎರಡು ವಿಷಯಗಳನ್ನು ಊಹಿಸಬಹುದು. ನಿಜವಾದ ವೀರನಾದವನು, ಹಾಗೂ ಆ ಕಾಲದ ವೀರತನಕ್ಕೆ ಅನುಗುಣವಾಗಿ ಭೀಮನಂತೆ ನಿರ್ಭಯವಾಗಿ ಧರ್ಮಯುದ್ಧವನ್ನು ಮಾಡಲು ಸಂಕಲ್ಪಿಸಿದವನು ಕರ್ಣನ ಸ್ಥಾನದಲ್ಲಿ ಇದ್ದಿದ್ದರೆ ನೀನು ಹೇಳಿದಂತೆಯೇ ಮಾಡಬೇಕಾಗಿತ್ತು. ಕರ್ಣನು ಸಾಕ್ಷಾತ್ ಸೂರ್ಯಪುತ್ರನಾಗಿ ಪಾಂಡವರ ತಾಯಿಯೇ ಆದ ಕುಂತಿಯ ಗರ್ಭದಲ್ಲಿ ಬಂದಿದ್ದು ಅವನ ರಕ್ತದಲ್ಲಿ ಕೂಡ ನಿರ್ಭೀತಿ, ನ್ಯಾಯ, ಋಜುತ್ವ, ನಿಷ್ಕಾಪಟ್ಯಗಳು ಪಾಂಡವರಿಗಿರುವಂತೆಯೇ ತುಂಬಿದ್ದರೂ, ಚಿಕ್ಕಂದಿನಿಂದಲೇ ಅವನು ಕೌರವರೊಂದಿಗೆ ಬೆಳೆದ ಕೆಟ್ಟ ಸಹವಾಸದಿಂದಾಗಿ ಅವನು ತನ್ನ ಸಾಮರ್ಥ್ಯದಲ್ಲಿಯೇ ಶಂಕೆಯನ್ನೂ, ಕುಟಿಲತೆಯನ್ನು ಅನುಸರಿಸುವ ಸ್ವಭಾವವನ್ನೂ ರೂಢಿಸಿಕೊಂಡಿದ್ದ. ಸಾಲದುದಕ್ಕೆ ಅವನು ಪಾಂಡವರಿಗೆ ದೊರಕಿರುವ ಕೃಷ್ಣನ ಒಲ

ವನ್ನೂ, ಪಾಂಡವರು ತನ್ನ ತಮ್ಮಂದಿರು ಎಂಬದನ್ನೂ ತಿಳಿದುಕೊಂಡು ಬಹು ಪಾಲು ಈ ಯುದ್ಧದಲ್ಲಿ ಪಾಂಡವರ ಗೆಲುವೇ ನಿಶ್ಚಯವೆಂದು ಭಾವಿಸಿದ್ದಿರಲೂ ಸಾಧ್ಯವಿದೆ. ಹಾಗಾಗಿ ತಾನು ಈಗ ಕೌರವ ಸೇನೆಯ ನಾಯಕನಾಗಿ ಪಾಂಡವ ಬಲದ ಪ್ರಧಾನ ವೀರನಾದ ಭೀಮನೊಂದಿಗೆ ಯುದ್ಧಮಾಡಬೇಕೆನ್ನುವದಕ್ಕಿಂತಲೂ, ತನ್ನ ಜೀವನದ ಗುರಿಯೇ ಯಾರ ಹಿತಕ್ಕಾಗಿ ಎಂದು ಮನಸಾ ನಂಬಿದ್ದನೋ ಅಂತಹ ದುರ್ಯೋಧನನನ್ನು ತೃಪ್ತಿಪಡಿಸಲು ಪಾಂಡವ ಪ್ರಮುಖನಾದ ಯುಧಿಷ್ಠಿರ ನನ್ನು ಸೆರೆ ಹಿಡಿಯುವದಕ್ಕೋ, ನೋಯಿಸುವದಕ್ಕೋ ಮನಸ್ಸು ಮಾಡಿದ್ದಿರ ಬಹುದು. ಹೀಗೆ, ದುರ್ಯೋಧನನ ಸಹವಾಸದಿಂದ ಬೆಳೆಸಿಕೊಂಡ ಕುಟಿಲತೆ ಮತ್ತು ಯುದ್ಧದ ಪರಿಣಾಮದಲ್ಲಿ ಅವನು ಸ್ಪಷ್ಟವಾಗಿ ತಾಳಿದ್ದ ನಿರಾಶೆ– ಇದರಿಂದಾಗಿ ಕರ್ಣನು ತನ್ನ ಹುಟ್ಟು ಮತ್ತು ಅಂತಸ್ಸತ್ವಗಳಿಗನುಗುಣವಾದ ವೀರತನದಿಂದ ಯುದ್ಧ ಮಾಡಲಾರದವನಾಗಿದ್ದನು. ಸರಿ. ಕೇಳು. ಅವನು ಯುಧಿಷ್ಠಿರನತ್ತ ಧಾವಿಸಿದಾಕ್ಷಣ ಅಲ್ಲಿ ದೊಡ್ಡ ಗಲಭೆಯುಂಟಾಯಿತು. ಇದನ್ನು ದೂರದಿಂದ ಕೇಳಿದ ಭೀಮನು ಕರ್ಣನು ಪುನಃ ಯುಧಿಷ್ಠಿರನ ಮೇಲೇರಿ ಹೋಗಿರುವದನ್ನು ಕಂಡು ಸಿಂಹನಾದ ಮಾಡುತ್ತಾ ಆ ಕಡೆ ಧಾವಿಸಿ ಕರ್ಣನನ್ನು ಎದುರಿಸಿ ನಿಂತನು. ಕರ್ಣ–ಭೀಮರಿಗೆ ಪುನಃ ಯುದ್ಧ ವಾಗುವದೆಂದು ಹೆದರಿ ಒಂದು ದೊಡ್ಡ ಸೈನ್ಯವನ್ನು ಭೀಮನ ಎದುರಿಗೆ ತಳ್ಳಲಾಯಿತು...........

ರಮೆ:– ........ಭೂಮಿಯ ಮೇಲಿನ ಋಣ ತೀರಿದ್ದವರುಗಳನ್ನೇ ಒಳ ಗೊಂಡ ಸೈನ್ಯವನ್ನು...........

ಮುರಳಿ:– ಅದು ಸರಿ. ಕೇಳು. ಭೀಮನು ಈ ಸೈನ್ಯವನ್ನು ನಿವಾ ರಿಸುತ್ತಿರುವಷ್ಟರಲ್ಲಿ ಕರ್ಣನು ಯುಧಿಷ್ಠಿರನನ್ನು ತಾಗಿ ಅವನನ್ನು ಪುನಃ ಹೊಡೆದು ಹಂಗಿಸಿದನು. ಕರ್ಣನನ್ನು ಕೊಲ್ಲದೆ ಬಿಟ್ಟುದು ತನ್ನ ತಪ್ಪೆಂದು ನೊಂದುಕೊಂಡ ಭೀಮನು ಪುನಃ ಸಿಟ್ಟಿನಿಂದ ಕರ್ಣನ ಮೇಲೇರಿ ಬಂದನು. ಇದರಿಂದ ಹೆದರಿದ ದುರ್ಯೋಧನನು ತನ್ನ ಪಕ್ಷದ ಸಮಸ್ತ ಮಹಾರಥರನ್ನೂ ಕರ್ಣನ ಸಹಾಯಕ್ಕೆಂದು ಕಳುಹಿಸಿದನು. ಭೀಮನು ಈ ಪ್ರತಿಯೊಬ್ಬರನ್ನೂ ಏಕಾಂಗಿಯಾಗಿ ಎದುರಿಸಿ ಎಲ್ಲರನ್ನೂ ಬಾಣಗಳಿಂದ ಹೊಡೆದು ನೋಯಿಸಿ ದನು. ಈ ಗಲಭೆಯ ನಡುವೆ ಕರ್ಣನು ಪುನಃ ಯುಧಿಷ್ಠಿರನನ್ನು ತಾಗಿದನು.

ರಮೆ:– ಛೆ.

ಮುರಳಿ:– ಕೇಳು. ನಕುಲ, ಸಹದೇವ, ಸಾತ್ಯಕಿ ಮೊದಲಾದವರು ಬಹಳ ಪ್ರಯಾಸದಿಂದ ಕರ್ಣನನ್ನು ತಡೆಯುತ್ತಿದ್ದರು. ಆ ವೇಳೆಗೆ ಈ ಕಡೆ

ಸ್ವತಃ ದುರ್ಯೋಧನನೇ ಭೀಮನ ದೃಷ್ಟಿಗೆ ಸಿಕ್ಕಿಬಿದ್ದನು. ಕರ್ಣನು ತಕ್ಷಣವೇ ಆ ಕಡೆಗೆ ಧಾವಿಸಿ ದುರ್ಯೋಧನನನ್ನು ಮರೆ ಮಾಡಿಕೊಂಡು ಅವನನ್ನು ರಕ್ಷಿಸಬೇಕಾಯಿತು.

ಈ ಕಡೆ ಯುಧಿಷ್ಠಿರನಿಗೆ ಕರ್ಣನಿಂದ ಉಂಟಾದ ಪರಾಭವವನ್ನು ಕೇಳಿದ ಅರ್ಜುನನು ಅಣ್ಣನನ್ನು ಕಾಣಲೆಂದು ಹೊರಡುತ್ತಿರುವಾಗ ಸಂಶಪ್ತಕರು ಅವನನ್ನು ತಡೆದರು.

ರಮೆ:– ಈ ಕಡೆ ಎಂದರೆ ಅದು ಎಲ್ಲಿ? ಕುರುಕ್ಷೇತ್ರದಿಂದ ಎಷ್ಟು ಗಾವುದ ದೂರದಲ್ಲಿ?

ಮುರಳಿ:– ಕುರುಕ್ಷೇತ್ರದ ಒಂದು ಭಾಗದಲ್ಲಿಯೇ ರಮಾ. ಈ ಕಡೆ ಎಂದರೆ ಅರ್ಜುನನು ಯುದ್ಧ ಮಾಡುತ್ತಿದ್ದ ಕಡೆ ಎಂದರ್ಥ.

ರಮೆ:– ಯುದ್ಧವನ್ನೇ ಮಾಡುತ್ತಿದ್ದನೊ ? ಯಾರೊಂದಿಗೆ ?

ಮುರಳಿ:– ಯಾರೊಂದಿಗೆ ಎಂದರೆ ? ಕೌರವ ಸೈನ್ಯದೊಂದಿಗೇ.

ರಮೆ:– ಕರ್ಣ, ದುರ್ಯೋಧನ, ಮತ್ತು ಅವರ ಕಡೆಯ ಇತರ ವೀರರೆಲ್ಲರೂ ಬೆಳಗಿನಿಂದಲೇ ಹಾಗೂ ಈ ಕಳೆದ ಹದಿನಾರು ದಿನಗಳಲ್ಲಿ ಪ್ರತಿ ದಿನವೂ ಭೀಮನೊಂದಿಗೇ ಯುದ್ಧ ಮಾಡುತ್ತಿರುವಂತೆ ತೋರುತ್ತಿರುವಾಗ ಈ ಮೂರು ಲೋಕದ ಗಂಡ ಅದ್ಯಾರೊಂದಿಗೆ ಯುದ್ಧ ಮಾಡುತ್ತಿದ್ದ ?

ಮುರಳಿ:– ಯಾವ್ಯಾವದೋ ವಿವರಗಳನ್ನು ಕೇಳಿ ಕತೆಯ ಓಟಕ್ಕೆ ಭಂಗ ತರಬೇಡ. ಭೀಮನ ಕತೆಯನ್ನು ನಾನು ಹೇಳುತ್ತಿರುವದು. ಆ ಕುರಿತು ಸಂಶಯಗಳಿದ್ದರೆ ಕೇಳು. ಅರ್ಜುನನು ತನ್ನನ್ನು ಎದುರಿಸಿದ ಸಂಶಪ್ತಕರನ್ನು ಒಂದೇ ಕ್ಷಣದಲ್ಲಿ ನಿವಾರಿಸಿ ಯುಧಿಷ್ಠಿರನನ್ನು ಕಾಣಲು ಹೊರಟನು.

ರಮೆ:– ಸಂಶಪ್ತಕರು ಅವನ ಶತ್ರುಗಳೋ, ಅಥವಾ ಅವನ ಶತ್ರುಗಳಂತೆ ವೇಷ ಹಾಕಿಕೊಂಡಿದ್ದ ಅವನ ಭೃತ್ಯರೊ ?

ಮುರಳಿ:– ಏಕೆ ?

ರಮೆ:– ಹೌದು. ಬೇಕಾದಾಗ ಗಂಟೆಗಟ್ಟಲೆ, ದಿನಗಟ್ಟಲೆ ಅರ್ಜುನನಿಗೆ ಯುದ್ಧ ಕೊಡುತ್ತಲೂ, ಅವನಿಗೆ ಬೇಡವಾದಾಗ ಒಂದೇ ಕ್ಷಣದಲ್ಲಿ ಅವನಿಗೆ ಸೋಲುತ್ತಲೂ ಇದ್ದ ಈ ಅನಾಮಧೇಯರು ಮತ್ತೆಂತಹವರಿರಬಹುದು ?

ಮುರಳಿ:– ........ಹಾಗೆ ಬರುತ್ತಿದ್ದ ಅರ್ಜುನನನ್ನು ಅಶ್ವತ್ಥಾಮಾದಿಗಳು ತಡೆದರು.

ರಮೆ:– ಅರ್ಜುನನನ್ನು ಅಶ್ವತ್ಥಾಮಾದಿಗಳು ನೋಡಿ ಹಲವು ದಿನಗಳಾಗಿದ್ದಿರಬೇಕು ! ಎಲ್ಲಿಯೋ ಯಾತ್ರೆ ಹೋಗಿ ಬರುತ್ತಿದ್ದವನು ಪಾಂಡವರನ್ನು ಸೇರಿಕೊಂಡರೆ ಸ್ವಲ್ಪವಾದರೂ ಪಾಂಡವರ ಬಲ ಹೆಚ್ಚಾದೀತೆಂದು ಬಗೆದು ಅಶ್ವತ್ಥಾಮಾದಿಗಳು ಅವನನ್ನು ತಡೆದಿರಬಹುದು.

ಮುರಳಿ:– ಥತ್. ನೀನು ಅರ್ಜುನನನ್ನು ಒಳ್ಳೆ ಜಿಗಣೆ ಅಂಟಿದಂತೆ ಅಂಟಿಬಿಟ್ಟದ್ದೀಯಲ್ಲಾ ರಮಾ ! ಸುಮ್ಮನೆ ಕೇಳು, ಹೋಗಲಿ. ಅಶ್ವತ್ಥಾಮಾದಿಗಳನ್ನೂ ನಿವಾರಿಸಿದ ಅರ್ಜುನನು ಮುಂದೆ ಬರುತ್ತಾ

ರಮೆ:– ಅವರಿಂದ ತಪ್ಪಿಸಿಕೊಂಡು ಎಂದಿರಬೇಕು. ಅದನ್ನು ನಿವಾರಿಸಿ ಎನ್ನುತ್ತಿದ್ದೀರಿ, ಅಷ್ಟೆ.

ಮುರಳಿ:– ........ಯುಧಿಷ್ಠಿರನತ್ತ ಬರುತ್ತಿದ್ದ ಅರ್ಜುನನು ಯುದ್ಧ ಮಧ್ಯದಲ್ಲಿದ್ದ ಭೀಮನನ್ನು ಕಂಡನು. ತಾನು ರಂಗದಲ್ಲಿ ಯುದ್ಧ ಮಾಡುವದಾಗಿಯೂ ಭೀಮನು ಹೋಗಿ ಯುಧಿಷ್ಠಿರನನ್ನು ಸಂತೈಸಬೇಕೆಂದೂ ಅರ್ಜುನನು ಭೀಮನಿಗೆ ತಿಳಿಸಲು ಭೀಮನು ತಾನೇ ಯುದ್ಧ ಮಾಡುನದಾಗಿ ತಿಳಿಸಿ ಅರ್ಜುನನನ್ನೇ ಯುಧಿಷ್ಠಿರನಲ್ಲಿಗೆ ಕಳುಹಿಸಿದನು.

ಈ ಕಡೆ ಭೀಮನು ಎಂದಿನಂತೆಯೇ ಏಕಾಂಗಿಯಾಗಿ ಕೌರವ ಪಕ್ಷವನ್ನು ಎದುರಿಸುತ್ತಿದ್ದನು. ಅವನ ಎದುರಿನಲ್ಲಿ ಕೃಪಾಚಾರ್ಯ, ಕೃತವರ್ಮ, ಕರ್ಣ, ಅಶ್ವತ್ಥಾಮ, ದುಶ್ಶಾಸನ, ದುರ್ಯೋಧನ ಮೊದಲಾದ ಸಮಸ್ತ ಮಹಾರಥರೂ, ಯವನರು, ಮಾಗಧರು, ಪುಳಿಂದರು, ಆಂಧ್ರರು, ಸಿಂಧರು, ಸಂಶಪ್ತಕರು, ಕಳಿಂಗರೇ ಮೊದಲಾದ ಎರಡು ಅಕ್ಷೋಹಿಣಿಗಳಷ್ಟು ಸೈನ್ಯವೂ ಇದ್ದವು. ಭೀಮನು ಇಷ್ಟು ದೊಡ್ಡ ಶತ್ರು ಸೈನ್ಯವನ್ನು ಏಕಾಂಗಿಯಾಗಿ ಎದುರಿಸುತ್ತಿದ್ದುದರಿಂದಲೂ ಅಲ್ಲದೆ ಅವನು ಈ ವರೆಗೆ ಅವ್ಯಾಹತವಾಗಿ ನಡೆಸಿದ ಯುದ್ಧದಿಂದ ತೀವ್ರವಾಗಿ ಬಳಲಿದ್ದುದರಿಂದಲೂ ಅವನ ಪರಮ ವೈರಿಯಾದ ದುರ್ಯೋಧನನೇ ಅವನ ಈ ಅಪ್ರತಿಮ ವೀರ್ಯವನ್ನು ಮೆಚ್ಚಿಕೊಂಡನು. ವೀರ್ಯದಲ್ಲಿ ಅವನು ಹಿಂದಿನ ಭರತನೇ ಮೊದಲಾದ ಚರಿತ್ರಾರ್ಹ ವ್ಯಕ್ತಿಗಳಿಗಿಂತಲೂ ಮಿಗಿಲಾದವನೆಂದೂ ಸಾಗರ ಸಮಾನವಾದ ಮಹಾ ಸೈನ್ಯವನ್ನು ಏಕಾಂಗಿಯಾಗಿ ಎದುರಿಸಿ ನಿಂತು ಯುದ್ಧಮಾಡುತ್ತಿರುವ ಅವನು ಅಪ್ರತಿಮ ವೀರ್ಯವಂತನೆಂಬದರಲ್ಲಿ ಸಂದೇಹವಿಲ್ಲವೆಂದೂ ಮೆಚ್ಚಿಕೊಂಡ ದುರ್ಯೋಧನನು ಈ ಕಾರಣದಿಂದಾಗಿ ಆ ದಿನದ ಯುದ್ಧವನ್ನು ಅಲ್ಲಿಗೇ ನಿಲ್ಲಿಸಲು ತಾನು ಸಿದ್ಧನಾಗಿರುವದಾಗಿಯೂ ಭೀಮನು ಶಿಬಿರಕ್ಕೆ ಹಿಂತಿರುಗಿ ಯುಧಿಷ್ಠಿರನನ್ನು ಉಪಚರಿಸಬಹುದೆಂದೂ ಅವನಿಗೆ ಹೇಳಿ ಕಳುಹಿಸಿದನು. ತನ್ನಲ್ಲಿ ಬಂದು ಈ ಮಾತನ್ನು ಹೇಳಿದ ಕೌರವ

ದೂತರಿಗೆ ಧಾರಾಳವಾದ ಉಡುಗೊರೆಗಳನ್ನಿತ್ತ ಭೀಮನು ರಣವೇ ತನಗೆ ಕರ್ತವ್ಯ ವೆಂದೂ, ಕರ್ಣ, ಅಶ್ವತ್ಥಾಮಾದಿಗಳಿಗೆ ತಾನು ಅಂಜುವವನಲ್ಲವೆಂದೂ ದುರ್ಯೋಧನನು ಜೀವದಾಸೆಯನ್ನು ಬಿಟ್ಟು ಯುದ್ಧ ಮಾಡಬೇಕೆಂದೂ ಹೇಳಿ ಕಳುಹಿಸಿದನು.

ರಮೆ:– ಸ್ವಲ್ಪ ಉದ್ಧಟತನ ಎನಿಸುತ್ತದೆ. ಇಲ್ಲವೆ ?

ಮುರಳಿ:– ಹೌದು. ಅನ್ಯಾಯವನ್ನು ತುಳಿಯುವಲ್ಲಿ ಎಳ್ಳಷ್ಟೂ ಗುರಿ ತಪ್ಪದೆ, ಎಚ್ಚರ ತಪ್ಪದೆ ಧರ್ಮಕ್ಕೆ ಜಯವನ್ನು ಸಾಧಿಸಿ ತರಲು ಅವಶ್ಯವಾದ ಗುಣ. ಕೇಳು. ಭೀಮನ ಮಾತಿನಿಂದ ಕೌರವ ವೀರರೆಲ್ಲರೂ ಕೆರಳಿದರು. ಪ್ರತಿಯೊಬ್ಬರೂ ಪರಸ್ಪರ ಸ್ಪರ್ಧಿಸುತ್ತಾ ನಾನು ಮುಂದೆ ತಾನು ಮುಂದೆ ಎಂದುಕೊಂಡು ಭೀಮನನ್ನು ಮುತ್ತಿದರು. ಭೀಮನೇ ತಮಗೆ ಅರ್ಜುನನೆಂದುಕೊಂಡು ಸಂಶಪ್ತಕರೂ ಅವನನ್ನು ಸುತ್ತಿ ನಿಂತರು. ಆದರೆ ಭೀಮನ ಯುದ್ಧವು ಅತ್ಯಾಶ್ಚರ್ಯಕರ ವಾಗಿದ್ದಿತು. ಇಲ್ಲಿ ಕರ್ಣನನ್ನು ಹೊಡೆದು, ಅಲ್ಲಿ ದುರ್ಯೋಧನನ ರಥವನ್ನು ಹುಡಿಗುಟ್ಟಿ, ಈ ಕಡೆ ಅಶ್ವತ್ಥಾಮನ ಸಾರಥಿಯನ್ನು ಕೊಂದು, ಆ ಕಡೆ ಸಂಶಪ್ತಕರನ್ನು ದಿಕ್ಕಾಪಾಲಾಗಿ ಮಾಡಿ, ಎಲ್ಲೆಲ್ಲಿಯೂ ಭೀಮನೇ ಎಂಬಂತೆ ಬಿಲ್ಲಿನಲ್ಲಿ, ಖಡ್ಗದಲ್ಲಿ, ಗದೆಯಲ್ಲಿ, ವಿವಿಧಾಯುಧಗಳಲ್ಲಿ ಯುದ್ಧಮಾಡಿ, ಬಾಳೆಯ ತೋಟಕ್ಕೆ ನುಗ್ಗಿದ ಆನೆಯಂತೆ, ಕರ್ಪೂರವನ್ನು ಆವರಿಸುವ ಬೆಂಕಿಯಂತೆ ಭೀಮಪರಾಕ್ರಮಿಯಾದ ಅವನು ರಣ ಭಯಂಕರನಾಗಿ ಯುದ್ಧ ಮಾಡಿದನು. ಕೌರವ ಪಕ್ಷದ ಸೈನಿಕರು ಕುದುರೆಗಳನ್ನೂ, ಕುದುರೆಗಳು ಆನೆಗಳನ್ನೂ, ಆನೆಗಳು ರಥಗಳನ್ನೂ, ರಥಿಕರು ಮಹಾರಥರನ್ನೂ ಮರೆಹೊಕ್ಕು ನಿಂತು ಭೀಮನಿಂದ ಜೀವವನ್ನು ರಕ್ಷಿಸಿಕೊಳ್ಳಬೇಕಾಯಿತು.

ಈ ಕಡೆ ಕೃಷ್ಣಾರ್ಜುನರು ಯುಧಿಷ್ಠಿರನ ಶಿಬಿರಕ್ಕೆ ಬಂದರು. ಯುಧಿಷ್ಠಿರನು ಬಹಳ ವೇದನೆಯಿಂದ ನರಳುತ್ತಿದ್ದನು. ಅಣ್ಣನ ಈ ಸ್ಥಿತಿಯನ್ನು ಕಂಡು ಮರುಗಿದ ಅರ್ಜುನನು ಕೋಪಾವಿಷ್ಟನಾಗಿ ತಾನು ಕರ್ಣಾದಿಗಳನ್ನು ಕೊಂದು ಬರುವದಾಗಿ ತಿಳಿಸಿದನು. ನೋವಿನ ಭರದಲ್ಲಿದ್ದ ಯುಧಿಷ್ಠಿರನು ಅರ್ಜುನನಿಂದ ಕರ್ಣನನ್ನು ಕೊಲ್ಲಲು ಸಾಧ್ಯವಿಲ್ಲವೆಂದೂ, ಭೀಷ್ಮ ಮತ್ತು ದ್ರೋಣರಂತೆ ಕರ್ಣನು ಪಾಂಡವ ಪಕ್ಷಪಾತಿಯಾಗಿಲ್ಲವಾದುದರಿಂದ ಅವನನ್ನು ಜಯಿಸುವದು ಅಶಕ್ಯವೆಂದೂ, ಆದುದರಿಂದ ತಮಗೆ ಜಯಸಿಕ್ಕಬೇಕೆಂದು ಬಯಸುವದಾದರೆ ಅರ್ಜುನನು ತನ್ನ ಗಾಂಢೀವವನ್ನು ಕೃಷ್ಣನ ಕೈಗೆ ಕೊಟ್ಟು ತಾನು ರಥದ ಸಾರಥ್ಯವನ್ನು ವಹಿಸಿಕೊಳ್ಳಬೇಕೆಂದೂ ನುಡಿದನು. ಈ ಮಾತನ್ನು ಕೇಳಿದ ಅರ್ಜುನನು ಕೋಪದಿಂದ ಕಿಡಿ ಕಿಡಿಯಾಗಿ................

ರಮೆ:– ಆಗಲಿ. ಅವನೂ ವೀರನಲ್ಲವೆ ? ಅವನಿಗೂ ಅಣ್ಣನಲ್ಲಿ ಭಕ್ತಿ, ಶತ್ರುಗಳನ್ನು ದಮನ ಮಾಡಬೇಕೆಂಬ ಕೆಚ್ಚು ಇರುವದಿಲ್ಲವೆ ? ಹೇಳಿ. ಮತ್ತೆ ?

ಮುರಳಿ:– ಕೋಪಾವಿಷ್ಟನಾದ ಅರ್ಜುನನು ಒರೆಯಿಂದ ಕತ್ತಿಯನ್ನೆಳೆದು ಝುಳಪಿಸುತ್ತಾ...............

ರಮೆ:– ಭೇಷ್. ನನಗೆ ಇಂತಹ ದೃಶ್ಯಗಳನ್ನೆಲ್ಲ ಕಲ್ಪಿಸಿಕೊಳ್ಳುವದು ತುಂಬ ಇಷ್ಟ. ಮುಂದೆ ಏನಾಗುತ್ತದೊ, ಕೌರವ ಪಕ್ಷದ ಯಾರ್ಯಾರ ತಲೆ ಹಾರುತ್ತದೊ ಎಂಬ ಕುತೂಹಲವನ್ನು ಕೆರಳಿಸುವ ಇಂತಹ ಘಟನೆಗಳು ತುಂಬ ಚೆಂದ. ಹೇಳಿ, ಹೇಳಿ. ಆಮೇಲೆ?

ಮುರಳಿ:– ಒರೆಯಿಂದೆಳೆದ ಕತ್ತಿಯನ್ನು ಝುಳಪಿಸುತ್ತಾ ಅರ್ಜುನನು ಯುಧಿಷ್ಠಿರನನ್ನು ಕೊಲ್ಲುವದಕ್ಕೆಂದು ಮುನ್ನುಗ್ಗಿದನು.

ರಮೆ:– ...........ಯುಧಿಷ್ಠಿರನನ್ನು...........? ಅರ್ಜುನ................? ಕೊಲ್ಲಲಿಕ್ಕೆಂದು........? ಕನಸಿನಲ್ಲಿ ಮಾತನಾಡುತ್ತಿದ್ದೀರೇನು? ಅಥವಾ ನನ್ನನ್ನು ಗೇಲಿ ಮಾಡುತ್ತಿದ್ದೀರೇನೊ! ಅರ್ಜುನನ ವ್ಯಕ್ತಿತ್ವವು, ಗಂಭೀರವಾದ ಸನ್ನಿವೇಶಗಳನ್ನು ಉಂಟು ಮಾಡುವಷ್ಟು ತೂಕವಾದುದೆಂದು ನಾನು ನಂಬಿಲ್ಲವಾದರೂ ಅವನ ಕುರಿತು ಇಷ್ಟು ಕೀಳಾಗಿ ಆಡುವಷ್ಟರಮಟ್ಟಿಗೆ ಅವನು ಹೀನವ್ಯಕ್ತಿಯಾಗಿದ್ದಾನೆ ಎಂದೇನೂ ನಾನು ನಂಬಿಲ್ಲ ತಿಳಿಯಿತೆ? ತಮಾಷೆ ಬಿಟ್ಟು ಕತೆಯನ್ನು ಮುಂದುವರಿಸಿ. ಬಹುಶಃ ಯುಧಿಷ್ಠಿರನ ಮಾತಿನಿಂದ ಪ್ರಚೋದಿಸಲ್ಪಟ್ಟ ಅರ್ಜುನನು ಸಿಟ್ಟಿನ ಭರದಲ್ಲಿ ಏನೋ ಮಾಡಿಬಿಡುತ್ತೇನೆಂದು ಕತ್ತಿ ಹಿಡಿದು ಹೊರಟು ಏನನ್ನೂ ಸಾಧಿಸಲಾರದೆ ಹಿಂತಿರುಗಿದನೋ ಏನೊ. ಅವನ ಕುರಿತು ಯಥಾರ್ಥವಾದ ಅಷ್ಟನ್ನೇ ಹೇಳಿದರೂ ಸಾಕು. ಅದೇ ತಮಾಷೆಯಾಗಿರುತ್ತದೆ. ಆದರೆ ನೀವು ಅವನ ಕುರಿತು ಮಾಡಿದ ಹಾಸ್ಯ ವಿಪರೀತ ಅಪಚಾರವಾಯಿತು.

ಮುರಳಿ:– ಒಳ್ಳೆಯ ಗ್ರಹಚಾರವಾಯಿತಲ್ಲ! ನಾನು ಹಾಸ್ಯವನ್ನೂ ಮಾಡಲಿಲ್ಲ, ತಮಾಷೆಯನ್ನೂ ಮಾಡಲಿಲ್ಲ. ಮಹಾಭಾರತ ಕತೆಯಲ್ಲಿರುವದನ್ನು ಬಚ್ಚಿಡದೆ ಹೇಳಿಬಿಟ್ಟೆ, ಅಷ್ಟೆ.

ರಮೆ:– ಹಾಗಿದ್ದರೆ ಅರ್ಜುನನು ಯುಧಿಷ್ಠಿರನನ್ನು ಕೊಲ್ಲಲು ಹೋದುದು ನಿಜ?

ಮುರಳಿ:– ಹೌದಮ್ಮ. ಮಹಾಭಾರತದಲ್ಲಿ ಹಾಗೆಂದು ಹೇಳಲಾಗಿದೆ.

ರಮೆ:– ಅಯೋಗ್ಯ. ಪಾಂಡವರ ಪೈಕಿ ಒಬ್ಬ ಕಳಂಕಿ.

ಮುರಳಿ:– ಹಾಗೇನೂ ಇಲ್ಲ. ತನ್ನ ಗಾಂಡೀವವನ್ನು ಯಾರಾದರೂ ಹಳಿದರೆ ಅವರನ್ನು ಕೊಲ್ಲುವದಾಗಿ ಅರ್ಜುನನು ಈ ಹಿಂದೆ ಪ್ರತಿಜ್ಞೆ ಮಾಡಿದ್ದ. ಆ ಪ್ರತಿಜ್ಞೆಯ ಪೂರೈಕೆಗಷ್ಟೇ ಈಗ ಅವನು ಯುಧಿಷ್ಠಿರನನ್ನು ಕೊಲ್ಲಲು ಮುಂದಾದುದು.

ರಮೆ:– ಅವನೂ, ಅವನ ಟೊಳ್ಳು ಪ್ರತಿಜ್ಞೆಗಳೂ! ತನ್ನ ಸತ್ವ, ತನ್ನ ಆಯುಧದ ಸತ್ವ, ಶತ್ರುವಿನ ಸತ್ವ, ಅಣ್ಣನ ಸತ್ವ–ಈ ಎಲ್ಲದರ ಯಥಾರ್ಥ ಜ್ಞಾನ ವಿದ್ದಿದ್ದರೆ ಅಣ್ಣನು ತನ್ನ ಗಾಂಡೀವವನ್ನು ಹಳಿದಾಗ, ಅವನು ಹಾಗೆ ಹಳಿಯ ಬೇಕಾಗಿದ್ದರೆ ಅವನಿಗೆ ಎಷ್ಟು ನೋವಾಗಿರಬಹುದೆಂಬದನ್ನು ಕಲ್ಪಿಸಿಕೊಂಡು, ತಾನಿದ್ದೂ ಹೀಗಾಯಿತಲ್ಲ ಎಂಬ ವೇದನೆಯನ್ನೂ ಅನುಭವಿಸಿ ಅದೇ ರೋಷದಿಂದ ಹೋಗಿ ಕರ್ಣನನ್ನು ಕೊಲ್ಲಬೇಕಾಗಿತ್ತು. ಅದು ಬಿಟ್ಟು ಮೊದಲೇ ಕರ್ಣನ ಪೆಟ್ಟನಿಂದ ನರಳುತ್ತಿದ್ದ ಯುಧಿಷ್ಠಿರನನ್ನು ಕೊಲೆ ಮಾಡಲು ಇವನು ಮುಂದಾದ ನೆಂದರೆ ಅವನು ಪಾಂಡವರ ನಡುವೆ ಹುಟ್ಟಲಿಕ್ಕೇ ಯೋಗ್ಯತೆ ಪಡೆದಿಲ್ಲ ಎಂದಂತಾ ಗುತ್ತದೆ. ಅಣ್ಣನಿಗೆ ನೋವಾದಾಗ ಯುದ್ಧ ಮಧ್ಯದಲ್ಲಿದ್ದ ಭೀಮನು ಕಣ್ಣೀರು ಸುರಿಸಿ ಅದೇ ರೋಷದಲ್ಲಿ ತನ್ನ ಪ್ರಾಣದ ಮೇಲೆಯೇ ಗಮನವಿಲ್ಲದೆ ನೇರವಾಗಿ ಹೋಗಿ ಕರ್ಣನನ್ನು ಒದೆದು ರಥದಿಂದ ಎಳೆದು ಹಾಕಿದುದನ್ನೂ, ಯುದ್ಧರಂಗದ ಯಾವದೋ ಮೂಲೆಯಲ್ಲಿ ಪ್ಯೆಗಳ್ಳನಂತೆ ತಲೆ ತಪ್ಪಿಸಿಕೊಂಡು ಯುದ್ಧದ ಇಷ್ಟು ದಿನಗಳಲ್ಲಿಯೂ ಕಾಲ ಕಳೆಯುತ್ತಿದ್ದ ಈ ಅರ್ಜುನನು ತನ್ನ ಗಾಂಡೀವವನ್ನು ಹಳಿದುಬಿಟ್ಟನೆಂಬದಕ್ಕಾಗಿ ಪೆಟ್ಟನಿಂದ ಘಾಸಿಗೊಂಡಿದ್ದ ಅಣ್ಣನನ್ನೇ ಕೊಲೆ ಮಾಡಲು ಮುಂದಾಗಿರುವದನ್ನೂ ಹೋಲಿಸಿದರೆ....

ಮುರಳಿ:– ಆದರೆ ಹಿಂದೆ ಒಮ್ಮೆ ಭೀಮನೂ ತನ್ನ ಅಣ್ಣನ ತೋಳನ್ನು ಸುಡಲು ಮುಂದಾಗಿದ್ದ ಎಂಬ ಘಟನೆ ಇದೆಯಲ್ಲ!

ರಮೆ:– ಯಾವದನ್ನು ಯಾವದಕ್ಕೆ ಹೋಲಿಸುತ್ತೀರಿ? ದ್ಯೂತದಂತಹ ಕೀಳು ವ್ಯಸನಕ್ಕೆ ಬಲಿಯಾಗಿ ರಾಜ್ಯಕೋಶಾದಿಗಳನ್ನಷ್ಟೇ ಅಲ್ಲದೆ, ಲೋಕೈಕ ವೀರರಾದ ತಮ್ಮಂದಿರನ್ನೂ, ಶತ್ರುವಿನ ಗುಲಾಮರನ್ನಾಗಿ ಮಾಡಿ, ಸಾಲದುದಕ್ಕೆ ಅಬಲೆಯಾದ ಪತ್ನಿಯನ್ನೂ ಶತ್ರುವಿಗೊಪ್ಪಿಸಿ ಆ ಶತ್ರುವು ಬಹಿರಂಗವಾಗಿ ಆಕೆಯ ಮೇಲೆ ಅತ್ಯಾಚಾರ ಮಾಡುತ್ತಿರುವದನ್ನು ನೋಡಿ ಸಹಿಸಲಾರದ ಪರಿಸ್ಥಿತಿ ಯಲ್ಲಿ ಭೀಮನು ಬೇರೇನನ್ನೂ ಮಾಡಲಾರದ ಅಸಹಾಯಕತೆಗೆ ಸಿಕ್ಕಿಕೊಂಡು ಯುಧಿಷ್ಠಿರನ ಅಕ್ರಮ ನಡತೆಯನ್ನು ಖಂಡಿಸಿದುದಕ್ಕೂ ಅರ್ಜುನನು ಇಲ್ಲಿ ಮಾಡುತ್ತಿರುವದಕ್ಕೂ ಅದ್ಯಾವ ಹೋಲಿಕೆ? ಅಲ್ಲಿ ಭೀಮನು ಅಬಲೆಗಾಗಿ ಮರುಗುವ ಸಹೃದಯತೆಯನ್ನೂ, ಅವಳ ಮಾನಭಂಗ ಮಾಡಲೆಳಸುತ್ತಿದ್ದ ಶತ್ರು ಗಳನ್ನು ಕೊಲ್ಲಲು ತಾನು ಸಮರ್ಥನಾಗಿದ್ದರೂ ಅಣ್ಣನು ತನ್ನನ್ನು ಶತ್ರುವಿನ ಗುಲಾಮನನ್ನಾಗಿ ಮಾಡಿದ ವ್ಯವಹಾರ ಧರ್ಮಕ್ಕೆ ತಲೆಬಾಗಿದ ವಿಶೇಷ ಸಂಯಮ ವನ್ನೂ ತೋರಿಸಿ ತನ್ನ ಗುಣವನ್ನೇ ಮೆರೆದಿದ್ದಾನೆ. ಇಲ್ಲಿ ಅರ್ಜುನನು ತಾನು ಒಬ್ಬ ಮಹಾ ಬಿಲ್ಲಾಳು ಎಂದು ತನ್ನನ್ನು ತಿಳಿದುಕೊಂಡಿದ್ದ ದುರಹಂಕಾರವನ್ನೂ, ಆ ದುರಹಂಕಾರದ ಮಬ್ಬಿನಲ್ಲಿ ನ್ಯಾಯಾನ್ಯಾಯಗಳಿಗೆ ಬೆನ್ನು ಹಾಕಿರುವ ಮೂಢ

ತನವನ್ನೂ ತೋರಿಸಿದ್ದಾನೆ. ಛೆ, ಛೆ. ಸಾಮಾನ್ಯವಾಗಿ ಎಲ್ಲರೂ ತಿಳಿದಿರುವಂತೆ ಭೀಮನು ಈ ರೀತಿ ಮಾಡುವವನೆಂದೂ ಅರ್ಜುನನು ಬಹಳ ವಿವೇಕಿಯೆಂದೂ ಕಲ್ಪಿಸುವ ಪರಿಸ್ಥಿತಿಯಿದೆ. ಎಂತಹ ವಿಪರ್ಯಾಸ ! ಸಕಲ ಕಲೆಗಳಿಂದ ಕೂಡಿ ಇಷ್ಟಾರ್ಥವನ್ನು ಕೊಡಬಲ್ಲ ಶಿಲಾ ವಿಗ್ರಹವನ್ನು ಕಲ್ಲೆಂದೂ, ಕೂದಲನ್ನು ಕೆದರಿ ಕೊಂಡು ಕಾವಿಯನ್ನು ಧರಿಸಿದ ಠಕ್ಕನನ್ನು ಸಾಕ್ಷಾತ್ ಭಗವಾನ್ ಎಂದೂ ಕರೆ ಯುವ ಮೂರ್ಖರಂತೆ ಇಂದು ಹೆಚ್ಚಿನ ಮಂದಿ ಮಹಾಭಾರತದ ವ್ಯಾಖ್ಯಾನ ಕಾರರು ತಾವೂ ದಾರಿ ತಪ್ಪಿದ್ದಾರೆ, ಇತರರನ್ನೂ ದಾರಿ ತಪ್ಪಿಸುತ್ತಿದ್ದಾರೆ. ಭೀಮ ಎಂದು ಕೇಳಿದ ತಕ್ಷಣ ಮನಸ್ಸಿನಲ್ಲಿ ಯಾವದೋ ರಸರಹಿತವಾದ ಭಾವ ಸ್ಫುರಿಸು ವಂತೆಯೂ ಅರ್ಜುನ ಎಂದೊಡನೆ ಯಾವದೋ ಗೌರವದ ಭಾವ ಹುಟ್ಟು ವಂತೆಯೂ ಮಾಡಿ ಮಹಾಭಾರತವು ಕೋಟಿ ಶ್ರೋತೃಗಳ ಮೇಲೆ ಮಾಡಬೇಕಾದ ಅವಶ್ಯ ಪರಿಣಾಮವನ್ನು ಮಾಡಿಸದಿರಲು ಕಾರಣರಾದ ಈ ವ್ಯಾಖ್ಯಾನಕಾರರು ಗಳು ಸತ್ವದ ತಿರುಳಿಲ್ಲದ ಅರ್ಜುನನ ಆರಾಧನೆ ಮಾಡಿದುದರಲ್ಲಿ ಆಶ್ಚರ್ಯ ವೇನಿಲ್ಲ........

ಮುರಳಿ:– ಚೆನ್ನಾಗಿ ಹೇಳುತ್ತಿದ್ದೀಯ, ಹೇಳು. ಆದರೆ ನನ್ನದು ಇನ್ನು ಸ್ವಲ್ಪವೇ ಉಳಿದಿರುವದು. ಅದನ್ನು ಮುಗಿಸಿಬಿಡುತ್ತೇನೆ. ಆಮೇಲೆ ನೀನು ಹೇಳು.

ರಮೆ:– ಏನನ್ನು ?

ಮುರಳಿ:– ಅರ್ಜುನನ ಕತೆಯನ್ನು ಹೇಳು ಎಂದೆ. ಭೀಮನ ಕತೆ ಇನ್ನು ಸ್ವಲ್ಪವೇ ಇರುವದು. ಅದನ್ನು ಮುಗಿಸಿಬಿಡುತ್ತೇನೆ. ಆಮೇಲೆ ನೀನು ಅರ್ಜುನನ ಕತೆಯನ್ನು........

ರಮೆ:– ಹುಚ್ಚು. ಅವನು ಜೀವನದಲ್ಲಿ ಒಂದು ವರ್ಷ ಕಾಲ ಬಹಿರಂಗ ವಾಗಿ ಶಿಖಂಡಿಯಾಗಿದ್ದವನು. ಉಳಿದ ಕಾಲವೆಲ್ಲ ಅಂತರಂಗದಲ್ಲಿ ಶಿಖಂಡಿ ಯಾಗಿದ್ದವನು. ಅವನ ಕತೆ ಹೇಳಲಿಕ್ಕೇನಿದೆ ? ಹೇಳಿ, ಹೇಳಿ, ಅವನು ಅಣ್ಣನ ಮೇಲೇರಿ ಹೋದ ಪರಾಕ್ರಮವನ್ನು ಕೇಳೋಣ, ಹೇಳಿ.

ಮುರಳಿ:– ಕೇಳು. ಹೀಗೆ ಇದ್ದಕ್ಕಿದ್ದಂತೆ ಅಣ್ಣನನ್ನು ಕೊಲ್ಲಲೆಂದು ಹೊರಟ ಅರ್ಜುನನನ್ನು ದ್ರೌಪದಿ ಮತ್ತು ಕೃಷ್ಣ – ಇವರುಗಳು ತಡೆದರು. ಅರ್ಜುನನ ಈ ವರ್ತನೆಯಿಂದ ಅವಾಕ್ಕಾದ ಕೃಷ್ಣನು "ಶಿವ, ಶಿವಾ. ಗುರುಹತ್ಯೆಗೆ ಮನಸ್ಸು ಮಾಡಿ ಭರತ ಕುಲವನ್ನೇ ಕೆಡಿಸಲು ತೊಡಗಿದ ನಿನ್ನಂತಹವನನ್ನು ಕೌರವರಲ್ಲಿಯೂ ಕಾಣಲಾರೆನು" ಎಂದು ಹಳಿದನು.

ರಮೆ:– ಛಿ. ಇದನ್ನು ಕೇಳಿಯೂ ಅರ್ಜುನನು ಆತ್ಮಹತ್ಯೆ ಮಾಡಿಕೊಳ್ಳ

ಲಿಲ್ಲವೆಂಬದೊಂದೇ ಸಾಲದೆ, ಅವನು ವ್ಯರ್ಥ ಬದುಕನ್ನು ಬದುಕಿ ಭೂಮಿಗೆ ಭಾರವಾಗಿದ್ದ ಎಂದು ತಿಳಿಯಲು ?

ಮುರಳಿ:– ನೋಡಿದೆಯಾ ! ನೀನು ಅರ್ಜುನನ ಕತೆ ನಿಲ್ಲಿಸುತ್ತೀಯೋ ಅಥವಾ ನಾನು ಭೀಮನದನ್ನು ನಿಲ್ಲಿಸಲೊ ?

ರಮೆ:– ಸರಿಯಪ್ಪ, ಹೇಳಿ. ನಾನ್ಯಾಕೆ ಅವನ ಕತೆ ಹೇಳಲಿ, ಹೇಳಿ.

ಮುರಳಿ:– ಕೃಷ್ಣನ ಈ ಮಾತಿಗೆ ಉತ್ತರವಾಗಿ ಅರ್ಜುನನು, ತಾನು ತನ್ನ ಗಾಂಡೀವವನ್ನು ಹಳಿಯುವವನನ್ನು ಕೊಲ್ಲುವದಾಗಿ ಈ ಹಿಂದೆ ಪ್ರತಿಜ್ಞೆ ಮಾಡಿದ್ದುದರಿಂದ ಅದಕ್ಕೆ ಅನುಸಾರವಾಗಿ ಯುಧಿಷ್ಠಿರನನ್ನು ಕೊಲ್ಲಲು ಮುಂದಾದುದೆಂದು ತಿಳಿಸಿದನು.

ರಮೆ:– ನಾಚಿಕೆ, ಹೇಸಿಕೆ–ಎಲ್ಲ ಬಿಟ್ಟದ್ದವನು. ಕೃಷ್ಣ ತನ್ನನ್ನು ಹಳಿದ ಮೇಲಾದರೂ ತನ್ನದು ಮಹಾಪರಾಧ ಎಂದು ಒಪ್ಪಿಕೊಳ್ಳಲೊಲ್ಲದ ಪಾಪಿ.

ಮುರಳಿ:– ಮೊದಲೇ ಶರೀರದ, ಮನಸ್ಸಿನ ವೇದನೆಯಿಂದ ನರಳುತ್ತಿದ್ದ ಯುಧಿಷ್ಠಿರನಿಗೆ ಅರ್ಜುನನ ಈ ಮಾತುಗಳನ್ನು ಕೇಳಿ ಇನ್ನಷ್ಟು ದುಃಖವಾಯಿತು. ದುಃಖದಿಂದ ಅವನು ಅರ್ಜುನನ ಪ್ರತಿಜ್ಞಾ ಪೂರೈಕೆಗೆ ಅವಕಾಶ ಮಾಡಿಕೊಡಬೇಕೆಂದು ಕೃಷ್ಣನನ್ನು ಕೇಳಿಕೊಂಡನು.

ರಮೆ:– ಛೆ, ಛೆ !

ಮುರಳಿ:– ಕೃಷ್ಣನಿಗೂ ಇನ್ನಷ್ಟು ಆಶ್ಚರ್ಯವಾಯಿತು. ಅವನು ಅರ್ಜುನನನ್ನು ನಿಂದಿಸಿ ಅವನು ಮೂಢನೆಂದೂ, ಅವನ ಕೃತ್ಯವು ಹೇಯವಾದುದೆಂದೂ, ಅವನು ಅಷ್ಟು ನಿರ್ದಯನೆಂಬದನ್ನೂ, ಅವನ ಅಂತರಂಗದಲ್ಲಿ ಅಷ್ಟು ಹೀನಭಾವನೆಗಳಿವೆಯೆಂಬದನ್ನೂ ತಾನು ತಿಳಿದೇ ಇರಲಿಲ್ಲವೆಂದೂ ಮುಂತಾಗಿ ಹೇಳಿದ ಮೇಲೆ ಕ್ರಮಶಃ ಅರ್ಜುನನು ತನ್ನ ಮೂರ್ಖತನವನ್ನು ಒಪ್ಪಿಕೊಂಡನು. ಆದರೆ ಅವನ ಪ್ರತಿಜ್ಞೆ ಇದ್ದೇ ಇದ್ದಿತು. ಗಾಂಡೀವವನ್ನು ಹಳಿದ ಯುಧಿಷ್ಠಿರನನ್ನು ಕೊಲ್ಲುವದರ ಬದಲು ಅವನನ್ನು ಮನಸಾ ಹಳಿದರೆ ಪ್ರತಿಜ್ಞೆ ಪೂರೈಸಿದಂತೆಯೋ ಆಗುತ್ತದೆ ಎಂಬ ಕೃಷ್ಣನ ಸಲಹೆಯ ಪ್ರಕಾರ ಅವನು ಅಣ್ಣನನ್ನು ಮನಸ್ವೀಯಾಗಿ ಹಳಿದನು. ಹೀಗೆ ಹಳಿಯುತ್ತಾ ಹಳಿಯುತ್ತಾ ಅವನಿಗೆ ತನ್ನ ಬಗೆಗೇ ಅಸಹ್ಯವೆನಿಸಿತು. ತನ್ನನ್ನೇ ತಾನು ಕೊಂದುಕೊಳ್ಳಲು ಪ್ರಯತ್ನಿಸಿದನು.

ರಮೆ:– ದುರ್ಬಲ ಮನಸ್ಸಿನ ಕೇವಲ ಸಾಮಾನ್ಯ ಮನುಷ್ಯ.

ಮುರಳಿ:– ಈಗಲೂ ಕೃಷ್ಣನು ಅವನನ್ನು ತಡೆದನು. ತನ್ನನ್ನು ಕೊಂದುಕೊಳ್ಳುವದರ ಬದಲು ತನ್ನನ್ನು ತಾನೇ ಬೇಕಷ್ಟು ಹೊಗಳಿಕೊಂಡರೆ ಕೊಂದು

ಕೊಂಡಂತೆಯೇ ಆಗುತ್ತದೆ ಎಂಬ ಕೃಷ್ಣನ ಮತ್ತೊಂದು ಸಲಹೆಯ ಪ್ರಕಾರ ತನ್ನನ್ನು ತಾನು ಮನಸ್ವೀಯಾಗಿ ಹೊಗಳಿಕೊಂಡು ಅಣ್ಣನನ್ನು ಹಳಿದ ಪಾಪ ವನ್ನು ಕಳೆದುಕೊಳ್ಳಲು ಪ್ರಯತ್ನಿಸಿದನು.

ರಮೆ:– ಛಿ, ಛಿ, ಛಿ. ಅಣ್ಣನನ್ನು ಕೊಲ್ಲಲು ಹೊರಡುವದು ; ಕೊಲ್ಲದೆ ಅವನನ್ನು ಬಾಯಿಗೆ ಬಂದಂತೆ ಹಳಿಯುವದು; ಅನಂತರ ತನ್ನನ್ನು ತಾನು ಕೊಚ್ಚಿ ಕೊಳ್ಳುವದು....ಇದೇ ಅವನು ಕುರುಕ್ಷೇತ್ರ ಯುದ್ಧದಲ್ಲಿ ಮಾಡಿದ ಮಹತ್ಕಾರ್ಯ ವಿರಬೇಕು !

ಮುರಳಿ:– ಇಲ್ಲ, ಬೇರೆ ಇದೆ. ಮುಂದೆ ಬರುತ್ತದೆ. ಕೇಳು. ಕೊನೆಯಲ್ಲಿ ಯುಧಿಷ್ಠಿರನಿಗೆ ನಮಸ್ಕರಿಸಿ ಕರ್ಣನ ವಧೆಯನ್ನು ನಿರ್ಧರಿಸಿ ರಣರಂಗಕ್ಕೆ ಹೊರಟನು.

ಈ ಕಡೆ ಭೀಮನೊಬ್ಬನೇ ಏಕಾಂಗಿಯಾಗಿ ಕೌರವ ಸೈನ್ಯವನ್ನು ತರುಬಿ ಯುದ್ಧ ಮಾಡುತ್ತಿದ್ದನು. ದೂತರು ಬಂದು ಯುಧಿಷ್ಠಿರನು ಕ್ಷೇಮವಾಗಿದ್ದಾ ನೆಂದೂ ಅರ್ಜುನನು ಯುದ್ಧಕ್ಕೆ ಬರುತ್ತಿದ್ದಾನೆಂದೂ ತಿಳಿಸಿದರು. ಅಣ್ಣನು ಆರೋಗ್ಯವಾಗಿದ್ದಾನೆಂದು ಕೇಳಿದ ಕೂಡಲೇ ಆ ಕುರಿತೇ ಈ ವರೆಗೂ ಕಳವಳ ಪಡುತ್ತಿದ್ದ ಭೀಮನಿಗೆ ಅತ್ಯಾನಂದವಾಗಿಬಿಟ್ಟಿತು. ಅಂತಹ ಉತ್ತಮ ಸಮಾಚಾರ ವನ್ನು ತಿಳಿಸಿದ ದೂತರಿಗೆ ತಾನು ತನ್ನ ಮೈಯಲ್ಲಿ ಧರಿಸಿದ್ದ ಆಭರಣಗಳನ್ನೇ ಕಳಚಿ ಉಡುಗೊರೆಯಾಗಿ ಕೊಟ್ಟುಬಿಟ್ಟನು.

ರಮೆ:– .... ನೋಡಿ. ಅಣ್ಣನಿಗಾಗಿ ಭೀಮ ....

ಮುರಳಿ:– ನೋಡಿದೆ, ಕೇಳು. ಅಷ್ಟರಲ್ಲಿ ಅರ್ಜುನನೂ ಬಂದು ಭೀಮನ ಸಹಾಯಕ್ಕೆ ನೆರವಾಗಿ ನಿಂತನು. ಭೀಮನ ಉತ್ಸಾಹ ಇಮ್ಮಡಿಯಾಯಿತು. ಅಣ್ಣನ ಕ್ಷೇಮ, ತಮ್ಮನ ನೆರವು. ಪ್ರಚಂಡವಾಗಿ ಸಿಂಹನಾದ ಮಾಡುತ್ತಾ ಅವನು ಶತ್ರು ಸೈನ್ಯದೊಳಗೆ ನುಗ್ಗಿದನು. ಕೌರವ ಸೈನ್ಯವು ನಡುಗಿತು. ಈ ರೀತಿ ತನ್ನ ಪರಮ ವೈರಿಗಳಾದ ಕೌರವರು ಮೆಚ್ಚುವಂತೆ, ಅವರು ಬಹಿರಂಗವಾಗಿ ತಮ್ಮ ಆ ಮೆಚ್ಚುಗೆಯನ್ನು ವ್ಯಕ್ತಪಡಿಸುವಂತೆ ಹಾಗೂ ಇಡಿಯ ಕೌರವ ಸೈನ್ಯ ಭಯ ದಿಂದ ನಡುಗುವಂತೆ ಭೀಮನು ಆ ದಿನ ದುಸ್ಸಹನಾಗಿ ಹೋರಾಡುತ್ತಿರಲು ದುಶ್ಶಾಸನನು ಅವನಿಗೆ ಬಲವಾದ ಯುದ್ಧವನ್ನು ಕೊಡಲು ನಿಶ್ಚಯಿಸಿ ತನ್ನ ಅಣ್ಣ ನಿಂದ ವೀಳೆಯವನ್ನು ಪಡೆದು ಮಹತ್ತರವಾದ ಒಂದು ಸೈನ್ಯವನ್ನು ಒಡಗೊಂಡು ಬಹಳ ವೈಭವದಿಂದ ಹೊರಟು ಬಂದನು. ಇದನ್ನು ನೋಡಿ ಭೀಮನೂ ಮುಂದುವರಿದನು. ತನ್ನ ಸುತ್ತಲಿನ ಸೈನ್ಯವನ್ನು ನೆಲಸಮ ಮಾಡುತ್ತಿದ್ದ ಭೀಮ ನನ್ನು ಕೌರವ ಪಕ್ಷದ ಅನೇಕ ವೀರರು ಮುತ್ತಿದರು. ಭೀಮನ ಸಹಾಯಕ್ಕೆಂದು

ನಕುಲಾದಿಗಳು ಮುಂದೆ ಬಂದರು. ಭೀಮನಿಗೆ ಅವರು ಯಾರ ಸಹಾಯದ ಆವಶ್ಯಕತೆಯೂ ಇಲ್ಲವೆಂದು ತಿಳಿಸಿದ ಅರ್ಜುನನು ಅವರನ್ನೆಲ್ಲ ತಡೆದು ನಿಲ್ಲಿಸಿದನು.

ಭೀಮನು ಪ್ರಳಯ ಕಾಲದ ಸಿಡಿಲಿನಂತೆ ಗರ್ಜಿಸುತ್ತಾ ಕೌರವ ಸೈನ್ಯವನ್ನು ಧೂಳೀ ಪಟ ಮಾಡುತ್ತಾ ದುರ್ಯೋಧನನ ಅನೇಕ ತಮ್ಮಂದಿರನ್ನು ಕೊಂದನು. ಈ ವರೆಗೆ ಧೃತರಾಷ್ಟ್ರನ ತೊಂಭತ್ತೆಂಟು ಮಂದಿ ಮಕ್ಕಳೂ ಭೀಮನಿಂದ ಕೊಲ್ಲಲ್ಪಟ್ಟಂತಾ ಗಿತ್ತು. ಇಂತಹ ಪ್ರಚಂಡ ಭೀಮನನ್ನು ಎದುರಿಸುತ್ತಿದ್ದ ದುಶ್ಶಾಸನನ ಸಹಾಯ ಕ್ಕೆಂದು ಅಗಾಧವಾದ ಒಂದು ಬಲವನ್ನು ಕಳುಹಿಸಲಾಯಿತು. ಭೀಮನು ಇದನ್ನೂ ದಿಕ್ಕಾಪಾಲಾಗಿ ಚದುರಿಸಿ ದುಶ್ಶಾಸನನನ್ನು ಮೂದಲಿಸಿ ಯುದ್ಧಕ್ಕೆ ಕರೆದನು. ಭೀಮನಿಗೂ ದುಶ್ಶಾಸನನಿಗೂ ಯುದ್ಧ ಕೈಗಟ್ಟಿತು. ಅನೇಕ ಆಯುಧಗಳಲ್ಲಿ ಹೊಡೆದಾಡಿದ ಮೇಲೆ, ಗದೆಗಳನ್ನೂ ಹಿಡಿದು ಯುದ್ಧ ಮಾಡಿದ ಅವರು ಕೊನೆಗೆ ಮಲ್ಲಯುದ್ಧವನ್ನಾರಂಭಿಸಿದರು. ಸ್ವಲ್ಪ ಸಮಯ ಇಬ್ಬರೂ ಅತ್ಯಂತ ವಿಚಕ್ಷಣತೆಯಿಂದ ಹೋರಾಡಿದರು. ಬರಬರುತ್ತಾ ದುಶ್ಶಾ ಸನನು ಶಕ್ತಿಯನ್ನು ಕಳೆದುಕೊಳ್ಳುತ್ತಿದ್ದನು. ಭೀಮನು ಒಮ್ಮೆಗೇ ಅವನ ಮುಂಪಲೆಯನ್ನು ಹಿಡಿದೆಳೆದು ಅವನನ್ನು ನೆಲಕ್ಕೆ ಕೆಡವಿ ಅವನ ಪಕ್ಕೆಗಳನ್ನು ಗುದ್ದಿ ಗಜರಾಜನನ್ನು ಸೀಳುವ ಮೃಗರಾಜನಂತೆ, ಹಿರಣ್ಯಕಶಿಪುವನ್ನು ಸೀಳಿದ ನರಸಿಂಹನಂತೆ ಶತ್ರುವಿನ ದೇಹದಿಂದ ಹರಿಯುತ್ತಿದ್ದ ರಕ್ತವನ್ನು ನೋಡು ನೋಡುತ್ತಾ ಮದವೇರುತ್ತಿದ್ದನು. ಸಾಗರೋಪಮವಾದ ಯಾವ ತನ್ನ ಶಕ್ತಿಯು, ಸೇಡು ತೀರಿಸಬೇಕೆಂಬ ಯಾವ ತನ್ನ ಮನೋಭಿಲಾಷೆಯು ವರ್ಷ ವರ್ಷಗಳಿಂದ ಈ ವರೆಗೆ ತನ್ನ ಅಣ್ಣನಿಂದ ಅದುಮಲ್ಪಟ್ಟಿದ್ದಿತೋ ಅದು ಈಗ ಹೊರ ಚೆಲ್ಲಲು ಅವಕಾಶವನ್ನು ಪಡೆದುಕೊಂಡು ಕಟ್ಟೆಯೊಡೆದು ಹೊರಬರುವಾಗ ಭೀಕರ ಉದ್ವೇಗದ ರೂಪವನ್ನು ಧರಿಸಿ ಮೇರೆದಪ್ಪಿ ಉಕ್ಕಿ ಹರಿದು ಸಹಜತೆಯ ಗಡಿ ಯನ್ನು ದಾಟಿ ನೆಗೆದು ಉತ್ಪ್ರೇಕ್ಷೆಯೆನ್ನುವಂತೆ ಭೀಕರಾಕಾರವನ್ನು ತಳೆಯಿತು. ಈ ವಿಲಕ್ಷಣ ಸನ್ನಿವೇಶದಿಂದ ಕಲಕಲ್ಪಟ್ಟ ಆವನ ಮನಸ್ಸಿನ ಆಳದಲ್ಲಿ ಹುದು ಗಿದ್ದ ಬಲವಾದ ಭಾವನೆಗಳು ಹೊರಗೆ ಚೆಲ್ಲಲ್ಪಟ್ಟು ಅವನ ಕಣ್ಣ ಮುಂದೆ ಬೃಹದಾ ಕಾರ ತಳೆದು ನಿಂತವು. "ಎಲವೋ ದ್ರೋಹಿ, ತುಂಬಿದ ಸಭೆಯ ಮಧ್ಯದಲ್ಲಿ ಕೇವಲ ಅಬಲೆಯನ್ನು, ನಮ್ಮೈವರ ಧರ್ಮಪತ್ನಿಯನ್ನು, ನಿಮ್ಮ ಮನೋವಿಕಾರ ಗಳನ್ನು ಪ್ರದರ್ಶಿಸುವಂತೆ ಮದದಿಂದ ಮುಡಿ ಹಿಡಿದು ಎಳೆದಾಡಿದಿರಲ್ಲವೆ? ಆ ನಿನ್ನ ಪೌರುಷವನ್ನು ಈಗ ತೋರಿಸು. ನಮ್ಮ ಸರ್ವಸ್ವವನ್ನೂ ನೀವು ಕಿತ್ತುಕೊಂಡು ನಾವು ನಿರ್ಗತಿಕರಾಗಿ ಕಾಡನ್ನು ಕುರಿತು ಹೋಗುತ್ತಿದ್ದಾಗ ನಮ್ಮನ್ನು ಎತ್ತು ಗಳೆಂದು ಕರೆದು ಬೆರಳು ತೋರಿಸಿ ಅಣಕವಾಡಿದೆಯಲ್ಲವೆ? ಆ ನಿನ್ನ ಸೊಕ್ಕು ಈಗ ಎಲ್ಲಿಗೆ ಹೋಯಿತು? ನಿನ್ನ ಅಣ್ಣನು ಮೆಚ್ಚಿಕೊಳ್ಳುವ ರೀತಿಯಲ್ಲಿ ನಾನು

ನನ್ನ ಪ್ರತಿಜ್ಞೆಯನ್ನು ಪೂರೈಸುತ್ತಿದ್ದೇನೆ" ಎಂದು ಹೇಳುತ್ತಿದ್ದಂತೆಯೇ ಭೀಮನು ಭೀಷಣನಾದನು. ಆಗಲೂ ದುಶ್ಶಾಸನನು ತಾನು ದ್ರೌಪದಿಯ ಮುಡಿಯನ್ನು ಹಿಡಿದು ಎಳೆದ ತನ್ನ ಕೈಯನ್ನು ಎತ್ತಿ ತೋರಿಸಲು ಭೀಮನು ಕ್ರೋಧದಿಂದ ಆ ಕೈಯನ್ನು ಮುರಿದೊಗೆದನು. ಪ್ರತಿಕ್ರಿಯೆಯ ಸೆಳೆತಕ್ಕೆ ಭೀಮನು ಸಂಪೂರ್ಣ ವಾಗಿ ವಶನಾಗಿದ್ದನು. ಭೂಗರ್ಭದಲ್ಲಿ ಹುದುಗಿದ್ದ ಅದಮ್ಯ ಶಕ್ತಿಯು ಒಮ್ಮೆಗೇ ಭೂಮಿಯ ನೆತ್ತಿಯನ್ನು ಭೇದಿಸಿ ಹೊರಗೆ ಭೀಕರವಾಗಿ ಚೆಲ್ಲಿಕೊಳ್ಳುವಂತೆ ಅವನ ಕ್ರೋಧವು ಸ್ಫೋಟಗೊಂಡು ಕಾರ್ಯಾಚರಣೆಯಲ್ಲಿ ತೊಡಗಿತ್ತು. ಭೀಮನು ದುಶ್ಶಾಸನನ ಎದೆಯನ್ನು ಒಡೆದನು. ಚಿಮ್ಮುತ್ತಿದ್ದ ಬಿಸಿ ರಕ್ತ ವನ್ನು ಬೊಗಸೆಯಲ್ಲಿ ತುಂಬಿಕೊಂಡು ಕುಡಿದನು. "ಪತಿವ್ರತೆಯನ್ನು ಕೆಣಕಿದ ಫಲವು ಲಭಿಸಿತೇ, ಹೇಳು" ಎಂದು ಬೊಬ್ಬಿರಿದನು. ಎರಡು ಕಡೆಯ ಸೈನ್ಯವೂ ಕಲ್ಲಿನಲ್ಲಿ ಕೆಡೆದಿಟ್ಟಂತೆ, ಧ್ಯಾನಪರವಾಗಿದ್ದಂತೆ, ಮಂತ್ರಮುಗ್ಧವಾಗಿದ್ದಂತೆ ತಟಸ್ಥ ವಾಗಿ ನಿಂತು ಈ ಭೀಷಣ ದೃಶ್ಯವನ್ನು ನೋಡುತ್ತಿದ್ದಿತು. ಯಾರೂ ಏನೂ ಮಾಡುವಂತಿರಲಿಲ್ಲ, ಮಾತನಾಡುವಂತಿರಲಿಲ್ಲ. ಕೌರವ ಪಕ್ಷದ ಯಾವ ವೀರನೇ ಆದರೂ ಭೀಮನ ಬಳಿ ಸುಳಿಯುವಂತಿರಲಿಲ್ಲ. ಮೂರು ಲೋಕದ ಪ್ರಳಯವನ್ನು ನಿರ್ಧರಿಸಿ ಅದಕ್ಕೆ ಬೇಕಾದ ರುದ್ರತೆಯನ್ನು ಆವಾಹಿಸಿಕೊಳ್ಳಲು ರುದ್ರತಾಂಡವ ನೃತ್ಯದಲ್ಲಿ ತೊಡಗಿರುವ ಮಹಾರುದ್ರನ ಬಳಿ ಸಾರುವ ಸಾಧ್ಯತೆಯ ಯೋಚನೆ ಕೂಡ ಯಾರಲ್ಲಿಯೂ ಹೇಗೆ ಸುಳಿಯಲಾರದೊ, ರೌದ್ರಾವತಾರವನ್ನು ತಳೆದಿದ್ದ ಭೀಮನ ಬಳಿ ಸಾರುವ ಯೋಚನೆ ಕೂಡ ಅದೇ ರೀತಿಯಲ್ಲಿ ಕೌರವ ಬಲದ ಯಾರಿಗೂ ಬರುವಂತಿರಲಿಲ್ಲ. ಅಂತಹ ಉನ್ಮಾದಾವಸ್ಥೆಯನ್ನು ತಾಳಿದ್ದ ಭೀಮನು ತನ್ನ ನಿಜಸ್ಥಿತಿಯಿಂದ ಹೊರತಾದವನಾಗಿ ಹೀಗೆಂದು ಕೂಗಿದನು – "ಎಲವೋ ಗುರುಪುತ್ರ, ನೀನು ಮಹಾಶೂರನೆಂಬ ಗರ್ವದ ಗಿರಿಯನ್ನು ಏರಿದ್ದೆಯಲ್ಲವೆ ? ನಿನ್ನ ಒಡೆಯನ ತಮ್ಮನ ಈ ಸಾವು ನಿನಗೆ ಹಿತವೆನಿಸಿದೆಯೇನು ? ನನ್ನೊಂದಿಗೆ ಯುದ್ಧ ಮಾಡಲು ಹೆದರಿದ್ದೀಯೇನು ? ಎಲವೋ ಕರ್ಣ. ನೀನು ನಿನ್ನ ದಣಿಯ ಶತ್ರುಗಳ ಮೃತ್ಯು ಎಂದುಕೊಂಡಿದ್ದವನಲ್ಲವೆ ? ಕೌರವ ಕುಲದ ಆಧಾರ ಸ್ತಂಭ ಎಂದು ಹೊಗಳಿಸಿಕೊಂಡಿದ್ದವನಲ್ಲವೆ ? ನನ್ನ ಕೈಯಿಂದ ದುಶ್ಶಾಸನನನ್ನು ಬಿಡಿಸಿ ದರೆ ನಿನಗೆ ಅಪಕೀರ್ತಿ ಬರುತ್ತದೇನು ? ಹೆಸರು ಹಿಡಿದು ಕರೆದರೂ ಯುದ್ಧಕ್ಕೆ ಬರಲೊಲ್ಲೆಯೇಕೆ ? ದುಶ್ಶಾಸನನ ಜೀವ ಇನ್ನೂ ಇದೆ. ಬಿಡಿಸು ಬಾ. ಎಲವೋ ಬಡ ದುಶ್ಶಾಸನ. ಕರ್ಣ, ಅಶ್ವತ್ಥಾಮ, ಮೊದಲಾದ ನಿನ್ನ ಕಡೆಯ ಮಹಾ ವೀರರುಗಳು ನಿನ್ನನ್ನು ನನಗೆ ಒಪ್ಪಿಸಿ ಕೊಟ್ಟಿದ್ದಾರೆ. ಅವರನ್ನೆಲ್ಲ ನಂಬಿ ನಮ್ಮೊಂದಿಗೆ ಯುದ್ಧ ಹೂಡಿದ ನೀವು ಅವಿವೇಕಿಗಳಲ್ಲವೇನೊ ? ನಿನ್ನ ಪ್ರಾಣವೀಗ ನನ್ನ ಹಿಡಿಯೊಳಗಿದೆ. ನಿಮ್ಮವರು ಯಾರೂ ನಿನ್ನನ್ನು ರಕ್ಷಿಸಲು ಮುಂದೆ ಬರುತ್ತಿಲ್ಲ".

ಹೀಗೆ ಖಂಡಪರಶುವಿನಂತೆ ತೋರುತ್ತಿದ್ದ ಭೀಮನನ್ನು ನೋಡಿ ಅರ್ಜುನನಿಗೆ ರೋಮಾಂಚನವಾಯಿತು. ಭೀಮನು ದ್ರೌಪದಿಗೆ ಹೇಳಿ ಕಳುಹಿಸಿದನು. ಅವಳು ಬಂದಳು. ಒಮ್ಮೆಗೇ ಭೀಮನ ವಿಲಕ್ಷಣ ರೂಪ, ಮುಖಮುದ್ರೆಗಳನ್ನು ನೋಡಿ ಅವನ ಬಳಿ ಸಾರಲು ಆ ಬೆಂಕಿಯ ಮಗಳು ಕೂಡ ಅಂಜಿ ದೂರದಲ್ಲಿಯೇ ನಿಂತುಬಿಟ್ಟಳು. ಹಿಂತಿರುಗಿ ನೋಡಿದ ಭೀಮನು ಅವಳನ್ನು ಹತ್ತಿರಕ್ಕೆ ಕರೆದನು. ಭೀಮನ ಕೈಯಲ್ಲಿ ಸಿಕ್ಕಿರುವ ದುಶ್ಶಾಸನನನ್ನು ನೋಡಿದ ದ್ರೌಪದಿಗೆ ಕೃತಜ್ಞತೆ, ಗೌರವ, ಆನಂದಗಳು ಉಕ್ಕಿಬಂದು "ಮೂರು ಲೋಕದ ಗಂಡನಾದ ನೀನು ನನ್ನ ಮನೋರಥವನ್ನು ನೆರವೇರಿಸಿ ಸಲಹಿದೆ" ಎನ್ನುತ್ತಾ ಭೀಮನಿಗೆ ಭಕ್ತಿಯಿಂದ ನಮಸ್ಕರಿಸಿದಳು. ಭೀಮನು ಹೆಮ್ಮೆಯಿಂದ ಅವಳನ್ನು ಕರೆದು ಕುಳ್ಳಿರಿಸಿಕೊಂಡನು. ಒಂದು ತೊಡೆಯಲ್ಲಿ ದ್ರೌಪದಿಯನ್ನೂ, ಇನ್ನೊಂದರಲ್ಲಿ ದುಶ್ಶಾಸನನ ಛಿನ್ನವಾದ ದೇಹವನ್ನೂ ಇಟ್ಟುಕೊಂಡು ದುಶ್ಶಾಸನನ ರಕ್ತದಲ್ಲಿ ದ್ರೌಪದಿಯ ಮುಡಿಯನ್ನು ಅಭಿಷೇಕ ಮಾಡಿ ತನ್ನ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದನು. ಸಂತೋಷಾಧಿಕ್ಯದಿಂದ ದ್ರೌಪದಿಯು ಕೂಡ ಮೈ ಮರವೆ ಪಡೆದಳು. ಭೀಮನು ಮುಖವನ್ನೆತ್ತಿ ಮೂರುಲೋಕವನ್ನು ಕುರಿತು "ನೂರು ಕೌರವರ ಹನನ, ದುಶ್ಶಾಸನನ ರಕ್ತಪಾನ. ಇವು ನನ್ನ ಪ್ರತಿಜ್ಞೆಗಳು. ಒಂದನ್ನು ತೀರಿಸಿದ್ದೇನೆ. ಇನ್ನೊಂದು ಉಳಿದಿದೆ. ಅದನ್ನೂ ತೀರಿಸುತ್ತೇನೆ" ಎಂದು ಬೊಬ್ಬಿರಿದು ಅಲ್ಲಿಂದೆದ್ದು ಈಚೆಗೆ ಬಂದು ಶುದ್ಧೋದಕದಿಂದ ಕೈಕಾಲು ಮುಖಗಳನ್ನು ತೊಳೆದು ಬೇರೆ ಬಟ್ಟೆಯನ್ನುಟ್ಟು ವೀಳೆಯವನ್ನು ಮೆದ್ದು ರಥವನ್ನೇರಿ ಧನುಸ್ಸನ್ನು ಧರಿಸಿ "ದುರ್ಯೋಧನನೆಲ್ಲಿ ? ಕರ್ಣಾದಿಗಳೆಲ್ಲಿ ? ಯುದ್ಧ ಮಾಡಲಾರದಿದ್ದರೆ ದುರ್ಯೋಧನನು ಬಂದು ಯುಧಿಷ್ಠಿರನ ಕಾಲಿಗೆ ಬೀಳಲಿ" ಎಂದು ಗರ್ಜಿಸುತ್ತಾ ಮುನ್ನುಗ್ಗಲು ಶತ್ರುಗಳು ಅವನ ಸ್ವರವನ್ನು ಕೇಳಿಯೇ ಬೆಚ್ಚಿದರು ; ಕೈಯಲ್ಲಿದ್ದ ಆಯುಧಗಳನ್ನು ಬಿಸುಟು ಮುದುಡಿ ಕುಳಿತರು; ರಥಗಳ ಛತ್ರ, ಧ್ವಜಗಳನ್ನೆಲ್ಲ ಕಳಚಿ ಹಾಕಿ ಕುಳಿತರು. ಕೌರವ ಸೈನ್ಯದಲ್ಲಿ ಎಲ್ಲೆಲ್ಲಿಯೂ ಅಪಜಯ ಸ್ತ್ರೀಯ ವ್ಯಾಪಕ ನಾಟ್ಯ ಆರಂಭವಾಗಿತ್ತು. ಸಾಹಸಿಗಳೆನಿಸಿಕೊಂಡವರೇ ದಾರಿ ಸಿಕ್ಕಿದ ಕಡೆ ನುಗ್ಗಿ ಓಡಿದರು. ಸೇನಾಧಿಪತಿಯಾಗಿದ್ದ ಕರ್ಣನೇ ಭಯಕ್ಕೆ ತುತ್ತಾಗಿದ್ದನು. ಶಲ್ಯನು ವಿರೋತ್ತೇಜಕವಾದ ಮಾತುಗಳಿಂದ ಅವನನ್ನು ಹುರಿದುಂಬಿಸುತ್ತಿದ್ದನು. ಹೆದರಿ ಬೆಂಡಾಗಿದ್ದ ಕೌರವ ಸೈನ್ಯದ ನಡುವಿನಿಂದ ಕರ್ಣನ ಮಗನಾದ ವೃಷಸೇನನು ಹೊರಟು ಸೈನ್ಯ ಸಮೇತನಾಗಿ ಮುಂದೆ ಬಂದನು. ಅವನು ಇನ್ನೂ ಬಾಲಕನೆಂದು ಭಾವಿಸಿ ಭೀಮನು ಅವನನ್ನು ತಾತ್ಸಾರದಿಂದ ಕಾಣಲು ಅವನು ಭೀಮನ ರಥವನ್ನೇ ಹುಡಿ ಮಾಡಿ ಎಲ್ಲರನ್ನೂ ನೋಯಿಸಿ ದುಸ್ಸಹನಾಗತೊಡಗಿದನು. ಕೊನೆಗೆ ಅರ್ಜುನ

ನೊಂದಿಗೆ ಘೋರವಾಗಿ ಯುದ್ಧ ಮಾಡಿ ಅವನಿಂದ ಕೊಲ್ಲಲ್ಪಟ್ಟನು. ಇದರಿಂದ ಶೋಕತಪ್ತನಾದ ಕರ್ಣನು ರೋಷಾವೇಶದಿಂದ ಅರ್ಜುನನನ್ನು ಎದುರಿಸಿದನು. ಅಣ್ಣನಿಗೆ ಕೊಟ್ಟಿರುವ ಮಾತಿನ ಪ್ರಕಾರ ಕರ್ಣನನ್ನು ಕೊಲ್ಲಲೇಬೇಕೆಂದು ಹೊರಟು ಬಂದಿರುವ ಅರ್ಜುನನೂ, ಈಗ ತಾನೇ ತನ್ನ ಮಗನನ್ನು ಕೊಂದಿರುವ ಅರ್ಜುನನನ್ನು ಕೊಲ್ಲಲೇಬೇಕೆಂದು ನಿರ್ಧರಿಸಿದ ಕರ್ಣನೂ ಒಬ್ಬರನ್ನೊಬ್ಬರು ಎದುರಿಸಿದರು. ಇಬ್ಬರೂ ಒಬ್ಬಳೇ ತಾಯಿಯ ಮಕ್ಕಳು. ಅರ್ಜುನನು ಹೋರಾಡುತ್ತಿದ್ದುದು ತನ್ನ ಪರಮ ವೈರಿಯೊಂದಿಗೆ. ಆದರೆ ಕರ್ಣನು ಎದುರಿಸುತ್ತಿದ್ದುದು ತನ್ನ ಒಡಹುಟ್ಟಿದ ತಮ್ಮನನ್ನು. ಇಬ್ಬರೂ ಸಮಾನವಾಗಿ ಕಾದಾಡಿದರು.

ಈ ನಡುವೆ ಅದೇಕೋ ಅಶ್ವತ್ಥಾಮನು ದುರ್ಯೋಧನನಲ್ಲಿಗೆ ಬಂದನು. ಯುದ್ಧದ ವಿವರಗಳನ್ನು ದುರ್ಯೋಧನನು ಅವನಲ್ಲಿ ಕೇಳುವಾಗ ಅವನು ಕರ್ಣನ ಅಸಾಮಾನ್ಯವಾದ ಶೌರ್ಯವನ್ನು ವರ್ಣಿಸಿ ದುರ್ಯೋಧನನು ಕೇವಲ ನಿರ್ಭಾಗ್ಯವಂತನೆಂದೂ ಆದುದರಿಂದ ಕರ್ಣನಂತಹ ವೀರರನ್ನೂ ಅವನು ವಿಧಿವಶ ಮಾಡಬಾರದೆಂದೂ ಈಗಲಾದರೂ ಪಾಂಡವರೊಡನೆ ಸಂಧಿ ಮಾಡಿಕೊಳ್ಳಬೇಕೆಂದೂ ಸೂಚಿಸಿದನು. ದುರ್ಯೋಧನನು "ಗುರುಪುತ್ರಾ, ನನ್ನ ಸಹೋದರ ದುಶ್ಶಾಸನನ ಕರುಳನ್ನು ಬಗಿದು ರಣರಂಗದಲ್ಲಿ ಅವನ ರಕ್ತದ ಓಕುಳಿಯಾಡಿದ ಆ ಭೀಮನೊಂದಿಗೆ ನಾವು ಸಂಧಿ ಮಾಡಿಕೊಳ್ಳುವದಿದೆಯೆ! ಸಾಧ್ಯವೇ ಇಲ್ಲ. ವೃಷಸೇನನನ್ನು ಕೊಂದ ಅರ್ಜುನನನ್ನು ತೀರಿಸಿ, ಭೀಮನ ಹೊಟ್ಟೆಯಿಂದ ನನ ತಮ್ಮನನ್ನು ಹೊರಡಿಸಿ ಅನಂತರ ನಾನು ಸಂಧಿ ಮಾಡಿಕೊಳ್ಳುತ್ತೇನೆ" ಎಂದು ಸ್ಪಷ್ಟವಾಗಿ ಹೇಳಿದನು. ಅಶ್ವತ್ಥಾಮನು ಹಿಂತಿರುಗಿದನು.

ಈ ಕಡೆ ಕರ್ಣಾರ್ಜುನರ ಯುದ್ಧವು ಘೋರವಾಗುತ್ತ ಬಂದಿತು. ಇಬ್ಬರೂ ಮಂತ್ರಾಸ್ತ್ರಗಳನ್ನೂ, ಪ್ರತ್ಯಸ್ತ್ರಗಳನ್ನೂ ಪ್ರಯೋಗಿಸುತ್ತಿದ್ದರು. ಒಮ್ಮೆ ಅರ್ಜುನನ ಒಂದು ಬಾಣದಿಂದ ಕರ್ಣನ ರಥವು ನೂರು ಯೋಜನ ಹಿಂದಕ್ಕೆ ಸರಿಸಲ್ಪಟ್ಟಿತು. ಇದರಿಂದ ಒಮ್ಮೆಗೆ ಖಿನ್ನನಾದ ಕರ್ಣನು ಅತೀವ ಸಿಟ್ಟಿನಿಂದ ಹೊಡೆದು ಅರ್ಜುನನ ರಥವನ್ನು ಒಂದು ಬಿಲ್ಲಳತೆಯಷ್ಟು ಹಿಂದೆ ಸರಿಸಿದನು. ಇದನ್ನು ಕಂಡ ಕೃಷ್ಣನು ಕರ್ಣನನ್ನು ತುಂಬ ಹೊಗಳಿ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದನು. ಅರ್ಜುನನಿಗೆ ವಿಪರೀತ ಸಿಟ್ಟು ಬಂದಿತು.

ರಮೆ:— ಅದೆಂಥ ಸಿಟ್ಟು! ಕರ್ಣನ ರಥವನ್ನು ಅವನು ಅದೆಷ್ಟೋ ದೂರ ಹಾರಿಸಿದಾಗ ಅವನು ಇವನ ರಥವನ್ನು ಒಂದು ಬಿಲ್ಲಳತೆಯಷ್ಟು ಸರಿಸಿಬಿಟ್ಟರೆ ಅದಕ್ಕೂ ಸಿಟ್ಟು ಮಾಡಿಕೊಳ್ಳಬೇಕೆ? ಒಟ್ಟಿನಲ್ಲಿ ಯುದ್ಧ ಅನ್ನಿ. ಸುಮ್ಮ ಸುಮ್ಮನಾದರೂ ಸಿಟ್ಟು ಮಾಡಿಕೊಂಡರೆ ತಾನೆ ಎದುರಾಳಿಯನ್ನು ಚೆನ್ನಾಗಿ ಹೊಡೆಯಲು ಸಾಧ್ಯ. ಅಲ್ಲವೆ?

ಮುರಳಿ:– ಹೀಗೆ ಕೃಷ್ಣನ ಮೇಲೆ ಸಿಟ್ಟುಗೊಂಡ ಅರ್ಜುನನು........

ರಮೆ:– ಏನು ಈ ದಿನ ಇಷ್ಟು ಬೇಗ ನಿದ್ರೆ?

ಮುರಳಿ:– ನಿದ್ರೆ ಬರುತ್ತದೇನು? ಹಾಗಾದರೆ ನಾಳೆ ಮುಂದುವರಿಸೋಣ. ಈಗ ಹೋಗಿ ಊಟ ಮಾಡಿ ಮಲಗೋಣ.

ರಮೆ:– ನನಗಲ್ಲ ನಿದ್ರೆ ಬರುತ್ತಿರುವದು! ನಿಮಗೇಕೆ ಇಷ್ಟು ಬೇಗ ನಿದ್ರೆ ಬರುತ್ತಿರುವದು ಎಂದು ಕೇಳಿದೆ.

ಮುರಳಿ:– ನನಗೆ ನಿದ್ರೆ ಬರುತ್ತಿದೆ ಎಂದು ಯಾರು ಹೇಳಿದುದು?

ರಮೆ:– ನಾನು.

ಮುರಳಿ:– ಏಕೆ?

ರಮೆ:– ಕೃಷ್ಣನಿಗೂ ಕರ್ಣನಿಗೂ ವ್ಯತ್ಯಾಸ ಕಾಣಿಸದಿರಬೇಕಾದರೆ ನೀವು ಒಂದೋ ಅಮಲಿನಲ್ಲಿರಬೇಕು. ಇಲ್ಲವೇ ನಿಮ್ಮ ತಲೆ ಕೆಟ್ಟಿರಬೇಕು. ಅಥವಾ ಪ್ರಬಲವಾದ ನಿದ್ರೆಗೆ ಒಳಗಾಗಿರಬೇಕು. ಮೊದಲಿನ ಎರಡೂ ಇಲ್ಲ. ಹಾಗಾಗಿ ನಿದ್ರೆಯ ಪ್ರಭಾವಕ್ಕೇ ನೀವು ಒಳಗಾಗಿರಬೇಕು ಎಂದು ಊಹಿಸಿದೆ.

ಮುರಳಿ:– ಕೃಷ್ಣನಿಗೂ ಕರ್ಣನಿಗೂ ವ್ಯತ್ಯಾಸ ಕಾಣಿಸದಂತೆ ನಾನು ಏನು ಹೇಳಿದೆ?

ರಮೆ:– ಕರ್ಣ– ಅರ್ಜುನರು ಅಷ್ಟು ಘೋರವಾಗಿ ಯುದ್ಧ ಮಾಡುತ್ತಿರುವಾಗ ಅರ್ಜುನನಿಗೆ ಸಿಟ್ಟು ಬಂದಿತು ಎಂದರೆ ತನ್ನ ಶತ್ರುವಾದ ಕರ್ಣನ ಮೇಲೆ ಅದು ಬಂದುದೊ, ಅಥವಾ ತನ್ನ ಸಾರಥಿಯಾದ ಕೃಷ್ಣನ ಮೇಲೆ ಬಂದುದೊ?

ಮುರಳಿ:– ಇಲ್ಲಿ ಅವನಿಗೆ ಸಿಟ್ಟು ಬಂದುಬಿಟ್ಟುದು ತನ್ನ ಸಾರಥಿಯಾದ ಕೃಷ್ಣನ ಮೇಲೆ ಎಂದು ನಾನು ಹೇಳಬಾರದೇನು?

ರಮೆ:– ಯುದ್ಧದಂತಹ ಗಂಭೀರ ಸನ್ನಿವೇಶವನ್ನು ವಿವರಿಸುವಾಗಲಾದರೂ ನೀವು ಪಾಪದ ಅರ್ಜುನನನ್ನು ಗೇಲಿ ಮಾಡದೆ ಅವನಿಗೆ ಸಿಕ್ಕಬೇಕಾದ ಗೌರವವನ್ನು ಕೊಡುವದು ಒಳ್ಳೆಯದು. ಏನೇ ಆದರೂ ಅವನು ಕರ್ಣನಂತಹ ಅಸಮಾನ ವೀರನೊಂದಿಗೆ ಶಕ್ತಿಮೀರಿ ಹೋರಾಡುತ್ತಿರುವದು ಸುಳ್ಳಲ್ಲವಷ್ಟೆ!

ಮುರಳಿ:– ಅಯ್ಯೋ ಗ್ರಹಚಾರವೆ! ನಿನ್ನ ಅರ್ಜುನನನ್ನು ನಾನೆಲ್ಲಿ ಗೇಲಿ ಮಾಡಿದೆ ರಮಾ? ಅವನು ನಿಜವಾಗಿಯೂ ಕೃಷ್ಣನೊಂದಿಗೆಯೇ ಸಿಟ್ಟು ಮಾಡಿಕೊಂಡುದು.

ರಮೆ:–ಕೃಷ್ಣನೊಂದಿಗೆ ? ಸಿಟ್ಟು ಮಾಡಿಕೊಂಡುದು ? ಅವನ ಮೆದುಳು ಹೀಗೆ ಆಗಾಗ ಕೆಟ್ಟು ಹೋಗುತ್ತಿತ್ತು ಎಂದು ವ್ಯಾಸರು ಎಲ್ಲಿಯೂ ಒಂದು ಕಡೆಯೂ ಹೇಳಿಲ್ಲವೇನು ?

ಮುರಳಿ:– ನೀನಾದರೂ ಅವನನ್ನು, ಪಾಪ, ಏಕೆ ಹಾಗೆ ಹಳಿಯುತ್ತಿ ? ನನಗಾದರೆ ಹೇಳಿಬಿಟ್ಟೆ ? ನೀನು ಅವನನ್ನು ಬಾಯಿಗೆ ಬಂದಂತೆ ಹೇಳುವದು ಮಾತ್ರ ಧರ್ಮವೊ ?

ರಮೆ:– ಪ್ರಚಂಡ ಯುದ್ಧದ ಭರದ ನಡುವೆಯೇ ಅವನು ಕೃಷ್ಣನಲ್ಲಿ ಕೋಪಗೊಂಡ ಎನ್ನುವ ಅವನ ಮೂರ್ಖತನಕ್ಕಾಗಿ ಹಾಗೆ ಹೇಳಿದೆ.

ಮುರಳಿ:– ಮೂರ್ಖತನ, ಜಾಣತನಗಳನ್ನು ನಿರ್ಧರಿಸುವವರು ಯಾರು ? ತಾನು ಕೊಲ್ಲಬೇಕೆಂದಿರುವ ಶತ್ರುವನ್ನು ತನ್ನ ಸಾರಥಿಯೇ ಹೊಗಳಲು ಪ್ರಾರಂಭಿಸಿದರೆ ಯಾರಿಗೆ ತಾನೆ ಸಿಟ್ಟು ಬರುವದಿಲ್ಲ ?

ರಮೆ:– ಹಾಗೆ ! ಸರಿ. ಆಮೇಲೆ ?

ಮುರಳಿ:– ಕೃಷ್ಣನಲ್ಲಿ ಸಿಟ್ಟುಗೊಂಡ ಅರ್ಜುನನು ತಾನು ತನ್ನ ಧನುಸ್ಸನ್ನು ಕೆಳಗಿರಿಸಿ ಇನ್ನು ಮುಂದಕ್ಕೆ ಕೃಷ್ಣನೇ ಯುದ್ಧ ಮಾಡಬೇಕೆಂದು ತಿಳಿಸಿದನು.

ರಮೆ:– ಏನೇ ಆದರೂ ಅಪ್ರಬುದ್ಧ, ಎಳಕು. ವ್ಯಕ್ತಿತ್ವ ಪಕ್ವವಾಗಿಲ್ಲ. ಕೇವಲ ವಯಸ್ಸಿನೊಂದಿಗೆ ಪಕ್ವವಾಗುವಷ್ಟು ವ್ಯಕ್ತಿತ್ವ ಕೂಡ ಅಲ್ಲ. ಪಕ್ವತೆಗೆ ಹಲವು ಜನ್ಮಗಳನ್ನು ಎತ್ತಬೇಕಾಗಿದ್ದಷ್ಟು ಅಪ್ರಬುದ್ಧವಾದ ವ್ಯಕ್ತಿತ್ವ. ತನ್ನ ಸಾಮರ್ಥ್ಯವೆಷ್ಟು, ಇತರರದೆಷ್ಟು ಎಂಬದನ್ನು ಕಂಡುಕೊಳ್ಳುವ ತೀಕ್ಷ್ಣ ಬುದ್ಧಿ ಮತ್ತು ಹಸನಾದ ಮನಸ್ಸು ಇಲ್ಲದೆ ತನ್ನ ಇಷ್ಟನ್ನೇ ಅಷ್ಟೆಂದೂ, ಇತರರ ಅಷ್ಟನ್ನು ಇಷ್ಟೆಂದೂ ಭ್ರಮಿಸಿದ್ದ ಕೇವಲ ಸಾಮಾನ್ಯ ಮನುಷ್ಯ ಅವನು. ಬಲಾಬಲಗಳನ್ನು ವಿಮರ್ಶಿಸದೆ, ಹಿಂದೆ ಮುಂದೆ ನೋಡದೆ ಏನೇನೋ ಪ್ರತಿಜ್ಞೆಗಳನ್ನು ಮಾಡಿಬಿಡುವದು; ತನ್ನನ್ನು ಅಥವಾ ತನ್ನ ಆಯುಧವನ್ನು ಯಾರಾದರೂ ಹಳಿದರೆ ಹಾರಿ ಬೀಳುವದು; ಶತ್ರುವನ್ನು ಯಾರಾದರೂ ಮೆಚ್ಚಿಕೊಂಡರೆ ಮುಖ ಊದಿಸಿಕೊಳ್ಳುವದು; ಎದುರಿನಲ್ಲಿರುವವರು ಒಮ್ಮೆ ಶತ್ರುಗಳಂತೆ, ಒಮ್ಮೆ ನೆಂಟರಂತೆ ಕಾಣಿಸಿಕೊಳ್ಳುವದು; ಇವೆಲ್ಲ ಕೇವಲ ಸಾಮಾನ್ಯ ಮನುಷ್ಯರ ಲಕ್ಷಣಗಳು. ಅಲ್ಲದೆ........

ಮುರಳಿ:– ಅರ್ಜುನನನ್ನು ಮನುಷ್ಯ ಎಂದಲ್ಲದೆ ದೇವತೆ ಎಂದು ಯಾರೂ ಹೇಳಿಲ್ಲ. ಸುಮ್ಮನೆ ಕೇಳು. ಅರ್ಜುನನ ದುಗುಡವನ್ನು ನೋಡಿದ ಕೃಷ್ಣನು "ಪಾರ್ಥಾ, ಕರ್ಣನು ಸಾಮಾನ್ಯನೆಂದು ತಿಳಿಯಬೇಡ. ಅವನೆದುರಿನಲ್ಲಿ ಅಷ್ಟು

ದಿಕ್ಪಾಲಕರೂ ನಿಲ್ಲಲಾರರು. ಬ್ರಹ್ಮಾಂಡವನ್ನೇ ಉದರದಲ್ಲಿ ಧರಿಸಿರುವ ನಾನು, ಧ್ವಜದ ಮೇಲಿರುವ ಈ ವೀರ ಹನುಮಂತ, ಈ ದಿವ್ಯ ಧನುಸ್ಸು, ಈ ದಿವ್ಯ ರಥ– ಇವುಗಳನ್ನು ಕರ್ಣನು ಬಿಲ್ಲಳತೆ ಹಿಂದೆ ಸರಿಸಿದುದು ಹೆಚ್ಚೋ, ಅಥವಾ ಸಾಮಾನ್ಯ ರಥವೊಂದನ್ನು ನೀನು ಅಷ್ಟು ದೂರ ಹಾರಿಸಿದುದು ಹೆಚ್ಚೋ, ನೀನೇ ಹೇಳು" ಎಂದು ಕೇಳಲು ಅರ್ಜುನನು ಒಪ್ಪಿಕೊಂಡು ತನ್ನ ಕೃತ್ಯಕ್ಕೆ ನಾಚಿಕೊಂಡು ಬಿಲ್ಲನ್ನು ಕೈಗೆತ್ತಿಕೊಂಡನು.

ರಮ:– ಬ್ರಹ್ಮಾಂಡದೊಳಗೆ ಕುರುಕ್ಷೇತ್ರ. ಅದರೊಳಗೆ ಅರ್ಜುನನ ರಥ. ಅದರೊಳಗೆ ಕೃಷ್ಣ. ಆದರೆ ಆ ಕೃಷ್ಣನೊಳಗೆ ಬ್ರಹ್ಮಾಂಡ! ಬ್ರಹ್ಮಾಂಡ, ಕರುಳು ಎಂದರೆ ಎಲ್ಲ ಒಂದೇ ಅರ್ಥವೋ ಹ್ಯಾಗೆ?

ಮುರಳಿ:– ಬ್ರಹ್ಮಾಂಡ ಎಂದರೆ ಭಗವಂತನ ಕರುಳಿನಂತೆಯೇ ಎಂದು ಬೇಕಾದರೆ ಹೇಳಿಕೊ.

ರಮ:– ಇಡಿಯ ಬ್ರಹ್ಮಾಂಡವನ್ನು ಹೊತ್ತು ಅರ್ಜುನನ ಕುದುರೆಗಳು ಸದಾ ತಿರುಗುತ್ತಿದ್ದವು. ಹಾಗಿದ್ದರೆ ಆ ಕುದುರೆಗಳು ಎಂಥವು? ಎಲ್ಲಿಂದ ಬಂದವು? ಸ್ವಲ್ಪ ಪ್ರೌಢರಿಗಾದರೂ ಇಂಥದನ್ನು ಹೇಳಿದರೆ ಚಿಂತೆಯಿಲ್ಲ. ಇನ್ನೂ ಬುದ್ಧಿ ಬೆಳೆಯದ ಮಕ್ಕಳಿಗೆ ಆ ಭಾಗಗಳನ್ನೆಲ್ಲ ಎಲ್ಲಿಯಾದರೂ ಹೇಳಿಬಿಟ್ಟರೆ ಒಂದೋ ಅವುಗಳ ತಲೆ ಕೆಟ್ಟುಹೋಗಬಹುದು; ಇಲ್ಲವೇ ಮುಂದೆ ಬೆಳೆಯುವಾಗ ಅವುಗಳು ನಮ್ಮ ಹಿಂದೂ ಪುರಾಣಗಳನ್ನು ಕಂಡಲ್ಲಿ ಖಂಡಿಸುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬಹುದು ............ ಇಡಿಯ ಬ್ರಹ್ಮಾಂಡವಂತೆ; ಕೃಷ್ಣನು ಅರ್ಜುನನ ಗಾಡಿ ಹೊಡೆಯುವವನಂತೆ; ಅವನ ಹೊಟ್ಟೆಯೊಳಗೆ ಆ ಇಡಿಯ ಬ್ರಹ್ಮಾಂಡವಂತೆ. ಹಾಳಾಗಲಿ. ಪುರಾಣಗಳ ಹಣೆಯ ಬರಹ ಇದ್ದೇ ಇದೆ. ಮುಂದಿನ ಕತೆ ಹೇಳಿ ಮುಗಿಸಿ, ಸಾಕು.

ಮುರಳಿ:– ಕರ್ಣಾರ್ಜುನರ ಯುದ್ಧವು ಅಪ್ರತಿಮವಾಗಿ ನಡೆಯಿತು........

ರಮ:– ........ಥುಕ್. ಮೃಷ್ಟಾನ್ನದ ನಡುವೆ ಕಲ್ಲು ಸಿಕ್ಕಿದಂತೆ ಮಾಡಿಬಿಡುತ್ತಾರಪ್ಪ, ಈ ಪುರಾಣಗಳನ್ನು ........ ಇದ್ದುದಿದ್ದಂತೆ ಹೇಳಿದರೆ ಇವರ ಗಂಟೇನು ಹೋಗುತ್ತದೊ!

ಮುರಳಿ:– ಅದು ಆದುದು ಇಷ್ಟು ರಮಾ. ನಿನ್ನಲ್ಲಿ ಗುಟ್ಟನ್ನು ಹೇಳದಿದ್ದರೆ ನಿರ್ವಾಹವೇ ಇಲ್ಲ. ಹಾಗಾಗಿ ಹೇಳಿಬಿಡುತ್ತೇನೆ. ನೀನು ಹೇಳಿದಂತೆಯೇ ವೇದವ್ಯಾಸರಿಗೆ ಗಂಟು ಹೋಗುವ ಪ್ರಸಂಗ ಬಂದುಬಿಟ್ಟಿತ್ತು. ಹಾಗಾಗಿ ಸ್ವಲ್ಪ ಇಂತಹ ಆಭಾಸಗಳು ಅವರ ಮಹಾಭಾರತದಲ್ಲಿ ಸೇರಿಬಿಟ್ಟವು. ನಮಗೆ ಒಗ್ಗದು

ದನ್ನು ಬಿಟ್ಟು ಒಗ್ಗುವಂತಹದನ್ನು ಮಾತ್ರ ತೆಗೆದುಕೊಳ್ಳೋಣ, ಬಿಡು–ನಮ್ಮ ಗಂಟಾದರೂ ಏನು ಹೋಗುತ್ತದೆ ?

ರಮೆ:– ಏನದು ವೇದವ್ಯಾಸರ ಗಂಟು ಹೋಗುವ ಪ್ರಸಂಗ ಬಂದದ್ದು ?

ಮುರಳಿ:– ಗುಟ್ಟಾಗಿಟ್ಟುಕೊ. ಅವರಿಗೆ ಸ್ವಲ್ಪ ಸಾಲ, ಸೋಲ ಆಗಿ ಸಂಸಾರ ನಿರ್ವಹಣೆ ಕಷ್ಟಕ್ಕೆ ಬಂದುಬಿಟ್ಟಿತ್ತು. ಮೈ ಮುರಿದು ದುಡಿದು ತಿಳಿಯದು. ಗಡ್ಡ ನೀವಿಕೊಂಡು ಕತೆ ಹೇಳಿ, ಮಂತ್ರ ರಚಿಸಿ, ಪುಸ್ತಕ ಬರೆದೇ ಜೀವನ ಮಾಡಿದವರು. ಹಾಗಾಗಿ ಸದ್ಯದ ಹಣದ ಅಡಚಣೆಯನ್ನು ನೀಗಲಿಕ್ಕೆಂದು ಒಂದು ದೊಡ್ಡ ಗ್ರಂಥ ಬರೆಯುತ್ತೇನೆಂದು ಹೊರಟರು. ಅದು ಬಹಳ ಸಮಯ ಹಿಡಿಯಿತು. ಅಷ್ಟರಲ್ಲಿ ಬೇರೆ ಯಾವನೋ ಒಬ್ಬ ಲೇಖಕನಿಗೆ ಈ ಸುಳಿವು ಹತ್ತಿ ಅವನು ತಾನೂ ಮಹಾಭಾರತ ಬರೆಯುತ್ತೇನೆಂದು ಹೊರಟುದು ವ್ಯಾಸರಿಗೆ ತಿಳಿಯಿತು. ಇನ್ನು ತನ್ನ ಮಹಾಭಾರತಕ್ಕೆ ಬೆಲೆ ಬರುವದಿಲ್ಲ ಎಂದು ಹೆದರಿದ ವ್ಯಾಸರು ಆತುರಾತುರವಾಗಿ ಈ ಮಹಾಭಾರತವನ್ನು ಬರೆದು ಪ್ರಕಾಶಕರಿಗೆ ಕೊಟ್ಟು ಅಚ್ಚು ಹಾಕಿಸಿ ಪ್ರಕಟಿಸಿಬಿಟ್ಟರು. ಈ ಆತುರದಿಂದಾಗಿ ಅದರಲ್ಲಿ ಕೆಲವು ಅಬದ್ಧ ವಿಷಯಗಳು ಸೇರಿಕೊಂಡುಬಿಟ್ಟವು. ದ್ವಿತೀಯ ಮುದ್ರಣದಲ್ಲಾದರೂ ಈ ಅಬದ್ಧ ವಿಷಯುಗಳನ್ನು ತಿದ್ದಬಹುದಿತ್ತು. ಆದರೆ ಓದುಗರು ಮೂರ್ಖರು. ವ್ಯಾಸರು ಬರೆದುದೆಲ್ಲ ಸತ್ಯವೇ; ಎಲ್ಲ ಚರಿತ್ರೆಯ ಅಂಶವೇ ಎಂದು ಅವರು ಆ ವೇಳೆಗಾಗಲೇ ಸ್ವೀಕರಿಸಿಬಿಟ್ಟಿದ್ದರು. ಇನ್ನು ಬದಲಾಯಿಸುವದು ಬೇಡ, ಹಾಳಾಗಿ ಹೋಗಲಿ ಎಂದು ವ್ಯಾಸರು ಸುಮ್ಮನಾಗಿಬಿಟ್ಟರು. ನೀನು ಆಗ ಹುಟ್ಟಿರಲಿಲ್ಲ. ನೀನು ಹುಟ್ಟಿರುವ ಈಗ ವ್ಯಾಸರು ಬದುಕಿಲ್ಲ. ಏನು ಮಾಡುವದು !

ರಮೆ:– ಟೀಕೆಯನ್ನು ಗೇಲಿ ಮಾಡುವದು ಅದಕ್ಕೆ ಕೊಡುವ ಉತ್ತರವಲ್ಲ. ಈ ವರೆಗೆ ಅದೆಷ್ಟೋ ಅತಿಪ್ರಕೃತಿ ಘಟನೆಗಳನ್ನು ಒಪ್ಪಿಕೊಂಡೆ. ಈಗಿನದನ್ನು ಮಾತ್ರ ಒಪ್ಪಿಕೊಳ್ಳಲಾರೆ. ಹಾಗೆ ಒಪ್ಪಿಕೊಳ್ಳುವ ಕುರುಡು ನಂಬಿಕೆ ನನಗೆ ಬರದಿರಲಿ ಎಂದೂ ಹಾರೈಸುತ್ತೇನೆ. ತನ್ನ ಹೊಟ್ಟೆಯಲ್ಲಿ ಬ್ರಹ್ಮಾಂಡವಿರುವದರಿಂದ ತನ್ನ ರಥ ಬ್ರಹ್ಮಾಂಡದಷ್ಟು ಭಾರವಾಗಿದೆ ಎಂದು ಕೃಷ್ಣ ಹೇಳಿದನಂತೆ; ಅರ್ಜುನನು ಇದನ್ನು ಒಪ್ಪಿಕೊಂಡು ನಾಚಿಬಿಟ್ಟನಂತೆ. ನಾಚಿಕೆಯಾಗುವಂತಹ ವಿಷಯುವನ್ನು ಹೇಳಿದ ಕೃಷ್ಣನಿಗೆ ನಾಚಿಕೆಯಾಗಲಿಲ್ಲ; ಅದನ್ನು ಕೇಳಿದ ಅರ್ಜುನನು ನಾಚಿಕೊಳ್ಳಬೇಕಾಯಿತು. ಇದೆಲ್ಲ ಎಂತಹ ಕತೆ ಅಂತ ?........ ಈ ಒಣ ವಾದ ಹಾಳಾಗಲಿ. ಇಂತಹ ಎಲ್ಲದಕ್ಕೂ ಏನಾದರೊಂದು ತಲೆ ತಿರುಗಿಸುವ ಉಪಾಯುಗಳನ್ನು ಇಟ್ಟಿದ್ದೀರಲ್ಲ, ನೀವು. ಹಾಗೆಯೇ ಇದಕ್ಕೂ ಏನಿದೆ ಎನ್ನುವದನ್ನು ಆ ಕಡೆ ಹೇಳಿಬಿಡಿ. ಕತೆಯನ್ನಾದರೂ ಮುಂದುವರಿಸೋಣ.

ಮುರಳಿ:– ಈ ವರೆಗೆ ನಿನ್ನ ತಲೆ ತಿರುಗಿಸಿ, ತಿರುಗಿಸಿ ಸಾಕಾಯಿತು. ಈಗೀಗ ನಿನ್ನಿಂದಾಗಿ ನನ್ನ ತಲೆಯೇ ತಿರುಗಲು ಪ್ರಾರಂಭವಾಗಿದೆ. ನಾಯಿಯ ಬಾಲವನ್ನು ನೆಟ್ಟಗೆ ಮಾಡಲು ಎಷ್ಟು ಸಾರಿ ಅದಕ್ಕೆ ಕೊಳವೆ ಹಾಕಿ, ಹಾಕಿ ತೆಗೆದು ನೋಡಬಹುದು ಹೇಳು !

ರಮೆ:– ಒಳ್ಳೇ ತಮಾಷೆಯಾಯಿತು ! ನಿಮ್ಮ ಹುಚ್ಚು ವಿವರಣೆಗಳನ್ನೆಲ್ಲ ಕೇಳಿಕೊಂಡು ಕೂಡ ಆಹಾ, ಓಹೊ, ಏನದ್ಭುತ ಎಂದು ಹೇಳುತ್ತಿದ್ದರೆ ಅದು ಪಕ್ವವಾದ ಮೆದುಳು; ಅದೇಕೆ ಹಾಗೆ ಎಂದು ಕೇಳಿಬಿಟ್ಟರೆ ನನ್ನ ಬುದ್ಧಿ ನಾಯಿಯ ಬಾಲದಂತೆ ! ಸರಿ, ಬಿಡಿ. ಕೃಷ್ಣನ ಹೊಟ್ಟೆಯೊಳಗೆ ಇಡಿಯ ಬ್ರಹ್ಮಾಂಡ ಕುಳಿತಿತ್ತು– ಮುಂದೆ ಹೇಳಿ.

ಮುರಳಿ:– ನೋಡು ರಮಾ. ಇದನ್ನೆಲ್ಲ ಅರ್ಥ ಮಾಡಿಕೊಳ್ಳಬೇಕಾದರೆ, ಅರ್ಥವತ್ತಾದ ಕಲ್ಪನೆಗಳನ್ನು ಹರಿಯಬಿಡಲು ಸಾಧ್ಯವಾಗುವಂತಹ ಚಿಂತನೆಯ ಹಿನ್ನೆಲೆ ಇರಬೇಕು. ಹೌದು. ಕೇಳಿದ ತಕ್ಷಣ ಅಸಂಬದ್ಧ ಎಂದೇ ಕಾಣುವ ವರ್ಣನೆ ಇದು. ಆದರೆ ಅದು ಇಲ್ಲಿ ಏಕೆ ಬಂದಿತು ಎಂಬದನ್ನು ವಿಶ್ಲೇಷಿಸುವ ತಾಳ್ಮೆ ಇಲ್ಲವಾದರೆ ನಿನಗಾದಂತೆಯೇ ಆಗುತ್ತದೆ. ಕೃಷ್ಣ ಈ ಮಾತನ್ನು ಹೇಳಿದ್ದಾನೆ. ಅಥವಾ ವ್ಯಾಸರು ಕೃಷ್ಣನ ಬಾಯಿಂದ ಈ ಮಾತನ್ನು ಹೇಳಿಸಿದ್ದಾರೆ ಎಂದೇ ಇಟ್ಟುಕೊ. ಕೃಷ್ಣ ಏಕೆ ಹಾಗೆ ಹೇಳಿದ ಎಂಬದನ್ನು ತರ್ಕಿಸೋಣ. ಕೃಷ್ಣನು ಭಗವಂತ; ಅವನು ದೇವರ ಪೂರ್ಣಾವತಾರ ಎಂಬದನ್ನು ನೀನು ಒಪ್ಪಬಹುದು, ಬಿಡಬಹುದು. ಆದರೆ ನಮಗೆ ತಿಳಿದಿರುವಂತೆ ಒಬ್ಬ ಅತ್ಯಂತ ಕ್ರಿಯಾಶಾಲಿ ಮಾನವ ಹತ್ತು ಜನ್ಮಗಳಲ್ಲಿ ಸಾಧಿಸಲಾರದುದನ್ನು ಕೃಷ್ಣ ಒಂದೇ ಜನ್ಮದಲ್ಲಿ ಸಾಧಿಸುವಷ್ಟು ಸಮರ್ಥನಾಗಿದ್ದವನು ಎಂಬದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಮಾನವಾತೀತ ಎನಿಸಿಕೊಳ್ಳುವ ಈ ಅದ್ಭುತವನ್ನು ಅವನು ಸಾಧಿಸಬೇಕಾದರೆ ಅದಕ್ಕೆ ಅವಶ್ಯವಾದ ತೀಕ್ಷ್ಣ ಬುದ್ಧಿ ಕೌಶಲ್ಯ, ಸಮಯ ಸ್ಫೂರ್ತಿ, ಮುಂದಾಲೋಚನೆ– ಇವೆಲ್ಲ ಅವನಿಗೆ ಇದ್ದಿರಲೇಬೇಕು. ಅವನು ಎಷ್ಟು ಮೇಧಾವಿಯೋ, ರಾಜಕಾರಣದಲ್ಲಿ ಅಷ್ಟೇ ನಿಷ್ಣಾತ; ಯುದ್ಧ ತಂತ್ರದಲ್ಲಿ ಅಷ್ಟೇ ನಿಪುಣ. ಕುರುಕ್ಷೇತ್ರ ಯುದ್ಧವನ್ನು ಸಾಧಿಸಿದವನು ಅವನು. ಒಲ್ಲದ ಅರ್ಜುನನನ್ನು, ಯುದ್ಧದ ಕುರಿತು ಇರಬೇಕಾಗಿದ್ದ ಏಕಾಗ್ರತೆಯಿಂದ ಆಗಾಗ ವಿಚಲಿತನಾಗುತ್ತಿದ್ದ ಅರ್ಜುನನನ್ನು, ದಡ ಮುಟ್ಟಿಸುವ ಸಂಕಲ್ಪ ಮಾಡಿ ಅವನೊಂದಿಗೇ ಸದಾಕಾಲ ಇರುತ್ತಿದ್ದವನು ಕೃಷ್ಣ. ಕೃಷ್ಣ ಬಿಲ್ಲು ಹಿಡಿಯಲಿಲ್ಲ. ಆದರೆ ಹದಿನೆಂಟು ಅಕ್ಷೌಹಿಣೀ ಕೌರವ ಸೈನ್ಯವನ್ನು ನಾಶ ಮಾಡಿದವನೇ ಅವನು. ಕುರುಕ್ಷೇತ್ರದ ದೊಡ್ಡ ಪಾಲು ಯುದ್ಧ ಪಾಂಡವರ ಪರವಾಗಿ ಮುಗಿದಿದೆ. ಇನ್ನು ಉಳಿದಿರುವದು ಸಣ್ಣ ಪಾಲು. ಆದರೆ ಇದರಲ್ಲಿ ಒಂದು ಹೆಜ್ಜೆ ಎಡವಿದರೂ

ಇಷ್ಟು ದಿನಗಳ ಪರಿಶ್ರಮವೆಲ್ಲ ನೀರು ಪಾಲಾಗುವ ಪರಿಸ್ಥಿತಿ ಇತ್ತು. ಸಾಲದುದಕ್ಕೆ ಈ ಹದಿನೇಳು ದಿನಗಳ ಕಾಲದಲ್ಲಿ ಅರ್ಜುನನು ಅತ್ಯಂತ ಪರಿಣಾಮಕಾರಿಯಾದ ಯುದ್ಧವನ್ನು ಎದುರಿಸುತ್ತಿರುವದು ಇದೇ ಮೊದಲು. ಕರ್ಣನು ಎಂತಹ ಪ್ರಬಲನೆಂದೂ, ಅವನನ್ನು ಎದುರಿಸುವಲ್ಲಿ ಅರ್ಜುನನು ಎಷ್ಟರ ಮಟ್ಟಿಗೆ ಅಸಮರ್ಥನಾಗಿದ್ದಾನೆಂದೂ ಕೃಷ್ಣನಿಗೆ ಚೆನ್ನಾಗಿ ತಿಳಿದಿತ್ತು. ಕೌರವರೊಂದಿಗೆ ಸಂಧಿ ಮುರಿದ ಸಮಯದಲ್ಲಿಯೇ ಅವನು ಕರ್ಣನ ಜನ್ಮ ವೃತ್ತಾಂತವನ್ನು ಅವನಿಗೆ ತಿಳಿಸಿ ಅಲ್ಲಿಂದಲೇ ಅವನನ್ನು ಸತ್ತ್ವಹೀನನನ್ನಾಗಿಸಲು ಪ್ರಯತ್ನಿಸಿದ್ದಾನೆ. ಈ ಕಳೆದ ಹದಿನೇಳು ದಿನಗಳ ಯುದ್ಧದಲ್ಲಿಯೂ ಕರ್ಣನು ಯುದ್ಧ ಮಧ್ಯದಲ್ಲಿ ಸಿಕ್ಕಿ ಬಳಲುತ್ತಿದ್ದಾಗ ಅರ್ಜುನನನ್ನು ತೀವ್ರವಾದ ಯುದ್ಧಕ್ಕೆ ಬಿಡದೆ ಅವನ ದೇಹ ಚೈತನ್ಯವನ್ನು ರಕ್ಷಿಸಿಟ್ಟಿದ್ದಾನೆ, ಕೃಷ್ಣ. ಹೀಗೆ ಅರ್ಜುನನಿಂದ ಕರ್ಣನನ್ನು ಕೊಲ್ಲಿಸಲು ಬಹಳ ಸಮಯದಿಂದಲೂ ಏನೆಲ್ಲ ಮಾಡಬಹುದೋ ಅದನ್ನೆಲ್ಲ ಮಾಡಿ, ಈಗ ಕರ್ಣಾರ್ಜುನರು ಪರಸ್ಪರರನ್ನು ಕೊಲ್ಲಲು ಸಂಕಲ್ಪಿಸಿ ಸಂಧಿಸಿರುವ ಘಟ್ಟಕ್ಕೆ ಕೃಷ್ಣ ತಲಪಿದ್ದಾನೆ. ಈ ಹಿಂದೆ ಅರ್ಜುನನು ಯುಧಿಷ್ಠಿರನನ್ನು ಕೊಲ್ಲಲು ಹೊರಟ ಸಂದರ್ಭವನ್ನೂ ಬಹಳ ವಿಚಕ್ಷಣತೆಯಿಂದ ಬಳಸಿಕೊಂಡ ಕೃಷ್ಣನು ಅರ್ಜುನನ ಕೈಯಿಂದ ಅಣ್ಣನನ್ನು ಹೀನಾಯವಾಗಿ ಕೆಡೆನುಡಿಸಿ, ತನ್ನನ್ನು ತಾನೇ ಬೇಕಷ್ಟು ಹೊಗಳಿಕೊಳ್ಳುವಂತೆ ಮಾಡಿ, ಇದರ ಪರಿಣಾಮವಾಗಿ ಅರ್ಜುನನ ಮನಸ್ಸು ಆಳದಲ್ಲಿ ತೀವ್ರವಾಗಿ ಕಲಕುವಂತೆ ಮಾಡಿ, ಆತ್ಮಹತ್ಯೆಗೆ ಪ್ರಚೋದಕವಾಗುವಂತಹ ಈ ಒಂದು ದುಸ್ಥಿತಿಗೆ ಕರ್ಣನೇ ಕಾರಣ ಎಂಬ ರೋಷವೂ, ಅಂತಹ ಕರ್ಣನನ್ನು ಕೊಂದು ಅಣ್ಣನಿಗೆ ಸಂತೋಷವನ್ನು ಒದಗಿಸಲೇಬೇಕೆಂಬ ಛಲವೂ ಅರ್ಜುನನ ಮನಸ್ಸಿನಲ್ಲಿ ಮೂಡುವಂತಹ ಉತ್ತಮ ಹಿನ್ನೆಲೆಯನ್ನು ಅವನ ಮನಸ್ಸಿನಲ್ಲಿ ಉಂಟು ಮಾಡಿ ಕೃಷ್ಣನು ಅವನನ್ನು ಕರ್ಣನ ಎದುರಿನಲ್ಲಿ ತಂದು ನಿಲ್ಲಿಸಿದ್ದಾನೆ. ಇಷ್ಟೇ ಆದರೂ ಸಾಲದು. ಅರ್ಜುನನನ್ನು ಎಷ್ಟು ವಿಧದಲ್ಲಿ ಸಿದ್ಧಗೊಳಿಸಿದರೂ ಅವನು ಕರ್ಣನ ಸಮಕ್ಕೆ ಬರಲಾರ ಎಂಬದು ಕೃಷ್ಣನಿಗೆ ಗೊತ್ತು. ಕರ್ಣನ ವಿರೋಧವಾಗಿ ಅರ್ಜುನನ ಮನಸ್ಸು ಎಷ್ಟು ಹುರಿಗೊಂಡರೆ ಅಷ್ಟರಮಟ್ಟಿಗೆ ತನ್ನ ಪ್ರಯತ್ನ ಸಫಲವಾಗುತ್ತದೆ ಎಂಬದೂ ಅವನಿಗೆ ಗೊತ್ತು. ಹಾಗಾಗಿ ಅವನು ಪ್ರತಿ ನಿಮಿಷದಲ್ಲಿಯೂ ಅರ್ಜುನನನ್ನು ಗಮನಿಸುತ್ತಿದ್ದಾನೆ; ಯುದ್ಧವನ್ನು ವೀಕ್ಷಿಸುತ್ತಿದ್ದಾನೆ. ಅರ್ಜುನ ಕರ್ಣನ ರಥವನ್ನು ಅಷ್ಟು ದೂರ ಹಾರಿಸಿದ. ಕೃಷ್ಣನಿಗೆ ಮನಸ್ಸಿನಲ್ಲಿ ನಿಜವಾಗಿ ಸಂತೋಷವಾಗಿರಬೇಕು. ಪ್ರತಿಯಾಗಿ ಕರ್ಣನೂ ಅರ್ಜುನನ ರಥವನ್ನು ಒಂದಷ್ಟು ಹಿಂದಕ್ಕೆ ಸರಿಸಿದ. ಕಲಿಯಾಗುತ್ತಿದ್ದ ಅರ್ಜುನನ ಮನಸ್ಸನ್ನು ಇನ್ನಷ್ಟು ಕಲಿ ಮಾಡಲು ಕೃಷ್ಣನು ಈ ಸಂದರ್ಭವನ್ನು ಬಳಸಿಕೊಂಡು ಕರ್ಣನನ್ನು ಹೊಗಳಿದ.

ರಮೆ:– ಆದರೆ ಕೃಷ್ಣನು ಕರ್ಣನನ್ನು ಹೊಗಳಿದರೆ ಅರ್ಜುನನು ಕರ್ಣನ ವಿರುದ್ಧ ರೋಷವನ್ನು ಹೆಚ್ಚಿಸಿಕೊಳ್ಳುವದರ ಬದಲಿಗೆ ಕೃಷ್ಣನಲ್ಲಿಯೇ ತಪ್ಪು ಕಾಣುವ ಸ್ವಭಾವದವನು ಎಂಬ ಅರ್ಜುನನ ಗುಣ ಬುದ್ಧಿವಂತನಾದ ಕೃಷ್ಣನಿಗೆ ತಿಳಿದಿರಲಿಲ್ಲವೆ ? ಇದರಿಂದಾಗಿ ಅವನನ್ನು ಯುದ್ಧದ ಏಕಾಗ್ರತೆಯಿಂದ ತಾನು ವಿಚಲಿತಗೊಳಿಸಿದಂತಾಗುತ್ತದೆ ಎಂಬದೂ ಅವನಿಗೆ ತಿಳಿಯುತ್ತಿರಲಿಲ್ಲವೆ ?

ಮುರಳಿ:– ತಿಳಿದಿತ್ತು. ಹೀಗೆ ತನ್ನಲ್ಲಿ ತಪ್ಪು ಕಾಣುವ ಅರ್ಜುನನು ಕೊನೆಯಲ್ಲಿ ಸ್ವತಃ ತನ್ನ ತಪ್ಪನ್ನೇ ತಾನು ತಿಳಿದುಕೊಳ್ಳುವದಾದರೆ ಅವನಿಗೆ ಮತ್ತಷ್ಟು ಪಶ್ಚಾತ್ತಾಪವುಂಟಾಗಿ ಮನಸ್ಸು ಇನ್ನಷ್ಟು ವ್ಯಗ್ರವಾಗಿ ಅವನು ಕರ್ಣನನ್ನೆದುರಿಸಲು ಹೆಚ್ಚು ಸಮರ್ಥನಾಗುತ್ತಾನೆ ಎಂಬದೂ ಕೃಷ್ಣನಿಗೆ ತಿಳಿದಿತ್ತು. ಇದರ ಬದಲು ಕರ್ಣನ ರಥವನ್ನು ಹಾರಿಸಿದ ಅರ್ಜುನನನ್ನೇ ಕೃಷ್ಣನು ಹೊಗಳಿದ್ದರೆ ಅರ್ಜುನನಿಗೆ ತಾನು ಕರ್ಣನಿಗಿಂತ ಹೆಚ್ಚು ಪರಾಕ್ರಮಿ ಎಂಬ ವೈಮರವೆ ಬಂದು ಅಪಾಯ ಒದಗುತ್ತಿತ್ತು ಎಂಬದನ್ನು ನಾವು ಊಹಿಸಬಹುದು.

ಹೀಗೆ ಕರ್ಣನನ್ನು ಕೃಷ್ಣನು ಹೊಗಳಲು ಅವನಿಗೆ ಆಧಾರವೇನು ಎಂಬದಕ್ಕೆ ಕೃಷ್ಣನು ಹೇಳಬೇಕಾಯಿತು – ತಾನು ಮೂರು ಲೋಕಗಳ ಸೃಷ್ಟಿ, ಸ್ಥಿತಿ ಲಯಗಳಿಗೆ ಕಾರಣನಾದವನು ಎಂದು. ತನ್ನ ಈ ಹೇಳಿಕೆಯನ್ನು ಅರ್ಜುನನೇನೂ ತಿರಸ್ಕರಿಸುವಂತಿಲ್ಲ ಎಂಬದು ಕೃಷ್ಣನಿಗೆ ತಿಳಿದಿತ್ತು. ಏಕೆಂದರೆ ಈ ಕೆಲವು ದಿನಗಳ ಹಿಂದೆಯಷ್ಟೇ ಅರ್ಜುನನು ಕೃಷ್ಣನ ವಿಶ್ವರೂಪವನ್ನು ನೋಡಿ ಅವನ ಹಿರಿತನವನ್ನು ಕಂಡುಕೊಂಡಿದ್ದ. ಈಗ ಈ ಮೂಲಕ ಅರ್ಜುನನಿಗೆ ಕೃಷ್ಣನ ಆ ದೈವತ್ವವನ್ನು ಹಾಗೂ ಪರೋಕ್ಷವಾಗಿ ಅವನು ಹಿಂದೆ ಹೇಳಿದ ಗೀತೋಪದೇಶದ ಪಾಠವನ್ನೂ ಜ್ಞಾಪಿಸಿ ಅವನು ಏಕಾಗ್ರತೆಯಿಂದ ಯುದ್ಧ ಕರ್ಮವನ್ನು ಮಾಡುವಂತೆ ಪ್ರೇರೇಪಿಸುವದೂ ಆಗುತ್ತದೆ.

ರಮೆ:– ಹಾಗಾದರೆ ತನ್ನ ಹೊಟ್ಟೆಯೊಳಗೆ ಇಡಿಯ ಬ್ರಹ್ಮಾಂಡವಿದ್ದು ರಥವು ಅಷ್ಟು ಭಾರವಾಗಿದೆ ಎಂದು ಕೃಷ್ಣನು ಹೇಳಿದುದು ಸುಳ್ಳು ?

ಮುರಳಿ:– ತನ್ನ ಉದರದೊಳಗೆ ಬ್ರಹ್ಮಾಂಡವಿದೆ ಎನ್ನುವ ಕೃಷ್ಣನ ಮಾತು ಸುಳ್ಳಲ್ಲ. ಆ ಸತ್ಯದ ಆಧಾರದಲ್ಲಿ ತನ್ನ ರಥವು ಅಷ್ಟು ಭಾರವಾಗಿದೆ ಎಂಬ ಹೇಳಿಕೆ ಶಬ್ದಾರ್ಥದ ದೃಷ್ಟಿಯಿಂದ ಯಥಾರ್ಥವಾಗಿಲ್ಲದಿರಬಹುದಾದರೂ ಅದನ್ನು ಶಬ್ದಾರ್ಥದಲ್ಲಿ ಕೂಡ ಒಪ್ಪಿಕೊಳ್ಳುವದು ಸಾಧ್ಯವಾಗಿದ್ದ ಆಗಿನ ಪರಿಸ್ಥಿತಿಯಲ್ಲಿ ಅದು ಸುಳ್ಳು ಹೇಳಿಕೆ ಎನಿಸಿಕೊಳ್ಳಬೇಕಾಗಿಯೂ ಇರಲಿಲ್ಲ. ಆ ಹೇಳಿಕೆಯಿಂದ ಲೋಕಕ್ಕೆ ಕೆಡುಕಾಗದೆ ಕಲ್ಯಾಣವಾಗುವದರಿಂದ ಕೃಷ್ಣ ಹಾಗೆ ಹೇಳಿದುದು ಸುಳ್ಳೋ ನಿಜವೋ ಎಂಬದರ ವಿಮರ್ಶೆಗೂ ಆಗ ಅವಕಾಶವಿರುವಂತಿರಲಿಲ್ಲ........

ರಮೆ:– ಸತ್ಯ – ಅಸತ್ಯಗಳ ಕೂದಲು ಭೇದಿಸುವ ಜಿಜ್ಞಾಸೆ ಸದ್ಯ ಈಗ ಬೇಡ. ಕೃಷ್ಣನ ಹೊಟ್ಟೆಯೊಳಗಿದ್ದ ಬ್ರಹ್ಮಾಂಡದ ಪರಿಚಯುವಾಯಿತು. ಸದ್ಯಕ್ಕೆ ಮುಂದೆ ಕತೆ ಹೇಳಿ.

ಮುರಳಿ:– ಕೇಳು. ಕರ್ಣಾರ್ಜುನರ ಯುದ್ಧವು ಅಪ್ರತಿಮವಾಗಿ ಮುಂದು ವರೆಯಿತು. ಬಿಲ್ಲು ಬಾಣಗಳಿಂದ ಮಾಡುವ ಯುದ್ಧವು ಎಷ್ಟು ಅದ್ಭುತವಾಗಿರಲು ಸಾಧ್ಯವೋ ಇವರಿಬ್ಬರ ಯುದ್ಧವು ಅಷ್ಟೂ ಅದ್ಭುತವಾಗಿ ನಡೆಯಿತು. ಎಲ್ಲ ಮಂತ್ರಾಸ್ತ್ರಗಳನ್ನೂ ಪ್ರಯೋಗಿಸಿದರು; ನಿವಾರಿಸಿದರು. ಒಮ್ಮೆ ಅರ್ಜುನನು ಮೈ ಮರೆತರೆ ಒಮ್ಮೆ ಕರ್ಣನು ಮೂರ್ಛೆ ಹೋಗುತ್ತಿದ್ದನು. ಕರ್ಣನ ಸಾರಥಿ, ಕುದುರೆಗಳು ನೋಯಿಸಲ್ಪಟ್ಟರೆ ಅದಕ್ಕೆ ಪ್ರತಿಯಾಗಿ ಅರ್ಜುನನ ಸಾರಥಿ, ಕುದುರೆಗಳೂ ನೋಯಿಸಲ್ಪಡುತ್ತಿದ್ದವು. ಇಬ್ಬರ ವೀರ್ಯವೂ, ಉತ್ಸಾಹವೂ, ಜಯಾಕಾಂಕ್ಷೆಯೂ, ಭುಜಬಲವೂ, ಕೆಚ್ಚೂ – ಯಾವವೂ ಕುಂದಲಿಲ್ಲ. ಯುದ್ಧದ ಕಾವು ಗಗನಕ್ಕೇರಿತು. ಕರ್ಣನು ಅರ್ಜುನನನ್ನು ಕೊಲ್ಲಲು ನಿಶ್ಚಯಿಸಿದನು. ಬತ್ತಳಿಕೆಯಿಂದ ಸರ್ಪಾಸ್ತ್ರವನ್ನು ಹೊರಕ್ಕೆ ತೆಗೆದನು. ಅರ್ಜುನನ ವಧೆಯೇ ಈ ಅಸ್ತ್ರದ ಗುರಿಯಾಗಿದ್ದಿತು. ಕರ್ಣನು ಅದನ್ನು ಅಭಿಮಂತ್ರಿಸುತ್ತಿದ್ದಂತೆಯೇ ಅದು ಜಾಜ್ವಲ್ಯಮಾನವಾಗಿ ಹೊತ್ತಲಾರಂಭಿಸಿತು. ಕೆಂಗಿಡಿಗಳು, ಹೊಗೆಯ ಮೋಡಗಳು, ಜ್ವಾಲೆಗಳು ಅದರಿಂದ ಚಿಮ್ಮಿ ಹೊರಬಂದವು. ಅಸ್ತ್ರದ ಈ ಉರಿಗೆ ಆನೆ, ಕುದುರೆಗಳು ತತ್ತರಿಸಿದವು. ಕುರುಕ್ಷೇತ್ರದ ಇಷ್ಟು ದಿನದ ಯುದ್ಧ ದಲ್ಲಿ ತಾನು ಒಮ್ಮೆಯೂ ಮಾಡದಂತಹ ಹರ್ಷೋದ್ಗಾರವನ್ನು ಕೌರವ ಸೈನ್ಯವು ಈಗ ಮಾಡಿತು. ಪಾಂಡವ ಪಕ್ಷಪಾತಿಯೇ ಆಗಿದ್ದ ಕರ್ಣನ ಸಾರಥಿ ಶಲ್ಯನೇ ಕರ್ಣನನ್ನು ಹೊಗಳಿದನು. ಪಾಂಡವ ಸೈನ್ಯವನ್ನು ಭೀತಿಯು ಆವರಿಸಿತ್ತು. ಇತ್ತಂಡಗಳೂ ಅರ್ಜುನನ ವಧೆಯನ್ನು ಕಾದು ನಿಂತವು. ಒಂದೆಡೆ ಮೈ ಮರೆತ ಕೋಲಾಹಲ–ಇನ್ನೊಂದೆಡೆ ಮೈ ಮರವೆ ಬರುವ ಕಳವಳ. ಕರ್ಣನು ಅತ್ಯಾಕ್ರೋಶದಿಂದ–ಅಥವಾ ಬೆನ್ನಿನಲ್ಲಿ ಬಿದ್ದ ತಮ್ಮನನ್ನು ಕೊಲ್ಲಲೇಬೇಕಾಗಿ ಬಂದ ವಿಷಮ ಪರಿಸ್ಥಿತಿಯಿಂದ ಹುಚ್ಚೆದ್ದು–ಮಹಾರಭಸ ದಿಂದ ಸರ್ಪಾಸ್ತ್ರವನ್ನು ಪ್ರಯೋಗಿಸಿದನು. ಪಾಂಡವ ಸೈನ್ಯದಾದ್ಯಂತ ಹಾಹಾ ಕಾರ ಉಂಟಾಯಿತು. ಕೌರವ ಸೈನ್ಯ ಹುಚ್ಚೆದ್ದು ಕುಣಿಯಿತು. ಬಾಣವು ಅರ್ಜುನನ ಕುತ್ತಿಗೆಯ ನೇರಕ್ಕೆ ಭೀಕರ ವೇಗದಿಂದ ಸಾಗಿ ಬಂದಿತು. ಕೃಷ್ಣನು ತನ್ನ ರಥವನ್ನು ಒಮ್ಮೆಗೇ ಅದುಮಿ ಅದು ಭೂಮಿಯಲ್ಲಿ ಐದಂಗುಲ ಆಳಕ್ಕೆ ಕುಸಿಯುವಂತೆ ಮೆಟ್ಟಿದನು. ನುಗ್ಗಿ ಬಂದ ಅಸ್ತ್ರವು ಅರ್ಜುನನ ಕಿರೀಟಕ್ಕೆ ಹೊಡೆದು ಅದನ್ನು ಛೇದಿಸಿ ಹಾರಿಹೋಯಿತು. ಸೋಲಿನ ಕ್ರೋಧ ದಿಂದ ಕಲಕಲ್ಪಟ್ಟ ಆ ಅಸ್ತ್ರವು ಪುನಃ ಕರ್ಣನಲ್ಲಿಗೆ ಹೋಗಿ ಅವನು ತನ್ನನ್ನು

ಮುರಳಿ ಪ್ರಯೋಗಿಸಬೇಕೆಂದೂ ತಾನು ಅರ್ಜುನನನ್ನು ನಿಸ್ಸಂದೇಹವಾಗಿ ಈ ಬಾರಿ ಕೊಲ್ಲುವದಾಗಿಯೂ ತಿಳಿಸಿತು. ಆದರೆ ಕರ್ಣನು ಕುಂತಿಗೆ ಭಾಷೆ ಕೊಟ್ಟಿದ್ದನು–ಒಮ್ಮೆ ತೊಟ್ಟ ಬಾಣವನ್ನು ಪುನಃ ತೊಡುವದಿಲ್ಲ ಎಂದು. ಈ ಭಾಷೆಯ ವಜ್ರ ಕವಚದಿಂದ ಅರ್ಜುನನು ರಕ್ಷಿತನಾಗಿದ್ದನು.

ರಮೆ:– ಕ್ಷಮಿಸಬೇಕು. ಸ್ವಾರಸ್ಯಕರವಾದ ಕತೆಯ ನಡುವೆ ಅಪಶ್ರುತಿ ಎತ್ತುತ್ತಿದ್ದೇನೆಂದು ದೂರಬೇಡಿ ........

ಮುರಳಿ:– ........ ಗೊತ್ತಾಯಿತು. ಅಸ್ತ್ರವು ಮಾತನಾಡುವದು ಸಾಧ್ಯವೇ ಎಂದು ಕೇಳುತ್ತಿದ್ದೀ !

ರಮೆ:– ಹೌದು.

ಮುರಳಿ:– ಯಂತ್ರ, ಮಂತ್ರ, ಔಷಧಿ–ಈ ಮೂರರ ಶಕ್ತಿಯನ್ನು ಅಳಿಯಲು ನಮಗೆ ಸಾಧ್ಯವಾಗುವದಿಲ್ಲ. ತೀರ ಸಾಮಾನ್ಯವೆಂದು ತೋರುವ ಗಿಡ, ಮೂಲಿಕೆಗಳಲ್ಲಿ ಅದೆಂತಹ ಅದ್ಭುತ ಶಕ್ತಿ ಅಡಗಿದೆ ಎಂಬದರ ಬಹಳ ಸ್ಥೂಲ ಪರಿಚಯವಷ್ಟೇ ನಮಗಿರುವದು. ಪ್ರಾಣವನ್ನು ಉಳಿಸುವದು, ಪ್ರಾಣವನ್ನು ತೆಗೆಯುವದು, ಹುಚ್ಚು ಬರಿಸುವದು, ಹುಚ್ಚು ಬಿಡಿಸುವದು, ಕಾಲ್ಪನಿಕ ದೃಶ್ಯಗಳನ್ನು ಕಣ್ಣ ಮುಂದೆ ತೋರಿಸುವದು, ಎಲ್ಲಿಯೋ ನಡೆಯುತ್ತಿರುವದನ್ನು ಇಲ್ಲಿ ಹರಡಿ ತೋರಿಸುವದು, ಸಾಮಾನ್ಯ ಲೋಹವನ್ನು ಚಿನ್ನ ಮಾಡುವದು, ಅಣಿಮಾದಿ ಅಷ್ಟ ಸಿದ್ಧಿಗಳನ್ನು ಉಂಟು ಮಾಡುವದು–ಇವು ಔಷಧಗಳಿಂದ ಸಾಧ್ಯ. ಔಷಧಗಳ ನಿಜವಾದ ಪರಿಣಾಮ ನಮ್ಮ ಕಲ್ಪನೆಯನ್ನೂ ಮೀರಿಸುವಂತಹದು. ಯಂತ್ರಗಳಾದರೂ ಅಷ್ಟೆ. ನಾವೇ ತಿಳಿದಿರುವಂತೆ ಕೇವಲ ಉಗಿ, ದಹ್ಯ ಅನಿಲ, ವಿದ್ಯುತ್–ಇವುಗಳು ಸಾಧಿಸಬಲ್ಲ ಕಾರ್ಯಗಳು ಅತ್ಯದ್ಭುತವಾದವುಗಳು. ಇಂದು ನಾವು ವಿಜ್ಞಾನದ ಯುಗವೆಂದು ಕರೆಯುತ್ತಿರುವ ಈ ಯುಗದ ಸಾಧನೆಗಳೆಲ್ಲ ಯಂತ್ರಕ್ಕೆ ಸೇರಿದಂಥವುಗಳು. ಈಗ ಕೇವಲ ಐವತ್ತು, ಅರವತ್ತು ವರ್ಷಗಳ ಹಿಂದೆ ಈಗಿನ ಯಾವದೇ ಯಂತ್ರವು ಅದು ಮಾಡುತ್ತಿರುವಂತಹ ಕೆಲಸವನ್ನು ಮಾಡಿಯಾತು ಎಂದು ಯಾರಾದರೂ ಹೇಳಿದ್ದರೆ ಅವನನ್ನು ಹುಚ್ಚ ಎನ್ನುತ್ತಿದ್ದರು.

ಇಂದು ಹೆಚ್ಚು ಪಾಲು ಮಂತ್ರದ ಪ್ರಯೋಜನ ನಮಗೆ ನಷ್ಟವಾಗಿದೆ. ಅಗ್ನಿಯ ಉರಿಯನ್ನು ಶಮನ ಮಾಡುವಲ್ಲಿ, ವಿಷಜಂತುಗಳ ಬಾಧೆಯನ್ನು ಶಮನ ಮಾಡುವಲ್ಲಿ, ಕಣ್ಣುಕತ್ತಲೆ ಬರಿಸಿ ಪ್ರಜ್ಞೆ ತಪ್ಪುವಂತೆ ಮಾಡುವಲ್ಲಿ – ಹೀಗೆ ಕೆಲವು ಸಣ್ಣಪುಟ್ಟ ವಿಷಯಗಳಲ್ಲಿಯಷ್ಟೇ ಇಂದು ನಾವು ಮಂತ್ರದ ಪ್ರಯೋಜನವನ್ನು ಕಾಣುತ್ತಿದ್ದೇವೆ. ಆದರೆ ಹಿಂದಿನ ಕಾಲದಲ್ಲಿ ಯಂತ್ರ ಮತ್ತು ಔಷಧಗಳ

ಪ್ರಭಾವಕ್ಕಿಂತ ಎಷ್ಟೋ ಪಾಲು ಹೆಚ್ಚು ಪ್ರಭಾವವನ್ನು ಮಂತ್ರದ ಮೂಲಕ ಆಗಿನವರು ಬೀರುತ್ತಿದ್ದರು ಎಂಬದಕ್ಕೆ ಹೇರಳ ಸಂದರ್ಭಗಳನ್ನು ಆಗಿನ ಗ್ರಂಥ ಗಳಲ್ಲಿ ಕಾಣುತ್ತೇವೆ. ಅಸ್ತ್ರ ಎಂಬದು ಒಂದು ಜಡವಾದ ಉಪಕರಣ ಮಾತ್ರ. ಮಂತ್ರದ ಮೂಲಕ ಚೈತನ್ಯಸ್ವರೂಪೀ ದೇವತೆಗಳನ್ನು ಆ ಉಪಕರಣಕ್ಕೆ ಆವಾಹಿಸಿ ದಾಗ ಅದು ಚೈತನ್ಯವನ್ನು ಪಡೆಯುತ್ತಿತ್ತು. ಇಂದು ಎಂಜಿನ್ ಎಂದು ನಾವು ಕರೆಯುವ ವಸ್ತು ಜಡವಾದ ಲೋಹದ ಉಪಕರಣವಷ್ಟೇ ತಾನೆ? ವಿದ್ಯುತ್ ಅಥವಾ ಅಗ್ನಿಯೊಡಗೂಡಿದ ಅನಿಲ ಅಥವಾ ಇತರ ಸಂಪರ್ಕ ಅದಕ್ಕೆ ಏರ್ಪಟ್ಟಾಗ ಅದು ಚೈತನ್ಯವನ್ನು ಪಡೆದು ನಿಯಮಿತವಾದ ಅದ್ಭುತ ಕಾರ್ಯವನ್ನು ಇಂದು ಸಾಧಿಸುತ್ತಿಲ್ಲವೆ? ಈ ಕುರಿತು ಹೇರಳ ಉದಾಹರಣೆ ಕೊಡಬಹುದು. ಈಗ ಒಂದು ಶತಮಾನದ ಹಿಂದಿನವರು ಪುರಾಣಗಳ ಈ ಸಂದರ್ಭಗಳನ್ನೆಲ್ಲ ಕೇವಲ ಅಜ್ಜಿಕತೆಗಳೆಂದು ವಾದಿಸಿದ್ದರೆ ಅವರನ್ನು ಕ್ಷಮಿಸಬಹುದಾಗಿತ್ತು. ಆದರೆ ಇಂದು ಕಲ್ಪನಾತೀತವಾದ ಸಾಧನೆಗಳನ್ನು ವಿದ್ಯುತ್, ಯಂತ್ರ, ಔಷಧ ಮತ್ತಿತರ ಸಲಕರಣೆಗಳ ಮೂಲಕ ಬಳಕೆಯಲ್ಲಿ ತಂದಿರುವ ನಾವು "ಒಂದು ಸಾಧ್ಯ, ಇನ್ನೊಂದು ಸಾಧ್ಯವಿಲ್ಲ" ಎಂದು ಹೇಳಲು ಹೊರಟರೆ ನಮಗೆ ಕ್ಷಮೆ ಇರಲಾರದು. ಹಿಂದಿನ ಶತಮಾನದವರು ಪುರಾಣಗಳನ್ನು ಮೂಢ ಭಕ್ತಿಯಿಂದ ಗೌರವಿಸು ತ್ತಿದ್ದರು. ನಾವು ಅವುಗಳನ್ನು ಕುತೂಹಲದಿಂದ ನೋಡಬೇಕು. ಅದ್ಭುತ ಗಳನ್ನು ಸಾಧಿಸಿರುವ ಇಂದಿನ ಶತಮಾನದಲ್ಲಿ ಪುರಾಣಗಳು ಹಾಸ್ಯಾಸ್ಪದವಾದ ಕತೆಗಳೆನಿಸುವದರ ಬದಲು ನಮ್ಮ ಹೆಚ್ಚಿನ ಸಾಧನೆಗಳಿಗೆ ಮಾರ್ಗದರ್ಶಕವಾಗುವ ನಿರೂಪಣೆಗಳಾಗಿ ಪರಿಣಮಿಸಬೇಕು. ಆ ಶಕ್ತಿ, ಆ ಸತ್ವ ಅವುಗಳಿಗಿದೆ.

ರಮೆ:— ಸರಿಯಪ್ಪಾ, ಇರಬಹುದು. ಕತೆ ಮುಂದುವರಿಸಿ.

ಮುರಳಿ:— ಕೇಳು. ಒಮ್ಮೆ ತಾನು ತೊಟ್ಟ ಬಾಣವನ್ನು ಪುನಃ ತೊಡಲಾರೆನೆಂದು ಕರ್ಣನು ಆ ಸರ್ಪಾಸ್ತ್ರಕ್ಕೆ ತಿಳಿಸಿದನು. ಆಗ ಶಲ್ಯನೂ ಕರ್ಣನನ್ನು ಕುರಿತು ತನ್ನ ಒಡೆಯನಾದ ದುರ್ಯೋಧನನ ಹಿತಕ್ಕಾಗಿ ಪುನಃ ಅಸ್ತ್ರವನ್ನು ಪ್ರಯೋಗಿಸಬೇಕೆಂದೂ, ಭೀಷ್ಮ, ದ್ರೋಣರಂತೆ ಅವನೂ ಅವನ ಒಡೆಯನ ಅಧಃಪತನಕ್ಕೆ ಕಾರಣನಾಗಬಾರದೆಂದೂ ತಿಳಿಸಿದನು. ಆದರೆ ತಾಯಿಗೆ ಕೊಟ್ಟ ವಚನಕ್ಕೆ ಕರ್ಣನು ಭಂಗ ತರುವಂಥವನಾಗಿರಲಿಲ್ಲ. ತನ್ನ ಜೀವನದ ಪ್ರತಿ ಕ್ಷಣವನ್ನೂ ಅವನು ದುರ್ಯೋಧನನ ಹಿತಕ್ಕಾಗಿಯೇ ಬಳಸಲು ಬಯಸಿದ್ದರೂ ಕೂಡ, ಈಗ ಆ ದುರ್ಯೋಧನನ ಹಿತಕ್ಕೆ ತನ್ನ ಈ ಒಂದು ಕೃತ್ಯದಿಂದ ತೀವ್ರ ಆಘಾತವಾಗುತ್ತದೆ ಎಂದು ಅವನು ತಿಳಿದಿದ್ದಾಗಲೂ ಕೂಡ ಅವನು ವಚನ ಧರ್ಮದಿಂದ ವಿಮುಖನಾಗಲು ಒಪ್ಪಲಿಲ್ಲ. ಅರ್ಜುನನ ನಾಶಕ್ಕಾಗಿಯೇ ತಾನು ಕಾದಿರಿಸಿದ್ದ ಒಂದು ಶಕ್ತಿಯು ಈ ಹಿಂದೆ ಘಟೋತ್ಕಚನ ಮೇಲೆ ಪ್ರಯೋಗಿಸ

ಲ್ಪಟ್ಟು ನಷ್ಟವಾಗಿ, ಇನ್ನು ಅರ್ಜುನನನ್ನು ಕೊಲ್ಲಲು ಸಾಧ್ಯವಿದ್ದ ಒಂದೇ ಒಂದು ಅಸ್ತ್ರವಾದ ಈ ಸರ್ಪಾಸ್ತ್ರವೂ ಈಗ ಪುನಃ ಪ್ರಯೋಗಿಸಲ್ಪಡಲು ಸಾಧ್ಯವಿಲ್ಲವೆಂದಾಗಿರುವಾಗ ತಾನು ಅರ್ಜುನನನ್ನು ಕೊಲ್ಲಬಹುದೆಂಬ ಆಸೆಯನ್ನು ಕರ್ಣನು ಕೈ ಬಿಡಬೇಕಾಯಿತು. ಇಂತಹ ಸಂದರ್ಭದಲ್ಲಿ ಯುದ್ಧಮುಖದಿಂದ ತಾನು ಹಿಂದಿರುಗುವದೂ ಸಾಧ್ಯವಿಲ್ಲದ ವಿಷಯವಾಗಿತ್ತು. ತನ್ನ ಶರೀರವನ್ನು ಅರ್ಜುನನ ಬಾಣಗಳಿಗೆ ಈಡುಮಾಡುವದೊಂದೇ ಈಗ ಕರ್ಣನಿಗೆ ಉಳಿದಿದ್ದ ದಾರಿಯಾಗಿತ್ತು. ಅರ್ಜುನನ ಕೈಯಿಂದ ತನ್ನ ಸಾವನ್ನು ನಿಶ್ಚಯಿಸಿದ ಕರ್ಣನು ಈ ವಿಷಯುವನ್ನು ತನ್ನ ಸಾರಥಿಯಾದ ಶಲ್ಯನಿಗೆ ತಿಳಿಸಿದನು. ಇದರಿಂದ ಕುಪಿತನಾದ ಶಲ್ಯನು ಕರ್ಣನನ್ನು ಭಂಗಿಸಿ ತಾನು ಅವನ ಸಾರಥ್ಯ ಮಾಡುವದಿಲ್ಲವೆಂದು ತಿಳಿಸಿ ರಥದಿಂದ ಇಳಿದು ಹೊರಟುಹೋದನು. ಸರ್ಪಾಸ್ತ್ರವೂ ಕರ್ಣನನ್ನು ತ್ಯಜಿಸಿ ಹೊರಟುಹೋಯಿತು.

ರಮೆ:– ಸಾಕಪ್ಪಾ, ಬೇಗ ಮುಗಿಸಿ. ಹಿಂದೆಯೇ ಹೇಳಿದ್ದೇನೆ. ಕರ್ಣನ ಕತೆಯನ್ನು ಖಂಡಿತ ಕೇಳಲಾರೆ. ಅಸ್ತ್ರಗಳು, ಸಾರಥಿ, ಹೆತ್ತ ತಾಯಿ, ಒಡಹುಟ್ಟಿದ ತಮ್ಮಂದಿರು, ದೈವ–ಎಲ್ಲವೂ ಒಂದಾಗಿ ತನ್ನ ಕೊಲೆಯನ್ನು ಸಾಧಿಸಲು ಸಂಚು ನಡೆಸಿ ಅದರಲ್ಲಿ ಸಿಕ್ಕಿಕೊಂಡ ಒಬ್ಬ ದುರದೃಷ್ಟಶಾಲಿ ವೀರನ ಹೆಣಗಾಟವನ್ನು ಏನೆಂದು ಕೇಳುವದು ! ಬೇಗ ಮುಗಿಸಿ.

ಮುರಳಿ:– ನಿಜ, ಕೇಳು. ಈಗ ಕರ್ಣನಿಗೆ ಸಾರಥಿಯೂ ಇರಲಿಲ್ಲ. ತನ್ನ ಸಾವನ್ನು ನಿಶ್ಚಯಿಸಿಕೊಂಡಿದ್ದರೂ ಹೇಡಿಯಂತೆ ಸಾಯಲು ಬಿಡದ ಕ್ಷಾತ್ರಗುಣ ಅವನಲ್ಲಿತ್ತು. ತಾನೇ ಒಮ್ಮೆ ರಥವನ್ನು ನಡೆಸುತ್ತ, ಒಮ್ಮೆ ಅರ್ಜುನನ ಮೇಲೆ ಬಾಣ ಪ್ರಯೋಗ ಮಾಡುತ್ತ ಅವನು ಮುಂದುವರಿದನು. ಏನು ಮಾಡಿದರೇನು ? ಕರ್ಣನು ತನ್ನ ಜೀವನದ ಕೊನೆಯ ಮೆಟ್ಟಲನ್ನು ತುಳಿದಿದ್ದನು. ಮೂರು ಲೋಕಗಳೂ ಅವನಿಗೆದುರಾಗಿ ತಿರುಗಿ ನಿಂತಿದ್ದವು. ಇದು ಕರ್ಣನಿಗೂ ತಿಳಿದಿದ್ದಿತು. ವಿಧಿ ಅವನನ್ನು ತನ್ನ ಒಡಲೊಳಗೆ ತೀವ್ರವಾಗಿ ಎಳೆದುಕೊಳ್ಳುತ್ತಿದ್ದಿತು. ಕರ್ಣನ ರಥವು ಇದ್ದಕ್ಕಿದ್ದಂತೆ ನೆಲದ ಮೇಲಿನ ರಕ್ತ ಮಾಂಸಗಳ ಕೆಸರಿನಲ್ಲಿ ಹೂಳಲ್ಪಟ್ಟಿತು. ಇದರಿಂದ ರಥದ ಚಲನೆಯೇ ನಿಂತುಹೋದುದರಿಂದ, ಹಾಗೂ ಅವನಿಗೆ ಸಾರಥಿ ಇಲ್ಲದುದರಿಂದ ಅವನು ತಾನೇ ಕೆಳಗಿಳಿದು ರಥದ ಚಕ್ರವನ್ನು ಮೇಲಕ್ಕೆತ್ತಲು ತೊಡಗಿದನು. ಇದೇ ಸಂದರ್ಭವೆಂದು ಅವನನ್ನು ಹೊಡೆದು ಕೊಲ್ಲಲು ಕೃಷ್ಣನು ಅರ್ಜುನನನ್ನು ಪ್ರೇರೇಪಿಸಿದನು.

ರಮೆ:– ಛೆ, ಛೆ. ಕಲ್ಯಾಣ ಗುಣ ಸಂಪನ್ನನೆನಿಸಿಕೊಂಡ, ಭಗವಂತನ ಪೂರ್ಣಾವತಾರ ಎನಿಸಿದ ಕೃಷ್ಣನ ವರ್ತನೆ ಹೀಗೇಕೆ ?

ಮುರಳಿ:– ಕೃಷ್ಣನ ನಡತೆಯ ಕುರಿತು ಜಿಜ್ಞಾಸೆ ಈಗ ಬೇಡ. ಮಾಡುವ ಕರ್ಮದಲ್ಲಿ ಎಳ್ಳಷ್ಟೂ ಸ್ವಂತಹಿತದ ಆಸಕ್ತಿ ಇಲ್ಲದಿದ್ದು, ಆದರೆ ಆ ಕರ್ಮವನ್ನು ಮಾಡುವಾಗ ಅದೇ ತನ್ನ ಜೀವನದ ಪರಮ ಪುರುಷಾರ್ಥ ಎನ್ನುವಂತೆ ಮಾಡುವ ಕರ್ಮಯೋಗದ ಅತ್ಯುತ್ಕೃಷ್ಟ ಉದಾಹರಣೆ ಕೃಷ್ಣ. ಅವನಿಗೆ ಆಪ್ತರು ಯಾರು, ಶತ್ರುಗಳು ಯಾರು ! ಲೋಕ ಕಲ್ಯಾಣವನ್ನು ಮಾತ್ರವೇ ಸಾಧಿಸುತ್ತಿದ್ದ ಅವನಿಗೆ ಬೇರೆ ನೀತಿ ನಿಯಮಗಳ ನಿರ್ಬಂಧ ಹೇಗೆ ಬಂದೀತು ! ಕರ್ಣನು ಅರ್ಜುನನ ಮಗನಾದ ಅಭಿಮನ್ಯುವನ್ನು ಮೋಸದಿಂದ ಕೊಂದವನೆಂದೂ, ಅವನು ಪುನಃ ರಥವೇರಿ ಬಂದರೆ ಅವನನ್ನು ಜಯಿಸಲು ಕಷ್ಟವಾಗುತ್ತದೆಂದೂ ಅರ್ಜುನನನ್ನು ಪ್ರೇರೇಪಿಸಿ ಅವನಿಂದ ಬಾಣಗಳನ್ನು ಹೊಡೆಸಿದನು. ಕೌರವ ಸೈನ್ಯಾಧಿಪತಿಯ ಧ್ವಜವು ತುಂಡಾಯಿತು.

ಕರ್ಣನಿಗೆ ದುಃಖ ಉಮ್ಮಳಿಸಿ ಬಂತು. ತನಗಾಗಿ ಅವನು ಅಳಲಿಲ್ಲ. ತನ್ನ ಒಡೆಯನಿಗಾಗಿ ಅವನು ತನ್ನ ಜೀವನದ ಈ ಕೊನೆಯ ನಿಮಿಷಗಳಲ್ಲಿ ಕಣ್ಣೀರು ಹರಿಸಿದನು. ದುರ್ಯೋಧನನಿಗೆ ಯಾರೂ ದಿಕ್ಕಿಲ್ಲದಾದರಲ್ಲಾ ಎಂದು ಅತ್ತನು. ದುರ್ಯೋಧನನು ತನ್ನನ್ನು ಅಷ್ಟೊಂದು ನಂಬಿದ್ದೂ ಅವನಿಗೆ ಹೀಗಾಯಿತಲ್ಲಾ ಎಂದು ಗೋಳಿಟ್ಟನು. ಮೃತ್ಯುವಿನ ಕ್ಷೇತ್ರದಲ್ಲಿ ಈಗಾಗಲೇ ಒಂದು ಕಾಲಿಟ್ಟಿದ್ದ ಅವನು ಎದುರಿಗಿದ್ದ ಕೃಷ್ಣನ ಮೂರ್ತಿಯಲ್ಲಿ ದಿವ್ಯತೆಯನ್ನು ಕಂಡು ಈ ಲೋಕದ ದುಃಖವನ್ನು ಮರೆತು ಯಾವದೋ ಅವ್ಯಕ್ತ ಆನಂದದಲ್ಲಿ ಮೈ ಮರೆತನು. ಅಷ್ಟರಲ್ಲಿ ಅರ್ಜುನನು ಅಂಜನಾಸ್ತ್ರದಿಂದ ನಿರಾಯುಧನಾಗಿದ್ದ ಕರ್ಣನನ್ನು ಹೊಡೆದು ಕೆಡವಿದನು. ಕರ್ಣನ ಜೀವಜ್ಯೋತಿಯು ಅಸ್ತಮಿಸುತ್ತಿದ್ದ ಸೂರ್ಯನಲ್ಲಿ ಐಕ್ಯವಾಯಿತು.

ರಮೆ:– ........ಭಗವಾನ್........

ಮುರಳಿ:– ಕರ್ಣ ಸತ್ತನೆಂಬ ವರ್ತಮಾನವನ್ನು ಕೇಳಿದ ದುರ್ಯೋಧನನು ತನ್ನ ಇಡಿಯ ಜೀವನದಲ್ಲಿ ಎಂದೂ ಅನುಭವಿಸದಿದ್ದಷ್ಟು ತೀವ್ರವಾದ ಮನೋವೇದನೆಗೆ ಬಲಿಯಾಗಿ ಮೂರ್ಛೆ ಹೋಗಿ ತನ್ನ ರಥದಿಂದ ಉರುಳಿ ಬಿದ್ದುಬಿಟ್ಟನು. ಕರ್ಣಾವಸಾನದೊಂದಿಗೆ ಕುರುಕ್ಷೇತ್ರದ ಹದಿನೇಳು ದಿನಗಳ ಯುದ್ಧವು ಮುಗಿದಂತಾಯಿತು.

ರಮೆ:– ........ಸಾಕು. ಏಳಿ.

ಮುರಳಿ:– ಆಗಲಿ.

††††††

# ಒಂಭತ್ತನೆಯ ಸಂಜೆ

ರಮೆ:– .... ಏನೋ ಬೇಜಾರು.

ಮುರಳಿ:– ಏನು ಬೇಜಾರು ?

ರಮೆ:– .... ಏನೋ ಬೇಜಾರಪ್ಪ.

ಮುರಳಿ:– ಏನು ಎಂದೆ. ಯಾಕೆ ಏನಾಯಿತು ?

ರಮೆ:– ಏನಾಯಿತೋ, ಏನೊ. ಅಂತೂ ಬೇಸರ.

ಮುರಳಿ:– ಹಾಗೆಲ್ಲ ಬೇಸರ ಮಾಡಿಕೊಂಡರೆ ಆಯಿತು. ಸಣ್ಣ ಪುಟ್ಟದಕ್ಕೆಲ್ಲ ಹೀಗೆ ಬೇಸರ ಮಾಡಿಕೊಂಡರೆ ಹೇಗೆ ?

ರಮೆ:– ಏನು ಸಣ್ಣ ಪುಟ್ಟದು ?

ಮುರಳಿ:– ಅದೇ. ಮಧ್ಯಾಹ್ನ ಊಟ ಮಾಡುವಾಗ ನೀನು ನನಗಿಟ್ಟ ನೀರಿನ ಲೋಟದಲ್ಲಿ ಏನೋ ಕೊಳೆ ಇತ್ತು ಎಂದು ಹೇಳಿದೆನಲ್ಲಾ, ಅದು ತಾನೆ?

ರಮೆ:– ಛೀ. ಅದಲ್ಲವಪ್ಪ. ನನಗೆ ಅದರ ನೆನಪು ಕೂಡ ಇಲ್ಲ.

ಮುರಳಿ:– ಅದೇ. ನನಗೆ ಗೊತ್ತು. ಮತ್ತೇನಪ್ಪಾ ಹೀಗೆ ಅಂತ ಆಶ್ಚರ್ಯ ವಾಯಿತು !

ರಮೆ:– ಏನು ಗೊತ್ತು ?

ಮುರಳಿ:– ಅದೇ. ನೀರಿನ ಲೋಟ ಕೊಳಕಾಗಿತ್ತು ಎಂದು ನಾನು ಹೇಳಿದುದು ನಿನಗೆ ಮರೆಶಿರುತ್ತದೆ ಎಂಬದು ನನಗೆ ಗೊತ್ತಿತ್ತು ಅಂತ ಅಂದೆ ಅಷ್ಟೆ.

ರಮೆ:– ಅದರಲ್ಲೇನು ವಿಶೇಷ ?

ಮುರಳಿ:– ವಿಶೇಷ ಏನೂ ಇಲ್ಲಾಪ್ಪ. ಅಷ್ಟೇ ಹೇಳಿದೆ. ಅದು ನಿನಗೆ

ನೆನಪಿರಲಿಕ್ಕಿಲ್ಲ ಎಂಬದು ನನ್ನ ಊಹೆಯಾಗಿತ್ತು. ಅದು ಸರಿಯಾಯಿತು ಎಂದು ಹೇಳಿದೆ, ಅಷ್ಟೆ.

ರಮೆ:– ಅದು ಸರೀ. ಏನೂ ಇಲ್ಲದಿದ್ದರೆ "ಅದೇ; ನನಗೆ ಗೊತ್ತು; ನಾನು

ಊಹಿಸಿದ್ದೆ! ಸರಿಯಾಯಿತು" ಎಂದು ಏನೋ ಬಹಳ ಗಹನವಾದ ವಿಚಾರದ ಕುರಿತು ಹೇಳುವಂತೆ ಹೇಳುತ್ತಿದ್ದೀರಿ ?

ಮುರಳಿ:– ಒಳ್ಳೇ ಗ್ರಹಚಾರವಾಯಿತಲ್ಲ. ನಿನಗೆ ಆ ವಿಷಯ ಮರೆತಿರ ಬಹುದು ಎಂದು ನನ್ನ ಕಲ್ಪನೆಗೆ ಬರಬಾರದೇನು ? ಹಾಗೆ ಬಂದುದನ್ನು ಹೇಳಿಬಿಡ ಬಾರದೇನು ?

ರಮೆ:– ಹೇಳಬಾರದು ಅಂತ ಅಲ್ಲ. ಅದೇನು ಒಂದು ಮಹಾ ದೊಡ್ಡ ವಿಷಯ ಅನ್ನುವಂತೆ ನೀವು ಅದರ ಕುರಿತು ಒಂದು ಅಭಿಪ್ರಾಯ ತಾಳಿರುವದು, ಅದರ ಕುರಿತು ಊಹೆ ಮಾಡುವದು ಎಲ್ಲ ಮಾಡಬೇಕು ಅಂತ ?

ಮುರಳಿ:– ಅದೇ. ನಾನು ಆಗಲೇ ಹೇಳಲಿಲ್ಲವೆ ? ಅದೇ ನನಗೆ ಗೊತ್ತು ಅಂತ ನಾನಂದದ್ದು.

ರಮೆ:– ಅಯ್ಯೋ ಗ್ರಹಚಾರವೆ ? ನೀವು ಆಗಲೇ ಹೇಳಿದುದೇನು, ನಿಮಗೆ ಗೊತ್ತು ಎಂಥದು, ಏನಿದು ನಿಮ್ಮ ಮಾತು ?

ಮುರಳಿ:– ಗ್ರಹಚಾರ, ಗ್ರಹಚಾರವೆ! ಏನೂ ಇಲ್ಲದಿರಬೇಕಾದಲ್ಲಿ ಏನೋ ಎಲ್ಲ ಹುಟ್ಟಿಕೊಳ್ಳಬೇಕಾದರೆ ಅದು ನಮ್ಮ ನಮ್ಮ ಉದ್ದೇಶದಿಂದಾಗಿ ಆಗುವದಲ್ಲ. ಗ್ರಹಚಾರದಿಂದ ಮಾತ್ರವೇ ಹೀಗೆಲ್ಲ ಆಗುವದು. ಇಲ್ಲವಾದರೆ ನೀನು ಇಟ್ಟ ನೀರಿನ ಲೋಟ ಕೊಳೆಯಾಗಿತ್ತು ಎಂದು ನಾನು ಮಧ್ಯಾಹ್ನ ಹೇಳಿ ದುದು ನನಗೆ ಜ್ಞಾಪಕವಿತ್ತು ಎಂದು ಹೇಳಿದುದಕ್ಕೇ ನೀನು ಟಕ್ ಅಂತ ನನಗೆ ಅಂಟಿಕೊಂಡುಬಿಟ್ಟಿದ್ದೀ !

ರಮೆ:– ನಿಮ್ಮ ಜಾಣತನ ಏನೂ ತೋರಿಸಬೇಡಿ. ಆಯಿತೆ ? ಅಂತಹ ಸಾವಿರ ಮಾತುಗಳು ಬರುತ್ತವೆ, ಹೋಗುತ್ತವೆ. ಆದರೆ ನಿಮಗೆ ಮಾತ್ರ ಅವು ಹೋಗುವದಿಲ್ಲ. ಅವುಗಳ ನೆನಪೂ ಕಾಡುತ್ತಿರುತ್ತದೆ; ಅವುಗಳ ಕುರಿತು ಊಹನೆಗಳೂ ಹುಟ್ಟುತ್ತಿರುತ್ತವೆ; ಅವುಗಳ ಮೇಲೆ ಅಭಿಪ್ರಾಯಗಳೂ ರೂಪು ಗೊಳ್ಳುತ್ತಿರುತ್ತವೆ ........ ಬೇಡವೆ! ನಮ್ಮಿಬ್ಬರಿಗೆ ಸೇರಿದಂತೆ ಅದೊಂದು ಜೀವನ್ಮರಣ ಪ್ರಶ್ನೆ ನೋಡಿ ! ಆದುದರಿಂದ ಅದರ ಬಗೆಗೆ ನೀವು ಇಷ್ಟು ಗಮನ ಹರಿಸಬೇಕಾದುದು ಅವಶ್ಯವೆ ! ಆಕಾಶದ ಎತ್ತರದಲ್ಲಿ ಸ್ವಚ್ಛಂದವಾಗಿ ಹಾರಾಡುವ ಪಕ್ಷಿರಾಜ ನೆಲದೊಳಗಿನ ಬಿಲದಲ್ಲಿ ಕುರುಡುತ್ತಾ ನಡೆದು ಹುಳು ಹುಪ್ಪಟೆಗಳನ್ನು ಹುಡುಕುವದನ್ನು ನೋಡುವಾಗ........

ಮುರಳಿ:– ........ ನನ್ನ ನೆನಪಾಗುತ್ತದೆ !

ರಮೆ:– ಅಷ್ಟಲ್ಲದೆ ಮತ್ತೇನು ? ಪ್ರಗಲ್ಭ ವಿಚಾರಗಳನ್ನು ತಿಳಿಯಾಗಿ

ಗ್ರಹಿಸಿಕೊಳ್ಳಬಲ್ಲ ಬುದ್ಧಿ ಕ್ಷುದ್ರ ವಿಷಯವೊಂದನ್ನು ಮೆಲುಕು ಹಾಕುತ್ತಾ ಕೂರು ವದನ್ನು ಗಮನಿಸುವಾಗ........

ಮುರಳಿ:– ........... ಬಿಲದಲ್ಲಿ ಸೇರಿಕೊಂಡ ಗರುಡ ಪಕ್ಷಿ ಕುಂಟುತ್ತಾ ನಡೆಯುವದರ ನೆನಪಾಗುತ್ತದೆ.

ರಮೆ:– ಹೌದೇ ಹೌದು ........ ಅಯ್ಯೋ ಹಾಳಾಗಲಿ ಬಿಡಿ. ಏನೋ ಮಾತನಾಡಲು ಹೋಗಿ ಏನೋ ಮಾತೆಲ್ಲ ಬಂದು ಏನೋ ಎಲ್ಲ ಆಗುವದೇಕೆ ? ಹಾಳಾಗಿಹೋಗಲಿ ಬಿಡಿ.

ಮುರಳಿ:– ಬಿಡು. ನಾನೂ ಏನು ಅದನ್ನೇ ಹಿಡಿದುಕೊಂಡಿದ್ದೇನೇನು ? ಬಿಡು.

ರಮೆ:– ........ಲೋಟವಂತೆ, ಕೊಳೆಯಂತೆ, ಈಗ ಅದರ ನೆನಪಂತೆ........

ಮುರಳಿ:– ನನಗೆ ನೆನಪಿರುವದು ತಪ್ಪು ಅನ್ನುತ್ತೀಯ. ಬಿಡಿ ಅಂತ ಹೇಳಿಕೊಂಡು ನೀನೇ ನೆನಪು ಮಾಡಿಕೊಳ್ಳುತ್ತೀಯ !

ರಮೆ:– ........ ಅಲ್ಲಾ, ಏನೋ ಬೇಸರ ಅಂದರೆ ಮಧ್ಯಾಹ್ನ ಊಟಕ್ಕೆ ಇಟ್ಟ ನೀರಿನ ಲೋಟ ಕೊಳೆಯಾಗಿತ್ತು ಎಂದು ನಾನು ಹೇಳಿದುದು ಬೇಸರವೇ ಎಂದು ಕೇಳುತ್ತಾರೆ !........ ಆಯಿತು. ಅದಕ್ಕೆಲ್ಲ ಬೇಸರ ಮಾಡಿಕೊಂಡರೆ ಉದ್ಧಾರವಾಯಿತು.... ಅಂತೂ ನೀವು ಕೆಲವೊಮ್ಮೆ ವಿಪರೀತ ಕಾಡಿಸುತ್ತೀರಿ.

ಮುರಳಿ:– ಏನು ಕಾಡಿಸಿದೆ ?

ರಮೆ:– ಮತ್ತೆ "ನನ್ನ ಊಹೆ ಸರಿಯಾಗಿದೆ; ನನಗೆ ಗೊತ್ತು" ಅಂತ ಎಲ್ಲ ಹೇಳಿದಿರಲ್ಲ, ನನ್ನ ವಿಷಯ ನಿಮಗೆ ಅದೇನು ಗೊತ್ತಾದದ್ದು ?

ಮುರಳಿ:– ನೀರಿನ ಲೋಟ ಕೊಳೆಯಾಗಿತ್ತು ಎಂದು ನಾನು ಹೇಳಿದುದು ನಿನಗೆ ಮರೆತುಹೋಗಿದೆ ಎಂದು ನಾನು ಊಹಿಸಿದುದು ಸರಿಯಾಯಿತು ಎಂದೆ.

ರಮೆ:– ಮರೆಯದೆ ಅದನ್ನೇ ಜಪ ಮಾಡಬೇಕಿತ್ತೇನು ?

ಮುರಳಿ:– ಜಪ ಕೂಡ ಅಲ್ಲ. ರಕ್ತಗತ ಮಾಡಿಕೊಳ್ಳಬೇಕಾಗಿತ್ತು.

ರಮೆ:– ಶಹಭಾಸ್. ಅದೇನು ಭಾರೀ ದೊಡ್ಡ ವಿಷಯ ಅಂತ ರಕ್ತದೊಳಗೆ ಅದನ್ನು ತೂರಿಡಬೇಕಿತ್ತೊ !

ಮುರಳಿ:– ತಪ್ಪು ಸಣ್ಣದೇ ಆಗಲಿ, ದೊಡ್ಡದೇ ಆಗಲಿ. ತಪ್ಪಾಯಿತು ಎನ್ನುವದು ಎಷ್ಟು ಹೆಚ್ಚು ನೆನಪು ಬಂದು ಎಷ್ಟು ಹೆಚ್ಚು ಪಶ್ಚಾತ್ತಾಪವಾಗಿ, ಎಷ್ಟು ಹೆಚ್ಚು ತನ್ನ ಬಗೆಗೇ ತನಗೆ ಬೇಸರ ಬಂದರೆ ಅಷ್ಟರಮಟ್ಟಿಗೆ ಆ ತಪ್ಪು ಇನ್ನು ಪುನಃ ತಲೆ ಹಾಕುವದಿಲ್ಲ.

ರಮೆ:- ಇನ್ನೊಮ್ಮೆ ಸೀರಿಡುವಾಗ ಜ್ಞಾಪಿಸಿಕೊಂಡರೆ ಆಯಿತು.

ಮುರಳಿ:- ಹಾಗೆ ಜ್ಞಾಪಕಕ್ಕೆ ಬರಬೇಕಾದರೆ ಆ ಘಟನೆಯ ನೆನಪು ಆಳಕ್ಕೆ ಇಳಿದಿರಬೇಕು ಎಂದೇ ನಾನು ಹೇಳಿದುದು.

ರಮೆ:- ಆಗಲಿ. ತಪ್ಪು ಮಾಡಿದವರೇನೋ ನೀವು ಹೇಳಿದಂತೆ ಆಗಾಗ ಜ್ಞಾಪಿಸಿಕೊಳ್ಳಬೇಕು. ಆದರೆ ನೀವೇಕೆ ನನ್ನ ತಪ್ಪನ್ನು ನೆನಪಿನಲ್ಲಿಟ್ಟುಕೊಳ್ಳುವದು? ಇವಳು ಎಂತಹ ಕೆಟ್ಟ ಹುಡುಗಿ ಎಂಬದನ್ನು ನೆನಸಿಕೊಂಡು, ನೆನಸಿಕೊಂಡು ಸಂತೋಷಪಡಲಿಕ್ಕೇನು ?

ಮುರಳಿ:- ಅಲ್ಲ. ನಿನ್ನ ತಪ್ಪನ್ನು ನೀನಾಗಿ ನೆನಸಿಕೊಂಡು ತಿದ್ದಿಕೊಳ್ಳಲು ಅಸಮರ್ಥಳಾದರೆ ನಾನಾದರೂ ನಿನಗೆ ಜ್ಞಾಪಿಸಿ ತಿದ್ದೋಣ ಎನ್ನುವದಕ್ಕಾಗಿ.

ರಮೆ:- ಸರಿ. ಮತ್ತೇನು ? ನನ್ನ ಕೆಲಸವನ್ನು ಮಾಡುವ ಗಂಡ ನನಗೆ ಸಿಕ್ಕಿರುವಾಗ ಇನ್ನು ನಾನೇಕೆ ಪರಿಶ್ರಮ ಪಡಬೇಕು?

ಮುರಳಿ:- ಆ ಗಂಡನಿಗೆ ಭಾರವಾಗಿ ಅವನ ತಿರಸ್ಕಾರ ಪಡೆಯದಿರಲು.

ರಮೆ:-ಅಂತೂ ಇಂತಹ ಈ ಚಿಲ್ಲರೆ ಮಾತುಗಳಲ್ಲಿ ಈ ಸುಂದರ ಸಂಜೆಯನ್ನು ಕಳೆಯಬೇಕು ಎನ್ನುತ್ತೀರಿ.

ಮುರಳಿ:- ಚಿಲ್ಲರೆಗಳೇ ದೊಡ್ಡ ಮೊತ್ತವಾಗುವದು. ಸಣ್ಣದನ್ನೂ ಗಮನಿಸುವವರು ದೊಡ್ಡದನ್ನು ಕೈ ಬಿಡುವದೇ ಇಲ್ಲ ಎಂಬದನ್ನು ನಾವು ಮರೆಯಬಾರದು. ಒಂದನ್ನು ಅದು ಸಣ್ಣ ವಿಚಾರ ಎಂದು ಕಡೆಗಣಿಸುವವರು ಯಾವದನ್ನು ದೊಡ್ಡದೆಂದು ಗ್ರಹಿಸುತ್ತಾರೆ ಎಂದು ಹೇಳಲಿಕ್ಕೇ ಸಾಧ್ಯವಿಲ್ಲ. ಯಾವದೇ ಆದರೂ ಸಾಧ್ಯವಾದಷ್ಟು ಸರ್ವಾಂಗಸುಂದರವಾಗಿರಬೇಕು. ಮನಸ್ಸು ಕೂರೂಪವನ್ನು ಒಲ್ಲದು ಎಂದಾದಮೇಲೆ ಪರಿಹರಿಸಲು ಸಾಧ್ಯವಾದ ಕುರೂಪವನ್ನೆಲ್ಲ ನಿವಾರಿಸಿ ಬಾಳಲು ಪ್ರಯತ್ನಿಸಬೇಕು........ಇರಲಿ, ಬಿಡು. ಈಗ ಹೇಳು ಮತ್ತೆ. ಅದೇನೋ ಬೇಸರ ಎಂದೆಯಲ್ಲ. ಏನು ಬೇಸರ ಹೇಳು.

ರಮೆ:- ಬೇಸರ ಅಂತ ಅಲ್ಲ. ನಿಕೃಷ್ಟವಾದ ವಿಷಯದ ಕುರಿತಾಗಲಿ, ಘಟನೆಯ ಕುರಿತಾಗಲಿ ಉಂಟಾದ ಬೇಸರವಲ್ಲ. ನಿಮ್ಮ ಭೀಮನ ಕತೆಯಲ್ಲಿ ನಿನ್ನೆ ಕರ್ಣಾವಸಾನದ ಭಾಗವನ್ನು ಕುರಿತು ಕೇಳಿದಾಗ ಒಟ್ಟಿನಲ್ಲಿ ಮನಸ್ಸಿನ ಮೇಲೆ ಏನೋ ಪರಿಣಾಮವಾಗಿ ಒಂದು ಬಗೆಯ ಮೋಡ ಕವಿದಂತಾಯಿತು, ಅಷ್ಟೆ.

ಮುರಳಿ:- ಕರ್ಣನ ಕತೆ ಅಂತಹುದೇ; ಯಾರನ್ನಾದರೂ ಚಿಂತೆಗೀಡು ಮಾಡುವಂಥಾದ್ದು.

ರಮೆ:– ಕರ್ಣನ ಕತೆಯೇ ಅಂತ ಅಲ್ಲ. ಬಹುಶಃ ಅದು ತಕ್ಷಣ ಪ್ರಚೋದನೆ ಮಾಡಿರಬೇಕು. ಇಡಿಯ ಮಹಾಭಾರತದ ಕತೆಯೇ ಬರಬರುತ್ತಾ ಸ್ಮಶಾನ ಯಾತ್ರೆಯ ಕತೆಯಾಗಿ ಕಾಣಿಸಿಕೊಂಡು ಏನೋ ಒಂದು ಹೇಳಲಾರದ ಮಂಕನ್ನು ಕವಿಸುತ್ತದೆ. ಕುರುಕ್ಷೇತ್ರವನ್ನು ಧರ್ಮಕ್ಷೇತ್ರ ಎಂದು ಕರೆಯುವದೇನೋ ಸರಿ. ಧರ್ಮವು ಅಧರ್ಮವನ್ನು ನಾಶ ಮಾಡಿದ ಯುದ್ಧ ಅದು ಎನ್ನುವದೂ ಸರಿ. ಕೌರವರು ದುಷ್ಟರು ಎಂಬದೂ ಸರಿ. ಪಾಂಡವರು ಧರ್ಮಾತ್ಮರೂ ಸರಿ. ಆದರೂ ಮಹಾ ಪ್ರಾಜ್ಞನಾದ, ಮಹಾ ವೀರನಾದ, ಮಹಾ ಕೃಷ್ಣಭಕ್ತನಾದ, ಎರಡು ಕುಲಗಳಿಗೂ ಪಿತಾಮಹನಾದ ಭೀಷ್ಮನು ಏಕೆ ಸಾಯಬೇಕಿತ್ತು? ಮಹಾ ಬ್ರಾಹ್ಮಣನಾದ, ಧನುರ್ವೇದದ ಆಚಾರ್ಯನೆನಿಸಿದ, ಧರ್ಮಾತ್ಮರಾದ ಪಾಂಡವರಿಗೂ ಅಸ್ತ್ರ ವಿದ್ಯಾಗುರುವಾದ ದ್ರೋಣನು ಹೇಗೆ ಸತ್ತ? ಇನ್ನು ಕರ್ಣನ ವಿಷಯವಂತೂ ಹೇಳಲೇಬಾರದಂತಹದು. ಅವನಾದರೂ ಎಂತಹ ಮರಣವನ್ನು ಪಡೆದ! ಏನು ಧರ್ಮವೋ, ಏನು ಅಧರ್ಮವೋ, ಏನು ಧರ್ಮದ ಜಯವೋ ಒಂದೂ ಅರ್ಥವಾಗುವದಿಲ್ಲ. ಇರಬಹುದು – ನೀವು ಹೇಳಬಹುದು – ಭೀಷ್ಮ, ದ್ರೋಣ, ಕರ್ಣ – ಇವರುಗಳು ಕೌರವರ ಪಕ್ಷವನ್ನು ವಹಿಸಿದುದರಿಂದ ಅವರು ಪ್ರಾಣವನ್ನು ತೆರಬೇಕಾಯಿತು ಎಂದು. ಹಾಗಿದ್ದರೆ ಭೀಷ್ಮನ ವ್ಯಕ್ತಿತ್ವ, ದ್ರೋಣನ ನಿಷ್ಠೆ, ಕರ್ಣನ ಪರಾಕ್ರಮ – ಇವುಗಳಿಗೆಲ್ಲ ಏನೂ ಬೆಲೆ ಇಲ್ಲ ಎಂದಾಯಿತಲ್ಲ! ಧರ್ಮ, ಧರ್ಮ ಎಂದರೆ ಅದೆಂತಹ ಧರ್ಮ? ಪಾಂಡವರು ಮಾಡಿದುದೆಲ್ಲ ಧರ್ಮ, ಕೃಷ್ಣ ಇದ್ದ ಭಾಗದಲ್ಲಿಯೇ ಧರ್ಮ, ಅವರನ್ನು ವಿರೋಧಿಸುವದೇ ಅಧರ್ಮ ಎಂಬ ಅರ್ಥವೇನು? ನಾವು ಹಾಗೆ ಹೇಳಿಕೊಂಡು ಸಮಾಧಾನ ತಂದುಕೊಳ್ಳಬಹುದೇ ಹೊರತು ನಿಜವಾದ ಧರ್ಮ ಯಾವದು? ಯಾವ ಆಚರಣೆ ಸರಿ? ಪ್ರಕೃತಿಯ ನಿಯಮ ಎಂಬದು ಇದೆಯೆ? ಇದ್ದರೆ ಅದು ಸ್ಪಷ್ಟವಾಗಿ ಯಾವದು – ಎಂಬ ಏನೋ ಎಲ್ಲ – ಅಂತೂ ಸರಿಯಾಗಿ ನನ್ನಿಂದ ವಿವರಿಸಲು ಸಾಧ್ಯವಿಲ್ಲದಂತಹ – ನೂರು ಪ್ರಶ್ನೆಗಳು ಮನಸ್ಸಿನಲ್ಲಿ ಹುಟ್ಟಿಕೊಂಡು ಮಹಾಭಾರತ ಕತೆಯು ಅವುಗಳಿಗೆಲ್ಲ ಸಮರ್ಪಕವಾದ ಉತ್ತರಗಳನ್ನು ನೀಡಲು ಸಮರ್ಥವಾಗಿದೆ ಎಂದು ಅನ್ನಿಸದೆ........ಇದೇ ಎಲ್ಲ ಏನೋ ಬೇಸರ, ಅಷ್ಟೆ. ಬೇರೇನಿಲ್ಲ.

ಮುರಳಿ:– ಒಳ್ಳೆಯದು. ಧರ್ಮಾಧರ್ಮಗಳ ವಿವೇಚನೆ ಬಹಳ ಸೂಕ್ಷ್ಮವಾದ ವಿಚಾರ. ಅದು ಹಾಗಿರಬೇಕಾದುದೇ ಸರಿ. ಏಕೆಂದರೆ ಕೇವಲ ಅಗೋಚರವೂ, ಅತ್ಯದ್ಭುತವೂ, ಅತ್ಯಂತ ಅಗಾಧವಾದುದೂ, ಜಟಿಲವಾದುದೂ ಆದ ಈ ವಿಶ್ವವು ಯಾವ ನಿಯಮಕ್ಕನುಸಾರವಾಗಿ ಉಂಟಾಗಿದೆ, ಯಾವ ನಿಯಮವನ್ನು ಅನುಸರಿಸಿ ಇಷ್ಟು ಸ್ಪಷ್ಟವಾಗಿ, ಅಚ್ಚುಕಟ್ಟಾಗಿ ನಡೆಯುತ್ತಿದೆ,

ಯಾವ ನಿಯಮದ ಪೂರೈಕೆಯ ಉದ್ದೇಶ ಇದರಲ್ಲಿ ಅಡಗಿದೆ ಎಂಬ ಅತ್ಯಂತ ಗಹನವಾದ ವಿಚಾರವನ್ನು ನಾವು ಎಷ್ಟು ಸರಿಯಾಗಿ ತಿಳಿದುಕೊಳ್ಳಲು ಸಾಧ್ಯವೋ ಅಷ್ಟು ತಿಳಿದುಕೊಂಡು, ಹಾಗೆ ತಿಳಿದುಕೊಳ್ಳುವಲ್ಲಿ ತಪ್ಪಿದರೆ ಅದಕ್ಕೆ ಏನು ಬೆಲೆ ತೆರಬೇಕೋ ಹಾಗೆ ತೆರುವ ದುಃಖವನ್ನು ಅನುಭವಿಸಿ ಪಾಠ ಕಲಿತುಕೊಂಡು– ಹೀಗೆ ತಲೆತಲಾಂತರಗಳಲ್ಲಿ, ಯುಗ ಯುಗಾಂತರಗಳಲ್ಲಿ ಕಲಿತು ಬಂದ ಪಾಠವನ್ನೇ ಧರ್ಮ ಅಧರ್ಮ ಎಂದು ವಿಂಗಡಿಸಿಕೊಂಡಿರುವದು. ಸಾವಿರ ವೈಜ್ಞಾನಿಕ ಪ್ರಯೋಗಗಳಿಗೇ ಆಗಲಿ, ಸಾವಿರ ವರ್ಷಗಳ ಕಾಲದ ಆಳವಾದ ಅಧ್ಯಯನಕ್ಕೇ ಆಗಲಿ, ಸಾವಿರ ಧೀಮಂತರ ದೀರ್ಘವಾದ ತಪ್ಪಸ್ಸಿಗೇ ಆಗಲಿ ತನ್ನ ರಹಸ್ಯವೆಲ್ಲವನ್ನೂ ಬಿಟ್ಟುಕೊಡದ ಪ್ರಕೃತಿಯ ನಿಯಮವನ್ನು ಆಧರಿಸಿ ರಚಿತಗೊಂಡ ಧರ್ಮ ನಿಯಮಗಳು ಅಷ್ಟರಮಟ್ಟಿಗೂ ಸೂಕ್ಷ್ಮವಾಗಿರಬೇಕಾದುದೇ ಸಹಜ. ಹಾಗಾಗಿಯೇ ಮಾನವ ಕುಲವು ಇಂದು ಆಚರಿಸುತ್ತಿರುವ ವಿವಿಧ ಧರ್ಮಗಳಲ್ಲಿ ಸ್ಥೂಲವಾದ ಏಕತೆಯೂ, ಸೂಕ್ಷ್ಮದ ವಿವರಗಳಲ್ಲಿ ಅಷ್ಟು ಅಂತರವೂ, ವೈವಿಧ್ಯವೂ, ವಿರೋಧಾಭಾಸವೂ ಕಾಣಿಸುತ್ತಿರುವದು. ಅಷ್ಟೇ ಏಕೆ, ಒಂದೇ ಎಂದು ನಾವು ಹೇಳಿಕೊಳ್ಳುವ ಹಿಂದೂ ಧರ್ಮದಲ್ಲಿಯೇ ಆದರೂ ಅನೇಕ ಬಾರಿ ಪರಸ್ಪರ ವಿರೋಧವಾಗಿ ಕಾಣಿಸುವ ಅಂಶಗಳನ್ನು ನಾವು ಗಮನಿಸಬಹುದು. ಏಕಪತ್ನೀ ವ್ರತಸ್ಥನಾದ ರಾಮನನ್ನೂ ಪುರುಷೋತ್ತಮ ಎನ್ನುತ್ತೇವೆ. ಹಲವಾರು ಸ್ತ್ರೀಯರ ಸ್ನೇಹ ಬೆಳೆಸಿದ ಕೃಷ್ಣನನ್ನೂ ಪೂರ್ಣಾವತಾರಿ ಎನ್ನುತ್ತೇವೆ. ವರ್ಣಸಂಕರ ಉಂಟುಮಾಡುವದು ತಪ್ಪು ಎಂದು ಭಗವದ್ಗೀತೆ ಹೇಳುತ್ತದೆ. ಕೆಲವು ಮಹರ್ಷಿಗಳು ಕೀಳು ಜಾತಿಯ ಕನ್ಯೆಯರನ್ನು ವಿವಾಹವಾದ ಉದಾಹರಣೆಗಳು ಸಿಕ್ಕುತ್ತವೆ. ಸನ್ಯಾಸಿಯಾದವನಿಗಂತೂ ಪರಸ್ತ್ರೀ ಸಂಗ ಕೇವಲ ನಿಷಿದ್ಧವಾದುದು. ಆದರೆ ಇಂತಹವರೂ ಪರಸ್ತ್ರೀ ಸಂಗ ಮಾಡಿದ ಉಲ್ಲೇಖಗಳಿವೆ. ಸುಳ್ಳು ಹೇಳುವದು ಪಾಪ. ದ್ರೋಣನ ಮಗನಾದ ಅಶ್ವತ್ಥಾಮನು ಸತ್ತುಹೋದ ಎಂಬ ಅರ್ಥ ಬರುವ ಘೋಷಣೆಯನ್ನು ಕೂಗುವಂತೆ ಯುಧಿಷ್ಠಿರನನ್ನು ಕೃಷ್ಣನೇ ಪ್ರಚೋದಿಸುತ್ತಾನೆ. ಮೋಸದಲ್ಲಿ ಕೊಲ್ಲುವದು ಪಾಪ. ವಾಲಿಯನ್ನು ರಾಮನೂ, ಕರ್ಣನನ್ನು ಕೃಷ್ಣನೂ ಮೋಸದಿಂದ ಕೊಲ್ಲುತ್ತಾರೆ. ದೈವಭಕ್ತಿ, ತಪಸ್ಸುಗಳು ಶ್ರೇಷ್ಠವಾದವುಗಳು. ರಾವಣ ಮೊದಲಾದ ದುಷ್ಟರೂ ಶಿವನನ್ನು ಪ್ರತ್ಯಕ್ಷ ಮಾಡಿಕೊಳ್ಳುವಷ್ಟು ತಪಶ್ಚರ್ಯೆ ಮಾಡಿ ಅವನನ್ನು ಒಲಿಸಿಕೊಂಡಿದ್ದರು. ತುಂಬಿದ ಸಭೆಯಲ್ಲಿ ದ್ರೌಪದಿಯನ್ನು ಕೌರವರು ವಿವಸ್ತ್ರಳನ್ನಾಗಿ ಮಾಡುತ್ತಿದ್ದುದು ಸರಿಯೋ ತಪ್ಪೋ ಎಂದು ಹೇಳಲು ಭೀಷ್ಮಾದಿಗಳು ಕೂಡ ಅಸಮರ್ಥರಾಗಿದ್ದರು. ಹೀಗೆ ಧರ್ಮದ ಸ್ವರೂಪ ಅತ್ಯಂತ ಸೂಕ್ಷ್ಮವಾದುದು. ಕೆಲವೊಮ್ಮೆ ನಮ್ಮ

ಆಚರಣೆಗಳೇ ಧರ್ಮದ ಕಟ್ಟುಕಟ್ಟಲೆಯ ಪ್ರಕಾರ ನಡೆಯಬೇಕಾಗುತ್ತದೆ. ಇನ್ನು ಕೆಲವು ಬಾರಿ ಆಚರಣೆಯು ಧರ್ಮಕ್ಕೆ ವ್ಯತಿರಿಕ್ತವಾಗಿರುವಂತೆ ಕಂಡರೂ ಆಯಾ ಸನ್ನಿವೇಶಕ್ಕೆ ಅನುಸಾರವಾಗಿ ಅದು ಧರ್ಮಾಚರಣೆಯೇ ಆಗಿರುತ್ತದೆ....

ರಮೆ:– ........ ಅಂದರೆ ನೀವು ಒಟ್ಟಿನಲ್ಲಿ ಈಗ ಏನು ಹೇಳುತ್ತಿದ್ದೀರಿ ? ಭೀಮನ ಕತೆಯನ್ನು ಕೇಳಿ ನನ್ನ ಮನಸ್ಸು ಏನೋ ಬೇಸರವನ್ನು ತಾಳಿದಂತಾದುದು ಧರ್ಮವೆಂದಾಗಲಿ, ಅಧರ್ಮವೆಂದಾಗಲಿ ಹೇಳುತ್ತಿದ್ದೀರೇನು ?

ಮುರಳಿ:– ಛೆ. ಇಲ್ಲ. ನಿನ್ನ ಆ ಬೇಸರಕ್ಕೆ ಕಾರಣವಾದ ವಿಷಯಗಳ ಮೂಲ ಧರ್ಮ–ಅಧರ್ಮಗಳ ಕುರಿತಾದುದರಿಂದ ಅದನ್ನು ವಿವೇಚಿಸಲು ಪ್ರಯತ್ನಿಸಿದೆ ಅಷ್ಟೆ. ಕುರುಕ್ಷೇತ್ರ ಧರ್ಮಕ್ಷೇತ್ರ ಹೇಗಾಯಿತು ? ಭೀಷ್ಮ, ದ್ರೋಣ, ಕರ್ಣರು ಏಕೆ ಈ ಯುದ್ಧದಲ್ಲಿ ನಾಶವಾದರು ? ಈ ಯುದ್ಧದಿಂದ ಆದ ಧರ್ಮದ ಪ್ರತಿಷ್ಠಾಪನೆ ಏನು ? ಎಂದು ಮುಂತಾಗಿ ನಿನಗೆ ಸಂದೇಹಗಳು ಬಂದುದು ತಾನೆ ?

ರಮೆ:– ಹೌದು........ಇರಬಹುದು ಅನ್ನುತ್ತೇನೆ. ಏಕೆಂದರೆ ನನಗೆ ಬೇಸರವಾಗಿರುವ ಕಾರಣ ನನಗೇ ಸ್ಪಷ್ಟವಾಗಿ ಗೊತ್ತಾಗುತ್ತಿಲ್ಲ. ಒಟ್ಟಿನಲ್ಲಿ ನಿಮ್ಮ ಕತೆಯಲ್ಲಿ ಕುರುಕ್ಷೇತ್ರ ಯುದ್ಧ ಪ್ರಾರಂಭವಾದ ಭಾಗದಿಂದ ಈಚೆಗೆ ಕೇಳುತ್ತಿದ್ದಂತೆಯೇ ಏನೋ ಒಂದು ವಿಧದ ಬೇಸರವೋ, ವೈರಾಗ್ಯವೋ, ನಿರುತ್ಸಾಹವೋ– ಏನೋ ಕಾಣಿಸಿಕೊಂಡಿದೆ.

ಮುರಳಿ:– ಹೌದು. ನಾನು ಈಗ ಹೇಳಿದುದೇ ಅದಕ್ಕೆ ಕಾರಣ. ಯುದ್ಧ, ರಕ್ತಪಾತ, ಕೊಲೆ, ನಾಶ, ನಾಶ, ನಾಶ. ಇದರಿಂದ ನಿನ್ನ ಮನಸ್ಸು ಹಾಗೆ ಹಿಮ್ಮೆಟ್ಟಿದಂತಾಗಿರುವದು. ಈ ನಾಶವು ಅದೆಂತಹ ಧರ್ಮ ಎಂಬ ಸಂದೇಹವು ಗುಪ್ತವಾಗಿ ಹೊಗೆಯಾಡುತ್ತಿದ್ದು ನಿನ್ನ ಮನಸ್ಸಿನ ಬೇಸರವನ್ನು ಹೆಚ್ಚಿಸಿರುವದು. ನೀನು ಕೌರವ ಪಾಳೆಯದಲ್ಲಿ ನಿಂತು ಕುರುಕ್ಷೇತ್ರವನ್ನು ನೋಡಬೇಡ. ಎದೆಯೊಡೆಯುತ್ತದೆ. ಪಾಂಡವ ಪಕ್ಷದಲ್ಲಿಯೂ ನಿಂತು ನೋಡಬೇಡ. ಪ್ರಚಂಡ ಪರಿಶ್ರಮದಿಂದ ಕೊನೆಗೆ ಪಡೆದುದು ಕೇವಲ ಸುಡುಗಾಡನ್ನು ಎನ್ನಿಸಿ ಮನಸ್ಸು ಹೇಸುತ್ತದೆ. ಕೃಷ್ಣನ ಮಡಿಲಲ್ಲಿ ಕುಳಿತು ಕುರುಕ್ಷೇತ್ರವನ್ನು ನೋಡು. ಆಗ ಸರಿಯಾಗಿ ನೋಡಿದಂತಾಗುತ್ತದೆ.

ರಮೆ:– ತನ್ನ ಭಕ್ತನೇ ಆಗಿದ್ದ ಭೀಷ್ಮನನ್ನು ಕೃಷ್ಣ ಕೊಲ್ಲಿಸಿದುದು ಸರಿ ಎಂದು ಕೃಷ್ಣನ ಮಡಿಲಿನಲ್ಲಿ ಕುಳಿತು ನೋಡಿದರಾದರೂ ಹೇಗೆ ಕಾಣಿಸುವದು ?

ಮುರಳಿ:– ಅದನ್ನೇ ಹೇಳುತ್ತಿದ್ದೇನೆ. ಇದನ್ನು ಪೂರ್ತಿಯಾಗಿ ವಿವರಿಸಲು ಹೊರಟರೆ ಕೃಷ್ಣನ ಜೀವನದ ಪ್ರಧಾನ ಭಾಗವನ್ನೂ, ಲೋಕಮಾನ್ಯವಾದ ಅವನ

ಗೀತೆಯ ವಿಮರ್ಶೆಯನ್ನೂ ಮಾಡಿಕೊಂಡು ಹೋಗಬೇಕಾಗುತ್ತದೆ. ಕೇವಲ ಸ್ಥೂಲವಾಗಿ ಮುಗಿಸುತ್ತೇನೆ. ಭೀಷ್ಮ, ದ್ರೋಣ, ಕರ್ಣರ ಸಾವು ಹೇಗೆ ಧರ್ಮ ಸಮ್ಮತ ಎಂಬದನ್ನಷ್ಟೇ – ಅದನ್ನು ಸ್ಥೂಲವಾಗಿ ಮಾತ್ರ – ವಿಮರ್ಶಿಸೋಣ.

ರಮೆ:– ಸಾಕು ಸದ್ಯ. ಸ್ಥೂಲವಾಗಿ ಮಾತ್ರ ಹೇಳಿ. ಇನ್ನು ಉಳಿದ ಭೀಮನ ಕತೆಯ ಭಾಗವನ್ನು ಈ ದಿನ ಮುಗಿಸಬೇಕು.

ಮುರಳಿ:– ಹೌದು. ಅದರಿಂದಾಗಿಯೇ ಹೇಳಿದೆ. ಈಗ ನೋಡು. ಭೀಷ್ಮ, ದ್ರೋಣ, ಕರ್ಣರ ಪೈಕಿ ಮೂವರೂ ಸತ್ಕುಲ ಪ್ರಸೂತರೂ, ಆದುದರಿಂದ ಸಜ್ಜನಿಕೆಯನ್ನು ರಕ್ತದಲ್ಲಿ ಪಡೆದವರೂ ಆಗಿದ್ದು ಆ ಮೂವರೂ ಧರ್ಮ ಸ್ಥಾಪನೆಯ ಯುದ್ಧದಲ್ಲಿ ನಾಶವಾದುದು ಹೇಗೆ ಎಂದು ನಿನಗೆ ಅನಿಸಿದೆ. ಈ ಮೂವರಿಗೂ ದೊರಕಿದ ಸಹವಾಸವೂ, ಅದರಿಂದಾಗಿ ಅವರುಗಳು ಪಡೆದ ಅಂತ್ಯವೂ ಒಂದೇ ಬಗೆಯವುಗಳಾದರೂ ಈ ಮೂವರಲ್ಲಿ ಒಬ್ಬೊಬ್ಬರ ಅಂತರಂಗವೂ ಇತರ ಇಬ್ಬರಿಗಿಂತ ಭಿನ್ನವಾಗಿತ್ತು. ಆದರೆ ಮೂವರೂ ಕೇವಲ ವಿಧಿಯ ಕೈಗೊಂಬೆಗಳಾಗಿದ್ದರು. ಇವರುಗಳು ತಾವು ಬಯಸಿ ದುಷ್ಟ ಕೌರವರ ಪಕ್ಷವನ್ನು ವಹಿಸಿದವರಲ್ಲ. ಕರ್ಣನು ಸತ್ಕುಲ ಪ್ರಸೂತನಾದರೂ ವಿಧಿಯ ಕೈವಾಡದಲ್ಲಿ ಸಿಕ್ಕಿ ಕುಲಹೀನನೆಂದು ಭಂಗಿಸಲ್ಪಟ್ಟು ಲೋಕದಿಂದ ತಿರಸ್ಕರಿಸಲ್ಪಟ್ಟಾಗ ದುರ್ಯೋಧನನ ಸೌಜನ್ಯದಿಂದ ಒಬ್ಬ ಅರಸನಾಗಿ ಮಾಡಲ್ಪಟ್ಟು ಆ ದಾಕ್ಷಿಣ್ಯಕ್ಕಾಗಿ ದುರ್ಯೋಧನನ ಪಕ್ಷಕ್ಕೆ ತಳ್ಳಲ್ಪಟ್ಟವನು. ದ್ರೋಣನೂ ಅಷ್ಟೆ. ಶಸ್ತ್ರವಿದ್ಯೆಯಲ್ಲಿ ಅಸಾಮಾನ್ಯ ಪಂಡಿತನಾಗಿದ್ದರೂ ನಿಷ್ಠುರವಾದ ಬಡತನದಲ್ಲಿ ಸಿಕ್ಕಿ ತನ್ನ ಸಂಸಾರವನ್ನೇ ಸಾಕಲಾರದೆ ಅಲೆಯುತ್ತಿದ್ದಾಗ ಹಸ್ತಿನಾವತಿಯ ರಾಜಾಶ್ರಯಕ್ಕೆ ಬಂದು ಸಿಕ್ಕಿಕೊಂಡು ಅದೇ ರಾಜ ಪೀಠಕ್ಕೆ ನಿಷ್ಠೆಯನ್ನು ತೋರುತ್ತಾ ಇರಬೇಕಾಗಿದ್ದು ದುರ್ಯೋಧನನ ಪಕ್ಷದಲ್ಲಿ ಸೆರೆ ಸಿಕ್ಕಿಕೊಂಡನು. ಭೀಷ್ಮನೂ ಹೀಗೆಯೇ, ಹಸ್ತಿನಾವತಿಯ ರಾಜಪೀಠಕ್ಕೆ ಬಾಧ್ಯಸ್ಥನಾದವನಾಗಿದ್ದು ಅವಿವಾಹಿತನಾಗಿ ಉಳಿದುದರಿಂದ ತನ್ನ ಬಲ ತಮ್ಮನ ಮಕ್ಕಳು ದೈಹಿಕವಾಗಿ ವಿಕಲತೆಯಿಂದ ಕೂಡಿದ್ದಾಗ ರಾಜ್ಯ ಸಂರಕ್ಷಣೆಯ ಜವಾಬ್ದಾರಿಕೆಯನ್ನು ಹೊತ್ತು ರಾಜಮನೆತನದ ರಕ್ಷಕನಾಗಿ ನಿಂತು ಅದೇ ನಿಟ್ಟಿನಲ್ಲಿ ದುರ್ಯೋಧನನ ಪಕ್ಷ ವಹಿಸಿ ಅಲ್ಲಿಯೇ ಉಳಿಯಬೇಕಾಗಿ ಬಂದವನು.

ಹೀಗೆ ಕೇವಲ ವಿಧಿಯ ಸಂಕಲ್ಪದಿಂದಾಗಿ ಈ ಮೂವರೂ ಕೌರವ ಪಕ್ಷ ವಹಿಸಿದವರಾದುದರಿಂದ ದುರ್ಯೋಧನನ ಅಧರ್ಮವನ್ನು ಅವರು ಸ್ವಇಚ್ಛೆಯಿಂದ ಪ್ರೋತ್ಸಾಹಿಸಿದಂತಾಗುವದಿಲ್ಲವಾಗಿ ಅವರು ಧರ್ಮದ–ಅಥವಾ ಪ್ರಕೃತಿ ನಿಯಮದ ಆಘಾತಕ್ಕೆ ಸಿಕ್ಕಿ ಸತ್ತುದೇಕೆ ಎಂದು ನಮಗೆ ತೋರುವದು ಸಹಜ. ನಾವು

ಉದ್ದೇಶಪೂರ್ವಕವಾಗಿ ಕೆಸರಿನಲ್ಲಿ ಕಾಲಿಡುವದಿಲ್ಲ ಎಂದು ಇಟ್ಟುಕೊಳ್ಳೋಣ. ನಮ್ಮ ಇಚ್ಛೆಗೆ ವಿರುದ್ಧವಾಗಿಯೇ ಯಾರೋ ನಮ್ಮನ್ನು ಕೆಸರಿಗೆ ತಳ್ಳಿಬಿಡುತ್ತಾರೆ ಎಂದಿಟ್ಟುಕೊಳ್ಳೋಣ. ಹಾಗೆಂದ ಮಾತ್ರಕ್ಕೆ ನಮ್ಮ ಮೈಗೆ ಕೆಸರು ಅಂಟುವದಿಲ್ಲವೆಂದಾಗಲಿ, ನಾವು ಆ ಕೆಸರಿನಲ್ಲಿ ಹುಗಿದುಕೊಳ್ಳುವದಿಲ್ಲವೆಂದಾಗಲಿ ಹೇಳಲು ಸಾಧ್ಯವಿಲ್ಲ. ಯಾವ್ಯಾವದೋ ಕಾರಣಗಳಿಂದಾಗಿ ಈ ಮೂವರೂ ಕೌರವರ ಆಸ್ಥಾನದಲ್ಲಿ ಸಿಕ್ಕಿಕೊಂಡವರು ಎಂಬದು ನಿಜ. ಅವರು ಹಾಗೆ ಸಿಕ್ಕಿಕೊಳ್ಳಬೇಕಾದಾಗ ದುರ್ಯೋಧನಾದಿಗಳು ಮುಂದಕ್ಕೆ ಅಧರ್ಮಿಗಳಾಗಿ ಬೆಳೆಯುತ್ತಾರೆಂಬದನ್ನು ಅವರು ಊಹಿಸಲು ಸಾಧ್ಯವಾಗಿಲ್ಲದಿರಬಹುದು. ಆದರೆ ಕೌರವರು ಕ್ರಮಶಃ ಪಾಂಡವರನ್ನು ಕಂಡುಕೊಳ್ಳುತ್ತಿದ್ದ ರೀತಿಯಿಂದಾಗಿ ಅವರು ಅಧರ್ಮದ ಹಾದಿ ಹಿಡಿದಿದ್ದಾರೆ ಎಂಬದನ್ನು ತಿಳಿಯಲು ಇವರಿಗೆ ಕಷ್ಟವಾಗಿರಲಿಕ್ಕಿಲ್ಲ. ಅಂತಹ ಪ್ರತಿಯೊಂದು ಸಂದರ್ಭದಲ್ಲಿಯೂ ಭೀಷ್ಮನು ಕೌರವರಿಗೆ ಬುದ್ಧಿ ಹೇಳಿ ಅವರನ್ನು ತಿದ್ದಲು ಪ್ರಯತ್ನಪಟ್ಟಿದ್ದಾನೆ, ನಿಜ. ಆದರೆ ಅಷ್ಟೇ. ಅವನು ಅವರ ಅಧರ್ಮ ಕಾರ್ಯಾಚರಣೆಯನ್ನು ಪೂರ್ಣವಾಗಿ ತಡೆಗಟ್ಟಲು ಮನಸ್ಸು ಮಾಡಲಿಲ್ಲ. ಭೀಷ್ಮನು ಇಷ್ಟಾದರೆ ದ್ರೋಣನು ಈ ವಿಚಾರದಲ್ಲಿ ವಿಶೇಷ ಆಸಕ್ತಿಯನ್ನೇ ತಳೆಯದಿರುವದನ್ನು ಕಾಣುತ್ತೇವೆ. ದುರ್ಯೋಧನನಿಗೆ ತಿಳಿಯಹೇಳುವ ಭೀಷ್ಮನ ಹಿತವಚನಗಳಿಗೆ ದ್ರೋಣನು ಹ್ಞೂಗುಟ್ಟುತ್ತಿದ್ದನಷ್ಟೇ ಹೊರತು ಹೆಚ್ಚಿನದೇನನ್ನೂ ಮಾಡಲು ಪ್ರಯತ್ನಿಸಲಿಲ್ಲ. ಇನ್ನು ಕರ್ಣನಂತೂ ಇದಕ್ಕಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ ದುರ್ಯೋಧನನ ಅಧರ್ಮಾಚರಣೆಗಳಿಗೆ ಪ್ರೋತ್ಸಾಹಕನಾಗಿಯೇ ನಿಂತವನು. ದುರ್ಯೋಧನನನ್ನು ಅವನು ತನ್ನ ಪ್ರಾಣಕ್ಕಿಂತ ಮಿಗಿಲಾಗಿ ಪ್ರೀತಿಸಿದ್ದನು ಎಂಬದು ಲೋಕಪ್ರಸಿದ್ಧವಾಗಿದೆ. ಅರ್ಥಾತ್, ಅವನು ಅಧರ್ಮಿಯೊಬ್ಬನನ್ನು, ಅಂದರೆ ಅಧರ್ಮವನ್ನು, ಪ್ರಾಣಕ್ಕಿಂತ ಮಿಗಿಲಾಗಿ ಪೋಷಿಸಿದ್ದನು ಎಂದು ಹೇಳಿದಂತೆಯೇ ಆಗುತ್ತದೆ.

ಕೌರವರು ಪಾಂಡವರನ್ನು–ಅದರಲ್ಲಿಯೂ ಭೀಮನನ್ನು – ಚಿಕ್ಕಂದಿನಲ್ಲಿಯೇ ಕೊಲ್ಲಲು ಹಲವು ವಿಧಗಳಿಂದ ಪ್ರಯತ್ನಿಸಿದುದನ್ನು ಹುಡುಗಾಟ ಎಂದು ಭಾವಿಸಿ ಅಷ್ಟರಿಂದಲೇ ಕೌರವರು ಅಧರ್ಮಿಗಳೆಂದು ತೀರ್ಮಾನಿಸಲು ಇವರ್‍ಯಾರಿಗೂ ಸಾಧ್ಯವಿಲ್ಲವಾಯಿತು ಎಂದೇ ಇಟ್ಟುಕೋಳ್ಳೋಣ. ದ್ಯೂತದಂತಹ ಕೆಟ್ಟ ವ್ಯಸನಕ್ಕೆ ಬಲಿಯಾದ ಯುಧಿಷ್ಠಿರನು ಅದರ ಪ್ರಾಯಶ್ಚಿತ್ತರೂಪವಾಗಿ ತನ್ನ ರಾಜ್ಯಕೋಶಾದಿಗಳನ್ನು ಕಳೆದುಕೊಂಡನೆಂದೂ, ಇಲ್ಲಿ ಕೂಡ ಕೌರವರು ಅಧರ್ಮ ಮಾಡಿದಂತಾಗುವದಿಲ್ಲವೆಂದೂ ಇವರುಗಳು ಭಾವಿಸಿದರೆಂದು ಬೇಕಾದರೂ ಇಟ್ಟುಕೊಳ್ಳೋಣ. ತುಂಬಿದ ಸಭೆಯಲ್ಲಿ ದ್ರೌಪದಿಯನ್ನು ವಿವಸ್ತ್ರಳನ್ನಾಗಿ ಮಾಡಲು ಪ್ರಯತ್ನಿಸಿದ ಕೌರವರಿಗೆ ಹಾಗೆ ಮಾಡಲು ಅಧಿಕಾರವಿದ್ದಿರಬಹುದಾದರೂ ಅದಕ್ಕೆ

ಧರ್ಮದ ಬೆಂಬಲವಿತ್ತೇ ಎಂಬದನ್ನು ಇವರುಗಳು ಯೋಚಿಸಬಹುದಿತ್ತು. ಇದೆಲ್ಲವೂ ಆಗಿ ಪಾಂಡವರು ತಾವು ಬದ್ಧರಾಗಿದ್ದಂತೆ ಹದಿಮೂರು ವರ್ಷಗಳ ಕಾಲ ಅರಣ್ಯವಾಸವನ್ನು ಅನುಭವಿಸಿ ಬಂದ ಮೇಲಾದರೂ ಅವರಿಗೆ ಸೇರಬೇಕಾಗಿದ್ದು, ದ್ಯೂತದ ಮೂಲಕ ಹದಿಮೂರು ವರ್ಷಗಳ ಕಾಲ ತಾನು ಅವರಿಂದ ಕಿತ್ತುಕೊಂಡು ಅನುಭವಿಸುತ್ತಿದ್ದ ಅವರ ರಾಜ್ಯವನ್ನು ಅವರಿಗೆ ಕೌರವರು ಬಿಟ್ಟುಕೊಡದೆ ರಕ್ತಪಾತಕ್ಕೇ ಸಿದ್ಧರಾದುದು ಯಾವ ದೃಷ್ಟಿಯಿಂದಲೂ ಒಪ್ಪುವಂತಹ ಕೃತ್ಯವೆನಿಸುವದಿಲ್ಲ. ಇಂತಹ ಒಂದು ಸ್ಪಷ್ಟವಾದ ಅಧರ್ಮಾಚರಣೆಯ ಕಾಲದಲ್ಲಿ ಭೀಷ್ಮ, ದ್ರೋಣ, ಕರ್ಣರು ದುರ್ಯೋಧನನ ಪಕ್ಷವನ್ನು ತ್ಯಜಿಸಲು ನಿರ್ಧರಿಸಿದ್ದರೆ – ಬಹುಶಃ ಕುರುಕ್ಷೇತ್ರ ಯುದ್ಧವೇ ಆಗುತ್ತಿರಲಿಲ್ಲವೇನೋ. ಯುದ್ಧಕ್ಕೆ ಕರ್ಣನು ಪ್ರೋತ್ಸಾಹಕನಾಗಿಯೇ ನಿಂತನು. ದ್ರೋಣನು ಸ್ಪಷ್ಟವಾದ ಅಭಿಪ್ರಾಯ ಕೊಡಲಿಲ್ಲ. ಭೀಷ್ಮನು ವಿರೋಧಿಸಿದರೂ ಅವನ ವಿರೋಧವು ಪರಿಣಾಮಕಾರಿಯಾಗಲಿಲ್ಲ. ಹೀಗೆ ಈ ಮೂವರೂ ಅಧರ್ಮದ ಪರ ವಹಿಸಿ ಧರ್ಮದ ಮೇಲೆ ಯುದ್ಧ ಸಾರಿದಂತೆಯೇ ಆಯಿತು. ಅವರು ದುರ್ಯೋಧನನ ಆಶ್ರಯದಲ್ಲಿ ಸೇರಿದುದು ವಿಧಿಯ ಸಂಕಲ್ಪದಿಂದ ಎಂಬದು ನಿಜವಾದರೂ, ಧರ್ಮ ವಿರುದ್ಧವಾಗಿ ಕೌರವರು ಪಾಂಡವರ ಮೇಲೆ ಸಾರಿದ ಯುದ್ಧದಲ್ಲಿ ಅವರು ಧರ್ಮಪರಾಯಣರಾಗಿದ್ದರೆ ಪಾಂಡವರ ಪಕ್ಷವನ್ನು ಸೇರಬೇಕಾಗಿತ್ತು. ಕೊನೆಯ ಪಕ್ಷ ಕೌರವರನ್ನು ತ್ಯಜಿಸಿ ಎರಡು ಕಡೆಗೂ ಸೇರದೆ ತಟಸ್ಥವಾಗಿಯಾದರೂ ಇದ್ದುಬಿಡಬಹುದಾಗಿತ್ತು. ಹೀಗೆ ಮಾಡದೆ ಅವರು ಕೌರವರ ಪಕ್ಷದಲ್ಲಿಯೇ ಉಳಿದು ಯುದ್ಧ ಮಾಡಿದುದಕ್ಕೆ ಅವರು ವಿಧಿಯನ್ನು ಹೊಣೆ ಮಾಡಲು ಸಾಧ್ಯವಿಲ್ಲ. ಇದು ಅವರದೇ ತೀರ್ಮಾನ. ಹೀಗೆ, ತಿಳಿದೂ ತಿಳಿದೂ ಅವರು ಅಧರ್ಮದ ಪಕ್ಷದಲ್ಲಿ ನಿಂತು, ಧರ್ಮದ ಮೇಲೆ ಯುದ್ಧ ಸಾರಿದುದರಿಂದ ಧರ್ಮವು – ಪ್ರಕೃತಿಯ ಸತ್ವವು, ಸತ್ಯವು – ಅವರನ್ನು ನಾಶಮಾಡುವದು ಅನಿವಾರ್ಯವಾಯಿತು.

ಆದರೆ ಪ್ರಕೃತಿಯ ರಹಸ್ಯವು ಇಷ್ಟು ಮಾತ್ರವೇ ಗೋಚರವಾಗುವದಲ್ಲ. ಈ ಮೂವರೂ ಒಂದೇ ಬಗೆಯಾಗಿ ಅಧರ್ಮವನ್ನು ಪ್ರೋತ್ಸಾಹಿಸಿ ಧರ್ಮದಿಂದ ನಾಶಗೊಳಿಸಲ್ಪಟ್ಟರು ಎಂಬದು ನಿಜವಾದರೂ ಇವರು ನಾಶಗೊಂಡುದರಲ್ಲಿ ಪರಸ್ಪರ ಬಹಳ ವ್ಯತ್ಯಾಸವಿದೆ. ನಾವು ಹಿಂದೆ ನೋಡಿದಂತೆ ಭೀಷ್ಮನು ಕೌರವರ ಅಧರ್ಮಾಚರಣೆಗೆ ಪ್ರೋತ್ಸಾಹ ಕೊಡದಿರುವದಷ್ಟೇ ಅಲ್ಲದೆ ಅಂತಹ ಪ್ರತಿಯೊಂದು ಸಂದರ್ಭದಲ್ಲಿಯೂ ಅವರ ನಡತೆಯನ್ನು ವಿರೋಧಿಸುತ್ತಲೂ ಬಂದಿದ್ದಾನೆ. ತಮ್ಮ ವರ್ತನೆಗಳಿಗೆ ಭೀಷ್ಮನೊಬ್ಬ ದೊಡ್ಡ ಅಡ್ಡಿ ಎಂದು ಕೌರವರು ಆಗಾಗ ದೂರುತ್ತಿದ್ದುದೂ ಇದೆ. ಹಾಗಾಗಿಯೇ ಭೀಷ್ಮನು ಕೌರವ ಪಾಳೆಯದಲ್ಲಿದ್ದ ಒಬ್ಬ ಧರ್ಮಾತ್ಮ ಎಂದು ಪಾಂಡವರಿಂದ, ಕೃಷ್ಣನಿಂದ ಗಮನಿಸಲ್ಪಡುತ್ತಿದ್ದುದು.

ಆದರೆ ಕುರುಕ್ಷೇತ್ರ ಯುದ್ಧದಲ್ಲಿ ಧರ್ಮ, ಅಧರ್ಮಗಳ ಬಲಾಬಲದ ಕೊನೆಯ ತೀರ್ಮಾನ ಮಾಡುವ ಸಂದರ್ಭದಲ್ಲಿ ಭೀಷ್ಮನು ಒಂದು ವಿಚಿತ್ರ ಸನ್ನಿವೇಶದಲ್ಲಿ ಸಿಕ್ಕಿಕೊಂಡಂತಾಗುತ್ತದೆ. ಸ್ವತಃ ಧರ್ಮಾತ್ಮನಾದ ಅವನು ಅಧರ್ಮದ ಪಕ್ಷವನ್ನು ಸೇರಿ ಧರ್ಮದ ವಿರುದ್ಧ ಹೋರಾಡುತ್ತಿರುವ ಆಭಾಸದಲ್ಲಿ ಸಿಕ್ಕಿಕೊಳ್ಳುತ್ತಾನೆ. ಅವನು ಧರ್ಮಾತ್ಮನಾದಷ್ಟರವುಟ್ಟಿಗೆ ಅವನನ್ನು ಜಯಿಸಲು ಧರ್ಮದ ಪಕ್ಷಕ್ಕೂ ಸಾಧ್ಯವಾಗುವದಿಲ್ಲ. ಮಾತ್ರವಲ್ಲ, ಧರ್ಮದ ಧ್ವಜವನ್ನು ಎತ್ತಿ ಹಿಡಿದ ಕೃಷ್ಣನು ಸ್ವತಃ ತಾನೇ ತನ್ನ ಪ್ರತಿಜ್ಞೆಯನ್ನು ಕೈಬಿಟ್ಟು ಧರ್ಮಾತ್ಮನಾದ ಭೀಷ್ಮನ ಪ್ರತಿಜ್ಞೆ ಪೂರೈಸಲ್ಪಡುವ ಅವಕಾಶ ಮಾಡಿಕೊಡುತ್ತಾನೆ. ಆದರೆ ಮಾತ್ರ ಭೀಷ್ಮನು ನಾಶ ಹೊಂದಲೇ ಬೇಕು. ಇಲ್ಲವಾದರೆ ಅವನು ವಹಿಸಿದ ಪಕ್ಷದ ಅಧರ್ಮವನ್ನು ನಾಶಗೊಳಿಸಿದಂತಾಗುವದಿಲ್ಲ. ಇದೊಂದು ವಿಚಿತ್ರ ಸನ್ನಿವೇಶ. ಅವನು ಧರ್ಮಾತ್ಮನಾಗಿದ್ದು ಧರ್ಮದಿಂದ ಅವನು ನಾಶಗೊಳಿಸಲ್ಪಡಲು ಸಾಧ್ಯವಿಲ್ಲದಿರುವಾಗಲೇ, ಅವನು ಅಧರ್ಮದ ಪಕ್ಷ ವಹಿಸಿ ಧರ್ಮದಿಂದ ನಾಶಗೊಳಿಸಲ್ಪಡಲೇಬೇಕಾದ ಸಂದರ್ಭ. ಆದುದರಿಂದಲೇ ಭೀಷ್ಮನ ಅಂತಹ ಸಾವು. ಅವನು ಕೊಲ್ಲಲ್ಪಡುವದಿಲ್ಲ. ತಾನಾಗಿಯೇ ಸಾವನ್ನು ಸ್ವಾಗತಿಸುತ್ತಾನೆ. ಅವನ ಧರ್ಮದ ಹೆಚ್ಚುಗಾರಿಕೆಯೂ ಉಳಿದು, ಅವನ ಪಕ್ಷದ ಅಧರ್ಮವು ನಾಶವೂ ಆಗುವಂತಹ ಸನ್ನಿವೇಶವನ್ನು ನಾವು ಇಲ್ಲಿ ಕಾಣುತ್ತೇವೆ.

ದ್ರೋಣನ ಸಾವು ಇದಕ್ಕಿಂತ ಸ್ವಲ್ಪ ಭಿನ್ನವಾದುದು. ಅಧರ್ಮಕ್ಕೆ ಜಯ ತರಬೇಕೆಂಬದಕ್ಕಾಗಿ ಅವನು ಧರ್ಮವನ್ನು ವಿರೋಧಿಸಿ ಯುದ್ಧ ಮಾಡಿದವನಲ್ಲ. ಅವನಿಗೆ ಧರ್ಮಾಧರ್ಮಗಳ ಗೊಡವೆಗಿಂತಲೂ ತಾನು, ತನ್ನ ಕುಟುಂಬ–ಇದ ರಲ್ಲಿಯೇ ಹೆಚ್ಚು ಆಸಕ್ತಿ. ಅವನು ಅಧರ್ಮದ ಪಕ್ಷ ವಹಿಸಿದ್ದಾನೆ. ಆದುದರಿಂದ ಅವನು ನಾಶವಾಗಲೇಬೇಕು. ಆದರೆ ಅವನು ಧರ್ಮವನ್ನು ಮನಸಾ ವಿರೋಧಿಸಿ ಯುದ್ಧ ಮಾಡುತ್ತಿರುವವನಲ್ಲ. ಹಾಗಾಗಿ ಅವನು ಕೇವಲ ದುರಂತವನ್ನು ತಂದು ಕೊಂಡು ಸಾಯಬೇಕಾದವನಲ್ಲ. ಧರ್ಮವನ್ನು ವಿರೋಧಿಸಿದುದು ಅವನ ದೌರ್ಬಲ್ಯವಲ್ಲ. ಮಗನ ಮೇಲಿನ ವ್ಯಾಮೋಹದಿಂದ ಅವನು ಧರ್ಮವನ್ನೇ ಆದರೂ ವಿರೋಧಿಸಿ ನಿಂತುದು. ತನ್ನ ಕುಟುಂಬದ ನಿರ್ವಹಣೆಗಾಗಿ, ಮುಖ್ಯ ವಾಗಿ ತನ್ನ ಪ್ರೀತಿಯ ಮಗನ ಸುಖಕ್ಕಾಗಿ, ರಾಜಾಶ್ರಯ ಪಡೆದು ನಿಂತ ಅವನು ಅದೇ ನಿಷ್ಟೆನಲ್ಲಿ ಧರ್ಮವನ್ನು ಎದುರಿಸಿಬಿಟ್ಟಿರುವದು, ಅಷ್ಟೆ. ಹೀಗಾಗಿ ಅವನ ದೌರ್ಬಲ್ಯದ ಮೂಲ ಅವನಿಗೆ ಮಗನ ಮೇಲಿದ್ದ ವ್ಯಾಮೋಹ. ಅವನ ಆ ದೌರ್ಬಲ್ಯವನ್ನೇ ಬಳಸಿಕೊಂಡು ಪ್ರಕೃತಿ ಅವನನ್ನು ಕೊಂದಿತು. ಅಶ್ವತ್ಥಾಮನಿಗೆ ಸಾವಿಲ್ಲವಾದರೂ ಅವನು ಸತ್ತುಹೋದ ಎಂಬ ಭ್ರಮೆಗೆ ಸಿಕ್ಕಿದ ದ್ರೋಣನನ್ನು ವಿಧಿ ನಾಶಮಾಡಿತು.

ಇವರಿಬ್ಬರಿಗಿಂತಲೂ ಕರ್ಣನು ಒಂದು ಹೆಜ್ಜೆ ಮುಂದೆ ಹೋದವನು. ಅವನು ಜನ್ಮತಃ ಅಧರ್ಮಿಯಲ್ಲವಾದರೂ ಸಂಸರ್ಗ ದೋಷವನ್ನು ನಿಯಂತ್ರಿಸ ಲಾರದವನಾಗಿ ಅಧರ್ಮಕ್ಕೆ ಪ್ರೋತ್ಸಾಹವನ್ನೇ ಕೊಟ್ಟುಕೊಂಡು ಬಂದವನು. ಹುಟ್ಟಿನಿಂದಲೇ ದುಷ್ಟನಾಗಿದ್ದು ಅದೇ ರೀತಿ ಬೆಳೆದು ಬಂದರೆ ಆ ದುಷ್ಟತನಕ್ಕೆ ಅನುಗುಣವಾಗಿ ಭೀಕರವಾದ ಸಾವನ್ನು ಕಾಣುವದು ಸಹಜ. ಉದಾಹರಣೆಗೆ ದುಶ್ಶಾಸನ. ಹುಟ್ಟು ದುಷ್ಟ. ಅದೇ ರೀತಿ ನಡೆದು ಬಂದ. ಅದಕ್ಕೆ ಅನುಗುಣ ವಾದ ಭೀಕರ ಸಾವನ್ನಪ್ಪಿದ – ಆದರೆ ಕರ್ಣ ಹಾಗಲ್ಲ. ಅವನ ಹುಟ್ಟು ಶ್ರೇಷ್ಠ ವಾದುದು. ಅಂತರಂಗದಲ್ಲಿ ಅವನು ಅಧರ್ಮಾಚರಣೆಯನ್ನು ವಿರೋಧಿಸಬೇಕಾದ ಗುಣವುಳ್ಳವನು. ಆದರೆ ಹುಟ್ಟು ದುಷ್ಟನಂತೆ ವರ್ತಿಸುತ್ತಿದ್ದಾನೆ. ಯಾವ ಹುಟ್ಟಿನ ಮೂಲಕ ಅವನು ಧರ್ಮಾತ್ಮರಾದ ಪಾಂಡವರ ಪ್ರಮುಖನಾಗಬೇಕಿತ್ತೋ ಅಂತಹ ಸಂಸ್ಕಾರಕ್ಕೆ ವಿರೋಧವಾಗಿ ಅವನು ಅಧರ್ಮಾಚರಣೆಯಲ್ಲಿ ತೊಡಗಿ ದ್ದಾನೆ. ಹೀಗಾಗಿ ಅವನು ನಾಶವಾಗುವದಷ್ಟೇ ಅಲ್ಲ; ಅವನ ನಾಶ ದಾರುಣ ವಾಗಿರಬೇಕಾದುದು ಕೂಡ ಸಹಜವೇ. ಅವನ ನಾಶದ ಹಾದಿಯಲ್ಲಿ ಅವನು ಹಾಕುವ ಹೆಜ್ಜೆ ಹೆಜ್ಜೆಯಲ್ಲಿಯೂ ವಿಧಿ ಅವನಿಗೆ, ಅವನು ಈ ವರೆಗೆ ತನ್ನ ಅಂತರಂಗಕ್ಕೆ ವಿರೋಧವಾಗಿ ವರ್ತಿಸಿದ ಅಪರಾಧವನ್ನು ಜ್ಞಾಪಿಸಿ, ಜ್ಞಾಪಿಸಿ ಅವನನ್ನು ಕೊಲ್ಲುತ್ತದೆ. ಅಂತರಂಗದಲ್ಲಿದ್ದ ಧರ್ಮದ ತಳಹದಿಯ ಮೇಲೆ ಧರ್ಮದ ಸೌಧವನ್ನು ಕಟ್ಟಿ ಲೋಕಕ್ಕೆ ಮಾರ್ಗದರ್ಶಕನಾಗುವದರ ಬದಲಿಗೆ ಜೀವನದ ಆಸೆ, ಆಕಾಂಕ್ಷೆಗಳಿಗೆ ಬಲಿಯಾಗಿ ಅಧರ್ಮದ ಸೌಧವನ್ನು ಕಟ್ಟುವ ವ್ಯಕ್ತಿಯನ್ನು ಧರ್ಮ ಕ್ಷಮಿಸುವದಿಲ್ಲ. ಭೀಷ್ಮ, ದ್ರೋಣ, ಕರ್ಣರ ಸಾವಿನಲ್ಲಿ ಈ ರೀತಿ ಪ್ರಕೃತಿಯ ನಿಷ್ಕೃಷ್ಟವಾದ ನ್ಯಾಯತೀರ್ಪನ್ನು ನೋಡುತ್ತೇವೆ.

ಭೀಷ್ಮನು ಕೊಲ್ಲಲ್ಪಡುವದಿಲ್ಲ. ಅವನಾಗಿಯೇ ತನ್ನ ಸಾವಿಗೆ ಸಮ್ಮತಿ ಕೊಟ್ಟು ಧರ್ಮವು ಅಧರ್ಮದ ಮೇಲೆ ವಿಜಯವನ್ನು ಸಾರಲು ಅವಕಾಶ ಮಾಡಿ ಕೊಟ್ಟು ಸಂತೋಷದಿಂದ ಬೀಳುತ್ತಾನೆ.

ದ್ರೋಣನೂ ಕೊಲ್ಲಲ್ಪಡುವದಿಲ್ಲ. ಆದರೆ ಅವನು ಭೀಷ್ಮನಂತೆ ಸಾವಿಗೆ ಸಮ್ಮತಿ ಕೊಡುವದಿಲ್ಲ. ಇನ್ನೂ ಬದುಕುವ ಇಚ್ಛೆಯನ್ನೂ ಹೊಂದಿದ್ದು, ಆದರೆ ಧರ್ಮದಿಂದ ಕೊಲ್ಲಲ್ಪಡಲೂ ಅವಕಾಶವಾಗದಿದ್ದಂತಹ ಸಂದರ್ಭದಲ್ಲಿ ವೈಯಕ್ತಿಕ ವಾದ ಒಂದು ದುಃಖಕ್ಕೆ ಅವನು ಸಿಕ್ಕಿಕೊಂಡು ಸತ್ತು ಬೀಳುತ್ತಾನೆ.

ಕರ್ಣನು ಹೀಗಲ್ಲ. ಅವನು ಇನ್ನೂ ಬದುಕಲು ಬಯಸಿರುತ್ತಾನೆ, ಧರ್ಮ ವನ್ನು ನಾಶಮಾಡಲೂ ಬಯಸಿರುತ್ತಾನೆ. ಹಾಗಾಗಿ ಅವನು ಅತ್ಯಂತ ವೇದನಾ ಪೂರ್ಣವಾದ ಸಾವನ್ನು ಪಡೆಯುತ್ತಾನೆ.

ಕರ್ಣನ ಜೀವನದ ವಿರುದ್ಧ ಮುಖವನ್ನು ವಿದುರನಲ್ಲಿ ನಾವು ಕಾಣಬಹುದು. ಅವನ ಹುಟ್ಟು, ಬೆಳವಣಿಗೆ, ಎಲ್ಲವೂ ಕೌರವರ ಸಂಗಡಲೇ ಆದರೂ ಅವನು ಶುದ್ಧ ಧರ್ಮಾವಲಂಬಿಯಾಗಿ ಪರಿವರ್ತಿತನಾಗಿದ್ದವನು. ಕೌರವರ ದುಷ್ಟ ವರ್ತನೆಯನ್ನು ಆಗಾಗಲೇ ಖಂಡಿಸುವದು ಮಾತ್ರವಲ್ಲದೆ ಅವರು ಕೊನೆಯದಾಗಿ ಧರ್ಮದ ಮೇಲೆ ಯುದ್ಧವನ್ನು ಸಾರಿದಾಗ ತಾನು ಅದರಲ್ಲಿ ಸೇರಲೊಲ್ಲದೆ ದೂರ ನಿಂತವನು. ಹಾಗಾಗಿ ಅವನು ಅಧರ್ಮವು ಧರ್ಮದಿಂದ ನಾಶ ಮಾಡಲ್ಪಟ್ಟು ಬೆಳಗಿ ನಿಂತು ದನ್ನು ನೋಡಲು ಉಳಿದುಕೊಳ್ಳುತ್ತಾನೆ.

ಧೃತರಾಷ್ಟ್ರನು ಹೀಗೆಯೇ ಉಳಿಯುತ್ತಾನಲ್ಲವೆ ? ಆದರೆ ಅವನು ವಿದುರ ನಂತೆ ಧರ್ಮಾತ್ಮನಲ್ಲವಲ್ಲಾ ಎಂಬ ಪ್ರಶ್ನೆ ಏಳಬಹುದು. ಅವನು ಉಳಿಯುತ್ತಾನೆ, ನಿಜ. ಆದರೆ ಧರ್ಮದ ಉತ್ಕರ್ಷವನ್ನು ನೋಡಿ ಸುಖಪಡಲು ಅವನು ಉಳಿಯು ವದಿಲ್ಲ. ಅಧರ್ಮಿಗಳಾದ ತನ್ನ ಮಕ್ಕಳು ನಾಶವಾದುದನ್ನು ನೆನಸಿಕೊಂಡು ಕೊರಗುವದಕ್ಕಾಗಿ ಉಳಿಯುತ್ತಾನೆ.

ಧರ್ಮದ ರಹಸ್ಯ ಬಹು ವಿಚಿತ್ರವಾದುದು ರಮಾ. ಈಗ ನೋಡು. ಪಾಂಡವರಂತೂ ಧರ್ಮಾತ್ಮರು. ಆದರೆ ಕುರುಕ್ಷೇತ್ರ ಯುದ್ಧವಾದ ಮೇಲೆ ಅವರು ತಮ್ಮ ಮಕ್ಕಳೆಲ್ಲರನ್ನೂ ಕಳೆದುಕೊಂಡುಬಿಡುತ್ತಾರೆ. ಅಶ್ವತ್ಥಾಮ ಅವರನ್ನು ಕೊಂದುಬಿಡುತ್ತಾನೆ. ಹಾಗಾಗಿ, ತಾವು ಯಾವ ರಾಜ್ಯವನ್ನು ಪಡೆಯುವದಕ್ಕಾಗಿ ಕೋಟ್ಯಂತರ ಮಂದಿಯನ್ನು ಕೊಂದರೋ ಅಂತಹ ರಾಜ್ಯವನ್ನು ತಾವು ತಮ್ಮ ಮಕ್ಕಳಿಗೆ ಬಿಟ್ಟು ಹೋಗಲು ಸಾಧ್ಯವಿಲ್ಲದಂತೆ ಅವರು ತಮ್ಮ ಆ ಮಕ್ಕಳನ್ನೆಲ್ಲ ಕಳೆದುಕೊಂಡುಬಿಡುತ್ತಾರೆ. ಅಭಿಮನ್ಯುವಿನ ಮಗುವು ಹುಟ್ಟು ವಾಗಲೇ ಸತ್ತುಹೋಗಿರುತ್ತದೆ. ಅವರು ಧರ್ಮಾತ್ಮರಾದರೂ ಕೂಡ, ಯುದ್ಧದಲ್ಲಿ ರಕ್ತಪಾತವನ್ನು ಮಾಡಿದುದು ಅಧರ್ಮದ ನಾಶಕ್ಕೇ ಆದರೂ ಕೂಡ, ಜ್ಞಾತಿಗಳ ಕೊಲೆಯ ಪ್ರತಿಕ್ರಿಯೆ ಅವರಿಗೆ ತಟ್ಟಿಯೇ ತಟ್ಟುತ್ತದೆ. ಆದರೆ ಎಂತಹ ವಿಷಮ ಸನ್ನಿವೇಶದಲ್ಲಿಯೂ ಅವರು ಧರ್ಮವನ್ನು ಕೈ ಬಿಡದೆ ಇದ್ದುದರಿಂದಾಗಿ ಅವರು ಧರ್ಮಕ್ಕೆ ಆದರ್ಶರೆಂಬ ಕೀರ್ತಿಯನ್ನು ಶಾಶ್ವತವಾಗಿ ಪಡೆದಿದ್ದಾರೆ. ಅದೇ ಜನ್ಮದಲ್ಲಿ ತಕ್ಷಣ ಪಡೆಯಬಹುದಾದ ರಾಜ್ಯಾಭಿಲಾಷೆಯ ಸ್ವಾರ್ಥವೂ ಅವರ ಆ ಧರ್ಮಾಚರಣೆಯಲ್ಲಿ ಸೇರಿದ್ದುದರಿಂದ ಅಂತಹ ತಮ್ಮ ರಾಜ್ಯವನ್ನು ಅವರು ಶಾಶ್ವತವಾಗಿ ಉಳಿಸಿಕೊಳ್ಳಲಾರದಂತೆ ತಮ್ಮ ಮಕ್ಕಳನ್ನು ಕಳೆದುಕೊಳ್ಳುತ್ತಾರೆ. ಅಭಿಮನ್ಯುವಿನ ಮಗ ಕೃಷ್ಣನಿಂದ ಬದುಕಿಸಲ್ಪಟ್ಟು ರಾಜ್ಯದ ಸೂತ್ರವನ್ನು ವಹಿಸಿ ಕೊಳ್ಳುತ್ತಾನೆ. ಅದು ಏಕೆ, ಹೇಗೆ ಎಂಬದು ಪ್ರತ್ಯೇಕವಾದ ವಿಷಯ.

ರಮೆ:– ಹಾಗಿದ್ದರೆ, ಮತ್ತೆ, ಕೌರವರೇ ಪಾಂಡವರಿಗಿಂತಲೂ ಸುಖವಾದ ಜೀವನ ಮಾಡಿದರು ಎಂದು ಹೇಳಬಹುದು. ಅಧರ್ಮವಾದರೇನು, ಏನಾದರೇನು ?

ಬಂಧು ಬಾಂಧವರಿಂದ ತುಂಬಿದ ರಾಜ್ಯವನ್ನು ದುರ್ಯೋಧನನು ಸುಖವಾಗಿಯೇ ಆಳಿದ್ದಾನೆ ತಾನೆ?

ಮುರಳಿ:– ಅದೂ ಸರಿಯಲ್ಲ. ಏನು ಸುಖ ಅವನದು? ಸದಾಕಾಲ ಪಾಂಡವರ ಕುರಿತಾದ ಚಿಂತೆಯ ಕಿರುಕುಳವನ್ನು ಅನುಭವಿಸುತ್ತಾ, ಅವರನ್ನು ಶಾಶ್ವತವಾಗಿ ರಾಜ್ಯಾರ್ಧದ ಉತ್ತರಾಧಿಕಾರತನದಿಂದ ನಿವಾರಿಸಲು ಸಾಧ್ಯವಾಗ ಲಿಲ್ಲವಲ್ಲಾ, ಪುನಃ ಬಂದು ರಾಜ್ಯ ಕೇಳುತ್ತಾರಲ್ಲಾ, ಅವರನ್ನು ನಿವಾರಿಸುವದು ಹೇಗೆ ಎಂಬ ಚಿಂತೆ, ಶಂಕೆ, ಭೀತಿಗಳಲ್ಲಿ ಅವನು ಏನು ಸುಖಪಟ್ಟಿದ್ದಾನು? ಭೀತಿಯಿಂದೊಡಗೂಡಿದ ಮೃಷ್ಟಾನ್ನ ತಿನ್ನುವದು ಹೇಗೆ, ನಿರ್ಭೀತಿಯಿಂದ ಗಂಜಿ ಊಟ ಮಾಡುವದು ಹೇಗೆ?

ರಮೆ:– ಹಾಗಿದ್ದರೆ ಮತ್ತೆ ಯಾರಿಗೆ ಸುಖ? ಈ ರಾಜ್ಯ, ಕೋಶ–ಇತ್ಯಾದಿ ಗಳಿಂದಲೇ ಸುಖ ಸಿಕ್ಕುವದಿಲ್ಲ ಎಂದ ಮೇಲೆ ಈ ಲೋಕದ ಬದುಕಿಗೆ, ಇಲ್ಲಿನ ಚಟುವಟಿಕೆಗಳಿಗೆ ಎಲ್ಲ ಏನರ್ಥ?

ಮುರಳಿ:– ಆ ವಿಷಯ ಪ್ರತ್ಯೇಕ. ಅಂತಹ ಪ್ರಶ್ನೆಗಳು ಉದ್ಭವಿಸ ಬೇಕೆಂಬದೇ ಮಹಾಭಾರತದ ಉದ್ದೇಶ. ಹಾಗೆ ಉದ್ಭವಿಸುವದೇ ಮಹಾಭಾರತ ವನ್ನು ಓದುವದರ ಸಾರ್ಥಕ್ಯ. ಆದರಿಂದಾಗಿಯೇ ಈ ಹಿಂದೆ ನಾನು ಹೇಳಿದುದು– ಮಹಾಭಾರತವನ್ನು, ಅದರಲ್ಲಿಯೂ ಮುಖ್ಯವಾಗಿ ಕುರುಕ್ಷೇತ್ರವನ್ನು, ಕೌರವ ಪಾಳಯದಲ್ಲಿಯೂ ನಿಂತು ನೋಡಬಾರದು, ಪಾಂಡವ ಪಕ್ಷದಲ್ಲಿಯೂ ನಿಂತು ನೋಡಬಾರದು, ಕೃಷ್ಣನ ಮಡಿಲಲ್ಲಿ ಕುಳಿತು ನೋಡಬೇಕು ಎಂದು. ಹಾಗೆ ನೋಡುವಾಗ ಮಾತ್ರ ಸತ್ಯ ದರ್ಶನವಾಗುತ್ತದೆ. ಅಲ್ಲಿ ವ್ಯಾಮೋಹವೂ ಇಲ್ಲ, ದ್ವೇಷವೂ ಇಲ್ಲ. ಪ್ರಕೃತಿಯು ಕಟ್ಟುನಿಟ್ಟಾದ ಕಾರ್ಯಾಚರಣೆಯಲ್ಲಿ ತೊಡಗಿ ರುವ ರೋಮಾಂಚಕಾರೀ ದೃಶ್ಯವನ್ನು ಕಾಣುತ್ತೇವೆ.

ರಮೆ:– ಅಂದ ಹಾಗೆ ಒಂದು ಪ್ರಾರ್ಥನೆ.

ಮುರಳಿ:– ಏನು?

ರಮೆ:– ಭೀಮನ ಕತೆ ಮುಗಿಯುತ್ತಾ ಬಂದಿದೆ. ಇದನ್ನು ಮುಗಿಸಿದ ಮೇಲೆ ಕೃಷ್ಣನ ಚರಿತ್ರೆಯನ್ನು ಹೇಳುವಿರಾದರೆ ಬಹಳ ಆಸಕ್ತಿಯಿಂದ ಕೇಳು ತ್ತೇನೆ.

ಮುರಳಿ:– ಕುರುಡ ಆನೆಯನ್ನು ಕುರಿತು ಹೇಳಿದಂತಾಗುತ್ತದೆ.

ರಮೆ:– ಕಣ್ಣು, ಕೈ, ಕಾಲು–ಏನೂ ಇಲ್ಲದವನಿಗೆ, ಕೇವಲ ಕಣ್ಣಿಲ್ಲದವನು ಕೈಯಲ್ಲಿ ಮುಟ್ಟಿ ಎಷ್ಟು ತಿಳಿದುಕೊಂಡು ಹೇಳುತ್ತಾನೋ ಅಷ್ಟೇ ಆದರೂ ಸಾಕಾ ಗುತ್ತದೆ.

ಮುರಳಿ:– ಕೃಷ್ಣನ ಜೀವನದ ರಹಸ್ಯ, ಮಾನವನ ಬುದ್ಧಿಗೆ ಅತೀತವಾದುದು. ನಾನಂತೂ ಸಾಮಾನ್ಯ ಮಾನವ. ಏನು ಹೇಳಬಲ್ಲೆ ಹೇಳು !

ರಮೆ:– ನಿಮ್ಮ ಆ ಭಾವನೆಯೇ ಕೃಷ್ಣನ ಕುರಿತು ಹೇಳುವದಕ್ಕೆ ನಿಮಗೆ ಇರುವ ಅರ್ಹತೆಯನ್ನು ತೋರಿಸುತ್ತದೆ. ದೇವರು ಶಕ್ತಿ ಕೊಟ್ಟಷ್ಟು ಹೇಳಿ.

ಮುರಳಿ:– ಈಗಲ್ಲವಾದರೂ, ಇನ್ನು ಹತ್ತು ಜನ್ಮಗಳನ್ನು ಕಳೆದ ಮೇಲಾದರೂ ಅಲ್ಪ ಸ್ವಲ್ಪ ಅರ್ಹತೆ ಪಡೆದು ಹೇಳಬೇಕೆಂದೇನೋ ಬಯಸಿದ್ದೇನೆ.

ರಮೆ:– ಇಲ್ಲ, ಈಗಲೇ ಹೇಳಬೇಕು.

ಮುರಳಿ:– ನೋಡೋಣ. ಇದು ಮುಗಿಯಲಿ. ಸಮಯ ಬಹಳವಾಯಿತು. ಭೀಮನ ಕತೆ ಮುಂದುವರಿಸೋಣ.

ರಮೆ:– ಆಗಲಿ. ಭೀಮನ ಕತೆ ಮುಗಿದ ಮೇಲೆ ಕೃಷ್ಣನ ಕತೆಗಾಗಿ ನಿಮ್ಮನ್ನು ಕಾಡುತ್ತೇನೆ. ಈಗ ಹೊತ್ತಾಗುತ್ತ ಬಂದಿದೆ, ನಿಜ. ಭೀಮನ ಕತೆಯನ್ನು ಮುಂದುವರಿಸಿ.

ಮುರಳಿ:– ಕೇಳು. ಕರ್ಣಾವಸಾನದೊಂದಿಗೆ ಕುರುಕ್ಷೇತ್ರದ ಹದಿನೇಳು ದಿನದ ಯುದ್ಧ ಮುಗಿದಂತಾಯಿತು. ಆ ರಾತ್ರಿಯೇ, ಮೊದಲ ಬಾರಿಗೆ, ದುರ್ಯೋಧನನು ಜಯಾಕಾಂಕ್ಷೆಯ ಆಸೆಯನ್ನೆಲ್ಲ ಕೈ ಬಿಟ್ಟನು. ಅವನೀಗ ಹತಾಶನಾಗಿದ್ದನು, ಕ್ರುದ್ಧನಾಗಿದ್ದನು. ಮಾರನೆಯ ದಿನ ಸ್ವತಃ ತಾನೇ ಯುದ್ಧ ಮಾಡಿ ಭೀಮ, ಅರ್ಜುನ– ಇಬ್ಬರನ್ನೂ ತೀರಿಸಿಬಿಡಬೇಕೆಂದು ಒಮ್ಮೆ ಯೋಚಿಸಿದನು. ಅವನ ಪಕ್ಷದಲ್ಲಿ ಈಗ ಉಳಿದಿದ್ದ ವೀರರೆಂದರೆ ಶಲ್ಯ, ಅಶ್ವತ್ಥಾಮ, ಕೃಪಾಚಾರ್ಯ, ಶಕುನಿ, ಕೃತವರ್ಮ–ಇವರು ಮಾತ್ರ. ಸೈನ್ಯದ ಪ್ರಮಾಣವೂ ಬಹಳ ಕಡಿಮೆಯಾಗಿದ್ದಿತು. ಕೃಪಾಚಾರ್ಯನು ದುರ್ಯೋಧನನ ಮೇಲಿನ ಮಮತೆಯಿಂದಲೇ ಭೀಮಾರ್ಜುನರ ಅಸಾಧಾರಣವಾದ ಪೌರುಷವನ್ನೂ ಕೌರವ ಪಕ್ಷದ ಮಹಾನ್ ವೀರರುಗಳು ಕೂಡ ಹತರಾದುದನ್ನೂ, ಇದೆಲ್ಲಕ್ಕೂ ಕಾರಣವಾದ ವಿಧಿಯ ಆಟವನ್ನೂ ಅವನಿಗೆ ವಿವರಿಸಿ ಈಗಲಾದರೂ ಅವನು ಪಾಂಡವರೊಂದಿಗೆ ಸಂಧಿ ಮಾಡಿಕೊಳ್ಳುವದು ಒಳ್ಳೆಯದೆಂದು ಸೂಚಿಸಿದನು. ಕೇವಲ ಬದುಕುವದಕ್ಕೋಸ್ಕರ ಬಾಳನ್ನು ಬದುಕಲು ಒಲ್ಲದ ದುರ್ಯೋಧನನು ಭೀಮಾರ್ಜುನರ ಮರಣವನ್ನು ನೋಡಿದ ಮೇಲೆ ಮಾತ್ರವೇ ತಾನು ಸಂಧಿಯ ಪ್ರಸ್ತಾಪವನ್ನು ಎತ್ತುವದಾಗಿ ತಿಳಿಸಿದನು. ಕೊನೆಗೆ ವಿಧಿಯಿಲ್ಲದೆ ಕೃಪಾಚಾರ್ಯ ಮತ್ತು ಅಶ್ವತ್ಥಾಮರ ಸಲಹೆಯಂತೆ ಕೌರವ ಪಕ್ಷದ ಸೇನಾನಾಯಕನಾಗಿ ಶಲ್ಯನಿಗೆ ಪಟ್ಟಾಭಿಷೇಕ ಮಾಡಲಾಯಿತು. ಶಲ್ಯನೇನೋ ಮಹಾವೀರನೇ. ಆದರೆ ಅವನು ಪಾಂಡವರ ಸಮೀಪ ಬಂಧುವಾಗಿದ್ದುದರಿಂದಲೂ ನ್ಯಾಯಾನ್ಯಾಯಗಳನ್ನು

ಅವನು ಸೂಕ್ಷ್ಮವಾಗಿ ಗಮನಿಸಿ ತಿಳಿದುಕೊಂಡಿದ್ದುದರಿಂದಲೂ ಪಾಂಡವರನ್ನು ಕೊಲ್ಲುವ ಇಚ್ಛೆ ಅವನಲ್ಲಿರಲಿಲ್ಲ. ವೀರ ಸಹಜವಾಗಿ ಯುದ್ಧ ಮಾಡಿ ಮಡಿಯಲು ಅವನು ನಿರ್ಧರಿಸಿದ್ದನು.

ಈ ಕಡೆಯಿಂದ ಕೃಷ್ಣನ ಸಲಹೆಯ ಪ್ರಕಾರ ಶಲ್ಯನೊಂದಿಗೆ ಯುಧಿಷ್ಠಿರನು ಯುದ್ಧ ಮಾಡುವಂತೆ ಏರ್ಪಾಡಾಯಿತು.

ರಮೆ:– ಒಂದು ಮಾತು. ಏನೋ ನೆನಪು ಬಂತು. ಶಲ್ಯನು ಭೀಮನ ಸಮಬಲ ಎಂದು ಹಿಂದೆ ಹೇಳಿದ್ದಿರಿ. ಹಾಗಿದ್ದ ಮೇಲೆ ಅವನನ್ನು ಭೀಮನು ಎದುರಿಸದೆ, ಯುಧಿಷ್ಠಿರನು ಅವನೊಂದಿಗೆ ಯುದ್ಧ ಮಾಡಬೇಕೆಂದು ಕೃಷ್ಣ ಏಕೆ ಸಲಹೆ ಮಾಡಿದ ?

ಮುರಳಿ:– ಹೌದು. ಹೀಗೆ ತರ್ಕಿಸುವದು ಸರಿಯಾದ ವ್ಯಾಸಂಗಕ್ರಮ. ಕೃಷ್ಣನ ಯಾವ ಕೆಲಸದಲ್ಲಿ ವಿಶೇಷವಾದ ಅರ್ಥವಿಲ್ಲದೆ ಇರುತ್ತದೆ, ಹೇಳು ! ಶಲ್ಯನು ಪ್ರಚಂಡ ಪೌರುಷವಂತ. ಶಲ್ಯ, ಬಲರಾಮ, ಭೀಮ, ಕೀಚಕ – ಇವರು ನಾಲ್ವರು ಸಮಬಲರು ಎಂಬ ಪ್ರತೀತಿ ಇದ್ದುದು ನಿಜ. ಆದರೆ ಶಲ್ಯನು ಕೀಚಕನಂತೆ ದುಷ್ಟನಾಗಿಯೋ, ಬಲರಾಮನಂತೆ ಮುಂಗೋಪಿಯಾಗಿಯೋ ಇರದೆ ಪೂರ್ವಾಪರಗಳನ್ನು ತಿಳಿಯಲು ಸಮರ್ಥನಾಗಿದ್ದವನು. ಯುದ್ಧಕ್ಕೆ ಮುಂಚೆ ಅವನು ಪಾಂಡವರ ಪಕ್ಷವನ್ನು ಸೇರಬೇಕೆಂದೇ ಹೊರಟು ಬಂದವನು. ಆದರೆ ದುರ್ಯೋಧನನು ಅವನನ್ನು ಸತ್ಕರಿಸಿ, ಮೆಚ್ಚಿಸಿ ತನ್ನ ಪಕ್ಷಕ್ಕೆ ಸೇರಿಸಿಕೊಂಡು ಬಿಟ್ಟಿದ್ದುದು. ಹೀಗೆ ಶಲ್ಯನು ಆಕಸ್ಮಿಕವಾಗಿ ಕೌರವ ಪಕ್ಷದಲ್ಲಿ ಇರಬೇಕಾಗಿ ಬಂದಾಗಲೂ ಅವನು ದುರ್ಯೋಧನನ ಪಾಪಗಳನ್ನೆಲ್ಲ ಬೆಂಬಲಿಸಿ ನಿಲ್ಲಲು ಒಡಂಬಡದವನು. ಆದರೆ ತನ್ನ ಕರ್ತವ್ಯವನ್ನು ಮಾತ್ರ ಬಹಳ ನಿಷ್ಠೆಯಿಂದ ಮಾಡುವ ಸ್ವಭಾವದವನು ಎಂಬದನ್ನು ಅವನು ಕರ್ಣನ ಸಾರಥಿಯಾಗಿದ್ದಾಗ ತೋರಿಸಿಕೊಟ್ಟಿದ್ದಾನೆ. ಇಂತಹ ವಿಶಿಷ್ಟ ಗುಣದ ಶಲ್ಯನೊಂದಿಗೆ ಅರ್ಜುನನಂತೂ ಯುದ್ಧ ಮಾಡುವ ಸಾಧ್ಯತೆಯೇ ಇರಲಿಲ್ಲ. ಹಾಗಿದ್ದ ಮೇಲೆ ಭೀಮನು ಅವನೊಂದಿಗೆ ಯುದ್ಧ ಮಾಡಬೇಕಾಗಿತ್ತು. ಹೀಗಾದರೆ ಯುದ್ಧದ ಪರಿಣಾಮ ಏನಾಗುತ್ತದೆಂದು ಹೇಳಲು ಸಾಧ್ಯವಿರಲಿಲ್ಲ. ಯುದ್ಧ ಭರದಲ್ಲಿ ಭೀಮನು ಶಲ್ಯನನ್ನು ದೈಹಿಕವಾಗಿ, ಮಾನಸಿಕವಾಗಿ ನೋವು ಮಾಡಿದಾಗ ಅವನ ಅಂತರ್ಯದಲ್ಲಿ ಪಾಂಡವರ ಧರ್ಮದ ಬಗೆಗೆ ಇದ್ದ ಒಲವೇನಾದರೂ ಕಳೆದುಹೋಗಿ ಅವನು ನೋವಿಗೆ ನೋವು ಎಂಬ ಪ್ರತೀಕಾರ ಮನೋಭಾವವನ್ನು ಬೆಳೆಸಿಕೊಳ್ಳುವ ಸಾಧ್ಯತೆ ಇದ್ದು, ಆ ರೀತಿ ಅವನು ಭೀಮನನ್ನು ಕೊಲ್ಲಲೇಬೇಕೆಂದೇನಾದರೂ ಸೆಟೆದು ನಿಲ್ಲುವ ಸಂದರ್ಭ ಬಂದರೆ, ಭೀಮನಷ್ಟೇ ಬಲಶಾಲಿಯಾದ ಅವನು ಮತ್ತು ಈ ಹದಿನೇಳು ದಿನಗಳ ಅವ್ಯಾಹತ ಯುದ್ಧದಿಂದ ಶೀವ್ರವಾಗಿ ಬಳಲಿರುವ

ಭೀಮ – ಈ ಇಬ್ಬರಲ್ಲಿ ಯಾರು ಗೆಲ್ಲಬಹುದೆಂದು ಸ್ಪಷ್ಟವಾಗಿ ಹೇಳುವದು ಕಷ್ಟವಾಗಿದ್ದು, ಕೃಷ್ಣನು ಈ ಕೊನೆಯ ಗಳಿಗೆಯಲ್ಲಿ ಪಾಂಡವರನ್ನು ಅಂತಹ ಸಂದಿಗ್ಧಕ್ಕೆ ಒಡ್ಡಲು ಸಿದ್ಧನಾಗಿರಲಿಲ್ಲ. ಹೀಗಾಗಿಯೇ ಕೃಷ್ಣನು ಒಂದು ತಂತ್ರವನ್ನು ಹೂಡಿದುದು. ಶಲ್ಯನ ಮುಂದೆ ಯುಧಿಷ್ಠಿರನನ್ನು ನಿಲ್ಲಿಸುವಾಗ ಕೃಷ್ಣನು ಶಲ್ಯನ ಸಮಬಲನಾದ ಒಬ್ಬ ವೀರನನ್ನು ನಿಲ್ಲಿಸಿರಲಿಲ್ಲ; ಬದಲು ಅವನ ಮುಂದೆ ಧರ್ಮವನ್ನು ನಿಲ್ಲಿಸಿದ್ದನು. "ಕೊಲ್ಲುವದಾದರೆ ಧರ್ಮವನ್ನು ಕೊಲ್ಲು" ಎಂಬ ಸವಾಲನ್ನು ಅವನು ಶಲ್ಯನ ಮುಂದೆ ಎಸೆದಿದ್ದನು. ದೇಹಬಲದಲ್ಲಿ ಯುಧಿಷ್ಠಿರನು ಶಲ್ಯನಿಗೆ ಸೋಲುವವನಾಗಿದ್ದರೆ, ಮನೋಬಲದಲ್ಲಿ ಶಲ್ಯನು ಯುಧಿಷ್ಠಿರನಿಗೆ ಸೋಲುವವನಾಗಿದ್ದನು, ಸೋತವನಾಗಿದ್ದನು. ಹೀಗೆ ಮನಸ್ಸಿನಲ್ಲಿ ಗೆಲ್ಲುವ ಸಂಕಲ್ಪ ಸಾಧ್ಯವಾಗದಿದ್ದ ಮೇಲೆ ಶಲ್ಯನು ವೀರೋಚಿತವಾಗಿ ಯುದ್ಧ ಮಾಡಿ ಯುಧಿಷ್ಠಿರನಿಂದ ಸಾಯುವ ಸಾಧ್ಯತೆ ಮಾತ್ರವೇ ಇರಲು ಸಾಧ್ಯವಿತ್ತು.

ರಮೆ:– ....ಸೋತ್ತೀರ್ಣಾ ಖಲು ಪಾಂಡವೈ ರಣನದೀ ಕೈ ವರ್ತಕಃ ಕೇಶವೇ ........ಇದನ್ನು ಹೇಳಿದ ಕವಿ ಅದೇನು ಧನ್ಯನೋ! ಘೋರವಾದ, ಭೀಕರವಾದ, ತೀವ್ರ ಅಪಾಯಕಾರಿಯಾದ ರಣನದಿಯಿಂದ ಪಾಂಡವರನ್ನು ಮೇಲೆತ್ತಿ ಕಾಪಾಡಿದ ಕೃಷ್ಣನು ಮಾನವನೋ, ದಾನವನೋ, ದೇವನೋ ಅದೇನೊ. ಅವನು ಧರ್ಮ ರಕ್ಷಕ, ಅನಾಥ ರಕ್ಷಕ. ಶರಣ ಜನ ರಕ್ಷಕ. ಅವನಿಗೆ ಮಾಡುವ ನಮಸ್ಕಾರವನ್ನು ನಿಮಗೆ ಮಾಡುತ್ತಿದ್ದೇನೆ ಭೀಮನ ಕತೆ ಮುಗಿದ ಮೇಲೆ......

ಮುರಳಿ:–........ಕೃಷ್ಣನ ಕತೆಯನ್ನು ಹೇಳಬೇಕು........

ರಮೆ:– ಕೈ ಮುಗಿದು ಕೇಳಿಕೊಳ್ಳುತ್ತೇನೆ. ದಯವಿಟ್ಟು.

ಮುರಳಿ:– ಕೃಷ್ಣನ ಕತೆಯನ್ನು ಹೇಳಬೇಕಾದರೆ ಕೈ ಮುಗಿಸಿಕೊಂಡು ಹೇಳಬೇಕಾಗಿಲ್ಲ. ನಾವೇ ಕೈ ಮುಗಿದು ಹೇಳಬೇಕಾದಷ್ಟು ಪವಿತ್ರವೂ, ಅದ್ಭುತವೂ, ಅರ್ಥಪೂರ್ಣವೂ ಆದ ಕತೆ ಅದು. ಅದು ಸಮುದ್ರ. ನಾವು ಒಯ್ಯುವ ಯಾವ ಪಾತ್ರೆಯಲ್ಲಿಯೂ ಅದನ್ನು ತುಂಬಿಸಲು ಸಾಧ್ಯವಿಲ್ಲ.

ರಮೆ:– ನಿಮ್ಮ ಶಕ್ತಿಗೆ ಸಾಧ್ಯವಿರುವಷ್ಟು ದೊಡ್ಡ ಪಾತ್ರೆಯಲ್ಲಿ ತುಂಬಿ ತಂದು ಬಡಿಸಿ. ನಮ್ಮ ಬಾಯಾರಿಕೆಗೆ ಅಷ್ಟೇ ಸಾಕು.

ಮುರಳಿ:– ಅಷ್ಟೇ ಸಾಧ್ಯ. ಇರಲಿ. ಆಮೇಲೆ ವಿಚಾರಿಸೋಣ. ಈಗ ಕೇಳು.

ರಮೆ:– ಹೇಳಿ.

ಮುರಳಿ:– ಹದಿನೆಂಟನೆಯ ದಿನ ಎರಡೂ ಪಕ್ಷಗಳಲ್ಲಿ ಅಳಿದು ಉಳಿದ ಸೇನೆಗಳು ಪರಸ್ಪರರನ್ನು ಸಂಧಿಸಿ ನಿಂತವು. ಶಲ್ಯನು ಸೇನಾನಾಯಕತ್ವದ ತನ್ನ

ಸ್ಥಾನಕ್ಕೆ ಅನುಸಾರವಾಗಿ ಕೆಚ್ಚಿನಿಂದಲೇ ಯುದ್ಧ ಮಾಡಿ ಪಾಂಡವ ಸೈನ್ಯವನ್ನು ಬಹಳ ನಷ್ಟಗೊಳಿಸಿದನು. ಕೃಪ, ಕೃತವರ್ಮ, ಅಶ್ವತ್ಥಾಮರೊಂದಿಗೆ ಕೂಡಿದ ಶಲ್ಯನು ಹೀಗೆ ಉಗ್ರವಾಗಿ ಯುದ್ಧ ಮಾಡುತ್ತಿದ್ದಾಗ ಭೀಮನು ಯಮ ದಂಡಕ್ಕೂ, ಕಾಳರಾತ್ರಿಗೂ ಸಮಾನವಾದ, ರಕ್ತ, ಮೇದಸ್ಸು, ಮಾಂಸಗಳಿಂದ ಮೆತ್ತಲ್ಪಟ್ಟ, ವಜ್ರಾಯುಧಕ್ಕೆ ಸಾಟಿಯಾಗಿ ನಿಲ್ಲಬಲ್ಲ, ಮಹೇಶ್ವರನ ಮಿತ್ರನಾದ ಕುಬೇರನಿಗೂ ಇಂಬು ಕೊಡದ ತನ್ನ ಗದಾದಂಡವನ್ನೆತ್ತಿಕೊಂಡು ತನಗೆ ಸಮಾನಬಲನೆನಿಸಿದ್ದ ಶಲ್ಯನ ಮೇಲೆ ಏರಿಹೋದನು. ಶಲ್ಯನಿಂದ ಪೆಟ್ಟುತಿಂದು ಕಂಗಾಲಾಗಿದ್ದ ಪಾಂಡವ ಸೈನ್ಯವು ಗರ್ಜಿಸಿತು. ಶಲ್ಯನು ವಿಪರೀತ ಕೋಪದಿಂದ ಒಂದು ತೋಮರವನ್ನು ಭೀಮನ ಮೇಲೆ ಪ್ರಯೋಗಿಸಿದನು. ಅದು ಭೀಮನ ಎದೆಯನ್ನು ನಾಟಿತು. ಆದರೂ ಅವನು ಧೈರ್ಯಗುಂದದೆ ಶಲ್ಯನ ರಥ, ಸಾರಥಿ, ಕುದುರೆಗಳನ್ನು ಕೊಂದನು. ವಿರಥನಾದ ಶಲ್ಯನು ತಾನೂ ಒಂದು ಗದೆಯನ್ನೆತ್ತಿಕೊಂಡು ಭೀಮನನ್ನು ಎದುರಿಸಿದನು. ಗದಾಪಾಣಿಯಾದ ಭೀಮನ ವೇಗವನ್ನು ಬಲರಾಮ, ಶಲ್ಯ ಇವರುಗಳು ಮಾತ್ರವೂ, ಶಲ್ಯನ ವೇಗವನ್ನು ಬಲರಾಮ, ಭೀಮ-ಇವರುಗಳು ಮಾತ್ರವೂ ಎದುರಿಸಲು ಸಾಧ್ಯವಿದ್ದುದು. ಯುದ್ಧವು ಬಲವಾಗಿ ಕೈಗಟ್ಟಿತು. ಶಲ್ಯ–ಭೀಮ, ಮಾವ–ಅಳಿಯ–ಈ ಇಬ್ಬರ ಯುದ್ಧದಲ್ಲಿ ಎರಡು ವೀರರು ಹೊಡೆದಾಡುತ್ತಿದ್ದುದಲ್ಲ, ಎರಡು ತತ್ವಗಳು ಹೋರಾಡುತ್ತಿದ್ದವು. ಗದೆಗಳ ಭೀಕರ ತಾಡನದಿಂದ ಬೆಂಕಿಯ ಕಿಡಿಗಳು ಹೊರಸೂಸುತ್ತಿದ್ದವು. ಇಬ್ಬರ ಮೈಯಲ್ಲಿಯೂ ರಕ್ತ ಸುರಿಯುತ್ತಿದ್ದಿತು. ಎರಡು ಸೈನ್ಯಗಳೂ ಯುದ್ಧವನ್ನು ನಿಲ್ಲಿಸಿ ಕೇವಲ ಪ್ರೇಕ್ಷಕರಾಗಿ ನಿಂತವು. ಹೊಡೆತ, ಪ್ರತಿಹೊಡೆತಗಳ ಪ್ರತೀಕಾರವು ತಾಂಡವವಾಡುತ್ತಿದ್ದು ಕೌರವ–ಪಾಂಡವ ಪಕ್ಷಗಳ ಜಯಾಪಜಯಗಳ ತೀರ್ಮಾನವೇ ಇಲ್ಲಿ ಆಗುತ್ತಿದೆ ಎನ್ನುವಷ್ಟು ತೀವ್ರವಾಗಿ ನಡೆದ ಈ ಹೊಡೆದಾಟದಲ್ಲಿ ಇಬ್ಬರೂ ಒಮ್ಮೆಗೇ ಮೂರ್ಛಿತರಾಗಿ ಬಿದ್ದರು. ಭೀಮನು ಕೂಡಲೇ ಚೇತರಿಸಿಕೊಂಡು ಎದ್ದನು. ಶಲ್ಯನನ್ನು ಕೃಪಾಚಾರ್ಯನು ತನ್ನ ರಥದಲ್ಲಿ ಸಾಗಿಸಿಕೊಂಡು ಹೋದನು.

ರಮೆ:– ........... ಮತ್ತೆ ಯುಧಿಷ್ಠಿರನು ಶಲ್ಯನೊಂದಿಗೆ ಯುದ್ಧ ಮಾಡಬೇಕೆಂದು ಕೃಷ್ಣನು ಏರ್ಪಡಿಸಿದ್ದನು ಎಂದು ಹೇಳಿದಿರಿ ?

ಮುರಳಿ:– ಹೌದು. ಇನ್ನು ಮುಂದೆ ಆಗುತ್ತದೆ.

ರಮೆ:– ಅದಕ್ಕೇನು ಗಳಿಗೆ ? ಇಷ್ಟರಲ್ಲಿಯೇ ಭೀಮನು ಶಲ್ಯನನ್ನು ಹಣ್ಣು ಮಾಡಿ ಆಗಿದೆ.

ಮುರಳಿ:– ಯುಧಿಷ್ಠಿರನನ್ನು ಸಂಧಿಸುವ ಮೊದಲು ಶಲ್ಯನು ಹೀಗೆ ಹಣ್ಣಾಗಿರಬೇಕೆಂಬದೇ ಕೃಷ್ಣನ ಆಶಯವಾಗಿದ್ದಿರಬೇಕು.

ರಮೆ:– ಚೆನ್ನಾಯಿತು. "ನಾನೂ ಕೊಂದೆ" ಎನ್ನುವಷ್ಟಕ್ಕೆ ಮಾತ್ರ ಇತರರು. ನಿಜವಾಗಿ ಕೌರವ ವೀರರನ್ನೆಲ್ಲ ಕೊಂದವನು ಮಾತ್ರ ಭೀಮನೊಬ್ಬನೇ.

ಮುರಳಿ:– ಅಭಿಪ್ರಾಯ ಸ್ವಾತಂತ್ರ್ಯ ನಿನಗಿದೆ. ಘಟನೆಗಳನ್ನು ಹೇಳುವ ದಷ್ಟೇ ನನ್ನ ಕೆಲಸ. ಕೇಳು. ಇಷ್ಟರಲ್ಲಿ ಯುಧಿಷ್ಠಿರನು ಕೃಷ್ಣನಿಗೆ ನಮಸ್ಕರಿಸಿ, ಸಾರಥಿಯನ್ನು ಹರ್ಷಗೊಳಿಸಿ ಶಲ್ಯನನ್ನೆದುರಿಸಿದನು. ಯುದ್ಧವು ಬಿರುಸಾಗಿ ನಡೆಯಿತು. ಸ್ವಲ್ಪ ಸಮಯ ಯುದ್ಧ ಮಾಡಿ ಯುಧಿಷ್ಠಿರನು ಒಂದು ಪ್ರಚಂಡ ಶಕ್ತಿಯನ್ನು ಅಭಿಮಂತ್ರಿಸಿ ಪ್ರಯೋಗಿಸಿದನು. ಅದು ಶಲ್ಯನ ಎದೆಯನ್ನು ಭೇದಿಸಿ ಭೂಮಿಯಲ್ಲಿ ನಾಟಿಕೊಂಡಿತು. ಕೌರವ ಸೇನಾನಾಯಕನಾಗಿದ್ದ ಶಲ್ಯನು ಸಾವನ್ನಪ್ಪಿದನು. ಕೌರವನೀಗ ಕ್ರುದ್ಧನಾದನು. ಶಲ್ಯನು ಸತ್ತನೆಂಬ ಒಂದೇ ಕಾರಣಕ್ಕಾಗಿ ಅಲ್ಲ; ತನ್ನನ್ನು ಮೇಲಿಂದ ಮೇಲೆ ಅಣಕಿಸಿದ ವಿಧಿಯನ್ನು ಗಮನಿಸಿ. ಅಶ್ವತ್ಥಾಮನಿಗೂ ರೋಷ ಏರಿತ್ತು. ಅಳಿದುಳಿದ ಸೈನ್ಯವನ್ನು ಸೇರಿಸಿ ಅವನು ಪಾಂಡವ ಬಲದ ಮೇಲೆ ಏರಿ ಹೋದನು. ಕೃಪಾದಿಗಳೂ ಅವನನ್ನು ಹಿಂಬಾಲಿಸಿದರು. ಇವರನ್ನು ಅರ್ಜುನನು ತಡೆದು ಕೌರವ ಸೈನ್ಯವನ್ನು ಬಹಳವಾಗಿ ಧ್ವಂಸ ಮಾಡಿದನು. ಪರರಾಜನು ಪಟ್ಟಣವನ್ನು ಲೂಟಿ ಮಾಡುವಾಗ ಪಹರೆಯ ಮುಖಂಡ ಅರಮನೆಯನ್ನು ಎಷ್ಟು ಉತ್ಸಾಹದಿಂದ ರಕ್ಷಿಸಿಯಾನು! ಜಯಲಕ್ಷ್ಮಿಯ ಪ್ರಸನ್ನ ಮುಖಮುದ್ರೆಯನ್ನು ನೋಡು ನೋಡುತ್ತಾ ಉತ್ಸಾಹವನ್ನು ಹೆಚ್ಚಿಸಿಕೊಳ್ಳುತ್ತಿದ್ದ ಪಾಂಡವರೊಂದಿಗೆ, ಅವಳ ಬೆನ್ನನ್ನು ನೋಡಿ ನಿರುತ್ಸಾಹಗೊಳ್ಳುತ್ತಿದ್ದ ಅಶ್ವತ್ಥಾಮಾದಿಗಳು ಎಷ್ಟು ಸಮರ್ಥ ಹಾಗಿ ಯುದ್ಧ ಮಾಡಿಯಾರು! ಈ ದೃಶ್ಯವನ್ನೆಲ್ಲ ನೋಡಿದ ದುರ್ಯೋಧನನು ಭೀಷಣನಾಗಿ ಹಿಂದೆ ಮುಂದೆ ನೋಡದೆ ಒಂದು ದೊಡ್ಡ ಆನೆಗಳ ಸೈನ್ಯವನ್ನು ಸಂಗ್ರಹಿಸಿ ಪಾಂಡವರ ಮೇಲೆ ನುಗ್ಗಿ ಬಂದನು. ಅರ್ಜುನನು ಬಿಡುತ್ತಿದ್ದ ಬಾಣಗಳನ್ನು ಲಕ್ಷಿಸದೆಯೇ ಅವನು ನೇರವಾಗಿ ಯುಧಿಷ್ಠಿರನತ್ತ ಆನೆಗಳನ್ನೂ ನೂಕಿ ತಾನೂ ನುಗ್ಗಿದನು. "ಹಾ, ಯುಧಿಷ್ಠಿರನು ಸಿಕ್ಕಿಹೋದ" ಎಂಬ ಸೈನ್ಯದ ಹಾಹಾಕಾರವನ್ನು ದೂರದಲ್ಲಿ ಯುದ್ಧ ಮಾಡುತ್ತಿದ್ದ ಭೀಮನು ಕೇಳಿದನು. ಎದೆಯೊಡೆಯುವಂತಹ ಸಿಂಹನಾದ ಮಾಡುತ್ತ ಅವನು ಮಿಂಚಿನಂತೆ ಹಾರಿ ಬಂದನು. ಆನೆಗಳು ದಿಕ್ಕಾಪಾಲಾಗಿ ಚದರಿದವು. ಚದರದಿದ್ದವುಗಳನ್ನು ಹೊಡೆದು, ಒದೆದು, ಗುದ್ದಿ ಕೊಂದು ದಾರಿ ಮಾಡಿಕೊಳ್ಳುತ್ತ ನುಗ್ಗಿ ಬಂದನು. ಇಷ್ಟರಲ್ಲಿ ದುರ್ಯೋಧನನು ಬಾಣಗಳಿಂದ ಭೀಮನ ರಥವನ್ನು ಹುಡಿಮಾಡಿದನು. ಭೀಮನಿಗೆ ರಥ, ಬಿಲ್ಲು, ಬಾಣಗಳು ಇತರರಿಗಿದ್ದಂತೆ ಅನಿವಾರ್ಯವಾದ ಯುದ್ಧ ಸಾಧನವಾಗಿರಲೇ ಇಲ್ಲ. ಅವನು ರಥದಿಂದ ಹಾರಿ ಮುಂದೋಡಿದನು. ಆನೆಗಳನ್ನು ಚದುರಿಸಿ ಅವನು ದಾರಿ ಮಾಡಿಕೊಳ್ಳುತ್ತಿರುವಷ್ಟರಲ್ಲಿ

ದುರ್ಯೋಧನನು ಯಾವದೋ ಒಂದು ಕುದುರೆಯನ್ನು ಹತ್ತಿ ತಪ್ಪಿಸಿಕೊಂಡು ಮರೆಯಾಗಿಬಿಟ್ಟನು. ಕೌರವ ಪಕ್ಷದಲ್ಲಿ ಉಳಿದಿದ್ದ ವೀರರೆಲ್ಲರೂ ಬೇರೆಬೇರೆಯಾಗಿ ಬಿಟ್ಟರು. ಭೀಮನು ಅರ್ಜುನನೊಂದಿಗೆ ರಣರಂಗದಲ್ಲಿ ದುರ್ಯೋಧನನನ್ನು ಎಲ್ಲೆಡೆಯೂ ಹುಡುಕಿದನು.

ಈ ವರೆಗೆ ಧೃತರಾಷ್ಟ್ರನಿಗೆ ಕುರುಕ್ಷೇತ್ರದ ವಿದ್ಯಮಾನಗಳನ್ನೆಲ್ಲ ಹೇಳುತ್ತಿದ್ದ ಸಂಜಯನು ಸ್ವತಃ ತಾನೇ ದುರ್ಯೋಧನನನ್ನು ಹುಡುಕಿಕೊಂಡು ಬರುತ್ತಿದ್ದಾಗ ಸಾತ್ಯಕಿಯು ಅವನನ್ನು ಹಿಡಿದು ಹೊಡೆಯಲು ಉಪಕ್ರಮಿಸಿದನು. ಅಶ್ವತ್ಥಾಮ, ಕೃಪಾಚಾರ್ಯ, ಕೃತವರ್ಮರು ಬಂದು ಸಾತ್ಯಕಿಯನ್ನು ತಡೆದರು. ಶಕುನಿಯನ್ನು ಸಹದೇವನೂ, ಉಲೂಕನೆಂಬವನನ್ನು ನಕುಲನೂ ಸಂಶಪ್ತಕರನ್ನು ಅರ್ಜುನನೂ ಕೆಣಕಿದರು.

ರಮೆ:– ........ಓ. ಅವರಿನ್ನೂ ಇದ್ದಾರೆ!

ಮುರಳಿ:– ಹೌದು. ಸಂಶಪ್ತಕರು ಸ್ವಲ್ಪ ಸಮಯದಲ್ಲಿಯೇ ನಿರ್ನಾಮವಾದರು.

ರಮೆ:– ಓಹೊ. ಅದು ಹೇಗೆ?

ಮುರಳಿ:– ಉಸಿರು ನಿಂತು.



ರಮೆ:– ಅದು ಗೊತ್ತು. ಅಷ್ಟು ಬೇಗ ಹೇಗೆ ಸತ್ತರು ಅಂತ?

ಮುರಳಿ:– ಆಯುಷ್ಯ ತೀರಿ ಇರಬೇಕು.

ರಮೆ:– ನಿಮ್ಮ ತಲೆ. ಈಗ ಇಷ್ಟು ಬೇಗ ಸಾಯಲು ಸಾಧ್ಯವಾಗಿದ್ದವರು ಈ ಕಳೆದ ಏಳೆಂಟು ದಿನಗಳಿಂದಲೂ ಅರ್ಜುನನೊಡನೆ ಅವರು ಎಡೆಬಿಡದೆ ಯುದ್ಧ ಮಾಡಿದುದು ಹೇಗೆ ಅಂತ?

ಮುರಳಿ:– ಓ, ಅದೊ! ಅದು, ಬಿಲ್ಲು, ಬಾಣ ಹಿಡಿದು ಇರಬೇಕು.

ರಮೆ:– ಹಾಗೇನು? ಅವರೇನಾದರೂ ತಾಳ, ತಂಬೂರಿ ಹಿಡಿದು ಯುದ್ಧ ಮಾಡುತ್ತಿದ್ದರೊ ಎಂದು ತಿಳಿದಿದ್ದೆ. ಸಂತೋಷ. ಮುಂದಕ್ಕೆ ಹೇಳಬಹುದು.

ಮುರಳಿ:– ಮಹದಾಜ್ಞೆ. ಶಕುನಿಯನ್ನು ಸಹದೇವನೂ, ಉಲೂಕನನ್ನು ನಕುಲನೂ ಕೊಂದರು. ದುರ್ಯೋಧನನು ಪುನಃ ಕೆಲವು ಮದಗಜಗಳೊಡನೆ ಏರಿ ಬಂದು ನಕುಲ, ಸಹದೇವರನ್ನು ಹೊಡೆದು ಹಿಮ್ಮೆಟ್ಟಿಸಿ ಯುಧಿಷ್ಠಿರನನ್ನು ಮೂದಲಿಸಿ ತಾಗಿದನು. ಯಥಾ ಪ್ರಕಾರ ಸುದ್ದಿಯನ್ನು ಕೇಳಿದ ಪಾಂಡವ ಗಂಡು ಸಿಂಹಗರ್ಜನೆಯೊಂದಿಗೆ ಧಾವಿಸಿ ಬರಲು ದುರ್ಯೋಧನನು ಪುನಃ ತಪ್ಪಿಸಿ

ಕೊಂಡು ಹೋಗಿಬಿಟ್ಟನು. ದಾರಿಯಲ್ಲಿ ಸಿಕ್ಕಿದ ಸಂಜಯನಿಗೆ ಅವನು ತನ್ನ ಮುಂದಿನ ಕಾರ್ಯಕ್ರಮವನ್ನು ತಿಳಿಸಿ ತಾನು ವೈಶಂಪಾಯನ ಸರೋವರದೊಳಗೆ ಅಡಗಿ ಕುಳಿತನು. ಮಂತ್ರದ ಮೂಲಕ ನೀರಿನ ಸ್ತಂಬನ ಮಾಡಿ ನಿರಪಾಯ ನಾಗಿ ತಳದಲ್ಲಿ ಕುಳಿತನು. ಸಂಜಯನಿಂದ ಈ ವರ್ತಮಾನವನ್ನು ತಿಳಿದ ಕೃಪ, ಕೃತವರ್ಮ, ಅಶ್ವತ್ಥಾಮರು ಆ ಕೊಳದ ಬಳಿಗೆ ಹೋಗಿ ದುರ್ಯೋಧನನು ಮೇಲೆದ್ದು ಬರಬೇಕೆಂದೂ ತಾವು ಪಾಂಡವರನ್ನು ಖಂಡಿತ ಕೊಲ್ಲುವದಾಗಿಯೂ ತಿಳಿಸಿದರು. ಆದರೆ ದುರ್ಯೋಧನನು ಇದಕ್ಕೆ ಒಪ್ಪಲಿಲ್ಲ. ಆ ಮೂವರೂ ಖಿನ್ನರಾಗಿ ಹೊರಟುಹೋದರು.

ಇವರ ಈ ಸಂಭಾಷಣೆಯನ್ನು ಮರೆಯಿಂದ ಕೇಳಿದ ಕೆಲವು ಬೇಡರು ಬಂದು ತಮ್ಮ ದಣಿಯಾದ ಭೀಮನಿಗೆ ಅದನ್ನು ತಿಳಿಸಿದರು. ಅವರಿಗೆ ಧಾರಾಳವಾಗಿ ಬಹುಮಾನ ನೀಡಿದ ಭೀಮನು ತನ್ನ ಕಡೆಯ ಸಮಸ್ತರನ್ನೂ ಸೇರಿಕೊಂಡು ಆ ಕೊಳದ ಬಳಿಗೆ ಬಂದನು. ಅಧರ್ಮಿಗಳನ್ನು ಅಧರ್ಮದಿಂದಲೇ ಕೊಲ್ಲಬೇಕೆಂಬ ಕೃಷ್ಣನ ಪ್ರೋತ್ಸಾಹದಿಂದ ಪ್ರಚೋದಿತನಾದ ಯುಧಿಷ್ಠಿರನು ದುರ್ಯೋಧನನ ಕುರಿತು ಮಾರ್ಮಿಕವಾದ ಬಿರುನುಡಿಗಳನ್ನಾಡಿದನು. ಇದರಿಂದ ಕ್ರೋಧಗೊಂಡ ದುರ್ಯೋಧನನು ತಾನು ತನ್ನ ಶ್ರಮವನ್ನು ಪರಿಹರಿಸಿಕೊಂಡು ಅನಂತರ ಪಾಂಡವ ರೆಲ್ಲರನ್ನೂ ಧ್ವಂಸ ಮಾಡುವದಾಗಿ ನೀರಿನೊಳಗಿನಿಂದಲೇ ತಿಳಿಸಿದನು. ಅನಂತರ ಭೀಮನು ದುರ್ಯೋಧನನನ್ನು ಕ್ರೂರವಾದ ಮಾತುಗಳಿಂದ ಕೆಣಕಿದನು. ಚೂಪಾದ, ಮರ್ಮಭೇದಕವಾದ ಆ ಮಾತುಗಳಿಂದ ದುರ್ಯೋಧನನ ಹೃದಯ ಸರಸಿಯ ಛಲವಾರಿಯು ತೀವ್ರವಾಗಿ ಕಲಕಲ್ಪಟ್ಟಿತು. ಅವನ ತಾಳ್ಮೆ ತಪ್ಪಿತು. ಕ್ರೋಧವು ಅವನನ್ನು ಆವರಿಸಿತು. ಅವನಿಗೆ ಸಹಿಸಿಕೊಂಡಿರಲು ಸಾಧ್ಯವಾಗ ಲಿಲ್ಲ. ಅತ್ಯಾಕ್ರೋಶದಿಂದ ಕೊಳದ ನೀರನ್ನು ಸೀಳಿ ಮೇಲೆದ್ದು ಬಂದನು.

ಆಕ್ರೋಶವೇ ಮೈದಳೆದು ಬಂದಂತಿದ್ದ ದುರ್ಯೋಧನನನ್ನು ಕುರಿತು ಯುಧಿಷ್ಠಿರನು ತಾವು ಐವರು ಪಾಂಡವರಲ್ಲಿ ದುರ್ಯೋಧನನು ಯಾರೇ ಒಬ್ಬ ನನ್ನು ಗೆದ್ದರೂ ಅವನಿಗೆ ರಾಜ್ಯವು ಸಲ್ಲುತ್ತದೆಂದು ತಿಳಿಸಿ ಅವನಿಗೆ ಯುದ್ಧ ಸಾಮಗ್ರಿಗಳನ್ನು ಒದಗಿಸಿಕೊಟ್ಟನು. ದುರ್ಯೋಧನನು ಸಜ್ಜಿತನಾಗಿ ನಿಂತು ಐವರು ಪಾಂಡವರಲ್ಲಿ ಯಾರೊಬ್ಬನಾದರೂ ತನ್ನನ್ನು ಎದುರಿಸಿ ಬರಬಹು ದೆಂದು ತಿಳಿಸಿದನು. ಆಗ ಕೃಷ್ಣನು ಯುಧಿಷ್ಠಿರನಲ್ಲಿ ಸಿಟ್ಟಾಗಿ "ಯುಧಿಷ್ಠಿರಾ, ನಿಮ್ಮ ಐದು ಜನರಲ್ಲಿ ದುರ್ಯೋಧನನು ಯಾವನೇ ಒಬ್ಬನನ್ನು ಗೆದ್ದರೂ ಅವನಿಗೆ ರಾಜ್ಯವು ಸಲ್ಲುತ್ತದೆ ಎಂದು ಹೇಳಿದೆಯಷ್ಟೆ? ಅವನೀಗ ನಿನ್ನನ್ನೋ, ಅರ್ಜುನ ನನ್ನೋ, ನಕುಲನನ್ನೋ, ಸಹದೇವನನ್ನೋ ಆರಿಸಿಕೊಂಡು ಯುದ್ಧ ಮಾಡಿದರೆ ನೀವು ಪುನಃ ಅರಣ್ಯಕ್ಕೆ ಹೋಗಲು ಸಿದ್ಧರಾಗಿದ್ದೀರೇನು? ದುರ್ಯೋಧನನು

ಭೀಮನನ್ನು ಕೊಲ್ಲಬೇಕೆಂಬ ಉದ್ದೇಶದಿಂದಲೇ ಉಕ್ಕಿನ ಪುರುಷಾಕೃತಿಯು ಪ್ರತಿಮೆಯೊಂದಿಗೆ ಹದಿಮೂರು ವರ್ಷಗಳ ತನಕ ಗದಾಯುದ್ಧ ವಿದ್ಯೆಯನ್ನು ಅಭ್ಯಾಸ ಮಾಡಿದ್ದಾನೆ. ಹಾಗಾಗಿ ಗದಾಯುದ್ಧದಲ್ಲಿ ಅವನಷ್ಟು ಪರಿಶ್ರಮ ಭೀಮನಿಗೆ ಕೂಡ ಇಲ್ಲ. ಹೀಗಿರುವಾಗ ಗದಾಪಾಣಿಯಾದ ದುರ್ಯೋಧನನನ್ನು ನೀವು ನಾಲ್ವರು ಹೇಗೆ ಗೆಲ್ಲುವಿರಿ ?" ಎಂದು ಗದರಿಸಿದಾಗ ಭೀಮನು ತಾನು ದುರ್ಯೋಧನನನ್ನು ಖಂಡಿತವಾಗಿಯೂ ಕೊಲ್ಲುವದಾಗಿ ತಿಳಿಸಿದನು. ಎಲ್ಲರೂ ಅವನನ್ನು ಹೊಗಳಿ ಹುರಿದುಂಬಿಸಿದರು.

ಭೀಮ, ದುರ್ಯೋಧನ – ಇಬ್ಬರೂ ಎರಡು ಪರ್ವತಗಳಂತಿದ್ದು ಒಬ್ಬರ ನ್ನೊಬ್ಬರು ಎದುರಿಸಿದರು. ಭೀಮನು, ತಮಗೆ ದುರ್ಯೋಧನನು ಹಿಂದೆ ಮಾಡಿದ ಅಕೃತ್ಯಗಳನ್ನೆಲ್ಲ ಅವನಿಗೆ ಜ್ಞಾಪಿಸಿ ಮೂದಲಿಸುತ್ತಾ ಮದವೇರು ತ್ತಿದ್ದನು. ಮುಂದೆ ನಡೆಯಲಿದ್ದ ಕುರುಕ್ಷೇತ್ರ ಯುದ್ಧದಿಂದ ದೂರವಿರುವದಕ್ಕಾಗಿ ಈ ಹಿಂದೆ ತೀರ್ಥಯಾತ್ರೆಗೆ ಹೋಗಿದ್ದ, ಹಾಗೂ ಭೀಮ–ದುರ್ಯೋಧನರಿಗೆ ಗದಾಯುದ್ಧ ವಿದ್ಯಾಗುರುವಾದ, ಬಲರಾಮನೂ ಈ ವೇಳೆಗೆ ಅಲ್ಲಿಗೆ ಬಂದು ತನ್ನ ಶಿಷ್ಯರ ಯುದ್ಧವನ್ನು ನೋಡುತ್ತ ನಿಂತನು.

ಭೀಮ ದುರ್ಯೋಧನರಿಬ್ಬರೂ ಮೊದಲು ತಮ್ಮ ತಮ್ಮ ಕಣ್ಣುಗಳಿಂದಲೇ ಪರಸ್ಪರರನ್ನು ದಹಿಸಿಬಿಡುವಂತೆ ಒಬ್ಬರನ್ನೊಬ್ಬರು ಎವೆಯಿಕ್ಕದೆ ಕ್ರೂರವಾಗಿ ನೋಡಿದರು. ಇಬ್ಬರೂ ಕಡೆಬಾಯಿಗಳನ್ನು ನೆಕ್ಕುತ್ತಾ ಎರಡು ಪುರುಷ ಸಿಂಹ ಗಳಂತೆ ಹಾಗೂ ವರುಣನಿಗೆ, ಕೃಷ್ಣನಿಗೆ, ಕುಬೇರನಿಗೆ, ಸುಂದೋಪಸುಂದರಿಗೆ, ರಾಮ–ರಾವಣರಿಗೆ, ವಾಲಿ–ಸುಗ್ರೀವರಿಗೆ, ಮೃತ್ಯುವಿಗೆ, ಪ್ರಳಯ ಕಾಲದ ಮೇಘ ಗಳಿಗೆ ಸಮಾನವಾಗಿ ಎರಡು ಮದಗಜಗಳಂತೆ, ಕೋಪದಿಂದ ತುಟಿಗಳು ನಡುಗುತ್ತಿರಲು, ಆನೆಗಳಂತೆ, ಗೂಳಿಗಳಂತೆ, ಗರ್ಜಿಸುತ್ತಾ ಪರಸ್ಪರವಾಗಿ ಮಾರ್ಮಿಕವಾದ ಮಾತುಗಳಿಂದ ತಿವಿಯುತ್ತಿದ್ದರು.

ಭೀಮನು ದುರ್ಯೋಧನನನ್ನು ಕುರಿತು "ಎಲವೋ ದುರ್ಯೋಧನಾ ! ನೀನು ಹಿಂದೆ ವಿಷ ಸರ್ಪಗಳಿಂದ ನನ್ನನ್ನು ಕಚ್ಚಿಸಿದುದು, ವಿಷವನ್ನು ನನಗೆ ತಿನ್ನಿಸಿದುದು, ಜೂಜಿನ ನೆವದಿಂದ ನಮ್ಮ ಸರ್ವಸ್ವವನ್ನೂ ಅಪಹರಿಸಿದುದು, ರಜಸ್ವಲೆಯಾಗಿದ್ದ ದ್ರೌಪದಿಯನ್ನು ತುಂಬಿದ ಸಭೆಯ ಮಧ್ಯಕ್ಕೆ ಎಳೆತಂದು ಅವಳ ಮಾನಹಾನಿ ಮಾಡಲು ಪ್ರಯತ್ನಿಸಿದುದು – ಇವೆಲ್ಲವನ್ನೂ ಜ್ಞಾಪಿಸಿಕೊ. ಅವುಗಳಿಗೆಲ್ಲ ಈಗ ಪ್ರಾಯಶ್ಚಿತ್ತ ಮಾಡುತ್ತೇನೆ. ನೀನಿನ್ನು ನಿನ್ನ ಮಾತಾಪಿತರ, ಮಡದಿಯರ ಮುಖವನ್ನು ನೋಡಲಾರೆ. ನಿನ್ನನ್ನು ದುಷ್ಕಾರ್ಯಗಳಿಗೆ ಪ್ರೇರೇಪಿ

ಸುತ್ತಿದ್ದ ಶಕುನಿ, ಕರ್ಣ, ದುಶ್ಶಾಸನ, ಜಯದ್ರಥರು ಈಗ ಇಲ್ಲ. ನಿನ್ನ ಪಾಪದ ಫಲವಾಗಿ ಗುರು ಹಿರಿಯರುಗಳನ್ನೂ ಆಹುತಿಗೊಂಡೆ. ಈಗ ನಿನಗೂ ಕಾಲವು ಸಮಾಪಿಸುತ್ತಿದೆ" ಎಂದು ಮೂದಲಿಸಿ ಅವನನ್ನು ಉದ್ರೇಕಿಸಿದನು.

ಇದಕ್ಕೆ ಪ್ರತಿಯಾಗಿ ದುರ್ಯೋಧನನೂ "ಎಲವೋ ಭೀಮ! ಸುಮ್ಮನೆ ಏಕೆ ಅರಚುತ್ತಿದ್ದೀ? ಮುಂದೆ ಬಾ. ಯುದ್ಧ ಮಾಡು. ಕುಲಾಧಮಾ. ನಿನ್ನ ಯುದ್ಧಾತುರವನ್ನು ಇಂದು ನಿಲ್ಲಿಸುತ್ತೇನೆ. ನಿನ್ನೊಡನೆ ಯುದ್ಧ ಮಾಡಬೇಕೆಂದು ಬಹುಕಾಲದಿಂದ ಆಶಿಸುತ್ತಿದ್ದೆ. ನಿನ್ನ ಹರಟೆಯನ್ನು ನಿಲ್ಲಿಸು" ಎಂದು ಜರೆದನು.

ಹೀಗೆ ಪರಸ್ಪರರಲ್ಲಿ ದ್ವೇಷವನ್ನು ಹೆಚ್ಚಿಸಿಕೊಂಡು ಮದವೇರುತ್ತಿದ್ದ ಇಬ್ಬರೂ ಮದಿಸಿದ ಎರಡು ವೃಷಭಗಳಂತೆ ಒಬ್ಬರ ಮೇಲೊಬ್ಬರು ಎರಗಿದರು. ಭೂಮಿ ಯಲ್ಲಿಯೂ, ಆಕಾಶದಲ್ಲಿಯೂ ಪ್ರೇಕ್ಷಕರು ನೆರೆದಿದ್ದರು. ಹದಿನೆಂಟು ದಿನಗಳ ಕಾಲ ಘೋರವಾಗಿ, ಅವ್ಯಾಹತವಾಗಿ ನಡೆದ ಕುರುಕ್ಷೇತ್ರ ಯುದ್ಧದ ಈ ಮುಕ್ತಾಯ ಘಟನೆಯು ಇಡಿಯ ಲೋಕದಲ್ಲಿ ಎಲ್ಲೆಲ್ಲಿಯೂ ಅಸಾಮಾನ್ಯವಾದ ಕುತೂಹಲವನ್ನು ಕೆರಳಿಸಿತ್ತು. ಇಬ್ಬರೂ ವಿಚಿತ್ರ ಗತಿಗಳಿಂದ ಸುತ್ತುತ್ತಾ, ಪರಸ್ಪರರು ಅಣ್ಣ ತಮ್ಮಂದಿರಾಗಬೇಕಿದ್ದರೂ ಕೂಡ ಒಬ್ಬರನ್ನೊಬ್ಬರು ಕೊಲ್ಲಲೇ ಬೇಕೆಂದು ಹೊಡೆಯುತ್ತಾ ಯುದ್ಧ ಮಾಡಿದರು. ಒಮ್ಮೆ ಮೇಲೆ ಹಾರಿ ಹೊಡೆಯುತ್ತಾ, ಒಮ್ಮೆ ಹಿಂದೆ ಸರಿಯುತ್ತಾ, ಒಮ್ಮೆ ಸುತ್ತುತ್ತಾ, ಒಮ್ಮೆ ಗದೆಯನ್ನು ವೇಗದಿಂದ ತಿರುಗಿಸುತ್ತಾ ಯುದ್ಧ ಮಾಡುತ್ತಿದ್ದರು. ಇಬ್ಬರೂ ಸಮಾನ ಬಲರಾಗಿ ಕಾಣಿಸುತ್ತಿದ್ದರು. ಯುಧಿಷ್ಠಿರಾದಿಗಳ ಮನಸ್ಸಿನಲ್ಲಿ ತೀವ್ರವಾದ ಕಳವಳ ಮೂಡುವಷ್ಟು ಚಮತ್ಕಾರದಿಂದ, ಸಮರ್ಥತೆಯಿಂದ ದುರ್ಯೋಧನನು ಯುದ್ಧ ಮಾಡಿದನು. ಯಾರನ್ನು ತಾನು ಬಾಲ್ಯದಿಂದ ಈವರೆಗೆ ಕ್ಷುಲ್ಲಕವಾಗಿ ಕಂಡಿದ್ದನೋ ಅಂತಹ ಪಾಂಡವರು ಈಗ ತನ್ನ ಕಡೆಯ ಲೋಕೈಕ ವೀರರನ್ನೆಲ್ಲ ಕೊಂದು ತನ್ನನ್ನು ಎದುರಿಸುತ್ತಿದ್ದಾರೆ! ದುರ್ಯೋಧನನೀಗ ರಾಜ್ಯವನ್ನು ಪಡೆಯುವದು ಮುಖ್ಯವಲ್ಲ, ತಾನು ರಾಜನಾಗಿ ಮುಂದುವರಿಯಬೇಕೆಂಬದು ಮುಖ್ಯವಲ್ಲ. ಅವನ ಗುರಿ ಒಂದೇ– ಪಾಂಡವರನ್ನು ಕೊಲ್ಲುವದು – ಭೀಮನನ್ನು ಕೊಲ್ಲುವದು. ರಾಜ್ಯ ಕಳೆದುಹೋಗುತ್ತಿರುವ ದುಃಖವನ್ನು, ತನ್ನ ಕಡೆಯ ಲೋಕೈಕ ವೀರರನ್ನೆಲ್ಲ ಪಾಂಡವರಿಗೆ ಬಲಿಕೊಟ್ಟ ದುಃಖವನ್ನು, ತನ್ನ ತಮ್ಮ ದುಶ್ಶಾಸನನು ಕ್ರೂರವಾಗಿ ಕೊಲ್ಲಲ್ಪಟ್ಟ ದುಃಖವನ್ನು, ತನ್ನ ಗೆಳೆಯ ಕರ್ಣನು ಅನ್ಯಾಯದಿಂದ ಕೊಲ್ಲಲ್ಪಟ್ಟ ದುಃಖವನ್ನು–ಹುಟ್ಟಿದಂದಿನಿಂದ ತಾನು ಈ ವರೆಗೆ ಅನುಭವಿಸಿದ ತನ್ನ ಎಲ್ಲ, ಎಲ್ಲ ದುಃಖವನ್ನೂ ಅವನು ಕಳೆದುಕೊಳ್ಳುತ್ತಾನೆ, ಭೀಮ ಒಬ್ಬನನ್ನು ಅವನು ಕೊಂದು ಕೆಡವಿದರೆ. ಮನುಷ್ಯ ಹೀಗೆ ತೊರೆದು ನಿಂತಾಗ

ಅವನಿಗೆ ಅವನಂತಹ ನೂರು ಜನರ ಬಲ ಬರುತ್ತದೆ. ಅದು ದೇಹಶಕ್ತಿಯನ್ನು ಮೀರಿದ ಮನೋಶಕ್ತಿ. ಕಳೆದುಕೊಳ್ಳಲಿಕ್ಕೆ ಇನ್ನೇನೂ ಇಲ್ಲವೆಂಬಂತಾಗಿ ತೊರೆದು ನಿಂತ ಕ್ರುದ್ಧ ಮನಸ್ಸಿನ ಭೀಕರ ಶಕ್ತಿ. ಇನ್ನು ದೈಹಿಕವಾಗಿ ಕೂಡ ಬಲಾಢ್ಯನೂ, ಭೀಮನ ಗುರುವಿನಿಂದಲೇ ಯುದ್ಧ ಶಿಕ್ಷಣವನ್ನು ಪಡೆದವನೂ, ಈ ಸಂದರ್ಭ ಕ್ಕಾಗಿಯೇ ಎಂಬಂತೆ ಯುದ್ಧದ ಈ ಹಿಂದಿನ ದಿನಗಳಲ್ಲಿ ತನ್ನ ದೇಹಬಲವನ್ನು ವ್ಯಯ ಮಾಡದೆ ಕಾದಿರಿಸಿದ್ದವನೂ ಆದ ದುರ್ಯೋಧನನು ಭೀಮನಿಗೆ ಸಮಾನ ನಾಗಿ, ಕೆಲವೊಮ್ಮೆ ಅವನಿಗಿಂತ ಒಂದು ಕೈ ಮೇಲಾಗಿಯೇ ಯುದ್ಧ ಮಾಡಿದರೂ ಅದರಲ್ಲಿ ಆಶ್ಚರ್ಯವಿರುವಂತಿರಲಿಲ್ಲ.

ಕೇಳು. ದುರ್ಯೋಧನನು ವೇಗದಿಂದ ತಿರುಗಿಸುತ್ತಿದ್ದ ಗದೆಗೆ ಭೀಮನು ತನ್ನ ಗದೆಯಿಂದ ಬಲವಾಗಿ ಅಪ್ಪಳಿಸಿದನು. ಅದರಿಂದ ಘೋರವಾದ ಒಂದು ಶಬ್ದ ಉಂಟಾಗಿ ಕಿಡಿಗಳು ಚಿಮ್ಮಿದವು. ಭೂಮಿ ಅದುರಿತು. ತನ್ನ ಗದೆಯ ವೇಗವು ಎದುರಾಳಿಯ ಹೊಡೆತದಿಂದ ಪ್ರತಿಹತವಾದುದರಿಂದ ರೇಗಿದ ದುರ್ಯೋಧ ನನು ಹೊಂಚು ಹಾಕಿ ವಿಚಿತ್ರ ಗತಿಗಳಲ್ಲಿ ಸುತ್ತುತ್ತಾ ಭೀಮನ ಪಕ್ಕೆಗೆ ರಭಸದಿಂದ ಹೊಡೆದನು. ಭೀಮನು ಎಳ್ಳಷ್ಟೂ ಅಲುಗದೆ ತಾನೂ ಸಮಯ ಸಾಧಿಸಿ ದುರ್ಯೋಧನನ ಪಕ್ಕೆಗೆ ಬಲವಾಗಿ ಹೊಡೆದನು. ಈ ಪ್ರಹಾರದಿಂದ ನೊಂದ ದುರ್ಯೋಧನನು ಎರಡು ಮಂಡಿಗಳನ್ನೂ ಊರಿ ನೆಲದ ಮೇಲೆ ಕುಸಿದನು. ಆದರೆ ಕೂಡಲೆ ಮೇಲೆದ್ದು ಭೀಕರವಾಗಿ ಬುಸುಗುಟ್ಟುತ್ತಾ ಕಣ್ಣುಗಳಿಂದಲೇ ಭೀಮನನ್ನು ನುಂಗಿ ಬಿಡುವಂತೆ ನೋಡುತ್ತಾ ವೇಗದಿಂದ ನುಗ್ಗಿ ಬಂದು ವಜ್ರಾ ಯುಧಕ್ಕೆ ಸಮಾನವಾದ ತನ್ನ ಗದೆಯಿಂದ ಭೀಮನ ಹಣೆ ಒಡೆಯುವಂತೆ ಹೊಡೆ ದನು. ಭೀಮನು ಇದರಿಂದಲೂ ಅಲುಗಲಿಲ್ಲ. ಅವನ ಶರೀರವೆಲ್ಲ ರಕ್ತಮಯ ವಾಯಿತು. ಆದರೆ ಇದರಿಂದ ಕ್ರುದ್ಧನಾದ ಅವನು ಬರಸಿಡಿಲಿಗೆ ಸಮಾನವಾದ ವೇಗದಿಂದ ದುರ್ಯೋಧನನನ್ನು ಅಪ್ಪಳಿಸಿದನು. ಭೀಮನ ಈ ಪೆಟ್ಟಿಗೆ ದೇಹದ ಕೀಲುಗಳೆಲ್ಲ ಕದಲಿದಂತಾದ ದುರ್ಯೋಧನನು ಕೆಳಗೆ ಬಿದ್ದುಹೋದನು. ಪಾಂಡ ವರು ಅಟ್ಟಹಾಸ ಮಾಡಿದರು. ಆದರೆ ಅಷ್ಟರಲ್ಲಿಯೇ ದುರ್ಯೋಧನನು ಮೇಲೆದ್ದು ತನ್ನ ಸರ್ವ ಚಮತ್ಕಾರವನ್ನೂ ಉಪಯೋಗಿಸಿ ಬಹಳ ವಿಚಕ್ಷಣತೆಯಿಂದ ವೇಗ ವಾಗಿ ಬಂದು ಭೀಮನನ್ನು ಹೊಡೆದನು. ಈ ಪೆಟ್ಟಿನಿಂದಾಗಿ ಭೀಮನೂ ಕೆಳಗೆ ಬಿದ್ದನು. ಉತ್ಸಾಹಗೊಂಡ ದುರ್ಯೋಧನನು ಸಿಂಹನಾದ ಮಾಡುತ್ತಾ ಭೀಮನ ಕವಚವನ್ನು ಎದೆಯಿಂದ ಭೇದಿಸಿದನು. ಆದರೆ ಅಷ್ಟರಲ್ಲಿಯೇ ಭೀಮನು ಚೇತರಿಸಿ ಕೊಂಡೆದ್ದು ರಕ್ತಮಯವಾಗಿದ್ದ ತನ್ನ ಮುಖವನ್ನು ಒರೆಸಿಕೊಂಡು ಶ್ರಮವನ್ನು ಪರಿಹರಿಸಿಕೊಂಡು ದುರ್ಯೋಧನನನ್ನು ಎದುರಿಸಿದನು.

ಈ ವೇಳೆಗೆ ಕೃಷ್ಣನು ಅರ್ಜುನನನ್ನು ಕುರಿತು ಭೀಮ – ದುರ್ಯೋಧನರ

ಪರಾಕ್ರಮಗಳನ್ನು ವಿಶ್ಲೇಷಿಸುತ್ತ ದುರ್ಯೋಧನನು ಕೂಡ ಮಹಾ ಪರಾಕ್ರಮಿ ಯೆಂದೂ ಭೀಮನು ತಾನು ಹಿಂದೆ ಮಾಡಿರುವ ಪ್ರತಿಜ್ಞಾ ಪೂರ್ತಿಕೆಗೆ ಅಧರ್ಮ ಮಾರ್ಗದಿಂದಲೇ ಎದುರಾಳಿಯನ್ನು ಕೊಲ್ಲಬೇಕೆಂದೂ ತಿಳಿಸಲು, ಭೀಮನು ತನ್ನತ್ತ ನೋಡುವ ಸಂದರ್ಭವನ್ನು ಉಪಯೋಗಿಸಿಕೊಂಡು ಅರ್ಜುನನು ತನ್ನ ತೊಡೆಗಳನ್ನು ತಟ್ಟಿ ಸಂಕೇತ ಮಾಡಿ ತೋರಿಸಿದನು.

ಪುನಃ ವೀರರಿಬ್ಬರೂ ಸಂಧಿಸಿದರು. ಪುನಃ ಯುದ್ಧವು ಪ್ರಚಂಡವಾಗಿ ನಡೆ ಯಿತು. ಇಬ್ಬರೂ ರಕ್ತದಿಂದ ತೊಯ್ದಿದ್ದರು. ತನ್ನ ಮೇಲೆ ಬೀಳಲು ಭೀಮನು ಅವಕಾಶ ಮಾಡಿಕೊಟ್ಟದನ್ನು ಉಪಯೋಗಿಸಿಕೊಂಡ ದುರ್ಯೋಧನನು ವೇಗ ದಿಂದ ಭೀಮನ ಮೇಲೆ ನುಗ್ಗಿದನು. ಅವನು ಹೀಗೆ ನುಗ್ಗಿ ಬರುವದನ್ನು ನಿರೀಕ್ಷಿಸಿ ಕಾಯುತ್ತಿದ್ದ ಭೀಮನು ಕೂಡಲೇ ಅವನಿಗೆ ಹೊಡೆದನು. ಪಕ್ಕಕ್ಕೆ ಹಾರಿ ದುರ್ಯೋಧನನು ಆ ಪೆಟ್ಟನ್ನು ತಪ್ಪಿಸಿಕೊಂಡನು. ಹಾಗೆಯೇ ಮೇಲೆ ನೆಗೆದ ಅವನು ಭೀಮನನ್ನು ಬಹಳ ಬಲವಾಗಿ ಹೊಡೆಯಲು ಭೀಮನು ಮೂರ್ಛಿತನಾಗಿ ಬಿದ್ದನು. ಆದರೆ ಅವನು ಮೂರ್ಛಿತನಾಗಿದ್ದಾನೆಂಬದು ದುರ್ಯೋಧನನಿಗೆ ಗೊತ್ತಾಗಲಿಲ್ಲ. ಅವನು ತನ್ನನ್ನು ಹೊಡೆಯುವದಕ್ಕಾಗಿಯೇ ಹಾಗೆ ಹೊಂಚು ಹಾಕುತ್ತಿದ್ದಾನೆಂದು ಅವನು ಭಾವಿಸಿ ಭೀಮನು ಏಳುವದನ್ನೇ ನಿರೀಕ್ಷಿಸುತ್ತಾ ನಿಂತನು. ಸ್ವಲ್ಪ ಸಮಯದಲ್ಲಿಯೇ ಭೀಮನು ಚೇತರಿಸಿಕೊಂಡು ಗದೆಯನ್ನು ಕೈಗೆತ್ತಿಕೊಂಡನು. ಅವನನ್ನು ವಂಚಿಸಬೇಕೆಂಬದಕ್ಕಾಗಿ ದುರ್ಯೋಧನನು ಸುಮ್ಮನೆ ನಿಂತಿದ್ದವನಂತೆ ಇದ್ದು ಒಮ್ಮೆಗೇ ಭೀಮನ ಮೇಲೆ ನೆಗೆದನು. ದುರ್ಯೋಧನನು ಈ ರೀತಿ ವಂಚಿಸುತ್ತಾನೆಂದು ಸರಿಯಾಗಿ ನಿರೀಕ್ಷಿಸಿದ್ದ ಭೀಮನು ದುರ್ಯೋಧನನ ಪೆಟ್ಟನ್ನು ತಪ್ಪಿಸಿಕೊಳ್ಳಲು ತಾನೂ ಮೇಲೆ ಹಾರಿ ಅರ್ಜುನನು ತನ್ನ ಹಿಂದಿನ ಪ್ರತಿಜ್ಞೆಯನ್ನು ಜ್ಞಾಪಿಸಿದುದನ್ನು ನೆನಸಿಕೊಂಡು ದುರ್ಯೋಧನನ ಎರಡು ತೊಡೆಗಳಿಗೂ ಬಲವಾಗಿ ಹೊಡೆದನು. ದುರ್ಯೋಧನನು ಭೂಮಿಗೆ ಉರುಳಿದನು. ಪುನಃ ಮೇಲೇಳಲು ಅವನಿಗೆ ಸಾಧ್ಯವಾಗಲಿಲ್ಲ.

ಭೀಮನು ದುರ್ಯೋಧನನನ್ನು ಉರುಳಿಸಿದ ಈ ಘಟನೆಯು ಮಕ್ಕಳಾಟವೂ ಆಗಿರಲಿಲ್ಲ, ಸಾಮಾನ್ಯ ವೀರರಿಬ್ಬರ ಹೋರಾಟವೂ ಆಗಿರಲಿಲ್ಲ, ಅಥವಾ ಇಬ್ಬರು ರಾಜರುಗಳು ಕಾದಾಡಿ ಮುಗಿಸಿದ ಸಾಮಾನ್ಯ ಯುದ್ಧವೂ ಆಗಿರಲಿಲ್ಲ. ಪ್ರಕೃತಿ ಧರ್ಮಕ್ಕೆ ವಿರೋಧವಾಗಿ, ಯುಗ ಧರ್ಮಕ್ಕೆ ವಿರೋಧವಾಗಿ ಅಧರ್ಮವು ಧರ್ಮ ವನ್ನು ಕಾಡುಪಾಲು ಮಾಡಿದ್ದು, ಯಾವದು ನಿತ್ಯಸತ್ಯವೆನಿಸಿತ್ತೋ ಅಂತಹ ಒಂದು ನಿಯಮವು ಸುಳ್ಳಾಯಿತೋ ಎಂಬ ಪ್ರಬಲ ಶಂಕೆ ಉದ್ಭವವಾಗುತ್ತಿದ್ದು ದಕ್ಕೆ ತೀರ್ಪು ನೀಡಿದ ಮಹಾನ್ ಘಟನೆ ಇದಾಗಿತ್ತು. ಭಾರತದ ಹದಿನೆಂಟು ಅಕ್ಷೋಹಿಣೀ ಜನಸಂಖ್ಯೆಯನ್ನು ನಾಶ ಮಾಡಿ ಅಸಾಧ್ಯವಾಗಿ ಬೆಳೆದಿದ್ದ

ಭೂಮಿಯ ಭಾರವನ್ನು ಇಳಿಸಿದ ಪ್ರಚಂಡ ಯಜ್ಞದ ಪೂರ್ಣಾಹುತಿ ಇದಾಗಿತ್ತು. ಈ ಹಿಂದಿನ ಹದಿನೆಂಟು ದಿನಗಳಲ್ಲಿ ಅಧರ್ಮದ ಪ್ರಚಂಡ ಶಕ್ತಿಯ ವಿರುದ್ಧ ಧರ್ಮವು ಅವ್ಯಾಹತವಾದ ಹೋರಾಟ ನಡೆಸಿದ್ದು ಇದೀಗ ದುರ್ಯೋಧನನನ್ನು ಉರುಳಿಸುವದರ ಮೂಲಕ ಭೀಮನು ಆ ಅಧರ್ಮದ ಬೇರನ್ನೇ ಕಿತ್ತೊಗೆದಂತೆ ಆಗಿತ್ತು. ತ್ರೇತಾಯುಗದಲ್ಲಿ ರಾಮಚಂದ್ರನು ರಾವಣನನ್ನು ಕೊಲ್ಲುವಾಗ ಅದಕ್ಕೆ ಏನೆಲ್ಲ ಅರ್ಥ ಬರುತ್ತಿತ್ತೋ, ಈಗ ಭೀಮನ ಕೈಯಿಂದ ದುರ್ಯೋಧನನು ಉರುಳಿಸಲ್ಪಟ್ಟಾಗಲೂ ಅದೇ ಅರ್ಥವು ಒದಗುವಂತಹ ಪರಿಸ್ಥಿತಿ ಇತ್ತು. ಚರಿತ್ರಾರ್ಹ ಎಂಬ ಶಬ್ದವು ಕೇವಲ ಅಸಮರ್ಥ ನಿರೂಪಣೆಯಾಗುವಂತಹ ಈ ಒಂದು ಅತ್ಯಂತ ಮಹತ್ವಪೂರ್ಣ ಘಟನೆಯನ್ನು ಸಾಧಿಸಿದ ಭೀಮನು ಹಾಗೆ ಸಾಧಿಸಬೇಕಾದರೆ ಶೀರಾ ಅಮಾನುಷವೆನ್ನಬಹುದಾದಂತಹ ಮನೋಭೂಮಿಕೆಯನ್ನು ಪಡೆದಿದ್ದಿರಲೇಬೇಕು ಎಂಬದು ನಿಶ್ಚಯವಾಗಿದ್ದು ಅವನ ಆಗಿನ ಆ ಮನಸ್ಥಿತಿಯನ್ನು ಕಲ್ಪಿಸಿಕೊಳ್ಳುವದು ಕೂಡ ನಮ್ಮಿಂದ ಸಾಧ್ಯವಾಗುವದಿಲ್ಲ ಎಂಬದನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ವರ್ಷವರ್ಷಗಳ ಕಾಲ ಮೇಲಿಂದ ಮೇಲೆ ತಮಗುಂಟಾದ ಅನ್ಯಾಯವನ್ನು, ದೌರ್ಜನ್ಯವನ್ನು ಆಹುತಿಗೊಳ್ಳಬೇಕೆಂಬದಕ್ಕಾಗಿ ಮೇರೆದಪ್ಪಲು ಯತ್ನಿಸುತ್ತಿದ್ದ ಅವನ ಕ್ರೋಧ ಸಾಗರವು ಆ ಪ್ರತಿ ಬಾರಿಯೂ ತಡೆಯಲ್ಪಟ್ಟದ್ದು ಈಗ ಅದು ವಿಶ್ವದ ಯಾವ ತತ್ವಕ್ಕೂ ಒಳಗಾಗದೆ ಸ್ವತಂತ್ರವಾದ ಚಲನೆಯನ್ನು ಪಡೆಯಲು ಸಾಧ್ಯವಾದಂತಾಗಿ ಲೋಕಗಳನ್ನೇ ನುಂಗುವಂತೆ ಭೋರ್ಗರೆದು ಉಕ್ಕಿ ಹರಿಯಬೇಕಾಗಿದ್ದುದು ಸಹಜವೇ ಆಗಿತ್ತು. ಭೀಮನ ದೇಹದ ಕಣಕಣವೂ ಪ್ರತೀಕಾರಾಕಾಂಕ್ಷೆಯಿಂದ ಹುಚ್ಚೆದ್ದು ಕುಣಿಯುತ್ತಿತ್ತು. ಅವನು "ಎಲವೋ ನೀಚಾ, ದುರ್ಯೋಧನಾ ! ಹಿಂದೆ ನಮ್ಮನ್ನು ವಂಚಿಸಿ ನಿರ್ಗತಿಕರನ್ನಾಗಿ ಮಾಡಿ ಸಾಧ್ವೀಮಣಿಯಾದ ದ್ರೌಪದಿಯನ್ನು ಅವಮಾನಿಸಿ ನಮ್ಮನ್ನು ಪಶುಗಳು ಎಂದು ಕರೆದೆಯಲ್ಲವೆ ? ಇದೋ, ಅವಳ ತಪೋಬಲದಿಂದಾಗಿಯೇ ನೀನು ಹೀಗೆ ಬಿದ್ದಿದ್ದೀಯೆ. ನಾವು ನಿನ್ನನ್ನು ನಾಶಮಾಡಲು ನಿನ್ನಂತೆ ನಮ್ಮಲ್ಲಿ ಅರಗಿನ ಮನೆಯಾಗಲಿ, ವಿಷಸರ್ಪಗಳಾಗಲಿ, ಬೆಂಕಿಯಾಗಲಿ, ವಿಷವಾಗಲಿ, ಪಗಡೆಯಾಟವಾಗಲಿ ಇಲ್ಲ. ನಾವು ನಮ್ಮ ಭುಜಬಲವನ್ನೇ ಉಪಯೋಗಿಸಿದ್ದೇವೆ. ನಿನ್ನ ಈ ಕೊಬ್ಬಿದ ತೊಡೆಗಳನ್ನು ತೋರಿಸಿ ದ್ರೌಪದಿಯನ್ನು ಕರೆದೆಯಲ್ಲವೆ ?" ಎಂದು ಮೂದಲಿಸುತ್ತ ಹಳೆಯ ನೆನಪುಗಳು ಬಂದಂತೆ, ಬಂದಂತೆ ಅವನು ಹೆಚ್ಚು ಹೆಚ್ಚು ಭೀಷಣನಾಗಿ, ಲೋಕದ ಪ್ರತೀಕಾರ ಶಕ್ತಿಯೆಲ್ಲವೂ ಒಟ್ಟಾಗಿ ಭೀಮನ ರೂಪವನ್ನು ತಾಳಿ ಬಂದಂತಿರಲು ಅವನು ದುರ್ಯೋಧನನ ತಲೆಯನ್ನು ಕಾಲಿನಿಂದೊದೆದು ನೆಲದಲ್ಲಿ ಶಿಕ್ಕಿದನು. ಇದನ್ನು ಮೆಚ್ಚದ ಯುಧಿಷ್ಠಿರನು ದುರ್ಯೋಧನನು ಚಕ್ರವರ್ತಿಯಾಗಿದ್ದವನೆಂದೂ ಆದುದರಿಂದ ಅವನನ್ನು ಒದೆಯಬಾರದೆಂದೂ ಭೀಮನನ್ನು ಗದರಿಸಿ ದುರ್ಯೋಧನನನ್ನು ಸಮಾಧಾನಿಸಲು ಪ್ರಯತ್ನಿಸುತ್ತಿದ್ದನು.

ಇಷ್ಟರಲ್ಲಿ ಶೀಘ್ರಕೋಪಿಯಾದ ಬಲರಾಮನು ವಿಪರೀತ ಸಿಟ್ಟುಗೊಂಡು ಗದಾಯುದ್ಧದಲ್ಲಿ ನಾಭಿಯ ಕೆಳಗೆ ಹೊಡೆಯುವದು ಅಧರ್ಮವೆಂದೂ, ಭೀಮನು ಹೀಗೆ ಅಧರ್ಮದಿಂದ ದುರ್ಯೋಧನನನ್ನು ಹೊಡೆದು ಉರುಳಿಸಿರುವದರಿಂದ ಅವನನ್ನು ತಾನು ಕೊಲ್ಲುವದಾಗಿ ಹೇಳಿ ತನ್ನ ನೇಗಿಲನ್ನು ಕೈಗೆತ್ತಿಕೊಂಡು ಮದಿಸಿದವನಾಗಿ ಭೀಮನ ಮೇಲೇರಿ ಹೋದನು. ಒಡನೆಯೆ ಕೃಷ್ಣನು ಅವನನ್ನು ತಡೆದು ಸಮಾಧಾನಪಡಿಸುತ್ತಾ "ಅಣ್ಣಾ, ದುರ್ಯೋಧನನು ಮಾಡಿರುವ ಅನ್ಯಾಯಗಳಿಗೆ ಮಿತಿ ಇದೆಯೆ? ಭೀಮನು ಅಷ್ಟದಿಕ್ಪಾಲಕರ ಸಾಕ್ಷಿಯಲ್ಲಿ ತಾನು ದುರ್ಯೋಧನನ ತೊಡೆಯನ್ನು ಮುರಿದೇ ಅವನನ್ನು ಕೊಲ್ಲುವದಾಗಿ ಮಾಡಿದ್ದ ಪ್ರತಿಜ್ಞೆಗೆ ದಾರಿಯೇನು? ತೊಡೆ ಮುರಿದೇ ಸಾಯುವಂತೆ ದುರ್ಯೋಧನನಿಗೆ ಮೈತ್ರೇಯ ಮಹರ್ಷಿಯು ಕೊಟ್ಟಿದ್ದ ಶಾಪಕ್ಕೆ ಗತಿಯೇನು?" ಎಂದು ಮುಂತಾಗಿ ಎಲ್ಲ ಅವನ ಮನಸ್ಸನ್ನು ಪರಿವರ್ತಿಸಿದನು. ಬಲರಾಮನು ಆ ಸ್ಥಳವನ್ನೇ ಬಿಟ್ಟು ಹೊರಟು ಹೋದನು.

ರಮೆ:– ಆದರೂ ಭೀಮನ ಈ ಮಹತ್ಕಾರ್ಯದಲ್ಲಿ ಒಂದು ಸಣ್ಣ ಕಳಂಕ ಅವನಿಗೆ ಉಳಿದೇ ಉಳಿಯಿತು ಎಂದು ನಿಮಗನ್ನಿಸುವದಿಲ್ಲವೆ?

ಮುರಳಿ:– ಇಲ್ಲ. ಅದೂ ಪ್ರಕೃತಿಯ ನಿಯಮಕ್ಕೆ ಅನುಸಾರವಾಗಿಯೇ ನಡೆಯುತ್ತದೆ. ದುರ್ಯೋಧನನು ಮಾಡಿದ ಅನ್ಯಾಯಗಳಿಗೆಲ್ಲ ಅವನ ದೇಹದ ವೇದನೆಯೊಂದೇ ಸಾಕಷ್ಟು ಪರಿಹಾರವಾಗುವದಿಲ್ಲ. ಕ್ಷತ್ರಿಯ ಸಹಜವಾಗಿ ಅವನು ದ್ಯೂತದ ನೆವದಿಂದ ಪಾಂಡವರ ರಾಜ್ಯವನ್ನಷ್ಟೇ ಕಸಿದುಕೊಂಡಿದ್ದರೆ ಅಷ್ಟೇ ಕ್ಷತ್ರಿಯ ಸಹಜವಾಗಿ ಈಗ ಪಾಂಡವರು ಯುದ್ಧದ ಮೂಲಕ ಅವರ ರಾಜ್ಯಭಾಗವನ್ನೂ ತನ್ನ ರಾಜ್ಯಭಾಗವನ್ನೂ ಗೆದ್ದುಕೊಳ್ಳುವದು ಸಹಜವಾಗಿದ್ದು ಇದರಿಂದ ದುರ್ಯೋಧನನ ಮನಸ್ಸಿಗೆ ತೀವ್ರವಾದ ನೋವಾಗಬೇಕಾದ ಅವಶ್ಯಕತೆ ಇರಲಿಲ್ಲ. ಆದರೆ ದುರ್ಯೋಧನನು ಅಸಹಾಯಳಾದ, ನಿರಪರಾಧಿಯಾದ, ಗೌರವಸ್ಥಳಾದ ದ್ರೌಪದಿಗೆ ತುಂಬಿದ ಸಭೆಯಲ್ಲಿ ತನ್ನ ತೊಡೆಗಳನ್ನು ತೋರಿಸಿ ಅವಳು ಅದರ ಮೇಲೆ ಕೂರಬೇಕೆಂದು ಅವಳನ್ನು ಆಹ್ವಾನಿಸಿದುದು ಕ್ಷತ್ರಿಯರಿಗೇ ಏನು, ಮಾನವ ಸಂಸ್ಕೃತಿಗೇ ವಿರೋಧವಾದ ಕಾರ್ಯವಾಗಿತ್ತು. ಈ ಯುದ್ಧವು ಕೇವಲ ರಾಜ್ಯಲಾಭಕ್ಕಾಗಿ ಮಾಡಿದ ಯುದ್ಧವಾಗಿದ್ದಿದ್ದರೆ ಒಂದೋ ಶತ್ರುವು, ಇಲ್ಲವೇ ತಾನು ಸಾಯುವದು ಸಹಜವಾಗಿದ್ದು, ಕ್ಷತ್ರಿಯರು ವಿರೋಚಿತ ಮರಣವನ್ನು ಸ್ವಾಗತಿಸುವದು, ಯುದ್ಧದಲ್ಲಿ ಜಯವನ್ನು ಸ್ವಾಗತಿಸುವಷ್ಟೇ ಸಹಜವಾಗಿದ್ದಂತೆ ದುರ್ಯೋಧನನಾದರೂ ಈಗ ಯಾವದೇ ರೀತಿಯಲ್ಲಿ ಪಶ್ಚಾತ್ತಾಪ ಪಡಬೇಕಾದ ಪ್ರಮೇಯವಿರಲಿಲ್ಲ. ಆದರೆ ದುರ್ಯೋಧನನು ದ್ರೌಪದಿಯ ಕುರಿತು ಮಾಡಿದ ಹೀನ ಕೃತ್ಯಕ್ಕೆ ವಿಧಿಯು ಅವನಿಗೆ ಪ್ರಾಯಶ್ಚಿತ್ತ ಮಾಡಲೇಬೇಕಾಗಿತ್ತು. ಅವನ

ದೇಹವಷ್ಟೇ ಕೆಳಗುರುಳುವದು ಈ ಪ್ರಾಯಶ್ಚಿತ್ತವನ್ನು ಪೂರೈಸಲು ಅಸಮರ್ಥವಾಗಿತ್ತು. ಹಾಗಾಗಿ ಅವನು ದೇಹದ ವೇದನೆಯೊಂದಿಗೆ ಮಾನಸಿಕ ವೇದನೆಯನ್ನೂ ಅನುಭವಿಸುತ್ತ ಪ್ರಾಣ ಬಿಡುವದು ಅವಶ್ಯವಾಗಿತ್ತು. ನೇರವಾದ ಯುದ್ಧದಲ್ಲಿ ಅವನು ಕೆಡವಲ್ಪಟ್ಟಿದ್ದರೆ ಅವನ ಸೋಲು ಯುದ್ಧದ ಸಹಜ ಪರಿಣಾಮವಾಗುತ್ತಿದ್ದು ಅವನು ಇದರಿಂದಾಗಿ ಮನಸ್ಸಿನಲ್ಲಿ ವಿಶೇಷವಾದ ವ್ಯಥೆ ಪಡಬೇಕಾದ ಅವಶ್ಯಕತೆ ಇರಲಿಲ್ಲ. ಅದಕ್ಕಾಗಿಯೇ ವಿಧಿಯ ನಿಯಮವು ದುರ್ಯೋಧನನು ಯುದ್ಧ ಧರ್ಮಕ್ಕೆ ವಿರುದ್ಧವಾಗಿ ಹೊಡೆಯಲ್ಪಡುವಂತೆ ಏರ್ಪಡಿಸಿ ಆ ಹೊಡೆತದ ಪರಿಣಾಮವಾಗಿ ದೇಹದ ವೇದನೆಯೊಂದಿಗೆಯೇ "ಹೀಗೆ ಅನ್ಯಾಯವಾಗಿ ನನ್ನನ್ನು ಹೊಡೆದೆಯಲ್ಲವೆ" ಎಂಬ ಮನೋವೇದನೆಯನ್ನೂ ಅವನಿಗೆ ನೀಡಿತ್ತು. ಸ್ವಭಾವತಃ ಹಟವಾದಿಯಾಗಿದ್ದ ಅವನು ಈ ಅನ್ಯಾಯಕ್ಕೆ ಸರಿಯಾದ ಪ್ರತೀಕಾರವನ್ನು ಮಾಡಲು ಬಯಸುವದು ಸಹಜವಾಗಿದ್ದು, ಆದರೆ ಈಗ ಹಾಗೆ ಏನೂ ಮಾಡಲಾರದ ಸ್ಥಿತಿಯಲ್ಲಿಯೂ ಇದ್ದುದು ಅವನ ಮನೋವ್ಯಥೆಯನ್ನು ಇನ್ನಷ್ಟು ಉಲ್ಬಣಗೊಳಿಸಲು ಅವಕಾಶ ಮಾಡಿತ್ತು. ದ್ರೌಪದಿಯನ್ನು ಕೇವಲ ಹೀನಾಯವಾಗಿ, ಅನ್ಯಾಯವಾಗಿ ಅವಮಾನಿಸಿದ ದುರ್ಯೋಧನನ ಪಾಪವು ಈ ಹದಿಮೂರು ವರ್ಷಗಳ ಮೇಲೆ ಫಲ ಕೊಡುತ್ತಿತ್ತಾದರೂ ಅವನು ಅನ್ಯಾಯ ಮಾಡುತ್ತಿದ್ದಾಗಲೇ ಭೀಮನ ಪ್ರತಿಜ್ಞೆಯ ರೂಪದಲ್ಲಿ ಈ ಪರಿಣಾಮಕ್ಕೆ ಬೀಜಾರ್ಪಣವಾಗಿತ್ತು ಎಂಬದನ್ನೂ ನೀನು ಗಮನಿಸಬಹುದು. ದ್ರೌಪದಿಯನ್ನು ಅವನು ಅಪಮಾನಿಸಿ ಅವಳ ಮತ್ತು ಧರ್ಮಾತ್ಮರಾದ ಅವಳ ಗಂಡಂದಿರ ಮನಸ್ಸನ್ನು ತೀವ್ರವಾಗಿ ನೋಯಿಸಿದ್ದು, ಅವರ ನೋವು, ಅವರು ಹುಚ್ಚು ದ್ಯೂತವಾಡಿದ ತಪ್ಪಿಗೆ ಪ್ರಾಯಶ್ಚಿತ್ತವಾಗಿ ಅವರನ್ನು ಹದಿಮೂರು ವರ್ಷಗಳಕಾಲ ಕಾಡಿಸಿತ್ತಾದರೂ ದ್ಯೂತದ ಅವರ ಆ ತಪ್ಪು ಇತರರಿಗೆ ಕೇಡನ್ನುಂಟುಮಾಡುವಂತಹುದಾಗಿರಲಿಲ್ಲವಾದುದರಿಂದ ಅದರ ಪರಿಣಾಮವಾದ ಅವರ ಮನೋವೇದನೆ ಕೂಡ ಈ ಹದಿಮೂರು ವರ್ಷಗಳ ಮೇಲೆ ಮಾಯವಾಗುವ ಸಾಧ್ಯತೆಯನ್ನು ಪಡೆದಿತ್ತು. ಆದರೆ ದುರ್ಯೋಧನನ ಪಾಪವು ಈ ರೀತಿ ಪರಿಹಾರವನ್ನು ಕಾಣಲು ಅಸಮರ್ಥವಾಗಿದ್ದು ಅವನು ತನ್ನದೆನ್ನುವ ಎಲ್ಲವನ್ನೂ, ಎಲ್ಲರನ್ನೂ ಕಳೆದುಕೊಂಡು ತಾನೂ ಸಾಯುತ್ತ ಬಿದ್ದಿರುವ ಈ ಅಪರಿಹಾರ್ಯ ಸನ್ನಿವೇಶದಲ್ಲಿ ಅವನ ಮನಸ್ಸನ್ನು ಹಿಂಡಿ ವಿಮೋಚನೆಯೇ ಇಲ್ಲದಂತೆ ವ್ಯಕ್ತಗೊಂಡುದು ಪ್ರಕೃತಿ ನಿಯಮಕ್ಕೆ ಸಹಜವಾಗಿತ್ತು. ಯುದ್ಧ ಧರ್ಮಕ್ಕೆ ವ್ಯತಿರಿಕ್ತವಾಗಿ ಭೀಮನು ದುರ್ಯೋಧನನ ತೊಡೆಗಳಿಗೆ ಹೊಡೆಯುವದರ ಮೂಲಕ ಭೀಮನು ಅನ್ಯಾಯವನ್ನು ಮಾಡುತ್ತಿದ್ದ ಎನ್ನುವದರ ಬದಲು, ದುರ್ಯೋಧನನು ತನ್ನ ಅನ್ಯಾಯಕ್ಕೆ ಅನುಗುಣವಾದ ಫಲವನ್ನು ಸ್ವತಃ ತಾನೇ ತಂದುಕೊಂಡಿದ್ದ ಎನ್ನುವದು ಹೆಚ್ಚು ಸರಿಯಾಗುತ್ತದೆ.

ಒಂದು ಕರ್ಮವನ್ನು ಮಾಡುವಾಗ ಅದರ ಹಿಂದಿರುವ ಉದ್ದೇಶಕ್ಕೆ ಅನುಸಾರವಾಗಿ ಅದರ ನ್ಯಾಯಾನ್ಯಾಯಗಳನ್ನು ವಿವೇಚಿಸುವದು ಶಾಸ್ತ್ರಸಮ್ಮತವಾಗುತ್ತದೆ. ಶಾಸ್ತ್ರ ಸಮ್ಮತ ಎಂದರೆ ನ್ಯಾಯಸಮ್ಮತ ಎಂಬ ಅರ್ಥವನ್ನು ಕೊಟ್ಟುಕೊಳ್ಳುತ್ತೀ ಎಂದು ಊಹಿಸಿಕೊಂಡು ಇದನ್ನು ಹೇಳುತ್ತಿದ್ದೇನೆ. ಭೀಮನಲ್ಲಿ ಯಾವದಾದರೂ ಗುಣವು ಅತ್ಯಂತ ಸ್ಪಷ್ಟವಾಗಿ ಕಾಣಿಸುತ್ತಿದ್ದುದು ಎಂದರೆ ನಿರ್ಭಯತೆ ಮತ್ತು ನಿಷ್ಕಾಪಟ್ಯ. ಭಯ ಮತ್ತು ಕಪಟತನಗಳು ಅವನಲ್ಲಿ ಕಾಣಿಸಿಕೊಂಡ ಒಂದು ಘಟನೆಯೂ ಅವನ ಜೀವನದಲ್ಲಿ ಕಂಡುಬರುವದಿಲ್ಲ. ಹಾಗಿರುವಾಗ ಅವನು ದುರ್ಯೋಧನನನ್ನು ಯುದ್ಧ ನಿಯಮಕ್ಕೆ ವಿರೋಧವಾಗಿ ಕೊಂದುದು ನಮಗೆ ಬಹಿರಂಗವಾಗಿ ಕಾಣಿಸುವದಕ್ಕಿಂತ ಹೆಚ್ಚಾದ ಏನೋ ಒಂದು ವಿಶಿಷ್ಟವಾದ ಕಾರಣವನ್ನು ಒಳಗೊಂಡಿದೆ ಎಂಬದನ್ನು ಸೂಚಿಸುತ್ತದೆ. ಅಥವಾ ಜರಾಸಂಧನಂತಹ ಅಮಿತ ಪರಾಕ್ರಮಿಯನ್ನೇ ಕೊಂದು ಕೆಡವಿದ ಭೀಮನು ದುರ್ಯೋಧನನನ್ನು ನ್ಯಾಯ ಯುದ್ಧದಲ್ಲಿ ಕೊಲ್ಲಲು ಸಾಧ್ಯವಾಗದೆ ನ್ಯಾಯ ವಿರುದ್ಧವಾದ ಕ್ರಮದಿಂದ ಮಾತ್ರ ಅವನನ್ನು ಕೊಲ್ಲಲು ಬಯಸಿದ ಎನ್ನುವದು ಅಪ್ರಬುದ್ಧ ತರ್ಕವಾಗುತ್ತದೆ. ಭೀಮನು ಈಗ ಹದಿಮೂರು ವರ್ಷಗಳ ಹಿಂದೆ ದೇವತಾ ಸಾಕ್ಷಿಯಾಗಿ ಪ್ರತಿಜ್ಞೆ ಮಾಡಿದ್ದಾನೆ, ದುರ್ಯೋಧನನನ್ನು ತೊಡೆ ಮುರಿದೇ ಕೊಲ್ಲುತ್ತೇನೆ ಎಂದು. ಇದು ಲೋಕಕ್ಕೆಲ್ಲ ತಿಳಿದ ವಿಷಯವೂ ಆಗಿತ್ತು. ಅವನು ಹಾಗೆ ಪ್ರತಿಜ್ಞೆ ಮಾಡುವಾಗ ಅವನು ತೊಡೆಗೆ ಹೊಡೆಯುವದು ನ್ಯಾಯವೇ, ಅನ್ಯಾಯವೇ, ಹಾಗೆ ಹೊಡೆಯಲು ಅವಕಾಶವಾಗುವಂತಹ ಗದಾ ಯುದ್ಧವು ತಮ್ಮಿಬ್ಬರೊಳಗೆ ನಡೆದೀತೇ ಇಲ್ಲವೇ ಎಂಬ ಯಾವ ವಿಚಾರವನ್ನೂ ವಿಮರ್ಶಿಸಲು ಅವಕಾಶವಿರಲಿಲ್ಲ. ತಮ್ಮ ಧರ್ಮಪತ್ನಿಯನ್ನು "ತೊಡೆಯೇರು, ಬಾ" ಎಂದು ದುರ್ಯೋಧನನು ಕರೆದ ದೌರ್ಜನ್ಯಕ್ಕೆ ಪ್ರತಿಯಾಗಿ ಅವನ ಆ ತೊಡೆಗಳನ್ನು ತಾನು ಮುರಿಯುವದಾಗಿ ಭೀಮ ಪ್ರತಿಜ್ಞೆ ಮಾಡಿದ್ದುದು. ಹಾಗಾಗಿ ಭೀಮನ ಪ್ರತಿಜ್ಞೆಯು ಧರ್ಮಕ್ಕೆ ವಿರೋಧವಾಗಿತ್ತು ಎಂದು ಹೇಳಲು ಸಾಧ್ಯವಾಗುವದಿಲ್ಲ; ಅದು ಆ ಸಂದರ್ಭಕ್ಕೆ ಸರಿಯಾಗಿತ್ತು ಎಂದೇ ಹೇಳಬೇಕಾಗುತ್ತದೆ. ಹೀಗೆ ನ್ಯಾಯಸಮ್ಮತವಾದ ಪ್ರತಿಜ್ಞೆಯನ್ನು ಕೈಗೊಂಡ ಅವನು ಅದನ್ನು ಪೂರೈಸಬೇಕಾಗಿದ್ದುದು ಕೂಡ ಸಹಜವೇ ಆಗಿತ್ತು. ದುರ್ಯೋಧನನನ್ನು ಕೊಲ್ಲಬೇಕೆಂಬ ಭೀಮನ ಇಚ್ಛೆಯು ಈ ಹದಿಮೂರು ವರ್ಷಗಳ ಕಾಲವೂ ಅವನ ಮನಸ್ಸಿನಲ್ಲಿ ಸದಾಕಾಲ ಹಸಿರಾಗಿಯೇ ಉಳಿದಿದ್ದರೂ ಕೂಡ ಅವನನ್ನು ಯುದ್ಧ ನಿಯಮಕ್ಕೆ ವಿರೋಧವಾಗಿ ಕೊಲ್ಲಬೇಕೆಂಬ ಬಯಕೆ ಅವನಲ್ಲಿ ಒಮ್ಮೆಯೂ ವ್ಯಕ್ತಗೊಳ್ಳುವದನ್ನು ನಾವು ಕಾಣುವದಿಲ್ಲ. ಅವನು ದುರ್ಯೋಧನನೊಂದಿಗೆ ಯುದ್ಧವನ್ನು ಪ್ರಾರಂಭಿಸುವಾಗಲೇ ಆಗಲಿ, ಯುದ್ಧದ ಕಾವೇರಿ ತಮ್ಮಿಬ್ಬರಲ್ಲಿ

ಯಾರು ಸೋಲುತ್ತಾರೋ ಯಾರು ಗೆಲ್ಲುತ್ತಾರೋ ಎಂದು ಹೇಳುವದು ದುಸ್ತರವಾಗಿದ್ದಂತಹ ತೀವ್ರ ಸನ್ನಿವೇಶದಲ್ಲಿಯೇ ಆಗಲಿ, ಅವನು ದುರ್ಯೋಧನನನ್ನು ಯುದ್ಧ ನಿಯಮಕ್ಕೆ ವಿರೋಧವಾಗಿ ಕೊಲ್ಲುವ ಪ್ರತಿಜ್ಞೆಯನ್ನು ತಾನು ಈ ಹಿಂದೆ ಮಾಡಿದ್ದು ಈಗ ಅದನ್ನು ಬಳಿಸಿಕೊಳ್ಳುವದರ ಮೂಲಕ ತಾನು ಅಪವಾದವನ್ನು ನಿವಾರಿಸಿಕೊಳ್ಳಬಹುದೇ ಅಲ್ಲದೆ, ದುಸ್ತರನಾಗಿದ್ದಂತಹ ದುರ್ಯೋಧನನ ಮೇಲೆ ವಿಜಯವನ್ನೂ ಸಾಧಿಸಬಹುದು ಎಂದು ಮನಸ್ಸಿನಲ್ಲಿಯೇ ಆದರೂ ಅವನು ಯೋಚಿಸಲಿಲ್ಲ. ಅವನು ಹಾಗೆ ಯೋಚಿಸಿದ್ದರೂ ಕೂಡ ಅದು ವಿಪರ್ಯಾಸವೇನೂ ಆಗದೆ ಪ್ರತಿಜ್ಞಾ ಪೂರೈಕೆಯು ಕೇವಲ ಕರ್ತವ್ಯ ನಿರ್ವಹಣೆ ಎಂದಷ್ಟೇ ಅನಿಸಬಹುದಿತ್ತು. ಏಕೆಂದರೆ ಆ ಮೂಲಕ ಅವನು ತನ್ನ ಹಿಂದಿನ ಪ್ರತಿಜ್ಞೆಯನ್ನಷ್ಟೇ ಪೂರೈಸಿದಂತಾಗುತ್ತಿತ್ತು. ಆದರೆ ಭೀಮನಿಗೆ ಆ ಪ್ರತಿಜ್ಞೆಯಾಗಲಿ, ದುರ್ಯೋಧನನನ್ನು ಯುದ್ಧಧರ್ಮಕ್ಕೆ ವಿರೋಧವಾಗಿ ಕೊಲ್ಲಲು ತನಗೊಂದು ಅವಕಾಶವಿದೆಯೆಂಬದಾಗಲಿ ನೆನಪಿನಲ್ಲಿಯೇ ಇರಲಿಲ್ಲ. ದುರ್ಯೋಧನನೇ ಸಾಯಲಿ, ತಾನೇ ಸಾಯಲಿ, ವೀರೋಚಿತವಾಗಿ ಧರ್ಮಯುದ್ಧವನ್ನು ಮಾಡುವದರಲ್ಲಿಯೇ ಅವನು ನಿರತನಾಗಿದ್ದ ಎಂಬದನ್ನು ನಾವು ಗಮನಿಸಬಹುದು. ಅವನಿಗೆ ಅವನ ಪ್ರತಿಜ್ಞೆಯ ನೆನಪು ಮಾಡಿಕೊಟ್ಟವನು ಕೃಷ್ಣ ಮತ್ತು ಅವನ ಆದೇಶದ ಪ್ರಕಾರ ಅರ್ಜುನ. ತನ್ನ ಪ್ರತಿಜ್ಞೆಯ ನೆನಪೇ ಇಲ್ಲದಿದ್ದಾಗ ಎಷ್ಟು ಸಹಜವಾಗಿ ಧರ್ಮಯುದ್ಧವನ್ನು ಮಾಡುತ್ತಿದ್ದನೋ, ಪ್ರತಿಜ್ಞೆಯ ನೆನಪು ಮಾಡಲ್ಪಟ್ಟಾಗಲೂ, ಅದನ್ನು ಪೂರೈಸುವದು ಯುದ್ಧನಿಯಮಕ್ಕೆ ವಿರೋಧವಾದುದಾದರೂ ಅದನ್ನೂ ಅಷ್ಟೇ ಸಹಜವಾಗಿ ಭೀಮನು ಪೂರೈಸುತ್ತಾನೆ.

ರಮೆ:– ದುರ್ಯೋಧನನ ತೊಡೆಗೆ ಹೊಡೆದುದು ಭೀಮನ ತಪ್ಪು ಎಂದು ಬಲರಾಮ ಹೇಳಿಯಾಯಿತು, ಬಲರಾಮ ಹಾಗೆ ಆಕ್ಷೇಪಿಸಿದುದು ತಪ್ಪು ಎಂದು ಕೃಷ್ಣ ಹೇಳಿಯಾಯಿತು. ಭೀಮನು ಗದೆಯಿಂದ ದುರ್ಯೋಧನನ ತೊಡೆಗಳಿಗೆ ಹೊಡೆದ ಎನ್ನುವದಕ್ಕಿಂತಲೂ ದ್ರೌಪದಿಯನ್ನು ಅದರ ಮೇಲೆ ಕೂರುವಂತೆ ತನ್ನ ತೊಡೆಗಳನ್ನು ತೋರಿಸಿ ಅವುಗಳಿಗೆ ಭೀಮನ ಗದಾಪ್ರಹಾರವನ್ನು ದುರ್ಯೋಧನನೇ ಆಹ್ವಾನಿಸಿಕೊಂಡು ಈಗ ಅದನು ಪಡೆದಿದ್ದಾನೆ ಎಂದು ಹೇಳಿದರೆ ಯಾರಿಗೆ ಅರ್ಥವಾಗುವದಿಲ್ಲ ! ಅದಕ್ಕಾಗಿ ನಿಮ್ಮ ಈ ದೀರ್ಘ ಉಪನ್ಯಾಸ ಏಕೆ ಬೇಕಿತ್ತು !

ಮುರಳಿ:– ಬೇಕಿತ್ತಿಲ್ಲ ಎನ್ನುತ್ತೀಯಾ ? ಹಾಳಾಗಲಿ, ಕೇಳು. ಬಲರಾಮನು ಹೊರಟುಹೋದ ಮೇಲೆ ಈ ಕಡೆ ಕೃಷ್ಣ ದುರ್ಯೋಧನರಿಗೂ ಸ್ವಲ್ಪ ಬಿರುಸಾದ ಮಾತುಗಳಾದವು. ದುರ್ಯೋಧನನನ್ನು ಅಲ್ಲಿ ಬಿಟ್ಟು ಎಲ್ಲರೂ ಹೊರಟರು. ಎಂದಿನಂತಲ್ಲದೆ ಈ ದಿನ ಅರ್ಜುನನು ಮೊದಲು ರಥದಿಂದಿಳಿಯುವಂತೆ ಅವನನ್ನು ಪ್ರೇರೇಪಿಸಿದ ಕೃಷ್ಣನು ತಾನು ಅನಂತರ ಇಳಿದನು. ತಕ್ಷಣವೇ ಧ್ವಜದಲ್ಲಿದ್ದ

ವಾಸರನೂ, ರಥದಲ್ಲಿದ್ದ ದೇವತೆಗಳೂ ಅದೃಶ್ಯರಾಗಿ ಹೊರಟುಹೋದರು. ರಥವು ಒಮ್ಮೆಗೇ ಹೊತ್ತಿಕೊಂಡು ಉರಿದು ಭಸ್ಮವಾಗಿಹೋಯಿತು. ಆಶ್ಚರ್ಯಚಕಿತನಾದ ಅರ್ಜುನನು ಹೀಗಾಗಲು ಕಾರಣವೇನೆಂದು ಕೇಳಿದನು. ಯುದ್ಧದಲ್ಲಿ ಶತ್ರುಗಳ ಮಂತ್ರಾಸ್ತ್ರಗಳಿಂದಲೇ ಅದು ದಗ್ಧವಾಗಿದ್ದಿತೆಂದೂ ತನ್ನ ಮಹಿಮೆಯಿಂದ ಭಸ್ಮವಾಗದೆ ಉಳಿದಿದ್ದ ಅದು ಈಗ ನಾಶಹೊಂದಿತೆಂದೂ ಕೃಷ್ಣನು ತಿಳಿಸಿದನು. ಆ ರಾತ್ರಿ ಪಾಂಡವರು ಕೃಷ್ಣನೊಡನೆ ........

ರಮೆ:– ಏನೂ ಹೇಳದೆ ಮುಂದುವರೆಯುತ್ತಿದ್ದೀರಿ ?

ಮುರಳಿ:– ಏನೂ ಹೇಳದೆಯೆ ? ಹಾಗಾದರೆ ನಾನು ಹೇಳಿದುದು ಏನೂ ಅಲ್ಲವೇನು ?

ರಮೆ:– ಹಾಗಲ್ಲ ! ರಥವು ಯುದ್ಧದಲ್ಲಿಯೇ ಸುಟ್ಟಿದ್ದು, ಕೃಷ್ಣನ ಮಹಿಮೆಯಿಂದ ಉಳಿದಿದ್ದು, ಈಗ ಯುದ್ಧವೆಲ್ಲ ಮುಗಿದ ಮೇಲೆ ತನ್ನಿಂದ ತಾನೇ ಹೊತ್ತಿಕೊಂಡು ನಾಶವಾದುದನ್ನೆಲ್ಲ ನಾನು ಸಾಮಾನ್ಯವಾಗಿ ಒಪ್ಪುವವಳಲ್ಲವಾದುದರಿಂದ ಈಗ ನಾನು ಆ ಕುರಿತು ಏನೂ ಮಾತನಾಡದೆ ಸುಮ್ಮನಿದ್ದರೂ ನೀವು ಅದನ್ನೇನೂ ಗಮನಿಸದಂತೆ ಮುಂದುವರೆಯುತ್ತಿದ್ದೀರಿ ?

ಮುರಳಿ:– ಇಂತಹುದನ್ನೆಲ್ಲ ನೀನು ಸಾಮಾನ್ಯವಾಗಿ ಒಪ್ಪುವದಿಲ್ಲ ಎಂಬದು ನನಗೆ ಗೊತ್ತು. ಈಗೀಗ ಏನಾದರೂ ಅಸಾಮಾನ್ಯಳಾಗುತ್ತಿದ್ದೀಯೋ ಏನೋ ಎಂದು ಊಹಿಸಿದೆ.

ರಮೆ:– ಯಾಕಪ್ಪಾ, ಸುಮ್ಮನೆ ಆಕ್ಷೇಪಿಸುವದು ! ಏನೇ ಆಕ್ಷೇಪಿಸಲಿ, ಹೇಗೇ ಹೇಳಲಿ, ಕೊನೆಯಲ್ಲಿ ಏನಾಗುತ್ತದೆಂದು ಗೊತ್ತೇ ಇದೆ. ಮತ್ತೇಕೆ ಚರ್ಚೆ !

ಮುರಳಿ:– ಪ್ರಪಂಚದ ಯಾವದೇ ವಸ್ತುವನ್ನು ಕಾಣುವಾಗಲೂ ಅದನ್ನು ಅಣಕಿಸುತ್ತ ಅಣಕಿಸುತ್ತ ಹೋದಂತೆ ಕ್ರಮೇಣ ನಮ್ಮ ಮೂತಿಯೇ ಸೊಟ್ಟಗಾಗಿ ಬಿಡುತ್ತದೆ ; ಆದರೆ ಆ ಯಾವ ವಸ್ತುವೂ ತನ್ನ ಸ್ವರೂಪವನ್ನು ಬದಲಾಯಿಸಿರುವದಿಲ್ಲ. ಯಾವದನ್ನು ಕಂಡಾಗಲೂ ಅದರ ಸೌಂದರ್ಯವನ್ನೇ ಸವಿದು ನಮ್ಮ ಮುಖ ಪ್ರತಿಬಾರಿಯೂ ಅರಳುತ್ತಿದ್ದರೆ, ಪ್ರಪಂಚದ ಸುಂದರ ವಸ್ತುಗಳಲ್ಲಿ ನಮ್ಮ ಮುಖವೂ ಸೇರಿದಂತೆ ಅದು ಸುಂದರವಾಗಿ ಪರಿಣಮಿಸುತ್ತದೆ. ಕೃಷ್ಣನ ರಥವು ಯುದ್ಧದಲ್ಲಿಯೇ ಸುಟ್ಟಿದ್ದರೂ ಕೂಡ ಕೃಷ್ಣನ ಮಹಿಮೆಯಿಂದ ಅದು ಬೂದಿಯಾಗದೆ ಉಳಿದು ಕೊನೆಯಲ್ಲಿ ತನ್ನಿಂದ ತಾನೇ ಉರಿದು ನಾಶವಾಯಿತು ಎಂಬದನ್ನು ಕೇಳುವಾಗ ಕೃಷ್ಣನ ಬಗೆಗೆ, ವ್ಯಾಸರ ಬಗೆಗೆ, ನಮ್ಮ ಪ್ರಾಚೀನ ಸಂಸ್ಕೃತಿಯ ಬಗೆಗೆ ತಿರಸ್ಕಾರವನ್ನು ತಂದುಕೊಂಡು ಮನಸ್ಸನ್ನು ಹುಳಿ ಮಾಡಿ

ಕೊಳ್ಳಲೂಬಹುದು ; ಅಥವಾ ಕೃಷ್ಣನ ಈ ಅದ್ಭುತ ಮಹಿಮೆ ಎಂಥಾದ್ದು, ಅದರ ಸ್ವರೂಪವೇನು, ಮಂತ್ರಾಸ್ತ್ರಗಳ ಪ್ರಭಾವ ಎಂಥಾದ್ದು, ಅದನ್ನು ವಿಸಾರುವ ಸಾಧ್ಯತೆ ಎಂಥಾದ್ದು, ಅರ್ಜುನನ ಪರಾಕ್ರಮ ಎಷ್ಟರದು, ಪಾಂಡವರ ಗೆಲುವಿಗೆ ನಿಜವಾದ ಕಾರಣವೇನು ಎಂಬಿತ್ಯಾದಿ ವಿಚಾರಗಳ ಕಡೆ ಮನಸ್ಸನ್ನು ಹರಿಸಿ ರಹಸ್ಯದ ಗರ್ಭದಲ್ಲಿರುವ ಅಮೂಲ್ಯ ನಿಧಿಗಳ ದರ್ಶನ ಪಡೆದು ಮನಸ್ಸನ್ನು ಹಸನು ಗೊಳಿಸಿಕೊಳ್ಳಲೂಬಹುದು.

ರಮೆ:– ಇಂತಹ ವಿಚಾರಗಳಲ್ಲೆಲ್ಲ ನನ್ನ ಮನಸ್ಸು ಹುಳಿಯಾಗುತ್ತಿದ್ದುದು ನಿಜ. ಈಗ ಅದು ನಿಂತಿದೆ. ಆದರೆ ಹಸನಾಗುವಷ್ಟು ಇನ್ನೂ ಪಕ್ವವಾಗಿಲ್ಲ. ನೀವು ಕೃಷ್ಣನ ಕತೆ ಹೇಳಿ ಮುಗಿಸುವಾಗ ನನ್ನ ಮನಸ್ಸು ಪೂರ್ಣವಾಗಿ ಹದಕ್ಕೆ ಬಂದಿರುತ್ತದೆ !

ಮುರಳಿ:– ಅಷ್ಟಾದರೆ ಅಷ್ಟು. ಕೇಳು. ಆ ದಿನ ರಾತ್ರಿ ಪಾಂಡವರು ಕೃಷ್ಣನೊಂದಿಗೆ ದುರ್ಯೋಧನನ ಅರಮನೆಯಲ್ಲಿಯೇ ತಂಗಿದರು.

ಈ ಕಡೆ ಕೃಪ, ಕೃತವರ್ಮ, ಅಶ್ವತ್ಥಾಮರು ದುರ್ಯೋಧನನಿಗೆ ಉಂಟಾದ ದುರ್ಗತಿಯನ್ನು ಹೇಗೋ ತಿಳಿದು ಅತೀವ ವ್ಯಸನದಿಂದ ಅವನಲ್ಲಿಗೆ ಬಂದು ಮನ ಮರುಗುವಂತೆ ಗೋಳಾಡಿದರು. ಎಷ್ಟಾದರೂ ತಮ್ಮನ್ನು ವರ್ಷಗಟ್ಟಲೆ ಸಾಕಿದ ಒಡೆಯನಲ್ಲವೆ ! ಈ ದುಃಖದೊಂದಿಗೆಯೇ ರುದ್ರಾಂಶಸಂಭೂತನಾದ ಅಶ್ವತ್ಥಾಮ ನಿಗೆ ಅಸಾಧ್ಯವಾದ ಕೋಪವೂ ಹುಟ್ಟಿಕೊಂಡಿತು. ತಾನು ಎಲ್ಲ ಪಾಂಚಾಲರನ್ನೂ, ಪಾಂಡವರನ್ನೂ ಕೊಲ್ಲುವದಾಗಿ ಅಲ್ಲಿಯೇ ಪ್ರತಿಜ್ಞೆ ಮಾಡಿದನು. ರಾಜಾಜ್ಞೆಯ ಪ್ರಕಾರ ಕೃಪಾಚಾರ್ಯನು ಅಶ್ವತ್ಥಾಮನಿಗೆ ಸೈನ್ಯಾಧಿಪತ್ಯದ ಅಭಿಷೇಕವನ್ನು ಮಾಡಿದನು. ಆ ಮೂವರೂ ದುರ್ಯೋಧನನ ಅನುಮತಿಯನ್ನು ಪಡೆದು ಅಲ್ಲಿಂದ ಹೊರಟು ದೂರದ ಒಂದು ಕಾಡು ಪ್ರದೇಶದಲ್ಲಿ ತಂಗಿದ್ದರು. ಕೃಪ, ಕೃತವರ್ಮರಿಗೆ ನಿದ್ರೆ ಹತ್ತಿತ್ತು. ಅಶ್ವತ್ಥಾಮನು ಕ್ರೋಧೋದ್ದೀಪಿತನಾಗಿ ಎಚ್ಚರ ವಾಗಿಯೇ ಕುಳಿತಿದ್ದನು. ಒಂದು ಮರದ ಮೇಲೆ ಒಂದು ಗೂಬೆಯು ಕಾಗೆಗಳ ಗೂಡೊಂದಕ್ಕೆ ನುಗ್ಗಿ ಮಲಗಿದ್ದ ಕಾಗೆಗಳನ್ನು ಕೊಲ್ಲುತ್ತಿದ್ದುದನ್ನು ಅವನು ಕಂಡು ಏನೋ ಹೊಳೆದಂತಾಗಿ, ಏನನ್ನೋ ಸಾಧಿಸಿದವನಂತೆ ಸಂತೋಷಗೊಂಡು ಕೃಪ, ಕೃತವರ್ಮ – ಇಬ್ಬರನ್ನೂ ನಿದ್ರೆಯಿಂದ ಎಚ್ಚರಗೊಳಿಸಿದನು. ಅವರಿಬ್ಬರೂ ಎಷ್ಟು ವಿರೋಧಿಸಿದರೂ ಕೇಳದೆ ಅವರೊಂದಿಗೆ ಹೊರಟು ಪಾಂಚಾಲರು ತಂಗಿದ್ದ ಶಿಬಿರಗಳನ್ನು ಸೇರಿದನು. ಅಶ್ವತ್ಥಾಮನಿಗೆ ಹಳೆಯ ನೆನಪುಗಳು ಒಂದೊಂದಾಗಿ ಬಂದವು. ತನ್ನ ತಂದೆಯು ಸತ್ತ ಹೀನಾಯವಾದ ಪರಿಸ್ಥಿತಿಯಂತೂ ಅವನನ್ನು ಕ್ರೋಧದ ಉನ್ಮಾದಾವಸ್ಥೆಗೇರಿಸಿತು. ಕತ್ತಿಯನ್ನು ಹಿರಿದು ಬುದ್ಧಿ ಕೆಟ್ಟವನಂತೆ, ಜೀವದ ಹಂಗುದೊರೆದವನಂತೆ ದ್ವಾರಪಾಲಕರನ್ನು ಕೊಚ್ಚಿಹಾಕಿ ಶಿಬಿರದ ಒಳಗೆ

ನುಗ್ಗಿ ಹೋದನು. ಮಲಗಿ ನಿದ್ರಿಸುತ್ತಿದ್ದ ಧೃಷ್ಟದ್ಯುಮ್ನನನ್ನು ಕಾಲಿನಿಂದ ಒದೆದು ಎಚ್ಚರಗೊಳಿಸಿ ಅವನಿಗೆ ನಿದ್ರೆಯ ಜೊಂಪು ಬಿಡುವದಕ್ಕೆ ಮುಂಚೆಯೇ ಅವನನ್ನು ಕೊಚ್ಚಿ ಹಾಕಿದನು. ತನ್ನನ್ನು ತಡೆಯಲು ಬಂದವರನ್ನೆಲ್ಲ ಕಡಿದು ತುಂಡುಮಾಡಿ ಕೊಂದನು. ಶಿಬಿರದಾದ್ಯಂತ ಹಾಹಾಕಾರವೆದ್ದಿತು. ಅಶ್ವತ್ಥಾಮನನ್ನು ಎದುರಿಸಿ ಬಂದ ಶಿಖಂಡಿ, ದ್ರೌಪದಿಯ ಐವರು ಮಕ್ಕಳು – ಎಲ್ಲರೂ ಹತರಾದರು. ಶತ್ರುಗಳನ್ನು ಕೊಚ್ಚಿದಾಗ ಅವರ ಮೈಯಿಂದ ಹಾರಿದ ರಕ್ತದಿಂದ ತೊಯ್ದಿದ್ದ ಅಶ್ವತ್ಥಾಮನನ್ನು ನೋಡಲು ಭಯಂಕರವಾಗಿದ್ದಿತು. ಈ ಆಕಸ್ಮಿಕ ಗೊಂದಲಕ್ಕೆ ಹೆದರಿ ಹೊರಗೆ ಓಡುತ್ತಿದ್ದವರನ್ನೆಲ್ಲ ಕೃಪಾಚಾರ್ಯ, ಕೃತವರ್ಮರು ಧ್ವಂಸಮಾಡುತ್ತಿದ್ದರು. ಕೆಲವರು ನಿದ್ರೆಯ ಜೊಂಪಿನಲ್ಲಿ ಈ ಭೀಕರ ದೃಶ್ಯವನ್ನು ನೋಡಿ ಭಯದಿಂದ ಹಾಗೆಯೇ ಸತ್ತುಹೋದರು. ಶಿಬಿರದಲ್ಲಿ ರಕ್ತದ ಕೋಡಿ ಹರಿಯಿತು. ಕೊನೆಗೆ ಎಲ್ಲ ಶಿಬಿರಗಳಿಗೂ ಈ ಮೂವರು ಬೆಂಕಿ ಹಚ್ಚಿದರು. ಅಲ್ಲಿಂದ ಹೊರಬೀಳುತ್ತಿದ್ದವರನ್ನೂ ಅಟ್ಟಿ ಕೊಂದು ಮೂವರೂ ನೇರವಾಗಿ ದುರ್ಯೋಧನನಲ್ಲಿಗೆ ಬಂದು ಎಲ್ಲ ವಿಷಯಗಳನ್ನೂ ತಿಳಿಸಿದರು. ದುರ್ಯೋಧನನು ಸ್ವಲ್ಪ ಸಮಾಧಾನಪಟ್ಟುಕೊಂಡು ಈ ಲೋಕವನ್ನು ಬಿಟ್ಟನು. ದುಷ್ಟರೇ ಆಗಲಿ, ಯಾರೇ ಆಗಲಿ, ತನ್ನನ್ನು ನಂಬಿದ್ದವರನ್ನು ತಾನು ಸ್ನೇಹ, ಶ್ರದ್ಧೆಗಳಿಂದ ನೋಡಿಕೊಳ್ಳುತ್ತಿದ್ದ ಅವನ ಗುಣವು ಅವನ ಜೀವನದ ಕೊನೆಯ ನಿಮಿಷದಲ್ಲಿ ಅವನಿಗೆ ಈ ಸಣ್ಣ ಸಮಾಧಾನವನ್ನು ತಂದುಕೊಟ್ಟಿತ್ತು. ಈ ವೇಳೆಗೆ ಪಾಂಡವ ಪಕ್ಷದಲ್ಲಿ ಕೃಷ್ಣ, ಸಾತ್ಯಕಿ, ಐವರು ಪಾಂಡವರು — ಇಷ್ಟು ಜನರೂ, ಕೌರವ ಪಕ್ಷದಲ್ಲಿ ಅಶ್ವತ್ಥಾಮ, ಕೃಪ, ಕೃತವರ್ಮ – ಈ ಮೂವರೂ ಉಳಿದಂತಾಗಿ, ಭೂಮಿಗೆ ಭಾರವಾಗಿದ್ದ ಬಹುಸಂಖ್ಯೆಯ ಜನರು ನಾಶವಾದಂತಾಯಿತು.

ಮಾರನೆಯ ದಿನ ತನ್ನ ಐವರು ಮಕ್ಕಳೂ ಕೊಲ್ಲಲ್ಪಟ್ಟದು ದ್ರೌಪದಿಗೆ ಗೊತ್ತಾಗಿ ಅವಳು ತುಂಬ ದುಃಖಿಸಿದಳಲ್ಲದೆ, ಇದಕ್ಕೆ ಕಾರಣನಾದ ಅಶ್ವತ್ಥಾಮನನ್ನು ಕೊಲ್ಲಿಸಲೇಬೇಕೆಂದು ಸಂಕಲ್ಪಿಸಿದಳು. ಇದು ಸಾಧ್ಯವಾಗದುದರಿಂದ ಅವನ ತಲೆಯಲ್ಲಿ ಅವನ ಹುಟ್ಟನೊಂದಿಗೇ ಬಂದಿದ್ದ ರತ್ನವನ್ನಾದರೂ ತಂದುಕೊಡಬೇಕೆಂದು ಎಲ್ಲರಲ್ಲಿಯೂ ಕೇಳಿಕೊಂಡಳು. ಅವಳ ಈ ಕೋರಿಕೆಗೆ ಯಾರೂ ಸರಿಯಾದ ಪ್ರತಿಕ್ರಿಯೆ ತೋರಿಸಲಿಲ್ಲ. ಕೊನೆಗೆ ಅವಳು ಭೀಮನನ್ನು ಪ್ರತ್ಯೇಕವಾಗಿ ಸಂಧಿಸಿ ಅವನಲ್ಲಿ ಈ ಕುರಿತು ಕೇಳಿಕೊಂಡಳು. ಭೀಮನಿಗೆ ಯುದ್ಧದ ಅಮಲು ಇನ್ನೂ ಇಳಿದಿರಲಿಲ್ಲ. ಸಾಲದುದಕ್ಕೆ ಅಶ್ವತ್ಥಾಮನ ಮೋಸದ ಕೃತ್ಯವೂ ಅವನನ್ನು ಕಲಕಿದ್ದಿರಬೇಕು. ತನ್ನ ಎಲ್ಲ ಮಕ್ಕಳನ್ನೂ ಕಳೆದುಕೊಂಡ ದ್ರೌಪದಿಯ ಹೃದಯದ ಆಳವಾದ ನೋವೂ ಅವನನ್ನು ಪ್ರಚೋದಿಸಿದ್ದುದು ಸಹಜವಾಗಿತ್ತು. ನಕುಲನನ್ನು ಸಾರಥಿಯನ್ನಾಗಿ ಮಾಡಿಕೊಂಡ ಅವನು ಧನುರ್ಬಾಣಗಳನ್ನು ಹಿಡಿದು ಅಶ್ವತ್ಥಾಮನನ್ನು ಹುಡುಕುತ್ತಾ ಹೊರಟನು.

ಭೀಮನು ಈ ರೀತಿ ಅಶ್ವತ್ಥಾಮನನ್ನು ಅರಸಿಕೊಂಡು ಹೋದ ವಿಷಯವು ಕೃಷ್ಣನಿಗೆ ತಿಳಿಯಿತು. ಅವನು ಯುಧಿಷ್ಠಿರನನ್ನು ಕುರಿತು "ಯುಧಿಷ್ಠಿರಾ. ಈ ಅಶ್ವತ್ಥಾಮನು ಮಹಾಕ್ರೂರಿ, ಸಾವಿಲ್ಲದವನು, ಉಗ್ರಕೋಪಿ, ಮುಂದಾಲೋಚನೆ ಯಿಲ್ಲದವನು. ಅವನು ಹಿಂದೊಮ್ಮೆ ನನ್ನ ಸುದರ್ಶನವನ್ನೇ ಯಾಚಿಸಿ ನನ್ನನ್ನೇ ಯುದ್ಧಕ್ಕೆ ಆಹ್ವಾನಿಸಲು ಮನಸ್ಸು ಮಾಡಿದ್ದವನು. ದ್ರೋಣನು ಬ್ರಹ್ಮಶಿರೋಸ್ತ್ರ ವೆಂಬ ಮಹಾಸ್ತ್ರವನ್ನು ಮಮತೆಯಿಂದ ಅರ್ಜುನನಿಗೆ ಉಪದೇಶಿಸಿದನು. ಆದರೆ ಮಗನ ಹಟಮಾರಿತನದಿಂದಾಗಿ ತನಗೆ ಮನಸ್ಸಿಲ್ಲದಿದ್ದರೂ ಅವನು ಅದನ್ನು ಈ ಅಶ್ವತ್ಥಾಮನಿಗೂ ಉಪದೇಶಿಸಿದ್ದಾನೆ. ಅವನು ಈಗ ಆ ಅಸ್ತ್ರವನ್ನು ಭೀಮನ ಮೇಲೆ ಪ್ರಯೋಗಿಸುವದು ನಿಶ್ಚಯ. ಆ ಅಸ್ತ್ರಕ್ಕೆ ಪ್ರತಿಯಾದ ಅದೇ ಅಸ್ತ್ರವು ಅರ್ಜುನನಲ್ಲಿ ಮಾತ್ರ ಇದೆ" ಎಂದು ಎಚ್ಚರಿಸಿ ಪಾಂಡವರನ್ನೆಲ್ಲ ಕೂಡಿಕೊಂಡು ವೇಗದಿಂದ ಭೀಮನು ಹೋದ ಮಾರ್ಗದಲ್ಲಿಯೇ ಹೋದನು. ಸ್ವಲ್ಪ ಸಮಯ ದಲ್ಲಿಯೇ ಭೀಮನನ್ನು ಅವರು ಸೇರಿದರು. ವ್ಯಾಸರೇ ಮೊದಲಾದ ಮಹರ್ಷಿಗಳ ನಡುವೆ ಸೇರಿಕೊಂಡಿದ್ದ ಅಶ್ವತ್ಥಾಮನನ್ನು ಪತ್ತೆ ಹಚ್ಚಿದ ಭೀಮನು ಬಾಣವನ್ನು ಸಂಧಾನ ಮಾಡಿ ಅವನತ್ತ ಓಡಿದನು. ಯುಧಿಷ್ಠಿರಾದಿಗಳು ಅವನನ್ನು ಬೇಡ ವೆಂದು ತಡೆದರೂ ಅವನು ಕೇಳಲಿಲ್ಲ. ತನ್ನೆಡೆಗೆ ನುಗ್ಗಿ ಬರುತ್ತಿರುವ ಧನುರ್ಧಾರಿ ಯಾದ ಭೀಮನನ್ನು ನೋಡಿ ಅಶ್ವತ್ಥಾಮನ ಎದೆ ಒಡೆದಂತಾಯಿತು. ತಾನು ಹಿಂದಿನ ರಾತ್ರಿ ಮಾಡಿದ್ದ ಹೀನಕೃತ್ಯದ ಹಿನ್ನೆಲೆಯಲ್ಲಿ ಅವನಿಗೆ ಈಗ ಭೀಮನು ಸಾಕ್ಷಾತ್ ಯಮನಂತೆಯೇ ಕಾಣಿಸಿಕೊಂಡನು. ಭೀಮನನ್ನು ಯುದ್ಧದಲ್ಲಿ ಎದುರಿಸುವದು ಅಪಾಯಕರ ಎಂದು ಮನಗಂಡ ಅವನು ತಕ್ಷಣವೇ ಬ್ರಹ್ಮ ಶಿರೋಸ್ತ್ರವನ್ನು ಪ್ರಯೋಗಿಸಿಬಿಟ್ಟನು.

ರಮೆ:– ಕೃಷ್ಣನು ಪ್ರತಿಯೊಬ್ಬರ ಮನೋರಚನೆಯನ್ನೂ ಬಲಾಬಲಗಳನ್ನೂ ಹೇಗೆ ಸ್ಪಷ್ಟವಾಗಿ ತಿಳಿದಿದ್ದನ್ನು ಎಂಬದಕ್ಕೆ ಇದೂ ಒಂದು ನಿದರ್ಶನ.

ಮುರಳಿ:– ಹೌದು.

ರಮೆ:– ನೀವು ಕೃಷ್ಣನ ಕತೆಯನ್ನು ಹೇಳಲೇಬೇಕೆಂಬದಕ್ಕೆ ಮತ್ತೂ ಒಂದು ಕಾರಣ.

ಮುರಳಿ:– ಕೃಷ್ಣನು ಹಿಂದೆ ಹೇಳಿದ್ದಂತೆಯೇ ಆ ಅಸ್ತ್ರಕ್ಕೆ ಪ್ರತಿಯಾಗಿ ಅರ್ಜುನನೂ ಬ್ರಹ್ಮಶಿರೋಸ್ತ್ರವನ್ನೇ ಪ್ರಯೋಗಿಸಬೇಕಾಯಿತು. ಅವೆರಡೂ ಅಸ್ತ್ರಗಳು ಪ್ರಪಂಚವನ್ನೇ ನಾಶ ಮಾಡಲು ಹೊರಟಂತೆ ಭೀಕರವಾದ ಪರಿಣಾಮ ವನ್ನುಂಟುಮಾಡುತ್ತಾ ಒಂದನ್ನೊಂದು ಸಂಧಿಸಿದವು. ಲೋಕದ ನಾಶವಾದೀತೆಂದು ಭಾವಿಸಿದ ವ್ಯಾಸ, ನಾರದ ಮೊದಲಾದವರ ಆದೇಶದ ಪ್ರಕಾರ ಅರ್ಜುನನು ತಾನು

ಬಿಟ್ಟ ಅಸ್ತ್ರವನ್ನು ಉಪಸಂಹರಿಸಿ ಹಿಂದಕ್ಕೆ ತೆಗೆದುಕೊಂಡನು. ಅಶ್ವತ್ಥಾಮನಿಗೆ ಉಪಸಂಹಾರವು ತಿಳಿಯದುದರಿಂದ ತಾನು ಬಿಟ್ಟ ಅಸ್ತ್ರವನ್ನು ಅವನು ಅಭಿಮನ್ಯುವಿನ ಪತ್ನಿಯಾದ ಉತ್ತರೆಯ ಗರ್ಭದೊಳಕ್ಕೆ ಪ್ರಯೋಗಿಸಿ ತನ್ನ ತಲೆಯಲ್ಲಿದ್ದ ರತ್ನವನ್ನು ಪಾಂಡವರಿಗೆ ಕೊಟ್ಟು ತಲೆಮರೆಸಿಕೊಂಡು ಹೊರಟು ಹೋದನು.

ಈ ಕಡೆ ತಮ್ಮ ನೂರು ಮಕ್ಕಳನ್ನೂ ಕಳೆದುಕೊಂಡ ಧೃತರಾಷ್ಟ್ರ ಗಾಂಧಾರಿಯರು ಯುದ್ಧ ಭೂಮಿಯನ್ನು ಕುರಿತು ಹೊರಟರು. ಅವರು ಬಂದಿರುವ ವಿಷಯ ಯುಧಿಷ್ಠಿರನಿಗೆ ತಿಳಿಯಿತು. ಅವನು ತನ್ನ ಪರಿವಾರ ದೊಂದಿಗೆ ಅವರನ್ನು ಕಂಡು ಅತ್ಯಂತ ಸಂಕೋಚದಿಂದ ನಡೆದುಹೋಗಿ ಅವರಿಗೆ ನಮಸ್ಕರಿಸಿದನು. ಧೃತರಾಷ್ಟ್ರನು ಬಹಳ ಔದಾಸೀನ್ಯದಿಂದಲೇ ಅವನನ್ನು ಆಲಿಂಗಿಸಿದನು. ಅನಂತರ ಅವನು ಭೀಮನನ್ನೂ ಇದೇ ರೀತಿ ಆಲಿಂಗಿಸಬೇಕಾದ ಸಂದರ್ಭ ಬಂದಾಗ ಕೃಷ್ಣನು ಮೊದಲೇ ಸಿದ್ಧಗೊಳಿಸಿದ್ದ ಭೀಮನಂತಹದೇ ಒಂದು ಉಕ್ಕಿನ ಪ್ರತಿಮೆಯನ್ನು ನಿಲ್ಲಿಸಲಾಯಿತು. ಸಾವಿರ ಆನೆಗಳಷ್ಟು ಬಲವುಳ್ಳವನೆಂದು ಪ್ರಸಿದ್ಧನಾಗಿದ್ದ ಧೃತರಾಷ್ಟ್ರನು ಅದನ್ನು ಭೀಮನೆಂದೇ ಬಗೆದು ಬಲವಾಗಿ ಆಲಿಂಗಿಸಿದಾಗ ಆ ಪ್ರತಿಮೆ ನಗ್ಗಿಹೋಯಿತು. ಧೃತರಾಷ್ಟ್ರನೂ ಆಯಾಸಪಟ್ಟು ನಿಂತನು. ಕೃಷ್ಣನು ನಿಜ ವಿಷಯವನ್ನು ತಿಳಿಸಿದಾಗ ಧೃತರಾಷ್ಟ್ರನಿಗೆ ನಾಚಿಕೆ ಯಾಯಿತು. ಅನಂತರ ಅವನು ಭೀಮನನ್ನೂ, ಅರ್ಜುನಾದಿಗಳನ್ನೂ ಆಲಿಂಗಿಸಿದನು.

ಅನಂತರ ಗಾಂಧಾರಿಯು ದುಃಖದಿಂದ ಭೀಮನು ದುರ್ಯೋಧನನ ಸೊಂಟದ ಕೆಳಭಾಗಕ್ಕೆ ಹೊಡೆದುದು, ದುಶ್ಶಾಸನನ ರಕ್ತವನ್ನು ಕುಡಿದುದು ಕೇವಲ ಅನ್ಯಾಯವೆಂದು ದೂಷಿಸಿದಳು. ಅದಕ್ಕೆ ಉತ್ತರವಾಗಿ ಭೀಮನು ವಿನಯದಿಂದ ದುರ್ಯೋಧನನು ತಮಗೆ ಮಾಡಿದ ಅಸಂಖ್ಯಾತ ಅನ್ಯಾಯಗಳನ್ನೂ ತಾನು ಆ ಕುರಿತು ಮಾಡಿದ್ದ ಪ್ರತಿಜ್ಞೆಗಳನ್ನು ಪೂರೈಸಲೇಬೇಕಾಗಿ ಬಂದುದನ್ನೂ ತಿಳಿಸಿದನು. ಅನಂತರವೂ ಗಾಂಧಾರಿಯು ತನ್ನ ಮಕ್ಕಳನ್ನು ನೆನಸಿಕೊಳ್ಳು ತ್ತಿದ್ದಂತೆಯೇ ಅವಳ ದುಃಖವು ಉಕ್ಕಿ ಬರುತ್ತಿತ್ತು. ತನ್ನ ವಂಶವೇ ಈ ರೀತಿ ನಾಶವಾಗುವದಕ್ಕೆ ಸೂತ್ರಧಾರನಂತೆ ಕೆಲಸ ಮಾಡಿದ ಕೃಷ್ಣನ ಮೇಲೆ ಕೋಪ ಗೊಂಡ ಅವಳು ಕೌರವರು ನಾಶವಾದಂತೆಯೇ ಯಾದವರೂ ನಾಶವಾಗಲೆಂದು ಶಾಪ ಕೊಟ್ಟಳು.

ರಮೆ:– ಓಹೊ. ಹಿಂದೆ ದ್ರೌಪದಿ, ದುರ್ಯೋಧನನು ತೊಡೆ ಮುರಿದು ಸಾಯಲೆಂದು ಶಾಪ ಕೊಟ್ಟಾಗ ಏನೋ ಚಿಟಿಕೆ ಹೊಡೆದು ಮಾತು ಹಾರಿಸಿ ಬಿಟ್ಟಿರಿ. ಆ ಸಂದರ್ಭವೂ ಸ್ವಲ್ಪ ಗಂಭೀರವಾದುದಾಗಿದ್ದುದರಿಂದ ನಾನೂ

ವಾದವನ್ನು ಬೆಳೆಸದೆ ಹಾಳಾಗಲಿ ಎಂದು ಬಿಟ್ಟದ್ದೆ. ಈಗ ಈ ಮುದುಕಿಯೂ ಶಾಪ ಕೊಡಲು ಮುಂದಾಗಿಬಿಟ್ಟದೆ! ಗಾಂಧಾರಿಯೂ ಒಬ್ಬಳು ಋಷಿಯಾಗಿದ್ದಳೋ ಹೇಗೆ?

ಮುರಳಿ:– ಯಾಕೆ?

ರಮೆ:– ಮತ್ತೆ ಅವಳೂ ಋಷಿಗಳ ಹಾಗೆ ಶಾಪ ಗೀಪ ಕೊಡಲು ಪ್ರಾರಂಭಿಸಿ ಬಿಟ್ಟದ್ದಾಳೆ!

ಮುರಳಿ:– ಶಾಪ, ಅನುಗ್ರಹ – ಇವುಗಳ ಅರ್ಥವೇನೆಂದು ತಿಳಿಯಲು ಅಸಮರ್ಥಳಾದ ನೀನು ಆ ಕುರಿತು ಇಷ್ಟು ಲಘುವಾಗಿ ಮಾತನಾಡುತ್ತಿದ್ದೀ.

ರಮೆ:– ಬೇರೆ ಏನರ್ಥ? ಒಂದು ಹಿಡಿ ಮಣ್ಣು ಹಿಡಿದು "ನೀನು ಹಾಳಾಗಿ ಹೋಗು" ಎಂದು ಹಲ್ಲುಕಚ್ಚಿ ಹೇಳಿ ಆ ಮಣ್ಣನ್ನು ರಭಸದಿಂದ ನೆಲಕ್ಕೆ ಎಸೆಯುವದು. ಇಲ್ಲವೇ ಪಟಾರನೆ ಅಂಗೈಯನ್ನು ನೆಲಕ್ಕೆ ಹೊಡೆಯುವದು!

ಮುರಳಿ:– ಸರಿ ಮತ್ತೆ! ಅಷ್ಟು ಮಾಡಲು ಋಷಿಗಳೇ ಆಗಬೇಕೆಂದೇನು? ಗಾಂಧಾರಿಗೂ ಕೈಯಿತ್ತು, ಅವಳು ನಿಂತ ಸ್ಥಳದಲ್ಲಿ ಮಣ್ಣೂ ಇತ್ತು, ಕಚ್ಚಿ ತೋರಿಸಲು ಹಲ್ಲುಗಳೂ ಇದ್ದವು!

ರಮೆ:– ಅಲ್ಲ, ಅಂತೂ ಶಾಪ–ಗೀಪ ಕೊಡುವದು ಋಷಿಗಳ ಕೆಲಸವಾದ್ದರಿಂದ ಕೇಳಿದೆ, ಅಷ್ಟೆ. ಈ ಪುರಾಣಗಳಲ್ಲಿ ನಾನು ಕಂಡುಕೊಂಡ ಇನ್ನೊಂದು ವಿಚಿತ್ರವನ್ನು ಹೇಳಬೇಕು, ಹೇಳಬೇಕು ಎಂದುಕೊಂಡು ಮರೆತೇಹೋಗಿತ್ತು. ಅವರು ಕೃಷ್ಣನನ್ನು ಹೇಳಲು ಹೊರಟರೆ ಕೃಷ್ಣನೇ ಸರ್ವೇಶ್ವರ, ಅವನನ್ನು ಮೀರುವವರು ಯಾರೂ ಇಲ್ಲ. ಅಭಿಮನ್ಯುವನ್ನು ಹೇಳಲು ಹೊರಟರೆ ಅವನನ್ನು ಮೀರಿಸುವ ವೀರರು ಇನ್ನ್ಯಾರೂ ಇಲ್ಲ. ಕೊನೆಗೆ ಒಂದು ಮುದುಕಿಯನ್ನು ಹೇಳಲು ಹೊರಟರೆ ಆ ಮುದುಕಿಯನ್ನು ಮೀರಿದವರು ಕೂಡ ಯಾರೂ ಇಲ್ಲ! ಸರ್ವೇಶ್ವರ ಎಂದು ಹೇಳಿಸಿಕೊಂಡ ಕೃಷ್ಣನಿಗೇ ಈ ಮುದುಕಿ ಶಾಪ ಕೊಟ್ಟು ಬಿಡುತ್ತಾಳೆ. ಹಾಗಾಗಿ ಯಾರ ಸತ್ವ ಎಷ್ಟು ಎಂಬದೇ ಗೊತ್ತಾಗುವದಿಲ್ಲ. ಅವಳು ಭೀಮನಿಗೋ, ಯುಧಿಷ್ಠಿರನಿಗೋ ಶಾಪ ಕೊಟ್ಟಳು ಎಂದಿದ್ದರೆ ಹಾಳಾಗಿ ಹೋಗಲಿ ಎಂದಾದರೂ ಒಪ್ಪಿಕೊಳ್ಳಬಹುದಿತ್ತು. ಅದಿಲ್ಲ. ಅವಳು ಕೃಷ್ಣನಿಗೇ ಶಾಪ ಕೊಟ್ಟುಬಿಡುತ್ತಾಳೆ. ಶಾಪ ಕೊಡಲು ಅವಳಿಗೆ ಇರುವ ಶಕ್ತಿ ಏನು, ಕೃಷ್ಣನು ಶಾಪ ಪಡೆಯಲು ಮಾಡಿದ ಪಾಪವೇನು–ಈ ಯಾವದರ ವಿವೇಚನೆಯೂ ಇಲ್ಲ. ಒಟ್ಟನಲ್ಲಿ ಮುಗಿಯುತ್ತಾ ಬಂದ ಮಹಾಭಾರತ ಕತೆ ನೀರಸವೆನಿಸಬಾರದೆಂಬದಕ್ಕಾಗಿ ಏನೋ ಒಂದೊಂದು ಒಗ್ಗರಣೆ. ಈ ಕುರಿತು ನನ್ನ ಅಭಿಪ್ರಾಯ ಸ್ಪಷ್ಟವಾಗಿದೆ. ಅದು ತಪ್ಪು ಎಂದು ಅನ್ನಿಸಿಬಿಡಿ ನೋಡೋಣ.

ಮುರಳಿ:– ನಾನೇನು, ನಿನ್ನಲ್ಲಿ ವಾದ ಮಾಡಿ ಗೆಲ್ಲುವದಕ್ಕೆಂದು ಪಣ ತೊಟ್ಟು ಕುಳಿತಿದ್ದೇನೇನು ? ನಿನ್ನ ಅಭಿಪ್ರಾಯವೇ ಸರಿ ಎಂದಿಟ್ಟುಕೊ. ನನ ಗಾಗುವ ನಷ್ಟವೇನು ?

ರಮೆ:– ಸುಮ್ಮನೆ ತಮಾಷೆಗೆ ಹಾಗೆ ಹೇಳಿದೆ. ಇದೊಂದನ್ನು ದಯವಿಟ್ಟು ವಿವರಿಸಿಬಿಡಿ. ಅಲ್ಲಿಗೆ ಬಹುಶಃ ನನ್ನ ಎಲ್ಲ ಸಂಶಯಗಳೂ ನಿವಾರಣೆಯಾದಂತೆ ಆಗಬಹುದು.

ಮುರಳಿ:– ಹಾಗೆ ಬಾ. ಶಾಪ ಎನ್ನುವದು ಏನೋ ದೈವಿಕವಾದ ಒಂದು ಗುಣ ಎಂಬ ನಂಬಿಕೆ ನಮ್ಮಲ್ಲಿದೆ. ಅದನ್ನು ದೈವಿಕ ಎನ್ನುವದಕ್ಕಿಂತಲೂ ಅದೊಂದು ಅಸಾಮಾನ್ಯವಾದ ಲಕ್ಷಣ ಎನ್ನಬಹುದು. ಶಾಪ ಅಥವಾ ವರ ಎಂದರೆ ಇಲ್ಲದುದನ್ನು ಉಂಟುಮಾಡುವದು ಎಂದಷ್ಟೇ ಅರ್ಥ. ಶಾಪವಾದರೆ ನಮಗೆ ಅಹಿತವಾದುದು, ವರವಾದರೆ ಹಿತವಾದುದು. ಇಲ್ಲದುದನ್ನು ಉಂಟುಮಾಡುವ ಸಾಧ್ಯತೆ ಹೇಗೆ ಎಂಬದನ್ನು ವಿಮರ್ಶಿಸಿದರೆ ಶಾಪ, ಅನುಗ್ರಹಗಳ ರಹಸ್ಯವೂ ಗೊತ್ತಾಗುತ್ತದೆ. ಈ ರಹಸ್ಯವನ್ನಾದರೂ ಈ ಪ್ರಕೃತಿಯ ನಿಯಮದ ವಿಮರ್ಶೆ ಯಿಂದಲೇ ಹಿಂದಿನವರು ಕಂಡುಹಿಡಿದುಕೊಂಡರು. ಹಿಂದೆ ಇಲ್ಲದ ಈ ಸೃಷ್ಟಿ ಹೇಗಾಯಿತು ? ಹಿಂದೆ ಇಲ್ಲದ ಘಟನೆಗಳು ಹೇಗೆ ನಡೆಯುತ್ತವೆ ? ಎಂಬದನ್ನು ಅವರು ವಿಮರ್ಶಿಸಿದರು. ಒಂದು ಇದ್ದುದು ಹಲವು ಆಗಬೇಕೆಂದು ಸಂಕಲ್ಪಿಸಿ ದಾಗ ಈ ವೈವಿಧ್ಯಪೂರ್ಣವಾದ ಜಗತ್ತಿನ ಸೃಷ್ಟಿಯಾಯಿತು ಎಂಬದು ನಮ್ಮ ಶಾಸ್ತ್ರಗಳ ಅಭಿಪ್ರಾಯ. ಅಂದರೆ, ಸಂಕಲ್ಪವೇ ಈ ಸೃಷ್ಟಿಯ ಮೂಲ. ಜಗತ್ತಿನ ಸೃಷ್ಟಿಗೆ ಈ ರೀತಿ ಸಂಕಲ್ಪವೇ ಮೂಲವಾದರೆ, ಆ ಜಗತ್ತಿನ ಮುಂದುವರಿಕೆಗೆ ಕೂಡ ಸಂಕಲ್ಪವೇ ತಳಹದಿ ಎಂಬದನ್ನೂ ಅವರು ಕಂಡುಕೊಂಡರು. ಸಂಕಲ್ಪ ಎನ್ನು ವದು ಮನಸ್ಸಿನ ಒಂದು ಕ್ರಿಯೆ. ಮನಸ್ಸು ಏನನ್ನು ಬಯಸುತ್ತದೋ ಅದು ಆಗು ತ್ತದೆ. ಮನಸ್ಸಿನ ಬಯಕೆ ಎಷ್ಟು ಬಲವಾಗಿರುತ್ತದೋ ಅದರ ಫಲ ಅಷ್ಟೂ ಶೀಘ್ರ ವಾಗಿ, ಅಷ್ಟೂ ಸ್ಪಷ್ಟವಾಗಿ ಆಗುತ್ತದೆ. ಇಂದಿನ ವಿಜ್ಞಾನದ ಈ ಅತ್ಯದ್ಭುತ ಆವಿಷ್ಕಾರಗಳಾದರೂ ಕೂಡ ಏಕಾಗ್ರಚಿತ್ತದ ಮೂಲಕ ಸಂಶೋಧನೆಯಲ್ಲಿ ತೊಡ ಗಿದ–ಅರ್ಥಾತ್ ಬಲಿಷ್ಠ ಮನಸ್ಸನ್ನು ಪಡೆದ–ಹಲವರ ಸಂಕಲ್ಪದ ಫಲ ಎಂಬದನ್ನು ನಾವು ಒಪ್ಪಬೇಕಾಗುತ್ತದೆ. ಪುನರ್ಜನ್ಮ, ಜೀವನದ ಸುಖ ದುಃಖ ಎಂಬ ಮಾನವ ಕುಲದ ಈ ಅದ್ಭುತ ಚರಿತ್ರೆಗೆ ಕೂಡ ಕರ್ಮ, ಕರ್ಮ ಫಲಗಳೇ ಕಾರಣ ಎಂದು ನಮ್ಮ ಶಾಸ್ತ್ರಗಳು ಹೇಳುತ್ತವೆ. ಅಂತಹ ಕರ್ಮಕ್ಕೆ ಮೂಲ ಮನೋ ಸಂಕಲ್ಪ ಹಾಗಾಗಿ ನಮ್ಮ ಜೀವನದ ಎಲ್ಲ ರಹಸ್ಯಗಳ ತಿರುಳು ಮನಸ್ಸಿನ ಸಂಕಲ್ಪ.

ಹೀಗೆ, ಇಲ್ಲದುದನ್ನು ಸೃಷ್ಟಿಸುವ ಶಕ್ತಿ ಮನಸ್ಸಿನ ಸಂಕಲ್ಪಕ್ಕಿದೆ ಎಂಬದನ್ನು ಹಿಂದಿನವರು ಕಂಡುಕೊಂಡರು. ಇದನ್ನು ಮನಸ್ಸಿನ ಶಕ್ತಿ ಎನ್ನುವದಕ್ಕಿಂತಲೂ

ಸಹಜಗುಣ ಎನ್ನುವದೇ ಹೆಚ್ಚು ಸರಿಯಾಗುತ್ತದೆ. ಹಿಂದೆ ಹೇಳಿದಂತೆ ಏಕಾಗ್ರತೆಯ ಮೂಲಕ ಮನಸ್ಸನ್ನು ಎಷ್ಟು ಬಲಪಡಿಸಿಕೊಂಡರೆ ಸೃಷ್ಟಿಸುವ ಅದರ ಸಾಮರ್ಥ್ಯ ಅಷ್ಟೂ ಹೆಚ್ಚಾಗಿರುತ್ತದೆ ಎಂದೂ ಅವರು ಕಂಡುಕೊಂಡರು. ಬಿಸಿಲು ಒಂದು ಎಲೆಯನ್ನು ಒಣಗಿಸುತ್ತದೆ. ಆದರೆ ಅದೇ ಬಿಸಿಲನ್ನು ಭೂತಗನ್ನಡಿಯ ಮೂಲಕ ಹಾಯಿಸಿ ಅಷ್ಟಗಲ ಹರಡಿದ ಸೂರ್ಯಕಿರಣಗಳನ್ನು ಒಂದೇ ಬಿಂದುವಿನಲ್ಲಿ ಕೇಂದ್ರೀಕೃತವಾಗಿ ಬೀಳುವಂತೆ ಮಾಡಿದರೆ ಆ ಎಲೆಯಲ್ಲಿ ಬೆಂಕಿಯೇ ಉತ್ಪನ್ನ ವಾಗುತ್ತದೆ ಎಂಬದು ನಮಗೆಲ್ಲ ತಿಳಿದಿದೆ. ಮನಸ್ಸಿನ ಗುಣವಾದರೂ ಇದಕ್ಕಿಂತ ಭಿನ್ನವಾದುದಲ್ಲ. ಶಿವ, ಬ್ರಹ್ಮ ಮೊದಲಾದ ದೇವತೆಗಳು ನಾವು ಕಲ್ಪಿಸಿಕೊಂಡ ರೀತಿ ಇದ್ದಾರೋ ಇಲ್ಲವೋ ಎಂದೇ ಇಟ್ಟುಕೊಳ್ಳೋಣ. ಆದರೆ ರಾವಣನಂತಹ ಪ್ರಬಲ ವ್ಯಕ್ತಿತ್ವ ಉಳ್ಳವರು, ಅರ್ಥಾತ್ ಶಕ್ತಿಶಾಲಿಯಾದ ಮನಸ್ಸಿನವರು, ಶಿವ ಅಥವಾ ಬ್ರಹ್ಮರನ್ನು ಕುರಿತು ಮಾಡಿದ ಮನಸ್ಸಿನ ಧ್ಯಾನ ಅಷ್ಟು ಅದ್ಭುತವಾದ ಏಕಾಗ್ರತೆಯಿಂದ ಕೂಡಿರುತ್ತಿದ್ದುದರಿಂದ, ಶಿವ ಅಥವಾ ಬ್ರಹ್ಮ ಎಂಬ ದೇವತೆಗಳು ಇಲ್ಲವೇ ಇಲ್ಲ ಎಂದಾದರೂ ಕೂಡ ರಾವಣನಂತಹವನ ಮನಸ್ಸು ಅಂತಹ ದೇವತೆ ಗಳನ್ನು ಪ್ರತ್ಯಕ್ಷವಾಗಿ ಸೃಷ್ಟಿಮಾಡುವ, ಹಾಗೂ ಹಾಗೆ ಸೃಷ್ಟಿಸಲ್ಪಟ್ಟ ಅವರಿಂದ ತನ್ನ ಸಂಕಲ್ಪಕ್ಕೆ ಅನುಗುಣವಾದ ಫಲಗಳನ್ನು ವರಗಳ ಹೆಸರಿನಲ್ಲಿ ಪಡೆಯುವ ಶಕ್ತಿಯನ್ನು ಪಡೆದಿತ್ತು. ಹೀಗೆ, ನಮ್ಮ ಮನಸ್ಸು ಎಷ್ಟು ಶಕ್ತಿಶಾಲಿಯಾಗಿದ್ದರೆ, ಏಕಾಗ್ರತೆಯ ಮೂಲಕ ನಾವು ಅಷ್ಟರಮಟ್ಟಿಗೆ ಏನನ್ನೂ ಸೃಷ್ಟಿಸಬಹುದು ಎಂದು ಹೇಳಿದಂತಾಯಿತು.

ಗಾಂಧಾರಿಯ ಕುರಿತು ನಮಗೆ ತಿಳಿದಿರುವ ವಿಷಯ ಸ್ವಲ್ಪವೇ ಆದರೂ ಅವಳ ಮನಸ್ಸು ಎಷ್ಟು ಪ್ರಬಲವಾದುದು ಎಂಬದಕ್ಕೆ ನಿದರ್ಶನವಿದೆ. ಹುಟ್ಟು ಕುರುಡನಾದ ಧೃತರಾಷ್ಟ್ರನನ್ನು ವಿವಾಹವಾದ ಆಕೆ ಅವನಲ್ಲಿ ತಾತ್ಸಾರವನ್ನು ಪಡೆಯುವದರ ಬದಲು ಅನನ್ಯವಾದ ಭಕ್ತಿಯನ್ನು ಪ್ರದರ್ಶಿಸಿ, ತನ್ನ ಗಂಡನು ಈ ಲೋಕದ ಯಾವದನ್ನೂ ನೋಡುವ ಸುಖದಿಂದ ವಂಚಿತನಾಗಿದ್ದಾ ನಾದರೆ ತನಗೂ ಆ ಸುಖ ಬೇಡ ಎಂಬದಕ್ಕಾಗಿ ತಾನೂ ತನ್ನ ಕಣ್ಣು ಗಳನ್ನು ಜೀವನದಾದ್ಯಂತ ಬಟ್ಟೆಯಿಂದ ಕಟ್ಟಿಕೊಂಡು ಕಣ್ಣಿನ ಉಪಯೋಗವನ್ನು ನಿರಾಕರಿಸಿ ಬದುಕಿದವಳು. ಒಂದು ಬಲಿಷ್ಠವಾದ ರಾಜಮನೆತನದ ರಾಜಮಹಿಷಿ ಯಾಗಿ ಅವಳು ಬದುಕಿದರೂ ಕೂಡ ಜೀವನದಲ್ಲಿ ಕಣ್ಣಿನ ದೃಷ್ಟಿಯಂತಹ ಒಂದು ದೊಡ್ಡ ಸೌಭಾಗ್ಯವನ್ನು ಗಂಡನ ಮೇಲಿನ ಭಕ್ತಿಯಿಂದಾಗಿ ಅವಳು ತಿರಸ್ಕರಿಸಿ ಬದುಕಬೇಕಾದರೆ ಅವಳ ಮನಸ್ಸು ಅದೆಷ್ಟು ಶಕ್ತಿಶಾಲಿಯಾಗಿತ್ತು, ಏಕಾಗ್ರತೆ ಯನ್ನು ಸಾಧಿಸಿತ್ತು ಎಂಬದನ್ನು ನಾವು ಗ್ರಹಿಸಬಹುದು. ಪಾತಿವ್ರತ್ಯ ಎಂದರೆ

ಇದೇ ಎಂದು ಈ ಹಿಂದೆ ನಾವು ಚರ್ಚಿಸಿದ್ದೇವೆ. ಗಾಂಧಾರಿ ಅಂತಹವಳಾಗಿದ್ದಳು. ಈಗ ಅವಳು ತನ್ನ ನೂರು ಮಕ್ಕಳನ್ನೂ, ಬಂಧು ಬಾಂಧವರನ್ನೂ ಕಳೆದು ಕೊಂಡು ಅವಳ ಅಂತರಾಳ ತೀವ್ರವಾಗಿ ಕಲಕಲ್ಪಟ್ಟಿದೆ. ಶಾಪ ಅಥವಾ ವರ ವನ್ನು ಕೊಡಲು ಇದು ಅತ್ಯಂತ ಸೂಕ್ತವಾದ ಹಿನ್ನೆಲೆಯಾಗುತ್ತದೆ. ಏಕಾಗ್ರ ವಾದ ಮನಸ್ಸು ಒಂದು ಚೂಪಾದ ಬಾಣದಂತಾದರೆ, ಮನಸ್ಸು ಎಷ್ಟು ಆಳವಾಗಿ ಕಲಕಲ್ಪಟ್ಟಿರುತ್ತದೋ ಅಷ್ಟರಮಟ್ಟಿಗೆ ಆ ಬಾಣವನ್ನು ದೀರ್ಘವಾಗಿ ಎಳೆದಂತೆ ಆಗುತ್ತದೆ. ಏಕಾಗ್ರವಾದ ಮನಸ್ಸು ಮತ್ತು ಅದು ಕಲಕಲ್ಪಟ್ಟ ಹಿನ್ನೆಲೆ – ಈ ಎರಡರಲ್ಲಿ ಯಾವ ಒಂದೇ ಆದರೂ ಶಾಪವು ಸಿದ್ಧಿಸುವದಿಲ್ಲ. ಗಾಂಧಾರಿಯು ಶಾಪವನ್ನು ಕೊಡಲು ಅರ್ಹತೆ ಇರುವಂತಹ ಏಕಾಗ್ರ ಮನಸ್ಸನ್ನು ಹೊಂದಿದ್ದು, ಈಗ ಶಾಪವನ್ನು ಪ್ರಯೋಗಿಸುವದಕ್ಕೆ ಅನುಗುಣವಾದ ಮನಸ್ಸಿನ ವ್ಯಗ್ರತೆಯನ್ನೂ ಪಡೆದು ಕೃಷ್ಣನಿಗೆ ಶಾಪ ಕೊಡುವದರಲ್ಲಿ ಯಶಸ್ವಿಯಾಗುತ್ತಾಳೆ........

ರಮೆ:– ಒಂದು ಸಂದೇಹ. ರಾವಣನೂ ಶಿವ ಬ್ರಹ್ಮರನ್ನು ಒಲಿಸಿಕೊಂಡು ವರ ಪಡೆಯುವಷ್ಟು ಬಲಿಷ್ಠವಾದ ಮನಸ್ಸನ್ನು ಹೊಂದಿದ್ದ ಎನ್ನುತ್ತೀರಿ. ಆದರೆ ಅವನು ಯಾರಿಗೂ ಶಾಪ ಕೊಡುವದನ್ನು ನಾವು ನೋಡುವದಿಲ್ಲವಲ್ಲಾ ? ಬದಲು ಅವನಿಗೇ ಇತರರು ಶಾಪ ಕೊಡುತ್ತಾರಲ್ಲ ?

ಮುರಳಿ:– ಹೌದು. ರಾವಣನ ಮನಸ್ಸು ಶಕ್ತಿಶಾಲಿಯಾಗಿತ್ತು, ನಿಜ. ಆದರೆ ಅವನು ಅದನ್ನು ಬಳಸಿಕೊಂಡುದು ತನ್ನ ಸ್ವಾರ್ಥಕ್ಕಾಗಿ. ಶಿವನನ್ನು ಒಲಿಸಿಕೊಂಡು, ತನಗೆ ಯಾರಿಂದಲೂ ಮರಣವಾಗಬಾರದು ಎಂಬ ಬಯಕೆ ಯನ್ನು ಸಾಧಿಸಿಕೊಳ್ಳುವಷ್ಟರಮಟ್ಟಿಗೆ ಮಾತ್ರ ಅವನು ತನ್ನ ಶಕ್ತಿಶಾಲೀ ಮನಸ್ಸಿನ ಪ್ರಯೋಜನವನ್ನು ಪಡೆದುದು. ತನ್ನ ಆ ಬಯಕೆ ಸಫಲವಾಯಿತೆಂದು ತಿಳಿದೊಡ ನೆಯೇ ಅವನು ತನ್ನ ಮನಸ್ಸಿನ ಏಕಾಗ್ರತೆಯನ್ನು ಕೃಷಿ ಮಾಡುವದು ಬಿಟ್ಟು, ಹಲವು ವಿಧದ ವಿಧ್ವಂಸಕ ಕೃತ್ಯಗಳಲ್ಲಿ ಅದನ್ನು ತೊಡಗಿಸಿ, ಅದರ ಏಕಾಗ್ರತೆ ಯನ್ನು ನಾಶಗೊಳಿಸಿಕೊಂಡವನು. ಆದರೆ ಗಾಂಧಾರಿ ಹಾಗಲ್ಲ. ಧೃತರಾಷ್ಟ್ರ ನನ್ನು ವಿವಾಹವಾದಲ್ಲಿಂದ ಈ ವರೆಗಿನ ಹಲವು ದಶಕಗಳ ಕಾಲ ಅವಳು ತನ್ನ ಮನಸ್ಸನ್ನು ಒಂದೇ ವಿಧವಾಗಿ ಕೃಷಿ ಮಾಡಿ ಬಲಿಷ್ಠವಾದುದನ್ನಾಗಿ ಮಾಡಿಕೊಂಡಿ ದ್ದಳು. ಏನನ್ನೋ ಸಾಧಿಸಬೇಕೆಂಬ ಸ್ವಾರ್ಥದ ಉದ್ದೇಶವನ್ನಿಟ್ಟುಕೊಂಡು ಅವಳು ಹೀಗೆ ಮಾಡದುದರಿಂದ ಅವಳ ಮನಸ್ಸಿನ ಬಲ ಇನ್ನೂ ಹೆಚ್ಚಿತು.

ರಮೆ:– ಸರಿ. ಆದರೆ ಅವಳು ಕೃಷ್ಣನಂತಹ ಸರ್ವೇಶ್ವರನಿಗೇ ಶಾಪ ಕೊಟ್ಟಳು ಎಂದರೆ ಅವಳು ಕೃಷ್ಣನನ್ನು ಮೀರಿದ ವ್ಯಕ್ತಿತ್ವ ಪಡೆದಿದ್ದಳು ಎಂದಾ ಗುವದಿಲ್ಲವೆ ? ಇಷ್ಟಲ್ಲದೆ, ನಿಮ್ಮ ತರ್ಕದ ಪ್ರಕಾರ ಕೃಷ್ಣ ತನ್ನ ಯಾವ ಪಾಪ

ಕ್ಕಾಗಿ ಶಾಪವನ್ನು ಪಡೆದ ? ಅವನಿಗೆ ಪಾಪದ ಲೇಪ ಎಲ್ಲಿದೆ ? ನೀವು ಹೇಳುವ ಧರ್ಮ ಅಥವಾ ಪ್ರಕೃತಿಯ ನಿಯಮವು ಇಲ್ಲಿ ಎಡವಿಲ್ಲವೆ ?

ಮುರಳಿ:– ಇಲ್ಲ. ಶಾಪ ಕೊಡುವವರು ಶ್ರೇಷ್ಠರು, ಪಡೆಯುವವರು ಅವರಿಗಿಂತ ಕೀಳಾದವರು ಎಂಬದು ಸರಿಯಲ್ಲ. ಶಾಪ ಕೊಡಬೇಕಾದರೆ ಮನಸ್ಸು ಶಕ್ತಿಶಾಲಿಯಾಗಿರಬೇಕು ಎಂಬದನ್ನು ನೋಡಿದ್ದೇವೆ. ಇನ್ನು ಶಾಪವನ್ನು ಪಡೆಯುವದು ಕರ್ಮಫಲಕ್ಕಾಗಿ ಮಾತ್ರ. ಕೃಷ್ಣನಿಗೆ ಪಾಪದ ಲೇಪ ಇಲ್ಲವೆಂಬದು ನಿಜ. ಆದರೆ ಅವನು ಈ ಪ್ರಕೃತಿಯಲ್ಲಿ ಪ್ರತ್ಯಕ್ಷವಾಗಿ ಕಾಣಿಸಿಕೊಂಡಾಗ ಅವನಾದರೂ ಈ ಪ್ರಕೃತಿಯ ನಿಯಮವನ್ನು ಮೀರಿರಲು ಸಾಧ್ಯವಾಗುವದಿಲ್ಲ. ಚಿಕ್ಕಂದಿನಿಂದಲೂ ನೂರಾರು ರಾಜರುಗಳನ್ನು ಕೊಂದ ಅಥವಾ ಕೊಲ್ಲಿಸಿದ ಚರಿತ್ರೆ ಕೃಷ್ಣನದು. ಅವನು ತನ್ನ ಸ್ವಾರ್ಥಕ್ಕಾಗಿ ಹಾಗೆ ಕೊಂದುದಲ್ಲ ಎಂಬದು ನಿಜ. ಅವನಿಂದ ಕೊಲ್ಲಲ್ಪಟ್ಟವರು ದುಷ್ಟರಾಗಿದ್ದು ಅವರ ಸಾವಿನ ಮೂಲಕ ಧರ್ಮದ ಪುನರುತ್ಥಾನವಾಯಿತು ಎಂಬದೂ ನಿಜ. ಆದರೆ ಅವರ ಸಾವಿನಿಂದ ಸಾವಿರಾರು ಮಂದಿ ಅವರ ಜ್ಞಾತಿಗಳ, ಬಂಧುಗಳ ಹೃದಯಕ್ಕೆ ನೋವಾಗಿದೆ ಎಂಬದು ಸುಳ್ಳಲ್ಲ. ಉದಾಹರಣೆಗೆ ಗಾಂಧಾರಿಯನ್ನೇ ತೆಗೆದುಕೊ. ತನ್ನ ಯಾವ ತಪ್ಪಿಗಾಗಿಯೂ ಅಲ್ಲದೆ ಅವಳು ಇಂದು ತನ್ನ ಮಕ್ಕಳೆಲ್ಲರನ್ನೂ ಕಳೆದುಕೊಂಡು ದುಃಖಿಸುತ್ತಿದ್ದಾಳೆ. ಅವಳ ಆ ದುಃಖಕ್ಕೆ ಮುಖ್ಯವಾಗಿ ಕಾರಣನಾದವನು ಕೃಷ್ಣ. ಹೀಗೆ ಭೂಭಾರಹರಣದ ಭರದಲ್ಲಿಯೇ ಆದರೂ ಕೃಷ್ಣನಿಂದ ರಾಜರುಗಳ ಕೊಲೆ, ಅದರ ಪರಿಣಾಮವಾಗಿ ಅವರ ಬಂಧುಗಳ ದುಃಖ ಉಂಟಾಗಿದೆ. ಅವನ ಆ ಕರ್ಮಕ್ಕೆ ತಕ್ಕ ಫಲ ದೊರಕಲೇಬೇಕಷ್ಟೆ ? ಅದನ್ನೀಗ ಅವನು ಗಾಂಧಾರಿಯ ಶಾಪದ ಮೂಲಕ ಪಡೆಯುತ್ತಿದ್ದಾನೆ. ಕರ್ಮದ ಫಲವು ಸರ್ವೇಶ್ವರನಾದ ಕೃಷ್ಣನಿಗೂ ತಟ್ಟುತ್ತದೆ, ನಮಗೂ ತಟ್ಟುತ್ತದೆ. ಅದು ಪ್ರಕೃತಿಯ ಅವಿನಾಶಿಯಾದ, ಅಬಾಧಿತವಾದ ನಿಯಮ. ಆದರೆ ನಾವು ಇಂತಹ ಪ್ರತಿಫಲ ಸಿಕ್ಕಿದಾಗ ದುಃಖಿಸುತ್ತೇವೆ, ಕೃಷ್ಣ ದುಃಖಿಸುವದಿಲ್ಲ. ಇಷ್ಟೇ ವ್ಯತ್ಯಾಸ. ತನ್ನ ಕುಲವೇ ನಾಶವಾದಾಗ ಇತರರಿಗಾದರೆ ಎದೆ ಒಡೆಯುತ್ತಿತ್ತು ; ಕೃಷ್ಣನಿಗೆ ಎದೆ ಹಗುರವಾಯಿತು.

ರಮೆ:– ಅದನ್ನೆಲ್ಲ ಮುಂದೆ ಕೃಷ್ಣನ ಕತೆ ಹೇಳುವಾಗ ವಿವರಿಸಿ. ಈಗ ಭೀಮನ ಕತೆ ಮುಂದುವರಿಸಿ.

ಮುರಳಿ:– ನಿನ್ನ ಎರಡು ಕೋರಿಕೆಗಳಲ್ಲಿ ಎರಡನೆಯದನ್ನು ಈಡೇರಿಸುತ್ತೇನೆ. ಕೇಳು. ಧೃತರಾಷ್ಟ್ರ, ಯುಧಿಷ್ಠಿರ ಮೊದಲಾದ ಸಮಸ್ತರೂ ಗಂಗಾತೀರಕ್ಕೆ ಬಂದು ಮೃತರೆಲ್ಲರಿಗೂ ತರ್ಪಣಾದಿಗಳನ್ನು ಕೊಟ್ಟರು. ಕುಂತಿಯು, ಕರ್ಣನು ಯುಧಿಷ್ಠಿರನ ಅಣ್ಣನೆಂದೂ ಅವನಿಗೂ ತರ್ಪಣ ಕೊಡಬೇಕೆಂದೂ

ಯುಧಿಷ್ಠಿರನಿಗೆ ತಿಳಿಸಿದಾಗ ಅವನು ಅತ್ಯಂತ ದುಃಖಪಟ್ಟು ಕರ್ಣನಿಗೂ ತರ್ಪಣ ಕೊಟ್ಟನು.

ಇದೆಲ್ಲವೂ ಮುಗಿದ ಮೇಲೆ ಯುಧಿಷ್ಠಿರನು ಹಸ್ತಿನಾವತಿಯ ಮಹಾರಾಜನಾಗಿ ಪಟ್ಟಾಭಿಷಿಕ್ತನಾದನು. ಭೀಮನು ಯುವರಾಜನಾದನು. ಜ್ಞಾತಿ ವಧೆ ಮಾಡಿದುದರಿಂದಾಗಿ ಪ್ರತಿ ನಿಮಿಷದಲ್ಲಿಯೂ ದುಃಖದಿಂದ ಪರಿತಪಿಸುತ್ತಿದ್ದ ಯುಧಿಷ್ಠಿರನಿಗೆ ಕೃಷ್ಣನು ಭೀಷ್ಮನ ಬಾಯಿಂದ ಅನೇಕ ನೀತಿಬೋಧೆಗಳನ್ನು ಹೇಳಿಸಿ ಅವನ ಮನಸ್ಸಿನ ಕ್ಲೇಶವನ್ನು ಕಡಿಮೆ ಮಾಡಿಸಿದನು. ಆದರೂ ಮೃದುವಾದ ಮನಸ್ಸಿನ ಯುಧಿಷ್ಠಿರನ ಹೃದಯವು ಭಾರವಾಗಿಯೇ ಇರುತ್ತಿತ್ತು. ಪಾಪ ನಿವಾರಣೆಗಾಗಿ ಅವನು ಅಶ್ವಮೇಧ ಯಾಗವನ್ನು ಮಾಡುವಂತೆ ವ್ಯಾಸರು ಅವನಿಗೆ ತಿಳಿಸಿದರು.

ಈ ನಡುವೆ ಅಭಿಮನ್ಯುವಿನ ವಿಧವೆ ಮಡದಿಯಾದ ಉತ್ತರೆಯು ಒಂದು ನಿರ್ಜೀವವಾದ ಕೂಸನ್ನು ಹಡೆಯಲು ಕೃಷ್ಣನು ಅದನ್ನು ಬದುಕಿಸಿ ಅದಕ್ಕೆ ಪರೀಕ್ಷಿತ್ ಎಂದು ನಾಮಕರಣ ಮಾಡಿದನು. ಅಶ್ವಮೇಧ ಯಾಗವು ನಿರ್ಧರಿಸಲ್ಪಟ್ಟಿತು. ಅರ್ಜುನನು ಯಾಗಾಶ್ವವನ್ನು ಹಿಂಬಾಲಿಸಿ ಹೊರಟು ಕುರುಕ್ಷೇತ್ರದಲ್ಲಿ ಸಾಯದೆ, ಸೇರದೆ ಉಳಿದಿದ್ದ ಅನೇಕ ರಾಜರನ್ನು ಗೆದ್ದನು. ಮಣಲೂರವೆಂಬ ಪಟ್ಟಣದಲ್ಲಿ ತಾನು ಹಿಂದೆ ತೀರ್ಥಯಾತ್ರೆ ಬಂದಿದ್ದಾಗ ತನಗೆ ಚಿತ್ರಾಂಗದೆ ಎಂಬವಳಲ್ಲಿ ಹುಟ್ಟಿದ ಬಭ್ರುವಾಹನ ಎಂಬ ತನ್ನ ಮಗನನ್ನು ಗುರುತಿಸಲು ನಿರಾಕರಿಸಿ ಅವನಿಂದ ಪೆಟ್ಟು ತಿಂದು ಮೂರ್ಛೆ ಹೋದನು. ಅವನ ಇನ್ನೊಬ್ಬಳು ಮಡದಿಯಾಗಿದ್ದ ಉಲೂಪಿಯೆಂಬವಳು ಚಿತ್ರಾಂಗದೆಯ ಇಚ್ಛೆಯ ಪ್ರಕಾರ ತನ್ನ ನಾಗಲೋಕದಿಂದ ಒಂದು ರತ್ನವನ್ನು ತರಿಸಿ ಅರ್ಜುನನನ್ನು ಪುನಶ್ಚೇತನಗೊಳಿಸಿದಳು. ಅರ್ಜುನನು ಹಿಂದಿರುಗಿದ ಮೇಲೆ ಅಶ್ವಮೇಧ ಯಾಗವು ವೈಭವದಿಂದ ನಡೆಯಿತು.

ಅನಂತರ ಹದಿನೈದು ವರ್ಷಗಳ ಕಾಲ ಪಾಂಡವರು ಧೃತರಾಷ್ಟ್ರ ಗಾಂಧಾರಿಯರನ್ನು ಉಪಚರಿಸುತ್ತ ನೋಡಿಕೊಂಡಿದ್ದರು. ಆ ವೃದ್ಧ ದಂಪತಿಗಳು ಕೂಡ ತಮ್ಮ ದುಃಖವನ್ನು ಸಾಕಷ್ಟು ಮರೆತಂತಿದ್ದರು. ಎಷ್ಟೇ ಆದರೂ ತನ್ನ ಮಕ್ಕಳ ಸಾವಿನ ನೆನಪು ಬಂದಾಗ ಧೃತರಾಷ್ಟ್ರನಿಗೆ ಭೀಮನಲ್ಲಿಯೂ, ದ್ಯೂತ ಸಭೆಯಲ್ಲಿ ಕೌರವರು ದ್ರೌಪದಿಯನ್ನು ನಡೆಸಿಕೊಂಡ ರೀತಿಯನ್ನು ನೆನಸಿಕೊಂಡಾಗ ಭೀಮನಿಗೆ ಕೌರವರಲ್ಲಿಯೂ ಅಸಮಾಧಾನ ಹುಟ್ಟಿಕೊಳ್ಳುತ್ತಿತ್ತು. ಕ್ರಮಶಃ ಇದರಿಂದ ಜಿಗುಪ್ಸೆಗೊಂಡ ಧೃತರಾಷ್ಟ್ರನು ವಿದುರ, ಗಾಂಧಾರಿಯರೊಂದಿಗೆ ತಪಸ್ಸಿಗೆ ಹೊರಡಲು ಯುಧಿಷ್ಠಿರನ ಒಪ್ಪಿಗೆಯನ್ನು ಅತಿ ಪ್ರಯಾಸದಿಂದ ಪಡೆದನು. ಪಾಂಡವರು ಎಷ್ಟೇ ತಡೆದರೂ ಕೇಳದೆ ಕುಂತಿಯೂ ಧೃತರಾಷ್ಟ್ರ ಗಾಂಧಾರಿಯ

ರನ್ನು ಅನುಸರಿಸಿ ಕಾಡಿಗೆ ತೆರಳಿದಳು. ಅಲ್ಲಿ ಕೆಲವು ಕಾಲ ತಪಶ್ಚರ್ಯೆಯಲ್ಲಿದ್ದ ಧೃತರಾಷ್ಟ್ರ, ಗಾಂಧಾರಿ, ಕುಂತಿಯರು ಒಂದು ಕಾಳ್ಗಿಚ್ಚಿಗೆ ಸಿಕ್ಕಿ ಸತ್ತುಹೋದರು. ಈ ವೇಳೆಗೆ ಅವರನ್ನೆಲ್ಲ ಕಾಣಲೆಂದು ಪರಿವಾರಸಹಿತನಾಗಿ ಬಂದಿದ್ದ ಯುಧಿಷ್ಠಿರ ನಲ್ಲಿ ವಿದುರನು ತನ್ನ ಚೈತನ್ಯವನ್ನು ಲೀನಗೊಳಿಸಿ ತಾನು ದೇಹತ್ಯಾಗ ಮಾಡಿದನು.

ಈ ಕಡೆ ಯಾದವರು ಒಮ್ಮೆ ಮದ್ಯಪಾನದಿಂದ ಘುತ್ತರಾಗಿ ತಮ್ಮ ತಮ್ಮಲ್ಲಿಯೇ ಹೊಡೆದಾಡಿಕೊಂಡು ಸತ್ತುಹೋದರು. ಕೃಷ್ಣ, ಬಲರಾಮರೂ ದೇಹತ್ಯಾಗ ಮಾಡಿದರು. ಅಲ್ಲಿದ್ದ ಯಾದವ ಸ್ತ್ರೀಯರನ್ನು ರಕ್ಷಿಸಿಕೊಂಡು ಅರ್ಜುನನು ಹಸ್ತಿನಾಪುರಕ್ಕೆ ಬರುತ್ತಿದ್ದಾಗ ಮ್ಲೇಚ್ಛರೂ ಕಳ್ಳರೂ ಅವನ ಮೇಲೆ ಬೀಳಲು ಅವನು ಆ ಸ್ತ್ರೀಯರನ್ನು ರಕ್ಷಿಸಲಾರದಾಗಿ ಅವರಲ್ಲಿ ಹೆಚ್ಚಿನವರನ್ನು ಕಳ್ಳರು ಎತ್ತಿಕೊಂಡು ಹೋದರು. ಉಳಿದ ಸ್ತ್ರೀಯರೊಂದಿಗೆ ಅರ್ಜುನನು ಹಸ್ತಿನಾವತಿಯನ್ನು ಸೇರಿದನು.

ಇದನ್ನೆಲ್ಲ ಕೇಳಿ ಶೋಕದಿಂದ ತಪ್ತನಾದ ಯುಧಿಷ್ಠಿರನು ಪರೀಕ್ಷಿತನಿಗೆ ಪಟ್ಟವನ್ನು ಕಟ್ಟಿ ನಾಲ್ವರು ತಮ್ಮಂದಿರೊಂದಿಗೂ ದ್ರೌಪದಿಯೊಂದಿಗೂ ಹಿಮಾಲಯದತ್ತ ತೆರಳಿದನು. ಅವರು ಆರು ಮಂದಿಯೂ ಹಿಮಾಲಯವನ್ನು ಹತ್ತಿ ಹೋಗುತ್ತಿದ್ದಾಗ ಅನುಕ್ರಮವಾಗಿ ದ್ರೌಪದಿ, ಸಹದೇವ, ನಕುಲ, ಅರ್ಜುನ, ಭೀಮ–ಇವರು ಬಿದ್ದು ಪ್ರಾಣ ಬಿಟ್ಟರು. ಯುಧಿಷ್ಠಿರನೊಬ್ಬನು ಸಶರೀರ ನಾಗಿಯೇ ಸ್ವರ್ಗವನ್ನು ಸೇರಿದನು. ಬಹಳ ಸ್ವಲ್ಪ ಕಾಲ ನರಕವಾಸವನ್ನು ಅನುಭವಿಸಿ, ಅನಂತರ, ಸ್ವರ್ಗಸುಖವನ್ನು ಅನುಭವಿಸುತ್ತಿದ್ದ ತನ್ನ ತಮ್ಮಂದಿ ರನ್ನೂ, ಮಡದಿಯನ್ನೂ ಸೇರಿಕೊಂಡನು. ಕಾಲಾನಂತರ ಅವರು ಪ್ರತಿ ಯೊಬ್ಬರೂ ತಮ್ಮ ತಮ್ಮ ಮೂಲ ದೇವತೆಗಳಲ್ಲಿ ಐಕ್ಯರಾದರು.

ಭಾರತ ದೇಶದ ಒಂದು ಭವ್ಯ ಇತಿಹಾಸವು, ಮಾನವ ಕುಲದ ಒಂದು ಅತ್ಯದ್ಭುತ ಕತೆಯು ಇಲ್ಲಿಗೆ ಮುಕ್ತಾಯಗೊಂಡಿತು.

— ಹರಿಃ ಓಂ —

